ONE HUNDRED YEARS OF SOLITUDE




ಗೇಬ್ರಿಯಲ್
ಗಾರ್ಸಿಯಾ
ಮಾರ್ಕ್ವೆಜ಼್

# ಒಂದು ನೂರು ವರ್ಷಗಳ ಏಕಾಂತ

ಕನ್ನಡಕ್ಕೆ ಡಾ. ವಿಜಯಾ ಸುಬ್ಬರಾಜ್



## ಗೇಬ್ರಿಯಲ್ ಗಾರ್ಸಿಯಾ ಮಾರ್ಕ್ವೆಜ಼್

ವಿಶ್ವದ ಮಹಾನ್ ಕಾದಂಬರಿಕಾರನೆನಿಸಿದ ಓದುಗರಿಂದ ಪ್ರೀತಿಯಿಂದ 'ಗ್ಯಾಬೊ' ಎಂದು ಕರೆಸಿಕೊಳ್ಳುತಿದ್ದ ಗೇಬ್ರಿಯಲ್ ಗಾರ್ಸಿಯಾ ಮಾರ್ಕ್ವೆಜ಼್ ಒಂದು ಹೊಸ ಮಾದರಿಯ ಕಾದಂಬರಿ ಯುಗದ ಪ್ರವರ್ತಕನೇ ಆಗಿದ್ದಾನೆ. ಮಾರ್ಕ್ವೆಜ಼್‌ನ ಪ್ರತಿಭೆ ಅನಂತಮುಖವಾದ್ದು. ಕೊಲಂಬಿಯಾದ ಕಾದಂಬರಿಕಾರ, ಸಣ್ಣಕಥೆಗಾರ, 'ಚಿತ್ರಕಥೆಗಾರ', ಪತ್ರಕರ್ತ ಎನಿಸಿಕೊಂಡಿದ್ದು, 20ನೇ ಶತಮಾನದ ಕಾದಂಬರಿಕಾರರಲ್ಲಿಯೇ ಅನನ್ಯ ಸ್ಪ್ಯಾನಿಷ್ ಕಾದಂಬರಿಕಾರ ಎಂದು ಗುರುತಿಸಿಕೊಂಡಿದ್ದ. ಇಂತಹ ಒಬ್ಬ ವಿಶಿಷ್ಟ ಕಾದಂಬರಿಕಾರ ತನ್ನ ಅದ್ಭುತ ಸೃಜನಶೀಲ ಪ್ರತಿಭೆಗೆ ಮತ್ತು ಆತ ಹುಟ್ಟುಹಾಕಿದ ಮಾಂತ್ರಿಕ ವಾಸ್ತವತವಾದ ಅಥವಾ ಭ್ರಮಾ ವಾಸ್ತವದ ಮೂಲಕ ಇಡೀ ಜಗತ್ತಿನ ಸಾಹಿತ್ಯ ಲೋಕದಲ್ಲಿ ಮೂಡಿಸಿದ ಸಂಚಲನಕ್ಕಾಗಿ, ಬೀರಿದ ಪ್ರಭಾವಕ್ಕಾಗಿ 1982ರಲ್ಲಿ ಇವನು ಬರೆದ 'ಒಂದು ಹಂಡ್ರೆಡ್ ಇಯರ್ಸ್ ಆಫ್ ಸಾಲಿಟ್ಯುಡ್' ಕಾದಂಬರಿಗಾಗಿ ನೊಬೆಲ್ ಪ್ರಶಸ್ತಿ ಲಭಿಸಿತು. ಇದಕ್ಕೂ ಮೊದಲೇ 1972ರಲ್ಲಿ 'ನ್ಯೂ ಸ್ಟ್ಯಾಡ್ ಇಂಟರ್‌ನ್ಯಾಷನಲ್ ಪ್ರೈಜ್ ಪಾರ್ ಲಿಟರೇಚರ್' ಪುರಸ್ಕಾರವೂ ಲಭಿಸಿತು. ಇಂತಹ ಮಹಾನ್ ಕಾದಂಬರಿಕಾರ 6ನೇ ಮಾರ್ಚ್ 1927ರಲ್ಲಿ ಕೊಲಂಬಿಯಾದ ಅರಕಾಟಕದಲ್ಲಿ ಜನಿಸಿದ. ಗೇಬ್ರಿಯಲ್ ಎಲಿಜಿಯೋ ಗಾರ್ಸಿಯಾ ತಾಯಿ ಲ್ವಿಸಾ ಮಾರ್ಕ್ವೆಜ಼್ ಇಗುವಾರನ್ ದಂಪತಿಗೆ ಜನಿಸಿದ. ಬಾಲ್ಯದಿಂದಲೇ ಕಥೆ ಕೇಳುವ ಕುತೂಹಲ ರೂಢಿಸಿಕೊಂಡಿದ್ದ. ಆತನ ಅಜ್ಜಿ ಅದ್ಭುತ, ರೋಮಾಂಚಕ, ಕುತೂಹಲಕಾರಿ ಕಥೆಗಳನ್ನು ಹೇಳುತ್ತಲೇ ಆ ಪುಟ್ಟ ಹುಡುಗನಲ್ಲಿ (ಮಾರ್ಕ್ವೆಜ಼್) ಕಥನ ಕುತೂಹಲವನ್ನು ಕೆರಳಿಸಿದಳು. ಪ್ರಬುದ್ಧನಾಗುತಿದ್ದಂತೆ, ಬಾಲ್ಯದಲ್ಲಿ ಕೇಳಿಸಿಕೊಳ್ಳುತ್ತಿದ್ದ ಅದ್ಭುತ ಕಾಲ್ಪನಿಕ ಕಥೆಯನ್ನೂ, ಪ್ರತ್ಯಕ್ಷ ಅನುಭವದ ಮೂಲಕ ಕಾಣುತಿದ್ದ ವಾಸ್ತವತೆಯನ್ನು, ತನ್ನ ಸೃಜನಶೀಲ ಬರಹಗಳಲ್ಲಿ 'ಮಾಂತ್ರಿಕ ವಾಸ್ತವದ' ಪರಿಕಲ್ಪನೆಯನ್ನು ರೂಢಿಗೆ ತಂದ. ನಿರಂತರವಾಗಿ ಬರೆಯತೊಡಗಿದ. ಸಣ್ಣಕಥೆ, ಕಾದಂಬರಿಗಳನ್ನು, ಆತ್ಮಚರಿತ್ರೆಯನ್ನು ಬರೆದು. ವಿಶ್ವ ಸಾಹಿತ್ಯದಲ್ಲಿ ಅಚ್ಚಳಿಯದ ಹೆಸರಾಗಿ ಉಳಿದ. **'ತಾನು ಬದುಕಿರುವುದೇ ಕಥೆ ಹೇಳಲು'** ಎಂದು

ನಂಬಿದಂತೆಯೇ ಬದುಕಿದ. ಹತ್ತಾರು ಕೃತಿಗಳನ್ನು ಬರೆದು, ವಿಶಿಷ್ಟ ಶೈಲಿ, ಕಥವಸ್ತುವಿನಲ್ಲಿನ ರೂಪಕಾತ್ಮ ಕತೆಗಳಿಂದ ಜಗತ್ತಿನ ಸಾಹಿತಿಗಳ ಗಮನ ಸೆಳೆದ. ಅದರಲ್ಲಿಯೂ ಆತ ಬರೆದ 'ಒಂದು ಹಂಡ್ರೆಡ್ ಇಯರ್ಸ್ ಆಫ್ ಸಾಲಿಟ್ಯುಡ್' ಕಾದಂಬರಿಯಿಂದಾಗಿ ಮಾರ್ಕ್ವೆಜ್‌ನ ಹೆಸರು ಎಲ್ಲೆಲ್ಲೂ ಅನುರಣಿತವಾಯಿತು. 1967ರಲ್ಲಿ ಪ್ರಕಟವಾದ ಈ ಕೃತಿ ಒಮ್ಮೆಲೇ ಅಪಾರ ಮೆಚ್ಚುಗೆಯನ್ನು ಗಳಿಸಿತು. ಏಕಕಾಲಕ್ಕೆ ಸುಮಾರು 40 ಮಿಲಿಯನ್‌ಗೂ ಹೆಚ್ಚು ಪ್ರತಿಗಳು ಮಾರಾಟವಾದವು.

ವಿಲ್ಲಿಯಮ್ ಕೆನೆಡಿ, ಮೊಟ್ಟಮೊದಲ ಕೃತಿಯಾಗಿ ಬಂದ 'ಬುಕ್ ಆಫ್ ಜೆನಿಸಿಸ್' ನಂತರ, ಇಡೀ ಮನುಕುಲ ಓದಲೇಬೇಕಾದ ಮತ್ತೊಂದು ಕೃತಿಯೆಂದರೆ 'ಒಂದು ಹಂಡ್ರೆಡ್ ಇಯರ್ಸ್ ಆಫ್ ಸಾಲಿಟ್ಯೂಡ್' ಎಂದು ಮುಕ್ತಕಂಠದಿಂದ ಮೆಚ್ಚಿ ಹೊಗಳಿದ. 'ಮಾಕೊಂಡೊ' ನಗರದ, ನಗರ ನಾಗರೀಕತೆಯ ಮನುಕುಲದ ವಿಕಾಸದ ಕತೆಯ ನಿರೂಪಣೆಯೇ ಈ ಕಾದಂಬರಿಯ ವಸ್ತುವಾಗಿದೆ. ಇಂತಹ ಮಹಾನ್ ಕಾದಂಬರಿಯ ಕಥಾನಾಯಕ ಜೋಸ್ ಆರ್ಕಾಡಿಯೊ ಬ್ಯುಂಡಿಯಾ ಏಳು ತಲೆಮಾರುಗಳಲ್ಲಿ ಕಥೆ ಮುಂದುವರಿಯುತ್ತದೆ. ನೂರಾರು ಪಾತ್ರಗಳು, ಸನ್ನಿವೇಶಗಳು, ಘಟನೆಗಳು ಮುಂತಾದವುಗಳಿಂದ ಇಡಿಕಿರಿದಿದ್ದು ಅತ್ಯಂತ ಸಂಕೀರ್ಣವಾಗಿದೆ. ಮೂಲತಃ ಈ ಕಾದಂಬರಿ ಕೊಲಂಬಿಯಾದ ರಾಜಕೀಯ ಇತಿಹಾಸವನ್ನು ಕಾಲ್ಪನಿಕ ಕಥನಗಳ ಮೂಲಕ ಬ್ಯುಂಡಿಯಾ ಕುಟುಂಬದವರ ಸಾಹಸಗಳ ಮೂಲಕ ಕೊಲಂಬಿಯಾದ ಅನೇಕ ಚಾರಿತ್ರಿಕ ಘಟನೆಗಳನ್ನು ಬಿಂಬಿಸುತ್ತದೆ. 19ನೇ ಶತಮಾನದಲ್ಲಿ ಲಿಬರಲ್ ಪೊಲಿಟಿಕಲ್ ರಿಫರ್‌ಮೇಶನ್ ಕುರಿತು ಪರವಿರೋಧವಾದ ನಿಲುವುಗಳು, ವಸಾಹತುಶಾಹಿ ಬದುಕಿನ ಸ್ವರೂಪ, ಪರ್ವತ ಪ್ರದೇಶದಲ್ಲಿ 'ರೈಲು ವ್ಯವಸ್ಥೆ' ಅಲ್ಲದೆ 1000 ದಿನಗಳು ನಡೆದ ಯುದ್ಧ, ಯುನೈಟೆಡ್ ಫ್ರಂಟ್ ಸಂಸ್ಥೆಯ ಯಾಜಮಾನ್ಯತೆ, ಸಿನಿಮಾ ಕಲ್ಪನೆ, ಸ್ವಯಂ ಚಾಲಿತ ಯಂತ್ರಗಳು, ಹೋರಾಟಕ್ಕೆ ಇಳಿದಿದ್ದ ಮೂರು ಸಾವಿರ ಕಾರ್ಮಿಕರ ಮಾರಣ ಹೋಮ-ಇತ್ಯಾದಿ ಚಾರಿತ್ರಿಕ ಸಂಗತಿಗಳೆಲ್ಲ ಈ ಕಾದಂಬರಿಯ ಅಂತರ್ಗತ ಭಾಗವಾಗಿವೆ.

ಇಷ್ಟೊಂದು ಮಹತ್ವದ ಕಾದಂಬರಿಯನ್ನು ವಿಶ್ವಕ್ಕೆ ನೀಡಿದ ಮಹಾನ್ ಕಾದಂಬರಿಕಾರ 17ನೇ ಏಪ್ರಿಲ್ 2014 ರಂದು ಕೊನೆಯುಸಿರೆಳೆದು ನೆನಪಾಗಿ ಮಾತ್ರವೇ ಉಳಿದಿದ್ದಾನೆ.

ಗೇಬ್ರಿಯಲ್ ಗಾರ್ಸಿಯಾ ಮಾರ್ಕ್ವೆಜ್

# ಒಂದು ನೂರು ವರ್ಷಗಳ ಏಕಾಂತ

## ONE HUNDRED YEARS OF SOLITUDE

*Noble Prize Winner*

ಕನ್ನಡಕ್ಕೆ

**ಡಾ. ವಿಜಯಾ ಸುಬ್ಬರಾಜ್**



ಒಂದು ನೂರು ವರ್ಷಗಳ ಏಕಾಂತ

**ONDU NUURU VARSHAGALA EKANTHA**

*A Translation by* **DR. VIJAYA SUBBARAJ**

**(ONE HUNDRED YEARS OF SOLITUDE)**

By **Gabriel Garcia Marquez**

***This Book is Originally Published by Spanish***

**DR. VIJAYA SUBBARAJ,**
No.50, 1st A Cross,35 th Main
Attimabbe Road, BanagiriNagara, BSK 3rd Stage
Bengaluru 560085
Phone, 080-26793219

Published by:
*Srushti Nagesh,* **SRUSHTI PUBLICATION,**
# 121, 13th Main Road, M.C. Layout
Vijayanagara, Bengaluru - 560 040.
Ph : 080 - 23153558; Mob: 98450 96668
E-mail: srushtinagesh@gmail.com

First Impression: 2015

Page: xxiv + 386 = 410

Book Size : 1/4 Crown

**₹ : 400/-**

Paper used: 70 Gsm NS Book Print



**ISBN: 978-93-81244-41-5**

DTP : **Srushti Nagesh**

Cover Page : **G . Arunkumar**

Printed at :

**SATHYASRI PRINTERS PVT. LTD,**
Mysuru Road, Bengaluru-560 026
Ph: 080-26748811.

**ಅರ್ಪಣೆ**

ನನ್ನ ಸಾಹಿತ್ಯವನ್ನು ಓದಿ, ಮೆಚ್ಚಿ
ಪ್ರೋತ್ಸಾಹಿಸುತ್ತಿರುವ ಎಲ್ಲ ಬಂಧುಗಳಿಗೆ

## ಮಾರ್ಕ್ವೆಜ್ ಬರೆದ ಮಹಾಕಾದಂಬರಿ

ಗಾಬ್ರಿಯೇಲ್ ಗಾರ್ಸಿಯಾ ಮಾರ್ಕ್ವೆಜ್ ಇನ್ನಿಲ್ಲ ಎಂಬ ಸುದ್ದಿ ತಿಳಿದಿದ್ದೇ ನನ್ನೊಳಗೆ ಅದೆಷ್ಟೋ ನೆನಪುಗಳು ಒಂದರ ನಂತರ ಒಂದರಂತೆ ನುಗ್ಗಿ ಬರತೊಡಗಿದವು. ಅವುಗಳಲ್ಲಿ ಕೆಲವನ್ನಾದರೂ ಇಲ್ಲಿ ದಾಖಲಿಸದೆ ಬಿಡುವಂತಿಲ್ಲ.

1. 1970ರಲ್ಲಿ ಮದರಾಸಿನ ಕನ್ನೆಮಾರ ಲೈಬ್ರರಿಯಲ್ಲಿ ದಪ್ಪ ರಟ್ಟಿನ (ಹಾರ್ಡ್‌ಕವರ್) ಒಂದು ಪುಸ್ತಕ 'ಹೊಸದಾಗಿ ಬಂದ ಪುಸ್ತಕಗಳು' ಎಂಬ ಹಣೆಪಟ್ಟಿ ಹೊತ್ತ ರ್‍ಯಾಕಿನಲ್ಲಿ ಕಂಗೊಳಿಸುತ್ತಿತ್ತು. 'ಒನ್ ಹಂಡ್ರೆಡ್ ಇಯರ್ಸ್ ಆಫ್ ಸಾಲಿಟ್ಯೂಡ್' ಎಂಬ ಅದರ ಹೆಸರೇ ಕುತೂಹಲ ಹುಟ್ಟಿಸುವಂತಿತ್ತೆಂದು ಪ್ರತ್ಯೇಕವಾಗಿ ಹೇಳಬೇಕಿಲ್ಲ. ಬರೆದವನು ಗಾಬ್ರಿಯೇಲ್ ಗಾರ್ಸಿಯಾ ಮಾರ್ಕ್ವೆಜ್. ಲೈಬ್ರರಿಯವರು ಆ ಪುಸ್ತಕವನ್ನು ಎರವಲು ಪಡೆಯಬೇಕಾದರೆ ಹದಿನೈದು ದಿನ ಕಾಯಬೇಕೆಂದರು. ನಾನು ಅಷ್ಟು ದಿನ ಕಾಯಬೇಕಲ್ಲ ಎಂದು ತಹತಹಿಸುತ್ತ, ಆಗಾಗ ಲೈಬ್ರರಿಯಲ್ಲೇ ಕುಳಿತು ಅದರ ಕೆಲವು ಪುಟಗಳನ್ನು ತಿರುಗಿಸುತ್ತ ಕಡೆಗೂ ನಿಗದಿಗೊಳಿಸಿದ್ದ ದಿನ ಆ ಪುಸ್ತಕವನ್ನು ಪಡೆದು, ಒಂದೇ ವಾರದಲ್ಲಿ ಓದಿ ಮುಗಿಸಿದ್ದುಂಟು. ಇಂದು ಜಗದ್ವಿಖ್ಯಾತವಾಗಿರುವ ಆ ಕಾದಂಬರಿಯ ಹೆಗ್ಗಳಿಕೆಯಿದ್ದದ್ದು ಅದು ಅದ್ಭುತರಮ್ಯವನ್ನೂ (ಮಂತ್ರಗಂಬಳಿ, ನೆಲದಿಂದ ತುಸು ಮೇಲೆಯೇ ತೇಲುವ ಒಬ್ಬ ಪಾದ್ರಿ, ಲ್ಯಾಟಿನ್ ಭಾಷೆಯ ಅರಿವೇ ಇಲ್ಲದವನೊಬ್ಬ ಇದ್ದಕ್ಕಿದ್ದಂತೆ ಮಾತಾಡುವ ಆ ಭಾಷೆ, ಆಕಾಶಕ್ಕೆ ಹಾರಿ ಕಣ್ಮರೆಯಾಗುವ ಒಬ್ಬ ಪರಮಸುಂದರಿ) ಭಯಾನಕತೆಯನ್ನೂ (ಮೂರು ಸಾವಿರಕ್ಕೂ ಹೆಚ್ಚು ಮಂದಿ ಮುಷ್ಕರನಿರತರ ಕಗ್ಗೊಲೆ; ಅಂಥವರು ಅಸ್ತಿತ್ವದಲ್ಲಿದ್ದರೆಂದು ಯಾರೂ ಹೇಳಲಾಗದ ಕಾರಣ ಅವರೆಲ್ಲರೂ ಐತಿಹಾಸಿಕ ದೆವ್ವಗಳಂತಾಗುವುದು) ಪರಸ್ಪರ ಮೇಳೈಸುವುದರಲ್ಲಿ ಹಾಗೂ ಅರ್ಥವಾಗುವಂತಿದ್ದರೂ ಸದಾ ಅಪಾರ್ಥಕ್ಕೆ ಗುರಿಯಾಗುವ ಒಂದು

ದೇಶದ ಇತಿಹಾಸವನ್ನು ಧ್ವನಿಪೂರ್ಣವಾಗಿ ಹಿಡಿದುಕೊಡುವುದರಲ್ಲಿ ಒಟ್ಟಿನಲ್ಲಿ ಲೌಕಿಕ. ಅಲೌಕಿಕ ಘಟನೆಗಳನ್ನು ಪ್ರತ್ಯೇಕಿಸಲಾಗದಂತೆ ನಿರೂಪಿಸಿದ ಆ ಕಾದಂಬರಿ ನನ್ನನ್ನು ಅದೆಷ್ಟು ಗಾಢವಾಗಿ ಕಲಕಿತೆಂದರೆ ಮುಂದೆ ಹಲವು ತಿಂಗಳು ಅದರ ಗುಂಗಿನಲ್ಲೇ ಇದ್ದೆ; ಗೆಳೆಯರು ಸಿಕ್ಕಿದಾಗೆಲೆಲ್ಲ ಅದರ ಬಗ್ಗೆ ಹೇಳುತ್ತಲೇ ಇದ್ದೆ.

2. ಎರಡು ವರ್ಷದ ನಂತರ ಆ ಪುಸ್ತಕದ ಪೇಪರ್‌ಬ್ಯಾಕ್ ಆವೃತ್ತಿ ಬಂದಾಗ ಒಂದು ಪ್ರತಿಯನ್ನು ಕೊಂಡುಕೊಂಡು ಮತ್ತೆ ಓದಿದ್ದಲ್ಲದೆ ಕವಿ ಗೋಪಾಲಕೃಷ್ಣ ಅಡಿಗರಿಗೂ ಕೊಟ್ಟು ಓದಿಸಿದೆ. ಅವರು 'ಇದೊಂದು ಲ್ಯಾಟಿನ್ ಅಮೆರಿಕದ ಮಹಾಭಾರತವಯ್ಯಾ' ಎಂದು ಹೇಳುವ ಮೂಲಕ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು.

3. ಒಮ್ಮೆ ನಾನು ಬೆಂಗಳೂರಿನ ಗಾಂಧಿಬಜಾರಿಗೆ ತೀರ ಹತ್ತಿರದಲ್ಲಿದ್ದ ಸುಮತೀಂದ್ರ ನಾಡಿಗರ ಮನೆಗೆ ಹೋದಾಗ ರಾತ್ರಿಯಾಗಿತ್ತು. ಅದೇ ಪುಸ್ತಕವನ್ನು ಓದುವುದರಲ್ಲಿ ತಲ್ಲೀನರಾಗಿದ್ದ ಅವರು ತಮ್ಮ ಓದಿಗೆ ಭಂಗವಾದೀತೆಂದು ಆ ರಾತ್ರಿ ಊಟ ಮಾಡಲಿಲ್ಲ.

4. ಆ ಕಾಲದಲ್ಲಿ ನಾಡಿಗರು ಗಾಂಧಿಬಜಾರಿನಲ್ಲಿ ಒಂದು ಪುಸ್ತಕದಂಗಡಿ ನಡೆಸುತ್ತಿದ್ದರಷ್ಟೆ. ಅವರು ಅದೇ ಪುಸ್ತಕದ ಹಲವು ಪ್ರತಿಗಳನ್ನು ತರಿಸಿ ತಮ್ಮ ಅಂಗಡಿಗೆ ಬರುತ್ತಿದ್ದ ಲೇಖಕರಿಗೆಲ್ಲ ಅದನ್ನು ಶಿಫಾರಸು ಮಾಡುತ್ತಿದ್ದರು. ನಾನು ಅವರಿಂದಲೇ ಹತ್ತು ಹನ್ನೆರಡು ಪ್ರತಿಗಳನ್ನು ಖರೀದಿಸಿ ಯು.ಆರ್. ಅನಂತಮೂರ್ತಿಯವರನ್ನೂ ಒಳಗೊಂಡಂತೆ ಕೆಲವರು ಪ್ರಸಿದ್ಧ ಲೇಖಕರಿಗೆ ಕಳಿಸಿಕೊಟ್ಟೆ. ಗಿರಡ್ಡಿ ಗೋವಿಂದರಾಜರಿಗೂ ಒಂದು ಪ್ರತಿ ಕಳಿಸಿದ್ದೆನೆಂಬ ಸಂಗತಿ ಅವರೇ ನನಗೆ ಇತ್ತೀಚೆಗೆ ತಿಳಿಸಿದಾಗ ಗೊತ್ತಾಯಿತು.

5. ನಾನು ಯಾರು ಯಾರಿಗೆ ಪುಸ್ತಕ ಕಳಿಸಿದ್ದೆನೋ ಅವರೆಲ್ಲರೂ ನನ್ನ ಅನ್ವೇಷಣೆಯನ್ನು ಮೆಚ್ಚಿಕೊಂಡು ಮಾರ್‌ಕೆಸ್‌ನ ಜೊತೆ ನನ್ನನ್ನೂ ಅಭಿನಂದಿಸಬಹುದೆಂಬ ಆಸೆಯಿಂದ ಒಂದೆರಡು ತಿಂಗಳು ಮಾರ್ಕ್ವೆಜ್‌ಪ್ರತಿದಿನವೂ ಅವರ ಪತ್ರಗಳಿಗಾಗಿ ಎದುರು ನೋಡಿ ನೋಡಿ ನಿರಾಶನಾದದ್ದುಂಟು.

6. ಈ ಮಧ್ಯೆ ಬಿ.ಜಿ.ಪೈ, ಎ.ಎನ್. ಪ್ರಸನ್ನ, ಎಂ.ಎಸ್.ಕೆ. ಪ್ರಭು ಮತ್ತು ಇನ್ನೂ ಕೆಲವು ಮಂದಿ ಲೇಖಕ ಮಿತ್ರರು ಆ ಕಾದಂಬರಿಯನ್ನು ಓದಿದರು. ಕೆಲವರು ಬರೆದರೆ ಮಾರಕೆಸ್‌ನ ಹಾಗೆ ಬರೆಯಬೇಕೆಂದೂ, ಇನ್ನು ಕೆಲವರು ಹಾಗೆ ಬರೆಯಬಾರದೆಂದೂ ತೀರ್ಮಾನಿಸಿದರು.

7. ಪಿ.ವಿ. ನರಸಿಂಹರಾಯರು ಪ್ರಧಾನಿಯಾಗಿದ್ದಾಗ ಒಮ್ಮೆ ಅವರನ್ನು ಸಂದರ್ಶಿಸಿದರು 'ಹಿಂದೂ' ಪತ್ರಿಕೆಯ ಎನ್. ರಾಮ್. ಅಂದು ನರಸಿಂಹರಾಯರ ಟೇಬಲಿನ ಮೇಲೆ ಅದೇ ಪುಸ್ತಕವನ್ನು ಕಂಡ ರಾಮ್ ಅವರಿಗೆ ಪರಮಾಶ್ಚರ್ಯವಾಯಿತಂತೆ.

8. ಪಶ್ಚಿಮ ಬಂಗಾಲದ ಮುಖ್ಯಮಂತ್ರಿಯಾಗಿದ್ದ ಬುದ್ಧದೇವ ಭಟ್ಟಾಚಾರ್ಯ ಟಿ.ವಿ. ಸಂದರ್ಶನವೊಂದರಲ್ಲಿ ತಾವು ಮಾರ್ಕ್ವೆಜ್‌ನ ಒಂದು ಕಾದಂಬರಿ

ಅನುವಾದಿಸಿರುವುದಾಗಿಯೂ ಪುರಸೊತ್ತು ಸಿಕ್ಕಿದರೆ ಅವನ 'ಲವ್ ಇನ್ ದ ಟೈಮ್ ಆಫ್ ಕಾಲರಾ' ಅನುವಾದಿಸ ಬಯಸುವುದಾಗಿಯೂ ಹೇಳಿದರು.

9. ಮಾರ್ಕ್ವೆಜ್ ಎಡಪಂಥೀಯ; ಕ್ಯೂಬದ ಅಧ್ಯಕ್ಷ ಕ್ಯಾಸ್ಟ್ರೋನ ಪರಮಾಪ್ತ ಗೆಳೆಯ. ಹೀಗಿದ್ದೂ ಅವನು ನಮ್ಮ ಕೆಲವು ಪ್ರಗತಿಶೀಲರ ಹಾಗೆ ಕಮ್ಯೂನಿಸಂಗೆ ನಿಷ್ಠನಾಗಿ, ಕಾರ್ಮಿಕರ ಪರವಾಗಿ ಉಳ್ಳವರ ವಿರುದ್ಧ ತೀರ ವಾಚ್ಯವಾಗಿ ಬರೆಯಲಿಲ್ಲವೇಕೆ ಎಂದು ಸುಮಾರು ವರ್ಷ ನಾನು ಯೋಚಿಸಿದ್ದುಂಟು.

10. ಅಮೆರಿಕದ ಅಧ್ಯಕ್ಷನಾಗಿದ್ದ ಬಿಲ್ ಕ್ಲಿಂಟನ್ ಸ್ವತಃ ಕೊಲಂಬಿಯಕ್ಕೆ ಹೋಗಿ ಮಾರ್ಕ್ವೆಜ್‌ನನ್ನು ಭೇಟಿಯಾದನಷ್ಟೆ. ಆ ಸಂದರ್ಭದಲ್ಲಿ ಶ್ರೀಲಂಕಾದ ಕವಿ ಇಂದ್ರನ್ ಅಮೃತನಾಯಗಂ 'ಅಮೆರಿಕನ್ ಆಡಳಿತಕ್ಕೆ ಫಿಡಲ್ ಕ್ಯಾಸ್ಟ್ರೊ ಒಬ್ಬ ಶತ್ರು, ಹೌದು. ಆದರೆ ಅವನ ಮಿತ್ರ ಮಾರ್‌ಕೆಸ್ ಶತ್ರುವೇನಲ್ಲವಲ್ಲ' ಎಂದ ವ್ಯಂಗ್ಯವಾಗಿ.

11. 2002ರಲ್ಲಿ ನಾನು ಅಮೆರಿಕದ ಅಯೋವಾ ನಗರದಲ್ಲಿ ನಡೆಯುವ ಅಂತರರಾಷ್ಟ್ರೀಯ ಲೇಖಕರ ಸಮಾವೇಶದಲ್ಲಿ ಭಾಗವಹಿಸಿದ್ದೆ. ಆದಾಗ ಮಾರ್‌ಕೆಸ್‌ನ ಆತ್ಮಚರಿತ್ರೆಯ ಮೊದಲ ಭಾಗ ಪ್ರಕಟವಾಗಿತ್ತು. (ಮುಂದೆ ಅದು 'ಲಿವಿಂಗ್ ಟು ಟೆಲ್ ದ ಟೇಲ್' ಎಂಬ ಹೆಸರಿನಲ್ಲಿ ಇಂಗ್ಲಿಷಿಗೆ ಅನುವಾದಗೊಂಡಿತು). ಕೆಲವೇ ದಿನಗಳಲ್ಲಿ ಕೊಲಂಬಿಯದಲ್ಲಿ ಒಂದು ನಗರದಿಂದ ಇನ್ನೊಂದು ನಗರಕ್ಕೆ ಆ ಪುಸ್ತಕದ ಪ್ರತಿಗಳನ್ನು ಕೊಂಡೊಯ್ಯುತ್ತಿದ್ದ ನಾಲ್ಕಾರು ಟ್ರಕ್ಕುಗಳನ್ನು ಬಂದೂಕುಧಾರಿ ಓದುಗರೇ ಅಡ್ಡಗಟ್ಟಿ ಅವುಗಳಲ್ಲಿದ್ದ ಪ್ರತಿಗಳನ್ನೆಲ್ಲ ಹೊತ್ತುಕೊಂಡು ಹೋದರೆಂಬ ಸುದ್ದಿ 'ನ್ಯೂಯಾರ್ಕ್ ಟೈಂಸ್' ಪತ್ರಿಕೆಯಲ್ಲಿ ಪ್ರಕಟವಾಯಿತು. ಅದನ್ನು ಓದಿದ ಜರ್ಮನ್ ಲೇಖಕ ಮೈಖೇಲ್ ಝುಲ್ಲರ್' ಮಾರ್‌ಕೆಸ್ ಬಗ್ಗೆ ನನಗೆ ಹೊಟ್ಟೆಕಿಚ್ಚು' ಎಂದ. ಅದಕ್ಕೆ ಕೊಲಂಬಿಯ ದೇಶದ ಕವಿ, ಕಾದಂಬರಿಕಾರ ಹೂಗೊ ಚಪ್ಪಾರ್ರೊ ವಾಲ್ದೆರ್ರಾಮ– 'ಹೊಟ್ಟೆಕಿಚ್ಚೇಕೆ? ನಾವೆಲ್ಲ ಬರೆಯಬೇಕಿದ್ದೂ ಬರೆಯಲಾಗದ್ದನ್ನು ಅವನಾದರೂ ಬರೆದನಲ್ಲ ಅಂತ ಸಂತೋಷಪಡಬೇಕಲ್ಲವೆ?' ಎಂದ.

12. ಮಾರ್ಕ್ವೆಜ್‌ನ ಅದೇ ಕೃತಿಯಿಂದ ಸ್ಫೂರ್ತಿ ಪಡೆದು ಕಾದಂಬರಿಗಳನ್ನು ರಚಿಸಿರುವ ಅನೇಕ ಲೇಖಕರು ಜಗತ್ತಿನಲ್ಲಿದ್ದಾರಲ್ಲವೆ? ಅಮೆರಿಕದ ವಿಲಿಯಂ ಕೆನೆಡಿ, ಟೋನಿ ಮೋರಿಸನ್, ಅನ್ ಟೈಲರ್, ರಾಬರ್ಟ್ ಕೂವರ್, ಜಾನ್ ಬಾರ್ತ್, ಥಾಮಸ್ ಪಿಂಚಾನ್, ಸಾಂದ್ರಾ ಸಿಸ್ನೆರೋಸ್ ಮೊದಲಾದ ಲೇಖಕ ಲೇಖಕಿಯರಲ್ಲದೆ ಇಟಲಿಯ ಇತಾಲೊ ಕಲ್ವಿನೊ, ಜಪಾನಿನ ಇನೂಯೆ ಹಿಸಾಷಿ, ಭಾರತದ ಸಲ್ಮಾನ್ ರಷ್ದಿ, ಕಿರ್ಘಿಜ್ ಭಾಷೆಯಲ್ಲಿ ಬರೆಯುವ ಚಿಂಗಿಸ್ ಐತ್ಮತೂವ್, ಬ್ರಿಟನ್ನಿನ ಏಂಜೆಲಾ ಕಾರ್ಟರ್, ಜರ್ಮನಿಯ ಪ್ಯಾಟ್ರಿಕ್ ಸ್ಯೂಸ್‌ಕಿಂಡ್, ಇಸ್ರೇಲಿನ ಮೆಯಿರ್ ಶಾಲೆವ್ ಮತ್ತು ಡೇವಿಡ್ ಗ್ರಾಸ್‌ಮನ್, ಚೀನಾದ ಮೊಯಾನ್ ಸುತ್ತೋಂಗ್ ಮತ್ತು ಹ್ಯಾನ್ ಶವೊಗಾಂಗ್ ಹಾಲೆಂಡಿನ ಸೀಸ್ ನೂಟೆಬೂಮ್, ಐರ್ಲೆಂಡಿನ ತಿಮೊತಿ ಓಗ್ರೇಡಿ, ಸರ್ಬಿಯದ ಮಿಲೊರಾದ್ ಪಾವಿಚ್, ಹೀಗೆ ಇನ್ನೂ ಅನೇಕರನ್ನು ಹೆಸರಿಸಬಹುದು.

ಲ್ಯಾಟಿನ್ ಅಮೆರಿಕದ ಲೇಖಕನೊಬ್ಬ ತನ್ನದೊಂದು ಕಾದಂಬರಿಯಿಂದಲೇ ಪ್ರಪಂಚದ ಹಲವು ಭಾಷೆಗಳ ಲೇಖಕರನ್ನು, ಓದುಗರನ್ನು, ಅಷ್ಟೇಕೆ ಮಂತ್ರಿಮಹೋದಯರನ್ನು ಕೂಡ, ಪ್ರಭಾವಿಸುವಂತಾಯಿತಲ್ಲ. ಅದರಲ್ಲೇನು ವಿಶೇಷವಿದ್ದೀತು? ಅವನ ನಂತರದ ಕೃತಿಗಳಿಗಾಗಿ ಇಡೀ ಜಗತ್ತೇ ತುದಿಗಾಲಲ್ಲಿ ಕಾಯುವಂತಾಯಿತಲ್ಲ. ಅದಕ್ಕೇನು ಕಾರಣವಿದ್ದೀತು?

'ಒನ್ ಹಂಡ್ರೆಡ್ ಇಯರ್ಸ್ ಆಫ್ ಸಾಲಿಟ್ಯೂಡ್' (ಒಂದು ನೂರು ವರ್ಷಗಳ ಏಕಾಂತ) ಅಚ್ಚರಿಗಳ ಆಕರ; ಸೃಷ್ಟಿಮೂಲವನ್ನು (ಜೆನೆಸಿಸ್) ಪಡಿಮೂಡಿಸುವ ಮಹಾಗ್ರಂಥ. ಈ ಕಾದಂಬರಿ ಪ್ರಾರಂಭವಾಗುವುದು ವೈಜ್ಞಾನಿಕ ಸಂಶೋಧನೆಯಿಂದ; ಅಂತ್ಯಗೊಳ್ಳುವುದು ಮೂಢನಂಬಿಕೆಗಳಿಂದ. ದಕ್ಷಿಣ ಅಮೆರಿಕದ ಒಂದೇ ಕುಟುಂಬಕ್ಕೆ ಸೇರಿದ, ಐದು ಪೀಳಿಗೆಗಳಿಗೆ ಸಂಬಂಧಿಸಿದ ಈ ಕಾದಂಬರಿ ಕಾಲಕ್ರಮೇಣ ಸಮಾಜದಲ್ಲಿ ಮಾತಾಡಲು ಮತ್ತು ಬದುಕಲು ಕಲಿತ ಮನುಷ್ಯನ ಸಾಮಾಜಿಕ, ರಾಜಕೀಯ ಅವಿವೇಕಗಳೆಲ್ಲವನ್ನೂ ವರ್ಣಿಸುವ ಮೂಲಕ ಒಂದು ಬೃಹತ್ ಪುರಾಣವಾಗಿಬಿಟ್ಟಿದೆ. ಇದರೊಳಗೆ ಅನೇಕ ಸಣ್ಣ ಸಣ್ಣ ಪುರಾಣಗಳೂ ಇವೆ. ಅಲೆಮಾರಿಗಳು, ದೆವ್ವಗಳು, ಸ್ವರ್ಗಾರೋಹಣ, ಪ್ರಳಯ ಮತ್ತು ಜಲಕ್ಷಾಮ, ಶಕ್ತಿ ಮತ್ತು ಲೈಂಗಿಕತೆ, ಹಾದರ ಹೂಮಳೆ, ಭಾಷೆಯ ಮಾಂತ್ರಿಕತೆ– ಇವೆಲ್ಲ ಇರುವುದರಿಂದ ಈ ಕಾದಂಬರಿಗೆ ಇತಿಹಾಸವನ್ನು ಒತ್ತರಿಸುವಂಥ ಒಂದು ಆಕೃತಿ ಪ್ರಾಪ್ತವಾಗಿದೆ. ವಾಸ್ತವ ಜಗತ್ತನ್ನು ಬುಡಮಟ್ಟ ವಿಶ್ಲೇಷಿಸುವ ಮೂಲಕ ಮಾರ್ಕೆಸ್ ಇಲ್ಲಿ ಇನ್ನೊಂದೇ ಪ್ರತಿ ವಾಸ್ತವ್ಯವನ್ನು ಸೃಷ್ಟಿಸುತ್ತಾನೆ.

ಶಾಲೆಗೆ ಹೋಗುವ ಕೊಲಂಬಿಯನ್ ಹುಡುಗನೊಬ್ಬನಿಗೆ ಈ ಕಾದಂಬರಿಯಲ್ಲಿ ಕಾಣಿಸಿಕೊಳ್ಳುವ ಜಾದುಗಾರನೂ ಭವಿಷ್ಯ ಹೇಳುವವನೂ ಸಂಸ್ಕೃತಿ ಪ್ರಸಾರಕನೂ ಆದ ಮೆಲ್‌ಕಿಯಾಡಿಸ್ ಮೃತ್ಯುಶಯ್ಯೆಯಲ್ಲಿ ಮಲಗಿಸಿಕೊಂಡು 'ವಾನ್ ಹಂಬೋಲ್ಟ್, ಇದು ವಿಷಮ ಕಾಲ, ವಿಷಮ ಕಾಲ' ಎಂದು ಹೇಳಿದ್ದೇ ದಕ್ಷಿಣ ಅಮೆರಿಕದ ಆ ಭಾಗವನ್ನು ಕಂಡುಹಿಡಿದ ಅದೇ ಹೆಸರಿನ ಜರ್ಮನ್ ಅನ್ವೇಷಕನ ನೆನಪಾಗುವುದು ಸಹಜ. ವಸಾಹತುಗಳ ವಿಮೋಚನೆಯ ಇತಿಹಾಸದಲ್ಲಿ ವಾನ್ ಹಂಬೋಲ್ಟನ ಪಾತ್ರ ಬಹು ದೊಡ್ಡದು. ಸರ್ವಾಧಿಕಾರಿ ಬೊಲಿವಾರ್‌ಗೆ ವಸಾಹತುಗಳು ವಿಮೋಚನೆಗೆ ಸಿದ್ಧವಾಗಿವೆಯೆಂದು ಹೇಳಿದವನು ಹಂಬೋಲ್ಟನೇ. ಇನ್ನು ದಕ್ಷಿಣ ಅಮೆರಿಕನ್ನರು ಕೊಲಂಬಿಯದ ಚರಿತ್ರೆಗೆ ಸಮನಾದ ಅನೇಕ ಸಂಗತಿಗಳನ್ನು ಈ ಕೃತಿಯಲ್ಲಿ ಕಾಣಬಲ್ಲರು; ಕೊಲಂಬಿಯವನ್ನು ಕಂಡುಹಿಡಿದದ್ದು. ಜನರು ಅಲ್ಲಿಗೆ ಹೋಗಿ ನೆಲೆಸಿದ್ದು, ಕ್ರಾಂತಿಗಳು, ಬಾಳೆ ತೋಟಗಳು, ಕಾರ್ಮಿಕ ಸಂಘಟನೆ, ಬಾಳೆ ಗಿಡಕ್ಕೆ ತಗಲುವ ಸಿಗಾಬೊಕಾ ಎಂಬ ಸಾಂಕ್ರಾಮಿಕದಿಂದ ಅವನತಿಗೀಡಾದ ಅನೇಕ ಪಟ್ಟಣಗಳು, ಇತ್ಯಾದಿ. ಸ್ಪಾನಿಷ್ ಭಾಷೆ ಬಲ್ಲವರಿಗೆ ಈ ಕೃತಿಯ ಪಾತ್ರಗಳ ಹೆಸರುಗಳೂ ಅರ್ಥಪೂರ್ಣ. 'ಪೆತ್ರೊ ಕೋತೆ' ಎಂದರೆ ಜಡತ್ವದ ಗೋಜಲು ಎಂದರ್ಥ. 'ಬುಯೆಂದಿಯಾ' ಎಂದರೆ ಒಳ್ಳೆಯ ದಿನ; 'ರೆಮೆದಿಯೊ' ಎಂದರೆ ಆಶ್ರಯ ಎಂದರ್ಥ. 'ಅರ್ಕಾದಿಯೊ ಎಂದರೆ ಕಂಚಿನ ವಿಗ್ರಹಗಳಿಗೆ ಹೆಸರಾದ ಅರ್ಕಾಡಿಯಾ ಎಂದರ್ಥ. ಸ್ವರ್ಗಜ್ಜೆ ಇನ್ನೊಂದು ಹೆಸರೆನಿಸಿದ ಈ ಊರು ಇತಿಹಾಸದ ಪ್ರಕಾರ ಸೈನ್ಯಕ್ಕೆ ಕೂಲಿ ಸಿಪಾಯಿಗಳನ್ನು ಒದಗಿಸಿ ಕುಪ್ರಸಿದ್ಧವಾಯಿತು.

ಇಡೀ ಕಾದಂಬರಿಯನ್ನೇ ಅನುವಾದಿಸದೆ ಈ ಕೃತಿಯ ಕಥೆ ಹೇಳುವುದಂತೂ ಸಾಧ್ಯವೇ ಇಲ್ಲ. ಒಂದು ನೂರು ವರ್ಷಗಳ ಏಕಾಂತ ಬುಯೆಂದಿಯಾ ಮನೆತನದ ಆರು ಪೀಳಿಗೆಗಳನ್ನು

ಒಳಗೊಳ್ಳುತ್ತದೆ: ಹೋಸೆ ಅರ್ಕಾದಿಯೊ ಬುಯೆಂದಿಯಾ ಮತ್ತು ಉರ್ಸುಲಾ ಇಗುವಾರನ್ ಇವರಿಬ್ಬರ ಮದುವೆಯಿಂದ ಹಿಡಿದು ಹೋಸೆ ಅರ್ಕಾದಿಯೊ ಕೊಲೆಪಾತಕಿಯಾದ ಮೇಲೆ, ಬಹುಶಃ (ಈಡನ್ನಿನಿಂದ) ಅವರು ಬಹಿಷ್ಕೃತರಾಗುವವರೆಗೆ; ಕ್ರಾಂತಿಕಾರಿ ಕರ್ನಲ್ ಔರೇಲಿಯಾನೊ, ಅವನ ತಮ್ಮ ಹೋಸೆ ಅರ್ಕಾದಿಯೊ ಮತ್ತು ತಂಗಿ ಅಮರಾಂತಾವರೆಗೆ; ಅನೇಕಾನೇಕ ಔರೇಲಿಯಾನೋಗಳ, ಅರ್ಕಾದಿಯೋಗಳ, ಉರ್ಸುಲಾಗಳ ಮತ್ತು ಅಮರಾಂತಾಗಳವರೆಗೆ, ಇವರೆಲ್ಲರ ಜೊತೆಜೊತೆಗೇ ಜ್ಯೋತಿಷಿಗಳು, ಹೊಟ್ಟೆಬಾಕರು, ಡ್ಯಾಂಡೀಗಳು, ಟೆಕ್ಸನರು, ಪುರೋಹಿತರು, ಜನರಲ್ಲರು, ಸಾಹಿಸಗಳು, ಬಲಪಂಥೀಯರು, ಎಡಪಂಥೀಯರು ಇದ್ದಾರೆ. ಮತ್ತೆ ಪ್ರಪಂಚವನ್ನು ಸಂಸ್ಕೃತ ಭಾಷೆಯುಲ್ಲಿ ಬರೆದಿಡುವ ಮೆಲ್‌ಕಿಯಾದಿಸ್ ಎಂಬ ಜಿಪ್ಸಿ ಇದ್ದಾನೆ.

ಮಾರ್ಕ್ವೆಜ್ ಸೃಷ್ಟಿಸಿರುವ ಮಕಾಂಡೊ ಕಾಡಿನ ನಡುವೆ ಇರುವ ಒಂದು ಸಣ್ಣ ಊರು. ಆದರೆ ಕಾದಂಬರಿಯಲ್ಲಿ ಈ ಊರು ಇಡೀ ಪ್ರಪಂಚವನ್ನೇ ಪ್ರತಿನಿಧಿಸುವ ಒಂದು ಸಂಕೇತ. ಜಿಪ್ಸಿ ಮೆಲ್‌ಕಿಯಾದಿಸ್ ಈ ಊರಿಗೆ ಬಂದ ತಕ್ಷಣ ಇದು ಕೇವಲ ಒಂದು ಊರಾಗಿ ಉಳಿಯುವುದಿಲ್ಲ. ಮೆಲ್‌ಕಿಯಾದಿಸ್ ನಾಗರಿಕತೆಯ ಸೋಂಕಿಲ್ಲದ ಈ ಊರವರಿಗೆ ತಂದುಕೊಡುವುದು ಜ್ಞಾನವನ್ನು ಮತ್ತು ಸಂಶೋಧನಾ ಸಾಧನಗಳನ್ನು. ಅವುಗಳಿಂದ ಈ ಊರಿನ ಅಧಿಪತಿ (ಪೇಟ್ರಿಯಾರ್ಕ್) ಹೋಸೆ ಅರ್ಕಾದಿಯೊ ಬುಯೆಂದಿಯಾ ಬಹು ಕಷ್ಟಪಟ್ಟು ಮಾನವ ಕುಲದ ಮೂಲ ಸಂಶೋಧನೆಗಳನ್ನು ಮತ್ತೆ ಕಂಡುಹಿಡಿಯುತ್ತಾನೆ. ಭೂಮಿ ಕಿತ್ತಳೆ ಹಣ್ಣಿನಂತೆ ಗುಂಡಾಗಿದೆ ಎಂದು ಕಂಡುಹಿಡಿದಾಗ ಅವನ ಹೆಂಡತಿ ಉರ್ಸುಲಾ ನಿಜಕ್ಕೂ ತಾಳ್ಮೆ ಕಳೆದುಕೊಳ್ಳುತ್ತಾಳೆ. ಆದರೆ ಹೋಸ ಅರ್ಕಾದಿಯೊ ಬುಯೆಂದಿಯಾನ ಪ್ರಾಚೀನ ಪ್ರಯೋಗಶಾಲೆ ಅವನ ಭಾವೀ ಪೀಳಿಗೆಯವರನ್ನು ಯುದ್ಧಕ್ಕೆ ಕಳಿಸುವಂಥ ಅನಾವೃಷ್ಟಿ, ಪ್ಲೇಗು ಮತ್ತು ಇತರ ಸಂಕಷ್ಟಗಳಿಗೆ ಸಿಲುಕಿಸುವ ವಿನಾಶಕಾರಿ ಬೀಜಗಳನ್ನು ಒಳಗೊಂಡಿರುತ್ತದೆ. ಮಕಾಂಡೊ ಎಂಬ ಊರೇ ಸಮೃದ್ಧಿಯಿಂದ ತುಳುಕುತ್ತಿರುವಾಗ ಹೇಗೋ ಹಾಗೆ ಅವನತಿ ಹೊಂದಿದಾಗ ಕೂಡ ತನ್ನ ಸುತ್ತ ಬಿಚ್ಚಿಕೊಳ್ಳುವ ಬೃಹತ್ ಘಟನೆಗಳಿಗೆ ಕೇಂದ್ರವಾಗುತ್ತದೆ. ಯಾವ ಬದಲಾವಣೆಗೂ ಗಮನ ಕೊಡದ ಊರಿನಲ್ಲಿ ಜನನ, ವಿವಾಹ ಮತ್ತು ಸಾವುಗಳ ಬಗ್ಗೆ ಮೂಢನಂಬಿಕೆಯ ವಿಧಿಗಳು ಮುಂದುವರಿಯುತ್ತವೆ. ಮೊದಲೇ ಸೂಚಿಸಿದಂತೆ ಬುಯೆಂದಿಯಾ ಮತ್ತು ಅವನ ಸಂತತಿಯವರನ್ನು ಕುರಿತ ಈ ಕಾದಂಬರಿ– ಅದಂ, ಈವರನ್ನೂ ಅವರ ಸಂತತಿಯವರನ್ನೂ ಕುರಿತ ಬೈಬಲ್ಲಿನಂತಿದೆ. ಬುಯೆಂದಿಯಾನ ಕುಟುಂಬ ಮಾನವ ಕುಟುಂಬ; ಮೊದಲ ಕುಟುಂಬ. ಅದೇ ಈಡನ್ನಿನ ಜನ, ಜಗತ್ತು. 'ಮಕಾಂಡೊ ಕನ್ನಡಿಗಳ ಊರು' ಎನ್ನುತ್ತಾನೆ ಮಾರ್‌ಕೆಸ್. ಉರ್ಸುಲಾ 'ಕಾಲ ಸರಿಯುತ್ತಿಲ್ಲ... ಆದರೆ ಒಂದು ವೃತ್ತಾಕಾರದಲ್ಲಿ ತಿರುಗುತ್ತಿದೆ' ಎಂದು ಕಂಡುಕೊಂಡು ತಲ್ಲಣಿಸುತ್ತಾಳೆ.

ಗಾರ್ಸಿಯಾ ಮಾರ್ಕ್ವೆಜ್ ಉನ್ನತ ನೀತಿಪ್ರಜ್ಞೆಯುಳ್ಳ ರಾಜಕೀಯ ವ್ಯಕ್ತಿಯೆಂಬುದನ್ನು ಮರೆಯಬಾರದು. ಪುರಾಣವೆನ್ನುವುದು ಕಾಲವನ್ನು, ಘಟನೆಗಳನ್ನು ಒಂದು ವೃತ್ತವಾಗಿ ಪರಿವರ್ತಿಸಿ ಇತಿಹಾಸವನ್ನು ವಿರೋಧಿಸುತ್ತದೆ, ನಿಜ. ಆದರೂ ಅದು ನಾವು ಹೇಗೆ ಬದುಕಿದ್ದೇವೆಂಬುದನ್ನು ಧ್ವನಿಸುತ್ತದೆಯಷ್ಟೆ. ಪುರಾಣ ಹುಟ್ಟುವುದು ಶೂನ್ಯದಲ್ಲಲ್ಲ, ಅನುಭವದ ಆಳದಲ್ಲಿ. ಮಾರ್‌ಕೆಸ್

ಶೋಷಣೆ, ವಸಾಹತುವಾದ ಮತ್ತು ಕ್ರಾಂತಿಗಳ ಬಗ್ಗೆ ಬರೆಯುವುದು ಬಾಲ್ಯದಲ್ಲಿ ತಾತನೊಬ್ಬ ಬೀರಿದ ಪ್ರಭಾವದಿಂದ ಬೆಳೆದ ಅವನ ಮೊಮ್ಮಗನ ದೃಷ್ಟಿಕೋನದಿಂದ. ಈ ಮೊಮ್ಮಗ ಅಮೆರಿಕದ ಬಾಳೆಹಣ್ಣಿನ ವ್ಯಾಪಾರಿಗಳ ಶೋಷಣೆಗೊಳಗಾಗಿ. ಕೊನೆಗೆ ಸ್ವತಂತ್ರಗೊಂಡ ಅರಾಕಾಟಕ ಎಂಬ ಪಟ್ಟಣದಲ್ಲಿ ಕ್ರಾಂತಿವೀರನಾಗಿ ತನ್ನ ಕೊನೆಗಾಲವನ್ನು ಕಳೆದವನು.

ಈ ಕಾದಂಬರಿಯ ಪಾತ್ರಗಳು ತಮ್ಮ ನೂರು ವರ್ಷಗಳ ಏಕಾಂತದಲ್ಲಿ ಎಲ್ಲವೂ ದೂಳು ಮತ್ತು ಕಸದ ಬಿರುಗಾಳಿಯಲ್ಲಿ ನಿರ್ನಾಮವಾಗುತ್ತದೆಯೆಂದು ಪ್ರಾರಂಭದಲ್ಲೇ ನುಡಿಯಲಾದ ಭವಿಷ್ಯವನ್ನು ಸಮರ್ಥಿಸುತ್ತವೆ. ಭವಿಷ್ಯವಾಣಿಯ ಮತ್ತು ರಕ್ತಸಂಬಂಧಗಳ ನಿಯತಿವಾದ, ಅನೇಕ ಪೀಳಿಗೆಗಳ ಜನರ ಅದೇ ಹೆಸರುಗಳು, ಮಾತುಗಳು ಮತ್ತು ಘಟನೆಗಳು ವಾಸ್ತವಿಕತೆಗೆ ಭ್ರಮಾಲೋಕದ ಬಣ್ಣ ಬಳಿಯುತ್ತವೆ. ಮಾರ್‌ಕೆಸ್ ಸೃಷ್ಟಿಸಿರುವ ಭ್ರಮಾಲೋಕ ವಾಸ್ತವಕ್ಕೆ ತೀರ ಹತ್ತಿರವಾದದ್ದು. ಫ್ಯಾಂಟ್ಯಾಸ್ಟಿಕ್ ಧಾಟಿಯಲ್ಲಿ ಬರೆಯುವ ಲೇಖಕ ಕಣ್ಣಿಗೆ ಕಾಣುವ ವಿವರಗಳನ್ನು ಬರೆಯುವ ಲೇಖಕನಿಗಿಂತ ಹೆಚ್ಚು ಎಚ್ಚರಿಗೆ ವಹಿಸಬೇಕು. ಯಾಕೆಂದರೆ ಆ ಧಾಟಿಯ ಪ್ರಬಂಧ ಧ್ವನಿಗೆ ವಾಸ್ತವ ವಿವರಗಳೇ ಭದ್ರಬುನಾದಿ. ಮಾರ್‌ಕೆಸ್‌ನದು ಎಂಥ ಅನನ್ಯ ರೀತಿಯ ಬರವಣಿಗೆಯೆಂಬುದಕ್ಕೆ ಈ ಕೆಳಗಿನ ಕೆಲವು ಸಾಲುಗಳೇ ನಿದರ್ಶನ:

ಅನೇಕ ತಿಂಗಳ ಕಾಲ ಅವರೆಲ್ಲರ ಜ್ಞಾಪಕಶಕ್ತಿ ಕಳೆದುಹೋಗದಂತೆ ಮಾಡುವ ಸೂತ್ರವನ್ನು ಕಂಡುಹಿಡಿದವನು ಔರೇಲಿಯಾನೊ. ಅದನ್ನವನು ಕಂಡುಹಿಡಿದದ್ದು ಕೇವಲ ಆಕಸ್ಮಿಕವಾಗಿ. ನಿದ್ರೆಯಿಲ್ಲದಿರುವಿಕೆಯಲ್ಲಿ ಅತ್ಯಂತ ಪರಿಣತನೂ ಮೊಟ್ಟ ಮೊದಲಿಗರಲ್ಲೊಬ್ಬನೂ ಆಗಿದ್ದ ಅವನು ಬೆಳ್ಳಿಲೇಪ ಹಾಕುವ ಕಲೆಯನ್ನು ಕರಗತಮಾಡಿಕೊಂಡಿದ್ದ. ಒಂದು ದಿನ ಲೋಹಗಳನ್ನು ಲಟ್ಟಿಸಲು ಬಳಸುವ ಅಡಿಗಲ್ಲನ್ನು ಹುಡುಕುತ್ತಿದ್ದಾಗ ಅವನಿಗೆ ಆದರ ಹೆಸರು ನೆನಪಾಗಲಿಲ್ಲ. ಅವನ ತಂದೆ ಅದನ್ನು ಸ್ಟೇಕ್ ಎಂದ. ಔರೇಲಿಯಾನೊ ಚೂರು ಕಾಗದದಲ್ಲಿ ಸ್ಟೇಕ್ ಎಂದು ಬರೆದು, ಅದನ್ನು ಸಣ್ಣ ಅಡಿಗಲ್ಲಿನ ಬುಡಕ್ಕೆ ಅಂಟಿಸಿದ. ಈ ರೀತಿಯಲ್ಲಿ ಅವನು ಮುಂದೆಂದೂ ಅದರ ಹೆಸರನ್ನು ಮರೆಯುವಂತಿರಲಿಲ್ಲ... ಕೆಲವು ದಿನಗಳ ನಂತರ ಅವನಿಗೆ ಪ್ರಯೋಗಶಾಲೆಯ ಪ್ರತಿಯೊಂದು ವಸ್ತುವನ್ನೂ ನೆನಪಿಸಿಕೊಳ್ಳುವುದು ಕಷ್ಟವೆಂದು ತಿಳಿಯಿತು. ಆಮೇಲೆ ಆ ಎಲ್ಲ ವಸ್ತುಗಳ ಮೇಲೂ ಅವುಗಳ ಹೆಸರುಗಳನ್ನು ಬರೆದು ಅಂಟಿಸಿದ. ಈಗ ಆ ವಸ್ತುಗಳನ್ನು ಗುರುತಿಸಲು ಆ ಚೀಟಿಗಳನ್ನು ಓದಿದರೆ ಸಾಕು. ಅವನ ತಂದೆ ತನ್ನ ಬಾಲ್ಯಕಾಲದ ಪ್ರತಿಯೊಂದು ಘಟನೆಯನ್ನೂ ಮರೆತುಬಿಟ್ಟಿರುವುದಾಗಿ ಹೇಳಿದಾಗ ಔರೇಲಿಯಾನೊ ಅವನಿಗೆ ತನ್ನ ವಿಧಾನವನ್ನು ವಿವರಿಸಿದ. ಹೋಸೆ ಅರ್ಕಾದಿಯೊ ಬುಯೆಂದಿಯಾ ಇಡೀ ಮನೆಯಲ್ಲಿ ಆ ವಿಧಾನವನ್ನು ಬೆಳಕಿಗೆ ತಂದುದಲ್ಲದೆ, ಅದನ್ನು ಇಡೀ ಊರಿನ ಮೇಲೂ ಹೇರಿದ. ಒಂದು ಕುಂಚದಿಂದ ಅವನು ಪ್ರತಿಯೊಂದು ವಸ್ತುವಿನ ಮೇಲೂ ಆಯಾ ಹೆಸರುಗಳನ್ನು ಬರೆದ: ಮೇಜು, ಕುರ್ಚಿ, ಗಡಿಯಾರ. ಬಾಗಿಲು, ಗೋಡೆ, ಹಾಸಿಗೆ, ಕಾವಲಿ, ಕೊಟ್ಟಿಗೆ, ಹೀಗೆ. ಜಾನುವಾರುಗಳ ಹಾಗೂ ಸಸ್ಯಗಳ ಹೆಸರುಗಳನ್ನೂ ಬರೆದ: ಹಸು, ಮೇಕೆ, ಕೋಳಿ, ಮರಗೆಣಸು, ಕಲಾಡಿಯಮ್, ಬಾಳೆ ಇತ್ಯಾದಿ. ಮರೆವಿನ ಅಪಾರ ಸಾಧ್ಯತೆಗಳನ್ನು ಅಭ್ಯಾಸ ಮಾಡುತ್ತ ಅವನು ಚೀಟಿಗಳ ಮೂಲಕ ಮಾತ್ರ ವಸ್ತುಗಳ ಹೆಸರುಗಳನ್ನು ಗುರುತಿಸುವಂಥ ದಿನ ಬರಬಹುದೆಂದೂ ಆಗ ಯಾರಿಗೂ ಆ ವಸ್ತುಗಳ ಉಪಯೋಗ ಏನೆಂದು ತಿಳಿಯಲಾರದೆಂದೂ ಅರಿತುಕೊಂಡ.

ಆಮೇಲೆ ಇನ್ನಷ್ಟು ಸ್ಪಷ್ಟವಾಗಿ ವಿವರಗಳನ್ನು ಬರೆಯತೊಡಗಿದ. ಹಸುವಿನ ಕೊರಳಿಗೆ ಕಟ್ಟಿದ ಈ ಸೂಚನೆಗಳು ಮಕಾಂಡೋದ ನಿವಾಸಿಗಳು ಮರೆವಿನ ವಿರುದ್ಧ ಹೋರಾಡಲು ಸಿದ್ಧರಾದ ರೀತಿಗೆ ನಿಜಕ್ಕೂ ಒಂದು ಅತ್ಯುತ್ತಮ ನಿದರ್ಶನ: ಇದು ಹಸು. ಪ್ರತಿದಿನ ಬೆಳಗ್ಗೆ ಇದರ ಹಾಲು ಕರೆಯಬೇಕು. ಅಂದರೆ ಇದು ಹಾಲು ಕೊಡುತ್ತದೆ. ಹಾಲನ್ನು ಕಾಫಿಗೆ ಬೆರೆಸುವುದಕ್ಕಾಗಿ ಕಾಯಿಸಬೇಕು. ಹೀಗೆ ಅವರು ಬೇಗಬೇಗನೆ ನುಣುಸಿಕೊಳ್ಳುತ್ತಿದ್ದ ವಾಸ್ತವಲೋಕದಲ್ಲಿ ಬದುಕತೊಡಗಿದರು. ಅ ವಾಸ್ತವಲೋಕ ಕೆಲವು ಕ್ಷಣಗಳವರೆಗಾದರೂ ಪದಗಳಲ್ಲಿ ಉಳಿದಿರುತ್ತಿತ್ತೆನ್ನಿ. ಆದರೂ ಅವರು ಬರವಣಿಗೆಯ ಬೆಲೆಯನ್ನೇ ಮರೆತುಹೋದ ಮೇಲೆ ಏನು ಪ್ರಯೋಜನ?

ಈ ಕೃತಿಯಲ್ಲಿ ವಾಸ್ತವ ಮತ್ತು ಅದ್ಭುತಗಳು ನಮ್ಮ ಅರಿವಿಗೇ ಬಾರದ ರೀತಿಯಲ್ಲಿ ಒಂದರೊಳಗೊಂದು ಹಾಸುಹೊಕ್ಕಾಗಿವೆ. ಮೊದಲು ಒಂದು ಕುಟುಂಬ, ನಂತರ ಪುರಾಣ ಕತೆಗಳಿಂದ ತುಂಬಿದ ಅರಾಕಾಟಕ ಎಂಬ ಪುಟ್ಟ ಊರು, ಮೂರನೆಯ ಹಂತದಲ್ಲಿ ಇಡೀ ಕೊಲಂಬಿಯ ದೇಶ, ನಾಲ್ಕನೆಯದಾಗಿ ಇಡೀ ಲ್ಯಾಟಿನ್ ಅಮೆರಿಕ, ಕಡೆಗೆ ಮನುಕುಲದ ಚರಿತ್ರೆ – ಹೀಗೆ ಕಾದಂಬರಿಯ ಭಿತ್ತಿ ತುಂಬ ವಿಶಾಲವಾದದ್ದು. ಒಂದು ಜನಸಮುದಾಯಕ್ಕೇ ಮರೆವಿನ ರೋಗ ತಗಲುವುದು, ಬುಯೆಂದಿಯಾ ಎಂಬ ಪೂರ್ವಜ ನೂರಾರು ವರ್ಷ ಬದುಕುವುದು, ರೆಮಿಡಿಯೋಸ್ ಎಂಬ ಸುಂದರಿ ಆಕಾಶಕ್ಕೆ ಹಾರಿಕೊಂಡು ಹೋಗುವುದು, ಜಗಳದಿಂದಾಗಿ ಸಾಯುವವನೊಬ್ಬನ ರಕ್ತ ಊರನ್ನೆಲ್ಲ ಸುತ್ತಿ ಕಡೆಗೆ ಅವನ ತಾಯಿಯಿರುವ ಮನೆಗೆ ಬರುವುದು, ಅಸಂಬದ್ಧ ಸಾಹಸಗಳು, ಅಲೌಕಿಕ ಎನ್ನಬಹುದಾದ ಘಟನೆಗಳು. ಇವೆಲ್ಲವನ್ನೂ ಓದುವ ನಮಗೆ ನಾವೊಂದು ಅದ್ಭುತಲೋಕದಲ್ಲಿ ಸುತ್ತಾಡಿದ ಅನುಭವವಾಗುತ್ತದೆ.

ಮಾರ್ಕ್ವೆಜ್ ನೊಬೆಲ್ ಬಹುಮಾನ ಪಡೆದ ಸಂದರ್ಭದಲ್ಲಿ ಮಾಡಿದ ಭಾಷಣದಲ್ಲಿ ತನ್ನ ಖಂಡದ ಕೆಲವು ವಿಚಿತ್ರ ಸಂಗತಿಗಳನ್ನು ಪಟ್ಟಿ ಮಾಡುತ್ತಾನೆ. ಅವುಗಳಲ್ಲಿ ಕೆಲವು:

1. ಪಟಗೋನಿಯಾದಲ್ಲಿ ಮೂಲ ನಿವಾಸಿಯೊಬ್ಬ ಮೊಟ್ಟ ಮೊದಲ ಬಾರಿಗೆ ಕನ್ನಡಿಯಲ್ಲಿ ತನ್ನ ಸ್ವರೂಪವನ್ನು ಕಂಡದ್ದೇ ಭಯಭೀತನಾಗಿ ಪ್ರಜ್ಞೆ ತಪ್ಪಿ ಬಿದ್ದುಬಿಟ್ಟ.
2. ಚಿನ್ನದ ನಾಡೆಂದು ಹೆಸರಾದ ಎಲ್‌ದೊರಾದೊ ಎಂಬ ಭ್ರಾಮಕ ಜಗತ್ತು ಎಷ್ಟೋ ವರ್ಷಗಳವರೆಗೆ ನೂರಾರು ಭೂಪಟಗಳಲ್ಲಿ ಕಾಣಿಸಿಕೊಂಡದ್ದುಂಟು. ಭೂಪಟ ಬರೆಯುವವರು ತಮ್ಮ ತಮ್ಮ ಕಲ್ಪನಾ ಶಕ್ತಿಗೆ ಅನುಗುಣವಾಗಿ ಅದನ್ನು ಸ್ಥಳದಿಂದ ಸ್ಥಳಕ್ಕೆ ವರ್ಗಾಯಿಸಿದರು.
3. ಮೆಕ್ಸಿಕೋದಲ್ಲಿ ಮೂರು ಬಾರಿ ಸರ್ವಾಧಿಕಾರಿಯಾಗಿದ್ದ ಜನರಲ್ ಅಂತೋನಿಯೊ ಲೊಪೆಜ್ ದಿ ಸಂತಾನಾ ಯುದ್ಧದಲ್ಲಿ ಕಳೆದುಕೊಂಡ ತನ್ನ ಬಲಗಾಲಿಗಾಗಿ ಇಡೀ ದೇಶವೇ ಹಿಂದೆಂದೂ ಕಂಡರಿಯದಂಥ ವೈಭವೋಪೇತ ಅಂತಿಮಯಾತ್ರೆಯೊಂದನ್ನು ಏರ್ಪಡಿಸಿದ.

ಮಾರ್ಕ್ವೆಜ್ ಪ್ರಕಾರ ಇಂಥ ವಿಚಿತ್ರ, ವಿಲಕ್ಷಣ, ಭ್ರಾಮಕ ವಾಸ್ತವಗಳು ಸೃಜನಶೀಲ ಲೇಖಕರಿಂದ ಬಯಸುವುದು ಕಿಂಚಿತ್ ಕಲ್ಪನೆಯನ್ನಷ್ಟೆ. ಉಳಿದದ್ದೆಲ್ಲ ತನ್ನ ವಸ್ತುಸ್ಥಿತಿಯಿಂದಲೇ ಮಾಂತ್ರಿಕ ವಾಸ್ತವವನ್ನು ಧ್ವನಿಸುತ್ತವೆ.

ಮಾರ್ಕ್ವೆಜ್ ಪ್ರಭಾವಿತನಾಗಿರುವುದು ಒಂದು ದಿಕ್ಕಿನಲ್ಲಿ ಫ್ರಾಂಝ್ ಕಾಫ್ಕನಂಥವರಿಂದ; ಇನ್ನೊಂದು ದಿಕ್ಕಿನಲ್ಲಿ ಅಮೆರಿಕದ ಮಹಾಲೇಖಕ ವಿಲಿಯಂ ಫಾಕ್ನರನಿಂದ. ಅವನಿಗೆ ಕಾಫ್ಕ ವಾಸ್ತವದ ಬೇರೆ ಬೇರೆ ಮಗ್ಗುಲುಗಳನ್ನು ತೋರಿಸಿಕೊಟ್ಟರೆ ಫ್ಯಾಕ್ನರ್ ಅನುಭವವನ್ನು ಆಕೃತಿಯನ್ನಾಗಿ ಪಡಿಮೂಡಿಸುವ ವಿಧಾನವನ್ನು ಕಲಿಸಿದ.

ಒಮ್ಮೆ ಮಿತ್ರನೊಬ್ಬ ಕೊಟ್ಟ ಕಾಫ್ಕನ 'ಮೆಟಮಾರ್ಫಸಿಸ್' (ರೂಪಾಂತರ) ಎಂಬ ಕತೆಯನ್ನು ಓದಿದಾಗ ಮಾರ್ಕ್ವೆಜ್‌ಗೆ ಇದನ್ನು ಸಾಹಿತ್ಯ ಎಂದು ಕರೆಯುವುದಾದರೆ ನಿಜಕ್ಕೂ ಇದನ್ನು ಬರೆಯಲೇಬೇಕು ಎನ್ನಿಸಿತಂತೆ. ಆಮೇಲೆ ಅವನು ಬರೆದದ್ದು ಕೆಲವು ಕತೆಗಳ್ಳು, ಕಿರು ಕಾದಂಬರಿಗಳನ್ನು. ಒಂದೆಡೆ ತನ್ನ ಬರವಣಿಗೆಯ ಧಾಟಿಯ ಬಗ್ಗೆ ಬರೆಯುತ್ತ ಅವನು, 'ಅದು ತನ್ನ ಅಜ್ಜಿ ಕತೆಗಳನ್ನು ಹೇಗೆ ಹೇಳುತ್ತಿದ್ದಳೆಂಬುದನ್ನು ನೆನಪಿಸಿಕೊಂಡದ್ದರ ಫಲ' ಎಂದಿದ್ದಾನೆ. ಆಕೆ ಲೌಕಿಕ, ಅಲೌಕಿಕ, ಅಸಂಗತಿ, ವಿಲಕ್ಷಣ ಸಂಗತಿಗಳನ್ನು ಎಷ್ಟು ಸ್ವಾಭಾವಿಕವಾಗಿ ಹೇಳುತ್ತಿದ್ದಳೆಂದರೆ, ಆ ಎಲ್ಲ ಸಂಗತಿಗಳೂ ನಿಜವೆಂದೇ ಭಾಸವಾಗುತ್ತಿದ್ದವು.

'ಒಂದು ನೂರು ವರ್ಷಗಳ ಏಕಾಂತ'ದ ಮೂಲ ಸ್ಪ್ಯಾನಿಷ್ ಆವೃತ್ತಿ ಪ್ರಕಟವಾದದ್ದು 1967ರಲ್ಲಿ, ಅರ್ಜೆಂಟೀನಾದಲ್ಲಿ, ಆಮೇಲೆ ಈ ಕೃತಿಯೂ ಇದರ ಲೇಖಕನೂ ಬಹುಬೇಗ ದಂತಕತೆಯಾದದ್ದುಂಟು. ಸ್ಪ್ಯಾನಿಷ್ ಭಾಷೆಯೊಂದರಲ್ಲೇ ಈ ಕೃತಿಯ 40 ಮಿಲಿಯನ್ ಹೆಚ್ಚು ಪ್ರತಿಗಳು ಖರ್ಚಾಗಿವೆಯಂತೆ. ನಂತರ ಒಂದೆರಡು ವರ್ಷಗಳಲ್ಲೇ ಪ್ರಪಂಚದ ಅನೇಕ ಭಾಷೆಗಳಿಗೆ ಅನುವಾದಗೊಂಡಿತು. ಅಮೆರಿಕದಲ್ಲಿ ಬೆಸ್ಟ್ ಸೆಲ್ಲರ್ ಪಟ್ಟಿಗೆ ಸೇರ್ಪಡೆಯಾದ ಏಕೈಕ ಲ್ಯಾಟಿನ್ ಅಮೆರಿಕನ್ ಕೃತಿ ಇದು. ಮಕಾಂಡೊ ಎಂಬ ನಾಮಪದವೂ ಅದರ ಸೃಷ್ಟಿಕರ್ತನ ಹೆಸರೂ ಅಂತರರಾಷ್ಟ್ರೀಯ ಸಿನಿಮಾಗಳಲ್ಲಿ, ಕಾರ್ಪೊರೇಟ್ ವಲಯಗಳಲ್ಲಿ, ಜನಪ್ರಿಯ ಸಂಸ್ಕೃತಿಯಲ್ಲಿ ಮತ್ತೆ ಮತ್ತೆ ಕಾಣಿಸಿಕೊಳ್ಳತೊಡಗಿದವು. ಕೊಲಂಬಿಯದ ಸಾಂತಾ ಮಾರ್ತ ಎಂಬಲ್ಲಿ ಮೊಕಾಂಡೊ ಎಂಬ ಹೋಟೆಲೊಂದು ಪ್ರಾರಂಭವಾಯಿತು; ನ್ಯೂಯಾರ್ಕಿನ ಮನ್ಹಾಟನ್‌ನಲ್ಲಿ ಮಕಾಂಡೊ ಎಂಬ ಪುಸ್ತಕದಂಗಡಿ ತಲೆಯೆತ್ತಿತು.

ಇಂಗ್ಲಿಷ್ ಓದುಗರಿಗೆ ತನ್ಮೂಲಕ ಭಾರತೀಯ ಓದುಗರಿಗೆ ಕೂಡ – ಮಾರ್ಕ್ವೆಜ್‌ನ ದೈತ್ಯ ಪ್ರತಿಭೆಯನ್ನು ಪರಿಚಯಿಸಿದ ಕೀರ್ತಿ ಅವನ ಅನುವಾದಕರಾದ ಗ್ರಿಗೊರಿ ರಬಾಸನಿಗೂ ಎಡಿತ್ ಗ್ರಾಸ್‌ಮನ್‌ಗೂ ಸಲ್ಲಬೇಕು.

ಗ್ರಿಗೊರಿ ರಬಾಸನನ್ನು ಇಂಗ್ಲಿಷ್ ಭಾಷೆಯಲ್ಲಿ ಬರೆಯುವ ಅತ್ಯುತ್ತಮ ಲ್ಯಾಟಿನ್ ಅಮೆರಿಕನ್ ಲೇಖಕ ಎಂದು ಮಾರ್ಕ್‌ಕೆಸನೇ ಒಮ್ಮೆ ಪ್ರಶಂಸಿಸಿದ್ದುಂಟು.

1980ರಲ್ಲಿ ಲೆಬನಾನಿನಲ್ಲಿ 'ಒಂದು ನೂರು ವರ್ಷಗಳ ಏಕಾಂತ'ದ ಅರಾಬಿಕ್ ಭಾಷಾಂತರ ಪ್ರಕಟವಾಯಿತು. ಅದನ್ನು ಓದಿದ ವಿಮರ್ಶಕ ಅಬ್ದುಲ್‌ಕಾದರ್ ರಬಿಯಾ 'ಅರಾಬಿಕ್ ಭಾಷೆಯಲ್ಲಿ

ಈ ಕಾದಂಬರಿಯ ಪುಟಗಳನ್ನು ತೆರೆಯುವುದೆಂದರೆ ಒಂದು ಮನಮೋಹಕ ಜಗತ್ತನ್ನು ಕಂಡುಹಿಡಿದಂತೆ; ಅರಾಬಿಕ್ ಭಾಷೆಯ ಓದುಗನಿಗೆ ಅರೇಬಿಯಾನ್ ನೈಟ್ಸ್ ಎಂಬ ಅತ್ಯದ್ಭುತ ಲೋಕಾನುಭವವನ್ನು ಮತ್ತೆ ಅನುಭವಿಸಿದಂತೆ' ಎಂದು ಬರೆದ. ಹೌದು, ಈ ಕಾದಂಬರಿಯಲ್ಲದೆ ಮಾರ್ಕ್ವೆಜ್‌ನ ಇತರ ಕೃತಿಗಳು ಕೂಡ 'ಅರೇಬಿಯನ್ ನೈಟ್ಸ್'ನ ಷಹಜಾದೆಯ ಕತೆಗಳಂತೆ ಮನಮೋಹಕವಾಗಿದೆ.

ಕನ್ನಡದಲ್ಲಿ ಯಶವಂತ ಚಿತ್ತಾಲರಲ್ಲಿ (ಮುಖ್ಯವಾಗಿ ಅವರು ಪಾತ್ರಗಳ ಮನೋಲೋಕಕ್ಕೆ ಲಗ್ಗೆಯಿಡದಂಥ ಸಂದರ್ಭಗಳಲ್ಲಿ), ಪೂರ್ಣಚಂದ್ರ ತೇಜಸ್ವಿಯವರಲ್ಲಿ, ಕುಂವೀ ಅವರಲ್ಲಿ, ಜಯಂತ ಕಾಯ್ಕಿಣಿಯಲ್ಲಿ, ಅಬ್ದುಲ್ ರಶೀದರಲ್ಲಿ ಮಾರ್ಕ್ವೆಜ್‌ನ ಸೆಳಕುಗಳನ್ನು ಕಂಡು ನಾನಂತೂ ತುಂಬ ಸಂತೋಷಪಟ್ಟಿದ್ದೇನೆ.

**ಎಸ್. ದಿವಾಕರ್**

# ಮಾರ್ಕ್ವೆಜ್ ಬದುಕಿದ್ದೇ ಕತೆ ಹೇಳಲು

ಸುಮಾರು ಒಂದು ದಶಕದ ಕೆಳಗೆ ಲ್ಯಾಟಿನ್ ಅಮೆರಿಕಾದ ಶ್ರೇಷ್ಠ ಲೇಖಕ ಗೇಬ್ರಿಯಲ್ ಗಾರ್ಸಿಯಾ ಮಾರ್ಕ್ವೆಜ್‌ಗೆ ಕ್ಯಾನ್ಸರ್ ಇರುವುದು ಗೊತ್ತಾಯಿತು. ಆ ಸುದ್ದಿ ಕೇಳಿದ ಮಾರ್ಕ್ವೆಜ್‌ನ ಮನಸ್ಥಿತಿ ಹೇಗಿತ್ತೋ ಗೊತ್ತಿಲ್ಲ, ಆದರೆ ಸಾವನ್ನು ಮುಂದೂಡಲೋ ಅಥವಾ ಸಾವಿನ ಆತಂಕದಿಂದ ಪಾರಾಗಲೋ ಎಂಬಂತೆ ಮಾರ್ಕ್ವೆಜ್ ಆತ್ಮಚರಿತ್ರೆ ಬರೆಯಲು ಆರಂಭಿಸಿದ. ಕೆಲವು ವರ್ಷಗಳ ಕೆಳಗೆ ಆ ಆತ್ಮಚರಿತ್ರೆ 'ಲಿವಿಂಗ್ ಟು ಟೆಲ್ ದಿ ಟೇಲ್' ಪ್ರಕಟವಾಯಿತು. ಈ ಆತ್ಮಚರಿತ್ರೆಯ ಮೊದಲ ಬೃಹತ್ ಸಂಪುಟ ಮಾರ್ಕ್ವೆಜ್‌ನ ತಾರುಣ್ಯದ ಘಟ್ಟಕ್ಕೆ ಬಂದು ನಿಂತಿತು; ಆದಾದ ಮೇಲೆ ಮಾರ್ಕ್ವೆಜ್ 'ಈ ಆತ್ಮಚರಿತ್ರೆಯ ಇನ್ನೂ ಎರಡು ಸಂಪುಟ ಬರೆಯುತ್ತೇನೆ' ಎಂದಿದ್ದ; ಆದರೆ ಬರೆಯಲಿಲ್ಲ. ಕಳೆದ ಮೂರು ವರ್ಷಗಳಿಂದ ಆಲ್ಜೈಮರ್ಸ್ ಕಾಯಿಲೆಗೆ ತುತ್ತಾಗಿ ಏನನ್ನೂ ಗುರುತಿಸಲಾಗದ ಸ್ಥಿತಿ ತಲುಪಿದ್ದ ಮಾರ್ಕ್ವೆಜ್ ಎಂದಾದರೊಂದು ದಿನ ತನ್ನ ಮಾಂತ್ರಿಕ ವಾಸ್ತವವಾದಿ ಪಾತ್ರಗಳಂತೆ ಆ ಕಾಯಿಲೆಯಿಂದ ಹೊರ ಬಂದು ಹೊಸ ಕತೆಯೊಂದನ್ನು ಸೃಷ್ಟಿಸಿಬಿಡಬಲ್ಲ ಎಂದು ನನ್ನಂಥವರು ಕಾಯುತ್ತಿದ್ದೆವು...

ಆ ನಿರೀಕ್ಷೆಗೆ ಕಾರಣವೂ ಇತ್ತು. ಅನೇಕ ಲೇಖಕರ ಸೃಜನಶೀಲ ಶಕ್ತಿ ಬತ್ತುವ ಎಪ್ಪತ್ತೈದರ ವಯಸ್ಸಿನಲ್ಲಿ ಮಾರ್ಕ್ವೆಜ್ 'ಮೆಮೊಯರ್ಸ್ ಆಫ್ ಮೈ ಮೆಲಾಂಕಲಿ ಹೋರ್ಸ್' ಎಂಬ ಪುಟ್ಟ ಕಾದಂಬರಿ ಬರೆದಿದ್ದ; ವೃದ್ಧನೊಬ್ಬನ ಕಾಮಶೋಧನೆಯ ಈ ಕೋಮಲ ಕತೆಯ ಮೂಲಕ ಜಗತ್ತಿನ ಎಲ್ಲ ವಯಸ್ಸಿನ ಪ್ರೇಮಿಗಳಲ್ಲಿ ವಿಚಿತ್ರ ರೋಮಾಂಚನಗಳ ಅಲೆಯೆಬ್ಬಿಸಿದ. ಅದಕ್ಕೂ ಮುನ್ನ ಬರೆದಿದ್ದ ಇಪ್ಪತ್ತನೆಯ ಶತಮಾನದ ಅಪೂರ್ವ ಪ್ರೇಮ ಕಾದಂಬರಿ 'ಲವ್ ಇನ್ ದ ಟೈಮ್ ಆಫ್' ಕಾಲರಾ ದಲ್ಲಿ ಎಲ್ಲ ಕಾಲದ ಪ್ರೇಮಿಗಳಲ್ಲೂ ಹುಟ್ಟುವ, ತಂಗುವ, ಹಬ್ಬುವ ಪ್ರೇಮಯಾತನೆಯ ಸುಮಧುರ ಹುಡುಕಾಟ ಅವನ 'ಮೆಮೊಯರ್ಸ್ ಆಫ್ ಮೈ ಮೆಲಾಂಕಲಿ

ವೊರ್ಸ್' ಕಾದಂಬರಿಯಲ್ಲಿ ಬೇರೊಂದು ರೂಪ ತಾಳಿತ್ತು. ಗಂಡು ಹೆಣ್ಣುಗಳ ಜೀವಚೈತನ್ಯವಾದ ಕಾಮದ ಈ ಬಗೆಯ ಲೋಕವನ್ನು ಈ ಕಾಲದಲ್ಲಿ ಮಾರ್ಕ್ವೆಜ್ ರೀತಿಯಲ್ಲಿ ಬರೆದವರು ತೀರ ಕಡಿಮೆ. ಮೊನ್ನೆ ಮೊನ್ನೆಯಷ್ಟೇ ಈ ಕಾದಂಬರಿಯನ್ನು ಓದಿದ ನನ್ನ ವಾರಿಗೆಯ ಲೇಖಕ, ಲೇಖಕಿಯರು ಇದರಿಂದ ಪಡೆದ ಪುಳಕದ ಗಳಿಗೆಗಳು ನನ್ನ ಕಣ್ಣಿಗೆ ಕಟ್ಟಿದಂತಿವೆ!

ಲ್ಯಾಟಿನ್ ಅಮೆರಿಕಾದ ವಿಚಿತ್ರ ವಾಸ್ತವಗಳನ್ನು ಹೇಳುವ ಮಾರ್ಕ್ವೆಜ್‌ನ ಹತ್ತಾರು ಸಣ್ಣ ಕತೆಗಳಲ್ಲಿ ಹಾಗೂ 'ಒನ್ ಹಂಡ್ರೆಡ್ ಯಿಯರ್ಸ್ ಆಫ್ ಸಾಲಿಟ್ಯೂಡ್' ಕಾದಂಬರಿಯಲ್ಲಿ ಬರುವ ಮನೋಲೋಕದ ಬಹು ಸೂಕ್ಷ್ಮ ವಿವರಗಳನ್ನು ಹಾಗೂ ತರ್ಕಾತೀತ ಘಟನಾವಳಿಗಳನ್ನು ಕಂಡು ತಬ್ಬಿಬ್ಬುಗೊಂಡ ಪಶ್ಚಿಮದ ವಿಮರ್ಶಕರು ಇದನ್ನು ಮಾಂತ್ರಿಕ ವಾಸ್ತವತಾವಾದಿ ಮಾರ್ಗ ಎಂದು ಬಣ್ಣಿಸಿ ಕೈ ತೊಳೆದುಕೊಂಡರು! ಆದರೆ ಮಾರ್ಕ್ವೆಜ್ ಮಾತ್ರ ಇದು ಮಾಂತ್ರಿಕವಲ್ಲ; ಇದೇ ನಮ್ಮೂರಿನ ವಾಸ್ತವ ಎಂದು ಕಿಲಾಡಿ ನಗೆ ನಕ್ಕ; ಕಣ್ಣೆದುರು ಕಾಣುವ ವಾಸ್ತವ, ಅಪ್ರಜ್ಞೆ, ಊಹೆ, ಕಲ್ಪನೆ ಎಲ್ಲ ಬೆರೆಸಿ ತನ್ನ ಎಂದಿನ ಧಾಟಿಯಲ್ಲಿ ಕತೆಗಳನ್ನು ಹೇಳುತ್ತಲೇ ಹೋದ.

ಮಾರ್ಕ್ವೆಜ್‌ನ ಈ ಎಲ್ಲ ಕತೆಗಳ ಹಿನ್ನೆಲೆಯಲ್ಲಿ ನೋಡಿದಾಗ ಅವನ ಆತ್ಮಚರಿತ್ರೆಯ ಶೀರ್ಷಿಕೆ 'ಲಿವಿಂಗ್ ಟು ಟೆಲ್ ದಿ ಟೇಲ್' ಎಂಬುದು ಅವನ ಇಡೀ ಸೃಜನಶೀಲ ಪಯಣವನ್ನು ಹೇಳುವಂತೆ ಕಾಣುತ್ತದೆ. 'ಕತೆ ಹೇಳಲು ಬದುಕುವುದು ಅಥವಾ ಕತೆ ಹೇಳಲು ಬದುಕುತ್ತಿರುವೆ' ಎಂಬ ಅವನ ಈ ಆಶಯ ಕಂಡಾಗ, ಅರೇಬಿಯನ್ ನೈಟ್ಸ್ ಕತೆಗಳಲ್ಲಿ ಶಹಜಾದೆ ತನ್ನ ಸಾವನ್ನು ಮುಂದೂಡಲು ಪ್ರತಿ ರಾತ್ರಿಯೂ ಸುಲ್ತಾನನಿಗೆ ಒಂದೊಂದು ಕತೆ ಹೇಳಿದಾಗ ಅವಳಲ್ಲಿದ್ದ ನಿರೀಕ್ಷೆ ನೆನಪಾದರೆ ಆಶ್ಚರ್ಯವಲ್ಲ. ಇವನ್ನೆಲ್ಲ ನೋಡುವಾಗ, ಸಾವಿರಾರು ವರ್ಷಗಳಿಂದಲೂ ಕತೆ ಎನ್ನುವುದು ಅಪಾಯಗಳನ್ನು ದಾಟಬಲ್ಲ, ಸಾವನ್ನು ಮುಂದೂಡಬಲ್ಲ ಸಾಧನವೆಂಬಂತೆ ಬಳಕೆಯಾಗುತ್ತಾ ಬಂದಿರುವ ರೀತಿ ಕಂಡು ಅಚ್ಚರಿಯಾಗುತ್ತದೆ. ಕಾಲದ ನಾಗಾಲೋಟದ ನಡುವೆ ಕೂಡ ಮಾನವನ ಮೂಲ ಭಯ, ಬಯಕೆ, ನಿರೀಕ್ಷೆಗಳು ಹೆಚ್ಚುಕಡಿಮೆ ಹಾಗೆಯೇ ಉಳಿದು ಬಿಡುತ್ತವೆಯೆ? ಇಪ್ಪತ್ತೊಂದನೆಯ ಶತಮಾನದ ಶುರುವಿನಲ್ಲಿ ಬಂದ ಮಾರ್ಕ್ವೆಜ್‌ನ ಆತ್ಮಚರಿತ್ರೆಯಲ್ಲೂ ಶಹಜಾದೆಯ ಭಯ ಹಾಗೂ ಬಯಕೆಗಳ ಪ್ರತಿಬಿಂಬವಿದೆ; ಆದರೆ 'ಲಿವಿಂಗ್ ಟು ಟೆಲ್ ದಿ ಟೇಲ್' ಎಂಬ ಶೀರ್ಷಿಕೆ ಹಾಗೂ ಈ ಪುಸ್ತಕ ಕೇವಲ ಸಾವನ್ನು ಮುಂದೂಡುವ ಬಯಕೆಗಷ್ಟೆ ಸೀಮಿತವಾಗಿಲ್ಲ; ಮಾರ್ಕ್ವೆಜ್‌ನ ಬದುಕಿನ ಗುರಿಯನ್ನೂ ಅದು ಹೇಳುವಂತಿದೆ. ಎಲ್ಲರ ಹಾಗೆ ಮಾರ್ಕ್ವೆಜ್ ಕೂಡ ಮಾನವಜೀವಿಯಾಗಿ ಬಗೆಬಗೆಯ ಪಾತ್ರ ನಿರ್ವಹಿಸಿದ್ದಾನೆ. ಪತ್ರಕರ್ತ, ಪ್ರೇಮಿ, ವಿಟ, ಪತಿ, ಬುದ್ಧಿಜೀವಿ, ಖ್ಯಾತಿವಂತ, ನೊಬೆಲ್ ಪ್ರಶಸ್ತಿ ಪಡೆದ ದೊಡ್ಡ ಲೇಖಕ, ಕ್ರಾಂತಿಗಳಿಗೆ ಫಂಡ್ ಮಾಡಬಲ್ಲಷ್ಟು ಸಿರಿವಂತ ಹಾಗೂ ಪ್ರಭಾವಶಾಲಿ; ಇದೆಲ್ಲಕ್ಕಿಂತ ಹೆಚ್ಚಾಗಿ, ನನ್ನ ತಿಳಿವಳಿಕೆಯ ಪ್ರಕಾರ ಈಚಿನ ದಶಕಗಳಲ್ಲಿ ಈ ಜಗತ್ತಿನಲ್ಲಿ ಬದುಕಿದ್ದ ಅತ್ಯಂತ ಶ್ರೇಷ್ಠ ಕಾದಂಬರಿಕಾರ ಹಾಗೂ ಕಾದಂಬರಿ ಪ್ರಕಾರದ ಅಸಲು ಕಸುಬುದಾರ.

1998ರಲ್ಲಿ ಮಾರ್ಕ್ವೆಜ್ ಎಂಬತ್ತೊಂದನೆಯ ವಯಸ್ಸು ತಲುಪಿದಾಗ ನಡೆದ ಸಭೆಯೊಂದರಲ್ಲಿ ತನ್ನ ಪ್ರಖ್ಯಾತ ಕಾದಂಬರಿ ಒನ್ ಹಂಡ್ರೆಡ್ ಇಯರ್ಸ್ ಆಫ್ ಸಾಲಿಟ್ಯೂಡ್' ಕಾದಂಬರಿ ಬರೆದ

ಕಾಲವನ್ನು ಮತ್ತೆ ನೆನಪಿಸಿಕೊಂಡಿದ್ದ: ಮಾರ್ಕ್ವೆಜ್ ಈ ಕಾದಂಬರಿ ಬರೆಯುತ್ತಿದ್ದ ಕಾಲದಲ್ಲಿ ಸುಮಾರು ಹದಿನೆಂಟು ತಿಂಗಳ ಕಾಲ ಮನೆ ನಿಭಾಯಿಸಲು ಅವನ ಹೆಂಡತಿ ಮುರ್ಸಿಡಿಸ್ ತನ್ನ ಒಡವೆಗಳನ್ನು ಮಾರಿದ್ದಳು. ಆಗಸ್ಟ್ 1967ರಲ್ಲಿ ಬರೆದು ಮುಗಿಸಿದ ಈ ಕಾದಂಬರಿಯನ್ನು ಕಳೆದ ನಾಲ್ಕೂವರೆ ದಶಕಗಳಲ್ಲಿ ಜಗತ್ತಿನ ಐವತ್ತು ಅರವತ್ತು ಮಿಲಿಯನ್‌ಗಿಂತ ಹೆಚ್ಚು ಜನ ಓದಿರಬಹುದು. ಈ ಕಾದಂಬರಿಯ ಪ್ರಕಟಣೆಯ ಘಟ್ಟ ಕೂಡ ತಮಾಷೆಯಾಗಿದೆ. ಮಾರ್ಕ್ವೆಜ್ ಹಾಗೂ ಅವನ ಹೆಂಡತಿ ಮರ್ಸಿಡಿಸ್ ಈ ಕಾದಂಬರಿಯ ಹಸ್ತಪ್ರತಿಯನ್ನು ಎರಡು ಭಾಗ ಮಾಡಿ ಮೊದಲ ಒಂದು ಭಾಗವನ್ನು ಸಂಪಾದಕರಿಗೆ ಕಳಿಸುತ್ತಾರೆ. ತಮಾಷೆಯೆಂದರೆ, ತಾವು ಕಾದಂಬರಿಯ ಎರಡನೆಯ ಭಾಗ ಕಳಿಸಿದ್ದೇವೆಂಬುದು ಅವರಿಗೆ ಗೊತ್ತಾಗುವುದು ಅದನ್ನು ಕಳಿಸಿದ ಮೇಲೆಯೇ! ಅದೃಷ್ಟವಶಾತ್, ಆ ಸಂಪಾದಕನಿಗೆ ಕಾದಂಬರಿಯ ಮೊದಲ ಭಾಗವನ್ನು ಓದುವ ಕಾತರ ಹುಟ್ಟುತ್ತದೆ. ಆತ ಮೊದಲ ಭಾಗವನ್ನು ಕಳಿಸುವಂತೆ ಕೋರಿ ಮಾರ್ಕ್ವೆಜ್‌ಗೆ ಹಣ ಕಳಿಸುತ್ತಾನೆ. ಕೊನೆಗೂ ಕಾದಂಬರಿಯ ಮೊದಲ ಭಾಗ ಸಂಪಾದಕನಿಗೆ ತಲುಪುತ್ತದೆ. ಅವತ್ತಿನ ಸಭೆಯಲ್ಲಿ ಇವೆಲ್ಲ ನೆನೆಸಿಕೊಂಡ ಮಾರ್ಕ್ವೆಜ್‌ನ ಲಹರಿಯಲ್ಲಿ ಎಲ್ಲ ಬರಹಗಾರರೊಳಗೂ ಅಸೂಯೆ ಹುಟ್ಟಿಸಬಲ್ಲ ಮಾತುಗಳಿವೆ:

ಹದಿನೇಳು ವರ್ಷದವನಾಗಿದ್ದಾಗಿನಿಂದ ಹಿಡಿದು ಇವತ್ತಿನ ಬೆಳಗ್ಗೆಯ ತನಕ ನಾನು ಮಾಡಿರುವುದು ಇಷ್ಟೇ: ಪ್ರತಿ ದಿನ ಬೇಗ ಏಳುವುದು, ಹಿಂದೆಂದೂ ಯಾರೂ ಹೇಳದ ಕತೆಯೊಂದನ್ನು ಹೇಳಿ, ಅಸ್ತಿತ್ವದಲ್ಲೇ ಇಲ್ಲದ ಓದುಗನ ಬದುಕನ್ನು ಖುಷಿಯಲ್ಲಿಡುವ ಏಕಮಾತ್ರ ಉದ್ದೇಶದಿಂದ ಟೈಪ್‌ರೈಟರ್ ಮೇಲಿನ ಖಾಲಿ ಹಾಳೆಯನ್ನು ತುಂಬಿಸಲು ಕೀಗಳ ಮೇಲೆ ಬೆರಳಿಡುವುದು... ನನ್ನ ರೂಮಿನ ಏಕಾಂತದಲ್ಲಿ ಕೂತು ಬರೇ 28 ಅಕ್ಷರಗಳನ್ನು ಹಾಗೂ ಎರಡು ಬೆರಳುಗಳನ್ನು ನನ್ನ ಏಕಮಾತ್ರ ಅಸ್ತ್ರವಾಗಿ ಬಳಸಿ ಬರೆದದ್ದನ್ನು ಹತ್ತು ಲಕ್ಷ ಜನ ಓದುತ್ತಾರೆ ಎಂದರೆ ಇದು ನಿಜಕ್ಕೂ ಒಂದು ಹುಚ್ಚಲ್ಲವೆ!

ಈ ಮಾತು ಹೇಳಿದಾಗ ಎಂಬತ್ತೊಂದು ತಲುಪಿದ್ದ ಮಾರ್ಕ್ವೆಜ್ ತನ್ನ ಹದಿನೇಳನೆಯ ವಯಸ್ಸಿನಿಂದ, ಅಂದರೆ ಸುಮಾರು ಅರವತ್ತನಾಲ್ಕು ವರ್ಷ ಕಾಲ, ಹಾಗೂ ಈ ಮಾತು ಹೇಳಿದ ನಂತರವೂ ದಿನನಿತ್ಯ ಹೊಸತನ್ನು ಬರೆಯಬಲ್ಲ ಲೇಖಕನಾಗಿ, ಅದರಲ್ಲೂ ಜೀವಂತವಾಗಿ ಬರೆಯುವ ಲೇಖಕನಾಗಿ ಉಳಿದಿದ್ದು ಅದ್ಭುತವಾಗಿದೆ. ತನ್ನ ಸಮಾಜದ ಎಲ್ಲ ಬಿಕ್ಕಟ್ಟುಗಳನ್ನೂ ಕಣ್ಣು ಬಿಟ್ಟು ನೋಡುವ, ಅನುಭವಿಸುವ ಲೇಖಕ ಸುಮಾರು ಆರೇಳು ದಶಕಗಳ ಕಾಲ ಮಾನವ ನಾಗರಿಕತೆಯ ಏಳುಬೀಳು, ಹಿಂಸೆ, ಮಾನವರ ಊಹಾತೀತ ವರ್ತನೆಗಳು.. ಹೀಗೆ ಹತ್ತಾರು ವಸ್ತುಗಳ ಬಗ್ಗೆ ಅತ್ಯಂತ ಮಹತ್ವದ್ದನ್ನೇ ಸೃಷ್ಟಿಸಬಲ್ಲವನಾಗಿ ಉಳಿದದ್ದು ಹಾಗೂ ಒಂದು ಶತಮಾನದ ಚರಿತ್ರೆಗೆ ಸಾಕ್ಷಿಯಾಗಿ ಅದನ್ನು ಆಳವಾಗಿ ಗ್ರಹಿಸಿ ಬರೆಯಬಲ್ಲವನಾಗಿ, ನಿರಂತರ ಸೃಜನಶೀಲನಾಗಿ ಉಳಿದಿದ್ದು ನಿಜಕ್ಕೂ 'ಭುವನದ ಭಾಗ್ಯ' ಅಲ್ಲವೆ?

ಮಾರ್ಕ್ವೆಜ್‌ನ ಒಟ್ಟು ಕಥಾಪಯಣವನ್ನು ನೋಡಿದವರಿಗೆ 'ಲಿವಿಂಗ್ ಟು ಟೆಲ್ ದ ಟೇಲ್' ಅವನನ್ನು ಒಂದು ಜೀವಮಾನ ಹಿಡಿದಿಟ್ಟಿದ್ದ ಕೇಂದ್ರ ರೂಪಕದಂತೆಯೂ ಕಾಣುತ್ತದೆ. ಅವನ ಈ ಧ್ಯಾನಶೀಲ ಉದ್ದೇಶ ಎಲ್ಲ ಕಾಲದ ಲೇಖಕ, ಲೇಖಕಿಯರಿಗೂ ಸ್ಫೂರ್ತಿ, ಪ್ರೇರಣೆ

ತರುವ ಮಾದರಿಯಂತೆಯೂ ಇದೆ; ಅದು ಒಂದು ಜೀವಮಾನದ ಧ್ಯಾನದಿಂದ ಹುಟ್ಟುವ ಬರವಣಿಗೆಯ ಘನತೆ, ಆಳ, ಹೊಸತನ, ಹೊಳೆಯಿಸುವ ಸತ್ಯಗಳು ಹಾಗೂ ವಿಶಿಷ್ಟ ಜೀವನದರ್ಶನಗಳು ಎಷ್ಟೊಂದು ವ್ಯಾಪಕವಾಗಿರಬಲ್ಲವು ಎಂಬುದುರ ಬಗ್ಗೆ ನಾವೆಲ್ಲ ಒಮ್ಮೆಯಾದರೂ ಗಾಢವಾಗಿ ಚಿಂತಿಸುವಂತೆ ಮಾಡುತ್ತದೆ. ಅದರ ಜೊತೆಗೇ ಮಾರ್ಕ್ವೆಜ್‌ನ 'ಲಿವಿಂಗ್ ಟು ಟೆಲ್ ದಿ ಟೇಲ್' ಎಂಬ ಬದುಕಿನ ಗುರಿ ನಮ್ಮ ನಮ್ಮ ಜೀವನದ ವಿವಿಧ ಉದ್ದೇಶಗಳನ್ನು ನಾವು ಆಗಾಗ್ಗೆಯಾದರೂ ಸ್ಪಷ್ಟಪಡಿಸಿಕೊಳ್ಳಬೇಕೆಂದು ಪಿಸು ನುಡಿಯುತ್ತದೆ.

ಇದೆಲ್ಲದರ ಜೊತೆಗೆ, ಇಂಥ ಮಹಾಪ್ರತಿಭೆಯೊಂದು ಅನುಭವದ ಸಮೃದ್ಧ ಹಾಗೂ ದರ್ಶನದ ಪ್ರಖರತೆಯಿಂದ ಮಾಗಿದ ತನ್ನ ಕೊನೆಯ ವರ್ಷಗಳಲ್ಲಿ ತನ್ನೊಳಗಿನ ಕತೆಗಳನ್ನು ಯಾರಿಗೂ ಹೇಳಲಾಗದೆ, ಯಾರನ್ನೂ ಯಾವುದನ್ನೂ ಗುರುತಿಸಲಾರದ ಖಾಯಿಲೆಗೆ ತುತ್ತಾಗಿ ಮೌನವಾಗಿ ತೆರಳಬೇಕಾಯಿತಲ್ಲಾ ಎಂದು ನಿಟ್ಟುಸಿರೂ ಹುಟ್ಟುತ್ತದೆ.

**ನಟರಾಜ ಹುಳಿಯಾರ್**

# ನನ್ನ ಮಾತು

ಈವರೆಗೆ ಹಿಂದಿ, ತೆಲುಗು, ಇಂಗ್ಲೀಷ್ ಅನುವಾದಗಳನ್ನು ಮಾಡಿರುವ ನನಗೆ ಗ್ರೇಬ್ರಿಯಲ್ ಗಾರ್ಸಿಯಾ ಮಾರ್ಕ್ವೆಜ್‌ನ 'ಒಂದು ನೂರು ವರ್ಷಗಳ ಏಕಾಂತ' ಎಂಬ ಹೆಸರಿನಲ್ಲಿ ಅನುವಾದಿಸಲು ಹೊರಟದ್ದು, ನನ್ನ ದೃಷ್ಟಿಯಲ್ಲಿ ಒಂದು ಸಾಹಸವೂ ಹೌದು; ದುಸ್ಸಾಹಸವೂ ಹೌದು! ಕಾಲೇಜು ದಿನಗಳಲ್ಲಿಯೇ ಇಂಗ್ಲೀಷ್ ಸಾಹಿತ್ಯ ಕೃತಿಗಳನ್ನು ಅದರಲ್ಲೂ ಕ್ಲಾಸಿಕ್‌ಗಳನ್ನು ಓದುವ ಹುಚ್ಚು ಹಚ್ಚಿಕೊಂಡಿದ್ದ ಅವಧಿಯಲ್ಲಿ ಒನ್ ಹಂಡ್ರೆಡ್ ಇಯರ್ಸ್ ಆಫ್ ಸಾಲಿಟ್ಯೂಡ್ ಕಾದಂಬರಿಯನ್ನು ಅದರ ರಮ್ಯತೆ, ರೋಚಕತೆ ಮಾಂತ್ರಿಕ ಮೋಡಿಗಾಗಿ ಓದಿದ್ದೇನೆ ಹೊರತು, ಆ ಕಾದಂಬರಿಯ ಮಹಾನತೆಯನ್ನು ವಿಮರ್ಶೆಯ ದೃಷ್ಟಿಯಿಂದ ಮತ್ತು ಅದಕ್ಕೆ ವಿದ್ವಾಂಸರು, ವಿಮರ್ಶಕರುಗಳಿಂದ ದೊರೆತ ಪ್ರತಿಕ್ರಿಯೆಯನ್ನು ಹಲವು ಬಗೆಯ ಅರ್ಥ ಧ್ವನಿಗಳಿಂದ ಗುರುತಿಸಿರಲಿಲ್ಲ. ಆದರೆ ಇತ್ತೀಚೆಗೆ ಮತ್ತೊಮ್ಮೆ ಅದನ್ನು ಕನ್ನಡ ಎಂ.ಎ. ವಿದ್ಯಾರ್ಥಿಗಳಿಗೆ ಜಾಗತಿಕ ಸಾಹಿತ್ಯದ ಪಠ್ಯಗಳಲ್ಲಿ ಒಂದಾಗಿ ಪಾಠಮಾಡಬೇಕಾಗಿ ಬಂದುದರಿಂದ, ಮೊದಲಿನ ಓದಿಗಿಂತ ಭಿನ್ನವಾದ ನೆಲೆಯಲ್ಲಿ ಲ್ಯಾಟಿನ್ ಅಮೆರಿಕನ್ ಸಾಹಿತ್ಯವನ್ನು, ಅದರಲ್ಲಿಯೂ ಮಾರ್ಕ್ವೆಜ್‌ನ ಈ ಕಾದಂಬರಿಯನ್ನು ಅನಿವಾರ್ಯವಾಗಿ ವಿಮರ್ಶೆಯ ದೃಷ್ಟಿಯಿಂದ ನೋಡಬೇಕಾಯಿತು. ಸೃಷ್ಟಿಯ ಪ್ರತಿಸೃಷ್ಟಿಯಂತೆ ಕಾಣುವ ಈ ಕಾದಂಬರಿಯನ್ನು ವಾಸ್ತವಿಕ ಕಾದಂಬರಿಯಾಗಿಯೋ, ಅತಿವಾಸ್ತವತೆಯ ಕಾದಂಬರಿಯಾಗಿಯೋ, ಅದ್ಭುತ ರೋಮಾಂಚಕಾರಿ ಕಾಲ್ಪನಿಕ ಕಾದಂಬರಿಯಾಗಿಯೋ, ಮಾಂತ್ರಿಕತೆಯ ಮೋಡಿಯ ಕಾದಂಬರಿಯಾಗಿಯೋ– ಯಾವ ದೃಷ್ಟಿಕೋನಗಳಿಂದ ನೋಡಬೇಕೆನ್ನುವುದೇ ಪ್ರತಿ ಓದುಗನಿಗೂ ಸವಾಲಾಗುತ್ತದೆ. ವಿಶ್ವದ ಮಹಾನ್ ಕಾದಂಬರಿಕಾರ, ನೊಬೆಲ್ ಪ್ರಶಸ್ತಿ ಪುರಸ್ಕೃತ ಲ್ಯಾಟಿನ್ ಅಮೆರಿಕನ್ ಕಾದಂಬರಿ ಪರಂಪರೆಗೆ ಒಂದು ಹೊಸ ತಿರುವನ್ನು ಕೊಟ್ಟು ತನ್ನ ಕಾದಂಬರಿಯ ಮೂಲಕ ಮಾಂತ್ರಿಕ ವಾಸ್ತವತೆಯ ಹರಿಕಾರ ಎನಿಸಿಕೊಂಡ, ಅಲ್ಲದೆ ಆ ಹೆಸರಿನ ಪಂಥಕ್ಕೆ ಹಲವಾರು ಬರಹಗಾರರನ್ನು ಸೆಳೆದುಕೊಂಡ.

ಕಥೆ ಕಟ್ಟುವುದು ಮಾರ್ಕ್ವೆಜ್‌ಗೆ ಜನ್ಮಜಾತವಾಗಿ ಬಂದದ್ದು. ಅಜ್ಜಿಯಿಂದ, ಅಪ್ಪನಿಂದ ! ಕತೆ ಹೇಳಲು ಬದುಕುವುದು ಅಥವಾ ಕತೆ ಹೇಳಲು ಬದುಕುತ್ತಿರುವೆ ಎನ್ನುವುದೇ ಅವನ ನಂಬಿಕೆಯಾಗಿತ್ತು.

ಅವನ ಅಸಾಧಾರಣ ಪ್ರತಿಭೆ. ಕಥನ ಕಲೆಯ ಅನನ್ಯತೆ, ಅವನ ಕಾದಂಬರಿಯಲ್ಲಿ ಸೃಷ್ಟಿಯಾಗುವ ಅಸಂಭವವೂ, ಸಂಭವವೂ, ವಾಸ್ತವವೂ ಅವಾಸ್ತವವೂ, ರೋಚಕವೂ ಅರೋಚಕ ಅಥವಾ ಬೀಭತ್ಸವೂ ಭಯಾನಕವೂ ಲೌಕಿಕವೂ ಅಲೌಕಿಕವೂ ಇತ್ಯಾದಿಯಾಗಿ ದ್ವಂದ್ವನೀತಿಗಳಲ್ಲಿ ಕಾಣಿಸುವ ಸಂಗತಿ. ಸನ್ನಿವೇಶ, ಘಟನೆಗಳ ಒಂದು ವಿಚಿತ್ರ ಸಂಕೀರ್ಣ ಜಗತ್ತಿನ ಸೃಷ್ಟಿ, ರಾಜಕೀಯ ಸ್ಥಿತ್ಯಂತರಗಳಿಗೆ ಮನುಷ್ಯ ಸಂಬಂಧಗಳಿಗೆ, ಪ್ರವೃತ್ತಿಗಳಿಗೆ ಒಡ್ಡಿದ ರೂಪಕವಾಗಿಯೂ ಪರಿಣಮಿಸುತ್ತದೆ. ಏಳು ತಲೆಮಾರುಗಳ ಕತೆಯನ್ನು ಒಳಗೊಂಡ ಈ ಕಾದಂಬರಿಯಲ್ಲಿನ ಅಸಂಖ್ಯ ಪಾತ್ರಗಳಲ್ಲಿ ನೂರು ವರ್ಷಗಳಿಗೂ ಮೀರಿ ಬದುಕುವ ಉರ್ಸುಲಾ ಆದಿಮಾತೆಯಾಗಿ ಕಾಣಿಸಿಕೊಂಡು ಓದುಗರ ಹೃದಯವನ್ನು ಸೆರೆಹಿಡಿಯುತ್ತಾಳೆ. ಅಡಿಗರು ಈ ಕಾದಂಬರಿಯನ್ನು ಲ್ಯಾಟಿನ್ ಅಮೆರಿಕದ 'ಮಹಾಭಾರತ'ವೆಂದು ಬಣ್ಣಿಸಿರುವುದನ್ನು ಎಸ್. ದಿವಾಕರ್ ಪ್ರಸ್ತಾಪಿಸಿದ್ದಾರೆ. ಜಗತ್ತಿನ ಮಹಾನ್ ಸಾಹಿತಿಗಳಲ್ಲಿ ಇದನ್ನು ಓದದವರು ಯಾರು ಇಲ್ಲವೇ ಇಲ್ಲವೆಂದು ಹೇಳಬಹುದು. ಅದೇನು ಮಾಂತ್ರಿಕತೆಯೋ, ಮಿಲಿಯನ್ ಮಿಲಿಯನ್‌ಗಟ್ಟಲೆ ಕಾದಂಬರಿಯ ಪ್ರತಿಗಳು ಮಾರಾಟವಾದದ್ದೇ ಆ ಕಾದಂಬರಿಯ ಜನಪ್ರಿಯತೆಗೆ, ಅದರ ಮಹನತೆಗೆ ನಿದರ್ಶನವಾಗಿದೆ. ಇಂತಹ ಕಾದಂಬರಿಯನ್ನು ಕನ್ನಡದ ಓದುಗರು ಮತ್ತು ವಿದ್ಯಾರ್ಥಿಗಳನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಅವರಿಗೂ ಇದರ ಮಹಾನತೆ, ಮೌಲಿಕತೆ ಅರಿವಾಗಲೆಂದು ಅನುವಾದಕ್ಕೆ ಹೊರಟೆ. ಸಾಕಷ್ಟು ಕ್ಲಿಷ್ಟವೆನಿಸಿತು. ಸಾಹಿತ್ಯ ಮಿತ್ರರು, ವಿಮರ್ಶಕರು ಇದನ್ನು ಹೇಗೆ ಸ್ವೀಕರಿಸುತ್ತಾರೋ! ಎನ್ನುವ ಅಳುಕು ನನ್ನಲ್ಲಿ ಇದೆಯಾದರೂ, ಎಷ್ಟು ಸಾಧ್ಯವೋ ಅಷ್ಟೆಲ್ಲ ಎಚ್ಚರಿಕೆಯೊಂದಿಗೆ, ಅಲ್ಲಿ ಇಲ್ಲಿ ಚೂರು ಪಾರು ಸ್ವಾತಂತ್ರ್ಯವಹಿಸಿ ಸಾದ್ಯವಾದಷ್ಟು ಉತ್ತಮ ಅನುವಾದವಾಗಿ ಓದುಗರ ಮುಂದೆ ಇಟ್ಟಿರುವೆ. ಇಂತಹ ಮಹಾನ್ ಕೃತಿಕಾರನ ಕೃತಿಯ ಓದಿಗೆ ಒಳ್ಳೆಯ ಪ್ರವೇಶ ಸಿಕ್ಕು, ಅರ್ಥಮಾಡಿಕೊಳ್ಳಲು ಅನುವಾಗಲೆಂದು ಕನ್ನಡದ ಶ್ರೇಷ್ಠ ಕತೆಗಾರರೂ, ಪತ್ರಿಕಾ ಸಂಪಾದಕರೂ ಅಧ್ಬುತ ವಿಮರ್ಶಕರೂ ಆದ ಎಸ್. ದಿವಾಕರ್ ಅವರು 17ನೇ ಏಪ್ರಿಲ್ 2014ರಂದು ಮಾರ್ಕ್ವೆಜ್ ತೀರಿಕೊಂಡ ಸಂದರ್ಭದಲ್ಲಿ ಪ್ರಜಾವಾಣಿ ಸಾಪ್ತಾಹಿಕ ಪುರವಣಿಯಲ್ಲಿ ಬರೆದ ಲೇಖನವನ್ನು ಮತ್ತು ಇಂಗ್ಲೀಷ್ ಪ್ರೊಫೆಸರ್ ಮತ್ತು ಕನ್ನಡದ ಖ್ಯಾತ ವಿಮರ್ಶಕರು, ಚಿಂತಕರೂ ಆದ ಡಾ. ನಟರಾಜ್ ಹುಳಿಯಾರ್ ಅವರು ವಿಜಯ ಕರ್ನಾಟಕದಲ್ಲಿ ಬರೆದ ಲೇಖನವನ್ನೂ ಅವರ ಅನುಮತಿಯ ಮೇರೆಗೆ ಸೇರಿಸಿದ್ದೇನೆ. ನನ್ನ ಈ ಅನುವಾದ ಕೃತಿಗೆ ಅದ್ಭುತ ಪ್ರವೇಶಿಕೆಯಾಗಿ ದೊರೆತ ಈ ಎರಡೂ ಲೇಖನಗಳನ್ನು ಬರೆದ ಲೇಖಕರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

ಈ ಕೃತಿಗೆ ಕಳಸಪ್ರಾಯದಂತೆ, ನನ್ನ ಅನುಭವದಲ್ಲಿ ಬೌದ್ಧಿಕ ಸಂತನಂತೆ. ಸಾಹಿತ್ಯ ಜಗತ್ತಿನ ದೈತ್ಯ ಪ್ರತಿಭೆಯಾಗಿ ಕಾಣುತ್ತಿರುವ ದೇವನೂರು ಮಹಾದೇವ ಅವರ ಪ್ರಕಟಿತ ಲೇಖನವೊಂದನ್ನು ಬೆನ್ನುಡಿಯಾಗಿ ಬಳಸಿಕೊಳ್ಳಲು ಅನುಮತಿಸಿದ್ದಕ್ಕಾಗಿ ಅವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

ಅನುವಾದವೇನೋ ಸಿದ್ಧವಾಯಿತು ಆದರೆ ಅದನ್ನು ಪ್ರಕಟಿಸಲು ಉತ್ತಮ ಪ್ರಕಾಶಕರು ಯಾರಾದರೂ ಸಿಗಬಹುದೇನೋ ಎಂದು ಯೋಚಿಸುತ್ತಿರುವಾಗ ಅತ್ಯಂತ ಉತ್ಸಾಹಿ ತರುಣ ಪ್ರಕಾಶಕ ಸೃಷ್ಟಿ ನಾಗೇಶ್ ನನಗೆ ಅನಿರೀಕ್ಷಿತವಾಗಿ ಬೇಟಿಯಾಗಿ ಮಾತಾನಡುತ್ತಿರುವಾಗ ನನ್ನ ಅನುವಾದದ ಪ್ರಸ್ತಾಪ ಬಂತು. ಆ ಹುಡುಗನ ಮನಸ್ಸಿನ ಮಹತ್ವಾಕಾಂಕ್ಷೆ ಅಂತಹ ಒಂದು ಕಾದಂಬರಿಯನ್ನು ಪ್ರಕಟಿಸಬೇಕೆಂಬುದಾಗಿತ್ತು ಎನ್ನುವ ವಿಷಯ ತಿಳಿದಾಗ, ನನ್ನ ಕಾದಂಬರಿಯನ್ನು ಪ್ರಕಟಿಸಲು ಸಂತೋಷದಿಂದ ಸೃಷ್ಟಿ ನಾಗೇಶ್‌ಗೆ ನೀಡಿದೆ. ಅವರು ನನ್ನ ಕಾದಂಬರಿ ಪ್ರಕಟಿಸಿ ಉಪಕರಿಸಿದ್ದರೆ, ಇಂತಹ ಅನುವಾದವನ್ನು ಕೈಗೆತ್ತಿಕೊಳ್ಳಲು ಪ್ರೋತ್ಸಾಹಿಸಿದ ನವಕರ್ನಾಟಕದ ಉಡುಪರಿಗೂ ಡಾ.ಸಿ.ಎನ್. ರಾಮಚಂದ್ರನ್ ಅವರಿಗೂ, ನನ್ನ ಪ್ರೀತಿಯ ಗೆಳತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ ಅಧ್ಯಕ್ಷರಾದ ಪ್ರೊ. ಮಾಲತಿ ಪಟ್ಟಣಶೆಟ್ಟಿ ಅವರಿಗೂ ನನ್ನ ಹೃತ್ಪೂರ್ವಕ ಕೃತಜ್ಞತೆಗಳು. ಈ ಪುಸ್ತಕಕ್ಕೆ ಸುಂದರವಾದ ಮುಖಪುಟವನ್ನು ಮಾಡಿ ಉಪಕರಿಸಿದ ಕಲಾವಿದ ಜಿ. ಅರುಣ್‌ಕುಮಾರ್, ಮುದ್ರಣದ ಕಾರ್ಯದಲ್ಲಿ ಶ್ರಮಿಸಿದ ಸತ್ಯಶ್ರೀ ಮುದ್ರಣದ ಎಲ್ಲ ಶ್ರಮಿಕರನ್ನು ನೆನೆಯಬೇಕಾದ್ದು ನನ್ನ ಕರ್ತವ್ಯ.

ಮಹತ್ವದ ಈ ಕಾದಂಬರಿಯನ್ನು ತನ್ನೆಲ್ಲ ಶಕ್ತಿ ಸಾಮರ್ಥ್ಯಗಳನ್ನು ವ್ಯಯಿಸಿ ಅತ್ಯಂತ ಆಕರ್ಷಕವಾಗಿ ರೂಪಿಸಿ ಪ್ರಕಟಿಸಿದ ಸೃಷ್ಟಿ ನಾಗೇಶ್‌ಗೂ ನನ್ನ ಅನಂತ ಕೃತಜ್ಞತೆಗಳು.

**ಡಾ. ವಿಜಯಾ ಸುಬ್ಬರಾಜ್**

# 1 ಒಂದು ನೂರು ವರ್ಷಗಳ ಏಕಾಂತ

ಬಹಳ ಬಹಳ ವರ್ಷಗಳ ನಂತರ ಕರ್ನಲ್ ಅರೆಲಿಯಾನೋ ಬ್ಯುಂಡಿಯಾ, ತನ್ನನ್ನು ಗುಂಡಿಕ್ಕಿ ಕೊಲ್ಲಲು ತನ್ನೆದುರು ಫೈರಿಂಗ್ ಸ್ಕ್ವಾಡ್ ನಿಂತಿದ್ದಾಗ, ತನ್ನ ತಂದೆ ತನ್ನನ್ನು 'ಹಿಮ' (ಐಸ್)ವನ್ನು ಪತ್ತೆಹಚ್ಚಲು ಕರೆದೊಯ್ದದ್ದು ನೆನಪಾಯಿತು. ಆ ಸಮಯದಲ್ಲಿ, ಫಳಫಳನೆ ಹೊಳೆಯುತ್ತಿದ್ದ ಪೂರ್ವೇತಿಹಾಸದ ಕಲ್ಲುಹಾಸಿನ ಮೇಲೆ ಹರಿಯುತ್ತಿದ್ದ ನೀರಿನ ದಂಡೆಯ ಮೇಲೆ, ಕೇವಲ 20 ಅದೋಬೆ ಮನೆಗಳನ್ನು ಹೊಂದಿದ್ದ ಮಕೊಂಡೋ ಎಂಬ ಒಂದು ಸಣ್ಣ ಹಳ್ಳಿ ನೆಲೆಸಿತ್ತು. ಆ ಹಳ್ಳಿ ತೀರಾ ಇತ್ತೀಚಿನದಾಗಿತ್ತು. ಅಲ್ಲಿ ಎಷ್ಟೋ ವಸ್ತುಗಳಿಗೆ ಹೆಸರು ಕೂಡಾ ಇರಲಿಲ್ಲ. ಬೊಟ್ಟುಮಾಡಿ ಅವುಗಳತ್ತ ತೋರಿಸಬೇಕಿತ್ತು. ಪ್ರತಿ ವರ್ಷ ಮಾರ್ಚ್ ತಿಂಗಳೇ ಚಿಂದಿ ಬಟ್ಟೆಗಳನ್ನು ಉಟ್ಟಿದ್ದ ಜಿಪ್ಸ್ ಕುಟುಂಬವೊಂದು ಅಲ್ಲಿ ಬಂದು ಬೀಡು ಬಿಡುತ್ತಿತ್ತು. ಮದ್ದಲೆ ತುತ್ತೂರಿಗಳಿಂದ ಅಬ್ಬರದ ದನಿ ಮೂಡಿಸುತ್ತ ತಮ್ಮಲ್ಲಿದ್ದ ಹೊಸ ಹೊಸದಾಗಿ ಕಂಡುಹಿಡಿದಿದ್ದ ಅಪೂರ್ವ ವಸ್ತುಗಳನ್ನು ಪ್ರದರ್ಶಿಸುತ್ತಿತ್ತಲೇ ಮೊದಲಿಗೆ ಅಯಸ್ಕಾಂತವನ್ನು ತಂದರು. ಆ ಜಿಪ್ಸಿಗಳಲ್ಲಿ ಒಬ್ಬಾತ ದಪ್ಪನೆಯ, ಎಡ್ಡಾದಿಡ್ಡಿಯಾಗಿ ಗಡ್ಡ ಬೆಳೆಸಿಕೊಂಡಿದ್ದ ಗುಬ್ಬಚ್ಚಿಯಂತಹ ಕೈಕಾಲುಗಳನ್ನುಳ್ಳ ವ್ಯಕ್ತಿ ತನ್ನನ್ನು ಮೆಲ್‌ಕಿಯಾಡ್ಸ್ ಎಂದು ಪರಿಚಯಿಸಿಕೊಂಡ. ನಂತರ ಮೆಸೆಡೋನಿಯಾದ ರಸ

ವಿಜ್ಞಾನಿಗಳು ವಿಶ್ವದ ಎಂಟನೆಯ ಅದ್ಭುತವೆಂದು ಪರಿಗಣಿಸುತ್ತಿದ್ದ ಆ ಅಯಸ್ಕಾಂತವನ್ನು ಎದುರಿಗಿಟ್ಟ. [ಕೂಡಲೆ ಮನೆಯೊಳಗಿದ್ದ] ಪ್ರತಿಯೊಂದು ಮನೆಗೂ ಹೋಗಿ ಅಯಸ್ಕಾಂತದ ಆ ಎರಡು ತುಂಡುಗಳನ್ನು ಹೊಗಿಸುತ್ತಿದ್ದಂತೆಯೇ ಮನೆಯೊಳಗಿದ್ದ ಎಲ್ಲ ಕಬ್ಬಿಣದ ವಸ್ತುಗಳಾದ ಚಿಮಟಗಳು, ಮಡಕೆಗಳು, ಹೆಂಚುಗಳು, ಮೊಳೆಗಳು, ಸ್ಕ್ರೂಗಳು ಅಲ್ಲದೆ ಎಂದೋ ಕಳೆದು ಹೋಗಿದ್ದವು ಕೂಡಾ ಅಯಸ್ಕಾಂತದ ಆಕರ್ಷಣೆಗೆ ಸೆಳೆಯಲ್ಪಟ್ಟು ಹೊರಬಂದವು. ಎಲ್ಲ ವಸ್ತುಗಳಿಗೂ ತಮ್ಮದೇ ಆದ ಜೀವವಿದೆ ಎಂದು ಮೆಲ್‌ಕಿಯಾಡ್ಸ್ ತಿಳಿಸುತ್ತಿದ್ದ. ಏನಿದ್ದರೂ ಆತ್ಮದೆಡೆಗೆ ಬರುವುದು ಸಹಜವೇ ಆಗಿದೆ. ಆರ್ಕಾಡಿಯೋ ಬ್ಯುಂಡಿಯಾ ಅತ್ಯಂತ ಪ್ರತಿಭಾವಂತ; ಬುದ್ಧಿವಂತ. ಸ್ವಾಭಾವಿಕ ಪ್ರತಿಭೆಯ ಜೊತೆಗೆ ಪವಾಡಗಳನ್ನು ನಿಗೂಢಗಳನ್ನು ಭೇದಿಸಬಲ್ಲಷ್ಟು ಬುದ್ಧಿವಂತನೂ ಆಗಿದ್ದ. ಥಟ್ಟನೆ ಅವನಿಗೆ ಈ ಅಯಸ್ಕಾಂತವನ್ನು ಬಳಸಿ ಭೂಗರ್ಭದಿಂದ ಚಿನ್ನವನ್ನು ಶೋಧಿಸಿ ಹೊರತೆಗೆಯಲು ಈ ತಂತ್ರವನ್ನು ಬಳಸಬಹುದೆಂಬುದು ಅವನ ಅಗಾಧ ಕಲ್ಪನಾಶಕ್ತಿಗೆ ಹೊಳೆಯಿತು. ಅದನ್ನು ಮೆಲ್‌ಕಿಯಾಡ್ಸ್ ಜೊತೆ ಹೇಳಿದ. ಆದರೆ ಮೆಲ್‌ಕಿಯಾಡ್ಸ್ ಪ್ರಾಮಾಣಿಕ ವ್ಯಕ್ತಿಯಾಗಿದ್ದುದರಿಂದ, ಆ ಥರದ್ದೆಲ್ಲ ಸಾಧ್ಯವಾಗುವುದಿಲ್ಲವೆಂದು ತಿಳಿಸಿದ. ಆರ್ಕಾಡಿಯೋಗೆ ಜಿಪ್ಸಿಗಳ ಪ್ರಾಮಾಣಿಕತೆಯ ಬಗ್ಗೆ ನಂಬಿಕೆ ಇರಲಿಲ್ಲ. ಆದ್ದರಿಂದ ಅವನು ಒಂದು ಹೇಸರಗತ್ತೆ, ಒಂದು ಜೊತೆ ಮೇಕೆಗಳನ್ನು ಕೊಟ್ಟು ಎರಡು ಅಯಸ್ಕಾಂತದ ತುಂಡುಗಳನ್ನು ಪಡೆದ. ಆರ್ಕಾಡಿಯೋನ ಹೆಂಡತಿ ಉರ್ಸುಲಾ, ಕುಟುಂಬದ ಆದಾಯವನ್ನು ಹೆಚ್ಚಿಸಿಕೊಳ್ಳಲು ಒದಗಿಬಂದಿದ್ದ ಈ ಪ್ರಾಣಿಗಳನ್ನು ಮಾರುವುದನ್ನು ತಡೆಯುವಲ್ಲಿ ಸೋತಳು. ಆದಷ್ಟು ಬೇಗ, ಮನೆಯ ನೆಲವನ್ನೆಲ್ಲ ಹಾಸುವಷ್ಟು ಚಿನ್ನವು ನಮ್ಮದಾಗುತ್ತದೆಂದು ನಂಬಿಸಿ ಸುಮ್ಮನಿರಿಸಿದ. ಚಿನ್ನವನ್ನು ಪಡೆಯುವ ಪ್ರಯತ್ನದಲ್ಲಿ ತಿಂಗಳುಗಳನ್ನೇ ಕಳೆದ. ತನ್ನ ಆಲೋಚನೆಯ ಸತ್ಯವನ್ನು ನಿರೂಪಿಸಲು ಹೆಣಗಿದ. ಆ ಪ್ರದೇಶದ ಅಂಗುಲಂಗುಲ ಭೂಮಿಯನ್ನೆಲ್ಲ ಶೋಧಿಸಿದ. ಕಡೆಗೆ ನದಿ ಪಾತ್ರದ ಪ್ರದೇಶವನ್ನು ಬಿಡಲಿಲ್ಲ. ಮೆಲ್‌ಕಿಯಾಡ್ಸ್‌ನ ಮಂತ್ರೋಚ್ಚಾರವನ್ನು ಗಟ್ಟಿಯಾಗಿ ಹೇಳಿಕೊಂಡ. ಇಷ್ಟೆಲ್ಲಾ ಕಷ್ಟಪಟ್ಟುದ್ದಕ್ಕೆ ಸಿಕ್ಕಿದ್ದು 15ನೇ ಶತಮಾನದ ಯುದ್ಧ ಕವಚ ಮಾತ್ರ. ಅದೂ ಕೂಡಾ ಕಿಲುಬುಹಿಡಿದ್ದ ತುಂಡುಗಳನ್ನೆಲ್ಲ ಸೇರಿಸಿ ಜೋಡಿಸಿದ್ದಾಗಿತ್ತು. ಅದರೊಳಗೆ ಕಲ್ಲುಗಳು ತುಂಬಿದ್ದ ಸೋರೆ ಬುರುಡೆಯೊಂದಿತ್ತು. ಜೋಸ್ ಆರ್ಕಾಡಿಯೋ ಮತ್ತು ಅವನ ನಾಲ್ಕು ಜನ ಸಹಾಯಕರು ಕಷ್ಟಪಟ್ಟು ಆ ಕವಚವನ್ನು ಸೀಳಿ ಬೇರ್ಪಡಿಸಿದಾಗ ಅದರಲ್ಲಿ ಕಂಡದ್ದು ಒಂದು ಅಸ್ಥಿಪಂಜರ. ಅದೂ ಹೆಣ್ಣಿನದಾಗಿತ್ತು. ಅದರ ಕೊರಳ ಭಾಗದಿಂದ ತಾಮ್ರದ ಲಾಕೆಟ್ಟೊಂದು ನೇತಾಡುತ್ತಿತ್ತು. ಮಾರ್ಚ್ ತಿಂಗಳಲ್ಲಿ ಮತ್ತೆ ಜಿಪ್ಸಿಗಳ ಆಗಮನವಾಯಿತು. ಈ ಬಾರಿ ಅವರು ತಮ್ಮೊಂದಿಗೆ ಟೆಲಿಸ್ಕೋಪ್ ಒಂದನ್ನು ಮತ್ತು ಮದ್ದಲೆ ಗಾತ್ರದ ಭೂತಗನ್ನಡಿಯನ್ನು ತಂದಿದ್ದರು. ಆಮ್‌ಸ್ಟರ್‌ಡ್ಯಾಂ ಯಹೂದಿಗಳು ಇತ್ತೀಚೆಗಷ್ಟೇ ಕಂಡುಹಿಡಿದದ್ದೆಂದು ವಿವರಿಸಿ ಅವುಗಳನ್ನು ಪ್ರದರ್ಶಿಸಿದರು. ಒಬ್ಬ ಹೆಂಗಸನ್ನು ಆ ಹಳ್ಳಿಯ ಒಂದು ತುದಿಗೆ ನಿಲ್ಲಿಸಿ, ಟೆಲಿಸ್ಕೋಪ್‌ನ್ನು ತಾವು ಹಾಕಿಕೊಂಡಿದ್ದ ಡೇರೆಯ ಮುಂಭಾಗದಲ್ಲಿ ಇರಿಸಿದ್ದರು. ಐದು ರಿಯಾಲ್‌ಗಳನ್ನು (ನಾಣ್ಯಗಳು) ಕೊಟ್ಟು ಯಾರು ಬೇಕಾದರೂ ಟೆಲಿಸ್ಕೋಪಿಗೆ ಕಣ್ಣಿಟ್ಟು ಆ ಹೆಣ್ಣನ್ನು ಕೈಯಳತೆಯಲ್ಲಿಯೇ

ನೋಡಬಹುದಾಗಿತ್ತು. "ವಿಜ್ಞಾನ ಅಂತರವನ್ನೇ ಅಳಿಸಿಹಾಕಿದೆ. ಇಷ್ಟರಲ್ಲೇ ಮನುಷ್ಯ ಪ್ರಪಂಚದ ಯಾವ ಮೂಲೆಯಲ್ಲಿ ಏನಾಗುತ್ತಿದೆ ಎಂಬುದನ್ನು ಮನೆಯಲ್ಲಿ ಕುಳಿತೇ ನೋಡಲು ಸಾಧ್ಯವಾಗುವಂತೆ ಮಾಡುತ್ತೇನೆ – ಎಂದು ಮೆಲ್‌ಕಿಯಾಡ್ಸ್ ವಿವರಿಸಿ ಹೇಳಿದ. ಬಿರುಬಿಸಿಲಿನ ಒಂದು ಮಧ್ಯಾಹ್ನ, ಒಣಹುಲ್ಲಿನ ಒಂದು ಬಣಬೆಯ ಮೇಲೆ ಭೂತಗನ್ನಡಿ ಹಿಡಿದು ಸೂರ್ಯಶಾಖವನ್ನು ಕೇಂದ್ರೀಕರಿಸಿ ಅದು ಬೆಂಕಿ ಹತ್ತಿ ಸುಡುವುದನ್ನು ಪ್ರತ್ಯಕ್ಷವಾಗಿ ತೋರಿಸಿದ ಆರ್ಕಾಡಿಯೋ ಅಯಸ್ಕಾಂತದ ಪ್ರಯೋಗದಲ್ಲಿ ಇನ್ನೂ ಯಶಸ್ಸನ್ನು ಕಂಡಿರದಿದ್ದರೂ, ಈ ನಿದರ್ಶನದಿಂದ, ಯುದ್ಧಗಳ ತಯಾರಿಯಲ್ಲಿ ಈ ತಂತ್ರವನ್ನು ಬಳಸಬಹುದೆಂದು ಯೋಚಿಸಿದ. ಮೆಲ್‌ಕಿಯಾಡ್ಸ್ ಅಂಥ ಯೋಚನೆ ಬೇಡವೆಂದು ಎಷ್ಟು ಹೇಳಿದರೂ, ತನ್ನಲ್ಲಿದ್ದ ಲೋಹದ ತುಂಡುಗಳು ಮತ್ತು ವಸಾಹತು ಕಾಲದ ಮೂರು ನಾಣ್ಯಗಳಿಗೆ ಬದಲಾಗಿ ಭೂತಗನ್ನಡಿಯನ್ನು ಪಡೆದ. ಉರ್ಸುಲಾ ದಿಕ್ಕು ತೋಚದೆ ಕಣ್ಣೀರಿಟ್ಟಳು. ಉರ್ಸುಲಾಗೆ, ಅವಳ ತಂದೆ ತುಂಬಾ ಕಷ್ಟಪಟ್ಟು ದುಡಿದು ಜೀವಮಾನದ ಉಳಿತಾಯವಾಗಿ, ಮಗಳಿಗೆ ಕೊಟ್ಟಿದ್ದ. ಅವುಗಳನ್ನು ಪೆಠಾರಿಯಲ್ಲಿ ಭದ್ರವಾಗಿ ಯಾರ ಕಣ್ಣಿಗೂ ಬೀಳದ್ದು ಹಾಸಿಗೆಯಡಿಯಲ್ಲಿ ಅವಿತಿರಿಸಿದ್ದಳು. ಅಗತ್ಯ ಬಿದ್ದಾಗ, ಅದನ್ನು ಖರ್ಚು ಮಾಡಬೇಕೆಂದು ಆಲೋಚಿಸಿದ್ದಳು. ಜೋಸ್ ಆರ್ಕಾಡಿಯೋ ಅವಳನ್ನು ಸಮಾಧಾನಮಾಡುವ ಗೋಜಿಗೂ ಹೋಗಿರಲಿಲ್ಲ. ಅವನಿಗೇನಿದ್ದರೂ ತನ್ನಲ್ಲಿದ್ದ ವಸ್ತುಗಳೆಲ್ಲವನ್ನೂ ಪ್ರಯೋಗಕ್ಕೆ ಒಡ್ಡಿ, ಪ್ರಾಣ ಹೋದರೂ ಚಿಂತೆಯಿಲ್ಲ, ಪರಿಣಾಮವನ್ನೂ ಸಾಧಿಸಲೇಬೇಕೆಂಬ ಹಟಕ್ಕೆ ಬಿದ್ದಿದ್ದ. ಅವನಿಗೆ ಭೂತಗನ್ನಡಿ ತಂತ್ರದ ಬಳಕೆಯಿಂದ ಯುದ್ಧೋಪಯೋಗಿ ವಸ್ತುವೊಂದನ್ನು ತಯಾರಿಸುವುದು ಹೇಗೆ? ಶತ್ರು ಸೈನ್ಯದ ಮೇಲೆ ಅದರ ಪರಿಣಾಮ ಏನಾದೀತು? – ಎಂಬುದನ್ನು ಸಾಕ್ಷಾತ್ಕರಿಸಿ ತೋರಿಸಬೇಕೆಂಬುದೇ ಉದ್ದೇಶವಾಗಿತ್ತು. ಇದನ್ನು ಸಾಬೀತು ಪಡಿಸಲು ಮೊದಲಿಗೆ ತನ್ನ ಮೇಲೆಯೇ ಪ್ರಯೋಗ ಮಾಡಿಕೊಳ್ಳಲು ಮುಂದಾದ. ಭೂತಗನ್ನಡಿಯನ್ನು ತನ್ನ ಶರೀರದ ಮೇಲಿರಿಸಿ ಸೂರ್ಯಶಾಖವನ್ನು ಕೇಂದ್ರೀಕರಿಸಿದ. ಪರಿಣಾಮವಾಗಿ ಮೈ ಮೇಲೆಲ್ಲ ಸುಟ್ಟ ಗಾಯಗಳಾದವು. ಅವು ವಾಸಿಯಾಗಬೇಕಾದರೆ, ಎಷ್ಟೋ ಕಾಲ ಹಿಡಿಯಿತು. ಹೆಂಡತಿಯ ಹಟ, ಪ್ರತಿಭಟನೆ, ಇಂಥ ಅಪಾಯಕಾರಿ ಕೆಲಸಗಳ ವಿರುದ್ಧ ಮುಂದುವರೆದಾಗ, ಜೋಸ್ ಆರ್ಕಾಡಿಯೋ, ತನ್ನ ಮನೆಯನ್ನೇ ಬೆಂಕಿ ಹಾಕಿ ಸುಡಲು ಮುಂದಾದ. ಅವನಿಗೆ ತನ್ನ ಪ್ರಯೋಗಗಳ ಯಶಸ್ಸಿನ ಬಗ್ಗೆ ಇನ್ನಿಲ್ಲದ ಭರವಸೆ. ತನ್ನ ಕೋಣೆಯಲ್ಲಿ ಒಬ್ಬನೇ ಕುಳಿತು, ಏಕಾಗ್ರತೆಯೊಂದಿಗೆ, ಸೂತ್ರ, ಸಿದ್ಧಾಂತಗಳ ಬಗ್ಗೆ ಯೋಚಿಸುತ್ತಿದ್ದ. ಯುದ್ಧಾಸ್ತ್ರಗಳ ತಯಾರಿಗೆ ಸಂಬಂಧಪಟ್ಟ ಯೋಜನಾ ಸಾಧ್ಯತೆಗಳನ್ನು ತನ್ನದೇ ಆದ ನಿಖರವಾದ ಲೆಕ್ಕಾಚಾರಗಳೊಂದಿಗೆ ಸ್ಪಷ್ಟವಾಗಿ ಸೂಚಿಸಿದ.

ತನ್ನ ಪ್ರಯೋಗದ ವಿವರಗಳನ್ನು, ವಿವರಣಾತ್ಮಕ ಚಿತ್ರಗಳೊಂದಿಗೆ ಅಚ್ಚುಕಟ್ಟಾಗಿ, ಸಾಕಷ್ಟು ಪುಟಗಳ ವರದಿಯನ್ನು ತನ್ನೊಬ್ಬ ಸಂದೇಶವಾಹಕನೊಂದಿಗೆ ಸರಕಾರಕ್ಕೆ ಕಳಿಸಿಕೊಟ್ಟ. ಭಯಂಕರ ಹವಾಮಾನ, ಉಕ್ಕುತ್ತಿದ್ದ ನದಿಗಳು, ಬೆಟ್ಟಗುಡ್ಡ, ಕಂದರಗಳು, ನಿರಾಶೆಯ ನೋವಿನ ಆಘಾತಗಳು, ಪ್ಲೇಗು ಇವುಗಳಿಂದಾಗಿ ಮರಣಾಂತಿಕ ಸ್ಥಿತಿ ತಲುಪುತ್ತಿದ್ದ ಸಮಯಕ್ಕೆ ಸರಿಯಾಗಿ ಹೇಸರಗತ್ತೆಗಳ ಮೇಲೆ ಟಪಾಲು ಒಯ್ಯುತ್ತಿದ್ದ

ದಾರಿಯನ್ನು ಕಂಡುಕೊಂಡ. ಇಲ್ಲವಾದಲ್ಲಿ ರಾಜಧಾನಿ ತಲುಪುವುದು ಸಾಧ್ಯವೇ ಇರಲಿಲ್ಲ. ಸರಕಾರದಿಂದ ಒಪ್ಪಿಗೆ ಅಥವಾ ಆದೇಶ ದೊರೆತದ್ದೇ ಆದರೆ ತನ್ನ ಪ್ರಯೋಗಗಳನ್ನು ಸೇನಾಧಿಕಾರಿಗಳ ಮುಂದೆ ಪ್ರಯೋಗಿಸಿ ಪ್ರಮಾಣಿಸಿ ತೋರಿಸುವುದೇ ಅಲ್ಲದೆ ಸೈನಿಕರಿಗೆ ಅವುಗಳ ಪ್ರಯೋಗ ವಿಧಾನವನ್ನೂ ಕೂಡ ತರಬೇತಿ ನೀಡಿ ತಿಳಿಸಿಕೊಡುವ ಭರವಸೆಯನ್ನು ಬರೆದಿದ್ದ. ಆದರೆ ಎಷ್ಟೋ ವರ್ಷವಾದರೂ ಸರಕಾರದಿಂದ ಯಾವ ಆದೇಶವೂ ಬರಲಿಲ್ಲ. ಇದರಿಂದ ಜೋಸ್ ಆರ್ಕಾಡಿಯೋ ಹತಾಶನಾಗಿ ಮೆಲ್‌ಕಿಯಾಡ್ಸ್‌ನೊಂದಿಗೆ ತನ್ನ ಪ್ರಯೋಗಗಳ ಅಸಫಲಿತದ ಬಗ್ಗೆ ನಿರಾಶೆಯನ್ನು ಹೇಳಿಕೊಂಡನು. ಮೆಲ್‌ಕಿಯಾಡ್ಸ್ ಅವನ ಮಾತಿನಲ್ಲಿನ ಪ್ರಾಮಾಣಿಕತೆಯನ್ನು ಗ್ರಹಿಸಿ, ಭೂತಕನ್ನಡಿಗೆ ಬದಲಾಗಿ ಚಿನ್ನದ ನಾಣ್ಯಗಳನ್ನು ಮತ್ತು ಪೋರ್ಚುಗೀಸ್ ನಕ್ಷೆಗಳನ್ನು ಜೊತೆಗೆ ನೌಕಾಯಾನಕ್ಕೆ ಸಹಾಯಕವಾಗಬಹುದಾದ ದಿಕ್ಸೂಚಿ ******** ಮತ್ತು ಇತರೆ ಒಂದಷ್ಟು ಉಪಕರಣಗಳನ್ನು ನೀಡಿದ. ಅಷ್ಟೇ ಅಲ್ಲದೆ ಸನ್ಯಾಸಿ ಹೆರ್‌ಮನ್ ಹೆರ್‌ಮನ್ ನಡೆಸಿದ ಅಧ್ಯಯನಗಳನ್ನು ತನ್ನ ಸ್ವಂತಕ್ಕೆ ಬರಹದಲ್ಲಿ ಮಾಡಿ ಸಂಕ್ಷಿಪ್ತ ಟಿಪ್ಪಣಿಗಳನ್ನು ಕೂಡಾ ಆರ್ಕಾಡಿಯಾ ಬ್ಯುಂಡಿಯಾನ ಉಪಯೋಗಕ್ಕಿರಲೆಂದು ನೀಡಿದ. ಜೋಸ್ ಆರ್ಕಾಡಿಯೋ ತನ್ನ ಮನೆಯ ಹಿಂಭಾಗದ ಒಂದು ಕೋಣೆಯಲ್ಲಿ, ಯಾರಿಂದಲೂ ತೊಂದರೆಯಾಗದಂತೆ ಒಬ್ಬನೇ ತನ್ನ ಪ್ರಯೋಗಗಳಲ್ಲಿ ಮಗ್ನನಾಗಿ ಹೋದ. ಅವನಿಗೆ ಮನೆಯ ಜವಾಬ್ದಾರಿಗಳ ಯೋಚನೆಯೂ ಇಲ್ಲದೆ ದಿನವಿಡೀ ಮನೆಯಂಗಳದಲ್ಲಿ ಕುಳಿತು, ರಾತ್ರಿಗಳಲ್ಲಿ ಆಕಾಶದಲ್ಲಿನ ನಕ್ಷತ್ರಗಳನ್ನು ವೀಕ್ಷಿಸುತ್ತಿದ್ದ. ವೀಕ್ಷಿಸುವ ಪ್ರಯತ್ನದಲ್ಲಿ, ಮಧ್ಯಾಹ್ನಗಳನ್ನು ನಿಖರವಾಗಿ ಅರಿಯುವ ವಿಧಾನವನ್ನು ಅನ್ವಯಿಸುತ್ತಾ, ಬಿಸಿಲ ಹೊಡೆತಕ್ಕೆ ಗುರಿಯಾದ. ತನ್ನಲ್ಲಿದ್ದ ಉಪಕರಣಗಳನ್ನು ಬಳಸುವುದರಲ್ಲಿ ನುರಿತವನಾದ. ಹೀಗೆ ಮಾಡುವಲ್ಲಿ ತಾನೊಂದು, ಅಪರಿಚಿತ ಸಾಗರ ಮಾರ್ಗಗಳ ಮೂಲಕ, ಜನವಸತಿಯಿಲ್ಲದ ಭೂಪ್ರದೇಶಗಳನ್ನು ಪ್ರವೇಶಿಸಿದ. ತನ್ನ ಅಧ್ಯಯನಗಳನ್ನು ಬಿಟ್ಟು ಕೊಡದೆಯೇ, ವಿಚಿತ್ರ, ಅದ್ಭುತ ಜೀವಿಗಳೊಂದಿಗೆ ಸಂಬಂಧ ಸ್ಥಾಪಿಸಿಕೊಳ್ಳಬಲ್ಲವನಾಗಿದ್ದ. ಇದೇ ಅವಧಿಯಲ್ಲಿ ತನ್ನೊಳಗೆ ತಾನೇ ಮಾತನಾಡಿಕೊಳ್ಳುವ ಅಭ್ಯಾಸವನ್ನು ರೂಢಿಸಿಕೊಂಡಿದ್ದ. ಈ ಸಮಯದಲ್ಲಿ ಅವನಿಗೆ ಯಾರ ಪರಿವೆಯೂ ಇರುತ್ತಿರಲಿಲ್ಲ. ಉರ್ಸುಲಾ ಮತ್ತು ಮಕ್ಕಳು ಹಿತ್ತಲಲ್ಲಿ ಕಷ್ಟಪಟ್ಟು ಹಣ್ಣುಕಾಯಿ ಬೆಳೆಯುತ್ತಿದ್ದುದರ ಕಡೆಯೂ ಗಮನವಿರಲಿಲ್ಲ. ಇದ್ದಕ್ಕಿದ್ದಂತೆ ಅವನ ಈ ಎಡಬಿಡದ ಚಟುವಟಿಕೆಯ ಮಧ್ಯೆ ಏನೋ ಒಂದು ಬಗೆಯ ಭ್ರಮೆ ಆವರಿಸಿಕೊಂಡಿತು. ಯಾವುದೋ ಆತ್ಮ ಆವಾಹನೆಯಾದಂತೆ ವರ್ತಿಸುತ್ತಿದ್ದ. ಕಡೆಗೊಂದು ದಿನ ಡಿಸೆಂಬರ್ ತಿಂಗಳ ಒಂದು ಮಂಗಳವಾರ ಒಮ್ಮೆಲೇ ಅದುಮಿಟ್ಟುಕೊಂಡಿದ್ದ ಉದ್ವೇಗ, ಯಾತನೆಗಳನ್ನು ಹೊರಹಾಕಿದ. ಆ ದಿನ ತಮ್ಮ ತಂದೆ, ಎಡಬಿಡದ ಚಟುವಟಿಕೆಗಳ ಒತ್ತಡದಿಂದ ಜರ್ಝರಿತನಾಗಿಯೂ ತನ್ನ ಕಲ್ಪನೆಯ ತೀಕ್ಷ್ಣತೆಯಿಂದ, ತಾನು ಕಂಡು ಹಿಡಿದಿದ್ದನ್ನು ವಿವರಿಸಿದ ಬಗೆಯನ್ನು ಮಕ್ಕಳು ತಮ್ಮ ಜೀವನ ಪರ್ಯಂತ ಎಂದೆಂದಿಗೂ ಮರೆಯಲಾರರು.

'ಭೂಮಿ ಕಿತ್ತಳೆಯಂತೆ ಗುಂಡಗಿದೆ' ಎಂದು ವಿವರಿಸಿದ್ದ. ಉರ್ಸುಲಾಳ ಸಹನೆ ಮೀರಿತ್ತು. 'ನಿಮಗೆ ಹುಚ್ಚು ಹಚ್ಚಿಕೊಳ್ಳಬೇಕಂತ ಇದ್ದರೆ, ದಯವಿಟ್ಟು ನಿಮ್ಮೊಂದಿಗೇ

ಇಟ್ಟುಕೊಳ್ಳಿ ನಿಮ್ಮ ಮಕ್ಕಳಿಗೂ ಆ ರೋಗ ಅಂಟಿಸಬೇಡಿ. ಆ ಜಿಪ್ಸಿಯ ವಿಚಾರಗಳನ್ನು ಅವರಿಗೆ ಹತ್ತಿಸದೆ ನಿಮ್ಮಲ್ಲೇ ಇರಿಸಿಕೊಳ್ಳಿ' – ಎಂದು ಗದರಿಸಿ ಹೇಳಿದಳು. ಆದರೆ ಉರ್ಸುಲಾ ಮಾತಿಗೆ ಯಾವುದೇ ಪ್ರತಿಕ್ರಿಯೆ ಇರಲಿಲ್ಲ. ಅವಳು ತನ್ನ ಆವೇಶದ ಭರದಲ್ಲಿ, ಆಸ್ಟ್ರೊಲೇಟ್ ಎಂಬ ಉಪಕರಣವೊಂದನ್ನು ರಭಸದಿಂದ ನೆಲಕ್ಕೆ ಒಗೆದಳು. ಆದರೆ ಜೋಸ್ ಅಂಥಾದ್ದನ್ನೇ ಮತ್ತೊಂದು ತಯಾರಿಸಿದ. ಊರಿನ ಜನರನ್ನು ತನ್ನ ಕೋಣೆಯಲ್ಲಿ ಸೇರಿಸಿದ. ತಾನು ಕಂಡು ಹಿಡಿದಿದ್ದನ್ನು ಅವರೆದುರು ತೋರಿಸುತ್ತಿದ್ದ. ಆದರೆ ಅಲ್ಲಿ ನೆರೆದಿದ್ದವರಿಗೆ ಏನೊಂದೂ ಅರ್ಥವಾಗಿರಲಿಲ್ಲ. ಜೋಸ್ ಆರ್ಕಾಡಿಯೋಗೆ, ನಿಜವಾಗಿಯೂ ಎಲ್ಲೋ ತಲೆಕೆಟ್ಟಿರಬೇಕೆಂದು ಜನ ನಂಬುವಂತಾಯಿತು. ಆದರೆ ಮೆಲ್‌ಕಿಯಾಡ್ಸ್ ಮರುದಿನ ಬಂದಾಗ ಆರ್ಕಾಡಿಯೋ ಹೇಳಿದ್ದು ಸುಳ್ಳಲ್ಲ. ಅವನು ಮಾಡಿದ ಶೋಧಗಳು ಇಲ್ಲಿಯವರಿಗೆ ತಿಳಿಯದೆ ಇರಬಹುದಾದರೂ ಬೇರೆಲ್ಲೆಡೆ ಅದು ಸತ್ಯವೆಂದು ಸರಿಯೆಂದು ಸಾಬೀತಾಗಿದೆ ಎಂದು ತಿಳಿಸಿದ್ದೇ ಅಲ್ಲದೆ ಆರ್ಕಾಡಿಯೋನ ಬುದ್ಧಿವಂತಿಕೆಯನ್ನು ಬಾಯಿತುಂಬ ಹೊಗಳಿ ಅವನ ಬುದ್ಧಿಯನ್ನು ಮೆಚ್ಚಿ, ಒಂದು ಉಡುಗೊರೆಯನ್ನೂ ಕೊಟ್ಟ. ಮುಂದೆ ಈ ಉಡುಗೊರೆ ಊರಿನ ಭವಿಷ್ಯವನ್ನೇ ಬದಲಾಯಿಸಿಬಿಟ್ಟಿತು. ಆ ಉಡುಗೊರೆಯೆಂದರೆ, ರಸವಿಜ್ಞಾನಿಗೆ ಲ್ಯಾಬೋರೇಟರಿಯಾಗಿತ್ತು (ಪ್ರಯೋಗಾಲಯವಾಗಿತ್ತು).

ಅಷ್ಟು ಹೊತ್ತಿಗೆ ಮೆಲ್‌ಕಿಯಾಡ್ಸ್ ಆಶ್ಚರ್ಯವೆನಿಸುವಷ್ಟು ಮುದಿಯಾಗಿದ್ದ. ಮೊದಲಸಲ ಹಳ್ಳಿಗೆ ಬಂದಿದ್ದಾಗ ಅವನು ಆರ್ಕಾಡಿಯೋನಷ್ಟೇ ವಯಸ್ಸಿನವನಾಗಿದ್ದ. ಆದರೆ ಆರ್ಕಾಡಿಯೋ ತನ್ನ ಶಕ್ತಿ ಸಾಮರ್ಥ್ಯವನ್ನು ಅದ್ಭುತವಾಗಿ ಕಾಪಾಡಿಕೊಂಡಿದ್ದ. ಈಗಲೂ ಕಿವಿಹಿಡಿದು ಕುದುರೆಯನ್ನು ಎಳೆಯಬಲ್ಲವನಾಗಿದ್ದ. ಆದರೆ ಈ ಜಿಪ್ಸಿ ಮಾತ್ರ ಯಾವುದೋ ಕಾಯಿಲೆಯಿಂದಾಗಿ ಕುಸಿದು ಹೋಗಿದ್ದ. ಜೊತೆಗೆ ಹಲವು ಬಗೆಯ ಕಾಯಿಲೆಗಳ ಸೋಂಕಿಗೆ ಒಳಗಾಗಿದ್ದ. ಇದೆಲ್ಲವೂ ಅವನ ಈ ಸ್ಥಿತಿಗೆ ಕಾರಣಗಳಾಗಿದ್ದವು. ಆರ್ಕಾಡಿಯೋ ಜೊತೆ ಒಮ್ಮೆ ಮಾತಿನ ಮಧ್ಯೆ ಹೇಳಿದ್ದ – 'ಸಾವು ನನ್ನನ್ನು ಎಡಬಿಡದೆ ಹಿಂಬಾಲಿಸುತ್ತಲೇ ಇದೆ. ಆದರೆ ಅಂತಿಮ ತೀರ್ಮಾನಕ್ಕೆ ಇನ್ನೂ ಬಂದಿಲ್ಲ ಎಂದು ಕಾಣಿಸುತ್ತದೆ' ಎಂದು. ಹಾಗೆ ನೋಡಿದರೆ ಇವೆಲ್ಲವೂ ಅವನ ನಿರಂತರ, ಪ್ರಪಂಚ ಪರ್ಯಟನೆಯ ಸಮಯದಲ್ಲಿ ಸೋಂಕಿನಿಂದ ಬಂದವುಗಳಾಗಿದ್ದವು. ಮೆಲ್‌ಕಿಯಾಡ್ಸ್ ಸಾಮಾನ್ಯನೇನೂ ಆಗಿರಲಿಲ್ಲ. ಮನುಕುಲವನ್ನೇ ತತ್ತರಿಸುವಂತೆ ಮಾಡುವ ನೈಸರ್ಗಿಕ ಪ್ರಕೋಪಗಳಿಂದ ಪಾರಾಗಿ ಬಂದವನು. ಪರ್ಷಿಯಾದ ಚರ್ಮವ್ಯಾಧಿ, ಮಲಯಾದ ಒಸಡೂತ, ಅಲೆಕ್ಸಾಂಡ್ರಿಯಾದ ಕುಷ್ಠರೋಗ, ಜಪಾನಿನ ಬೆರಿಬೆರಿ, ಮಡಗಾಸ್ಕರದ ವಾತರೋಗ, ಸಿಸಿಲಿಯ ಭೂಕಂಪಗಳು, ಫಜೆಲ್ಲಾನ್ ಕೊಲ್ಲಿಯಲ್ಲಿ ಸಂಭವಿಸಿದ ನೌಕಾಘಾತ – ಇತ್ಯಾದಿ ಇತ್ಯಾದಿ ಎಲ್ಲ ಅವಘಡಗಳನ್ನು ಪಾರಾಗಿ ಬಂದವನಾಗಿದ್ದ, ನೋಡಿದರೆ ಈ ಅದ್ಭುತ ಪ್ರತಿಭಾವಂತ ನಾಸ್ತ್ರಡಾಮಸ್‌ನ ಸೂತ್ರಗಳ ಕೀಲಿಯಂತಿದ್ದ ಇವನು ಖಿನ್ನತೆಯಿಂದ ಕೂಡಿದ್ದ. ಜೊತೆಗೆ ವಸ್ತುಗಳಾಚೆ ಏನಿದೆ ಎನ್ನುವುದನ್ನು ಅರಿತಿದ್ದ. ಒಂದು ಹ್ಯಾಟ್ ಧರಿಸಿದ್ದ. ನೋಡಲು, ಬಿಚ್ಚಿಹರಡಿದ ಕಪ್ಪುಕಾಗೆಯ ರೆಕ್ಕೆಗಳಂತೆ ಕಾಣುತ್ತಿತ್ತು. ಶತಮಾನಗಳಷ್ಟು ಹಳೆಯದಾದ ವೆಲ್ವೆಟ್ ಅಂಗಿ ಧರಿಸಿದ್ದ. ಇಷ್ಟೆಲ್ಲದರ ನಡುವೆ ಅವನು

ಮನುಷ್ಯನೂ ಆಗಿದ್ದ. ಅವನಿಗೂ ದಿನನಿತ್ಯದ ಸಮಸ್ಯೆಗಳು ಇರುತ್ತಿದ್ದವು. ವಯಸ್ಸಾದಂತೆ ಮುಪ್ಪಿನಿಂದಾಗುವ ತೊಂದರೆಗಳು, ಕಾಯಿಲೆಗಳು ಬೇರೆ. ಸಣ್ಣಪುಟ್ಟ ಆರ್ಥಿಕ ಸಮಸ್ಯೆಗಳ ಬಗ್ಗೆಯೂ ಗೊಣಗುತ್ತಲೇ ಇದ್ದ. ಒಸಡುಗಳ ಕಾಯಿಲೆಯಿಂದ ಹಲ್ಲುಗಳೆಲ್ಲ ಉದುರಿಹೋಗಿದ್ದವು. ಅದರಿಂದಾಗಿ ನಗುವುದನ್ನೇ ನಿಲ್ಲಿಸಿಬಿಟ್ಟಿದ್ದ. ಆ ಮಧ್ಯಾಹ್ನ, ಜಿಪ್ಸಿ ಆರ್ಕಾಡಿಯೋಗೆ, ತನಗೆ ತಿಳಿದಿದ್ದ ರಹಸ್ಯಗಳನ್ನೆಲ್ಲ ವಿವರಿಸುತ್ತಿದ್ದಾಗ, ತಮ್ಮಿಬ್ಬರ ನಡುವೆ ಗಟ್ಟಿಯಾದ ಸ್ನೇಹಬಂಧ ಏರ್ಪಟ್ಟಿದೆಯೆಂದು ಜೋಸ್ ಭಾವಿಸಿದ. ಮಕ್ಕಳಿಗಂತೂ ಆ ಅದ್ಭುತವಾದ ಕತೆಗಳು ಬೆರಗು ಹುಟ್ಟಿಸುತ್ತಿದ್ದವು. ಒರಲಿಯಾನೋಗೆ ಆಗ ಐದು ವರ್ಷವಿದ್ದಿರಬಹುದು. ಆ ಮಧ್ಯಾಹ್ನ, ಕೆನ್ನೆಯ ಮೇಲಿಂದ ಬೆವರು ಸುರಿಯುತ್ತಿದ್ದಾಗ, ಕಬ್ಬಿಣದ ಸರಳುಗಳಿದ್ದ ಕಿಟಕಿಗೆ ಬೆನ್ನುಕೊಟ್ಟು ಕುಳಿತು, ಅವುಗಳ ಮಧ್ಯದಿಂದ ಪ್ರವೇಶಿಸುತ್ತಿದ್ದ ಬೆಳಕಿನಲ್ಲಿ ನಿಗೂಢ ಕತ್ತಲೆಯ ಕಲ್ಪನೆಯಿಂದ ಏನೇನೋ ಅದ್ಭುತಗಳನ್ನು ಹೊಮ್ಮಿಸುತ್ತಿದ್ದುದನ್ನು ಜೀವನದುದ್ದಕ್ಕೂ ನೆನಪಿಸಿಕೊಳ್ಳುತ್ತಲೇ ಇದ್ದ. ಅವನ ಅಣ್ಣ ಜೋಸ್ ಆರ್ಕಾಡಿಯೋ ಅಂತು ತನ್ನ ಆ ಅದ್ಭುತ ಅನುಭವಗಳನ್ನು ತನ್ನ ಮುಂದಿನ ಪೀಳಿಗೆಯವರಿಗೂ ತಲುಪಿಸಿದ. ಆದರೆ ಉರ್ಸುಲಾ ವಿಷಯದಲ್ಲಿ, ಬೇರೆಯೇ ಕಹಿ ಅನುಭವ ಉಳಿದುಹೋಗಿತ್ತು. ಇವಳು ಕೋಣೆಯೊಳಗೆ ಪ್ರವೇಶಿಸುತ್ತಿದ್ದಂತೆ ಮೆಲ್‌ಕಿಯಾಡ್ಸ್ ನಿರ್ಲಕ್ಷ್ಯದಿಂದ, ಪಾದರಸದ ರಾಸಾಯನಿಕವಿದ್ದ ಫ್ಲಾಸ್ಕನ್ನು ಬೀಳಿಸಿ ಒಡೆದುಹಾಕಿದ್ದ.

"ದರಿದ್ರ ವಾಸನೆ" ಉರ್ಸುಲಾ ಹೇಳಿದಳು.

"ಖಂಡಿತಾ ಅಲ್ಲ, ಇದಕ್ಕೆ ಗಂಧಕದ ಗುಣಗಳಿವೆ. ಅದರಲ್ಲಿ ಏನಿದ್ದರೂ ಎಳ್ಳುಕಾಳಿನಷ್ಟು ಮಾತ್ರವೇ ಪಾದರಸ ಇದ್ದದ್ದು" ಎಂದು ಹೇಳಿ ಅಭಿಪ್ರಾಯವನ್ನು ತಿದ್ದಿದ.

ಯಾವಾಗಲೂ ಏನಾದರೂ ಉಪದೇಶ ಇದ್ದೇ ಇರುತ್ತೆ. ತನಗೆ ತಿಳಿದದ್ದನ್ನೆಲ್ಲ ಹೇಳಿ ತಲೆಕೊರೆಯುತ್ತಿದ್ದ. ಆದರೆ ಉರ್ಸುಲಾಗೆ ಅದನ್ನೆಲ್ಲ ಕೇಳುವ ತಾಳ್ಮೆ ಇರಲಿಲ್ಲ. ಮಕ್ಕಳನ್ನು ಪ್ರಾರ್ಥನೆಗೆಂದು ಕರೆದುಕೊಂಡು ಹೋದಳು. ಮನೆತುಂಬ ಆ ಕೆಟ್ಟವಾಸನೆ ತುಂಬಿಕೊಳ್ಳಲು ಮೆಲ್‌ಕಿಯಾಡ್ಸ್‌ನೇ ಕಾರಣವೆಂದು ಭಾವಿಸಿದಳು.

ಸರಳವಾದ ಪ್ರಯೋಗಾಲಯದ ಜೊತೆಗೆ ಗಾಜಿನ ಬುರುಡೆಗೇ ಕೊಳವೆಗಳು, ರೆಬಾರ್ಟ್‌ಗಳು, ಬೀಕರುಗಳು, ಫನಲುಗಳು ಮುಂತಾದ ವಸ್ತುಗಳಿದ್ದವು. ಇವುಗಳೆಲ್ಲವೂ ಯಹೂದಿ ಮೇರಿ ರೂಪಿಸಿದ ಮಾದರಿಯಲ್ಲಿದ್ದವು. ಇವುಗಳ ಜೊತೆಗೆ ಮೆಲ್‌ಕಿಯಾಡ್ಸ್ 7 ಗ್ರಹಗಳನ್ನು ಹೋಲುವ ಏಳು ಲೋಹದ ಮಾದರಿಗಳನ್ನು, ಜೋಸಿಮಸ್ ಮತ್ತು ಬೋಸಸ್‌ರು, ಚಿನ್ನವನ್ನು ದ್ವಿಗುಣಗೊಳಿಸುವ ಸೂತ್ರಗಳನ್ನು, ಟಿಪ್ಪಣಿಗಳನ್ನು, ವಿಧಾನಗಳನ್ನು ವಿವರಿಸಿದ್ದ ಬರಹಗಳನ್ನೂ ಕೊಟ್ಟ, ಮುಂದೆ ಇವುಗಳಿಂದ ಕಲಿತು, ಅವುಗಳನ್ನು ವ್ಯಾಖ್ಯಾನಿಸಿ, ಸ್ಪರ್ಷಮಣಿಯನ್ನು ತಯಾರಿಸಲು ಸಾಧ್ಯವಾಗುವಂತಿತ್ತು. ಜೋಸ್ ಆರ್ಕಾಡಿಯೋ ಉರ್ಸುಲಾಳನ್ನು, ಅವಳ ಬಳಿ ಜೋಪಾನವಾಗಿ ಇರಿಸಿಕೊಂಡಿದ್ದ ವಸಾಹತು ಕಾಲದ ನಾಣ್ಯಗಳನ್ನು, ನೀಡಲು ಬೇಡಿಕೊಂಡ. ಅವುಗಳನ್ನು ಅವಳು

ಕೊಟ್ಟದ್ದಕ್ಕಿಂತಲೂ ನೂರು ಪಟ್ಟು ದ್ವಿಗುಣಗೊಳಿಸಿ ಕೊಡುವುದಾಗಿಯೂ ಭರವಸೆಯಿತ್ತು ನೀಡಲು ಪುಸಲಾಯಿಸಿದ. ಅಂತೂ ಉರ್ಸುಲಾ ಅವನ ಮಾತಿಗೆ ಬಿದ್ದಳು. ಗಂಡನ ಒತ್ತಾಯದಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗಲೇ ಇಲ್ಲ. ಜೋಸ್ ಆರ್ಕಾಡಿಯೋ ಒಂದು ಬಾಣಲೆಯಲ್ಲಿ ಮೂರು ನಾಣ್ಯಗಳು, ತಾಮ್ರದ ಚೂರುಗಳು, ಸೀಸ, ಗಂಧಕ ಇತ್ಯಾದಿ ಇನ್ನೂ ಏನೇನೋ ಖನಿಜಗಳನ್ನು ಹಾಕಿ ಹರಳೆಣ್ಣೆ ಸುರಿದು ಚೆನ್ನಾಗಿ ಕುದಿಸಿದ. ಅದು ಚಿನ್ನದ ದ್ರವವಾಗುವುದಕ್ಕೆ ಬದಲಾಗಿ ಕಂದುಬಣ್ಣದ ರಸಪಾಕವಾಗಿ ಸಿದ್ಧವಾಯಿತು. ಉರ್ಸುಲಾಳ ಚಿನ್ನದ ನಾಣ್ಯಗಳೆಲ್ಲ ಇತರೆ ಲೋಹಗಳ ಜೊತೆಗೆ ಕರಗಿ, ಒಂದು ಮುದ್ದೆಯಾಗಿ ಬಾಣಲೆಯ ತಳಕ್ಕೆ ಅಂಟಿಕೊಂಡಿತು.

ಜಿಪ್ಸಿಗಳು ಮತ್ತೊಂದು ಸಲ ಬಂದಾಗ, ಉರ್ಸುಲಾ ಊರಿನ ಜನರನ್ನೆಲ್ಲ ಅವರ ವಿರುದ್ಧ ಎತ್ತಿ ಕಟ್ಟಿದಳು. ಆದರೆ ಭಯಕ್ಕಿಂತ ಕುತೂಹಲವೇ ಪ್ರಬಲವಾಗಿ ಜನ ಜಿಪ್ಸಿಗಳ ಬಿಡಾರಗಳ ಮುಂದೆ, ಅವರು ತಂದಿರಬಹುದಾದ ಹೊಸ ಹೊಸ ವಸ್ತುಗಳನ್ನು ನೋಡುವ ಕುತೂಹಲದಿಂದ ಗುಂಪುಗೂಡಿ ನಿಂತಿದ್ದಳು. ವಸ್ತುಗಳನ್ನು ನೋಡಿ ದುಡ್ಡು ಕೊಟ್ಟು ಹೋದರು. ಅವುಗಳನ್ನು ನೋಡಿ ದಿಗ್ಭ್ರಮೆಗೆ ಒಳಗಾಗಿದ್ದರು. ಒಣಗಿದ ತುಟಿಗಳು, ಸುಕ್ಕುಗಟ್ಟಿದ್ದ ಕೆನ್ನೆಯ ಹಲ್ಲಿಲ್ಲದ ಬೊಚ್ಚುಬಾಯಿಯ ಮೆಲ್‌ಕಿಯಾಡ್ಸ್, ಒಳ್ಳೆ ಪ್ರಾಯದೊಂದಿಗೆ, ತುಂಬುಕೆನ್ನೆ, ಹೊಳೆವ ಹಲ್ಲುಗಳೊಂದಿಗೆ, ಉತ್ಸಾಹದ ಚಿಲುಮೆಯಾಗಿ ಇದ್ದುದನ್ನು ಕಂಡಾಗ, ಮೆಲ್‌ಕಿಯಾಡ್ಸ್‌ನ ಅದ್ಭುತ ಪವಾಡಶಕ್ತಿಯ ಅರಿವಾಯಿತು. ಅದನ್ನು ನೆನೆದು ಕಂಪಿಸಿದರೂ ಕೂಡ, ಮೆಲ್‌ಕಿಯಾಡ್ಸ್ ತನ್ನ ಹಲ್ಲುಗಳ ಸಾಲನ್ನು ಬಾಯಿಂದ ತೆಗೆದು ತೋರಿಸಿದಾಗ, ಮತ್ತೂ ಭಯಗೊಂಡರು. ಮರುಕ್ಷಣದಲ್ಲಿ ಅವುಗಳನ್ನು ಸ್ವಸ್ಥಾನಕ್ಕೆ ಸೇರಿಸಿ, ಮತ್ತೊಮ್ಮೆ ಪ್ರಾಯದ ಯುವಕನಂತೆ ಕಾಣಿಸಿದ. ಮೆಲ್‌ಕಿಯಾಡ್ಸ್ ಜೋಸ್ ಆರ್ಕಾಡಿಯೋಗೆ ಈ ಪವಾಡ ರಹಸ್ಯವನ್ನು ವಿವರಿಸಿದಾಗ, ಮೆಲ್‌ಕಿಯಾಡ್ಸ್‌ನ ಬುದ್ಧಿಶಕ್ತಿ, ಜ್ಞಾನದ ಅರಿವಿಗೆ ದಿಗ್ಭ್ರಾಂತನಾದ. ಇಂಥ ಸರಳ, ಸುಲಭ ಆದರೂ ಅದ್ಭುತವೆನಿಸುವ ಇವುಗಳನ್ನು ನೋಡಿದಾಗ ಚಿನ್ನದ ಬಗೆಗಿದ್ದ ಅವನ ಆಸಕ್ತಿ ಕರಗಿಹೋಯಿತು. ಈಗ ಇನ್ನೊಂದು ಬಗೆಯ ಹುಚ್ಚಿಗೆ ಬಲಿಯಾದ. ಸರಿಯಾಗಿ ತಿನ್ನುತ್ತಿರಲಿಲ್ಲ. ಇಡೀ ದಿನ ಮನೆಯಲ್ಲಿ ಶತಪಥಿಸುತ್ತಿದ್ದ. "ಪ್ರಪಂಚದಲ್ಲಿ ಏನೆಲ್ಲ ಅದ್ಭುತಗಳು ನಡೆಯುತ್ತಿವೆ" – ಎಂದು ಆಶ್ಚರ್ಯದೊಂದಿಗೆ ಉರ್ಸುಲಾಗೆ ಹೇಳಿದ.

"ಆ ನದಿಯ ಆಚೆ ದಡದಲ್ಲಿ ಎಷ್ಟೊಂದು ಬಗೆಯ ಅದ್ಭುತಗಳು! ಎಷ್ಟು ವಿಚಿತ್ರ ಬಗೆಯ ಉಪಕರಣಗಳು ದೊರೆಯುತ್ತಿವೆ. ಆದರೂ ನಾವು ಮಾತ್ರ ಇಲ್ಲಿ ಕತ್ತೆಗಳಂತೆ ಬದುಕುತ್ತಿದ್ದೇವೆ" ಎಂದ.

ಮಕೊಂಡೋ ಅಸ್ತಿತ್ವಕ್ಕೆ ಬಂದಾಗಿನಿಂದ ಅವನನ್ನು ಗಮನಿಸುತ್ತಲೇ ಬಂದಿದ್ದ ಜನರಿಗೆ ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಮೆಲ್‌ಕಿಯಾಡ್ಸ್‌ನ ಪ್ರಭಾವಕ್ಕೆ ಎಷ್ಟರಮಟ್ಟಿಗೆ ಒಳಗಾಗಿದ್ದಾನೆಂಬುದು ಅರಿವಾಯಿತು.

ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಊರಿಗೆಲ್ಲ ತಂದೆಯ ಸ್ಥಾನದಲ್ಲಿದ್ದು, ಗಿಡಗಳನ್ನು ಹೇಗೆ ಬೆಳೆಸಬೇಕು, ಮಕ್ಕಳನ್ನು ಹೇಗೆ ಪೋಷಿಸಬೇಕು, ಪಶುಗಳನ್ನು ಹೇಗೆ ಪಾಲನೆ ಮಾಡಬೇಕು – ಎಂಬೆಲ್ಲ ವಿಚಾರಗಳನ್ನು ತಿಳಿಸಿ, ಸೂಚನೆ ಸಲಹೆಗಳನ್ನು ನೀಡುತ್ತಿದ್ದ. ಜೊತೆಗೆ ದೈಹಿಕ ಶ್ರಮವನ್ನು ಹಂಚಿಕೊಂಡು, ಸಮುದಾಯದ ಒಳಿತಿಗಾಗಿ ದುಡಿಯುತ್ತಿದ್ದ. ಆತನ ಮನೆ ಮೊದಲು ಅಸ್ತಿತ್ವಕ್ಕೆ ಬಂತು. ನಂತರ ಅದೇ ಮಾದರಿಯಲ್ಲಿ ಹಳ್ಳಿಯಲ್ಲಿ ಎಲ್ಲ ಮನೆಗಳನ್ನು ನಿರ್ಮಿಸಲಾಯಿತು. ಒಂದೊಂದು ಮನೆಯಲ್ಲೂ ಹಜಾರ, ಊಟದ ಕೋಣೆ, ಮಲಗುವ ಕೋಣೆ, ದೊಡ್ಡದಾದ ಮನೆಯಂಗಳ ಅಲ್ಲೊಂದು ಇಲ್ಲೊಂದು ಚೆಸ್ಟ್‌ನಟ್ ಮರಗಳು, ಅಚ್ಚುಕಟ್ಟಾಗಿ ಬೆಳೆಸಿದ ತೋಟ, ಮೇಕೆ, ಕೋಳಿ, ಹಂದಿ ಮುಂತಾದವುಗಳಿಗೆ ದೊಡ್ಡಿಗಳು, ಜೊತೆಗೆ ಕಾಳಗದ ಹುಂಜಗಳಿಗೆಂದೇ ಪ್ರತ್ಯೇಕವಾದ ಜಾಗ – ಇರುತ್ತಿದ್ದವು. ಆದರೆ ಕಾಳಗದ ಹುಂಜಗಳು ಆರ್ಕಾಡಿಯೋನ ಮನೆಯಲ್ಲಿ ಮಾತ್ರವೇ ಇದ್ದವು.

ಉರ್ಸುಲಾ ಕೆಲಸಕಾರ್ಯಗಳಲ್ಲಿ ಗಂಡನಷ್ಟೇ ಸಮರ್ಥಳಾಗಿದ್ದಳು. ನೋಡಲು ಆಕಾರ ಚಿಕ್ಕದು. ಆದರೆ ಬೆಳಗಿನಿಂದ ಸಂಜೆವರೆಗೆ ಒಂದೇ ಸಮನೆ ಚುರುಕಾಗಿ ಓಡಾಡುತ್ತಾ ಗಂಜಿಹಚ್ಚಿ ಗರಿಗರಿಯಾಗಿದ್ದ ಅವಳ ಒಳಲಂಗದ ಸದ್ದಿನೊಂದಿಗೆ, ಕೆಲಸ ಮಾಡುತ್ತಿದ್ದಳು. ಅವಳೇ ಸಿದ್ಧಪಡಿಸಿದ ಮಣ್ಣಿನ ನೆಲ, ಸುಣ್ಣಬಣ್ಣಕಾಣದ ಮಣ್ಣಿನ ಗೋಡೆಗಳು, ಅವಳೇ ತಯಾರಿಸಿದ ಪೀಠೋಪಕರಣಗಳು, ಹಳೆಯ ಪೆಠಾರಿಗಳು ಎಲ್ಲವೂ ಶುಭ್ರವಾಗಿರುತ್ತಿದ್ದವು. ಅದರ ಬಟ್ಟೆಗಳೆಲ್ಲ ಪೆಠಾರಿಗಳಲ್ಲಿದ್ದು ತುಳಸಿಯ ಘಮ್ಮೆನಿಸುವ ಸುಗಂಧ ಹೊಮ್ಮಿಸುತ್ತಿದ್ದವು.

ಹಳ್ಳಿಯಲ್ಲಿ ಎಲ್ಲರಿಗಿಂತ ಬುದ್ಧಿವಂತ ಸಾಹಸಿ ಎನಿಸಿಕೊಂಡಿದ್ದ ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಅಲ್ಲಿನ ಎಲ್ಲ ಮನೆಗಳು ಹೇಗಿರಬೇಕು, ಯಾವ ರೀತಿಯ ಅನುಕೂಲಗಳಿರಬೇಕು ಎಂಬುದನ್ನೆಲ್ಲ ತುಂಬ ಗಂಭೀರವಾಗಿ ಆಲೋಚಿಸಿ, ಮನೆಗಳು ನದಿಗೆ ಹತ್ತಿರವಾಗಿರುವಂತೆ, ಮತ್ತು ರಸ್ತೆಗಳು, ಹೇಗಿದ್ದುವೆಂದರೆ ಬೇಸಿಗೆ ಕಾಲದಲ್ಲಿ ಯಾವ. ಮನೆಗೂ ಬಿಸಿಲಿನ ಝಳ ಹೆಚ್ಚಾಗಿ ತಲುಪದಂತೆ ನೋಡಿಕೊಂಡಿದ್ದ. ಮುನ್ನೂರು ಮನೆಗಳನ್ನು ಹೊಂದಿದ್ದ ಮಕಾಂಡೋ ತುಂಬ ವ್ಯವಸ್ಥಿತ ಹಳ್ಳಿಯಾಗಿದ್ದುದೇ ಅಲ್ಲದೆ ಅಲ್ಲಿನ ಜನ ಶ್ರಮಜೀವಿಗಳಾಗಿದ್ದರು. ಅವರನ್ನು ನೋಡುವವರಿಗೆ ಅವರದು ಶಿಸ್ತುಬದ್ಧ ಜೀವನವೆಂಬುದು ತಿಳಿಯುತ್ತಿರಲಿಲ್ಲ. ಮೂವತ್ತು ವರ್ಷ ಮೀರಿದವರು ಯಾರೂ ಇರಲಿಲ್ಲ. ಅಲ್ಲಿಯವರೆಗೆ ಯಾರೂ ಸಾವನ್ನು ಕಂಡಿರಲಿಲ್ಲ.

ಮಕಾಂಡೋ ಅಸ್ತಿತ್ವಕ್ಕೆ ಬಂದಾಗಿನಿಂದ, ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಬಲೆ, ಬೋನುಗಳನ್ನೆಲ್ಲ ತಯಾರಿಸಿದ. ಸ್ವಲ್ಪ ಸಮಯದಲ್ಲಿಯೆ ತನ್ನ ಮನೆಯನ್ನಷ್ಟೇ ಅಲ್ಲ, ಊರಿನಲ್ಲಿದ್ದ ಎಲ್ಲ ಮನೆಗಳಲ್ಲೂ ಬಗೆಬಗೆಯ ಹಕ್ಕಿಗಳನ್ನು ತುಂಬಿದ. ಹಕ್ಕಿಗಳ ಚಿಲಿಪಿಲಿಸದ್ದು ಕೇಳುವುದಕ್ಕಾಗದೆ ಉರ್ಸುಲಾ ಕಿವಿಗೆ ಜೇನುಮೇಣವನ್ನು ಇರಿಸಿಕೊಂಡು ಸದ್ದಿನ ಆಘಾತವನ್ನು ತಪ್ಪಿಸಿಕೊಂಡಳು. ಮೊದಲಬಾರಿಗೆ ಮೆಲ್‌ಕಿಯಾಡ್ಸ್

ತಲೆನೋವಿಗೆಂದು ಒಂದು ಬಗೆಯ ಗುಳಿಗೆಗಳನ್ನು ತಂದಾಗ, ಇವನಿಗೆ ಮನೆ ಪತ್ತೆಹಚ್ಚಲು ಹೇಗಾಯಿತೆಂದು ಜನ ಅಚ್ಚರಿಪಟ್ಟಾಗ, ಹಕ್ಕಿಗಳ ಕಲರವದಿಂದ ಗುರುತಿಸಿದ್ದನ್ನು ತಿಳಿಸಿದ.

ಮೊದಲಿಗಿದ್ದ ಸಾಮಾಜಿಕ ಕ್ರಿಯಾಶೀಲತೆ ಸ್ವಲ್ಪ ಸಮಯದಲ್ಲಿಯೇ ಮರೆಯಾಯಿತು. ಈಗೇನಿದ್ದರೂ ಮ್ಯಾಗ್ನೇಟುಗಳು, ಖಗೋಳ ವಿಜ್ಞಾನ ಸಂಬಂಧಿ, ಗಣಿತ ಸೂತ್ರಗಳು, ಲೋಹಪರಿವರ್ತನೆಯ ಸಾಧ್ಯತೆಗಳು, ಪ್ರಪಂಚದಲ್ಲಿ ಏನಾದರೂ ಅದ್ಭುತಗಳನ್ನು ಕಂಡುಹಿಡಿಯಬೇಕೆಂಬ ಹುಚ್ಚು – ಇವುಗಳಲ್ಲೇ ಆರ್ಕಾಡಿಯೋ ಮಗ್ನನಾದನು. ಎಷ್ಟೊಂದು ಶುಭ್ರವಾಗಿ, ಅಚ್ಚುಕಟ್ಟಾಗಿ ಇರುತ್ತಿದ್ದ ಮನುಷ್ಯ, ಈಗ ಸೋಮಾರಿಯಾಗಿ ಬಿಟ್ಟಿದ್ದ. ಕೊಳಕು ಬಟ್ಟೆ, ಎಡ್ಡಾದಿಡ್ಡಿಬೆಳೆದ ಗಡ್ಡ, ಇವುಗಳಿಂದ ಅಸಹ್ಯವಾಗಿ ಕಾಣಿಸಿದ. ಆದರೆ ಉರ್ಸುಲಾ ಹೇಗೋ ಮಾಡಿ ಅಡಿಗೆ ಮನೆಬಳಕೆಯ ಚಾಕುವಿನಿಂದಲೇ ಗಡ್ಡವನ್ನು ಸ್ವಲ್ಪ ನೀಟಾಗಿ ಕಾಣುವಂತೆ ಕತ್ತರಿಸಿದ್ದಳು. ಊರಿನ ಜನಕ್ಕೆ, ಅವನು ಯಾವುದೋ ದುಷ್ಟಶಕ್ತಿಯ ಪ್ರಭಾವಕ್ಕೆ ಸಿಲುಕಿರಬೇಕು ಎನಿಸಿತು. ಆದರೂ ಕೆಲವರು ಅವನು ಭೂಮಿಯನ್ನು ಸಮಮಾಡಲು ಉಪಕರಣಗಳನ್ನು ಕೊಂಡೊಯ್ದು ಕೆಲಸಕ್ಕೆ ತೊಡಗಿದಾಗ ಅವರೂ ಅವನ ಜೊತೆ ಸೇರಿಕೊಂಡರು. ಏನಾದರಾಗಲಿ ಮಕಾಂಡೊ ಹೊಸ ಶೋಧಗಳಿಗೆ ತೆರೆದುಕೊಳ್ಳುವುದಕ್ಕೆ ದಾರಿಯೊಂದನ್ನು ಕಂಡುಕೊಳ್ಳಿ ಎಂದು ತಿಳಿಸಿದ.

ಜೋಸ್ ಆರ್ಕಾಡಿಯೋ ಬ್ಯುಂಡಿಯಾಗೆ ಆ ಭೂಪ್ರದೇಶದ ಬಗ್ಗೆ ಏನೊಂದೂ ತಿಳಿದಿರಲಿಲ್ಲ. ಅವನಿಗೆ ತಿಳಿದಿದ್ದುದೆಲ್ಲಾ ಇಷ್ಟೇ! – ಪೂರ್ವಕ್ಕೆ ದುರ್ಗಮವಾದ ಪರ್ವತ ಸಾಲುಗಳು; ಪರ್ವತ ಸಾಲುಗಳ ಇನ್ನೊಂದು ಭಾಗದಲ್ಲಿ ರಿಯೊಹಚಾ ಎಂಬ ಪುರಾತನ ನಗರ; ಅಲ್ಲಿ ಬಹಳ ಹಿಂದೆ ಸರ್ ಫ್ರಾನ್ಸಿಸ್ ಡ್ರೇಕ್ ಮೊಸಳೆಗಳನ್ನು ಬೇಟೆಯಾಡಿ, ಅವುಗಳೊಳಗೆ ಒಣಹುಲ್ಲನ್ನು ತುಂಬಿ ಎಲಿಜಬೆತ್ ರಾಣಿಗೆ ತಂದುಕೊಟ್ಟನೆಂಬ ಅಂಶ; ಅವನ ತಾತ ಅರೆಲಿಯಾನೋ ಬ್ಯುಂಡಿಯಾ ಹೇಳಿದ್ದ ವಿವರಗಳು. ಹಿಂದೆ ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಅದೂ ತಾನು ಪ್ರಾಯದಲ್ಲಿದ್ದಾಗ ತನ್ನ ಜೊತೆ ಯುವಕರನ್ನು ಅವರ ಹೆಂಡಿರು ಮಕ್ಕಳನ್ನು, ಪ್ರಾಣಿ ಪಶುಗಳನ್ನು, ಎಲ್ಲ ಬಗೆಯ ಗೃಹೋಪಯೋಗಿ ಉಪಕರಣಗಳನ್ನು ಹೇರಿಕೊಂಡು, ಪರ್ವತಗಳನ್ನು ದಾಟಿಕೊಂಡು, ಸಮುದ್ರವನ್ನು ಹುಡುಕ ಹೊರಟಿದ್ದ. ಇಪ್ಪತ್ತಾರು ತಿಂಗಳ ನಂತರ ಈ ಸಾಹಸ ಯಾತ್ರೆಯನ್ನು ಕೈಬಿಟ್ಟು ಮಕಾಂಡೊವನ್ನು ಕಟ್ಟಿದ. ಇದರಿಂದಾಗಿ ಅವರಿಗೆ ಹಿಂದಿರುಗಬೇಕಾಗಿ ಬರಲಿಲ್ಲ. ಹಿಂದಕ್ಕೆ ಮತ್ತೆ ಹೋಗಬೇಕಾಗಿ ಬರುವಂತಹ ದಾರಿಯ ಬಗ್ಗೆ ಆದ್ದರಿಂದಲೇ ಅವನಿಗೆ ಆಸಕ್ತಿ ಮೂಡಲಿಲ್ಲ. ದಕ್ಷಿಣಕ್ಕೆ ಬರೀ ಜೌಗುಪ್ರದೇಶಗಳು. ಅವುಗಳ ತುಂಬೆಲ್ಲ ಕೊಳೆತ ಸಸ್ಯಗಳೇ ತುಂಬಿದ್ದವು. ಜಿಪ್ಸಿಗಳೇ ಹೇಳಿದಂತೆ ಅದರ ವಿಸ್ತಾರಕ್ಕೆ ಎಲ್ಲೆಗಳೇ ಇರಲಿಲ್ಲ. ಪಶ್ಚಿಮಕ್ಕಿದ್ದ ಜೌಗು ವಿಸ್ತಾರವಾದ ನೀರಿನ ಹರವಿನೊಂದಿಗಿದ್ದು ಅದರಲ್ಲಿ ಮೃದು ಚರ್ಮದ ಸಸ್ತನಿಗಳಿದ್ದು ಅವುಗಳಿಗೆ ಹೆಣ್ಣಿನ ತಲೆ ಮತ್ತು ಮುಂಡಗಳಿದ್ದು ಅವುಗಳ ಚೆಲುವಿನಿಂದ ನಾವಿಕರನ್ನು ಆಕರ್ಷಿಸಿ ನಾಶಮಾಡುತ್ತಿದ್ದವು. ಜಿಪ್ಸಿಗಳು ಅದೇ ದಾರಿ ಹಿಡಿದು ಯಾನ ಮಾಡಿ ಅಂಚೆ ಹೊರುತ್ತಿದ್ದ ಹೇಸರಗತ್ತೆಗಳು ಓಡಾಡುತ್ತಿದ್ದ ಪ್ರದೇಶವನ್ನು ತಲುಪಿದರು. ಬ್ಯುಂಡಿಯಾನ ವಿಚಾರದಲ್ಲಿ ನಾಗರಿಕತೆಯ ಸಂಪರ್ಕಕ್ಕೆ ಸಾಧ್ಯವಿದ್ದದ್ದು ಉತ್ತರದ

ಹಾದಿಯಲ್ಲಿ ಮಾತ್ರ. ಅದಕ್ಕಾಗಿ ತನ್ನಲ್ಲಿದ್ದ, ಬೇಟೆಯಾಡಲು, ನೆಲಸಮಮಾಡಲು ಬಳಕೆಗೆ ಬರುತ್ತಿದ್ದ ಉಪಕರಣಗಳನ್ನು ತನ್ನೊಡನೆ ಮಕೊಂಡೊವನ್ನು ಸ್ಥಾಪಿಸುವ ಸಮಯದಲ್ಲಿದ್ದವರಿಗೆ ನೀಡಿ. ದಿಕ್ಸೂಚಿ ಉಪಕರಣಗಳನ್ನು, ನಕ್ಷೆಗಳನ್ನು ತನ್ನ ಚೀಲದೊಳಗಿರಿಸಿಕೊಂಡು ಸಾಹಸಕ್ಕೆ ಮುಂದಾಗಿದ್ದ.

ಮೊದಲ ದಿನಗಳಲ್ಲಿ ಅವರಿಗೆ ಯಾವುದೇ ತೊಂದರೆಗಳು ಎದುರಾಗಬಲ್ಲ, ಮೊಟ್ಟಮೊದಲು ಅವರೆಲ್ಲ ಯುದ್ಧ ಕವಚ ದೊರೆತ ಸ್ಥಳವನ್ನು ನದೀಗುಂಟ ನಡೆದು ತಲುಪಿದರು. ಅಲ್ಲಿಂದ ಕಿತ್ತಲೆ ತೋಟದ ಕಡಿದಾದ ದಾರಿಗಳನ್ನು ಹಾದು ದಟ್ಟವಾದ ಕಾಡನ್ನು ಹೊಕ್ಕರು. ಮೊದಲ ವಾರದ ಕಡೆಯಲ್ಲಿ ಒಂದು ಜಿಂಕೆಯನ್ನು ಬೇಟೆಯಾಡಿದರು. ಅದರ ಮಾಂಸವನ್ನು ಸುಟ್ಟು, ಅರ್ಧ ಮಾತ್ರವನ್ನು ತಿಂದು ಉಳಿದರ್ಧವನ್ನು ಉಪ್ಪುಹಚ್ಚಿ ಮುಂದಿನ ದಿನಗಳಿಗೆಂದು ಉಳಿಸಿಕೊಳ್ಳಲು ನಿರ್ಧರಿಸಿದರು. ಇದರಿಂದಾಗಿ ರುಚಿಯಿಲ್ಲದ ಗಟ್ಟಿಯಾದ ಗಿಳಿಗಳ ಮಾಂಸವನ್ನು ತಿನ್ನುವುದನ್ನು ಮುಂದೂಡಲು ಸಾಧ್ಯವಾಯಿತು. ಮುಂದೆ ಹತ್ತು ದಿನಗಳ ಕಾಲ ಬಿಸಿಲು ಕಾಣುವುದಕ್ಕೆ ಸಾಧ್ಯವಾಗಲೇ ಇಲ್ಲ. ಭೂಮಿ ತಣ್ಣಗೆ ಒದ್ದೆಯಾದಂತೆ ಇತ್ತು. ಅಗ್ನಿ ಪರ್ವತಗಳು ಚೆಲ್ಲಿದ ಬೂದಿ, ಸಸ್ಯಗಳು ಗಟ್ಟಿಯಾಗಿದ್ದವು. ಹಕ್ಕಿಗಳ ಕಲರವ, ಕೋತಿಗಳ ಕಿಚಕಿಚ ಸದ್ದು ಬಹಳ ಅಪರೂಪವಾಯಿತು. ಜಗತ್ತಿಗೇ ಮಂಕು ಕವಿದಂತಿತ್ತು. ಆ ಸಾಹಸದ ಪಯಣಿಗರಿಗೆ ಆ ತೇವದ ಸ್ಪರ್ಷ ಮತ್ತು ಮೌನದಲ್ಲಿ, ಗತಕಾಲದ ಸ್ವರ್ಗದ ನೆನಪಿನಿಂದಾಗಿ ರೋಮಾಂಚನ ಉಂಟಾಗಿತ್ತು. ಅದೂ ಮೂಲ ಪಾಪಕ್ಕೂ ಮೊದಲಿನ ನೆನಪುಗಳಿಂದಾಗಿ! ಅವರ ಬೂಟುಗಳು ಹೊಗೆಯಾಡುತ್ತಿದ್ದ ಎಣ್ಣೆಯ ಗುಂಡಿಗಳಲ್ಲಿ ಹೂತುಹೋಗಿದ್ದವು. ಅವರ ಮಚ್ಚುಗಳು ಕೆಂಪು ಲಿಲ್ಲಿಗಳನ್ನು ಮತ್ತು ಬೆಂಕಿ ಮೊಸಳೆಗಳನ್ನು (ತಾಪಸಹಿಸಬಲ್ಲ ಓತಿಕ್ಯಾತದಂತಹ ಪ್ರಾಣಿಗಳು) ಕೊಚ್ಚಿ ಹಾಕಿದವು. ವಾರವಿಡೀ ಸ್ಲೀಪ್‌ವಾಕರ್‌ಗಳಂತೆ ನಡೆಯುತ್ತಲೇ ಇದ್ದರು. ಕೀಟಗಳಿಂದ ಆಗಾಗ ಹೊಮ್ಮುತ್ತಿದ್ದ ಬೆಳಕಷ್ಟೇ ಅವರಿಗೆ ಲಭ್ಯವಿತ್ತು. ರಕ್ತದ ವಾಸನೆಯಿಂದ ಉಸಿರುಗಟ್ಟಿದಂತೆನಿಸುತ್ತಿತ್ತು. ಅವರು ಸವೆಸುತ್ತಿದ್ದ ಮಾರ್ಗ ನೋಡ ನೋಡುತ್ತಿದ್ದಂತೆ ಅವರ ಮುಂದೆಯೇ ಬೆಳೆದ ಹೊಸ ಬೆಳೆಯಿಂದ ಮುಚ್ಚಿ ಹೋಗುತ್ತಿತ್ತು. ಆ ಕಾರಣದಿಂದಾಗಿ ಅವರಿಗೆ ಹಿಂದಕ್ಕೆ ಬರಲು ಸಾಧ್ಯವಾಗುತ್ತಿರಲಿಲ್ಲ. ಜೋಸ್ ಆರ್ಕಾಡಿಯಾ ಬ್ಯುಂಡಿಯಾ, 'ಹೋಗಲಿ ಬಿಡು ನಾವು ನಮ್ಮ ಧೈರ್ಯವನ್ನು ಮಾತ್ರ ಕಳೆದುಕೊಳ್ಳದಿದ್ದರೆ ಆಯ್ತು' – ಎಂದು ಹೇಳಿ, ತನ್ನ ದಿಕ್ಸೂಚಿ ಉಪಕರಣದಿಂದ, ತನ್ನ ಜೊತೆಗಾರರಿಗೆ ಮಾರ್ಗದರ್ಶನ ಮಾಡುತ್ತಾ ಮುಂದುವರೆಯುತ್ತಿದ್ದ. ಅಗೋಚರವಾದ ಉತ್ತರ ದಿಕ್ಕಿನತ್ತ ಅವರನ್ನು ನಡೆಸುತ್ತಾ ಆದಷ್ಟೂ ಆ ಮಾಂತ್ರಿಕ ಪ್ರದೇಶದಿಂದ ಹೊರಹೋಗುವ ಪ್ರಯತ್ನದಲ್ಲಿದ್ದ ದಟ್ಟ ಕತ್ತಲಿನ ರಾತ್ರಿ. ನಕ್ಷತ್ರಗಳೇ ಕಾಣುತ್ತಿರಲಿಲ್ಲ. ಕತ್ತಲಿದ್ದರೂ ತಾಜಾಗಾಳಿಯ ಅನುಭವವಾಗುತ್ತಿತ್ತು. ಬಹಳ ದೂರದ ನಡಿಗೆಯಾದ್ದರಿಂದ, ದಣಿದಿದ್ದ ದೇಹಗಳು ವಿಶ್ರಾಂತಿ ಬಯಸಿ, ಬೆನ್ನಿಗೆ ಹಾಕಿಕೊಂಡಿದ್ದ ಚೀಲಗಳನ್ನು ತೂಗು ಹಾಕಿ, ಮೊಟ್ಟಮೊದಲ ಬಾರಿಗೆ, ಎರಡು ವಾರಗಳ ನಂತರ ಕಣ್ತುಂಬ ನಿದ್ದೆ ಮಾಡಿದರು. ಅವರಿಗೆ ಎಚ್ಚರವಾದಾಗ, ಸೂರ್ಯ ಆಗಲೇ ನೆತ್ತಿಯ ಮೇಲಿದ್ದ. ರೋಮಾಂಚಕಾರಿ

ಅನುಭವದಿಂದಾಗಿ ಅವರಿಗೆ ಮಾತೇ ಹೊರಡಲಿಲ್ಲ. ಅವರ ಎದುರಿಗೆ ಜರೀಗಿಡಗಳಿಂದ ತಾಳೆ ಮರಗಳಿಂದ ಆವೃತವಾದ ಆ ನೀರವ ಪರಿಸರದಲ್ಲಿ, ಜೀರ್ಣಶೀರ್ಣ ಸ್ಪೇನಿನ ಹಡಗೊಂದು ನಿಂತಿತ್ತು. ಆ ಹಡಗು ಒಂದು ಪಕ್ಕಕ್ಕೆ ವಾಲಿದಂತಿತ್ತು. ಹಾಯಿಯಿಂದ ಚಿಂದಿ ತುಂಡುಗಳು ನೇತಾಡುತ್ತಿದ್ದವು. ಅವುಗಳ ಮೇಲೆಲ್ಲ ಆರ್ಕಿಡ್‌ಗಳು ಬೆಳೆದಿದ್ದವು. ಹಡಗಿನ ಮೇಲಿನ ಧ್ವಜ ಮತ್ತು ಯುದ್ಧ ಕವಚ ಪಾಚಿಯಿಂದ ತುಂಬಿತ್ತು. ಆ ಹಡಗನ್ನು (ಅದನ್ನು) ದಡದ ಕಲ್ಲುಗಳಿಗೆ ಕಟ್ಟಲಾಗಿತ್ತು. ಹಕ್ಕಿಪಿಕ್ಕಿಗಳ ಬಳಕೆಯಿಂದಾಗಿ ಯಾವುದೇ ರೀತಿಯಲ್ಲಿ ಹಾಳಾಗದೆ, ಗತ ಸ್ಮೃತಿಗಳನ್ನು ಒಳಗಿರಿಸಿಕೊಂಡು ನಿಂತಂತಿತ್ತು. ಸಾಹಸ ಯಾತ್ರಿಕರು, ಜಾಗರೂಕತೆಯಿಂದ ಶೋಧಕ್ಕೆ ಹೊರಟವರು ಒಳಗೆ ಇರದಿದ್ದರೂ, ಒಳಗೆ ಮಾತ್ರ ಹೂಗಳ ದಟ್ಟ ಕಾಡಿನಂತಿತ್ತು.

ಹಡಗು ಕಾಣಿಸಿದ್ದರಿಂದ ಸಮುದ್ರವು ಇಲ್ಲಿಯೇ ಎಲ್ಲೋ ಹತ್ತಿರದಲ್ಲಿ ಇರಬೇಕೆನಿಸಿತು. ಆದರೆ ಅದು ಕಾಣದೆ ಹೋದ ಪಕ್ಷದಲ್ಲಿ ಸಮುದ್ರವನ್ನು ತನ್ನ ಕಲ್ಪನೆ ಎಂದಷ್ಟೇ ಭಾವಿಸಿಕೊಳ್ಳಬೇಕೆಂದೆನಿಸಿತ್ತು. ಎಷ್ಟೋ ಸಾಹಸಗಳನ್ನು ಮಾಡಿಯೂ, ತ್ಯಾಗ ಸಂಕಷ್ಟಗಳ ನಡುವೆಯೂ, ಹುಡುಕುತ್ತಿದ್ದುದು ಅಸಾಧ್ಯವೆನಿಸುತ್ತಿದ್ದಾಗ, ಒಮ್ಮೆಲೇ ಅದು, ನಿರೀಕ್ಷಿಸದೆಯೂ, ತನ್ನ ಕಾಲ ಮುಂದೆಯೇ ಸಿಕ್ಕಿತೆಂದುಕೊಂಡದ್ದು ಬಹುಶಃ ತನ್ನ ಭ್ರಮೆಯಿರಬೇಕು ಎಂದುಕೊಂಡ. ಹಲವು ವರ್ಷಗಳ ನಂತರ, ಅದೂ ಟಪಾಲು ಸೇವೆ ಪ್ರಾರಂಭವಾದ ಮೇಲೆ, ಅರೆಲಿಯಾನೊ ಬ್ಯುಂಡಿಯಾ ಆ ಮಾರ್ಗವಾಗಿ ಹಾದುಹೋದ. ಆಗ ಅವನ ಕಣ್ಣಿಗೆ ಬಿದ್ದದ್ದು ಸುಟ್ಟು ಹೋಗಿದ್ದ ಹಡಗಿನ ಭಾಗವೊಂದು ಗಸಗಸೆ ಗಿಡಗಳ ಮಧ್ಯೆ ಬಿದ್ದದ್ದು! ಅದನ್ನು ನೋಡುವವರೆಗೆ, ಅವನಿಗೆ ತಂದೆಯ ಮಾತುಗಳು ಸುಳ್ಳೆನಿಸಿದ್ದವು. ಆ ಹಡಗು ಅಲ್ಲಿಗೆ ಬಂದದ್ದಾದರೂ ಹೇಗೆಂದು ಯೋಚಿಸುತ್ತಿದ್ದ. ಆದರೆ ಜೋಸ್ ಆರ್ಕಾಡಿಯಾ ಮಾತ್ರ ಅದರ ಬಗ್ಗೆ ಅಷ್ಟಾಗಿ ತಲೆಕೆಡಿಸಿಕೊಳ್ಳದೆ ಮುಂದೆ ಸಾಗಿ ನಾಲ್ಕು ದಿನಗಳ ನಂತರ ಸಮುದ್ರವನ್ನು ತಲುಪಿದ. ಆದರೆ ಅದು ಬೂದಿ ಹೊಲಸುಗಳಿಂದ ತುಂಬಿದ್ದುದನ್ನು ಕಂಡಾಗ ತನ್ನ ಸಾಹಸದ ಪ್ರಯತ್ನಗಳಿಗೆ ಅರ್ಥವಿಲ್ಲವೆನಿಸಿತು. ಅವನ ಕನಸುಗಳೆಲ್ಲ ಭಗ್ನಗೊಂಡವು.

“ಓ ದೇವರೇ ಇದೆಂಥಾದ್ದು! ಮಕಾಂಡೊ ಪೂರ್ತಿಯಾಗಿ ನೀರಿನಿಂದ ಸುತ್ತುವರೆದಿದೆ!”

ಈ ಸಾಹಸ ಯಾತ್ರೆಯಿಂದ ಹಿಂದಿರುಗಿದ ಮೇಲೆ, ಖಚಿತವಲ್ಲದ ಕೇವಲ ಊಹೆಯಿಂದ ಸಿದ್ಧಪಡಿಸಿಟ್ಟುಕೊಂಡಿದ್ದ ನಕ್ಷೆಯನ್ನು ನಂಬಿಕೊಂಡು, ಮಕೊಂಡೋ ಒಂದು ದ್ವೀಪವೆಂದು ಭಾವಿಸಿ ಅದರ ಬಗ್ಗೆ ಸರಿಯಾದ ಮಾಹಿತಿ ಇಲ್ಲದೆ, ಹುಡುಕಿಕೊಂಡು ಹೊರಟದ್ದು ಮೂರ್ಖತನವೂ ಮತ್ತು ತನ್ನನ್ನು ತಾನೇ ಶಿಕ್ಷೆಗೆ ಒಳಪಡಿಸಿಕೊಂಡಂತಾಯಿತೆಂದೆನಿಸಿ – ಎಂದಿಗೂ ನಾವೂ ಯಾವ ನೆಲೆಯನ್ನೂ ತಲುಪುವುದಿಲ್ಲ ಎಂದು ನಿಟ್ಟುಸಿರಿನೊಂದಿಗೆ ಉರ್ಸುಲಾಳಲ್ಲಿ ಹೇಳಿಕೊಂಡ. “ವಿಜ್ಞಾನದ ಯಾವ ಪ್ರಯೋಜನಗಳನ್ನೂ ದಕ್ಕಿಸಿಕೊಳ್ಳದೆ, ಇಲ್ಲಿಯೇ ಕೊಳೆತು ಸಾಯಬೇಕಾಗುತ್ತದೆ”

ಈವೊಂದು ಮನಃಸ್ಥಿತಿ, ಲ್ಯಾಬೊರೇಟರಿಯಾಗಿ ಮಾಡಿಕೊಂಡಿದ್ದ ಆ ಪುಟ್ಟ ರೂಮಿನಲ್ಲಿ ಆವರಿಸಿದ್ದು, ನಂತರ ಮಕಾಂಡೋವನ್ನು ಬೇರೊಂದು ಕಡೆಗೆ ಸ್ಥಳಾಂತರಿಸುವ ವಿಚಾರದ ಗುಂಗಿನಲ್ಲಿದ್ದ. ಅವನ ಗುಪ್ತ ಅದಮ್ಯ ಆಲೋಚನೆಗಳ ವಾಸನೆ ಹಿಡಿದ ಉರ್ಸುಲಾ, ಮೆಲ್ಲನೆ ಆ ಹಳ್ಳಿಯ ಹೆಂಗಸರನ್ನೆಲ್ಲ, ತಮ್ಮ ಗಂಡಂದಿರ ವಿರುದ್ಧವಾಗಿ ನಿಲ್ಲುವಂತೆ ಮಾಡಿದಳು. ಅಷ್ಟು ಹೊತ್ತಿಗೆ ಆಗಲೇ ಕೆಲ ಗಂಡಸರು ಹೊರಡಲು ಸಿದ್ಧತೆಗಳನ್ನೂ ನಡೆಸುತ್ತಿದ್ದರು. ಜೋಸ್ ಆರ್ಕಾಡಿಯೋಗೆ, ಮುಂದೆ ಬರಬಹುದಾದ ಅಪಾಯಗಳು, ಅಡ್ಡಿ ಆತಂಕಗಳು, ಪ್ರತಿರೋಧಗಳು ತನ್ನ ಆಲೋಚನೆಗಳಿಗೆ ಎದುರಾಗಬಹುದೆಂಬ ಕಲ್ಪನೆ ಇರಲಿಲ್ಲವಾದರೂ ಕಡೆಗೆ ಅದು ತನ್ನ ಭ್ರಮೆಯಲ್ಲದೆ ಬೇರೇನೂ ಅಲ್ಲವೆಂಬ ನಿಲುವಿಗೆ ಬಂದ.

ಆ ದಿನ ಬೆಳಗ್ಗೆ ಉರ್ಸುಲಾ ಮುಗ್ಧ ಆಸಕ್ತಿಯೊಂದಿಗೆ ಅವನನ್ನು ಗಮನಿಸುತ್ತಿದ್ದಳು. ಅಲ್ಲಿ ತನ್ನ ಲ್ಯಾಬೊರೇಟರಿಯ ವಸ್ತುಗಳನ್ನೆಲ್ಲ (ಒಳಗೆ ಗೊಣಗುತ್ತಲೇ) ಪೆಟ್ಟಿಗೆಗಳಲ್ಲಿ ತುಂಬಿ, ಮುಚ್ಚಳ ಮುಚ್ಚಿ ಮೊಳೆ ಹೊಡೆಯುತ್ತಿದ್ದುದನ್ನು ಕರುಣಾರ್ದ್ರ ದೃಷ್ಟಿಯಿಂದ ಗಮನಿಸಿದಳು. ಪೆಟ್ಟಿಗೆಗಳಿಗೆ ಮೊಳೆ ಹೊಡೆದು ಅವುಗಳ ಮೇಲೆ ಮಸಿ ಮತ್ತು ಬ್ರಶ್‌ನಿಂದ ಹೆಸರು ಬರೆಯುತ್ತಿದ್ದುದನ್ನು ತಡೆಯಲು ಮುಂದಾಗಲಿಲ್ಲ. ಅವನನ್ನೂ ಧಿಕ್ಕರಿಸಲೂ ಇಲ್ಲ. ಹಳ್ಳಿಯವರು ಯಾರೂ ತನಗೆ ಬೆಂಬಲವಾಗಿ ಇರಲಾರರೆಂಬ ವಿಷಯ ಅವನಿಗೂ ಗೊತ್ತಿದೆ ಎಂಬ ಅಂಶ ಅವಳಿಗೆ ಅರ್ಥವಾಗಿತ್ತು. ಯಾವಾಗ ಅವನು ಅವುಗಳನ್ನೆಲ್ಲ ಬಾಗಿಲಿಂದ ಹೊರಗೆ ತೆಗೆದುಕೊಂಡು ಹೋಗಲು ಅನುವಾದನೊ ಆಗ ಅವಳು, ಅವನೇನು ಮಾಡುತ್ತಿದ್ದಾನೆಂದು ಕೇಳುವ ಸಾಹಸ ಮಾಡಿದಳು. "ಯಾರಿಗೂ ನನ್ನ ಜೊತೆ ಬರುವುದಕ್ಕೆ ಇಷ್ಟವಾಗಿಲ್ಲದಿದ್ದ ಪಕ್ಷದಲ್ಲಿ ನಾವು ಮಾತ್ರವೇ ಹೋಗೋಣ" ಎಂದ. ಅವನ ಮಾತಿಗೆ ಅವಳು ಬೇಸರಗೊಳ್ಳಲಿಲ್ಲ.

"ನಾವು ಹೋಗುವುದಿಲ್ಲ. ಇಲ್ಲಿಯೇ ಇರೋಣ. ಇಲ್ಲಿ ನಮಗೊಬ್ಬ ಮಗ ಹುಟ್ಟಿದ್ದಾನೆ" ಎಂದಳು.

"ಜನನವಾಗಿದೆಯೇ ಹೊರತು, ಸಾವು ಸಂಭವಿಸಿಲ್ಲ ಇನ್ನೂ!.... ಯಾರಾದರೊಬ್ಬರು ಸಾಯುವವರೆಗೂ ನಾವಿದ್ದ ಜಾಗ ಎಂದಿಗೂ ನಮ್ಮದಾಗುವುದಿಲ್ಲ" – ಎಂದ.

ಉರ್ಸುಲಾ ಮೆಲುದನಿಯಲ್ಲಿ ದೃಢವಾಗಿ ಹೇಳಿದಳು. "ಒಬ್ಬರು ಸಾಯುವುದರಿಂದ ಒಂದು ಪ್ರದೇಶ ನಮ್ಮದಾಗುವುದೆಂದಾದರೆ, ನಾನು ಸಾಯಲು ಸಿದ್ಧ" ಎಂದಳು.

ತನ್ನ ಹೆಂಡತಿಯ ನಿರ್ಧಾರ ಇಷ್ಟೊಂದು ದೃಢವಾಗಿರುತ್ತದೆ ಎಂಬ ಕಲ್ಪನೆ ಜೋಸ್ ಆರ್ಕಾಡಿಯಾ ಬ್ಯುಂಡಿಯಾನಿಗೆ ಇರಲಿಲ್ಲ. ತನ್ನ ಮೋಹಕ ಕಲ್ಪನೆಗಳು, ಸ್ವರ್ಗಸದೃಶ ಭೂಪ್ರದೇಶ, ಮಂತ್ರದ ನೀರಿನ ಸಿಂಪಡಿಕೆಯಿಂದಲೇ ಬೇಕೆಂದ ಫಲಗಳನ್ನು ನೀಡುವ ಮರಗಿಡಗಳು – ಅತ್ಯಂತ ಅಗ್ಗದ ಬೆಲೆಯಲ್ಲಿ, ಸಿಗುವ ಸರ್ವರೋಗ ನಿವಾರಕ ಸಾಧನಗಳು – ಎಲ್ಲವೂ ಲಭ್ಯವೆಂದು ಹೇಳಿ ಅವಳನ್ನು ಪುಸಲಾಯಿಸಲು, ಆಮಿಷಗಳಿಂದ ಸೆಳೆಯಲು ಪ್ರಯತ್ನಿಸಿದರೂ, ಉರ್ಸುಲಾ ಕಿವಿಗೊಡಲಿಲ್ಲ. "ಎಲ್ಲೆಲ್ಲೋ ಏನೇನೋ

ಸಿಗುತ್ತೇಂತ ಅಲೆದಾಡೋ ಹುಚ್ಚು ಬಿಟ್ಟು ನಿನ್ನ ಮಕ್ಕಳ ಕಡೆ ಗಮನಕೊಡು. ಅವರ ಕಡೆ ಒಂದು ಸಲ ನೋಡು. ಒಳ್ಳೆ ಕತ್ತೆಗಳ ಥರ ಇದ್ದಾರೆ".

ಹೆಂಡತಿಯ ಮಾತುಗಳನ್ನು ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಅಕ್ಷರಶಃ ಮನಸ್ಸಿಗೆ ತಂದುಕೊಂಡ. ಕಿಟಕಿಯಿಂದ ಹೊರಗೆ ನೋಡಿದ. ಬರಿಗಾಲಲ್ಲಿ, ಸೂರ್ಯನ ಬಿಸಿಲಲ್ಲಿ ನಿಂತಿದ್ದ ಮಕ್ಕಳನ್ನು ಕಂಡಾಗ, ತನ್ನ ಮಕ್ಕಳ ಅಸ್ತಿತ್ವ ಮೊದಲಬಾರಿಗೆ ಅವನ ಗಮನಕ್ಕೆ ಬಂದಂತಾಯಿತು. ಅವನೊಳಗೆ ಕಲಕಿದಂತಾಯಿತು. ಕೂಡಲೇ ನೆನಪಿನಾಳಕ್ಕೆ ಇಳಿದ. ಉರ್ಸುಲಾ ನೆಲಗುಡಿಸುತ್ತಿದ್ದಂತೆ, ಅವನು ಯಾವುದೋ ತಲ್ಲೀನತೆಯಲ್ಲಿ, ಮಕ್ಕಳ ಬಗ್ಗೆ ಯೋಚನೆಯಲ್ಲಿ ಮುಳುಗುತ್ತಿದ್ದಂತೆ ಕಣ್ಣು ಹನಿಗೂಡಿತು. ಅವನು ಕಣ್ಣೊರೆಸಿಕೊಂಡ. ಒಂದು ದೀರ್ಘ ನಿಟ್ಟುಸಿರೆಳೆದ.

"ಸರಿ ಆ ಮಕ್ಕಳನ್ನು ಬಂದು, ಈ ಪೆಟ್ಟಿಗೆಗಳನ್ನು ಒಳಗಿಡಲು ಸಹಾಯಮಾಡಲು ಹೇಳು" – ಎಂದ.

ಜೋಸ್, ಮಕ್ಕಳಲ್ಲಿ ಹಿರಿಯನಾಗಿದ್ದವನಿಗೆ 14 ವರುಷ. ದಟ್ಟ ಕೂದಲು; ಚೌಕಾಕಾರದ ಮುಖ. ಅವನಿಗೆ ಅಪ್ಪನ ಗುಣಗಳು ಮೈಗೂಡಿದ್ದವು. ದೈಹಿಕ ಸಾಮರ್ಥ್ಯ. ಪ್ರಗತಿಯ ಬಗ್ಗೆ ತುಡಿತಗಳಿದ್ದರೂ ಕಲ್ಪನಾಶಕ್ತಿ ಸಾಲದಾಗಿತ್ತು. ಅವನು ಹುಟ್ಟಿದ್ದೂ ಕೂಡ, ಮಕಾಂಡೋವನ್ನು ಸ್ಥಾಪಿಸುವುದಕ್ಕೆ ಮೊದಲು, ಪರ್ವತಗಳನ್ನು ದಾಟುವ ಪ್ರಯಾಸದ ದಿನಗಳಲ್ಲಿ. ಆದರೆ ಹುಟ್ಟಿದ ಆ ಮಗುವಿಗೆ ಪ್ರಾಣಿಯ ಥರದ ಯಾವುದೇ ಲಕ್ಷಣಗಳಿಲ್ಲದೆ, ಸಂಪೂರ್ಣವಾಗಿ ಮಾನವ ರೂಪಿಯಾಗಿದ್ದುದೇ ಅವರಿಗೆ ಹೆಚ್ಚಿನ ಸಂತಸವಾಗಿತ್ತು. ದೇವರಿಗೆ ಅವರಿಬ್ಬರೂ ಕೃತಜ್ಞತೆ ಸಲ್ಲಿಸಿದರು. ಅರೆಲಿಯಾನೋ ಮಕಾಂಡೋದಲ್ಲಿ ಹುಟ್ಟಿದ ಮೊದಲ ಮಗುವಾಗಿದ್ದ. ಮಾರ್ಚ್‌ಗೆ ಅವನು ಆರು ವರ್ಷದವನಾಗುತ್ತಾನೆ. ಹೆಚ್ಚಿನ ಮಾತಿಲ್ಲ. ಸದಾ ಅಂತರ್ಮುಖಿ. ತಾಯಿ ಗರ್ಭದಲ್ಲಿರುವಾಗಲೇ ಅವನು ಅತ್ತಿದ್ದ. ಹುಟ್ಟುವಾಗಲೇ ಕಣ್ಣರಳಿಸಿಕೊಂಡಿದ್ದ. ಕರುಳಬಳ್ಳಿಯನ್ನು ಕತ್ತರಿಸುತ್ತಿರುವಾಗಲೇ, ಅತ್ತಿತ್ತ ತಲೆ ತಿರುಗಿಸುತ್ತಾ, ಸುತ್ತಲಿನ ವಸ್ತುಗಳನ್ನೆಲ್ಲ ಗಂಭೀರವಾಗಿ ಗಮನಿಸುತ್ತಿದ್ದ. ಆದರೆ ಹತ್ತಿರ ಬಂದವರನ್ನು ಮಾತ್ರ ಗಮನಿಸುತ್ತಿರಲಿಲ್ಲ. ತನ್ನ ದೃಷ್ಟಿಯನ್ನೆಲ್ಲ ತಾಳೆಗರಿ ಕಟ್ಟಿನ ಮೇಲೆ ನೆಟ್ಟಿದ್ದ. ಅದು ಜೋರಾದ ಮಳೆಯಿಂದ ಕೆಳಗೆ ಬೀಳಲಿದೆ ಎಂಬುದನ್ನು ಸೂಚಿಸುವಂತಿತ್ತು ಅವನ ಕಣ್ಣು. ಅದಾದ ಮೇಲೆ, ಅಂಥ ಅನುಭವ, ಅವನು ಮೂರು ವರ್ಷದವನಾಗುವವರೆಗೂ, ಉರ್ಸುಲಾಗೆ ಉಂಟಾಗಿರಲಿಲ್ಲ. ಮೂರು ವರ್ಷದವನಾದ ಮೇಲೆ ಒಂದು ದಿನ ಅವನು ಅಡಿಗೆ ಮನೆಗೆ ಬಂದ. ಉರ್ಸುಲಾ ಕುದಿಯುತ್ತಿರುವ ಸಾರಿನ ಪಾತ್ರೆಯನ್ನು ಒಲೆಯ ಮೇಲಿಂದ ಇಳಿಸಿ ಮೇಜಿನ ಮೇಲೆ ಇರಿಸಿದಳು. ಬಾಗಿಲಲ್ಲಿ ನಿಂತಿದ್ದ ಬಾಲಕ ಗಾಭರಿಯಿಂದ "ಅದು ಬಿದ್ದು ಚೆಲ್ಲುತ್ತೆ" ಎಂದ. ಪಾತ್ರೆ ಮೇಜಿನ ಮಧ್ಯದಲ್ಲಿ, ಯಾವುದೇ ರೀತಿಯಿಂದಲೂ ಬಿದ್ದು ಚೆಲ್ಲುವ ಸಾಧ್ಯತೆ ಇಲ್ಲದಂತೆ ಇತ್ತು. ಆದರೂ ಅವನು ಹೇಳಿದಂತೆ, ಪಾತ್ರೆ ಅಲ್ಲಾಡುತ್ತಾ ಮೇಜಿನ ಅಂಚಿಗೆ ಬಂದು, ಯಾವುದೋ ಶಕ್ತಿಯ ಒತ್ತಡಕ್ಕೆ ಸಿಲುಕಿದಂತೆ ಕೆಳಗೆ ಬಿದ್ದು ಒಡೆದು ಚೂರು ಚೂರಾಯಿತು. ಉರ್ಸುಲಾಳಿಗೆ ಭಯವಾಯಿತು. ಗಂಡನಿಗೆ ನಡೆದ ಸಂಗತಿ ವಿವರಿಸಿದಳು. ಆದರೆ ಜೋಸ್ ಅದನ್ನೊಂದು

ಸಾಮಾನ್ಯ ಸಂಗತಿಯೆಂದು ನಿರ್ಲಕ್ಷಿಸಿದ. ಯಾವಾಗಲೂ ಅವನು ಹೀಗೆಯೇ ಮಕ್ಕಳ ವಿಚಾರದಲ್ಲಿ ನಿರ್ಲಿಪ್ತನಾಗಿರುತ್ತಿದ್ದ. ಅವನ ದೃಷ್ಟಿಯಲ್ಲಿ ಆ ಮಕ್ಕಳಿಗೆ ಮಾನಸಿಕ ಬೆಳವಣಿಗೆ ಇರುವುದಿಲ್ಲ ಎಂಬುದಾಗಿತ್ತು. ಇದು ಒಂದು ಕಾರಣವಾದರೆ, ಮತ್ತೊಂದು ಕಾರಣ, ಅವನಿಗಿದ್ದ ಅವನದೇ ಆದ ಕಾಲ್ಪನಿಕ ಚಟುವಟಿಕೆಗಳಲ್ಲಿನ ವ್ಯಸ್ತತೆ.

ಏನೇ ಆದರೂ ಆ ದಿನ ಮಾತ್ರ ಮಕ್ಕಳನ್ನು ಹತ್ತಿರಕ್ಕೆ ಕರೆದು ಅವರನ್ನೆಲ್ಲ ಕೆಲಸಕ್ಕೆ ಹಚ್ಚಿದ. ಅವರ ಜೊತೆ ಒಂದಷ್ಟು ಸಮಯ ಕಳೆದ. ಪುಟ್ಟದಾಗಿ ಪ್ರತ್ಯೇಕವಾಗಿ ಇದ್ದ ಕೊಠಡಿಯೊಂದರಲ್ಲಿ, ಗೋಡೆಗಳ ಮೇಲೆಲ್ಲ ಯಾವ ಯಾವುದೋ ಭೂಪಠಗಳು, ರೇಖಾಚಿತ್ರಗಳು ಅಲಂಕೃತಗೊಂಡಿದ್ದವು. ಮಕ್ಕಳಿಗೆ ಓದಲು, ಬರೆಯಲು, ಲೆಕ್ಕಮಾಡಲು ಹೇಳಿಕೊಟ್ಟ. ಜೊತೆಗೆ ಅಲ್ಲಿಯವರೆಗೂ ಯಾರೂ ಕಂಡು ಕೇಳಿ ಅರಿಯದಿದ್ದ ಪ್ರಪಂಚದ ವಿಸ್ಮಯಗಳನ್ನೆಲ್ಲ ವಿವರಿಸಿದ. ಹಾಗೆಯೇ ತನ್ನ ಸ್ವಂತದ ಕಲ್ಪನೆಗಳ ಬಗ್ಗೆಯೂ ತಿಳಿಸಿದ. ಈ ರೀತಿಯಲ್ಲಿ ಮಕ್ಕಳು ಬಹಳಷ್ಟನ್ನು ಕಲಿತರು. ದಕ್ಷಿಣ ಆಫ್ರಿಕಾದ ಕಡೆಯ ಭಾಗದಲ್ಲಿನ ಜನರು ಎಷ್ಟು ಬುದ್ಧಿವಂತರು, ಶಾಂತಿಪ್ರಿಯರೆಂದರೆ, [ಅವರಿಗೆ ಹೊತ್ತು ಕಳೆಯುವುದೆಂದರೆ] ಸುಮ್ಮನೆ ಕುಳಿತು ನಿರಾಳವಾಗಿ, ಆಲೋಚನೆಗಳಲ್ಲಿ ಮುಳುಗುವುದಷ್ಟೇ ಅಲ್ಲದೆ ಬರಿಗಾಲಿನಲ್ಲಿ, ಏಜಿಯನ್ ಸಮುದ್ರವನ್ನು ದಾಟಲು ದ್ವೀಪದಿಂದ ದ್ವೀಪಕ್ಕೆ ಹಾರುತ್ತ ಸಾಲೋನಿಕ ಬಂದರಿನ ತನಕ ಹೋಗಬಹುದು ಎಂಬುದನ್ನು – ಇಂಥ ವಿವರಗಳಿಂದ ಕಲಿತರು. ತಂದೆ ಅವರಲ್ಲಿ ಹುಟ್ಟು ಹಾಕಿದ ಭ್ರಮಾತ್ಮಕ ಸಂಗತಿಗಳು ಮಕ್ಕಳ ಮನಸ್ಸಿನಲ್ಲಿ ಹೇಗೆ ಬೇರೂರಿತ್ತೆಂದರೆ, ಎಷ್ಟೋ ವರ್ಷಗಳ ನಂತರ ಎರಡನೆಯವನಾದ ಅರೆಲಿಯಾನೊ, ತನ್ನನ್ನು ಗುಂಡಿಕ್ಕಿ ಕೊಲ್ಲಲು ಸಾಲುಗಟ್ಟಿ ನಿಂತಿದ್ದ ತುಕಡಿಗೆ, ಸೇನಾಧಿಕಾರಿ ಅಪ್ಪಣೆ ಕೊಡುವ ಕೆಲಕ್ಷಣಗಳ ಮೊದಲು, ಮಾರ್ಚ್‌ನ ಬಿರುಬಿಸಿಲಿನ ಒಂದು ಮಧ್ಯಾಹ್ನ ತಂದೆ ಭೌತಶಾಸ್ತ್ರದ ಪಾಠವನ್ನು ಹೇಳುತ್ತಿದ್ದುದನ್ನು ನಿಲ್ಲಿಸಿ, ಕೈಯನ್ನು ಗಾಳಿಯಲ್ಲಿ ನಿಲ್ಲಿಸಿ ಬಿಟ್ಟ ಕಣ್ಣುಗಳಿಂದ, ಮತ್ತೊಮ್ಮೆ ಬಂದಿದ್ದ ಜಿಪ್ಸಿಗಳ ಪೀಪಿ ಸದ್ದು, ಮದ್ದಲೆ, ಗೆಜ್ಜೆ ಸದ್ದುಗಳಿಂದ ಆಕರ್ಷಿತನಾಗಿ ನಿಂತಿದ್ದುದನ್ನು ಸ್ಮರಿಸಿಕೊಂಡ ಆ ಜಿಪ್ಸಿಗಳು ಮೆಂಫಿಸ್‌ನ ಯೋಗಿಗಳು ಕಂಡುಹಿಡಿದಿದ್ದ ಇತ್ತೀಚಿನ ಅತ್ಯದ್ಭುತದ ವಸ್ತುವೊಂದನ್ನು ಕುರಿತು ಪ್ರಚಾರ ಮಾಡುತ್ತಿದ್ದರು.

ಈ ಜಿಪ್ಸಿಗಳು ಹೊಸಬರಾಗಿದ್ದರು. ತಮ್ಮ ಭಾಷೆಯೊಂದನ್ನು ಮಾತ್ರವೇ ಬಲ್ಲವರಾಗಿದ್ದ ಈ ಹೆಣ್ಣು ಗಂಡುಗಳು ಎಣ್ಣೆ ಚರ್ಮದವರೂ ಕರಕುಶಲಿಗಳೂ ಆಗಿದ್ದರು. ದಾರಿಗಳುದ್ದಕ್ಕೂ ಅವರ ಹಾಡು ಕುಣಿತಗಳು, ಸಂಭ್ರಮೋತ್ಸಾಹದ ಕೋಲಾಹಲವನ್ನು ಸೃಷ್ಟಿಮಾಡಿದ್ದವು. ಎಲ್ಲ ಬಣ್ಣಗಳಿಂದ ಕೂಡಿದ್ದ ಗಿಳಿಗಳು ಇಟಾಲಿಯ ಗೀತೆಗಳನ್ನು ಹಾಡುತ್ತಿದ್ದವು. ಖಂಜರಿಯ ನಾದಕ್ಕೆ ಕೋಳಿಗಳು ನೂರು ಚಿನ್ನದ ಮೊಟ್ಟೆಗಳನ್ನು ಇಡುತ್ತಿದ್ದವು. ಮನದಲ್ಲಿರುವುದನ್ನು ಹೇಳುವ ಕೋತಿಗಳಿದ್ದವು. ಏಕಕಾಲಕ್ಕೆ ಗುಂಡಿಗಳನ್ನು ಹೊಲಿಯುವ ಜ್ವರದ ತಾಪ ಕಡಿಮೆಮಾಡುವ ಬಹೂಪಯೋಗಿ ಉಪಕರಣವಿತ್ತು. ಮತ್ತೊಂದು ವಸ್ತು ಕೆಟ್ಟ ನೆನಪುಗಳನ್ನು ಅಳಿಸುವಂಥದ್ದು ಇತ್ತಲ್ಲದೆ ಕಾಲದ ಪರಿವೆಯನ್ನು ಮರೆಸುವಂಥ ಪೋಲ್ಟಿಸ್ ಕೂಡಾ ಇತ್ತು. ಇಷ್ಟೇ ಅಲ್ಲದೆ ನೂರಾರು ಸಾವಿರಾರು

ಆವಿಷ್ಕಾರಗಳು, ಎಲ್ಲವೂ ಚಮತ್ಕಾರಿಕವಾಗಿದ್ದವುಗಳು ಕೂಡಾ ಅಲ್ಲಿತ್ತು. ಸಾಧ್ಯವಾಗಿದ್ದರೆ ಜೋಸ್ ಆರ್ಕಾಡಿಯಾ ಬ್ಯುಂಡಿಯಾ ಅದೆಲ್ಲವನ್ನೂ ನೆನಪಿನಲ್ಲಿ ಇರಿಸಿಕೊಳ್ಳಲು ಒದಗಿಬರುವಂತಹ ಸ್ಮೃತಿ ಯಂತ್ರವನ್ನು ಕಂಡುಹಿಡಿಯಬೇಕೆಂದುಕೊಳ್ಳುತ್ತಿದ್ದನೋ ಏನೋ! ಕ್ಷಣ ಮಾತ್ರದಲ್ಲಿ ಹಳ್ಳಿಯ ರೂಪವನ್ನೇ ಬದಲಾಯಿಸಿ ಬಿಟ್ಟಿದ್ದರು. ಜಾತ್ರೆಯ ದೊಡ್ಡ ಗುಂಪಿನಲ್ಲಿ ಮಕಾಂಡೋ ಮಂದಿ ತಮ್ಮ ತಮ್ಮ ನೀದಿಗಳಲ್ಲೇ ಕಳೆದು ಹೋಗಿದ್ದರು.

ಮಕ್ಕಳು ತಪ್ಪಿಸಿಕೊಂಡು ಹೋಗಬಾರದೆಂದು ಅವರನ್ನು ಗಟ್ಟಿಯಾಗಿ ಕೈಹಿಡಿದು ಜಾತ್ರೆಯ ಜನಜಂಗುಳಿಯಲ್ಲಿ, ಚಿನ್ನದ ಹಲ್ಲು ಕಟ್ಟಿಸಿಕೊಂಡಿದ್ದ ದೊಂಬರಾಟದವರನ್ನು, ಆರುತೋಳುಗಳಿಂದ ಆಡುತ್ತಿದ್ದ ಗಾರುಡಿಗನನ್ನು ಡಿಕ್ಕಿಹೊಡೆಯುತ್ತಾ, ಗುಂಪು ಹೊರಹಾಕುತ್ತಿದ್ದ ಉಸಿರಾಟದ ವಾಸನೆಯೊಂದಿಗೆ ಬೆರೆತ ಗೊಬ್ಬರದ ವಾಸನೆಯನ್ನು ಕುಡಿಯುತ್ತಾ, ಜೋಸ್ ಬ್ಯುಂಡಿಯಾ, ಮೆಲ್‌ಕಿಯಾಡ್ಸ್‌ಗಾಗಿ ಹುಚ್ಚನಂತೆ ಎಲ್ಲೆಲ್ಲೂ ಅಲೆದಾಡಿದ. ಅವನಿಗೆ ಆ ರಾತ್ರಿಯ ಭಯಾನಕ ಅನುಭವದ ರಹಸ್ಯವನ್ನು ದುಃಸ್ವಪ್ನಗಳನ್ನು ಹೇಳಿಕೊಳ್ಳಬೇಕಿತ್ತು. ಅನೇಕ ಜಿಪ್ಸಿಗಳಲ್ಲಿ ಅವನ ಬಗ್ಗೆ ವಿಚಾರಿಸಿದ. ಆದರೆ ಅವರಿಗೆ ಅವನ ಭಾಷೆ ತಿಳಿಯುತ್ತಿರಲಿಲ್ಲ. ಕಡೆಯದಾಗಿ, ಮೆಲ್‌ಕಿಯಾಡ್ಸ್ ಸಾಮಾನ್ಯವಾಗಿ ಡೇರೆ ಹಾಕಿಕೊಳ್ಳುತ್ತಿದ್ದ ಸ್ಥಳವನ್ನು ತಲುಪಿದ. ಅಲ್ಲಿ ಆರ್ಮೇನಿಯಾದ ವ್ಯಕ್ತಿಯೊಬ್ಬ, ಅದೃಶ್ಯವಾಗುವ ದ್ರವವನ್ನು ಸ್ಪ್ಯಾನಿಷ್‌ನಲ್ಲಿ ಮಾರುತ್ತಿದ್ದ. ಅವನು ತೆಳು ಹಳದಿ ಬಣ್ಣದ ದ್ರವವನ್ನು ಒಂದೇ ಗುಟುಕಿಗೆ ಕುಡಿದುಬಿಟ್ಟ. ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಆ ಮನುಷ್ಯ ಅದೃಶ್ಯನಾಗುವ ಪವಾಡವನ್ನು ನೋಡುವುದರಲ್ಲಿ ಮಗ್ನನಾಗಿದ್ದ ಗುಂಪಿನೊಳಗಿಂದ ದಾರಿಮಾಡಿಕೊಳ್ಳುತ್ತಾ ಹೋಗಿ, ಆ ವ್ಯಕ್ತಿಯನ್ನು ಪ್ರಶ್ನಿಸಲು ಅವಕಾಶ ಮಾಡಿಕೊಂಡ. ಆ ಜಿಪ್ಸಿ ಕ್ರಿಮಿನಾಶಕ ವಸ್ತುವಿನ ಮಿಶ್ರಣ ಮಾಡುವುದಕ್ಕೆ ಮೊದಲೇ ಅವನನ್ನು ತನ್ನ ಭಯಾನಕ ನೋಟದಿಂದ ಕಟ್ಟಿಹಾಕಿದ. ಹೊಗೆ ಮೋಡದೊಳಗಿಂದ ಜೋಸ್ ಕೇಳಿದ ಪ್ರಶ್ನೆಗೆ ಉತ್ತರ ಹೊಮ್ಮಿತು:– "ಮೆಲ್‌ಕಿಯಾಡ್ಸ್ ಸತ್ತುಹೋಗಿದ್ದಾನೆ" ಈ ಉತ್ತರದಿಂದ ಬೇಸರಗೊಂಡ ಜೋಸ್ ನಿಶ್ಚಲವಾಗಿ ನಿಂತುಬಿಟ್ಟ. ಈ ನೋವಿನಿಂದ ಹೊರಬರುವ ಪ್ರಯತ್ನವನ್ನು, ಆ ಗುಂಪು ಚದುರುವ ಮತ್ತು ಅವರಿವರು ಕರೆದೆಡೆಗೆ ಹೋಗುವವರೆಗೆ ಮುಂದುವರೆಸಿದ. ಕ್ರಿಮಿನಾಶಕ ವಸ್ತು ಪೂರ್ತಿಯಾಗಿ ಆವಿಯಾಗಿ ಹೋಗುವತನಕ ಅಲ್ಲಿಯೇ ಇದ್ದ. ನಂತರ ಮೆಲ್‌ಕಿಯಾಡ್ಸ್‌ನ ಸಾವನ್ನು ಖಚಿತಪಡಿಸಿಕೊಂಡ. ಸಿಂಗಪುರದ ಬೀಚಿನಲ್ಲಿ ಯಾವುದೋ ಒಂದು ಬಗೆಯ ಜ್ವರಕ್ಕೆ ತುತ್ತಾಗಿ ಸತ್ತನೆಂದೂ, ಅವನ ಹೆಣವನ್ನು ಜಾವ ಸಮುದ್ರದಲ್ಲಿ, ಅತ್ಯಂತ ಆಳಕ್ಕೆ ಎಸೆಯಲಾಯಿತೆಂದೂ ತಿಳಿದುಕೊಂಡ. ಈ ಸುದ್ದಿಯು ಮಕ್ಕಳಿಗೆ ಬೇಕಾಗಿರಲಿಲ್ಲ. ಅವರಿಗೆ ಮೆಂಫಿಸ್ ಯೋಗಿಗಳು ಕಂಡುಹಿಡಿದಿದ್ದ ಯಾವುದೋ ಹೊಸ ಆವಿಷ್ಕಾರವನ್ನು ನೋಡುವ ಕುತೂಹಲ ಹೆಚ್ಚಾಗಿತ್ತು. ಪ್ರವೇಶ ದ್ವಾರದಲ್ಲಿನ ಟೆಂಟ್‌ನಲ್ಲಿ ಇದರ ಬಗ್ಗೆ ತಿಳಿಸಲಾಗಿತ್ತು. ಅಲ್ಲದೆ ಅದು ಸಾಲೊಮನ್ ದೊರೆಗೆ ಸೇರಿದ್ದೆಂದೂ ತಿಳಿಸಲಾಗಿತ್ತು.

ಅದನ್ನು ತೋರಿಸಲೇಬೇಕೆಂದು ಮಕ್ಕಳು ಒತ್ತಾಯ ಮಾಡಿದ ಮೇಲೆ ಜೋಸ್ ಮೂವತ್ತು ರಿಯಾಲ್‌ಗಳನ್ನು ಕೊಟ್ಟು ಟೆಂಟ್ ಒಳಗೆ ಪ್ರವೇಶಿಸಿದ. ಅಲ್ಲಿ ದೈತ್ಯಾಕಾರದ

ಬೋಳು ತಲೆಯ, ಎದೆತುಂಬಾ ಕೂದಲು ಬೆಳೆಸಿಕೊಂಡಿದ್ದ ಮನುಷ್ಯನೊಬ್ಬನಿದ್ದ. ಅವನ ಮೂಗಿಗೆ ತಾಮ್ರದ ಮೂಗುತಿ ಹಾಕಲಾಗಿತ್ತು. ಕಾಲಿಗೆ ಸರಪಳಿ ಹಾಕಿದ್ದ ಮರ ದೊಡ್ಡ ಪೆಟ್ಟಿಗೆಯಿದ್ದು ಅದನ್ನು ಕಾಯುತ್ತಿದ್ದ. ಅದರ ಮುಚ್ಚಳವನ್ನು ತೆಗೆದಾಗ ಒಂದು ಬಗೆಯ ಆವಿ ಹೊರಹೊಮ್ಮಿತು. ಒಳಗೆ ಸೂಜಿಮೊನೆಗಳಂತಹ ಮೈಯುಳ್ಳ ಒಂದು ದೊಡ್ಡ ಹರಳು ಇದ್ದು, ಸೂರ್ಯಕಿರಣಗಳು ಆ ಸೂಜಿಮೊನೆಗಳ ಮೂಲಕ ಹಾಯುತ್ತಿದ್ದಂತೆ ಬಣ್ಣ ಬಣ್ಣಗಳಾಗಿ ಒಡೆದುಬಿದ್ದ ನಕ್ಷತ್ರಗಳಂತೆ ಕಾಣಿಸಿದವು. ಮಕ್ಕಳ ಕಣ್ಣಲ್ಲಿ ಅದರ ಬಗ್ಗೆ ತಿಳಿದುಕೊಳ್ಳಬೇಕೆಂಬ ಕುತೂಹಲ ಇಣುಕುತ್ತಿದ್ದುದನ್ನು ಗಮನಿಸಿದ ಜೋಸ್ ಆರ್ಕಾಡಿಯೋ ಬ್ಯುಂಡಿಯಾ, "ಇದೊಂದು ಪ್ರಪಂಚದಲ್ಲಿಯೇ ಅತಿ ದೊಡ್ಡ ವಜ್ರ" ಎಂದ. "ಇಲ್ಲ, ಅದು ವಜ್ರವಲ್ಲ, ಹಿಮಗಡ್ಡೆ" ಎಂದು ಜಿಪ್ಸಿಯೊಬ್ಬ ಪ್ರತಿಪಾದಿಸಿದ.

ಜೋಸ್‌ಗೆ ಅರ್ಥವಾಗದೆ ತನ್ನ ಕೈಯನ್ನು ಅದರತ್ತ ಚಾಚಿದ. ಆದರೆ ಆ ದೈತ್ಯ ಅದನ್ನು ಹಿಂದಕ್ಕೆ ಎಳೆದುಕೊಂಡಿತು.

"ಇನ್ನೈದು ರಿಯಾಲ್‌ಗಳನ್ನು ಕೊಟ್ಟರೆ ಅದನ್ನು ಮುಟ್ಟಲು ಬಿಡುತ್ತೇನೆ" ಎಂದ.

ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಅವನು ಕೇಳಿದಷ್ಟು ಹಣವನ್ನು ಕೊಟ್ಟು, ಕೈಗೆ ತೆಗೆದುಕೊಂಡ. ಒಂದೆರಡು ನಿಮಿಷಗಳು ಅದನ್ನು ಕೈಲಿ ಹಿಡಿದಿದ್ದ. ಅವನ ಹೃದಯ, ಯಾವುದೋ ನಿಗೂಢ ವಸ್ತುವಿನ ಸಂಪರ್ಕಕ್ಕೆ ಬಂದ, ಭಯ ಸಂತಸ ಸಂಭ್ರಮಾತಿರೇಕಗಳಿಂದ ತುಂಬಿತ್ತು. ಅವನಿಗೆ ಏನೊಂದೂ ಮಾತನಾಡಲು ಆಗಲಿಲ್ಲ. ಇನ್ನಷ್ಟು ಹೊತ್ತು ಅದನ್ನು ಹಿಡಿದು ರೋಮಾಂಚನದ ಅನುಭೂತಿಯನ್ನು ಪಡೆಯಲೆಂದು ಮತ್ತಷ್ಟು ಹಣವನ್ನು ಕೊಟ್ಟ. ಪುಟ್ಟ ಜೋಸ್ ಆರ್ಕಾಡಿಯೋ ಅದನ್ನು ಮುಟ್ಟಲು ಹೆದರಿದ. ಅರೆಲಿಯಾನೋ ಮಾತ್ರ ಒಂದೆರಡು ಹೆಜ್ಜೆ ಮುಂದಕ್ಕೆ ಹೋಗಿ ಅದರ ಮೇಲೆ ಕೈಯಿರಿಸಿದ ಮರುಕ್ಷಣವೇ ಕೈಯನ್ನು ಹಿಂದಕ್ಕೆಳೆದುಕೊಂಡ.

"ಇದು ಕುದಿಯುತ್ತಿದೆ" ಗಲಿಬಿಲಿಗೊಂಡು ಉದ್ಗರಿಸಿದ. ಆದರೆ ಅವನ ತಂದೆ ಅವನ ಕಡೆ ಲಕ್ಷ್ಯವೇ ಕೊಡಲಿಲ್ಲ. ಅವನ ಗಮನವೆಲ್ಲ ಆ ರಹಸ್ಯವನ್ನು ಗಮನಿಸುವುದರಲ್ಲಿಯೇ ಕೇಂದ್ರೀಕೃತವಾಗಿತ್ತು. ತನ್ನ ಪ್ರಯೋಗಗಳ ಸೋಲಿನಿಂದಾದ ಉದ್ವಿಗ್ನತೆಯನ್ನೂ ಮರೆತಿದ್ದ. ಅಲ್ಲದೆ ಮೆಲ್‌ಕಿಯಾಡ್ಸ್‌ನ ಶವವು ಜಲಚರಗಳ ಪಾಲಾಗಿರಬಹುದಾದ್ದನ್ನೂ ಮರೆತುಬಿಟ್ಟ. ಇನ್ನೂ ತಣಿಯದ ಅತೃಪ್ತಿಯಿಂದಾಗಿ, ಇನ್ನೂ ಐದು ರಿಯಾಲ್‌ಗಳನ್ನು ಕೊಟ್ಟು, ಆ ಗಟ್ಟಿಯನ್ನು ಕೈಲಿ ಹಿಡಿದಿದ್ದ.

"ನಮ್ಮ ಕಾಲದ ಅತಿ ದೊಡ್ಡ ಆವಿಷ್ಕಾರವಾಗಿದೆ ಇದು" ಎಂದು ಉದ್ಗರಿಸಿದ.

೦

2

ಕಡಲ್ಗಳ್ಳ ಸರ್ ಫ್ರಾನ್ಸಿಸ್ ಡ್ರೇಕ್, 16ನೇ ಶತಮಾನದಲ್ಲಿ 'ರಿಯೋಹಚಾ' ಮೇಲೆ ಆಕ್ರಮಣ ಮಾಡಿದಾಗ ಮೊಳಗಿದ ಎಚ್ಚರಿಕೆಯ ಗಂಟೆಗಳ ಸದ್ದು, ಗುಂಡಿನ ಸದ್ದುಗಳಿಂದ, ಉರ್ಸುಲಾಳ ಮುತ್ತಜ್ಜಿ ಎಷ್ಟು ಭಯಭೀತಳಾದಳೆಂದರೆ, ಸಂಪೂರ್ಣವಾಗಿ ತನ್ನ ಮೇಲಿನ ಹತೋಟಿ ಕಳೆದುಕೊಂಡು ಉರಿಯುತ್ತಿರುವ ಒಲೆಯ ಮೇಲೆ ಕುಸಿದು ಕುಳಿತಳು. ಸುಟ್ಟಗಾಯಗಳಿಂದ ಅವಳ ಬದುಕೇ ನಿಷ್ಪ್ರಯೋಜಕವಾಯಿತು. ಒಂದು ಮಗ್ಗುಲಿಗೆ ಮಾತ್ರ ಮಲಗಲು ಸಾಧ್ಯವಾಯಿತು. ಹಾಗೆಯೇ ಮೆತ್ತನೆಯ ದಿಂಬುಗಳ ಮೇಲೆ ಕುಳಿತುಕೊಳ್ಳುತ್ತಿದ್ದಳು. ಅವಳ ಈ ಪರಿಸ್ಥಿತಿಯಿಂದಾಗಿ ಅವಳ ನಡಿಗೆಯೇ ವಿಚಿತ್ರ, ವಿಕಾರವಾಗಿತ್ತು. ಇದರಿಂದಾಗಿ ಅವಳೆಲ್ಲೂ ಹೊರಗೆ ಓಡಾಡುತ್ತಿರಲಿಲ್ಲ. ಸಾಮಾಜಿಕ ಚಟುವಟಿಕೆಗಳನ್ನೇ ನಿಲ್ಲಿಬಿಟ್ಟಿದ್ದಳು. ತನ್ನ ದೇಹದಿಂದ ದುರ್ವಾಸನೆ ಬರುತ್ತಿದೆ ಎಂಬ ಭ್ರಮೆಗೆ ಸಿಲುಕಿದಳು. ರಾತ್ರಿಯ ನಿದ್ದೆಯನ್ನೇ ಮರೆತುಬಿಟ್ಟಳು. ಬೆಳಗಿನ ಹೊತ್ತು ಮನೆಯ ಮುಂದಿನ ಅಂಗಳದಲ್ಲಿ ಅವಳನ್ನು ಕಾಣುವುದು ಸಾಧ್ಯವಿತ್ತು. ಭಯಾನಕ ಕನಸುಗಳಿಂದ ನಿದ್ದೆ ಮಾಡಲೂ ಹೆದರುತ್ತಿದ್ದಳು. ಇಂಗ್ಲಿಷರ ಭಯಂಕರ ನಾಯಿಗಳು ಕಿಟಕಿಯಿಂದ ತೋರಿಬಂದು ಕಬ್ಬಿಣದ ಸಲಾಕೆಗಳಿಂದ ಬರೆ ಹಾಕುತ್ತಾರೆಂಬ ಕನಸಿಗೆ ಹೆದರಿ ನಿದ್ದೆ ಮಾಡುವುದನ್ನೇ

ಬಿಟ್ಟುಬಿಟ್ಟಿದ್ದಳು. ಅವಳ ಗಂಡ ತನ್ನ ಸಂಪಾದನೆಯ ಬಹುದೊಡ್ಡ ಭಾಗವನ್ನು ಅವಳ ಔಷದೋಪಚಾರಗಳಿಗೇ ಖರ್ಚುಮಾಡುತ್ತಿದ್ದ. ಅವಳ ನೋವನ್ನು ಮರೆಸಲು, ಮನರಂಜನೆಯ ಸಾಧನಗಳಿಗೆ ಖರ್ಚು ಮಾಡುತ್ತಿದ್ದ. ಕಡೆಯಲ್ಲಿ ತನ್ನ ವ್ಯಾಪಾರವನ್ನೆಲ್ಲ ಮಾರಿಬಿಟ್ಟು ಕುಟುಂಬದೊಂದಿಗೆ, ಸಮುದ್ರದಿಂದ ದೂರವಿದ್ದ ಬೆಟ್ಟದ ತಪ್ಪಲು ಪ್ರದೇಶದಲ್ಲಿ ರೆಡ್ ಇಂಡಿಯನ್ನರು ವಾಸಿಸುತ್ತಿದ್ದ ಪ್ರಶಾಂತವಾದ ಸ್ಥಳದಲ್ಲಿ ನೆಲೆಯೂರಿದ. ಅಲ್ಲಿ ತನ್ನ ಹೆಂಡತಿಗಾಗಿ ಕಿಟಕಿಗಳೇ ಇಲ್ಲದ, ಕಡಲ್ಗಳ್ಳರಿಗೆ ಒಳಗೆ ಬರಲು ಸಾಧ್ಯವೇ ಆಗದ ರೀತಿಯಲ್ಲಿ ಕೊಠಡಿಯೊಂದನ್ನು ಕಟ್ಟಿಸಿದ.

ಕಾಣದಂತಿದ್ದ ಆ ಊರಿನಲ್ಲಿ, ಸ್ಥಳೀಯ ತಂಬಾಕು ಬೆಳೆಗಾರನೊಬ್ಬ ಡಾನ್ ಜೋಸ್ ಆರ್ಕಾಡಿಯೋ ಎಂಬುವವನು ಕೆಲಕಾಲದಿಂದ ನೆಲೆಸಿದ್ದ. ಆ ವ್ಯಕ್ತಿಯ ಜೊತೆ ಉರ್ಸುಲಾಳ ಮುತ್ತಜ್ಜನ ತಂದೆ ಸ್ನೇಹ ಬೆಳೆಸಿದ್ದ ಮತ್ತು ಅವರು ವ್ಯಾಪಾರದಲ್ಲಿ ಪಾಲುದಾರರೂ ಆಗಿದ್ದರು. ವ್ಯಾಪಾರವೂ ಚೆನ್ನಾಗಿ ಕುದುರಿತ್ತು. ಸ್ವಲ್ಪ ಸಮಯದಲ್ಲಿಯೇ ಸಾಕಷ್ಟು ಸಂಪತ್ತನ್ನು ಗಳಿಸಿ ಶ್ರೀಮಂತರೆನಿಸಿಕೊಂಡರು. ಹಲವು ಶತಮಾನಗಳ ನಂತರ, ಸ್ಥಳೀಯ ತಂಬಾಕು ಬೆಳೆಗಾರನ ಮರಿಮಗ ಅರಗೋನೀಸನ ಮರಿಮಗಳನ್ನು ಮದುವೆಯಾಗಿದ್ದ. ಆದ್ದರಿಂದಲೇ ಉರ್ಸುಲಾ ತನ್ನ ಗಂಡನ ಹುಚ್ಚು ಕನಸುಗಳಿಂದ ಬೇಸತ್ತಾಗ, ಮುನ್ನೂರು ವರ್ಷಗಳ ಹಿಂದಕ್ಕೆ ಜಿಗಿದು ಕಡಲ್ಗಳ್ಳ ಫ್ರಾನ್ಸಿಸ್ ಡ್ರೇಕ್ ರಿಯೋಹಚಾದ ಮೇಲೆ ಆಕ್ರಮಣ ಮಾಡಿದ ಸಂದರ್ಭವನ್ನು ನೆನಪಿಸಿಕೊಂಡು ಹಿಡಿಶಾಪ ಹಾಕುತ್ತಿದ್ದಳು. ಆದರೆ ಅವಳ ಈ ಸಿಟ್ಟು ತನ್ನೊಳಗೆ ತಾನೇ ಸಮಾಧಾನ ತಂದುಕೊಳ್ಳುವ ಉದ್ದೇಶದಿಂದಲ್ಲದೆ ಬೇರೆಯಾಗಿರಲಿಲ್ಲ. ಹಾಗೆ ನೋಡಿದರೆ ಅವಳು ತನ್ನ ಗಂಡನನ್ನು ಅತಿಯಾಗಿ ಪ್ರೀತಿಸುತ್ತಿದ್ದಳು. ಅದಕ್ಕೆಂದೇ ಅವರಿಬ್ಬರ ನಡುವಿನ ಸಂಬಂಧ ಕಡೆಯವರೆಗೂ ಗಟ್ಟಿಯಾಗಿತ್ತು. ಅವರಿಬ್ಬರದೂ ದಾಯಾದಿ ಸಂಬಂಧವಾಗಿತ್ತು. ಅವರಿಬ್ಬರೂ ಎಳೆತನದಿಂದಲೂ, ಅವರ ಪೂರ್ವಿಕರು ಇದ್ದ ಊರಿನಲ್ಲಿಯೇ ಒಟ್ಟಿಗೆ ಬೆಳೆದರು. ಅವರ ದುಡಿಮೆ, ಉತ್ತಮ ಸಂಸ್ಕಾರಗಳಿಂದಾಗಿ ತಮ್ಮೂರನ್ನು ಇಡೀ ಪ್ರಾಂತದಲ್ಲಿಯೇ ಮಾದರಿ ಪಟ್ಟಣವಾಗಿ ರೂಪಿಸಿದರು. ಹುಟ್ಟಿದಾಗಲೇ ಅವರ ಮದುವೆಯ ಭವಿಷ್ಯ ನುಡಿದಿದ್ದರೂ, ಅವರಿಬ್ಬರೂ ಮದುವೆಗೆ ಇಷ್ಟಪಟ್ಟರೂ ಅವರ ಬಂಧುಗಳು ಅದನ್ನು ವಿರೋಧಿಸಿದರು. ಈ ರೀತಿ ವಿರೋಧಿಸಲು ಕಾರಣವೆಂದರೆ ಅವರಿಗಿದ್ದ ಭಯ. ಅದೇನೆಂದರೆ ಶತಮಾನಗಳಿಂದ ಕಾಯ್ದುಕೊಂಡುಬಂದ ವಂಶದ ಪಾವಿತ್ರ್ಯತೆ, ಅಂತರ್ಜಾತೀಯ ವಿವಾಹದಿಂದ ಅಪವಿತ್ರವಾಗುವುದು ಎಂಬುದಾಗಿತ್ತು. ಇದಕ್ಕೆ ಹಿಂದೆ ನಡೆದ ಪ್ರಸಂಗವೇ ಸಾಕ್ಷಿಯಾಗಿತ್ತು. ಇಗ್ವಾನಾ ಅಥವಾ ಹಲ್ಲಿ ಜಾತಿಯ ಮಗು ಹುಟ್ಟುವ ಸಾಧ್ಯತೆ ಇತ್ತು. ಉರ್ಸುಲಾ ಸಂಬಂಧಿಯೊಬ್ಬಳು ಹೀಗೆಯೇ ಅಂತರ್ಜಾತೀಯ ವಿವಾಹವಾಗಿ ವಿಚಿತ್ರ ರೀತಿಯ ಮಗುವನ್ನು ಪಡೆದಿದ್ದಳು. ನಲವತ್ತನೇ ವಯಸ್ಸಿನವರೆಗೂ ಬದುಕಿದ್ದ ಅವನು ಸಡಿಲವಾದ ಷರಾಯಿಯನ್ನೇ ಧರಿಸುತ್ತಿದ್ದ ಕಾರಣ ಸಾಯುವವರೆಗೆ ರಕ್ತಸ್ರಾವಕ್ಕೆ ಗುರಿಯಾಗಿದ್ದ. ಅವನಿಗೆ ಕಾರ್ಕ್‌ಸ್ಕ್ರೂ ಮಾದರಿಯ ಬಾಲವಿದ್ದು ಅದರ ತುದಿಯಲ್ಲಿ ಕೂದಲಿನ ಗುಚ್ಛವಿತ್ತು. ಒಮ್ಮೆ ಕ್ಷೌರಿಕ ಅದನ್ನು ತನ್ನ ಕತ್ತರಿಯಿಂದ ಕತ್ತರಿಸಿದ ವಿಷಯವನ್ನು ಹೇಳುವವರೆಗೂ ತನಗೆ

ಬಾಲವಿದ್ದುದು ಗೊತ್ತೇ ಇರಲಿಲ್ಲ. ಆದರೆ ಜೋಸ್ ಆರ್ಕಾಡಿಯೋ ಇಂಥ ವಿಷಯಗಳಿಗೆಲ್ಲ ಮಹತ್ವಕೊಡಲೇ ಇಲ್ಲ. ಯಾರು ಏನೇ ಹೇಳಿದರೂ, "ನನಗೆ ಹಂದಿ ಮರಿಯಂಥ ಮಗು ಹುಟ್ಟಿದರೂ ಅಭ್ಯಂತರವಿಲ್ಲ ಎಂದಿದ್ದ. ಈ ಮಾತನ್ನು ತನ್ನ ಹತ್ತೊಂಭತ್ತನೇ ವಯಸ್ಸಿನಿಂದಲೂ ಹೇಳುತ್ತಲೇ ಬಂದಿದ್ದ. ಅಂತೂ ಇಂತೂ ಕಡೆಗೂ ಅವರಿಬ್ಬರ ಮದುವೆ ಬ್ಯಾಂಡ್ ಸೆಟ್, ಬಾಣಬಿರುಸುಗಳಿಂದ, ಮೂರು ದಿನಗಳವರೆಗೆ ಅತ್ಯಂತ ವಿಜೃಂಭಣೆಯಿಂದ ನಡೆಯಿತು. ಉರ್ಸುಲಾ ತಾಯಿ ಭಯ ಹುಟ್ಟಿಸುವ ಭವಿಷ್ಯವನ್ನು ಪದೆ ಪದೇ ಹೇಳದೆ ಇದ್ದಿದ್ದರೆ, ಅವರಿಬ್ಬರದೂ ಸುಖಿ ಸಂಸಾರವಾಗುತ್ತಿತ್ತು. ಹಂದಿಯಂತಹ ಮಗು ಹುಟ್ಟುವ ಭವಿಷ್ಯದ ನುಡಿಯಿಂದ ಎಷ್ಟು ಹೆದರಿಸಿ ಬಿಟ್ಟಿದ್ದಳೆಂದರೆ, ಬ್ಯುಂಡಿಯಾನ ಜೊತೆ ಲೈಂಗಿಕ ಸಂಪರ್ಕವೇ ಇಲ್ಲದಂತೆ ಮಾಡಿದ್ದಳು. ಅವನೊಂದಿಗೆ ಸಂಪರ್ಕವನ್ನು ನಿಷೇಧಿಸಿದ್ದಷ್ಟೇ ಅಲ್ಲದೆ ಅಜಾಗರೂಕತೆಯಿಂದ ಸಂಭವಿಸಬಹುದಾದ ಅನಾಹುತಗಳನ್ನು ತಡೆಯಲು, ವಿಶೇಷಬಗೆಯ ಒಳಉಡುಪನ್ನು ಹೊಲಿಸಿಕೊಟ್ಟು ಎಚ್ಚರಿಸಿದ್ದಳು. ಮುಂಭಾಗದಲ್ಲಿ ಭದ್ರವಾದ ಚರ್ಮದ ಪಟ್ಟಿಯನ್ನೂ ಅಳವಡಿಸಿದ್ದುದನ್ನು ಉರ್ಸುಲಾ ಧರಿಸುತ್ತಿದ್ದಳು. ಒಂದಷ್ಟು ತಿಂಗಳು ಬಹಳ ಜಾಗರೂಕತೆಯಿಂದ ನಡೆದುಕೊಂಡರು. ಬೆಳಗಿನ ಹೊತ್ತು ಅವನು ಬೆಳಗಿನ ಹೊತ್ತು ಕಾಳಗದ ಹುಂಜಗಳನ್ನು ನೋಡಿಕೊಳ್ಳುವಲ್ಲಿ ತೊಡಗುತ್ತಿದ್ದ ಮತ್ತು ಅವಳು ತನ್ನ ತಾಯಿ ಜೊತೆ ಕಸೂತಿ ಕೆಲಸದಲ್ಲಿ ಮಗ್ನಳಾಗಿರುತ್ತಿದ್ದಳು. ಆದರೆ ಒಂದು ರಾತ್ರಿ ಗಂಡ ಹೆಂಡಿರ ನಡುವೆ ಸಾಕಷ್ಟು ಕೊಸರಾಟ ನಡೆದು ಕಡೆಗೆ ಹತ್ತಿಕ್ಕಲಾಗದ ಸಹಜ ಪ್ರಚೋದನೆಯಿಂದ ಮೈಮರೆತು ಒಂದಾದರು. ಜನರು ಬ್ಯುಂಡಿಯಾನನ್ನು ನಪುಂಸಕ ಎಂದು ಪುಕಾರು ಹುಟ್ಟಿಸಿದ್ದೂ ಕೂಡ ಈ ತರದ ಬಲವಂತಕ್ಕೆ ಕಾರಣವಾಯಿತು. ಒಮ್ಮೆ ಬ್ಯುಂಡಿಯಾ "ನೋಡು, ಜನ ಏನೆಲ್ಲ ಮಾತಾಡುತ್ತಿದ್ದಾರೆ" ಎಂದು ಉರ್ಸುಲಾಗೆ ಹೇಳಿದ. "ಮಾತಾಡಲಿ ಬಿಡಲಿ, ಅವರು ಹೇಳಿದ್ದು ನಿಜವಾಗಿರಲಿಲ್ಲವಲ್ಲ".

ಈ ಥರದ ಮಾತುಕತೆ, ಕೊಸರಾಟ, ವಾಗ್ವಾದಗಳು ಒಂದಾರು ತಿಂಗಳವರೆಗೂ ಮುಂದುವರೆದಿತ್ತು. ಒಂದು ಭಾನುವಾರ ಇದ್ದಕ್ಕಿದ್ದಂತೆ ಬ್ಯುಂಡಿಯಾ ಪ್ರುಡೆನ್ಷಿಯೋ ಆಗ್ವಿಲಾರನ ವಿರುದ್ಧ ಹುಂಜ ಕಾಳಗದಲ್ಲಿ ಗೆದ್ದುಬಿಟ್ಟ. ತನ್ನ ಹುಂಜ ಸೋತಿದ್ದಕ್ಕಾಗಿ ರೋಷದಿಂದ, ತನ್ನ ಮಾತುಗಳು ಎಲ್ಲರಿಗೂ ಕೇಳಿಸುವಂತಾಗಲಿ ಎಂದು ಜೋಸ್‌ನಿಂದ ದೂರಸರಿದು ಅಖಾಡ ಬಳಿ ಬಂದು ನಿಂತ.

'ಅಭಿನಂದನೆ!, ಹೋಗಲಿ ಬಿಡು ನಿನ್ನ ಹುಂಜವಾದರೂ ನಿನ್ನ ಹೆಂಡತಿಗೆ ಉಪಕಾರ ಮಾಡಬಹುದು' – ಎಂದ.

ಜೋಸ್ ಆರ್ಕಾಡಿಯೋ ತನ್ನ ಹುಂಜವನ್ನೆತ್ತಿಕೊಂಡು "ಮತ್ತೆ ಬರ್ತೀನಿ ಇರು" – ಎಂದು ಎಲ್ಲರಿಗೂ ಕೇಳಿಸುವಂತೆ ಹೇಳಿದ.

"ಹೋಗಲಿ ಮನೆಗೆ ಹೋಗಿ ಆಯುಧ ತೆಗೆದುಕೊಂಡು ಬಾ ಯಾಕೆಂದರೆ ನಾನು ನಿನ್ನನ್ನು ಕೊಲ್ಲುವವನಿದ್ದೇನೆ".

ಹತ್ತು ನಿಮಿಷಗಳ ತರುವಾಯ, ತನ್ನಜ್ಜನ ಭರ್ಜಿಯನ್ನು ಹಿಡಿದುಬಂದ. ಅಖಾಡಾದ ಬಾಗಿಲ ಬಳಿ ಅರ್ಧದಷ್ಟು ಜನ ಸೇರಿದ್ದರು. ಫ್ರುಡೆನ್ಷಿಯೋ ಅವನಿಗಾಗಿ ಕಾಯುತ್ತಿದ್ದ. ತನ್ನನ್ನು ರಕ್ಷಿಸಿಕೊಳ್ಳಲು ಅವಕಾಶವಾಗಲಿಲ್ಲ. ಜೋಸ್ ಆರ್ಕಾಡಿಯೋ ತನ್ನೆಲ್ಲ ಬಲವನ್ನು ಉಪಯೋಗಿಸಿ ಹೋರಿ ಬಲದೊಂದಿಗೆ ಮೊದಲು ತಾನು ಚಿರತೆಗಳನ್ನು ಗುರಿಯಿಟ್ಟು ಕೊಂದ ಮಾದರಿಯಲ್ಲಿ ಭರ್ಜಿಯನ್ನೆಸೆದು ಆಗ್ವಿಲಾರ್‌ನನ್ನು ಸೀಳಿ ಕೊಂದ. ಆ ದಿನ ರಾತ್ರಿ ಹೆಣದ ಕಾವಲು ಕೆಲಸ ನಡೆದಿದ್ದಾಗ ಜೋಸ್ ಆರ್ಕಾಡಿಯೋ ಬ್ಯುಂಡಿಯಾ ತನ್ನ ಕೋಣೆಯತ್ತ ಹೆಜ್ಜೆ ಹಾಕಿದ. ಅವನು ಒಳಗೆ ಪ್ರವೇಶಿಸುತ್ತಿದ್ದ ಸಮಯಕ್ಕೆ ಸರಿಯಾಗಿ ಉರ್ಸುಲಾ ಭದ್ರಕವಚವಾಗಿದ್ದ ಒಳ ಉಡುಪನ್ನು ಹಾಕಿಕೊಳ್ಳುತ್ತಿದ್ದಳು. ಭರ್ಜಿಯನ್ನು ಅವಳೆಡೆ ಗುರಿ ಮಾಡಿ "ತೆಗೆ ಅದನ್ನು ತೆಗೆದು ಆಚೆಗೆ ಎಸೆ" ಎಂದು ಅಬ್ಬರಿಸಿದ. ತನ್ನ ಗಂಡ ಅಂದುಕೊಂಡದ್ದನ್ನು ಮಾಡದೆ ಬಿಡಲಾರ. ಮಾಡಿಯೇ ಮಾಡುತ್ತಾನೆ ಎಂದು ತಿಳಿದಿದ್ದ ಉರ್ಸುಲಾ "ಏನಾದರೂ ಅನಾಹುತ ಸಂಭವಿಸಿದರೆ ಅದಕ್ಕೆ ನೀನೇ ಹೊಣೆ" ಎಂದು ಗೊಣಗಿದಳು. ಬ್ಯುಂಡಿಯಾ ಕೈಲಿದ್ದ ಭರ್ಜಿಯನ್ನು ನೆಲಕ್ಕೆ ಚುಚ್ಚಿ ನಿಲ್ಲಿಸಿದ.

"ನೀನು ಬಾಲವಿರುವ ಮಕ್ಕಳನ್ನು ಹೆತ್ತರೆ, ಅವುಗಳನ್ನು ಸಾಕೋಣ. ಆದರೆ ಇದರಿಂದಾಗಿ, ಇನ್ನು ಮುಂದೆ ಯಾರನ್ನು ಕೊಲ್ಲುವುದಿಲ್ಲ. ಕೊಲ್ಲಲು ಸಿದ್ಧನೂ ಇಲ್ಲ" ಎಂದ.

ಹಿತವಾದ ರಾತ್ರಿ, ಇಬ್ಬರೂ ಮೈಮರೆತು, ಲೈಂಗಿಕ ಸುಖದಲ್ಲಿ ಉನ್ಮತ್ತತೆಯಲ್ಲಿ ಬೆಳಗಿನ ತನಕ ಹಾಸಿಗೆಯಲ್ಲಿ ಹೊರಳಾಡಿದರು. ಆದರೆ ಆಕಡೆ ಆಗ್ವಿಲಾರ್‌ನ ಮಕ್ಕಳು, ಬಂಧುಗಳು ಅವನ ಸಾವಿಗಾಗಿ ರೋದಿಸುತ್ತಿದ್ದರು.

ಇಬ್ಬರಿಗೂ ಇದು ಗೌರವದ ಪ್ರಶ್ನೆಯಾಗಿತ್ತಾದರೂ ಒಳಗೇನೋ ಒಂದು ಬಗೆಯ ಹೆದರಿಕೆ ಆವರಿಸಿತ್ತು. ಒಂದು ರಾತ್ರಿ ಉರ್ಸುಲಾ ನೀರು ಕುಡಿಯಲೆಂದು ಎದ್ದು ಬಂದಳು. ನೀರಿನ ಹೂಜಿಯ ಬಳಿ ಫ್ರುಡೆನ್ಷಿಯೋ ಆಗ್ವಿಲಾರ್‌ನನ್ನು ಕಂಡಳು. ಮುಖದ ಮೇಲೆ ವಿಷಾದದ ಛಾಯೆಯಿತ್ತು. ಗಂಟಲಿನ ಮೇಲಿನ ತೂತನ್ನು ಹುಲ್ಲಿನ ಕಟ್ಟಿನಿಂದ ಮುಚ್ಚಲು ಪ್ರಯತ್ನಿಸುತ್ತಿದ್ದ. ಅದನ್ನು ನೋಡಿ ಅವಳು ಹೆದರಲಿಲ್ಲ. ಆದರೆ ಮರುಗಿದಳು. ಮರಳಿ ಕೋಣೆ ಹೊಕ್ಕು ತಾನು ಕಂಡದ್ದನ್ನು ಗಂಡನಿಗೆ ವಿವರಿಸಿದಳು. ಆದರೆ ಅವನು ಅದನ್ನು ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲ. "ಇದರರ್ಥ ನಮ್ಮ ಅಂತಃಪ್ರಜ್ಞೆಯ ಭಾರವನ್ನು ಸಹಿಸಿಕೊಳ್ಳಲು ಆಗುತ್ತಿಲ್ಲ ಎಂಬುದು"

ಎರಡು ರಾತ್ರಿಗಳ ನಂತರ ಮತ್ತೆ ಫ್ರುಡೆನ್ಷಿಯೋ ಉರ್ಸುಲಾಗೆ ಕಾಣಿಸಿಕೊಂಡ. ಫ್ರುಡೆನ್ಷಿಯೋ ಆಗ್ವಿಲಾರ್ ಬಚ್ಚಲು ಮನೆಯಲ್ಲಿ, ಹುಲ್ಲಿನ ಕಟ್ಟಿನಿಂದ, ಹೆಪ್ಪುಗಟ್ಟಿದ್ದ ಗಂಟಲಿನಿಂದ ರಕ್ತದ ಕಲೆಗಳನ್ನು ತೊಳೆಯುತ್ತಿದ್ದ. ಮತ್ತೊಂದು ರಾತ್ರಿ ಮಳೆಯಲ್ಲಿ ಅಡ್ಡಾಡುತ್ತಿದ್ದುದನ್ನು ನೋಡಿದಳು. ಹೆಂಡತಿಯ ಈ ಭ್ರಮೆಗಳಿಂದ ಬೇಸತ್ತ ಬ್ಯುಂಡಿಯಾ ಭರ್ಜಿಯನ್ನು ಕೈಗೆತ್ತಿಕೊಂಡು ಅಂಗಳದತ್ತ ಹೆಜ್ಜೆ ಹಾಕಿದ. ನೋಡಿದರೆ, ಸಪ್ಪೆ ಮುಖ ಹಾಕಿಕೊಂಡು ನಿಂತಿದ್ದ ಆಗ್ವಿಲಾರ್ ಕಾಣಿಸಿದ.

"ಹಾಳಾಗಿ ಹೋಗು. ನೀನು ಎಷ್ಟು ಸಲ ಹಿಂತಿರುಗಿ ಬಂದರೂ ಅಷ್ಟೂ ಸಲ ನಿನ್ನನ್ನು ಕೊಲ್ಲುತ್ತೇನೆ" ಎಂದು ಅರಚಿದ.

ಆಗ್ವಿಲಾರ್ ಅಲ್ಲಿಂದ ಹೋಗಲೂ ಇಲ್ಲ. ಬ್ಯುಂಡಿಯಾ ಭರ್ಜಿ ಎಸೆಯಲೂ ಇಲ್ಲ. ಆದರೆ ಅಂದಿನಿಂದ ಅವನಿಗೆ ನಿದ್ದೆಯೆಂಬುದು ಇಲ್ಲವಾಯಿತು. ಆಗ್ವಿಲಾರ್‌ನ ಶೋಕಪೂರಿತ ಮುಖ, ಬದುಕಿದ್ದವರೊಂದಿಗೆ ಸುಳಿದಾಡಬೇಕೆಂಬ ತವಕ, ತನ್ನ ಗಾಯವನ್ನು ನೀರಿನಿಂದ ತೊಳೆದು ತಣಿಸಿಕೊಳ್ಳಬೇಕೆಂಬ ಪ್ರಯತ್ನ, ಎಲ್ಲಾದರೂ ನೀರು ಸಿಗಬಹುದೇನೋ ಎಂಬ ಆಸೆಯಿಂದ ನಡೆಸಿದ ಹುಡುಕಾಟ – ಮುಂತಾದವುಗಳನ್ನು ಬ್ಯುಂಡಿಯಾ ಮರೆಯಲು ಸಾಧ್ಯವಾಗಲಿಲ್ಲ.

"ಪಾಪ ಅವನಿಗೆ ತುಂಬ ನೋವಾಗುತ್ತಿರಬೇಕು – ಒಂಟಿತನ ಕಾಡುತ್ತಿರಬೇಕು – ಎನಿಸುತ್ತಿದೆ" ಎಂದು ಉರ್ಸುಲಾಗೆ ಹೇಳಿದ. ಉರ್ಸುಲಾಗೂ ತೀರಾ ಕೆಡುಕೆನಿಸುತ್ತಿತ್ತು. ಮತ್ತೊಮ್ಮೆ ಆಗ್ವಿಲಾರ್ ಕಾಣಿಸಿಕೊಂಡು, ಹೂಜಿ ಮೇಲಿನ ಮುಚ್ಚಳ ತೆಗೆದು ನೀರಿಗಾಗಿ ಇಣುಕಿ ನೋಡುತ್ತಿದ್ದುದನ್ನು ಗಮನಿಸಿದಳು. ಅದನ್ನು ಕಂಡು ಮರುಗಿ, ಅಂದಿನಿಂದ ಪ್ರತಿದಿನಾ ಮನೆಯಲ್ಲಿ, ಅಲ್ಲಲ್ಲಿ ನೀರಿನ ಹೂಜಿಗಳನ್ನು ಇರಿಸಿದಳು. ಒಂದು ದಿನ ರಾತ್ರಿ ಬ್ಯುಂಡಿಯಾ ತನ್ನ ಕೊಠಡಿಯಲ್ಲಿಯೇ ಆಗ್ವಿಲಾರ್ ಗಾಯ ತೊಳೆಯುತ್ತಿದ್ದುದನ್ನು ನೋಡಿದಾಗ ಅವನಿಗೆ ತಡೆದುಕೊಳ್ಳಲು ಆಗಲಿಲ್ಲ.

"ಪರವಾಗಿಲ್ಲ ಫ್ರುಡೆನ್ಸಿಯೋ ..... ನಾವು ಈ ಊರನ್ನೇ ಬಿಟ್ಟು ಎಷ್ಟು ದೂರ ಸಾಧ್ಯವೋ ಅಷ್ಟು ದೂರ ಹೋಗಿ ಬಿಡುತ್ತೇವೆ. ಇಲ್ಲಿಗೆ ನಾವು ಮತ್ತೆ ಬರುವುದಿಲ್ಲ. ಸಮಾಧಾನದಿಂದ ಹೊರಟು ಹೋಗು" ಎಂದ.

ಹೀಗಾಗಿಯೇ ಅವರು ಪರ್ವತ ಶ್ರೇಣಿಯನ್ನು ದಾಟಿ ಬಂದದ್ದು. ಜೋಸ್ ಆರ್ಕಾಡಿಯೋನ ಹಲವು ಮಂದಿ ಸ್ನೇಹಿತರು ಅವನ ಹಾಗೆ ಇದ್ದ ಉತ್ಸಾಹದ ಯುವಕರು, ಸಾಹಸಪ್ರಿಯರು ತಾವಿದ್ದ ಮನೆಗಳನ್ನು ಕೆಡವಿ, ನೆಲಸಮಮಾಡಿ ಇದ್ದಬದ್ದ ವಸ್ತುವಡವೆಯನ್ನು ಗಂಟುಮೂಟೆ ಕಟ್ಟಿಕೊಂಡು, ತಮ್ಮ ಹೆಂಡತಿ ಮಕ್ಕಳೊಂದಿಗೆ ಯಾವ ಭರವಸೆಯೂ ಇಲ್ಲದಿದ್ದ ಪ್ರದೇಶದೆಡೆಗೆ ಸಾಗಿದರು. ತನ್ನ ಭಲ್ಲೆಯಿಂದಲೇ, ತನ್ನ ಕಾಳಗದ ಹುಂಜಗಳ ಕತ್ತನ್ನು ಆಗ್ವಿಲಾರ್‌ನ ಆತ್ಮಕ್ಕೆ ಶಾಂತಿ ದೊರೆಯಲೆಂಬ ಕಾರಣದಿಂದ ಸೀಳಿ ಎಸೆದು, ಕಡೆಗೆ ಭಲ್ಲೆಯನ್ನು ಎಲ್ಲೋ ಒಂದು ಕಡೆ ಸಮಾಧಿ ಮಾಡಿದ. ಉರ್ಸುಲಾ ಕೇವಲ ಟ್ರಂಕೊಂದನ್ನು ಮಾತ್ರವೇ ಜೊತೆಗಿರಿಸಿಕೊಂಡಳು. ಅದರೊಳಗೆ ಮದುವೆಯ ಉಡುಪುಗಳನ್ನು, ಮನೆಗೆ ಬೇಕಾದ ಪಾತ್ರೆ ಪರಡಿಗಳನ್ನು ತಂದೆಯಿಂದ ಉಡುಗೊರೆಯಾಗಿ ಬಂದಿದ್ದ ಚಿನ್ನದ ನಾಣ್ಯಗಳಿದ್ದ ಪೆಠಾರಿಯನ್ನು ಇರಿಸಿಕೊಂಡಿದ್ದಳು. ಅವರ ಪ್ರಯಾಣಕ್ಕೆ ಯಾವುದೇ ಗೊತ್ತುಗುರಿ ಇರಲಿಲ್ಲ. ಆದರೂ ಹಾದಿಯಲ್ಲಿ ತಮಗೆ ಪರಿಚಯವಿರುವ ಯಾರೊಬ್ಬರೂ ಎದುರಾಗಬಾರದೆಂದು ಯೋಚಿಸಿ ರಿಯೋಹಚಾದ ವಿರುದ್ಧ ದಿಕ್ಕಿನಲ್ಲಿ ಹೆಜ್ಜೆ ಹಾಕಿದರು. ಅಸ್ಪಷ್ಟ ಗುರಿಯೊಂದಿಗೆ ಸಾಗಿದ ಪ್ರಯಾಣ ಅದಾಗಿತ್ತು. ಹದಿನಾಲ್ಕು ತಿಂಗಳ ನಂತರ ಕೋತಿಯ ಮಾಂಸ ಹಾವಿನ ಸಾರುಗಳಿಂದ ಹೊಟ್ಟೆ

ಕೆಡಿಸಿಕೊಂಡ ಉರ್ಸುಲಾ ಎಲ್ಲ ರೀತಿಯಿಂದಲೂ ಸಾಮಾನ್ಯ ಮನುಷ್ಯ ಲಕ್ಷಣಗಳನ್ನೇ ಹೊಂದಿದ್ದ ಮಗುವಿಗೆ ಜನ್ಮಕೊಟ್ಟಳು. ಉಬ್ಬಿದ ಹೊಟ್ಟೆ, ಊದಿದ ಕೈಕಾಲುಗಳಿಂದಾಗಿ ಅವಳಿಗೆ ನಡೆಯಲು ಸಾಧ್ಯವಿಲ್ಲದಿರಲು, ಅವಳು ಮಲಗಿದ್ದ ಹಗ್ಗದ ಜೋಲಿಯನ್ನು ಇಬ್ಬರು ಹೊತ್ತು ನಡೆದಿದ್ದರು. ಬೆನ್ನಿಗಂಟಿದ ಅವರ ಹೊಟ್ಟೆಗಳು, ಬಡಕಲು ದೇಹಗಳನ್ನು ನೋಡಿ ಕನಿಕರವೆನಿಸುತ್ತಿದ್ದರೂ ಅವರು ಮಾತ್ರ ಬಹಳ ಉತ್ಸಾಹದಿಂದ, ದಣಿವಿಲ್ಲದೆ ಹೆಜ್ಜೆಗಳನ್ನು ಹಾಕುತ್ತಿದ್ದರು. ಅವರಿಗೆ ಇದೆಲ್ಲ ಒಂದು ಆಟದಂತೆನಿಸಿತ್ತು. ಸುಮಾರು ಎರಡೂವರೆ ವರ್ಷ ಹೀಗೆ ಸಾಗಿದ ಮೇಲೆ ಒಂದು ದಿನ ಪಶ್ಚಿಮ ಪರ್ವತ ಶ್ರೇಣಿಯನ್ನು ದಾಟಿದ ಮೊದಲ ಮಾನವ ಜೀವಿಗಳಾಗಿದ್ದರು. ಮಂಜು ಮಂಜಾದ ಶಿಖರದಾಚೆಗೆ ವಿಸ್ತಾರವಾದ ನೀರಿನ ಹರವಿದ್ದು, ಅದು ಪ್ರಪಂಚದ ಮತ್ತೊಂದು ಭಾಗಕ್ಕೂ ಹಬ್ಬಿತ್ತು. ಅದು ಜೌಗು ಪ್ರದೇಶವಾಗಿತ್ತು ಮಾತ್ರ. ಸಮುದ್ರ ಅವರಿಗೆ ಕಾಣಸಿಗಲಿಲ್ಲ.

ಒಂದು ದಿನ ರಾತ್ರಿ ಗೊತ್ತು ಗುರಿಯಿಲ್ಲದ ಅಲೆದಾಟದ ನಂತರ, ತಾವು ದಾರಿಯಲ್ಲಿ ಕಂಡ ಕಟ್ಟಕಡೆಯ ಇಂಡಿಯನ್‌ರಿಂದ ದೂರದಲ್ಲಿ ಸಾಗಿ, ಹೆಪ್ಪುಗಟ್ಟಿ ಗಾಜಿನ ಪದರದಂತೆ ಕಾಣುತ್ತಿದ್ದ ನದಿಯ ದಂಡೆಯಲ್ಲಿ ಬೀಡುಬಿಟ್ಟರು. ಕೆಲ ವರ್ಷಗಳ ನಂತರ ಕ್ಯಾಪ್ಟನ್ ಅರೆಲಿಯಾನೋ ಬ್ಯುಂಡಿಯಾ ಸಿವಿಲ್‌ವಾರ್ ನಡೆಯುತ್ತಿದ್ದ ಸಂದರ್ಭದಲ್ಲಿ, ರಿಯೋಹಚಾದವರನ್ನು ಅಚ್ಚರಿಗೊಳಿಸಲು ಅದೇ ಮಾರ್ಗದಲ್ಲಿ ಆರು ದಿನಗಳ ಪ್ರಯಾಣ ಮಾಡಿದ ಮೇಲೆ ಮೂರ್ಖತನದ ಅನುಭವವಾಯಿತು. ಅಷ್ಟಾದರೂ ಅವರು ಅಂದು ಅಲ್ಲಿ ಬಿಡಾರ ಹೂಡಿದ ರಾತ್ರಿ, ಅವನ ತಂದೆಯ ಆತಿಥೇಯ ಎಲ್ಲವನ್ನೂ ಕಳೆದುಕೊಂಡು ಅಪಘಾತಕ್ಕೀಡಾದ ಹಡಗಿನಂತೆ, ದಿಕ್ಕುಕಾಣದಂತೆ ತೋರಿದ. ಆದರೂ ಅಲ್ಲಿಗೆ ಬರುವಷ್ಟರಲ್ಲಿ ಅವರ ಸಂಖ್ಯೆ ಸಾಕಷ್ಟು ಬೆಳೆದಿತ್ತು. ಮುಪ್ಪಿನಿಂದ ಸಾಯುವುದಕ್ಕೂ ಅವರು ಸಿದ್ಧವಾಗಿದ್ದಂತೆ ಕಾಣಿಸಿದರು ಮತ್ತು ಹಾಗೆಯೇ ಮಾಡಿದರು. ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಆ ರಾತ್ರಿ ಕನಸೊಂದನ್ನು ಕಂಡ. ಆ ಕನಸಿನಲ್ಲಿ ಕನ್ನಡಿಗೋಡೆಗಳಿಂದಾದ ಮನೆಗಳಿಂದ ಕೂಡಿದ ಗದ್ದಲದನಗರವೊಂದು ಕಾಣಿಸಿತು. ಅದು ಯಾವುದೆಂಬುದನ್ನು ವಿಚಾರಿಸಿದಾಗ ಅವರೊಂದು ಹೆಸರು ಹೇಳಿದರು. ಅಂಥ ಹೆಸರನ್ನು ಅವನೆಂದೂ ಕೇಳಿರಲಿಲ್ಲ. ಅದಕ್ಕೆ ಯಾವ ಅರ್ಥವೂ ಇರಲಿಲ್ಲ. 'ಮಕೊಂಡೋ' – ಎಂಬ ಹೆಸರನ್ನು ಕೇಳಿದಾಗ ಮಾತ್ರ ಅದರಲ್ಲಿ ಯಾವುದೋ ಒಂದು ಅಲೌಕಿಕ ಶಕ್ತಿಯನ್ನು ಧ್ವನಿಸುವಂತಿತ್ತು. ಮಾರನೆಯ ದಿನ ಅವನು ತನ್ನವರಿಗೆ, ಸಮುದ್ರ ಸಿಗುವುದು ದುಸ್ಸಾಧ್ಯವೆಂಬ ಅಂಶವನ್ನು ಮನವರಿಕೆ ಮಾಡಿದ. ಕೂಡಲೇ ಅವನು ನದಿ ದಂಡೆ ಮೇಲೆ ತಂಪಾದ ಜಾಗ ನೋಡಿ, ಅಲ್ಲಿ ಬೆಳೆದ ಮರಗಿಡಗಳನ್ನೆಲ್ಲ ಕಡಿದು ಭೂಮಿಯನ್ನು ಸಮತಲ ಮಾಡಲು ಆದೇಶಿಸಿದ. ಅಲ್ಲಿ ಅವರೆಲ್ಲ ಸೇರಿ ಊರೊಂದು ಕಟ್ಟಿದರು. ಬ್ಯುಂಡಿಯಾಗೆ ಹಿಮಗಡ್ಡೆಯೊಂದು ಕಣ್ಣಿಗೆ ಬೀಳುವವರೆಗೆ ಕನ್ನಡಿ ಗೋಡೆಗಳಿಂದಾದ ಮನೆಗಳ ಕನಸನ್ನು ಅರ್ಥಮಾಡಿಕೊಳ್ಳಲು ಆಗಿರಲಿಲ್ಲ. ಇಷ್ಟರಲ್ಲಿ ದೊಡ್ಡ ಪ್ರಮಾಣದಲ್ಲಿ ಹಿಮಗಡ್ಡೆಗಳನ್ನು ತಯಾರಿಸಿ, ಅವುಗಳಿಂದ ಮನೆಗಳನ್ನು ಕಟ್ಟಿಕೊಳ್ಳಲು ಸಾಧ್ಯವಾಗಬಹುದು ಎಂದು ಯೋಚಿಸಿದ. ಇನ್ನು ಮುಂದೆ ಮಕಾಂಡೋ ಉಷ್ಣ ಪ್ರದೇಶವಾಗಿ ಇರಬೇಕಾಗುವುದಿಲ್ಲ. ಅದನ್ನು ಚಳಿಗಾಲದ ನಗರವಾಗಿ ಮಾರ್ಪಡಿಸಲು ಬಹುದೆಂದುಕೊಂಡ. ಆದಷ್ಟು ಬೇಗ ಹಿಮ(ಐಸ್)ದ ಕಾರ್ಖಾನೆಯನ್ನು

ಸ್ಥಾಪಿಸಬಹುದೆಂದುಕೊಂಡ. ಅದೇ ಹೊತ್ತಲ್ಲಿ ಮಕ್ಕಳ ವಿದ್ಯಾಭ್ಯಾಸದ ಚಿಂತೆ ಅವನನ್ನು ಆವರಿಸಿತ್ತು. ಅದರಲ್ಲಿಯೂ ಅರೆಲಿಯಾನೋ ರಸವಿಜ್ಞಾನದಲ್ಲಿ ಹೆಚ್ಚಿನ ಕುತೂಹಲ ತೋರುತ್ತಿದ್ದ. ಪ್ರಯೋಗಾಲಯವನ್ನು ಪೂರ್ತಿಯಾಗಿ ನಾಶಮಾಡಲಾಗಿತ್ತು. ಈಗ ಮೆಲ್‌ಕಿಯಾಡ್ಸ್ ಬಿಟ್ಟಿದ್ದ ಟಿಪ್ಪಣಿ ವಿವರಗಳ ಸಹಾಯದಿಂದ ಹೊಸದಾಗಿ, ಸಾವಧಾನವಾಗಿ ಪ್ರಯೋಗ ಪ್ರಯತ್ನಗಳಲ್ಲಿ ತೊಡಗಿಸಿಕೊಂಡಿದ್ದರು. ಹಲವು ಹಂತಗಳಲ್ಲಿ ಉರ್ಸುಲಾಳ ಚಿನ್ನ ಕರಗಿ ಮೂಸೆಗಳಿಗೆ ಮೆತ್ತಿಕೊಂಡಿದ್ದುದನ್ನು ಈಗ ಜಾಗರೂಕತೆಯಿಂದ ಪ್ರತ್ಯೇಕಿಸುವ ಪ್ರಯತ್ನವನ್ನು ಮಾಡುತ್ತಿದ್ದ. ಕಿರಿಯನಾದ ಜೋಸ್ ಆರ್ಕಾಡಿಯೋ ಈ ಒಂದು ಕೆಲಸದಲ್ಲಿ ಅಪರೂಪವಾಗಿ ಭಾಗಿಯಾಗುತ್ತಿದ್ದ. ತಂದೆ ಹಗಲು ರಾತ್ರಿ ಒಂದೇ ಸಮನೆ ನೀರಿನ ಪೈಪ್ ಕುರಿತು ಸಂಪೂರ್ಣವಾಗಿ (ಇಂತಹ ಪ್ರಯೋಗದಲ್ಲಿ) ತೊಡಗಿರುತ್ತಿದ್ದಾಗ ಹಟದೊಂದಿಗೆ ಹುಟ್ಟಿಸಿದ ಮೊದಲ ಮಗ ವಯಸ್ಸಿಗೆ ಮೀರಿದ ರೀತಿಯಲ್ಲಿ ಬೆಳೆದಿದ್ದವನು ಅಚ್ಚರಿಯೆನ್ನುವಂತೆ ಹರಯಕ್ಕೆ ಬಂದುಬಿಟ್ಟಿದ್ದ. ಧ್ವನಿಯೂ ಒಡೆದಿತ್ತು. ಮುಖದ ಮೇಲೆ ಚಿಗುರು ಮೀಸೆ ಮೂಡಿತ್ತು. ಒಂದು ದಿನ ರಾತ್ರಿ ಉರ್ಸುಲಾ ಅವನ ಕೋಣೆಯೊಳಗೆ ಪ್ರವೇಶಿಸಿದಳು. ಕಿರಿಯ ಜೋಸ್ ಬಟ್ಟೆ ಬದಲಾಯಿಸುತ್ತಿದ್ದ. ಉರ್ಸುಲಾಗೆ ಒಂದು ರೀತಿಯ ಮುಜುಗರವೆನಿಸಿತು. ಗಂಡನನ್ನು ಬಿಟ್ಟು ಬೇರೆಯವರನ್ನು ಬೆತ್ತಲೆಯಾಗಿ ನೋಡಿದ್ದು ಇದೇ ಮೊದಲು. ಅವನು ಈಗ ಸಂಸಾರಕ್ಕೆ ಯೋಗ್ಯ ಎನಿಸುತ್ತಿದ್ದ. ಮೂರನೆಯ ಬಾರಿ ಬಸುರಾದಾಗ ಉರ್ಸುಲಾಗೆ ಮೊದಲ ಬಾರಿ ಬಸುರಾದಾಗ ಉಂಟಾಗಿದ್ದ ಆತಂಕ ಮರುಕಳಿಸಿತ್ತು.

ಅದೇ ಸಮಯದಲ್ಲಿ ಮನೆಕೆಲಸಕ್ಕೆಂದು ನೋಡಲು ಚೆಲುವಾಗಿದ್ದ ಆದರೆ ಬಾಯಿಂದ ಅಪಶಬ್ದಗಳನ್ನೇ ಆಡುತ್ತಿದ್ದ ಹೆಂಗಸೊಬ್ಬಳು ಬಂದಿದ್ದಳು. ಅವಳಿಗೆ ಕಾರ್ಡುಗಳನ್ನು ಓದಿ ಭವಿಷ್ಯ ಹೇಳುವ ಕಲೆ ಕರಗತವಾಗಿತ್ತು. ಉರ್ಸುಲಾ ತನ್ನ ಮಗನ ಬಗ್ಗೆ ತಿಳಿಯಬಯಸಿದಳು. ತನ್ನ ಸಂಬಂಧಿಗೆ ಇರುವಂತೆ ಹಂದಿಬಾಲವಿದ್ದು ವಿಚಿತ್ರ ಬೆಳವಣಿಗೆ ಅವನದಾಗಿದೆ ಎಂಬ ಭಾವನೆ ಅವಳಿಗಿತ್ತು. ಆ ಹೆಂಗಸು ನಕ್ಕ ನಗೆಯ ಅಬ್ಬರಕ್ಕೆ ಗಾಜು ಕೆಳಗೆ ಬಿದ್ದು ಫಳಾರನೆ ಒಡೆದ ಸದ್ದಿನಂತಿತ್ತು. ಅವನು ಬಹಳ ಅದೃಷ್ಟವಂತನಾಗಿರುತ್ತಾನೆ ಎಂದು ತಿಳಿಸಿದಳು. ತನ್ನ ಭವಿಷ್ಯ ಸತ್ಯವೆಂದು ನಿರೂಪಿಸಲು ಮಾರನೆ ದಿನ ಕಾರ್ಡ್‌ಗಳನ್ನು ತಂದು ಅಡಿಗೆ ಮನೆ ಬದಿಯಲ್ಲಿದ್ದ ಉಗ್ರಾಣ ಸೇರಿಕೊಂಡಳು. ಮರಗೆಲಸದ ಬೆಂಚಿನ ಮೇಲೆ ಕಾರ್ಡುಗಳನ್ನು ಇರಿಸಿದಳು. ಹುಡುಗ ಅವಳಿಗೆ ಕಾಯುತ್ತಾ ಬೇಸರಗೊಂಡಿದ್ದ. ಇದ್ದಕ್ಕಿದ್ದಂತೆ, ಕೈ ಚಾಚಿ ಅವನನ್ನು ಮುಟ್ಟಿದಳು. 'ಯಜಮಾನರೇ' ಎಂದಷ್ಟೇ ಹೇಳಿದಳು. ಜೋಸ್ ಆರ್ಕಾಡಿಯೋಗೆ ಏನೋ ಒಂದು ವಿಚಿತ್ರ ಅನುಭವ. ತನ್ನ ಮೂಳೆಗಳಲ್ಲಿ ಒಂದು ಬಗೆಯ ನೊರೆ ತುಂಬಿದ್ದಂತೆಯೂ ಭಯದಿಂದ ಕಂಪಿಸುವಂತೆಯೂ ಆಯಿತು. ಅವನಿಗೆ ಅಳಬೇಕೆನಿಸಿತು. ಅವಳು ಮತ್ತೇನೂ ಬೇರೆಯಾಗಿ ವರ್ತಿಸಲಿಲ್ಲ. ಆದರೆ ಜೋಸ್ ಆರ್ಕಾಡಿಯೋ ಅವಳಿಗಾಗಿ ರಾತ್ರಿಯಿಡೀ ಎದುರು ನೋಡುತ್ತಿದ್ದ. ಅವಳ ಕಂಕುಳದ ಕೆಳಗಿಂದ ಹೊಮ್ಮುತ್ತಿದ್ದ ವಾಸನೆ ಅವನ ಚರ್ಮದಾಳಕ್ಕೆ ಇಳಿದಿತ್ತು. ಸದಾಕಾಲ ಅವಳು ತನ್ನೊಂದಿಗೆ ಇರಬೇಕೆಂದು ಬಯಸುತ್ತಿದ್ದ. ಅವಳು ತನಗೆ ತಾಯಿಯಾಗಿರಬೇಕೆಂದು ಬಯಸಿದ. ಉಗ್ರಾಣದಿಂದ ಹೊರಗೆ ಬರುವುದು ಇಷ್ಟವಿರಲಿಲ್ಲ. ಅವಳು ತನ್ನನ್ನು

ಯಜಮಾನರೇ! ಎಂದು ಕರೆಯಲು ಇಚ್ಛಿಸಿದ. ಒಂದು ದಿನ ಅವಳನ್ನು ಬಿಟ್ಟಿರಲಾಗದೆ ಅವಳನ್ನು ಹುಡುಕಿಕೊಂಡು ಅವಳ ಮನೆಗೇ ಹೋದ. ಏನನ್ನೂ ಮಾತಾಡದೆ ಸುಮ್ಮನೆ ಹಜಾರದಲ್ಲಿ ಕುಳಿತ. ಆಗ ಯಾಕೊ ಏನೊ ಆ ಕ್ಷಣದಲ್ಲಿ ಅವಳು ಬೇಕೆನಿಸಲಿಲ್ಲ. ಅವಳೂ ಕೂಡಾ ಮೊದಲಿಗಿಂತ ಭಿನ್ನವಾಗಿಯೇ ತೋರಿದ್ದು ಅವಳನ್ನು ಕಂಡಾಗ ಅವಳು ಬೇರೆಯೇ ಎನಿಸಿತು. ಕಾಫಿ ಕುಡಿದು ಎದ್ದು ಹೊರಟು ಬಿಟ್ಟ. ಅವನ ಮುಖದ ಮೇಲೆ ಖಿನ್ನತೆ ಕವಿದಿತ್ತು. ಆ ರಾತ್ರಿ ಎಚ್ಚರದಿಂದ ಇರುವಾಗ ಉಂಟಾದ ಭಯದ ಸಮಯದಲ್ಲಿ ಅವಳು ಮತ್ತೆ ಬೇಕೆನಿಸಿದಳು. ಆದರೆ ಆ ಹೊತ್ತಿನಲ್ಲಿ ಅವಳು ಉಗ್ರಾಣದಲ್ಲಿದ್ದಂತಲ್ಲದೆ, ಮಧ್ಯಾಹ್ನ ಹೊತ್ತಿನಲ್ಲಿ ಇದ್ದಂತೆ ಇರಬೇಕೆಂದು ಬಯಸಿದ.

ಕೆಲ ದಿನಗಳ ನಂತರ ಆ ಹೆಂಗಸು ಅವನನ್ನು ಅವಳ ಮನೆಗೆ ಬರಹೇಳಿದಳು. ಅವಳು ತನ್ನ ತಾಯಿಯೊಂದಿಗೆ ಇರುತ್ತಿದ್ದಳು. ಕಾರ್ಡುಗಳನ್ನು ತೋರಿಸುವ ನೆಪದಲ್ಲಿ ಅವನನ್ನು ಮಲಗುವ ಕೋಣೆಗೇ ಕರೆಸಿಕೊಂಡಳು. ನಂತರ ಅವನನ್ನು ಬಹಳ ಸಲುಗೆಯಿಂದ ಸ್ಪರ್ಶಿಸಿದಳು. ಮೊದಲಿಗೆ ಹೆದರಿಕೆ ಎನಿಸಿದರೂ ನಂತರ ಅವಳಿಗೆ ಸೋತ. ಅವನಿಗೆ ಇದರಿಂದ ಸಂತೋಷವಾಗುವ ಬದಲು ಹೆದರಿಕೆಯಾಯಿತು. ಆ ದಿನ ರಾತ್ರಿ ಬಂದು ತನ್ನನ್ನು ಕಾಣಲು ಹೇಳಿದಳು. ಅವನಿಗೆ ಹೋಗುವುದು ಸಾಧ್ಯವಿಲ್ಲದಿದ್ದರೂ ಅಲ್ಲಿಂದ ತಪ್ಪಿಸಿಕೊಳ್ಳಬಯಸಿ, ಒಪ್ಪಿಗೆ ನೀಡಿದ. ಆದರೆ ಆ ಸುಡು ರಾತ್ರಿ, ಬೆಂಕಿ ಹಾಸಿಗೆಯಲ್ಲಿ ಇರಲಾಗದೆ, ಅವನು ಸಾಧ್ಯವಿಲ್ಲದಿದ್ದರೂ ನೋಡಲೇಬೇಕೆಂದುಕೊಂಡ. ಆ ಕತ್ತಲಲ್ಲಿಯೇ, ಸೋದರರನ ಪ್ರಶಾಂತ ಉಸಿರಾಟದಿಂದ, ಪಕ್ಕದ ಕೋಣೆಯಲ್ಲಿದ್ದ ತಂದೆಯ ಒಣ ಕೆಮ್ಮಿನಿಂದ, ಅಂಗಳದಲ್ಲಿದ್ದ ಕೋಳಿಗಳ ಆಸ್ತಮಾದಿಂದ, ಸೊಳ್ಳೆಗಳ ಗುಂಯ್ ಶಬ್ದದಿಂದ, ತನ್ನೆದೆಯ ಬಡಿತದ ಸದ್ದಿನಿಂದ, ಅಲ್ಲಿಯವರೆಗೆ ಅನುಭವಕ್ಕೆ ಬರದಿದ್ದ ಪ್ರಪಂಚದ ಗಜಿಬಿಜಿ ಸದ್ದಿನಿಂದ, ಮಲಗಿದ್ದವನೆದ್ದು ತಡವರಿಸುತ್ತಲೇ ತನ್ನ ಉಡುಪನ್ನು ಹುಡುಕಿ ಹಾಕಿಕೊಂಡ. ನಿದ್ದೆಗೆ ಬಿದ್ದಿದ್ದ ರಸ್ತೆಯತ್ತ ಹೆಜ್ಜೆ ಹಾಕಿದ. ಆಕೆ ಮಾತುಕೊಟ್ಟಿದ್ದಂತೆ, ಬಾಗಿಲು ಮುಚ್ಚಿರದೆ ಬಟಾಬಯಲಿನಂತೆ ತೆಗೆದಿರಿಸಿರಬೇಕೆಂದು ಬಯಸಿದ. ಸದ್ಯಕ್ಕೆ ಬಾಗಿಲು ತೆರೆದಿತ್ತು. ಬೆರಳಿಂದ ಮೆಲ್ಲಗೆ ನೂಕಿದ. ಕಿರ್ರೆನ್ನುತ್ತಾ ತೆರೆದುಕೊಂಡಿತು. ಅವನು ಸದ್ದುಮಾಡದೆ ಮೆಲ್ಲನೆ ಒಳಹೊಕ್ಕ. ಸದ್ದಾಗದಂತೆ ಒಂದು ಬದಿಯಿಂದಲೇ ಹೆಜ್ಜೆ ಹಾಕುತ್ತಾ ಹೋದಂತೆ ಅವನಿಗೆ ವಾಸನೆ ಬಡಿಯಿತು. ಇನ್ನೂ ಅವನು ಹಜಾರದಲ್ಲೇ ಇದ್ದ. ಆಕೆಯ ಮೂರು ಜನ ಸೋದರರು ಹಗ್ಗದ ಮಂಚಗಳ ಮೇಲೆ ಮಲಗಿದ್ದರು. ಆದರೆ ಯಾರು ಯಾರು ಎಲ್ಲೆಲ್ಲಿ ಎನ್ನುವುದು ಅವನಿಗೆ ಗೊತ್ತಾಗಲಿಲ್ಲ. ಆದರೂ ಅವನು ತಾನು ಹೋಗಬೇಕಿದ್ದ ಮಲಗುವ ಕೋಣೆಯನ್ನು ಗುರುತಿಸುತ್ತಾ ಹೋದ. ಕೊನೆಗೂ ಅಲ್ಲಿಗೆ ತಲುಪಿದ. ಈ ಪ್ರಯತ್ನದಲ್ಲಿ ಎಷ್ಟೇ ಜಾಗರೂಕತೆಯಿಂದ ಹೆಜ್ಜೆ ಹಾಕಿದರೂ ಮಂಚದ ಹಗ್ಗ ಕಾಲಿಗೆ ತೊಡರಿ ಬಿದ್ದ. ನಿದ್ದೆಯಲ್ಲಿ ಮುಳುಗಿ ಗೊರಕೆ ಹೊಡೆಯುತ್ತಿದ್ದವರು ಪಕ್ಕಕ್ಕೆ ಹೊರಳಿ, ಕನಸಿನಲ್ಲಿ ಮಾತಾಡುತ್ತಾ 'ಅದು ಬುಧವಾರ' ಬೆಡ್‌ರೂಮಿನ ಬಾಗಿಲು ತಳ್ಳಿದಾಗ ಅದರ ಬಾಗಿಲು ಸಮತಟ್ಟಾಗಿ ನೆಲವನ್ನು ಉಜ್ಜಿಕೊಂಡು ತೆರೆದುಕೊಂಡಾಗ, ಆ ಸದ್ದನ್ನು ಅವನಿಗೆ ನಿವಾರಿಸಲು ಸಾಧ್ಯವಾಗಲಿಲ್ಲ. ದಟ್ಟ ಕತ್ತಲಿನಲ್ಲಿ ಥಟ್ಟನೆ ಅವನಿಗೆ ತನ್ನ ತಪ್ಪಿನ ಅರಿವಾಯಿತು. ಇಕ್ಕಟ್ಟಾದ ಕೋಣೆಯಲ್ಲಿ ತಾಯಿ, ಮಗಳು ಮತ್ತು ಅವಳ ಗಂಡ, ಇಬ್ಬರು

ಮಕ್ಕಳು ಒಟ್ಟಿಗೆ ಮಲಗಿದ್ದರು. ಆದರೆ ಇರಬೇಕಾಗಿದ್ದ ಹೆಂಗಸು ಇರಲಿಲ್ಲ. ಮೊದಲಿನ ಹಾಗೆ ಒಂದೇ ಬಗೆಯ ವಾಸನೆ, ಒಂದೆ ಕಡೆಯಿಂದ ಬಂದಿದ್ದರೆ ಪತ್ತೆ ಹಚ್ಚುವುದು ಕಷ್ಟವಾಗುತ್ತಿರಲಿಲ್ಲ. ಏಕೆಂದರೆ ಅದು ತನ್ನ ಚರ್ಮದಲ್ಲಿ ಇಳಿದಿತ್ತು ವಾಸನೆ ಮನೆಯಲ್ಲೆಲ್ಲ ಹರಡಿಕೊಂಡಿತ್ತು. ಮುಂದೆ ಏನು ಮಾಡಬೇಕೆಂದು ತೋಚದೆ ಭಯಾಶ್ಚರ್ಯದಿಂದ ನಿಂತಿದ್ದಾಗ ಮತ್ತು ಪ್ರಯೋಜನವಿಲ್ಲವೆಂದು ಹಿಂತಿರುಗುವ ಆಲೋಚನೆಯಲ್ಲಿದ್ದಾಗ, ಒಂದು ಕೈ ಹೊರ ಚಾಚಿ ಬೆರಳುಗಳನ್ನು ಬಿಡಿಸಿ, ತನ್ನ ಮುಖವನ್ನು ಸ್ಪರ್ಷಿಸುತ್ತಿರುವ ಅನುಭವವಾಯಿತು. ಅವನಿಗೆ ಆಶ್ಚರ್ಯವೇನೂ ಆಗಲಿಲ್ಲ. ಗೊತ್ತಿಲ್ಲದೆಯೇ ಅಂಥಾದ್ದರ ನಿರೀಕ್ಷೆಯಲ್ಲಿದ್ದ. ನಂತರ ತನ್ನನ್ನು ಸಂಪೂರ್ಣವಾಗಿ ತೆತ್ತುಕೊಂಡ. ಆ ಕೈ ತಡಕಾಡುತ್ತ ತಡಕಾಡುತ್ತ ಒಂದು ನಿರ್ದಿಷ್ಟ ಆಕಾರವಿಲ್ಲದ ಪ್ರದೇಶಕ್ಕೆ ಹೋಗಿ ಬಟ್ಟೆಗಳನ್ನೆಲ್ಲ ಕಳಚಿ ಎಸೆದು ಆಲೂಗೆಡ್ಡೆ ಮೂಟೆಯಂತೆ ಹೊರಳಾಡಿಸಿತು. ಆದರೆ ಇಷ್ಟೆಲ್ಲ ಆ ತಳವಿರದ ಕತ್ತಲಲ್ಲಿ ನಡೆಯುತ್ತಿದ್ದರೂ ಅವನಿಗೆ ಆ ಹೆಣ್ಣಿನ ವಾಸನೆ ಹತ್ತಲಿಲ್ಲ. ಅವನ ಕೈಗಳು ವ್ಯರ್ಥವೆನಿಸಿದ್ದವು. ಅಮೋನಿಯಾ ವಾಸನೆಯಂತೂ ಅವನ ಅರಿವಿಗೆ ಬಂತು. ಅವಳ ಮುಖವನ್ನು ನೆನಪಿಸಿಕೊಳ್ಳಲು ಪ್ರಯತ್ನಿಸಿದ. ಆದರೆ ಅವನಿಗೆ ಎದುರಾದ ಮುಖ ಉರ್ಸುಲಾಳದಾಗಿತ್ತು. ಗಲಿಬಿಲಿಗೊಂಡಿದ್ದ. ಮನಸ್ಸು ಬಹಳ ದಿನಗಳಿಂದ ಬಯಸಿದ್ದು ಎಂದಿಗೂ ಸಾಧ್ಯವಿಲ್ಲ ಎಂದುಕೊಂಡದ್ದು ಇಂದು ಲಭ್ಯವಾಗಿದೆ ಎಂದು ಭಾವಿಸಿತು. ಆದರೆ ಅವನಿಗೆ ಅವನ ತಲೆ, ಎಲ್ಲಿದೆ ಎನ್ನುವುದಾಗಲೀ, ಯಾರ ತಲೆ ಯಾರ ಕಾಲು ಎಂದು ತಿಳಿಯುವುದಾಗಲಿ, ತಾನೇನು ಮಾಡುತ್ತಿದ್ದೇನೆಂಬುದನ್ನಾಗಲಿ ಅರಿಯದಾಗಿದ್ದ. ಮೂತ್ರಪಿಂಡಗಳ, ಕರುಳಗಳ ಗಡಗಡ ಸದ್ದು ಮಾಡುತ್ತಿರುವ ಅನುಭವ ಒಂದು ಬಗೆಯ ಭಯ ಆತಂಕ, ದಿಗ್ಭ್ರಮೆಗಳಿಂದ ಕೂಡಿದ್ದು, ಕಡೆಗೆ ಹೇಗಾದರೂ ಮಾಡಿ ಅಲ್ಲಿಂದ ಕಾಲ್ತೆಗೆಯಬೇಕೆಂದುಕೊಂಡ. ಆದರೆ ಅದೇ ಸಮಯದಲ್ಲಿ ಆ ಉದ್ರಿಕ್ತ ಮೌನ ಪರಿಸರದಲ್ಲಿ ಏಕಾಂತದಲ್ಲಿ ಅಲ್ಲಿಯೇ ಉಳಿಯಲೂಬೇಕೆಂದುಕೊಂಡ.

ಅವಳ ಹೆಸರು ಪಿಲಾರ್ ತರ್ಸೆರಾ. ಮಕೊಂಡೊ ಅನ್ವೇಷಣೆಯ ಸಾಹಸ ಯಾತ್ರೆಗೆ ಅವಳ ಕುಟುಂಬವನ್ನು ಬಲವಂತದಿಂದ ಎಳೆದು ಕರೆತಂದಿದ್ದರು. ಅವಳನ್ನು ಅವಳ ಗಂಡನಿಂದ ಬೇರ್ಪಡಿಸಬೇಕೆಂಬುದೇ ಇದರ ಉದ್ದೇಶವಾಗಿತ್ತು. ಅವಳಿಗೆ ಹದಿನಾಲ್ಕು ವರ್ಷವಿದ್ದಾಗ ಅವಳ ಮೇಲೆ ಅತ್ಯಾಚಾರ ಮಾಡಿ, 22ನೇ ವಯಸ್ಸಿನವರೆಗೂ ಅವಳನ್ನು ಪ್ರೀತಿಸುತ್ತಲೇ ಇದ್ದು ಆದರೆ ತಮ್ಮಿಬ್ಬರ ಸಂಬಂಧವನ್ನು ಮರ್ಯಾದೆಯ ಪ್ರಶ್ನೆಯೆಂದು ಬಹಿರಂಗಗೊಳಿಸಿರಲಿಲ್ಲ. ಸಾಯುವತನಕ ಜೊತೆಯಾಗಿಯೇ ಇರುವುದಾಗಿಯೂ ಪರಿಸ್ಥಿತಿ ಎಲ್ಲ ಸರಿಹೋದ ಮೇಲೆ ಮದುವೆಯಾಗುವುದಾಗಿಯೂ ಹೇಳಿದ್ದ. ಅವಳಿಗೆ ಕಾದುಕಾದು ಸಾಕಾಗಿ ಹೋಗಿತ್ತು. ಭರವಸೆ ನೀಡಲಾಗಿದ್ದ ಮೂರುದಿನ, ಮೂರುವಾರ, ಮೂರು ತಿಂಗಳು, ಮೂರು ವರ್ಷ – ಎಲ್ಲ ಮುಗಿದು ಹೋಗಿತ್ತು. ಇನ್ನು ಕಾಯುವ ಶಕ್ತಿಯಾಗಲೀ ತಾಳ್ಮೆಯಾಗಲಿ ಇರಲಿಲ್ಲ. ಅಂಗಾಂಗಗಳಲ್ಲಿನ ಕೋಮಲತೆ, ಮೃದುತನಗಳು, ಮಾಯವಾಗಿದ್ದು, ಆದರೆ ಮನಸ್ಸಿನ ಮೂಲೆಯಲ್ಲೆಲ್ಲೋ ನಿರೀಕ್ಷೆಯನ್ನು ಇರಿಸಿಕೊಂಡಿದ್ದಳು. ಜೋಸ್ ಆರ್ಕಾಡಿಯೋ ಆ ದಿನದ ಅನುಭವದ ನಂತರ ಅವಳನ್ನು ಹಿಂಬಾಲಿಸುವುದನ್ನು ಮುಂದುವರೆಸಿದ.

ಪ್ರತಿ ರಾತ್ರಿಯೂ ಆ ಇಕ್ಕಟ್ಟಾದ ಕೋಣೆಯಲ್ಲಿ ಅವಳನ್ನು ಸೇರುತ್ತಿದ್ದ. ಒಂದು ದಿನ ಹೋದಾಗ ಬಾಗಿಲು ಮುಚ್ಚಿತ್ತು. ಒಂದು ಸಲ, ಎರಡು ಸಲ, ಮೂರು ಸಲ – ಹೀಗೆ ಎಷ್ಟೋ ಸಲ ತಟ್ಟಿದ ಮೇಲೆ ಅವಳು ಬಂದು ಬಾಗಿಲು ತೆಗೆದಳು. ಒಳಗೆ ಬರಮಾಡಿಕೊಂಡಳು. ಬೆಳಗಿನ ಹೊತ್ತಿನಲ್ಲಿ ಸುಮ್ಮನೆ ಬಿದ್ದುಕೊಂಡಿದ್ದು, ಹಿಂದಿನ ರಾತ್ರಿಯ ಸಿಹಿ ಕನಸುಗಳನ್ನು ಮೆಲುಕು ಹಾಕುತ್ತಿದ್ದ. ಆದರೆ ಅವಳು ಬಂದಾಗ, ಖುಷಿಯಾಗಿ ಮಾತಿನ ಮಲ್ಲಿಯಾಗಿ ಹರಟುತ್ತ ತನ್ನ ಬಗ್ಗೆ ನಿರ್ಲಕ್ಷ್ಯದಿಂದ ಇರುವಾಗ ತನ್ನೊಳಗಿನ ಉದ್ವೇಗವನ್ನು ಮರೆಮಾಚಲು ಹೆಚ್ಚು ಪ್ರಯತ್ನಿಸ ಬೇಕಾಗಿರಲಿಲ್ಲ. ಅವಳ ಆ ಸ್ಫೋಟಕ ನಗು, ಪಾರಿವಾಳಗಳನ್ನೆಲ್ಲ ಹೆದರಿಸಿ ಓಡಿಸಿ ಬಿಡುತ್ತಿತ್ತು. ಆದರೆ ಅದರಿಂದ ಅವನಿಗೇನೂ ಆಗಲಿಲ್ಲ. ಕಾರಣ ಅವನಿಗೆ ತನ್ನೆದೆ ಬಡಿತಗಳನ್ನು ಹೇಗೆ ನಿಯಂತ್ರಿಸಿಕೊಳ್ಳಬಹುದೆಂಬುದನ್ನು, ಅದೃಶ್ಯ ಶಕ್ತಿಯೊಂದರಿಂದ ಕಲಿತಿದ್ದ. ಜೊತೆಗೆ ಗಂಡಸರೇಕೆ ಸಾವಿಗೆ ಹೆದರುತ್ತಾರೆ ಎನ್ನುವುದನ್ನೂ ಅರ್ಥ ಮಾಡಿಕೊಂಡಿದ್ದ. ಅವನು ತನ್ನೊಳಗೆ ತಾನು ಎಷ್ಟು ಮಗ್ನನಾಗಿದ್ದನೆಂದರೆ, ತನ್ನ ತಂದೆ ಮತ್ತು ಉರ್ಸುಲಾಳ ಚಿನ್ನವನ್ನು ಲೋಹದ ಕಲ್ಮಷಗಳಿಂದ ಪ್ರತ್ಯೇಕಿಸುವ ಪ್ರಯತ್ನದಲ್ಲಿ ಯಶಸ್ವಿಯಾದದ್ದನ್ನು ಸಂಭ್ರಮದಿಂದ ಆಚರಿಸುತ್ತಿದ್ದರೂ ಇವನು ಮಾತ್ರ ಸಂಪೂರ್ಣವಾಗಿ ನಿರ್ಲಿಪ್ತನಾಗಿದ್ದ.

ಎಷ್ಟೋ ದಿನಗಳ ಅವಿರತ ಪ್ರಯತ್ನದ ನಂತರ ಅತ್ಯಂತ ಕಠಿನತರವಾದ ಪ್ರಯೋಗದ ಮೂಲಕ ಯಶಸ್ವಿಯಾಗಿ ಚಿನ್ನವನ್ನು ಪ್ರತ್ಯೇಕಿಸಿದ್ದರು. ಉರ್ಸುಲಾಗೆ ಬಹಳ ಸಂತೋಷವಾಗಿತ್ತು. ರಸತಂತ್ರವನ್ನು ಕಂಡು ಹಿಡಿದಿದ್ದಕ್ಕಾಗಿ ದೇವರಿಗೆ ಕೃತಜ್ಞತೆ ಸಲ್ಲಿಸಿದಳು. ಊರಿನ ಜನವಂತೂ ಪ್ರಯೋಗಾಲಯದೊಳಕ್ಕೆ ನುಗ್ಗಿದರು. ಈ ಅದ್ಭುತ ಯಶಸ್ಸಿಗಾಗಿ ಪೇರಲೆಹಣ್ಣಿನ ಮಿಠಾಯಿಯನ್ನು ತಂದುಕೊಟ್ಟರು. ಜೋಸ್ ಆರ್ಕಾಡಿಯೋ ಮೂಸೆಯ ತಳದಲ್ಲಿದ್ದ ಚಿನ್ನವನ್ನು ತನ್ನ ಸ್ವಂತ ಶೋಧವೆಂಬಂತೆ ಉತ್ಸಾಹದಿಂದ ಎಲ್ಲರಿಗೂ ತೋರಿಸಿದ. ಕಡೆಗೆ ಮೂಸೆಯನ್ನು ತನ್ನ ಹಿರಿಯ ಮಗನ ಮುಂದೆ ಹಿಡಿದು ತೋರಿದ. ಅವನಂತೂ ಈಗೊಂದೆರಡು ದಿನಗಳಿಂದ ಲ್ಯಾಬೋರೇಟರಿಯ ಕಡೆ ಸುಳಿದಿರಲಿಲ್ಲ. ಹಳದಿ ಮುದ್ದೆಯಾಗಿದ್ದ ಚಿನ್ನವನ್ನು ಅವನ ಮುಂದೆ ಹಿಡಿದು ತೋರಿ, "ಇದು ನೋಡಲು ಹೇಗೆ ಕಾಣುತ್ತದೆ, ಹೇಳು ನೋಡೋಣ" ಎಂದ. ಅವನು ಮಾತ್ರ ಥಟ್ಟನೆ ಹೇಳಿದ – ನಾಯಿ ಹೇಲಿನಂತೆ ಇದನ್ನು ಕೇಳುತ್ತಲೇ ಜೋಸ್ ಆರ್ಕಾಡಿಯೋ, ಮೊಣಕೈಯಿಂದ ಚೆನ್ನಾಗಿ ಗುದ್ದಿದ. ಅವನ ಕಣ್ಣಲ್ಲಿ ನೋವಿನಿಂದಾಗಿ ನೀರು ಬಂತು ರಕ್ತವೂ ಬಂತು. ಆ ರಾತ್ರಿ ಪಿಲಾರ್ ತರ್ನೆರಾ, ಊತಗಳಿದ್ದ ಜಾಗದಲ್ಲಿ ಪೋಲ್ಟೀಸ್ ಕಟ್ಟಿದಳು. ಅವನಿಂದ ಬೇಕಾದ್ದೆಲ್ಲವನ್ನು ಪಡೆಯಲು ಸಾಧ್ಯವಾಗುವ ರೀತಿಯಲ್ಲಿ, ಅವನಿಗೆಲ್ಲ ಆರೈಕೆ ಮಾಡಿ, ಅವನಿಗೆ ನೋವಾಗದ ರೀತಿಯಲ್ಲಿ ಪ್ರೀತಿ ಮಾಡಿದಳು – ಅವರಿಬ್ಬರ ನಡುವೆ ಎಷ್ಟು ಸಾಮೀಪ್ಯ ಉಂಟಾಯಿತೆಂದರೆ, ಅವರಿಬ್ಬರೂ ಅವರೊಬ್ಬರಲ್ಲೊಬ್ಬರು ಪಿಸುಗುಡಲು ತೊಡಗಿದರು.

"ನಿನ್ನೊಂದಿಗೆ ಏಕಾಂತವನ್ನು ಬಯಸುತ್ತೇನೆ" ಎಂದು ಅವನು ಹೇಳಿದ – ಮುಂದುವರೆದು, ಇಷ್ಟರಲ್ಲಿಯೇ ನಮ್ಮ ವಿಚಾರವನ್ನೆಲ್ಲಾ ಎಲ್ಲರಿಗೂ ಹೇಳಿ ಬಿಡುತ್ತೇನೆ. ಆಗ ಈ ಕಣ್ಣುಮುಚ್ಚಾಲೆ ಬೇಕಾಗುವುದಿಲ್ಲ.

ಅವಳು ಅವನನ್ನು ತಡೆಯಲಿಲ್ಲ.

"ಹಾಗಾದರೆ ಒಳ್ಳೇದೇ! ನಾವಿಬ್ಬರೇ ಏಕಾಂತದಲ್ಲಿದ್ದರೆ ದೀಪವನ್ನು ಉರಿಯಲು ಬಿಡಬಹುದು. ಯಾರ ಅಡೆತಡೆಯಿಲ್ಲದ ದೀಪದ ಬೆಳಕಲ್ಲಿ ಒಬ್ಬರನ್ನೊಬ್ಬರು ನೋಡಿಕೊಳ್ಳಬಹುದು. ನಿನಗೆ ಅನಿಸಿದ್ದನ್ನೆಲ್ಲಾ ನನ್ನ ಕಿವಿಯಲ್ಲಿ ಪಿಸುಮಾತಿನಲ್ಲಿ ಹೇಳಬಹುದು".

ಈ ಸಂವಾದ, ಅಪ್ಪನ ಬಗ್ಗೆ ಮೂಡಿದ್ದ ರೋಷ – ಎಲ್ಲವೂ ಮುಂದಿನ ದಿನಗಳಲ್ಲಿ ದಕ್ಕಬಹುದಾದ ಹುಚ್ಚು ಪ್ರೀತಿ ಅವನಲ್ಲಿ ಒಂದು ಬಗೆಯ ಸ್ಥೈರ್ಯವನ್ನು ತುಂಬಿಸಿ ಯಾವುದೇ ಪೂರ್ವ ಸಿದ್ಧತೆಯಿಲ್ಲದೆ ಸಲೀಸಾಗಿ ತನ್ನ ತಮ್ಮನಿಗೆ, ತಮ್ಮ ಪ್ರೀತಿಯ ವಿಷಯವಾಗಿ ಹೇಳಿದ. ಮೊದಲಿಗೆ ಕಿರಿಯನಾದ ಅರೆಲಿಯಾನೋಗೆ ತನ್ನಣ್ಣನ ಈ ಸಾಹಸದಲ್ಲಿ ಅಪಾಯಗಳು ಗೋಚರಿಸಿದವು. ಅವನಿಗೆ ಈ ವಿಷಯದಲ್ಲಿ ಯಾಕಿಷ್ಟು ಆಸಕ್ತಿ ಎಂಬುದು ಅರ್ಥಮಾಡಿಕೊಂಡ. ಅಣ್ಣನ ನೋವು ಸಂತೋಷಗಳು ಅರ್ಥವಾದರೂ, ತನ್ನ ಭಯ ಆತಂಕಗಳನ್ನು ಅವುಗಳೊಂದಿಗೆ ಸಮೀಕರಿಸಿಕೊಂಡು ಭಯವೂ ಆಯಿತು. ಸಂತೋಷ ಆಯಿತು. ಬೆಂಕಿಕೆಂಡದಂತಿದ್ದ ಹಾಸಿಗೆಯ ಮೇಲೆ ಒಂಟಿಯಾಗಿ ಮಲಗಿ, ಬೆಳಕು ಹರಿಯುವವರೆಗೂ ತನ್ನಣ್ಣನಿಗಾಗಿ ಕಾಯುತ್ತಿದ್ದ! ಇಬ್ಬರೂ ಬಹಳ ಹೊತ್ತು ಮಾತಾಡುತ್ತಿರುತ್ತಿದ್ದರು. ಇಬ್ಬರಲ್ಲಿಯೂ ಏನೋ ಒಂದು ಬಗೆಯ ಆಲಸ್ಯ. ಅವರಿಗೆ ರಸವಿಜ್ಞಾನವಾಗಲೀ, ತಂದೆಯ ಬುದ್ಧಿವಂತಿಕೆಯಾಗಲಿ ಬೇಕಾಗಿರಲಿಲ್ಲ. ಬಯಸುತ್ತಿದ್ದುದು ಕೇವಲ ಏಕಾಂತ ಮಾತ್ರ. "ಈ ಮಕ್ಕಳಿಗೆ ಏನೋ ಆಗಿದೆ! ಅವರಿಗೆ ತಲೆಕೆಟ್ಟಿದಂತೆ ಕಾಣುತ್ತೆ" – ಉರ್ಸುಲಾ ಎಂದಳು. "ಎಲ್ಲೋ ಹೊಟ್ಟೆಯಲ್ಲಿ ಹುಳ ಇರಬೇಕು" ಅವರಿಗಾಗಿ ಒಂದು ಬಗೆಯ ಕಷಾಯ ತಯಾರಿಸಿಕೊಟ್ಟಳು. ಕಷ್ಟಪಟ್ಟು ಇಬ್ಬರೂ ಕುಡಿದರು. ಪಾಯಖಾನೆಗೆ ಹೋಗಿ ಕುಳಿತಾಗ, ಅದರಲ್ಲಿ ಗುಲಾಬಿ ಬಣ್ಣದ ಹುಳುಗಳು ಬಿದ್ದಿರುವುದು ಕಾಣಿಸಿತು. ಅದನ್ನು ಬಹಳ ಉತ್ಸಾಹ, ಆಸಕ್ತಿಗಳಿಂದ ಎಲ್ಲರಿಗೂ ತೋರಿದರು. ಅವರ ನಿರಾಸಕ್ತಿ, ಆಲಸ್ಯಗಳಿಗೆ ಇವುಗಳೇ ಕಾರಣವೆಂಬಂತೆ ನಂಬಿಸಿದರು. ಅರೆಲಿಯಾನೋ ಅಣ್ಣ, ಅನುಭವಗಳನ್ನು ತನ್ನದೆಂಬಂತೆ ಭಾವಿಸುವಷ್ಟು ಮಟ್ಟಿಗೆ ಮಗ್ನನಾಗಿ ಕೇಳಿಸಿಕೊಂಡ. ಒಮ್ಮೆಯಂತೂ ಪ್ರೀತಿಯು ಹೇಗಿರುತ್ತೆ? ಪ್ರೀತಿಯ ವಿಧಾನಗಳು ಯಾವುವು? ಎಂದೆಲ್ಲ ಪ್ರಶ್ನೆಗಳಿಗೆ ವಿವರಗಳನ್ನು ಕೇಳಿದ. ಮಧ್ಯದಲ್ಲಿಯೇ ಜೋಸ್ ಆರ್ಕಾಡಿಯೋ "ಅದೊಂದು ಭೂಕಂಪದ ಹಾಗಿರುತ್ತೆ" – ಎಂದು ತಿಳಿಸಿದ.

ಜನವರಿ ತಿಂಗಳಿನಲ್ಲಿನ ಒಂದು ಗುರುವಾರದಂದು ಅಮರಾಂತ ಹುಟ್ಟಿದಳು. ಹುಟ್ಟಿದ ಮಗುವನ್ನು ನೋಡಲು ಬೇರೆ ಯಾರಾದರೂ ಬರುವುದಕ್ಕೆ ಮೊದಲು ಮಗುವನ್ನು ಅಮೂಲಾಗ್ರವಾಗಿ ಪರೀಕ್ಷಿಸಿದಳು ಉರ್ಸುಲಾ. ಅದೃಷ್ಟಕ್ಕೆ ಎಲ್ಲ ಅಂಗಾಂಗಗಳು ಸಾಮಾನ್ಯ ಮನುಷ್ಯರಂತೆಯೇ ಇದ್ದವು. ಅವಳು ಹಗುರವಾಗಿ, ನೀರಿನ ತರಲತೆಯಂತೆ ಇದ್ದಳು. ಅರೆಲಿಯಾನೋಗೆ ಜನ ಮನೆ ತುಂಬಿ ಹೋಗುವವರೆಗೆ ಯಾವುದೋ ಒಂದು ಹೊಸ ಸಂಗತಿಯನ್ನು ಗಮನಿಸಿರಲಿಲ್ಲ. ಗೊಂದಲದ ಮಧ್ಯೆ, ತನ್ನಣ್ಣನನ್ನು ನೋಡಲೆಂದು ಹೋದ. ಹನ್ನೊಂದುಗಂಟೆವರೆಗೆ ಅವನು ಹಾಸಿಗೇಲಿ ಕಾಣಿಸಲೇ ಇಲ್ಲ. ಪಿಲಾರ್

ತರ್ಸಿರಾಳ ಬೆಡ್‌ರೂಮಿನಿಂದ ಅವನನ್ನು ಹೊರಗೆ ಹೊರಡಿಸುವುದಾದರೂ ಹೇಗೆಂದು ಯೋಚಿಸಲೂ ವ್ಯವಧಾನವಿರಲಿಲ್ಲ. ಗಂಟೆಗಟ್ಟಲೆ ಮನೆಯಸುತ್ತ ಸುತ್ತಾಡಿದ. ಸಿಳ್ಳುಹಾಕಿದ. ಇನ್ನೇನು ಬೆಳಗಾಗುವುದರಲ್ಲಿದ್ದಾಗ ಮನೆ ಕಡೆ ಹೆಜ್ಜೆ ಹಾಕಿದ. ಆಗ ತಾನೇ ಹುಟ್ಟಿದ ತನ್ನ ತಂಗಿಯ ಜೊತೆ ಜೋಸ್ ಆರ್ಕಾಡಿಯೋ ಮುಗ್ಧವಾಗಿ ನಗುತ್ತಾ ಪುಟ್ಟ ತಂಗಿಯ ಜೊತೆ ಆಡುತ್ತಿದ್ದುದನ್ನು ನೋಡಿದ.

ಉರ್ಸುಲಾಗೆ ಇನ್ನೂ ನಲ್ವತ್ತು ದಿನಗಳ ವಿಶ್ರಾಂತಿ ಪೂರ್ತಿಯಾಗಿರಲಿಲ್ಲ. ಜಿಪ್ಸಿಗಳು ಮತ್ತೆ ಹಿಂತಿರುಗಿ ಬಂದಿದ್ದರು. ಪಿಸ್ ತಂದಿದ್ದ ಅದೇ ಗಾರುಡಿಗರು. ದೊಂಬರಾಟದವರು ಆಗಿದ್ದರು ಅವರು. ಇವರು ಮೆಲ್‌ಕಿಯಾಡ್ಸ್ ಗುಂಪಿನವರಂತೆ ಪ್ರಗತಿಯನ್ನು ಎತ್ತಿಸಾರುವವರಾಗಿರಲಿಲ್ಲ. ಕೇವಲ ಮನರಂಜನೆ, ಹಾಸ್ಯ ಪ್ರದರ್ಶನಗಳನ್ನು ಮಾತ್ರ ನೀಡುವವರಾಗಿದ್ದರು. ಪಿಸ್ ತಂದಾಗಲು ಕೂಡಾ ಅದರ ಉಪಯೋಗದ ಬಗ್ಗೆ ಏನನ್ನೂ ಹೇಳದೆ ಸರ್ಕಸ್‌ನ ಒಂದು ಐಟಂ ಆಗಿ ತೋರಿ ಕುತೂಹಲ ಹುಟ್ಟಿಸುತ್ತಿದ್ದರು. ಈ ಬಾರಿ ಅವರು ತಂದ ಬಗೆ ಬಗೆಯ ಕುಶಲ ವಸ್ತುಗಳ ಜೊತೆಗೆ ಹಾರುವ ಜಮಖಾನಾ ತಂದಿದ್ದರು. ಅದನ್ನು ಸಾರಿಗೆಯ ಪ್ರಗತಿಯ ದ್ಯೋತಕವಾಗಿ ತೋರಿಸದೆ ಮನರಂಜನೆಯ ವಸ್ತುವೆಂದೇ ಕಾಣಿಸಿದರು. ಜನ ಕೂಡಲೇ ಬಚ್ಚಿಟ್ಟುಕೊಂಡಿದ್ದ ಹಣವನ್ನು ಹೊರತೆಗೆದು ಕೊಟ್ಟು, ಮನೆ ಮನೆಗಳ ಮೇಲೆ ಹಾರುವ ರೋಮಾಂಚನವನ್ನು ಅನುಭವಿಸಿದರು. ಆ ಅನುಭವಕ್ಕಾಗಿ ಜನ ನಾಮುಂದು ತಾಮುಂದು ಎಂದು ನುಗ್ಗಿದರು. ಈ ಸಂಭ್ರಮ, ಗಲಿಬಿಲಿಗಳ ಮಧ್ಯೆ, ತರ್ಸಿರಾ, ಜೋಸ್ ಆರ್ಕಾಡಿಯೋ ಸ್ವೇಚ್ಛೆಯಾಗಿ ವಿಹರಿಸಿದರು. ಆ ಗುಂಪಿನಲ್ಲಿ ಅವರಿಬ್ಬರೂ ಪ್ರಣಯಿಗಳಾಗಿದ್ದರು. ರಾತ್ರಿ ಮಾಡುವ ಪ್ರೀತಿಯ ಕ್ಷಣಗಳೇ ಇದಕ್ಕಿಂತ ಹೆಚ್ಚಿನದೆಂಬ ಅನುಮಾನವೂ ಬಂತು ಪಿಲಾರ್ ಮೌನವನ್ನು ಮುರಿದಳು. ಅವಳ ಸಾಂಗತ್ಯದಲ್ಲಿದ್ದ ಜೋಸ್ ಆರ್ಕಾಡಿಯೋ ತೋರುತ್ತಿದ್ದ ಪ್ರೀತಿಯಿಂದ ಉತ್ತೇಜಿತಳಾಗಿ ಗೊಂದಲದಲ್ಲಿ ಸಿಕ್ಕಿಬಿದ್ದು, ಸಂಪೂರ್ಣವಾಗಿ ತನ್ನನ್ನು ಅವನಿಗೆ ಸಮರ್ಪಿಸಿಕೊಂಡಳು. ಅವನ ಮುಂದೆ ಪ್ರಪಂಚ ದೊಡ್ಡದೆನಿಸಲಿಲ್ಲ! ನಿಜವಾಗಿಯೂ ನೀನೀಗ ಗಂಡಸಾಗಿರುವೆ – ಎಂದು ಹೇಳಿದ ಮಾತುಗಳು ಅವನಿಗೆ ಸರಿಯಾಗಿ ಅರ್ಥವಾದಂತೆ ಕಾಣಲಿಲ್ಲ. ಅವಳೇ ಅವನಿಗೆ ವಿವರಿಸಿ ತಿಳಿಸಿದಳು.

"ನೀನು ತಂದೆಯಾಗಲಿರುವೆ"

ಜೋಸ್ ಆರ್ಕಾಡಿಯೋ ಹಲವು ದಿನಗಳವರೆಗೆ ಮನೆಯಿಂದ ಹೊರಗೆ ಹೋಗುವ ಸಾಹಸ ಮಾಡಲಿಲ್ಲ. ಪಿಲಾರ್‌ಳ ಅಡಿಗೆ ಮನೆಯಿಂದ ಹೊಮ್ಮುತ್ತಿದ್ದ ಮೋಡಿಯನಗೆ ಕೇಳಿದರೆ ಸಾಕು, ಉರ್ಸುಲಾಳ ದಯೆಯಿಂದ ಲ್ಯಾಬೋರೇಟರಿಯ ವಸ್ತುಗಳಿಗೆ ಮರುಹುಟ್ಟು ಬಂದದ್ದರಿಂದ, ಅಲ್ಲಿ ಹೋಗಿ ಅವನು ಆಶ್ರಯ ಪಡೆಯುತ್ತಿದ್ದ. ಜೋಸ್ ಆರ್ಕಾಡಿಯೋ ತಪ್ಪುದಾರಿ ಹಿಡಿದಿದ್ದ ಮಗನನ್ನು ಸಂತೋಷದಿಂದ ಬರಮಾಡಿಕೊಳ್ಳುತ್ತಿದ್ದ. ಸ್ಪರ್ಷಮಣಿಯ ಹುಡುಕಾಟದಲ್ಲಿ ಇನ್ನೂ ತೊಡಗಿಸಿಕೊಂಡಿದ್ದ. ಒಂದು ದಿನ ಮಕ್ಕಳ ಕಣ್ಣಿಗೆ ಹಾರುವ ಜಮಖಾನ ಕಾಣಿಸಿತು. ಲ್ಯಾಬೋರೇಟರಿ ಕಡೆಯಿಂದ ಹಾರುತ್ತಿದ್ದ ಅದನ್ನು ಜಿಪ್ಸಿಯೊಬ್ಬನು ನಡೆಸುತ್ತಿದ್ದ. ಊರಿನ ಮಕ್ಕಳು ಅದರೆಡೆಗೆ ಕೈಬೀಸಿ ಕುಣಿಯುತ್ತಿದ್ದರು.

ಆದರೆ ಬ್ಯುಂಡಿಯಾ ಮಾತ್ರ ಅದರೆಡೆಗೆ ಕಣ್ಣೆತ್ತಿಯೂ ನೋಡಲಿಲ್ಲ. "ಕನಸು ಕಾಣಲಿ ಬಿಡು" 'ನಾವು ಅದಕ್ಕಿಂತ ಚೆನ್ನಾಗಿ ಹಾರುವ ವೈಜ್ಞಾನಿಕ ಸಾಧನ ಸೌಕರ್ಯಗಳ ಸಹಾಯದಿಂದ ಮಾಡೋಣ' ಎಂದ. ಎಷ್ಟು ಆಸಕ್ತಿಯಿಂದ ತೊಡಗಿಸಿಕೊಂಡಿದ್ದರೂ ಸ್ಪರ್ಷಮಣಿಯ ಗುಟ್ಟು ಅರ್ಥವಾಗಿರಲಿಲ್ಲ. ಅವನಿಗೆ ಅದು ಸರಿಯಾಗಿ ಮಾಡಿರದ ಬಾಟಲಿನಂತೆ ಕಾಣುತ್ತಿತ್ತು. ತನ್ನ ಚಿಂತನೆಗಳಿಂದ ಬಿಡುಗಡೆಗೊಳ್ಳುವುದು ಅವನಿಗೆ ಸಾಧ್ಯವಿರಲಿಲ್ಲ. ಊಟ, ನಿದ್ದೆ ಯಾವುದೂ ರುಚಿಸುತ್ತಿರಲಿಲ್ಲ. ಸಿಡುಕುತನವನ್ನು ಬೆಳೆಸಿಕೊಂಡಿದ್ದ ತನ್ನ ತಂದೆಯ ಪ್ರಯತ್ನಗಳು ಅಸಫಲಗೊಂಡಿದ್ದಾಗ ಅವನಲ್ಲಿದ್ದ ಸಿಟ್ಟು, ಸೆಡವುಗಳೇ ಈಗಲೂ ಕಾಣುತ್ತಿದ್ದವು. ಅವನ ಅಸಮಾಧಾನವನ್ನು ದೂರಮಾಡಲು ಬ್ಯುಂಡಿಯಾ ಅವನನ್ನು ಲ್ಯಾಬೋರೇಟರಿಯಿಂದ ಹೊರಗೆ ಕಳಿಸಿದ.

ಅರೆಲಿಯಾನೋಗೆ ಮಾತ್ರ, ಅಣ್ಣನ ಈ ಸಿಟ್ಟಿಗೆ ಕಾರಣ ಸ್ಪರ್ಷಮಣಿ ಅಲ್ಲವೆಂಬುದು ಗೊತ್ತಿತ್ತು. ಆದರೂ ಅವನು ವಿಶ್ವಾಸಕ್ಕೆ ಒಳಗಾಗಿರಲಿಲ್ಲ. ಮೊದಲಿದ್ದ ಸ್ನೇಹ ಸಲುಗೆಯ ಮಾತುಗಳು ಮರೆಯಾಗಿದ್ದವು. ಅಂತರ್ಮುಖಿ ಮತ್ತು ದ್ವೇಷಕಾರುವವನಾಗಿದ್ದ. ಒಂಟಿತನ ಬಯಸುತ್ತಿದ್ದ ಅವನಿಗೆ ಪ್ರಪಂಚವೇ ಬೇಡವೆನಿಸಿತ್ತು. ಒಂದು ದಿನ ರಾತ್ರಿ ಮಾಮೂಲಿನಂತೆ ಹಾಸಿಗೆ ಬಿಟ್ಟು ಎದ್ದು ಹೋಗಿದ್ದನಾದರೂ ಪಿಲಾರ್ ತರ್ನೆರಾ ಮನೆಗೆ ಹೋಗದೆ ಜಾತ್ರೆಗೆ ಹೋಗಿ ಸುಮ್ಮನೆ ಅಲೆದಾಡುತ್ತಿದ್ದ ಹೊರತಾಗಿ ಯಾವುದರ ಬಗ್ಗೆಯೂ ಆಸಕ್ತಿಯನ್ನು ತಳೆದಿರಲಿಲ್ಲ. ಹಾಗೆಯೇ ಅಡ್ಡಾಡುತ್ತಿದ್ದವನು ಮಗುವಿನಂತಹ ಜಿಪ್ಸಿ ಹುಡುಗಿಯನ್ನು ಗಮನಿಸಿದ. ಮಣಿಹಾರಗಳ ಭಾರದಿಂದ ಕೂಡಿದ್ದಳಲ್ಲದೆ ಚೆಲುವಾಗಿಯೂ ಇದ್ದಳು. ಅಂತಹ ಚೆಲುವನ್ನು ಜೀವನದಲ್ಲಿ ಹಿಂದೆಂದೂ ಕಂಡಿರಲಿಲ್ಲ. ಆ ಹುಡುಗಿ, ತಂದೆ ತಾಯಿಯರಿಗೆ ಅವಿಧೇಯನಾಗಿದ್ದುದರಿಂದ ಹಾವಾಗಿ ರೂಪಾಂತರಗೊಂಡ ದುರಂತ ದೃಶ್ಯವನ್ನು ನೋಡುತ್ತಿದ್ದಳು.

ಜೋಸ್ ಆರ್ಕಾಡಿಯೋ ಅದನ್ನು ಗಮನಿಸಲು ಹೋಗಲಿಲ್ಲ. ಹಾವಿನ ಮನುಷ್ಯನ ಜೊತೆ ದುಃಖಪೂರಿತವಾದ ಪ್ರಶ್ನೆಗಳ ಸರಣಿ ಸಾಗುತ್ತಿರುವಾಗ ಅವನು ದಾರಿ ಮಾಡಿಕೊಂಡು ಗುಂಪಿನ ಮಧ್ಯದಿಂದ ನುಗ್ಗಿ ಮೊದಲ ಸಾಲಿನವರೆಗೂ ಬಂದು ಆ ಹುಡುಗಿಯ ಹಿಂದೆ ನಿಂತ. ಅವಳ ಬೆನ್ನಿಗೆ ಒತ್ತಿದ. ಆ ಹುಡುಗಿ ದೂರ ಸರಿದಳು. ಆದರೂ ಅವನು ಮತ್ತೂ ಗಟ್ಟಿಯಾಗಿ ಒತ್ತಿದ. ಆಗ ಅವಳಿಗೆ ಅವನಿದ್ದದ್ದು ಅರಿವಾಯಿತು. ಆಶ್ಚರ್ಯದಿಂದ ಕಂಪಿಸುತ್ತ ನಿಶ್ಚಲವಾಗಿ ನಿಂತಳು. ನಂಬಲಾಗದಿದ್ದರೂ ಅವನತ್ತ ನೋಡಿ ಹೆದರು ನೋಟದೊಂದಿಗೆ ನಕ್ಕಳು. ಅದೇ ಕ್ಷಣದಲ್ಲಿ ಇಬ್ಬರು ಜಿಪ್ಸಿಗಳು ಆ ಹಾವಿನ ಮನುಷ್ಯನನ್ನು ಪಂಜರದಲ್ಲಿರಿಸಿ ಟೆಂಟಿನ ಒಳಗೆ ಎತ್ತಿಕೊಂಡು ಹೋದರು. ಈ ಪ್ರದರ್ಶನವನ್ನು ಅಣಿಗೊಳಿಸುತ್ತಿದ್ದ ಜಿಪ್ಸಿ – ಹೇಳಿದಳು: ಮಹನೀಯರೇ ಮತ್ತು ಮಹಿಳೆಯರೆ, ನಾವು ನಿಮಗೆ, ಏನನ್ನು ನೋಡಬಾರದಾಗಿತ್ತೋ ಅದನ್ನು ನೋಡಿದವಳಿಗೆ ಶಿಕ್ಷೆಯಾಗಿ, ನೂರೈವತ್ತು ವರ್ಷಗಳಿಂದಲೂ ತಲೆದಂಡವನ್ನು ಪ್ರತಿರಾತ್ರಿಯೂ ಕೊಡಬೇಕಾಗಿ ಬಂದ ಭಯಂಕರವಾದದ್ದನ್ನು ತೋರಿಸಲಿದ್ದೇವೆ.

ಜೋಸ್ ಆರ್ಕಾಡಿಯೋ ಮತ್ತು ಜಿಪ್ಸಿ ಹುಡುಗಿ ತಲೆ ಕತ್ತರಿಸಿಕೊಳ್ಳುವ ಆ ಘೋರ ದೃಶ್ಯವನ್ನು ನೋಡಲಿಲ್ಲ. ಅವರಿಬ್ಬರೂ ಟೆಂಟ್ ಒಳಗೆ ಹೋಗಿ, ಬಟ್ಟೆಗಳನ್ನು ಕಳಚಿ ಉತ್ಕಟ ಪ್ರೀತಿಯ ಕ್ರೀಡೆಯಲ್ಲಿ ಮಗ್ನರಾದರು. ಜಿಪ್ಸಿ ಹುಡುಗಿ ಗಂಜಿಹಾಕಿದ ಲೇಸಿನ ಬಟ್ಟೆಯನ್ನು ಕಳಚಿ ಸಂಪೂರ್ಣವಾಗಿ ನಿರ್ವಾಣ ಸ್ಥಿತಿಯಲ್ಲಿ ಉಳಿದಳು. ಆ ಎಳೆಯ ದೇಹ, ಎದ್ದುಕಾಣದ ಮೊಲೆಗಳು, ಪುಟ್ಟು ಆಕಾರದಿಂದಾ ಪುಟ್ಟ ಕಪ್ಪೆಯಂತಿದ್ದು ಜೋಸ್ ಆರ್ಕಾಡಿಯೋನ ಬಾಹುಗಳಲ್ಲಿ ಎಲ್ಲಿಯೋ ಕಳೆದು ಹೋದಂತಿದ್ದರೂ, ಅವಳು ನೀಡಿದ ಬಿಸುಪು ಅವಳ ನಿರ್ಧಾರಗಳು, ಕೊರತೆಯನ್ನು ನೀಗಿಸಿದವು. ಆದರೂ ಜೋಸ್ ಅವಳಿಗೆ ಪ್ರತಿಸ್ಪಂದಿಸಲಿಲ್ಲ. ಅದೊಂದು ಸಾರ್ವಜನಿಕ ಟೆಂಟ್ ಆಗಿದ್ದು, ಜಿಪ್ಸಿಗಳು ವ್ಯಾಪಾರಕ್ಕಾಗಿ ತಂದ ವಸ್ತುಗಳಿಗೆ ವ್ಯಾಪಾರ ಮಾಡಲೆಂದು ಓಡಾಡುತ್ತಿದ್ದರು. ಜೊತೆಗೆ ಜೂಜಾಟಕ್ಕೆ ಹಾಸಿಗೆಯನ್ನೂ ಹಾಸುತ್ತಿದ್ದಳು. ಮಧ್ಯ ಕಂಬದಿಂದ ತೂಗು ಹಾಕಿದ್ದ ದೀಪ ಸುತ್ತಲೂ ಬೆಳಕನ್ನು ಚೆಲ್ಲಿತು. ಅವರ ಮುದ್ದಾಟದ ಮಧ್ಯಂತರದಲ್ಲಿ, ಬೆತ್ತಲೆಯಾಗಿ ಜೋಸ್ ಆರ್ಕಾಡಿಯೋ ಹಾಸಿಗೆಯ ಮೇಲೆ ಮೈಚಾಚಿದನಾದರೂ ಏನು ಮಾಡಬೇಕೆಂಬುದು ಹೊಳೆಯಲಿಲ್ಲ. ಜಿಪ್ಸಿ ಹುಡುಗಿ ಅವನನ್ನು ಉತ್ತೇಜಿಸಲು ಪ್ರಯತ್ನಿಸಿದಳು. ಒಬ್ಬ ಜಿಪ್ಸಿ ಹೆಂಗಸು ಮಾಂಸಲ ಶರೀರದವಳು. ಸ್ವಲ್ಪ ಹೊತ್ತಿನಲ್ಲಿಯೇ ಗಂಡಸೊಬ್ಬನೊಂದಿಗೆ ಒಳಗೆ ಪ್ರವೇಶಿಸಿದಳು. ಆ ಗಂಡಸು ಅವರ ಗುಂಪಿನವನಾಗಿರಲಿಲ್ಲ ಮತ್ತು ಆ ಊರಿನವನೂ ಆಗಿರಲಿಲ್ಲ. ಅವರಿಬ್ಬರೂ ಹಾಸಿಗೆಯ ಮುಂದೆ ನಿಂತು ಬಟ್ಟೆಗಳನ್ನು ಕಳಚತೊಡಗಿದರು. ಆ ಹೆಂಗಸು ಸುಮ್ಮನೆ, ಬಿದ್ದುಕೊಂಡಿದ್ದ, ಆರ್ಕಾಡಿಯೋನ ದೇಹವನ್ನು (ಗುಪ್ತಾಂಗವನ್ನು ವಿಷಾದದಿಂದ ನೋಡಿದಳು).

"ಹುಡುಗ, ನೀನು ಈಗ ಇರುವಂತೆಯೇ ದೇವರು ನಿನ್ನನ್ನು ಇಟ್ಟಿರಲಿ" ಎಂದು ಉದ್ಗರಿಸಿದಳು.

ಜೋಸ್ ಆರ್ಕಾಡಿಯೋನ ಜೊತೆಗಾರ, ತಮ್ಮನ್ನು ಏಕಾಂತವಾಗಿ ಇರಲು ಬಿಡು ಎಂದು ಹೇಳಿದ ಮತ್ತು ಹಾಸಿಗೆಗೆ ಹತ್ತಿರವಾಗಿ ನೆಲದ ಮೇಲೆ ಗಂಡು-ಹೆಣ್ಣು ಜೊತೆಯಾಗಿ ಬಿದ್ದುಕೊಂಡರು. ಆ ಇಬ್ಬರ ನಡುವಿನ ಪ್ರೇಮೋತ್ಕಟತೆ, ಆರ್ಕಾಡಿಯೋನನ್ನು ಪ್ರಚೋದಿಸಿತು. ಮೊದಲ ಮಿಲನದಲ್ಲಿಯೇ ಆ ಹುಡುಗಿಯ ಎಲುಬುಗಳು ಪುಡಿ ಪುಡಿಯಾದಂತೆನಿಸಿತು. ಆಟದ ಕಾಯಿಗಳ ಪೆಟ್ಟು ಕಟಕಟ ಸದ್ದಿನಿಂದ ಮುಂದಂತಾಯಿತು. ಅವಳ ಇಡೀ ಶರೀರದಿಂದ ವಿಷಾದದ ನಿಟ್ಟುಸಿರು ಹೊಮ್ಮಿತು. ಮತ್ತು ಮಣ್ಣಿನ ವಾಸನೆಯೂ ಸೇರಿಕೊಂಡಿತ್ತು. ಆದರೂ ಅವಳು ಧೈರ್ಯವನ್ನು ಬಿಟ್ಟುಕೊಡಲಿಲ್ಲ. ಅದು ನಿಜಕ್ಕೂ ಪ್ರಶಂಸಾರ್ಹವಾದುದಾಗಿತ್ತು. ಆರ್ಕಾಡಿಯೋಗೆ ತಾನು ಗಾಳಿಯಲ್ಲಿ ತೇಲುತ್ತಿರುವಂತೆನಿಸಿತು. ಅಶ್ಲೀಲ ಶಬ್ದಗಳು ಹೊಮ್ಮಿ ಅವು ಕಿವಿಯ ಮೂಲಕ ಅವಳನ್ನು ತಲುಪಿದವು. ಅವು ಅವಳ ಭಾಷೆಯಲ್ಲಿ ಅನುವಾದಗೊಂಡು ಬಾಯಿಯ ಮೂಲಕ ಹೊರಬಂದವು. ಅದು ಗುರುವಾರವಾಗಿತ್ತು. ಭಾನುವಾರ ರಾತ್ರಿ ಜೋಸ್ ಆರ್ಕಾಡಿಯೋ ತನ್ನ ತಲೆಗೊಂದು ಕೆಂಪು ಬಟ್ಟೆ ಸುತ್ತಿಕೊಂಡು ಜಿಪ್ಸಿಗಳ ಜೊತೆ ಹೊರಟ.

ಅವನು ಕಾಣದೆ ಹೋದಾಗ, ಉರ್ಸುಲಾ ಊರಲ್ಲೆಲ್ಲ ಅವನಿಗಾಗಿ ಹುಡುಕಾಡಿದಳು. ಜಿಪ್ಸಿಗಳೆಲ್ಲ ಜಾಗವನ್ನು ಖಾಲಿ ಮಾಡಿ ಹೊರಟು ಹೋಗಿದ್ದರು. ಅಲ್ಲಿ ಉಳಿದದ್ದು ಒಂದು ಕಸದ ತೊಟ್ಟಿ ಮತ್ತು ಇನ್ನೂ ಹೊಗೆಯಾಡುತ್ತಿದ್ದ ಶಿಬಿರಾಗ್ನಿ. ಕಸದಲ್ಲಿ ಬಿದ್ದಿರಬಹುದಾದ ಮಣಿಗಳಿಗಾಗಿ ಹುಡುಕಾಡುತ್ತಿದ್ದ ವ್ಯಕ್ತಿಯೊಬ್ಬ ಉರ್ಸುಲಾಗೆ, ಅವಳ ಮಗ ಜಿಪ್ಸಿಗಳ ಜೊತೆ ಜಿಪ್ಸಿಯಾಗಿ, ಹಾವಿನ ಮನುಷ್ಯನ ಪಂಜರವನ್ನು ಇರಿಸಿದ್ದ ಗಾಡಿಯನ್ನು ತಳ್ಳಿಕೊಂಡು ಹೋಗುತ್ತಿದ್ದನೆಂದು ತಿಳಿಸಿದ. "ನೋಡಿ ಅವನು ಜಿಪ್ಸಿಯಾಗಿ ಹೊರಟು ಹೋಗಿದ್ದಾನೆ" ಎಂದು. ಆರ್ಕಾಡಿಯೋ ಕಾಣದೆ ಹೋದದ್ದರ ಬಗ್ಗೆ ಒಂದಿಷ್ಟೂ ತಲೆ ಕೆಡಿಸಿಕೊಳ್ಳದಿದ್ದ ಗಂಡನಿಗೆ ಗಟ್ಟಿಯಾಗಿ ಕೇಳಿಸುವಂತೆ ಹೇಳಿದಳು.

"ಅದು ನಿಜವೇ ಆಗಿರಲಿ" ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಯಾವುದೋ ಒಂದು ವಸ್ತುವನ್ನು, ಈಗಾಗಲೇ ಸಾವಿರಸಲ ಕಾಯಿಸಿ ಕುಟ್ಟಿರುವುದನ್ನೇ ಮತ್ತೆ ಒರಳಿನಲ್ಲಿ ಕುಟ್ಟುತ್ತಲೇ ಹೇಳಿದ. ಈಗಲಾದರೂ ಮನುಷ್ಯನಾಗಲು ಕಲಿಯುತ್ತಾನೆ – ಎಂದು ಮಾತು ಮುಂದುವರೆಸಿ ಹೇಳಿದ.

ಜಿಪ್ಸಿಗಳು ಎಲ್ಲಿ ಹೋಗಿರಬಹುದೆಂದು ವಿಚಾರಿಸಿದಳು. ಅವರು ಹೋದ ದಾರಿಯಲ್ಲೆಲ್ಲ ವಿಚಾರಿಸುತ್ತಾ, ಅವರನ್ನು ಸೇರಿಕೊಳ್ಳಲು ಸಾಧ್ಯವೆಂಬ ನಂಬಿಕೆಯಲ್ಲಿ ಹೆಜ್ಜೆ ಹಾಕಿದಳು. ಹೀಗೇ ಊರಿನಿಂದ ಎಷ್ಟು ದೂರ ನಡೆದು ಬಿಟ್ಟಳೆಂದರೆ ಅವಳಿಗೆ ಹಿಂತಿರುಗುವ ಯೋಚನೆಯೇ ಬಂದಿರಲಿಲ್ಲ. ಜೋಸ್ ಆರ್ಕಾಡಿಯೋಗೆ ರಾತ್ರಿ ಎಂಟು ಗಂಟೆಯವರೆಗೆ ಅವಳು ಗೆಲ್ಲದಿದ್ದುದು ಗಮನಕ್ಕೇ ಬಂದಿರಲಿಲ್ಲ. ಅದೂ ಅವನಿಗೆ ತಿಳಿದು ಬಂದದ್ದು. ಅಮರಾಂತ ಹಸಿವಿನಿಂದ ಅಳುತ್ತಿದ್ದುದು ಕೇಳಿಸಿದಾಗ, ಗೊಬ್ಬರದ ಹಾಸಿನಲ್ಲಿ ಬಿಸಿಯಾಗಲೆಂದು ಪದಾರ್ಥವನ್ನು ಬಿಟ್ಟು ಹೋದಾಗ, ಕೆಲವು ಗಂಟೆಗಳಲ್ಲಿ ಸಜ್ಜಿತವಾದ ಗುಂಪನ್ನು ಸಿದ್ಧಗೊಳಿಸಿ, ಮಗುವನ್ನು ನೋಡಿಕೊಳ್ಳಲು ಹೆಂಗಸೊಬ್ಬಳ ಕೈಗೆ ಒಪ್ಪಿಸಿ ಹೊರಟು, ಉರ್ಸುಲಾಳನ್ನು ಹುಡುಕುತ್ತಾ ಕತ್ತಲ ಹಾದಿಗಳಲ್ಲಿ ಕಾಣದಾದ. ಅರೆಲಿಯಾನೋ ಕೂಡಾ ಜೊತೆ ಹೊರಟು ಕೆಲ ಇಂಡಿಯನ್ನರು, ಮೀನುಗಾರರು, ಭಾಷೆ ತಿಳಿಯದಿದ್ದರು ಸನ್ನೆ ಸಂಕೇತಗಳಿಂದಲೇ ಯಾರೊಬ್ಬರೂ ಈ ಕಡೆ ಹೋದದನ್ನು ಕಾಣವೆಂದು ಸೂಚಿಸಿದರು. ಮೂರು ದಿನಗಳ ಕಾಲ ಹುಡುಕಾಟ ನಡೆಸಿ ನಿರಾಶರಾಗಿ ಹಿಂತಿರುಗಿದರು.

ಈ ಆಘಾತದಿಂದ ಹೊರಬರಲು ವಾರಗಳೇ ಕಳೆದವು. ಪುಟ್ಟ ಅಮರಾಂತಳನ್ನು ತಾಯಿಯ ಹಾಗೆಯೇ ನೋಡಿಕೊಂಡು ಸ್ನಾನ ಮಾಡಿಸುವುದು, ಬಟ್ಟೆ ಹಾಕುವುದು, ದಿನಕ್ಕೆ ನಾಲ್ಕು ಬಾರಿ ಹಾಲು ಕುಡಿಸುವುದು, ಕಡೆಗೆ ರಾತ್ರಿ ಹೊತ್ತಿನಲ್ಲಿ, ಉರ್ಸುಲಾಗೆ ಹಾಡುವುದು ಹೇಗೆಂದು ತಿಳಿಯದಿದ್ದ ಹಾಡುಗಳನ್ನು ಹಾಡಿ ಮಲಗಿಸುವುದು – ಇತ್ಯಾದಿಗಳನ್ನೆಲ್ಲ ಮಾಡುತ್ತಿದ್ದ. ಒಂದು ಸಲ ಪಿಲಾರ್ ತರ್ನಿರಾ ತಾನೇ ಸ್ವ ಇಚ್ಛೆಯಿಂದ, ಉರ್ಸುಲಾ ಹಿಂತಿರುಗಿ ಬರುವವರೆಗೂ ಮನೆಕೆಲಸಗಳನ್ನೆಲ್ಲ ಮಾಡಲು ಮುಂದಾದಳು. ಸಂಭವಿಸಿದ ದುರಾದೃಷ್ಟದಿಂದ ಅರೆಲಿಯಾನೋನ ನಿಗೂಢ ಅಂತರ್ದೃಷ್ಟಿ ತೀಕ್ಷ್ಣವಾಯಿತು. ಅವಳು ಒಳಗೆ ಬರುತ್ತಿದ್ದಂತೆ, ಅವನಲ್ಲಿ ಅತೀಂದ್ರಿಯ ಶಕ್ತಿಯ ಮಿಂಚು ಕಾಣಿಸಿತು. ಅಣ್ಣನು

ಓಡಿಹೋಗುವುದಕ್ಕೆ, ತಾಯಿ ಕಾಣದೆ ಹೋಗುವುದಕ್ಕೆ ಅವಳನ್ನೇ ಕಾರಣವೆಂದು ಭಾವಿಸಬೇಕಾಯಿತು. ಅವಳನ್ನು ಅವಮಾನಿಸಿದ. ಶತ್ರುವಿನಂತೆ ಕಂಡ ಮತ್ತೆ ಮನೆಗೆ ಬಾರದಂತೆ ಮಾಡಿದ.

ಸಮಯದೊಂದಿಗೆ ಎಲ್ಲವೂ ಸರಿಹೋಗುತ್ತದೆ. ಎಷ್ಟೋ ಕಾಲ ಗೊಬ್ಬರದ ಜೊತೆ ಬಿದ್ದಿದ್ದ ವಸ್ತುಗಳ ಕಡೆ ಯಾವಾಗ ಗಮನ ಹರಿಯಿತೋ ಅವರಿಗೇ ತಿಳಿಯಲಿಲ್ಲ. ಲ್ಯಾಬೋರೇಟರಿ ಪ್ರವೇಶಿಸಿ, ಧೂಳು ಹೊಡೆದು, ನೀರಿನ ಪೈಪನ್ನು ಸರಿಪಡಿಸಿ ತಮ್ಮ ಕೆಲಸಗಳಲ್ಲಿ ಮತ್ತೆ ತೊಡಗಿಸಿಕೊಂಡರು. ಅಮರಾಂತ ಕೂಡಾ ಹೆಣೆದ ಬಿದಿರಬುಟ್ಟಿಯಲ್ಲಿ ಮಲಗಿಕೊಂಡು ಅವಳ ತಂದೆ, ಅಣ್ಣ, ಆ ಸಣ್ಣ ಕೊಠಡಿಯಲ್ಲಿ, ಅದೂ ಪಾದರಸದ ಆವಿಯಿಂದ ತುಂಬಿ ಉಸಿರಾಡಲು ಗಾಳಿಯೂ ಇಲ್ಲದಿದ್ದರೂ, ಕುತೂಹಲದಿಂದ ಕೆಲಸ ಮಾಡುತ್ತಿದ್ದುದನ್ನು ಗಮನಿಸಿದಳು. ಉರ್ಸುಲಾ ಹೋದ ಕೆಲ ತಿಂಗಳ ನಂತರ ಯಾವುದೋ ಒಂದು ಸಂದರ್ಭದಲ್ಲಿ, ವಿಚಿತ್ರ ಘಟನೆಗಳು ಘಟಿಸ ತೊಡಗಿದವು. ಖಾಲಿಯಾಗಿದ್ದ ಫ್ಲಾಸ್ಕ್ ಬಹಳ ಕಾಲದಿಂದ ಬೀರುವಿನಲ್ಲಿ ಇದ್ದುದು ಈಗ ಕದಲಿಸಲೂ ಸಾಧ್ಯವಿಲ್ಲದಷ್ಟು ಭಾರವಾಯಿತು. ಪಾತ್ರೆಯಲ್ಲಿದ್ದ ನೀರು ಬೆಂಕಿಯಿಲ್ಲದೆಯೂ ಕುದಿಯತೊಡಗಿತ್ತು. ಪೂರ್ತಿ ಆವಿಯಾಗಿ ಹೋಗುವವರೆಗೆ ಕುದಿಯಿತು. ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಮತ್ತು ಅವನ ಮಗ ಈ ಪವಾಡಗಳನ್ನೆಲ್ಲ ದಿಗ್ಭ್ರಮೆಯಿಂದ ಗಮನಿಸಿದ್ದರಿಂದ ಇದಕ್ಕೆ ಕಾರಣವನ್ನು ವಿವರಿಸಲು ಆಗದಿದ್ದಾಗ ಆ ವಸ್ತುವಿನಿಂದಲೇ ಆಗಿರಬೇಕೆಂದು ಕೊಂಡರು. ಒಂದು ದಿನ ಅಮರಾಂತಳ ಬುಟ್ಟಿಯೂ ತನಗೆ ತಾನೇ ತಿರುಗುತ್ತ ರೂಮಿನೊಳಗೆಲ್ಲ ಅಡ್ಡಾಡಿತು. ಅರೆಲಿಯಾನೋ ಗಾಭರಿಯಿಂದಾಗಿ ಮುಂದೆ ಹೋಗಿ ಅದನ್ನು ತಡೆದ. ಆದರೆ ಜೋಸ್ ಮೇಲೆ ಇದು ಯಾವ ಪರಿಣಾಮವನ್ನೂ ಬೀರಲಿಲ್ಲ. ಅವನು ಬುಟ್ಟಿಯನ್ನು ಮೊದಲಿನ ಜಾಗಕ್ಕೆ ಸೇರಿಸಿ, ಮೇಜಿನ ಒಂದು ಕಾಲಿಗೆ ಕಟ್ಟಿದ. ತುಂಬಾ ದಿನಗಳಿಂದ ಎದುರುನೋಡುತ್ತಿದ್ದ ಸಂಗತಿಯೊಂದು ಸಂಭವಿಸಲಿದೆ ಎಂಬುದು ಅವನಿಗೆ ಮನದಟ್ಟಾಯಿತು. ಆ ಸಂದರ್ಭದಲ್ಲಿಯೇ ಅರೆಲಿಯಾನೋ ಅವನು ಹೇಳುವುದನ್ನು ಕೇಳಿದ:–

"ದೇವರ ಬಗ್ಗೆ ಭಯವಿಲ್ಲದಿದ್ದಲ್ಲಿ, ಲೋಹಗಳ ಮೂಲಕವಾದರೂ ಭಯಪಡಿ"

ಇದ್ದಕ್ಕಿದ್ದಂತೆ, ಹೆಚ್ಚು ಕಡಿಮೆ ಐದು ತಿಂಗಳ ನಂತರ ಉರ್ಸುಲಾ ಕಾಣಿಸಿಕೊಂಡಳು. ಉತ್ಸಾಹ, ಹುಮ್ಮಸ್ಸು, ಹೊಸ ಹುರುಪಿನೊಂದಿಗೆ, ಹೊಸಬಟ್ಟೆಗಳೊಂದಿಗೆ, ಹಳ್ಳಿಯ ಮಂದಿ ಎಂದೂ ಕಾಣದಿದ್ದವುಗಳೊಂದಿಗೆ ಹಿಂತಿರುಗಿದ್ದಳು.

ಈ ಹೊಸ ಆಘಾತ ಅವನನ್ನು ನಿಲ್ಲಲೂ ಸಾಧ್ಯವಾಗದಂತೆ ಮಾಡಿತು. 'ಅದು ಅದೇ! .... ನಾನಂದುಕೊಂಡದ್ದೆ ಇದು ಹೀಗೇ ಆಗುತ್ತೇಂತ' – ಎಂದು ಎತ್ತರದ ದನಿಯಲ್ಲಿ ಹೇಳಿದ. [ಕೋಣೆಯಲ್ಲಿ ಲೋಹಗಳ ಜೊತೆ ತನ್ನನ್ನು ಬಂಧಿಸಿಕೊಂಡು], [ತಾನು ಯಾವ ಪವಾಡಕ್ಕಾಗಿ ಬಹಳ ದಿನಗಳಿಂದ ಎದುರು ನೋಡುತ್ತಿದ್ದನೋ], ಅದು ರಸವಾದದ ಪರಮೋದ್ದೇಶವನ್ನು ಕಂಡು ಹಿಡಿಯುವುದಾಗಲೀ, ಲೋಹಗಳನ್ನು ಜೀವಂತವಾಗಿರಿಸುವ

ಉಸಿರಾಟವನ್ನೇ ಬಿಡುಗಡೆ ಮಾಡುವುದಾಗಲಿ ಮನೆಯ ಬೀಗ, ಚಿಲಕಗಳನ್ನು ಚೆನ್ನವಾಗಿಸುವುದಾಗಲಿ ಆಗಿರದೆ, ಬಯಸಿದ್ದು ಇವತ್ತು ಏನು ಸಂಭವಿಸಿತೋ ಅದನ್ನೇ? ಅದೇ ಉರ್ಸುಲಾ ಹಿಂತಿರುಗಿ ಬಂದದ್ದು! ಅವನ ಭಾವೋತ್ಸಾಹವನ್ನು ಅವಳು ಹಂಚಿಕೊಳ್ಳಲಿಲ್ಲ. ಮಾಮೂಲಿಯಾಗಿ ಒಂದು ಮುತ್ತು ಕೊಟ್ಟಳು, ಎಲ್ಲೋ ಒಂದೆರಡು ಗಂಟೆ ದೂರವಿದ್ದು ಬಂದವಳಂತೆ, ಅವನಿಗೆ ಹೇಳಿದಳು.

"ಬಾಗಿಲಾಚೆ ನೋಡು"

ಜೋಸ್ ಆರ್ಕಾಡಿಯೋ ದಿಗ್ಭ್ರಮೆಯಿಂದ ಹೊರಬರಲು ಬಹಳ ಸಮಯ ತೆಗೆದುಕೊಂಡ. ನಂತರ ಹೊರಗಡೆಗೆ ಹೆಜ್ಜೆಹಾಕಿ ಗುಂಪನ್ನು ನೋಡಿದ. ಅವರು ಜಿಪ್ಸಿಗಳಾಗಿರಲಿಲ್ಲ. ಇವರಂತೆಯೇ ಇದ್ದ ಗಂಡಸರು ಹೆಂಗಸರು ಆಗಿದ್ದರು. ಅವರಿಗೂ ಕೂಡ ಇವರಂತೆಯೇ ನೀಳ ಕೂದಲು, ಕಪ್ಪಗಾಗಿ ಇತ್ತು. ಇವರದೇ ಭಾಷೆಯನ್ನು ಬಲ್ಲವರಾಗಿದ್ದರು. ಅವರಿಗೂ ಇವರಂತೆಯೇ ನೋವು, ದುಃಖಗಳು ಇದ್ದವು – ಹೇಸರಗತ್ತೆಗಳ ಮೇಲೆ ಆಹಾರ ಪದಾರ್ಥಗಳನ್ನು ಹೊರಿಸಿದ್ದರು. (ಎತ್ತಿನ ಗಾಡಿಗಳಲ್ಲಿ ಪೀಠೋಪಕರಣ, ಗೃಹೋಪಯೋಗಿ ಪಾತ್ರೆ ಪರಡಿಗಳನ್ನು ತುಂಬಿದ್ದರು. ಸಾಧಾರಣವಾದ ನಿತ್ಯಬಳಕೆಯ ಮಣ್ಣಿನ ವಸ್ತುಗಳನ್ನು ಹೆಚ್ಚಿನ ಕೊಸರಾಟ ಮಾರಾಟಕ್ಕೆಂದು ರಸ್ತೆಗಳಲ್ಲಿ, ದಿನನಿತ್ಯದ ಸಹಜ ವ್ಯಾಪಾರ ಕ್ರಿಯೆಯಂತೆಯೇ ಇರಿಸಿದ್ದರು. ಜೌಗು ಪ್ರದೇಶದ ಮತ್ತೊಂದು ಭಾಗದಿಂದ ಬಂದಿದ್ದು ಇನ್ನೆರಡು ದಿನಗಳಲ್ಲಿ, ಎಲ್ಲಿ ಅಂಚೆ ವ್ಯವಸ್ಥೆ ಇತ್ತೋ, ಅಂದರೆ ವರ್ಷದಲ್ಲಿ ಪ್ರತಿ ತಿಂಗಳೂ ಅಂಚೆ ವಹಿವಾಟು ನಡೆಯುತ್ತಿತ್ತೋ, ಅಲ್ಲಿ ಅವರೆಲ್ಲ ಉತ್ತಮ ಮಟ್ಟದ ಜೀವನದಲ್ಲಿ ಬಹಳ ಪರಿಚಿತರಾಗಿದ್ದರು. ಉರ್ಸುಲಾ ಜಿಪ್ಸಿಗಳನ್ನು ಸೇರಲು ಆಗಲಿಲ್ಲವಾದರೂ, ತನ್ನ ಗಂಡ ಹತಾಶೆಯ ಹುಡುಕಾಟದ ಪ್ರಯತ್ನದಲ್ಲಿ, ಯಾವ ಮಾರ್ಗವನ್ನು ಕಂಡುಹಿಡಿಯಲಿಲ್ಲವೋ ಅದನ್ನು ಉರ್ಸುಲಾ ಕಂಡುಹಿಡಿದಿದ್ದಳು).

○

# 3

**ಪಿ**ಲಾರ್ ತರ್ಸಿರಾಳ ಮಗನನ್ನು, ಅವನು ಹುಟ್ಟಿದ ಎರಡು ವಾರಗಳ ನಂತರ ಅಜ್ಜಿ ತಾತನ ಮನೆಗೆ ತರಲಾಯಿತು. ಉರ್ಸುಲಾ ಮನಸ್ಸಿಲ್ಲದ ಮನಸ್ಸಿನಿಂದ ಬರಮಾಡಿಕೊಂಡಳು. ಗಂಡನ ಹಠಮಾರಿತನದ ಮುಂದೆ ಸೋಲನ್ನು ಒಪ್ಪಿಕೊಂಡು ಮಗು ಬರುವುದನ್ನು ಸ್ವಾಗತಿಸಿದಳು. ಜೋಸ್‌ಗೆ ತನ್ನ ವಂಶದ ಕುಡಿ ಅಲ್ಲಿ ಇಲ್ಲಿ ಅಲೆದಾಡುವುದು ಇಷ್ಟವಿರಲಿಲ್ಲ. ಆದರೆ ಒಂದು ಷರತ್ತನ್ನು ಮಾತ್ರ ಮುಂದಿಟ್ಟ. ಅದೇನೆಂದರೆ ಮಗುವಿಗೆ ತಾನು ಯಾರೆಂಬುದು ತಿಳಿಯಬಾರದು ಎಂಬುದು. ಜೋಸ್ ಆರ್ಕಾಡಿಯೋ ಎಂದೇ ನಾಮಕರಣ ಮಾಡಿದರು. ಗೊಂದಲ ನಿವಾರಣೆಗಾಗಿ ಕೂಗುತ್ತಿದ್ದುದು ಮಾತ್ರ ಕೇವಲ ಆರ್ಕಾಡಿಯೋ ಎಂದು. ಆ ಸಮಯದಲ್ಲಿ, ಮನೆಯಲ್ಲಿ, ಮತ್ತು ಊರಿನಲ್ಲಿ ಎಷ್ಟು ಗಲಿಬಿಲಿ, ಕೆಲಸ ಕಾರ್ಯಗಳಿದ್ದುವೆಂದರೆ, ಮಕ್ಕಳ ಲಾಲನೆ ಪಾಲನೆಗೆ ದೊರೆತದ್ದು ಕನಿಷ್ಠ ಗಮನ ಅವರನ್ನು ವಿಸಿಟಾಸಿಯೋನ್ ಎಂಬ ಗುಜರಾತಿ ಇಂಡಿಯನ್ ಹೆಂಗಸೊಬ್ಬಳಿಗೆ ಒಪ್ಪಿಸಲಾಯಿತು. ಆಕೆ ತನ್ನ ಬುಡಕಟ್ಟಿನವರಿಗೆ ಸೋಂಕಿದ್ದ ಮರೆವಿನ ಕಾಯಿಲೆಯಿಂದ ತಪ್ಪಿಸಿಕೊಳ್ಳಲೆಂದು ಸೋದರನ ಜೊತೆಗೆ ಓಡಿಬಂದಿದ್ದಳು.

ಅವರಿಬ್ಬರೂ ಮೆದು ಸ್ವಭಾವದವರಾಗಿದ್ದುದೇ ಅಲ್ಲದೆ ಉರ್ಸುಲಾಗೆ ಸಹಾಯ ಮಾಡಲು ಮುಂದಾಗುತ್ತಿದ್ದರು.

ಉರ್ಸುಲಾ ಅವರನ್ನು ಮನೆಗೆಲಸಗಳಿಗೆ ನೇಮಿಸಿಕೊಂಡಳು. ಹಾಗಾಗಿಯೇ ಆರ್ಕಾಡಿಯೋ ಮತ್ತು ಅಮರಾಂತ ಸ್ಪ್ಯಾನಿಷ್ ಮಾತಾಡುವುದಕ್ಕೂ ಮೊದಲೇ ಗುಜರಾತಿ ಭಾಷೆ ಕಲಿತರು. ಹಾಗೆಯೇ ಹಲ್ಲಿಯ ಸಾರು ಕುಡಿಯುವುದನ್ನು, ಜೇಡನಮೊಟ್ಟೆ ತಿನ್ನುವುದನ್ನೂ ಕಲಿತರು. ಸವಿಯಾದ ಮಾಂಸ ಕೊಡುವ ಪ್ರಾಣಿಗಳ ಆರೈಕೆಯಲ್ಲಿ ಮಗ್ನಳಾಗಿದ್ದವಳಿಗೆ ಇವು ಯಾವುವೂ ಗಮನಕ್ಕೆ ಬರಲಿಲ್ಲ. ಮಕಾಂಡೊ ಬದಲಾಯಿಸಿಬಿಟ್ಟಿತ್ತು. ಉರ್ಸುಲಾ ಜೊತೆಗೆ ಬಂದಿದ್ದ ಜನ ಮಣ್ಣಿನ ಉತ್ತಮ ಗುಣವನ್ನು, ಆ ಜೌಗುಪ್ರದೇಶಕ್ಕೆ ಹೋಲಿಸಿದರೆ, ತುಂಬಾ ಚೆನ್ನಾಗಿದೆ ಎಂದು ಸುದ್ದಿ ಹಬ್ಬಿದ್ದರು. ಇದರಿಂದಾಗಿ ಇಕ್ಕಟ್ಟಾದ ರಸ್ತೆಗಳಿದ್ದ ಒಂದು ಪುಟ್ಟ ಹಳ್ಳಿಯಾಗಿದ್ದದ್ದು ಈಗ ದೊಡ್ಡ ಅಂಗಡಿ, ಮಳಿಗೆಗಳಿಂದ, ವಾಣಿಜ್ಯ ಸಂಕೀರ್ಣಗಳಿಂದ ಕೂಡಿದ ಬಹುದೊಡ್ಡ ಪಟ್ಟಣವಾಗಿ ರೂಪಾಂತರಗೊಂಡಿತು. ವಾಣಿಜ್ಯ ವ್ಯವಹಾರ ಮಾರ್ಗವಾಗಿ ಅರಬರು ದೊಗಲೆ ಪ್ಯಾಂಟು, ಕಿವಿಯಲ್ಲಿ ರಿಂಗ್‌ಗಳನ್ನು, ಗಾಜಿನ ಮಣಿಗಳನ್ನು ಇಟ್ಟುಕೊಂಡು ಬಂದರು. ಜೋಸ್ ಆರ್ಕಾಡಿಯೋ ಬ್ಯುಂಡಿಯಾಗೆ ಒಂದು ಕ್ಷಣವೂ ಪುರುಸೊತ್ತು ಇರಲಿಲ್ಲ. ತನ್ನ ಕಲ್ಪನೆಯ ಜಗತ್ತಿಗಿಂತಲೂ ತನ್ನ ಕಣ್ಣಮುಂದಿನ ಅದ್ಭುತ ವಾಸ್ತವಕ್ಕೆ ಹೆಚ್ಚು ಆಕರ್ಷಿತನಾಗಿದ್ದ. ರಸವಿಜ್ಞಾನ ಪ್ರಯೋಗಾಲಯ ಈಗ ಅವನ ಆಸಕ್ತಿಯ ವಿಷಯವಾಗಿರಲಿಲ್ಲ. ತಿಂಗಳುಗಟ್ಟಲೆ ಕಷ್ಟಪಟ್ಟು ಶೇಕರಿಸಿದ್ದ ವಸ್ತುಗಳನ್ನು ನಿರ್ಲಕ್ಷಿಸಿದ್ದ. ಮತ್ತೆ ಅವನು ಮೊದಲಿನ ದಿನಗಳಲ್ಲಿ ರೂಪಿಸುತ್ತಿದ್ದ ರಸ್ತೆಗಳ ವಿನ್ಯಾಸ ಕಟ್ಟುತ್ತಿದ್ದ ಹೊಸ ಮನೆಗಳು – ಇತ್ಯಾದಿಗಳಿಗೆ ಸಂಬಂಧಿಸಿದಂತೆ, ಬೇರಾರಿಗೂ ದೊರಕದ ಸವಲತ್ತುಗಳು ಸಿಗುವಂತೆ ಕಾರ್ಯಪ್ರವೃತ್ತನಾದ. ಅವನು ಈ ವಿಷಯಗಳಲ್ಲಿ ಎಷ್ಟು ಪರಿಣಿತನಾದನೆಂದರೆ, ಅಡಿಪಾಯ ಹಾಕುವ, ಗೋಡೆಗಳನ್ನು ನಿಲ್ಲಿಸುವ – ಯಾವುದೇ ಕೆಲಸವಾದರೂ ಅವನೊಡನೆ ಪರಾಮರ್ಶಿಸದೆ ಕೆಲಸ ಮುಂದುವರೆಯುತ್ತಿರಲಿಲ್ಲ. ಭೂಮಿಯ ಹಂಚಿಕೆ ಅವನ ಜೊತೆ ಚರ್ಚೆಮಾಡದೆ ನಿರ್ಧರಿಸುವಂತಿರಲಿಲ್ಲ. ಅವನೇ ಅದರ ಜವಾಬ್ದಾರಿಯನ್ನು ಹೊರಬೇಕೆಂದು ತೀರ್ಮಾನಿಸಲಾಗಿತ್ತು. ದೊಂಬರಾಟದ ಜಿಪ್ಸಿಗಳು ತಮ್ಮ ತಂಡಗಳೊಂದಿಗೆ ಹಿಂದಿರುಗಿದಾಗ, ಅದೃಷ್ಟದ ಆಟಗಳ ಒಂದು ಬೃಹತ್ ಸಂಸ್ಥೆಯಾಗಿ ರೂಪಾಂತರಗೊಂಡಿತು. ಬಂದವರನ್ನು ಸಂಭ್ರಮದಿಂದ ಸ್ವಾಗತಿಸಲಾಯಿತು. ಇದಕ್ಕೆ ಕಾರಣ ಜೋಸ್ ಆರ್ಕಾಡಿಯೋ ಕೂಡಾ ಅವರೊಂದಿಗೆ ಬಂದಿರಬೇಕೆಂಬ ಕಲ್ಪನೆ. ಆದರೆ ಜೋಸ್ ಆರ್ಕಾಡಿಯೋ ಅವರೊಂದಿಗೆ ಹಿಂತಿರುಗಲಿಲ್ಲ. ಹಾವಿನ ಮನುಷ್ಯನೂ ಬಂದಿರಲಿಲ್ಲ. ಉರ್ಸುಲಾಗೆ ಈ ಹಾವಿನ ಮನುಷ್ಯನಾದರೂ ತನ್ನ ಮಗ ಎಲ್ಲಿದ್ದಾನೆಂದು ತಿಳಿಸುತ್ತಾನೆ ಎಂಬ ಭರವಸೆಯೊಂದಿಗೆ ಇದ್ದವಳಿಗೆ ನಿರಾಶೆಯಾದಾಗ ಅವರನ್ನು ಬಿಡಾರ ಹೂಡಲಾಗಲಿಲೀ, ಮುಂದೆಂದೂ ಊರೊಳಗೆ ಕಾಲು ಇರಿಸುವುದಕ್ಕಾಗಲಿ ಬಿಡಲಿಲ್ಲ. ಅವಳ ದೃಷ್ಟಿಯಲ್ಲಿ ಅವರೆಲ್ಲ ವಿಷಯಲಂಪಟರೂ ಮತ್ತು ವಿಕೃತ ಮನಸ್ಸಿನವರು ಆಗಿದ್ದರು. ಆದರೆ ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಮೆಲ್‌ಕಿಯಾಡ್ಸ್ ಬುಡಕಟ್ಟಿನ ಈ ಜನ, ತಮ್ಮ ಪರಂಪರಾಗತ ಬುದ್ಧಿವಂತಿಕೆಯಿಂದ, ಹೊಸ ವಿಚಾರಗಳಿಂದ, ಹಳ್ಳಿಯ ವಿಕಾಸಕ್ಕೆ ತುಂಬ ಮಹತ್ವದ ಕೊಡುಗೆ ನೀಡಿದವರಾದ್ದರಿಂದ ಎಂದೆಂದಿಗೂ ಅವರಿಗೆ ಇಲ್ಲಿಗೆ ಬರಲು ಪೂರ್ಣಾವಕಾಶವಿದೆ ಎಂದು ನಂಬಿದ್ದ. ಆದರೆ ವದಂತಿಯ ಪ್ರಕಾರ ಮೆಲ್‌ಕಿಯಾಡ್ಸ್

ವಂಶದ ಜನ, ಮನುಷ್ಯನ ಮಿತಿಮೀರಿದ ಬುದ್ಧಿವಂತಿಕೆಯಿಂದಾಗಿ ಹೇಳಹೆಸರಿಲ್ಲದಂತೆ ಈ ಭೂಮಿಯ ಮೇಲಿಂದ ಅಳಿಸಿ ಹೋಗಿದ್ದಾರೆ.

ಸದ್ಯಕ್ಕೆ ಕಲ್ಪನೆಯ ಭ್ರಮೆಯಿಂದ ಬಿಡುಗಡೆ ಪಡೆದು, ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಸ್ವಲ್ಪ ಸಮಯದಲ್ಲಿಯೇ ಬದುಕಿನಲ್ಲಿ ಒಂದು ಕ್ರಮವನ್ನು ಅಳವಡಿಸಿಕೊಳ್ಳಲು ಸಾಧ್ಯಮಾಡಿಕೊಂಡ. ಮಕಾಂಡೋ ಅಸ್ತಿತ್ವಕ್ಕೆ ಬಂದಾಗಿನಿಂದ, ತಮ್ಮ ಇನಿದಾದ ಇಂಚರದಿಂದ ಸಂತೋಷ ಒದಗಿಸುತ್ತಿದ್ದ ಹಕ್ಕಿಗಳಿಗೆ ಬಿಡುಗಡೆಕೊಟ್ಟು ಅವುಗಳ ಜಾಗದಲ್ಲಿ ಸಂಗೀತ ಹೊಮ್ಮಿಸುವ ಗಡಿಯಾರಗಳನ್ನು ಅಳವಡಿಸಿದ. ಅವು ತುಂಬಾ ಅದ್ಭುತವಾದ ಗಡಿಯಾರಗಳಾಗಿದ್ದವು. ಕೆತ್ತನೆಯ ಕೆಲಸದೊಂದಿಗಿದ್ದ ಮರದ ಗಡಿಯಾರಗಳು. ಅರಬರು ಗಿಳಿಗಳಿಗಾಗಿ ಮಕಾವುಗಳಿಗಾಗಿ ವ್ಯಾಪಾರ ಮಾಡುತ್ತಿದ್ದಂತಹವುಗಳನ್ನು, ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಎಷ್ಟೊಂದು ಕುಶಲತೆ ಮತ್ತು ಸೂಕ್ಷ್ಮತೆಯೊಂದಿಗೆ ತಯಾರಿಸಿದನೆಂದರೆ, ಪ್ರತಿ ಅರ್ಧಗಂಟೆಗೆ ಅದರಿಂದ ಹೊಮ್ಮುವ ನಾದ ತರಂಗಗಳು ಇಡೀ ಊರಿನ ಗಡಿಯಾರಗಳೊಂದಿಗೆ ಮೇಳೈಸಿ ತಾರಕ್ಕೇರುತ್ತಿದ್ದುದಲ್ಲದೆ ಮಧ್ಯಾಹ್ನದ ಹೊತ್ತಿಗೆ ವಾಲ್ಟ್ಜ಼ ಸಂಗೀತಕ್ಕೆ ಸಮನಾಗಿ ಹೊಂದಿಕೊಳ್ಳುತ್ತಿತ್ತು. ಇಷ್ಟೇ ಅಲ್ಲದೆ ಜೋಸ್ ಆರ್ಕಾಡಿಯೋ ಬ್ಯುಂಡಿಯಾ ರಸ್ತೆಗಳಲ್ಲಿ ಅಕೇಸಿಯಾ ಮರಗಳಿಗೆ ಬದಲಾಗಿ ಬಾದಾಮಿ ಗಿಡಗಳನ್ನು ಬೆಳೆಸಲು ಯೋಜಿಸಿದ ಮತ್ತು ಅವು ಚಿರಾಯುಗಳಾಗಿ ಬೆಳೆಯಲು ಒಂದು ವಿಧಾನವನ್ನು ಕಂಡುಕೊಂಡ. ಎಷ್ಟೋ ವರ್ಷಗಳಾದ ಮೇಲೆ, ಮಕಾಂಡೋ ಮರದ ಮನೆಗಳು, ಝಿಂಕ್ ತಾರಸಿಗಳ ಮನೆಗಳಾದ ಮೇಲೆ ಅಲ್ಲಲ್ಲಿ ಕಡಿದು ಬಿದ್ದಿದ್ದ ಬಾದಾಮಿ ಮರಗಳು ಕಾಣಿಸಿಕೊಂಡರೂ ಯಾರು ನೆಟ್ಟರೆಂಬುದು ಮಾತ್ರ ತಿಳಿದಿರಲಿಲ್ಲ. ತಂದೆ ಊರನ್ನು ಒಂದು ಶಿಸ್ತಿನ ಕ್ರಮದಲ್ಲಿ ಇರಿಸಲು ಪ್ರಯತ್ನಿಸುತ್ತಿದ್ದರೆ, ತಾಯಿ ಬೇಯಿಸಿದ ಮಾಂಸದ ಕ್ಯಾಂಡಿಗಳನ್ನು ಮತ್ತು ಮೀನುಗಳನ್ನು ಮಾರಿ ಒಳ್ಳೆ ಸಂಪಾದನೆಗಳಿಸಿ, ಆಸ್ತಿಯನ್ನು ಹೆಚ್ಚಿಸುತ್ತಿದ್ದಳು. ಮಾಂಸದ ತುಂಡುಗಳನ್ನು ಬಾಲ್ಸ್ ಮರದ ಕಡ್ಡಿಗಳಿಗೆ ಪೋಣಿಸಿ, ದಿನಕ್ಕೆ ಎರಡು ಬಾರಿ, ಮನೆಯಿಂದ, ಮಾರಾಟ ಮಾಡಲು ಸರಬರಾಜು ಮಾಡುತ್ತಿದ್ದಳು. ಅರೆಲಿಯಾನೋ, ನಿರ್ಲಕ್ಷಿಸಿ ಬಿಟ್ಟಿದ್ದ ಲ್ಯಾಬೋರೇಟರಿಯಲ್ಲಿ ಆಗಾಗ ಕೆಲವು ಗಂಟೆಗಳನ್ನು, ತನ್ನ ಸ್ವಂತ ಪ್ರಯೋಗದಿಂದ ಬೆಳ್ಳಿ ಕೆಲಸಗಳನ್ನು ಮಾಡುವುದರಲ್ಲಿ ಕಳೆಯುತ್ತಿದ್ದ. ಅವನು ಎಷ್ಟು ಬೇಗ ಬೆಳೆದು ದೊಡ್ಡವನಾಗಿಬಿಟ್ಟನೆಂದರೆ, ಅಣ್ಣನ ಬಟ್ಟೆಗಳು ಸರಿಹೋಗದೆ ತಂದೆಯ ಬಟ್ಟೆಗಳನ್ನು ತೊಡಲು ಆರಂಭಿಸಿದ. ವಿಸಿಟಾಸಿಯೋನ್ ಅಂಗಿಯಲ್ಲಿ ನೆರಿಗೆಗಳನ್ನು, ಷರಾಯಿಯಲ್ಲಿ ಟಕ್ಕುಗಳನ್ನು ಹಾಕುತ್ತಿದ್ದಳು. ಯಾಕೆಂದರೆ ಬೇರೆಯವರ ತರಹ ಬೊಜ್ಜನ್ನು ಇವನು ಬೆಳೆಸಿಕೊಂಡಿರಲಿಲ್ಲ. ಪ್ರಾಯಕ್ಕೆ ಬಂದವನಾದ್ದರಿಂದ ಧ್ವನಿಯಲ್ಲಿ ಗಡಸುತನ ಬಂದಿತು. ಹೆಚ್ಚು ಮೌನಿಯಾಗಿದ್ದ; ಒಂಟಿಯಾಗಿರುತ್ತಿದ್ದ. ಆದರೆ ಅದೇ ಸಮಯದಲ್ಲಿ ಅವನ ಕಣ್ಣಲ್ಲಿ, ಅವನು ಹುಟ್ಟಿದಾಗ ಕಾಣಿಸಿಕೊಂಡಿದ್ದ ಗಾಂಭೀರ್ಯವನ್ನೇ ತುಂಬಿಕೊಂಡಿದ್ದ. ತನ್ನ ಬೆಳ್ಳಿ ಕೆಲಸದಲ್ಲಿ ಎಷ್ಟು ಮಗ್ನನಾಗಿರುತ್ತಿದ್ದನೆಂದರೆ, ಊಟದ ನೆನಪೂ ಅವನಿಗಿರುತ್ತಿರಲಿಲ್ಲ. ಅವನಲ್ಲಿ ಕಾಣಿಸಿಕೊಳ್ಳುತ್ತಿದ್ದ ನಿರ್ಲಿಪ್ತತೆಯನ್ನು ಗುರುತಿಸಿದ ತಂದೆ ಬಹುಶಃ ಅವನಿಗೆ ಹೆಣ್ಣಿನ ಸಾಂಗತ್ಯದ ಅವಶ್ಯಕತೆ ಇರಬಹುದೇನೋ ಎಂದು ಊಹಿಸಿ, ಮನೆಯ ಬೀಗಗಳನ್ನು

ಮತ್ತು ಒಂದಿಷ್ಟು ಹಣವನ್ನು ಕೊಟ್ಟ. ಆದರೆ ಅರೆಲಿಯಾನೋ ಆ ಹಣದಿಂದ ತನ್ನ ಪ್ರಯೋಗಗಳಿಗೆ ಬೇಕಾದ ಆಕ್ವಾರೆಜಿಯ ತಯಾರಿಸಲು ಮ್ಯೂರಿಯಾಟಿಕ್ ಆ್ಯಸಿಡ್ ಕೊಳ್ಳಲು ಬಳಸಿಕೊಂಡ ಮತ್ತು ಬೀಗದಕೈಗಳನ್ನು ಚಿನ್ನದ ಲೇಪದಿಂದ ಸುಂದರಗೊಳಿಸಿದ. ಅವನ ಈ ಅತಿರೇಕಗಳನ್ನು ಆರ್ಕಾಡಿಯೋ ಮತ್ತು ಅಮರಾಂತರೊಂದಿಗೆ ಹೋಲಿಸಲು ಸಾಧ್ಯವಿರಲಿಲ್ಲ. ಅವರಿಬ್ಬರಿಗೂ ಎರಡನೇ ಹಲ್ಲು ಮೊಳೆಯುತ್ತಿತ್ತು. ಆದರೂ ಆ ಇಂಡಿಯನ್ನರ ಸೆರಗು ಹಿಡಿದೇ ಓಡಾಡುತ್ತಿದ್ದರಲ್ಲದೆ, ಹಟದಿಂದೆಂಬಂತೆ ಗುಜರಾತಿಯನ್ನು ಮಾತಾಡುತ್ತಿದ್ದರೇ ಹೊರತು ಸ್ಪ್ಯಾನಿಷ್ ಮಾತಾಡಲು ಪ್ರಯತ್ನಿಸಲೇ ಇಲ್ಲ. ಉರ್ಸುಲಾ ಗಂಡನಿಗೆ "ಇದನ್ನು ನೀವು ತಪ್ಪಾಗಿ ತಿಳಿಯಬಾರದು. ಮಕ್ಕಳು ತಂದೆ ತಾಯಿಯರ (ಹುಚ್ಚನ್ನೇ, ಗುಣಗಳನ್ನೇ) ಪಡೆದಿರುತ್ತಾರೆ". ಎಂದಳು. ಉರ್ಸುಲಾ ತನ್ನ ದುರಾದೃಷ್ಟವನ್ನು ಬೈದುಕೊಳ್ಳುತ್ತಲೇ ಮಕ್ಕಳ ಆ ನಡವಳಿಕೆ, ಹಂದಿಯ ಬಾಲದಷ್ಟೇ ಭಯಾನಕವೆಂದು ಅರ್ಥಮಾಡಿಕೊಂಡಳು. ಅರೆಲಿಯಾನೋ ಅವಳ ಕಡೆ ನೋಡಿದ ನೋಟದಲ್ಲಿ, ಅನಿಶ್ಚತತೆಯ ಭಾವವನ್ನು ಕಂಡಳು.

"ಯಾರೋ ಬರುತ್ತಿದ್ದಾರೆ" ಅವನು ಅವಳಿಗೆ ಹೇಳಿದ. ಅವನು ಭವಿಷ್ಯ ನುಡಿದಾಗಲೆಲ್ಲ ಎಂದಿನ ರೀತಿಯಲ್ಲಿ ಉರ್ಸುಲಾ ತನ್ನ ಗೃಹಿಣಿಯ ನೆಲೆಯ ತರ್ಕದಿಂದ, ಅಥೈಸಲು ಪ್ರಯತ್ನಿಸಿದಳು. ಯಾರಾದರೂ ಬರುವುದು ಸರ್ವೇ ಸಾಮಾನ್ಯ ವಿಷಯವೇ. ಪ್ರತಿದಿನ ಮಕಾಂಡೊ ಹತ್ತಾರು ಜನ ಅಪರಿಚಿತರು ಯಾವುದೇ ಅನುಮಾನಕ್ಕೆ ವಿಚಾರಗಳಿಗೆ ಎಡೆಮಾಡದಂತೆ ಬರುತ್ತಲೇ ಇದ್ದರು. ಆದರೆ ಅರೆಲಿಯಾನೋಗೆ ತನ್ನ ಭವಿಷ್ಯದ ಬಗ್ಗೆ ಭರವಸೆಯಿತ್ತು.

"ಯಾರು ಬರುತ್ತಾರೆ ಅನ್ನೋದು ಗೊತ್ತಿಲ್ಲ" 'ಆದರೆ ಯಾರೇ ಆಗಿರಲಿ, ಅವರು ಹೊರಟಿದ್ದಾರೆ. ದಾರಿಯಲ್ಲಿದ್ದಾರೆ' ಎಂದು ದೃಢವಾಗಿ ಹೇಳಿದ.

ಆ ಭಾನುವಾರ ನಿಜವಾಗಿಯೂ ರೆಬೆಕಾ ಆಗಮಿಸಿದಳು. ಅವಳಿಗೆ ಕೇವಲ ಹನ್ನೊಂದು ವರ್ಷ. ಮಸಾರೆಯಿಂದ ಪ್ರಯಾಣಮಾಡಿ ಬಂದಿದ್ದಳು. ಯಾವುದೋ ಚರ್ಮ ವ್ಯಾಪಾರಿಗಳ ಗುಂಪೊಂದಕ್ಕೆ ಅವಳನ್ನು ಇಲ್ಲಿಗೆ ತಲುಪಿಸುವ ಜವಾಬ್ದಾರಿಯನ್ನು ಒಪ್ಪಿಸಲಾಗಿತ್ತು. ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಹೆಸರಿಗೆ ಒಂದು ಪತ್ರವೂ ಇತ್ತಾದರೂ, ಯಾರು ಪತ್ರವನ್ನು ಕೊಟ್ಟರು, ಯಾರು ಈ ಸಹಾಯವನ್ನು ಬಯಸಿದರು ಎನ್ನುವ ವಿಷಯವಾಗಿ ಅವರು ಸರಿಯಾಗಿ ಏನೂ ಹೇಳಲಿಲ್ಲ. ಆ ಹುಡುಗಿಯ ವಸ್ತುಗಳೆಂದರೆ ಒಂದು ಟ್ರಂಕು, ರಾಕಿಂಗ್ ಚೇರ್, ಕ್ಯಾನ್‌ವ್ಯಾಸ್ ಚೀಲ. ಅದರೊಳಗೆ ಇದ್ದ ತಂದೆಯ ಅಸ್ಥಿಗಳು. ಒಂದಕ್ಕೊಂದು ತಗುಲಿ ಕ್ಲಾಕ್-ಕ್ಲಾಕ್-ಕ್ಲಾಕ್ ಎಂದು ಸದ್ದುಮಾಡುತ್ತಿದ್ದವು. ಆ ಪತ್ರದಲ್ಲಿ ತುಂಬಾ ಸ್ನೇಹ, ಪ್ರೀತಿಯ ಮಾತುಗಳಿದ್ದವು. ದೂರದ ನೆಂಟರಾಗಿದ್ದರೂ, ಇಂದಿಗೂ ಪ್ರೀತಿಯನ್ನು ಉಳಿಸಿಕೊಂಡಿದ್ದ ಅವರು, ಈ ಸಹಾಯವನ್ನು ಮಾಡುವಂತೆ ಕೋರಿದ್ದರು. ಅನಾಥಳಾದ ಆ ಮಗುವಿಗೆ ಆಶ್ರಯ ಕೊಡಬೇಕೆಂದು ಬೇಡಿ ಬರೆಯಲಾಗಿತ್ತು. ವಾಸ್ತವವಾಗಿ ಉರ್ಸುಲಾಳ ದೂರದ ಸಂಬಂಧಿಯೂ, ಜೋಸ್ ಆರ್ಕಾಡಿಯೋ ಬಂಧುವೂ ಆಗಿದ್ದರು. ದೂರದ ನೆಂಟಸ್ತಿಕೆಯಾದರೂ ತನ್ನ ಅತ್ಯಂತ

ಆಪ್ತಗೆಳೆಯ ನಿಕಾನೋರ್ ಉಲ್ಲೇಕ್ ಮತ್ತು ರೆಬೆಕಾರ ಮಗಳಾಗಿದ್ದಳು. ಅವರಿಬ್ಬರ ಆತ್ಮಗಳೂ ಶಾಂತಿ ನೆಮ್ಮದಿಯಲ್ಲಿ ಇರಲೆಂದು, ಆ ಹುಡುಗಿ ತಂದಿದ್ದ ಅಸ್ಥಿಗಳನ್ನು ಕ್ರೈಸ್ತ ಧರ್ಮ ವಿಧಿಯಂತೆ, ಸಮಾಧಿ ಮಾಡಲಾಯಿತು. ಪತ್ರದಲ್ಲಿದ್ದ ಸಹಿಗಳು ಸ್ಪಷ್ಟವಾಗಿದ್ದರೂ ಉರ್ಸುಲಾಗಾಗಲೀ ಜೋಸ್ ಆರ್ಕಾಡಿಯೋ ಬ್ಯುಂಡಿಯಾಗಾಗಲಿ ಅವರು ಯಾರೆಂಬುದು ನೆನಪಾಗಲಿಲ್ಲ. ಬಂದ ಕ್ಷಣದಿಂದ ಆ ತೂಗುವ ಕುರ್ಚಿಯಲ್ಲಿ ಕುಳಿತುಕೊಂಡು ಬಾಯಿಗೆ ಬೆರಳಿಟ್ಟುಕೊಂಡು ದೊಡ್ಡದಾಗಿ ಕಣ್ಣುಬಿಟ್ಟುಕೊಂಡು ನೋಡುತ್ತಿದ್ದಳಾದರೂ ಅವುಗಳಲ್ಲಿ, ಯಾರು ಏನೇ ಕೇಳಿದರೂ ಅರ್ಥವಾಗದ ನೋಟ ಕಾಣುತ್ತಿತ್ತು. ಅಡ್ಡಪಟ್ಟಿ ಪಟ್ಟೆಯ ಉಡುಪು ಧರಿಸಿದ್ದಳಾದರೂ ಹಳೆಯದಾಗಿತ್ತು. ಚರ್ಮದ ಬೂಟುಗಳನ್ನು ಧರಿಸಿದ್ದಳು. ಕಪ್ಪು ರಿಬ್ಬನ್‌ನಿಂದ ಕೂದಲನ್ನು ಹಿಂದಕ್ಕೆ ಎಳೆದು ಕಟ್ಟಲಾಗಿತ್ತು. ಬೆವರಿನಿಂದ ಒದ್ದೆಯಾಗಿದ್ದ ಚಿತ್ರಗಳಿಂದ ಕೂಡಿದ ಸ್ಕ್ಯಾಪುಲಾರ್ ಧರಿಸಿದ್ದಳು. ಮಣಿಕಟ್ಟಿಗೆ ದೃಷ್ಟಿಯಾಗದಂತೆ, ನಾಲಿಗೆ ಹೊರಚಾಚಿದ್ದ ಮಾಂಸಾಹಾರಿ ಪ್ರಾಣಿಯ ಚಿತ್ರವಿದ್ದ ಕಡಗವನ್ನು ಧರಿಸಿದ್ದಳು. ಹಸಿವಿನ ಅಂಶವಿದ್ದ ಚರ್ಮ, ಡೊಳ್ಳು ಹೊಟ್ಟೆ ಹಸಿವನ್ನು ಅನಾರೋಗ್ಯವನ್ನು ಸಾರುತ್ತಿದ್ದವು. ಅವಳಿಗಿಂತ ಈ ಹಸಿವು ಅನಾರೋಗ್ಯಗಳೇ ಮುಂದಿದ್ದಿರಬೇಕೆನಿಸುತ್ತಿತ್ತು. ಅವಳಿಗೆ ತಿನ್ನಲು ತಟ್ಟೆ ನೀಡಿದಾಗ, ಅದನ್ನು ತೊಡೆಯ ಮೇಲೆ ಇಟ್ಟುಕೊಂಡಳೇ ಹೊರತು ತಿಂಡಿಯನ್ನು ಬಾಯಿಗಿಡಲಿಲ್ಲ. ಬಹುಶಃ ಅವಳು ಕಿವುಡಿ ಮೂಗಿ ಆಗಿರಬೇಕೆಂದು ಅವರೆಲ್ಲ ಭಾವಿಸಿದರು. ಇಂಡಿಯನ್ನರು ತಮ್ಮ ಭಾಷೆಯಲ್ಲಿ ನೀರೇನಾದರೂ ಬೇಕಿದೆಯೇ ಎಂದು ಕೇಳಿದಾಗ, ಅರ್ಥವಾದಂತೆ ಪ್ರತಿಕ್ರಿಯಿಸಿದಳು. ತಲೆಯಾಡಿಸಿ, ಬೇಕೆಂಬುದನ್ನು ಸೂಚಿಸಿದಳು.

ಅವರು ಅವಳನ್ನು ಬೇರೆ ದಾರಿ ಇಲ್ಲದೆ ಇರಿಸಿಕೊಂಡರು. ಅವಳಿಗೆ ರೆಬೆಕಾ ಎಂದು ಹೆಸರಿಡಲು ನಿರ್ಧರಿಸಿದರು. ಅವಳ ತಾಯಿಯ ಹೆಸರು ಪತ್ರದ ಮೂಲಕ ರೆಬೆಕಾ ಎಂದು ತಿಳಿದುಬಂದಿತ್ತು. ಅಲ್ಲದೆ ಅರೆಲಿಯಾನೋ ಬಹಳ ತಾಳ್ಮೆಯಿಂದ ಎಲ್ಲ ಸಂತರ ಹೆಸರುಗಳನ್ನು ಅವಳ ಮುಂದೆ ಓದಿದ. ಆದರೂ ಅದಕ್ಕೆ ಯಾವುದೇ ಪ್ರತಿಕ್ರಿಯೆ ಕಾಣಲಿಲ್ಲ. ಮಕಾಂಡೋದಲ್ಲಿ ಅಲ್ಲಿಯವರೆಗೆ ಯಾರ ಸಾವೂ ಸಂಭವಿಸಿರಲಿಲ್ಲವಾದ ಕಾರಣ ಯಾವುದೇ ಒಳ್ಳೆಯ ಸಮಾಧಿ ಸ್ಥಾನ ಇರಲಿಲ್ಲ. ಆದ್ದರಿಂದ ಆ ಅಸ್ಥಿಗಳಿದ್ದ ಚೀಲವನ್ನು ಬಹಳ ಕಾಲ ಹಾಗೆಯೇ ಇಟ್ಟುಕೊಂಡರು. ಆ ಚೀಲ ಎಲ್ಲೆಲ್ಲಿಯು ನಿರೀಕ್ಷಿಸದ ಜಾಗಗಳಲ್ಲಿಯೂ ತೊಡರುವಂತೆ ಕಾಣಿಸುತ್ತಿತ್ತಲ್ಲದೆ, ಕಾವಿಗೆ ಕುಳಿತ ಕೋಳಿಯಂತೆ ಗೋಚರಿಸುತ್ತಿತ್ತು. ಜೊತೆಗೆ ಕ್ಲಕ್ ಕ್ಲಕ್ ಸದ್ದು ಬೇರೆ! ಕುಟುಂಬದ ಜೊತೆ ಬೆರೆತು ಬದುಕಲು ಬಹಳ ಸಮಯ ತೆಗೆದುಕೊಂಡಳು ರೆಬೆಕಾ. ಮನೆಯ ಮೂಲೆಯೊಂದರಲ್ಲಿ ತೂಗುವ ಕುರ್ಚಿಯಲ್ಲಿ ಕುಳಿತು ಬೆರಳು ಚೀಪುತ್ತಿದ್ದಳು. ಗಡಿಯಾರದ ಗಂಟೆಗಳ ಹೊರತಾಗಿ ಅವಳನ್ನು ಯಾವುದೂ ಆಕರ್ಷಿಸುತ್ತಿರಲಿಲ್ಲ. ಈ ಗಡಿಯಾರಗಳ ಸದ್ದಿಗಾಗಿ ಪ್ರತಿ ಅರ್ಧಗಂಟೆಗೊಮ್ಮೆ ಭೀತ ಕಣ್ಣುಗಳಿಂದ ಎಲ್ಲಿಯಾದರೂ ಗಾಳಿಯಲ್ಲಿ ಅದರ ಜಾಗಸಿಗಬಹುದೇನೋ ಎಂದು ನೋಡುತ್ತಿದ್ದಳು. ಎಷ್ಟೋ ದಿನದವರೆಗೂ ಅವಳಿಗೆ ಊಟ ಮಾಡಿಸಲು ಸಾಧ್ಯವೇ ಆಗಲಿಲ್ಲ. ಅಷ್ಟು ದಿನ ಹಸಿವಿದ್ದರೂ ಅವಳೇಕೆ ಸಾಯದೆ

ಬದುಕಿದ್ದಾಳೆ ಎನ್ನುವ ಅನುಮಾನಕ್ಕೆ ಇಂಡಿಯನ್ನರು ಗುಟ್ಟಾಗಿ ಅವಳ ಚಲನವಲನಗಳನ್ನು ಗಮನಿಸುತ್ತಾ ಉತ್ತರ ಹುಡುಕಿದರು. ರೆಬೆಕಾ ಒದ್ದೆಯಾದ ಮಣ್ಣನ್ನು ಅಂಗಳದಿಂದಲೂ ಮತ್ತು ಗೋಡೆ ಮೇಲಿನ ಸುಣ್ಣದ ಪೆಳ್ಳೆಗಳನ್ನು ಉಗುರುಗಳಿಂದ ಕೆರೆದು ತಿನ್ನುತ್ತಿದ್ದಳೆಂಬ ರಹಸ್ಯವನ್ನು ಬಯಲು ಮಾಡಿದರು. ಸಹಜವಾಗಿಯೇ ಅವಳ ತಂದೆತಾಯಿಯರು ಇದಕ್ಕಾಗಿ ಅವಳನ್ನು ಬೈಯ್ಯುತ್ತಿದ್ದಿರಬೇಕು. ಅದಕ್ಕಾಗಿಯೇ ಹೀಗೆ ಗುಟ್ಟು ಗುಟ್ಟಾಗಿ ತಿನ್ನುತ್ತಿದ್ದಿರಬೇಕು. ಅಪರಾಧಿ ಪ್ರಜ್ಞೆಯಿಂದ ತನ್ನಲ್ಲಿದ್ದುದನ್ನು ಮರೆಯಾಗಿರಿಕೊಂಡು ಯಾರೂ ಇಲ್ಲದಿದ್ದಾಗ ಗುಟ್ಟಾಗಿ ತಿನ್ನುತ್ತಿದ್ದಿರಬೇಕು. ಇದೆಲ್ಲ ತಿಳಿದ ಮೇಲೆ ಅವಳ ಮೇಲೆ ಕಣ್ಣಿಟ್ಟಿರಬೇಕೆಂಬ ವ್ಯವಸ್ಥೆಯಾಯಿತು. ಅಂಗಳದಲ್ಲಿ ಸಗಣಿಯ ಸಾರಣಿ ಮತ್ತು ಗೋಡೆಗಳಿಗೆ ಮೆಣಸಿನ ಪುಡಿಯ ಲೇಪವನ್ನು ಮಾಡಲಾಯಿತು. ಇದರಿಂದ ಅವಳ ದುರಭ್ಯಾಸ ತಪ್ಪಬಹುದೆಂದು ಭಾವಿಸಿದರೂ ಅವಳು ಎಷ್ಟು ಜಾಣತನದಿಂದ ಹೇಗೋ ಒಂದಷ್ಟು ಮಣ್ಣನ್ನು ಗಿಟ್ಟಿಸಿಕೊಂಡಿದ್ದಳು. ಇದರಿಂದಾಗಿ ಅವಳ ಮೇಲೆ ಇನ್ನೂ ಕಠಿಣ ಚರ್ಯೆ ತೆಗೆದುಕೊಳ್ಳಬೇಕಾಯಿತು. ಉರ್ಸುಲಾ ಕಿತ್ತಲೆ ರಸ ಮತ್ತು ಯಾವುದೋ ಭೇದಿ ಔಷಧವನ್ನು ಒಂದು ತಪ್ಪಲೆಯಲ್ಲಿ ಹಾಕಿ ಇಡೀ ರಾತ್ರಿ ಮಂಜಿನಲ್ಲಿರಿಸಿ, ಮಾರನೆ ದಿನ ಒಂದು ಅಳತೆಯಷ್ಟು ಔಷಧವನ್ನು ಬರಿ ಹೊಟ್ಟೆಯಲ್ಲಿ ಕುಡಿಯುವಂತೆ ಮಾಡಿದಳು. ಮಣ್ಣು ತಿನ್ನುವ ಕೆಟ್ಟ ಚಾಳಿಗೆ ಇದು ಔಷಧವೆಂದು ಯಾರೂ ಹೇಳದಿದ್ದರೂ ಅವಳಿಗೆ ಒಂದು ವಿಷಯ ಗೊತ್ತಿತ್ತು. ಯಾವುದೇ ಕಹಿ ಪದಾರ್ಥ ಹೊಟ್ಟೆ ಸೇರಿದರೆ, ಲಿವರ್ ಅಥವಾ ಯಕೃತ್ತಿನ ಮೇಲೆ ಪರಿಣಾಮವಾಗುತ್ತದೆ ಎಂಬುದನ್ನು ಊಹಿಸಿದ್ದಳು. ಔಷಧಿ ಕುಡಿಯಲು ರೆಬೆಕಾ ಸಾಕಷ್ಟು ಹಟ ಮಾಡಿದಳು. ಪ್ರತಿರೋಧಿಸಿದಳು. ಆದರೂ ಅವರು ಬಿಡದೆ ಕರುವಿಗೆ ಗೊಟ್ಟಹಾಕಿ ಕುಡಿಸುವಂತೆ, ಬಾಯಿ ಬಿಡಿಸಿ ಹೇಗೋ ಔಷಧಿಯನ್ನು ನುಂಗಿಸಿದರು. ಕಚ್ಚುವುದು, ಒದೆಯುವುದು, ಉಗಿಯುವುದು, ಬೈಯ್ಯುವುದು – ಇತ್ಯಾದಿಗಳನ್ನು ಸಹಿಸಿಕೊಳ್ಳುವುದೇ ಕಷ್ಟವೆನಿಸಿತ್ತು. ಇಂಡಿಯನ್ನರು ಅರ್ಥಮಾಡಿಕೊಂಡಂತೆ ಅವಳ ಬೈಗುಳು ಅತ್ಯಂತ ಅಶ್ಲೀಲವೆಂದು ತಮ್ಮ ಭಾಷೆಯಲ್ಲಿ ಭಾವಿಸಲಾಗಿತ್ತು. ಈ ವಿಷಯ ತಿಳಿದಮೇಲೆ ಉರ್ಸುಲಾ ಬೆತ್ತದ ಪ್ರಯೋಗಕ್ಕೆ ಮುಂದಾದಳು. ಏನೇ ಆದರೂ ಉರ್ಸುಲಾಳ ಔಷಧವೋ ಇಲ್ಲ ಕೊಟ್ಟ ಹೊಡೆತವೋ, ಸತ್ಯ ಹೇಳಬೇಕಾದರೆ ರೆಬೆಕಾ ಕೆಲವೇ ದಿನಗಳಲ್ಲಿ ಸುಧಾರಣೆಯ ಲಕ್ಷಣಗಳನ್ನು ತೋರಿದ್ದು ಆರ್ಕಾಡಿಯೋ ಅಮರಾಂತರ ಜೊತೆ ಆಟವಾಡತೊಡಗಿದಳು. ಅವರೂ ಕೂಡ ಅವಳನ್ನು ಹಿರಿಯಕ್ಕನಂತೆ ನಡೆಸಿಕೊಂಡರು.

ತೃಪ್ತಿಯಾಗುವವರೆಗೂ ತಿನ್ನುತ್ತಿದ್ದಳು. ಪಾತ್ರೆ ಪರಡಿಗಳನ್ನು ಅಚ್ಚುಕಟ್ಟಾಗಿ ಬಳಸುತ್ತಿದ್ದಳು. ಕ್ರಮೇಣ, ಅವಳು ಇಂಡಿಯನ್ ಭಾಷೆಯಷ್ಟೇ ಸುಲಲಿತವಾಗಿ ಸ್ಪ್ಯಾನಿಷ್ ಭಾಷೆಯನ್ನೂ ಮಾತಾಡಬಲ್ಲಳು ಎಂಬುದು ತಿಳಿಯಿತು. ದೈಹಿಕಶ್ರಮದ ಕೆಲಸಗಳನ್ನು ಮಾಡುವಲ್ಲಿ ಬಹಳ ಸಮರ್ಥಳಾಗಿ ಕಾಣಿಸಿಕೊಂಡಳು. ತಾನೇ ತನ್ನ ಸ್ವಂತ ಪದಗಳನ್ನು ಸೇರಿಸಿಕೊಂಡು ಗಡಿಯಾರಗಳ ವಾಲ್ಟ್ಜ್‌ಗಳನ್ನು ತಮಾಷೆಯಾಗಿ ಹಾಡುತ್ತಿದ್ದಳು. ಅವಳು ತಮ್ಮ ಸ್ವಂತ ಕುಟುಂಬದ ಸದಸ್ಯಳೆಂದು ಭಾವಿಸಿಕೊಳ್ಳಲು ಹೆಚ್ಚು ಸಮಯ ಬೇಕಾಗಲಿಲ್ಲ. ಎಲ್ಲರಿಗಿಂತ ಉರ್ಸುಲಾಳ ಜೊತೆ ಹೆಚ್ಚು ಆತ್ಮೀಯವಾಗಿದ್ದಳು. ತನ್ನ ಸ್ವಂತ ಮಕ್ಕಳಿಗಿಂತ

ಹೆಚ್ಚು ಪ್ರೀತಿಸುತ್ತಿದ್ದಳು. ಆರ್ಕಾಡಿಯೋ ಮತ್ತು ಅಮರಾಂತರನ್ನು ಸೋದರ(ತಮ್ಮ) ಮತ್ತು ತಂಗಿ ಎಂದು ಕರೆಯುತ್ತಿದ್ದರೆ, ಅರೆಲಿಯಾನೋನನ್ನು ಅಂಕಲ್ ಎಂದೂ, ಜೋಸ್ ಆರ್ಕಾಡಿಯೋನನ್ನು ಬ್ಯುಂಡಿಯಾನನ್ನು ಅಜ್ಜ ಎಂದು ಕರೆಯುತ್ತಿದ್ದಳು. ಹೀಗಾಗಿ ರೆಬೆಕಾ ಬ್ಯುಂಡಿಯಾ ಎಂಬ ಹೆಸರನ್ನು ಅನ್ವರ್ಥಗೊಳಿಸಿಕೊಂಡಳು. ಆ ಹೆಸರನ್ನೂ ಸಾರ್ಥಕಪಡಿಸಿಕೊಂಡದ್ದು ಕಡೆಗೆ ಅವಳೊಬ್ಬಳೇ ಆಗಿ ಉಳಿದಳು. ಕಡೆತನಕ ಅಂದರೆ ಸಾಯುವ ಕ್ಷಣದವರೆಗೆ ಆ ಹೆಸರನ್ನು ಹೆಮ್ಮೆ ಮತ್ತು ಗಾಂಭೀರ್ಯತೆಯೊಂದಿಗೆ ಕಾಪಾಡಿಕೊಂಡಳು.

ಮಣ್ಣುತಿನ್ನುವ ಕೆಟ್ಟ ಅಭ್ಯಾಸದಿಂದಷ್ಟೇ ಹೊರಗೆ ಬಂದಿದ್ದ ಅವಧಿಯಲ್ಲಿ ಒಂದು ದಿನ ರಾತ್ರಿ ಮಕ್ಕಳ ಜೊತೆ ಮಲಗಲೆಂದು ಬೇರೆ ಕೋಣೆಗೆ ಕರೆತಂದಿದ್ದಾಗ, ಅವರ ಜೊತೆಗೇ ಮಲಗಿದ್ದ ಇಂಡಿಯನ್ ಹೆಂಗಸು, ಮಧ್ಯೆ ಮಧ್ಯೆ ಕೇಳಿ ಕೇಳಿ ಬರುತ್ತಿದ್ದ ವಿಚಿತ್ರ ಸದ್ದಿನಿಂದ ಎಚ್ಚರಗೊಂಡಳು. ಗಾಭರಿಯಿಂದ ಎದ್ದು ನೋಡಿದರೆ, ರೆಬೆಕಾ ತೂಗು ಕುರ್ಚಿಯಲ್ಲಿ ಕುಳಿತು ಬೆರಳು ಚೀಪುತ್ತಾ ಕುಳಿತಿದ್ದುದನ್ನು ನೋಡಿದಳು. ಕತ್ತಲಲ್ಲಿ ಅವಳ ಕಣ್ಣುಗಳು ಬೆಕ್ಕಿನ ಕಣ್ಣುಗಳಂತೆ ಹೊಳೆದವು. ಅವಳ ದುರದೃಷ್ಟಕ್ಕೆ ಭಯ ಮತ್ತು ಮರುಕಗಳಿಂದ ಕೂಡಿದ್ದ ವಿಸಿಟಾಸಿಯೋನ್‌ಗೆ ಆ ಕಣ್ಣುಗಳಲ್ಲಿ ಯಾವುದೋ ಭಯಾನಕ ಕಾಯಿಲೆಯ ಸೂಚನೆ ಕಾಣಿಸಿತಲ್ಲದೆ ಇದೊಂದು ನಿದ್ದೆಬಾರದ ಕಾಯಿಲೆಯಾಗಿತ್ತು ಎಂಬುದನ್ನು ಗುರುತಿಸಿದಳು.

ಕತಾರೆ, ಇಂಡಿಯನ್, ಬೆಳಗಿನ ಹೊತ್ತಿಗೆ ಮನೆ ಬಿಟ್ಟಿದ್ದ ಅವನ ತಂಗಿ ಅಲ್ಲಿಯೇ ಉಳಿದಳು. ಅವಳಿಗೆ ಗೊತ್ತಿತ್ತು ಏನೇ ಮಾಡಿದರೂ ಎಲ್ಲೇ ಹೋದರೂ ಈ ಕಾಯಿಲೆ ಬೆನ್ನಟ್ಟಿ ಬಾರದೆ ಇರುವುದಿಲ್ಲ ಎಂದು. ವಿಸಿಟಾಸಿಯೋನ್‌ನ ಆತಂಕ ಯಾರಿಗೂ ಅರ್ಥವಾಗಿರಲಿಲ್ಲ. "ಮತ್ತೆ ನಾವು ಎಂದಿಗೂ ನಿದ್ದೆಮಾಡದಿದ್ದಷ್ಟೂ ಒಳ್ಳೆಯದು" ಎಂದು ಜೋಸ್ ಆರ್ಕಾಡಿಯೋ ಬ್ಯುಂಡಿಯಾ ತಮಾಷೆಯಿಂದಲೇ ಹೇಳಿದ. ಅಲ್ಲದೆ, 'ಹಾಗೆ ಮಾಡುವುದರಿಂದ ಬದುಕಿನಿಂದ ಬಹಳಷ್ಟು ಪಡೆಯಬಹುದು' ಎಂದು ಮಾತನ್ನು ಮುಂದುವರೆಸಿದ. ಆದರೆ ಇಂಡಿಯನ್ ಹೆಂಗಸು, 'ನಿದ್ದೆಬಾರದ ರೋಗದ ಆತಂಕ ನಿದ್ದೆ ಮಾಡಲು ಸಾಧ್ಯವಾಗದಿರುವುದೊಂದೆ ಅಲ್ಲ, ಅದು ಅದೇ ಭಯಾನಕ ಪರಿಣಾಮಗಳಿಗೆ ದಾರಿ ಮಾಡುತ್ತದೆ.' ಜ್ಞಾಪಕಶಕ್ತಿ ಕಳೆದು ಹೋಗಬಹುದು ಎಂಬುದನ್ನೂ ವಿವರಿಸಿದಳು. ಅವಳು ಹೇಳಿದ ಮಾತಿನ ಅರ್ಥವೆಂದರೆ, ಈ ರೀತಿಯಲ್ಲಿ ಸದಾ ನಿದ್ದೆಗೆಟ್ಟು ಕಣ್ಣರಳಿಸಿ ಎಚ್ಚರದಿಂದಿದ್ದರೆ, ಬಾಲ್ಯದ ನೆನಪುಗಳೆಲ್ಲ ಅಳಿಸಿಹೋಗುತ್ತವೆ. ಕುಟುಂಬದವರು ಅವರ ಹೆಸರು ಅವರ ಗುರುತು ಅಷ್ಟೇ ಅಲ್ಲ, ಕಡೆಗೆ ತಾನು ಯಾರೆಂಬುದು ಮರೆತು ಹೋಗುತ್ತದೆ. ತನ್ನ ಭೂತಕಾಲವೂ ಇಲ್ಲವೆನ್ನುವಷ್ಟರಮಟ್ಟಿಗೆ ಇದು ಮುಂದುವರೆಯುತ್ತದೆ ಎಂದಳು. ಬ್ಯುಂಡಿಯಾ ಜೋರಾಗಿ ನಕ್ಕುಬಿಟ್ಟ. ಇಂಡಿಯನ್ ಸೃಷ್ಟಿಯಾದ ಮೂಢನಂಬಿಕೆಗಳಲ್ಲಿ ಇದೂ ಒಂದು ರೋಗ ಎಂದು ಭಾವಿಸಿದ. ಆದರೆ ಉರ್ಸುಲಾ ಮಾತ್ರ ಸುರಕ್ಷತೆಯ ದೃಷ್ಟಿಯಿಂದ, ಬೇರೆ ಮಕ್ಕಳಿಂದ ರೆಬೆಕಾ ದೂರ ಉಳಿಯುವಂತೆ ಜಾಗರೂಕತೆ ತೆಗೆದುಕೊಂಡಳು.

ಹಲವು ವಾರಗಳು ಕಳೆದ ನಂತರ, ವಿಸಿಟಾಸಿಯೋನ್‌ಳ ಆತಂಕ ತಣ್ಣಗಾದಾಗ, ಜೋಸ್ ಆರ್ಕಾಡಿಯೋ ಬ್ಯುಂಡಿಯಾ ನಿದ್ದೆ ಇಲ್ಲದೆ ತನ್ನ ಹಾಸಿಗೆಯಲ್ಲಿ ಹೊರಳಾಡುತ್ತಿದ್ದ. ಎಚ್ಚೆತ್ತ ಉರ್ಸುಲಾ ಏನಾಯಿತೆಂದು ವಿಚಾರಿಸಿದಳು. "ಪ್ರುಡೆನ್ಸಿಯೋ ಆಗ್ವಿಲಾರ್ ಮತ್ತೆ ನೆನಪಿಗೆ ಬರುತ್ತಿದ್ದಾನೆ" – ಎಂದು ಹೇಳಿದ. ಒಂದು ಕ್ಷಣವೂ ನಿದ್ದೆ ಮಾಡಲಾಗಲಿಲ್ಲ. ಆದರೆ ಮರುದಿನ ನಿರುಮ್ಮಳವಾಗಿದ್ದು, ಹಿಂದಿನ, ಭಯಾನಕ ರಾತ್ರಿಯನ್ನು ಮರೆತುಹೋಗಿದ್ದರು.

ಊಟದ ಸಮಯದಲ್ಲಿ, ತಾನು ಇಡೀ ರಾತ್ರಿ ಲ್ಯಾಬೋರೇಟರಿಯಲ್ಲಿ ಉರ್ಸುಲಾಗೆ, ಅವಳ ಹುಟ್ಟು ಹಬ್ಬಕ್ಕೆ ಕೊಡಬೇಕೆಂದಿದ್ದ ಬ್ರೋಚನ್ನು ಸಿದ್ಧಮಾಡುತ್ತಿದ್ದನೆಂದೂ ತನಗೇನೂ ಆಗಲಿಲ್ಲವೆಂದು ಅಚ್ಚರಿಯ ದನಿಯಲ್ಲಿ ತಿಳಿಸಿದ. ಮಾರನೇ ದಿನದವರೆಗು ಅವರಿಗೆ ಯಾವುದೇ ಆತಂಕವೆನಿಸಲಿಲ್ಲ; ಅವರಿಗೆ ನಿದ್ದೆ ಮಾಡಬೇಕೆಂದೂ ಅನಿಸಿರಲಿಲ್ಲ. ಆದರೆ ನಂತರ ತಾವು ಐವತ್ತು ಗಂಟೆಗಳನ್ನು ನಿದ್ದೆಯಿಲ್ಲದೆ ಕಳೆದ ವಿಷಯದ ಅರಿವಾಯಿತು.

"ಮಕ್ಕಳೂ ಕೂಡಾ ಮಲಗಲೇ ಇಲ್ಲ" ಎಂದು ಇಂಡಿಯನ್ ಹೆಂಗಸು ವಿಧಿಯಾಟದಲ್ಲಿನ ನಂಬಿಕೆಯೊಂದಿಗೆ ಹೇಳಿದಳು. "ಒಮ್ಮೆ ಮನೆಯೊಳಗೆ ಹೊಕ್ಕರೆ, ಈ ಕಾಯಿಲೆ ಯಾರನ್ನೂ ಬಿಡುವುದಿಲ್ಲ".

ಎಲ್ಲರಿಗೂ ನಿದ್ದೆ ಬಾರದ ಕಾಯಿಲೆ ಅಂಟಿತ್ತು ಉರ್ಸುಲಾ ತನ್ನ ತಾಯಿಯಿಂದ ಕಲಿತಿದ್ದ ಗಿಡಮೂಲಿಕೆಗಳಿಂದ ತಯಾರಾದ ಔಷಧವನ್ನು ಎಲ್ಲರಿಗೂ ಕೊಡಿಸಿದಳು. ಆದರೂ ಯಾರೂ ನಿದ್ದೆ ಮಾಡಲಿಲ್ಲ. ಸುಮ್ಮನೆ ಇಡೀ ದಿನ ಹಗಲುಗನಸು ಕಾಣುವುದರಲ್ಲಿಯೆ ಕಳೆದರು. ಆ ಭ್ರಮಾತ್ಮಕ ಸ್ಥಿತಿಯಲ್ಲಿ, ಸ್ಪಷ್ಟವಾಗಿ ತಮ್ಮ ಕನಸುಗಳನ್ನಷ್ಟೆ ಅಲ್ಲದೆ ಬೇರೆಯವರ ಕನಸುಗಳನ್ನೂ ಕಾಣತೊಡಗಿದರು. ಮನೆತುಂಬ ಬಂದು ಹೋಗುವವರು ತುಂಬಿರುವಂತೆ ಕಂಡರು. ರೆಬೆಕಾ ಅಡಿಗೆ ಮನೆ ಮೂಲೆಯೊಂದರಲ್ಲಿ ತೂಗು ಕುರ್ಚಿಯಲ್ಲಿ ಕುಳಿತು, ತನ್ನಂತೆ ಕಾಣುತ್ತಿದ್ದ, ಬಿಳಿ ಬಟ್ಟೆ ಧರಿಸಿದ್ದ, ಅಂಗಿಯ ಕಾಲರ್‌ನಲ್ಲಿ ಚಿನ್ನದ ಗುಂಡಿಗಳಿದ್ದ ವ್ಯಕ್ತಿಯೊಬ್ಬ ತನಗೆ ಗುಲಾಬಿಗಳ ಗುಚ್ಛವನ್ನು ಕೊಡುತ್ತಿದ್ದ ಕನಸನ್ನು ಕಂಡಳು. ಅವನ ಜೊತೆ ಒಬ್ಬಳು ಹೆಂಗಸು ಇದ್ದು ಗುಚ್ಛದಿಂದ ಒಂದು ಗುಲಾಬಿಯನ್ನು ತೆಗೆದುಕೊಂಡು ಅವಳಿಗೆ ಮುಡಿಸಿದ್ದನ್ನು ಕಂಡಳು. ಉರ್ಸುಲಾಗೆ ಅವರಿಬ್ಬರೂ ಅವಳ ತಂದೆ ತಾಯಿಗಳಿರಬೇಕು ಅನಿಸಿತು. ಅವರು ಯಾರೆಂದು ಎಷ್ಟೇ ಗುರುತಿಸಲು ಪ್ರಯತ್ನಪಟ್ಟರೂ, ಅವರನ್ನು ತಾನೆಂದೂ ನೋಡಿಲ್ಲವೆಂದೇ ಎನಿಸಿತು. ಜೋಸ್ ಆರ್ಕಾಡಿಯೋ ಬ್ಯುಂಡಿಯಾ, ಇನ್ನೂ ಮನೆಯಿಂದ ಬೇಯಿಸಿದ ಮಾಂಸದ ತುಂಡುಗಳ ಮಾರಾಟ ಮುಂದುವರೆದಿದ್ದುದಕ್ಕಾಗಿ ತನ್ನನ್ನು ತಾನು ಕ್ಷಮಿಸದಾದ. ಮಕ್ಕಳು ಮತ್ತು ದೊಡ್ಡವರು ನಿದ್ದೆ ಬಾರದ ಸ್ಥಿತಿಯ ಹಸಿರು ಹುಂಜ ಮತ್ತು ಪಿಂಕ್ ಮೀನಿನ ರುಚಿಯನ್ನು ಸಂತಸದಿಂದ ಸವಿದರು. ವಾಸ್ತವವಾಗಿ ಈ ನಿದ್ದೆಬಾರದ ಕಾಯಿಲೆಯಿಂದ ಅವರಿಗೆ ಬಹಳ ಸಂತೋಷವೇ ಆಗಿತ್ತು. ಯಾಕೆಂದರೆ ಮಕಾಂಡೋಗೆ ಸಂಬಂಧಿಸಿದ್ದ ಎಷ್ಟೋ ಕೆಲಸಗಳು ಬಾಕಿ ಇದ್ದು, ಅವುಗಳನ್ನು ಮಾಡಲು ಸಾಧ್ಯವಾಯಿತು. ಅವರು ಎಷ್ಟು ಕಷ್ಟಪಟ್ಟು ಕೆಲಸಗಳನ್ನು ಮಾಡಿಮುಗಿಸಿದರೆಂದರೆ, ಮುಂದೆ ಮಾಡುವುದಕ್ಕೆ ಏನೂ ಕೆಲಸವಿಲ್ಲದೆ, ಬೆಳಗಿನ ಜಾವ ಮೂರುಗಂಟೆಗೇ ಕೈಕಟ್ಟಿಕೊಂಡು ಕುಳಿತಿರುತ್ತಿದ್ದರು.

ಗಡಿಯಾರದ ವಾಲ್ವ್‌ನ ಸ್ವರಗಳನ್ನು ಎಣಿಸುವುದು ಬಿಟ್ಟು ಬೇರೇನೂ ಕೆಲಸವಿರಲಿಲ್ಲ. ಯಾರಿಗೆ ನಿದ್ದೆಮಾಡಬೇಕು ಅಂತ, ದಣಿವಿನಿಂದ ಅಲ್ಲ, ಕನಸು ಕಾಣುವ ಆಸೆಯಿಂದ, ಬಯಸುತ್ತಿದ್ದರೋ ಅವರೆಲ್ಲ ಏನೆಲ್ಲ ಪ್ರಯತ್ನ ಮಾಡಿದರೂ ಸಾಧ್ಯವಾಗುತ್ತಿರಲಿಲ್ಲ. ಇಡೀ ರಾತ್ರಿ ಅವರೆಲ್ಲ ಒಟ್ಟಿಗೆ ಸೇರಿ ಬಿಡುವಿಲ್ಲದೆ ಕೊನೆಯಿಲ್ಲದೆ ಹರಟೆ, ಹಾಸ್ಯ ಇತ್ಯಾದಿಗಳಲ್ಲಿ ಕಳೆದರಲ್ಲದೆ, ಕೊನೆಯಿಲ್ಲದ ಕಥೆ ಹೇಳುವ ಆಟಕ್ಕೆ ಮುಂದಾದರೂ ನಿರೂಪಕ ಹುಂಜದ ಕಥೆಯನ್ನು ಹೇಳಲು ಆರಂಭಿಸುತ್ತಾನೆ. ಕೇಳುವವರನ್ನು, ತಾನು ಕಥೆ ಹೇಳಲೇನು ಎಂದು ಪ್ರಶ್ನಿಸುತ್ತಾನೆ. ಅವರೇನಾದರೂ ಬೇಡ ಎಂದರೆ ನಿರೂಪಕ, ನಾನು ನಿಮಗೆ ಬೇಡ ಎಂದು ಹೇಳಿದೆನೆ – ಎನ್ನುತ್ತಾನೆ. ಮತ್ತೆ ಕಥೆ ಮುಂದುವರೆಸುತ್ತಾನೆ. ಮತ್ತೆ ಹಿಂದಿನಂತೆಯೇ ಪ್ರಶ್ನಿಸುತ್ತಾನೆ. ಮತ್ತೆ ಅವರು ಬೇಡವೆನ್ನಲು, ನಾನು ಬೇಡವೆಂದು ಹೇಳಲು ಕೇಳಿದೆನೇ ಎನ್ನುತ್ತಾನೆ. ಹೀಗೆ ಕಥೆ ಮುಂದುವರೆಯುತ್ತದೆ. ಈ ಬಾರಿ ಅವನ ಪ್ರಶ್ನೆಗೆ ಯಾರೂ ಉತ್ತರಿಸದೆ ಸುಮ್ಮನಿರಲು, ನಿಮ್ಮನ್ನು ಸುಮ್ಮನೆ ಇರಲು ಹೇಳಿಲ್ಲವೆನ್ನುತ್ತಾನೆ. ಅಲ್ಲಿಂದ ಯಾರೂ ಎದ್ದು ಹೋಗಬಾರದು ಯಾಕೆಂದರೆ, ನಿರೂಪಕ ಯಾಕೆ ಎದ್ದು ಹೋದೆ ಎಂದು ಕೇಳುತ್ತಾನೆ. ತಾನು ಅವರಿಗೆ ಕಥೆ ಹೇಳಬೇಕೆ ಎಂದು ಕೇಳಿದಾಗ, ಬೇಡ ಎನ್ನಲು, ಬೇಡ ಎನ್ನಲು ಹೇಳಿದೆನೆ ಎಂದು ಪ್ರತಿಯಾಗಿ ಹೇಳುತ್ತಾನೆ. ಈ ವಿಷಚಕ್ರದಲ್ಲಿ ಇಡೀ ರಾತ್ರಿಗಳೆಲ್ಲ ಕಳೆದು ಹೋದುವು ಜೋಸ್ ಆರ್ಕಾಡಿಯೋಗೆ. ಈ ನಿದ್ರೆಯಿಲ್ಲದ ಕಾಯಿಲೆ ಇಡೀ ಊರನ್ನೇ ವ್ಯಾಪಿಸಿದೆ ಎಂದು ಅರ್ಥವಾದಾಗ, ಊರಿನ ಕುಟುಂಬಗಳ ಹಿರಿಯರನ್ನೆಲ್ಲ ಸೇರಿಸಿ, ತನಗೆ ಈ ಕಾಯಿಲೆ ಬಗ್ಗೆ ತಿಳಿದಿರುವುದನ್ನೆಲ್ಲ ತಿಳಿಸಿ, ಅದನ್ನು ತಡೆಯಲು ಪರಿಹಾರೋಪಾಯದ ಮಾರ್ಗಗಳ ಬಗ್ಗೆ ಮತ್ತು ಅದು ಉಳಿದ ಊರುಗಳಿಗೆ ಹರಡದಂತೆ ನೋಡಿಕೊಳ್ಳುವ ವಿಧಾನಗಳನ್ನು ಕುರಿತು ಮಾತಾಡಿ ಅವರನ್ನೆಲ್ಲ ಇದಕ್ಕೆ ಒಪ್ಪಿಸಿದ. ಅರಬರು ಮಕಾಬ್‌ಗಳಿಗೆ (ಗಿಳಿಗಳು) ಬದಲಾಗಿ ಕೊಟ್ಟಿದ್ದ ಗಂಟೆಗಳು ಮೇಕೆಗಳ ಕೊರಳಲ್ಲಿ ಇದ್ದುದನ್ನು ತೆಗೆದು ನಗರ ಪ್ರದೇಶ ದ್ವಾರದಲ್ಲಿ ಅವುಗಳನ್ನು ಪಹರೆಯವರ ವಿನಂತಿ ಮತ್ತು ಬುದ್ಧಿವಾದವನ್ನು ಕೇಳಿಸಿಕೊಳ್ಳದೆ ಒಳಗೆ ಪ್ರವೇಶಿಸಲೇಬೇಕೆಂದು ಒತ್ತಾಯಿಸುವವರ ಉಪಯೋಗಕ್ಕಿರಲೆಂದು ಕಟ್ಟಿದ್ದರು. ಮಕಾಂಡೋ ಒಳಗೆ ಪ್ರವೇಶಿಸಬಯಸುವ ಅಪರಿಚಿತರೆಲ್ಲರೂ ಗಂಟೆಗಳನ್ನು ಬಾರಿಸಬೇಕಾಗಿತ್ತು. ಇದರಿಂದ ಜನಕ್ಕೆ ಅವರು ಆರೋಗ್ಯವಂತರೆಂಬುದನ್ನು ತಿಳಿಯಬಹುದಾಗಿತ್ತು. ಅಲ್ಲಿ ಇರುವವರೆಗೂ ಊರಿನಲ್ಲಿನ ಯಾವುದೇ ತಿಂಡಿ ಪದಾರ್ಥಗಳನ್ನು ತಿನ್ನುವುದಾಗಲೀ, ಕುಡಿಯುವುದಾಗಲೀ, ನಿಷೇಧಿಸಲಾಗಿತ್ತು. ಕಾರಣ ಬಾಯಿಯ ಮೂಲಕ ಈ ಕಾಯಿಲೆ ಹರಡುತ್ತದೆಂಬುದು ಮತ್ತು ಎಲ್ಲ ಆಹಾರ ಪದಾರ್ಥಗಳೂ ಇದರಿಂದ ಕಲುಷಿತವಾಗಿರುತ್ತದೆಂಬುದು ನಿಸ್ಸಂದೇಹವಾಗಿತ್ತು. ಇಂತಹ ಕ್ರಮಗಳಿಂದ ಈ ಕಾಯಿಲೆ ಆ ಊರಿಗಷ್ಟೇ ಸೀಮಿತವಾಗಿತ್ತು. ಈ ಕ್ರಮ ಎಷ್ಟು ಯಶಸ್ವಿಯಾಯಿತೆಂದರೆ, ಅದನ್ನು ಸಹಜ ತುರ್ತು ಪರಿಸ್ಥಿತಿ ಎಂದು ಘೋಷಿಸಲಾಯಿತು. ಈ ತುರ್ತು ಪರಿಸ್ಥಿತಿಯನ್ನು ಎಲ್ಲರೂ ಸ್ವೀಕರಿಸಿದರಲ್ಲದೆ ಬದುಕು ಸಹಜ ಮತ್ತು ವ್ಯವಸ್ಥಿತ ಸ್ಥಿತಿ ತಲುಪಿ ಮಾಮೂಲಿನಂತೆ ಮುಂದುವರಿಯಿತು. ನಿದ್ದೆಯಿಲ್ಲದ ಈ ಕಾಯಿಲೆ ಬಗ್ಗೆ ಮತ್ತೆ ಯಾರೂ ತಲೆ ಕೆಡಿಸಿಕೊಳ್ಳಲಿಲ್ಲ.

ಅರೆಲಿಯಾನೋ ತಾನೇ ಹಲವು ತಿಂಗಳಕಾಲ ಸ್ಮರಣಶಕ್ತಿ ಹಾಳಾಗದಂತೆ, ಕಾಪಾಡುವ ಸೂತ್ರವೊಂದನ್ನು ಆಕಸ್ಮಿಕವಾಗಿ ಈ ಸೂತ್ರವನ್ನು ಕಂಡುಹಿಡಿದ. ನಿದ್ದೆಬಾರದ ಕಾಯಿಲೆಯಲ್ಲಿ ಮೊದಲಿಗನಾಗಿದ್ದ ಅರೆಲಿಯಾನೋ ಬೆಳ್ಳಿ ಸಂಬಂಧದ ಕೆಲಸಗಳಲ್ಲಿ ಪರಿಣಿತನೆನೆಸಿಕೊಂಡ. ಒಂದು ದಿನ, ಲೋಹಗಳನ್ನು ಬಡಿದು ತೆಳ್ಳಗೆ ಮಾಡಲು ಉಪಯೋಗಿಸುತ್ತಿದ್ದ ಬಡಿಗಲ್ಲಿಗಾಗಿ ಹುಡುಕಾಡಿದ. ಅದರ ಹೆಸರು ಅವನಿಗೆ ತಿಳಿದಿರಲಿಲ್ಲ. ಅವನ ತಂದೆ ಅದರ ಹೆಸರು 'ಬಡಿಗಲ್ಲು' ಎಂದು ಹೇಳಿದ. ಅವನು ಅದರ ಹೆಸರನ್ನು ಒಂದು ಕಾಗದದ ತುಂಡಿನಲ್ಲಿ ಬರೆದು ಬಡಿಗಲ್ಲಿನ ಅಡಿಯಲ್ಲಿ ಇರಿಸಿದ. ಮುಂದೆ ಇದರ ಹೆಸರು ಮರೆಯಬಾರದೆಂದು ಈ ರೀತಿ ಮಾಡಿದ. ಆದರೆ ಕೆಲದಿನಗಳಲ್ಲಿ ನಂತರ ನೆನಪಿನ ಶಕ್ತಿ ಮರೆಯಾಗುತ್ತಿರುವುದರ ಮೊದಲ ಸೂಚನೆ ಇದೆಂದು ಅವನಿಗೆ ಹೊಳೆಯಲಿಲ್ಲ. ಕೆಲ ದಿನಗಳ ನಂತರ ಲ್ಯಾಬೋರೇಟರಿಯಲ್ಲಿ ಇರುವ ಪ್ರತಿಯೊಂದು ವಸ್ತುವಿನ ಹೆಸರನ್ನು ಮರೆಯುತ್ತೇನೆಂದು ಅರಿತ. ಆದ್ದರಿಂದ ಪ್ರತಿಯೊಂದು ವಸ್ತುವಿನ ಹೆಸರನ್ನು ಬರೆದಿಡುತ್ತಾ ಹೋದ. ಇದರಿಂದ ಅದನ್ನು ಓದಿ ಗುರುತಿಸಲು ಸಾಧ್ಯವಾಗುತ್ತದೆಂದು ನಂಬಿದ. ಅವನ ತಂದೆ ತನ್ನ ಬಾಲ್ಯದ ಅತ್ಯಂತ ಮಹತ್ವದ ಘಟನೆಗಳನ್ನೆಲ್ಲ ಮರೆಯುತ್ತಿರುವುದರ ಬಗ್ಗೆ ಅರೆಲಿಯಾನೋಗೆ ವಿವರಿಸಿದಾಗ, ಅರೆಲಿಯಾನೋ ತಾನು ಕಂಡುಕೊಂಡ ವಿಧಾನವನ್ನು ವಿವರಿಸಿದ. ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಇಡೀ ಊರಿಗೆ, ಈ ಅಭ್ಯಾಸವನ್ನು ರೂಢಿಸಿಕೊಳ್ಳಬೇಕೆಂದು ಆದೇಶಿಸಿದ. ಮಸಿಯಲ್ಲಿ ಅದ್ದಿದ ಬ್ರಶ್‌ನಿಂದ ಮೇಜು, ಕುರ್ಚಿ, ಗಡಿಯಾರ, ಬಾಗಿಲು, ಗೋಡೆ, ಹಾಸಿಗೆ, ತಟ್ಟೆ ಇತ್ಯಾದಿಯಾಗಿ ಹೆಸರುಗಳನ್ನು ಬರೆದ. ನಂತರ ಕೊಟ್ಟಿಗೆಗೆ ಹೋಗಿ ಹಸು, ಮೇಕೆ, ಹಂದಿ, ಕೋಳಿ, ಎಂದು ಮತ್ತು ಮರಗಿಡಗಳ ಹೆಸರುಗಳನ್ನು, ಬಾಳೆ ಹಣ್ಣು, ಮರಗೆಣಸು ಇತ್ಯಾದಿಗಳೆಂದು ಬರೆದ. ಕ್ರಮೇಣ ಸ್ವಲ್ಪ ಸ್ವಲ್ಪವಾಗಿ ಮರೆಯುವ ಕಾಯಿಲೆ ಮುಸುಕಿಕೊಳ್ಳುವ ಸಾಧ್ಯತೆಯ ಬಗ್ಗೆ ಮನದಟ್ಟಾಯಿತು. ಬರವಣಿಗೆಯಿಂದ ಪದಾರ್ಥಗಳನ್ನು, ವಸ್ತುಗಳನ್ನು ಗುರುತಿಸಬಹುದಾದರೂ ಯಾರಿಗೂ ಅವುಗಳ ಉಪಯೋಗ ನೆನಪಿಲ್ಲದೆ ಹೋಗಬಹುದೆಂದು ಯೋಚಿಸಿದ. ಅದಕ್ಕಾಗಿ, ವಿವರಾತ್ಮಕವಾಗಿ, ಬರೆಯಲು ತೊಡಗಿದ. ಒಂದು ಹಸುವಿನ ಕುತ್ತಿಗೆಗೆ 'ಹಸು' ಎಂದು ನಮೂದಿಸುವುದಷ್ಟೇ ಅಲ್ಲದೆ ಇದು ಹಸು. ಪ್ರತಿದಿನ ಬೆಳಿಗ್ಗೆ ಇದರ ಹಾಲು ಕರೆಯಬೇಕು. ಇದರಿಂದ ಹಾಲು ಉತ್ಪಾದನೆಯಾಗುತ್ತದೆ. ಹಾಲನ್ನು ಕಾಫಿಗೆ ಬೆರೆಸಲು, ಕಾಫಿ ಮಾಡಲು, ಕುದಿಸಬೇಕು – ಎಂದೆಲ್ಲ ಬರೆದು ಮರೆಯುವ ಕಾಯಿಲೆಯ ವಿರುದ್ಧ ಹೋರಾಡಲು ಮಕಾಂಡೋ ಜನರನ್ನು ಸಿದ್ಧಗೊಳಿಸಿದ. ಹೀಗೆ ಅವರು ವಾಸ್ತವತೆಯೊಂದಿಗೆ ಬದುಕುತ್ತಿದ್ದರು. ವಾಸ್ತವತೆಯಲ್ಲಿ ಕಳೆದು ಹೋಗುತ್ತಿದ್ದ ಪದಗಳೊಂದಿಗೆ ಬದುಕುತ್ತಿದ್ದರಾದರೂ, ಬರೆದ ಅಕ್ಷರಗಳ ಮೌಲ್ಯ ಮರೆತು ಹೋಗುತ್ತಿದ್ದಂತೆ ಅವೂ ತಪ್ಪಿ ಹೋಗುತ್ತಿದ್ದವು.

ಜೌಗುಪ್ರದೇಶಕ್ಕೆ ಹೋಗುವ ರಸ್ತೆಯ ಪ್ರಾರಂಭದಲ್ಲಿ ಮಕಾಂಡೊ ಎಂದು ಬೋರ್ಡ್ ಹಾಕಿದರು ಮತ್ತು ಮತ್ತೊಂದು ದೇವರು ಅಸ್ತಿತ್ವದಲ್ಲಿ ಇದ್ದಾನೆ ಎಂಬ ಬೋರ್ಡನ್ನು ಮುಖ್ಯರಸ್ತೆಯಲ್ಲಿ ಹಾಕಿದರು. ಪ್ರತಿಯೊಂದು ಮನೆಯಲ್ಲಿಯೂ ವಸ್ತುಗಳು ಮತ್ತು ಭಾವನೆಗಳನ್ನು ನೆನಪಿಸಿಕೊಳ್ಳುವ ಕ್ರಮಗಳನ್ನು ಬರೆಯಲಾಗಿತ್ತು. ಆದರೆ ಈ ವಿಧಾನ

ಎಷ್ಟೊಂದು ಎಚ್ಚರಿಕೆ ಮತ್ತು ನೈತಿಕ ಸ್ಥೈರ್ಯವನ್ನು ನಿರೀಕ್ಷಿಸುತ್ತಿತ್ತೆಂದರೆ ಕಾಲ್ಪನಿಕ ವಾಸ್ತವತೆಗೆ ಒಳಗಾದರು. ಅದನ್ನು ತಮಗೆ ತಾವೇ ಸೃಷ್ಟಿಸಿಕೊಂಡಿದ್ದಾದರೂ ಅನುಸರಿಸಲು ಕಷ್ಟವೆನಿಸುತ್ತಿತ್ತು. ಆದರೆ ಅದರಿಂದ ಅವರಿಗೊಂದು ಸಮಾಧಾನವಂತೂ ದೊರೆಯಿತು. ಪಿಲಾರ್ ತರ್ಸಿರಾ ಕಾರ್ಡುಗಳನ್ನು ಓದುವುದರ ಮೂಲಕ ಭೂತಕಾಲದ ನಿಗೂಢತೆಯನ್ನು ಮತ್ತು ಮೊದಲೇ ಭವಿಷ್ಯದ ವಿಚಾರವನ್ನು ಹೇಳುವ ತಂತ್ರವನ್ನು ರೂಢಿಸಿಕೊಳ್ಳುವುದರ ಮೂಲಕ ಈ ತಂತ್ರವನ್ನು ಜನಪ್ರಿಯಗೊಳಿಸುವಲ್ಲಿ ಮಹತ್ವದ ಕೊಡುಗೆಯನ್ನು ಸಲ್ಲಿಸಿದಳು. ಈ ಬಗೆಯಿಂದಾಗಿ ನಿದ್ದೆಬಾರದ ಮಂದಿ ಕಾರ್ಡುಗಳ ಮೂಲಕ ಕಟ್ಟಿಕೊಂಡ ಅನಿರ್ದಿಷ್ಟ ಜಗತ್ತಿನಲ್ಲಿ ವಾಸಮಾಡತೊಡಗಿದರು. ತಂದೆ ಎಂಬುದು, ಏಪ್ರಿಲ್ ತಿಂಗಳ ಆರಂಭದಲ್ಲಿ ಬಂದಿದ್ದ ಕಪ್ಪು ವ್ಯಕ್ತಿ; ತಾಯಿ ಎಂಬುದು ಎಡಗೈ ಬೆರಳಲ್ಲಿ ಉಂಗುರ ಧರಿಸಿರುವ ಕಪ್ಪು ಬಣ್ಣದ ವ್ಯಕ್ತಿ, ಹುಟ್ಟಿದ ದಿನಾಂಕ, ಲಾರೆಲ್ ಮರದ ಮೇಲೆ ಕೋಗಿಲೆ ಹಾಡುತ್ತಿದ್ದ ದಿನ ಮಂಗಳವಾರ ಎಂಬುದಷ್ಟೇ ಅಸ್ಪಷ್ಟವಾಗಿ ನೆನಪಿನಲ್ಲಿ ಇರುತ್ತಿತ್ತು. ಸಾಂತ್ವನ, ಸಮಾಧಾನಕ್ಕಾಗಿ ರೂಪಿಸಿಕೊಂಡಿದ್ದ ವಿಧಾನಗಳಿಂದ ಸೋಲನ್ನು ಗ್ರಹಿಸಿದ ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಹಿಂದೆ ಯಾವಾಗಲೋ ಜಿಪ್ಸಿಗಳು ಕಂಡುಹಿಡಿದಿದ್ದ ವಸ್ತುಗಳನ್ನೆಲ್ಲ ನೆನಪಿನಲ್ಲಿ ಇರಿಸಿಕೊಳ್ಳಲು, ಒಂದು ಸ್ಮರಣ ಯಂತ್ರವನ್ನು ರೂಪಿಸಿಕೊಳ್ಳಬೇಕೆಂದಿದ್ದ. ಅಂಥ ಯಂತ್ರವನ್ನು ಈಗ ತಯಾರಿಸಲು ಯೋಚಿಸಿದ. ಈ ಯಂತ್ರ, ಬೆಳಗಿನಿಂದ ದಿನದ ಕಡೆವರೆಗೆ ನಡೆದದ್ದನ್ನು ಪುನರವಲೋಕನ ಮಾಡಬೇಕಾದ ಸಾಧ್ಯತೆಯನ್ನು ಆಧರಿಸಿತ್ತು. ಅಲ್ಲದೆ ಒಬ್ಬನ ಜೀವನಾವಧಿಯ ಸಮಗ್ರ ಜ್ಞಾನವನ್ನು, ಆಧರಿಸಿತ್ತು. ಅವನ ದೃಷ್ಟಿಯಲ್ಲಿ ಅದು ಅಕ್ಷದ ಮೇಲಿನಿಂದ ಲಿವರ್‌ನ ಸಹಾಯದಿಂದ ಪರಿಕ್ರಮಿಸುವ ಪದಕೋಶವಾಗಿತ್ತು. ಅದನ್ನು ತಿರುಗಿಸಿದಾಗ ಅತ್ಯಲ್ಪ ಕಾಲದಲ್ಲಿ ಜೀವನದಲ್ಲಿ ನಡೆದ ಸಂಗತಿಗಳೆಲ್ಲ ಮತ್ತು ಅಗತ್ಯ ವಿಷಯಗಳೆಲ್ಲ ಕಣ್ಣಮುಂದೆ ಹಾದುಹೋಗುತ್ತಿರುವಂಥದ್ದನ್ನು ಪರಿಕಲ್ಪಿಸಿದ. ಅವನು ಹೆಚ್ಚುಕಡಿಮೆ ಹದಿನಾಲ್ಕು ಸಾವಿರ ಅಂಶಗಳನ್ನು ಬರೆಯುವಂಥಾದಾಗ, ಜೌಗುಪ್ರದೇಶದಿಂದ ರಸ್ತೆಯ ಕಡೆಗೆ ವಿಚಿತ್ರವಾಗಿ ಕಾಣುತ್ತಿದ್ದ ಒಬ್ಬ ಮುದುಕ ಹಗ್ಗದಿಂದ ಕಟ್ಟಿದ ಉಬ್ಬಿದ ಸೂಟ್‌ಕೇಸನ್ನು ಹೊತ್ತು, ಕಪ್ಪುಬಟ್ಟೆ ಹೊದಿಸಿದ್ದ. ಸಣ್ಣ ಗಂಟೆಗಳ ಸದ್ದು ಮಾಡುತ್ತಿದ್ದ ಗಾಡಿಯನ್ನು ಎಳೆಯುತ್ತಾ ಬರುತ್ತಿದ್ದುದು ಕಾಣಿಸಿತ್ತು. ಆತ ನೇರವಾಗಿ ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಮನೆಯನ್ನು ಪ್ರವೇಶಿಸಿದ. ಬಾಗಿಲು ತೆರೆದ ವಿಸಿಟ್ಯಾಸಿಯಾ ಅವನು ಯಾರೆಂದು ತಿಳಿಯಲಿಲ್ಲ. ಅವನೆಲ್ಲೋ ಮಾರಲು ಬಂದಿರಬೇಕು. ಬಹುಶಃ ಮರೆವಿನ ಮರಳಿನಲ್ಲಿ ಹೂತುಹೋಗಿರುವ ಈ ಊರಿನಲ್ಲಿ ಏನನ್ನೂ ಮಾರಲು ಸಾಧ್ಯವಿಲ್ಲವೆಂಬ ಅಂಶವು ಆತನಿಗೆ ತಿಳಿದಿಲ್ಲವೆನಿಸುತ್ತದೆ ಎಂದುಕೊಂಡಳು. ಆತ ಮುಪ್ಪಿನಿಂದ ಜರ್ಝರಿತ ವ್ಯಕ್ತಿಯಾಗಿದ್ದ. ಅವನ ಧ್ವನಿ ಉಡುಗಿ ಅಸ್ಪಷ್ಟವಾಗಿದ್ದರೂ ಅವನ ಕೈಗಳು ವಸ್ತುಗಳ ಇರುವಿಕೆಯ ಬಗ್ಗೆ ಅನುಮಾನಿಸುತ್ತಿದ್ದರೂ ಅವನು ಮಾತ್ರ ಜನಗಳು ಮಲಗಿದ್ದರೂ ನೆನಪಿನಶಕ್ತಿಯನ್ನು ಕಾಪಾಡಿಕೊಂಡಿದ್ದ ನಾಡಿನಿಂದ ಬಂದವನೆಂಬುದು ಸ್ಪಷ್ಟವಾಗಿತ್ತು. ವಾಸದ ಮನೆಯಲ್ಲಿ, ತೇಪೆ ಹಾಕಿದ ಹ್ಯಾಟಿನಿಂದ ಗಾಳಿಬೀಸಿಕೊಳ್ಳುತ್ತಾ, ಗೋಡೆಗಳ ಮೇಲೆ ಅಂಟಿಸಿದ್ದ ಚಿಹ್ನೆಗಳನ್ನು ಗಂಭೀರವಾಗಿ ಗಮನಿಸುತ್ತಾ ಕುಳಿತಿದ್ದುದು ಜೋಸ್

ಆರ್ಕಾಡಿಯೋ ಬ್ಯುಂಡಿಯಾ ಗಮನಿಸಿದ. ಆತನನ್ನು ಪ್ರೀತಿ ತುಂಬಿದ ಮನಸ್ಸಿನಿಂದ ಬರಮಾಡಿಕೊಂಡ. ತನಗೆ ಆತ ಹಿಂದೆ ತಿಳಿದವನಾಗಿದ್ದರೂ ಈಗ ತನಗೆ ಅದು ನೆನಪಾಗುತ್ತಿಲ್ಲ ಎನಿಸಿತು. ಆದರೆ ಆಗಂತುಕನಿಗೆ ಅವನ ಕಷ್ಟದ ಅರಿವಿತ್ತು. ತನ್ನನ್ನು ತಾನೇ ಮರೆತಂತೆನಿಸಿತು. ಆದರೆ ಅದು ಮನದಾಳದ ಮರೆವಾಗಿರದೆ ಬೇರೆ ರೀತಿಯದಾಗಿತ್ತು. ಅದು ಬಹಳ ಕ್ರೂರವೂ ಅಪರಿಹಾರ್ಯವೂ ಆದುದಾಗಿತ್ತು. ಅವನಿಗೆ ಅದು ಸ್ಪಷ್ಟವಾಗಿ ಸಾವಿನ ಮರೆವಾಗಿತ್ತು. ಅದು ಅವನಿಗೆ ಅರ್ಥವಾಯಿತು. ಬೇಡದ ಹಲವಾರು ವಸ್ತುಗಳಿಂದ ಇಡಿ ಕಿರಿದು ತುಂಬಿದ್ದ ಸೂಟ್‌ಕೇಸನ್ನು ತೆರೆದ. ಅವುಗಳ ನಡುವಿನಿಂದ ಹಲವು ಫ್ಲಾಸ್ಕ್‌ಗಳಿದ್ದ ಸಣ್ಣ ಪೆಟ್ಟಿಗೆಯನ್ನು ಹೊರತೆಗೆದ. ಆತ ಬ್ಯುಂಡಿಯಾಗೆ ತೆಳು ಬಣ್ಣದ ಪೇಯವನ್ನು ಕುಡಿಯಲು ನೀಡಿದ. ಕೂಡಲೆ ಅವನ ನೆನಪಿನಲ್ಲಿ ಮಿಂಚು ಹೊಳೆಯಿತು. ತಕ್ಷಣವೇ ಅವನ ಕಣ್ಣುಗಳು ಹನಿಗಟ್ಟಿದವು. ವಾಸದ ಮನೆಯ ಗೋಡೆಗಳ ಮೇಲೆ ಬರೆದಿದ್ದ ವಸ್ತುಗಳ ಹೆಸರುಗಳನ್ನು ಗಮನಿಸುವ, ಅರ್ಥವಿಲ್ಲದ ಬರಹಗಳನ್ನು ಕಂಡು ನಾಚಿಕೆ ಪಡುವ, ಮತ್ತು ತನ್ನ ಮುಂದೆ ನಿಂತಿರುವ, ಅಪರಿಚಿತನನ್ನು ಗುರುತಿಸುವ ಮೊದಲೇ, ಸಂಭ್ರಮದಿಂದ ಹೊಳೆಹೊಳೆವ ಮುನ್ನವೇ ಕಣ್ಣು ತುಂಬಿತು. ಬಂದಾತ ಬೇರೆ ಯಾರೂ ಆಗಿರದೆ ಮೆಲ್‌ಕಿಯಾಡ್ ಆಗಿದ್ದ.

ಮಕೊಂಡೊ ಕಳೆದುಕೊಂಡ ನೆನಪನ್ನು ಮರಳಿ ಪಡೆದ ಸಂತಸದ ಕ್ಷಣಗಳನ್ನು ಆಚರಿಸುತ್ತಿದ್ದಾಗ, ಮೆಲ್‌ಕಿಯಾಡ್ ಮತ್ತು ಜೋಸ್ ಆರ್ಕಾಡಿಯೋ ತಮ್ಮಿಬ್ಬರ ನಡುವಿನ ಸ್ನೇಹದ ಮೇಲಿನ ಧೂಳನ್ನು ಹೊಡೆಯುತ್ತಿದ್ದರು. ಜಿಪ್ಸಿ ಆ ಊರಿನಲ್ಲಿಯೇ ಉಳಿಯುವ ಉದ್ದೇಶವನ್ನು ಹೊಂದಿದ್ದ. ನಿಜವಾಗಿಯೂ ಆತ ಸಾವನ್ನು ಹಾದು ಬಂದಿದ್ದ ತನ್ನ ಒಂಟಿತನವನ್ನು ಸಹಿಸಲಾಗದೆ ಮರಳಿ ಬಂದಿದ್ದ ಅವನ ಸಮುದಾಯದಿಂದ ನಿರಾಕರಿಸಲ್ಪಟ್ಟವನಾಗಿ, ಮತ್ತು ಬದುಕಿನ ಬಗ್ಗೆ ಇದ್ದ ಬದ್ಧತೆಯಿಂದ, ತನ್ನೆಲ್ಲ ಪವಾಡಶಕ್ತಿಗಳನ್ನು ಕಳೆದುಕೊಂಡಿದ್ದ ಸ್ಥಿತಿಯಲ್ಲಿ, ಪ್ರಪಂಚದ ಯಾವುದೋ ಒಂದು ಮೂಲೆಯಲ್ಲಿ ಇನ್ನೂ ಸಾವನ್ನೇ ಕಾಣದಿದ್ದ ಊರಲ್ಲಿ, ವಿಶಿಷ್ಟವಾದ ಶೋಧ ಪ್ರಕ್ರಿಯೆಗಳಲ್ಲಿ ಕ್ರಿಯಾಶೀಲವಾಗಿರುವ ಲ್ಯಾಬೋರೇಟರಿ ಇರುವಲ್ಲಿ ನೆಲೆಸಬೇಕೆಂದುಕೊಂಡಿದ್ದ. ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಅಂಥ ವಿಶಿಷ್ಟ ಆವಿಷ್ಕಾರಗಳ ಬಗ್ಗೆ ಕೇಳಿದವನಾಗಿರಲಿಲ್ಲ. ಆದರೆ ತಾನು ಮತ್ತು ತನ್ನ ಕುಟುಂಬ ಅನಂತ ಕಾಲದವರೆಗೂ ಹೊಳಪನ್ನು ಕಳೆದುಕೊಳ್ಳದ ಒಂದು ಲೋಹದ ಕೆಲಸದಲ್ಲಿ ಮಗ್ನರಾಗಿದ್ದುದನ್ನು ನೋಡಿ ಸ್ತಂಭೀಭೂತನಾಗಿದ್ದ. ಹಿಂದೊಂದು ದಿನ, ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಆಕ್ಸಿಡ್ರೈಸ್ ಮಾಡಿದ ಡಸಿರೋಟೈಪ್‌ನಲ್ಲಿ ತಾಮ್ರದ ಗುಂಡಿಗಳಿದ್ದ, ರಟ್ಟಿನ ಕಾಲರ್ ಹೊಂದಿದ್ದ ಅಂಗಿಯನ್ನು ತೊಟ್ಟು, ತುಂಬಾ ಗಂಭೀರತೆಯೊಂದಿಗೆ ಹಣ್ಣಾದ, ಚದುರಿದ ಕೂದಲಿನೊಂದಿಗೆ ಕಾಣಿಸಿಕೊಂಡಾಗ ಉರ್ಸುಲಾ ಹೊಟ್ಟೆ ಹುಣ್ಣಾಗುವಂತೆ ನಗುತ್ತ "ಬೆದರಿದ ಜನರಲ್ಲಿ" ಎಂದಿದ್ದಳು. ನಿಜವಾಗಿಯೂ ಬ್ಯುಂಡಿಯಾ ಆ ಡಿಸೆಂಬರ್‌ನ ಬೆಳಗು ಡಸಿರೋಟೈಪ್(ಭಾವಚಿತ್ರ ತೆಗೆದು) ಮಾಡಿದ ದಿನ ತುಂಬಾ ಹೆದರಿದ್ದ. ಯಾಕೆಂದರೆ ಜನ ಸಾಯುತ್ತಾ ಸವೆಯುತ್ತಾ ಹೋಗುತ್ತಿರಲು ತನ್ನ ಹೆಸರು ಈ ಲೋಹದ ತಗಡಿನ ಮೇಲೆ ಉಳಿದಿರುತ್ತದೆ ಎಂದುಕೊಂಡಿದ್ದ. ಉರ್ಸುಲಾ ಪದ್ಧತಿಯಲ್ಲಿ ತಿರುಗು ಮುರುಗು ಮಾಡಿ

ಅವನ ತಲೆಯಿಂದ ಆ ವಿಚಾರವನ್ನು ತೆಗೆದುಹಾಕಿದ್ದಳು. ಅಲ್ಲದೆ ತಾನೂ ಅದನ್ನೆಲ್ಲ ಮರೆತು ಕಹಿಯನ್ನು ಕಳೆದುಕೊಂಡ ಮನಸ್ಸಿನಿಂದ ಮೆಲ್‌ಕಿಯಾಡ್ ತಮ್ಮಲ್ಲಿ ಉಳಿದುಕೊಳ್ಳಲು ಅನುವು ಮಾಡಿಕೊಟ್ಟಳು. ಆದರೆ ಮತ್ತೆ ಭಾವಚಿತ್ರ ತೆಗೆಯಲು ಮಾತ್ರ ಅವಕಾಶ ಕೊಡಲಿಲ್ಲ. (ಅವಳದೇ ಮಾತಿನಲ್ಲಿ, ಮೊಮ್ಮಕ್ಕಳ ದೃಷ್ಟಿಯಲ್ಲಿ ಮುಂದೆ ಅದು ನಗೆಪಾಟಲಿಗೆ ಗುರಿಯಾಗಬಾರದು ಎಂದಾಗಿತ್ತು). ಆ ದಿನ ಬೆಳಿಗ್ಗೆ ಮಕ್ಕಳಿಗೆಲ್ಲ ಒಳ್ಳೆ ಬಟ್ಟೆ ಹಾಕಿ, ಪೌಡರ್ ಹಚ್ಚಿ, ಕುಡಿಯಲು ಮಜ್ಜಿರಸ ಕುಡಿಸಿ, (ಎರಡು ನಿಮಿಷಕಾಲ ಕದಲದೆ ಇರಲು) ಮೆಲ್‌ಕಿಯಾಡ್‌ನ ಅದ್ಭುತವಾದ ಕ್ಯಾಮೆರಾ ಮುಂದೆ ನಿಲ್ಲಿಸಿದಳು. ಕಡೆತನಕವಿದ್ದ ಕುಟುಂಬದ ಒಂದೇ ಒಂದು ಭಾವಚಿತ್ರದಲ್ಲಿ, ಅರೆಲಿಯಾನೋ ಅಮರಾಂತಾ ಮತ್ತು ರೆಬೆಕಾರ ಮಧ್ಯೆ ಕಪ್ಪು ವೆಲ್‌ವೆಟ್ ಉಡುಪಿನಲ್ಲಿ ಕಾಣಿಸಿಕೊಂಡಿದ್ದ. ಎಷ್ಟೋ ವರ್ಷಗಳ ನಂತರ ಗುಂಡಿಕ್ಕಿದ ತಂಡದ ಎದುರು ನಿಂತಿದ್ದಾಗ ಯಾವ ಗತ್ತು, ಗೈರತ್ತುಗಳೊಂದಿಗೆ ಇದ್ದನೋ ಅದೇ ಭಾವ ಅಂದೂ ಆ ಭಾವಚಿತ್ರದಲ್ಲಿ ಕಾಣಿಸಿಕೊಂಡಿತ್ತು. ಆದರೆ ಅವನಿಗೆ ಮುಂದೆ ತನಗೆ ಎದುರಾಗುವ ದುರಂತದ ಕಲ್ಪನೆಯಿರಲಿಲ್ಲ. ಅವನ ಬೆಳ್ಳಿ ಕೆಲಸದ ಸೂಕ್ಷ್ಮತೆ, ಕುಶಲತೆ, ಆ ಜೌಗು ನಾಡಿನಲ್ಲೆಲ್ಲ ಪ್ರಸಿದ್ಧವಾಗಿ, ಕುಶಲ ಕೆಲಸಗಾರನೆಂಬ ಹೆಸರಿಗೆ ಪಾತ್ರನಾಗಿದ್ದ. ಮೆಲ್‌ಕಿಯಾಡ್ಸ್ ಜೊತೆ ಹಂಚಿಕೊಂಡಿದ್ದ ಆ ವರ್ಕ್‌ಶಾಪಿನಲ್ಲಿ ಮೆಲ್‌ಕಿಯಾಡ್ಸ್ ಜೊತೆ ಕೆಲಸ ಮಾಡುತ್ತಿದ್ದಾಗ ಉಸಿರಾಟವೂ ಕೇಳಿಸುತ್ತಿರಲಿಲ್ಲ. ಅವನು ಬೇರೆ ಯಾವುದೋ ಕಾಲದ ಮೊರೆಹೊಕ್ಕಂತೆ ಕಾಣಿಸುತ್ತಿದ್ದನಾದರೆ, ತಂದೆ ಮತ್ತು ಮೆಲ್‌ಕಿಯಾಡ್ಸ್‌ರ ನಡುವೆ ಮಾತಿನಸದ್ದು, ಭವಿಷ್ಯದ ವಿಶ್ಲೇಷಣೆಗಳು ಅದೂ ನಾಸ್ಟ್ರೊಡ್ಯಮಸ್ ಭವಿಷ್ಯ ಕುರಿತು, ಫ್ಲಾಸ್ಕುಗಳ, ತಟ್ಟೆಗಳ ಸದ್ದಿನ ನಡುವೆ, ಭರಾಟೆಯಿಂದ ಸಾಗುತ್ತಿದ್ದವು. ಈ ಮಧ್ಯೆ ಆಮ್ಲಗಳು, ಸಿಲ್ವರ್ ಬ್ರೋಮೈಡ್ ಚೆಲ್ಲಿಹೋಗಿ, ಕ್ಷಣಕ್ಷಣವೂ ಎತ್ತೆತ್ತಲೂ ಹರಿದುಹೋಯಿತು. ಅರೆಲಿಯಾನೋನಲ್ಲಿ ಇದ್ದ ಶ್ರದ್ಧೆ, ವಿವೇಚನೆಗಳು ಅಲ್ಪಕಾಲದಲ್ಲಿಯೇ ಸಾಕಷ್ಟು ಸಂಪಾದನೆಯನ್ನು ಗಳಿಸಿಕೊಟ್ಟಿತು. ಉರ್ಸುಲಾಳ ಮಾಂಸದ ತುಂಡುಗಳ ಮಾರಾಟದಿಂದ ಬಂದ ಗಳಿಕೆಗಿಂತಲೂ ಇದು ಹೆಚ್ಚಾಗಿತ್ತು. ಆದರೆ ಪ್ರತಿಯೊಬ್ಬರಿಗೂ ಆದ ಆಶ್ಚರ್ಯವೆಂದರೆ, ಇಷ್ಟು ಬೆಳೆದು ದೊಡ್ಡವನಾದ ಗಂಡಸಿಗೆ ಹೆಣ್ಣೊಬ್ಬಳು ಯಾಕೆ ಬೇಡ ಎಂಬುದು.

ಹಲವು ತಿಂಗಳ ನಂತರ, ಇನ್ನೂರು ವರ್ಷ ವಯಸ್ಸಿನ ಅಲೆಮಾರಿಯಾಗಿದ್ದ ಮತ್ತು ಆಗಾಗ, ತಾನೇ ರಚಿಸಿದ ಹಾಡುಗಳನ್ನು ಹಂಚುತ್ತಾ ಮಂಕಾಡೋವನ್ನು ಹಾದುಹೋಗುತ್ತಿದ್ದ ಫ್ರಾನ್ಸಿಸ್ಕೊ ಹಿಂತಿರುಗಿದ. ಅವುಗಳಲ್ಲಿ (ಅವನ ಹಾಡುಗಳಲ್ಲಿ) ಈ ಮನುಷ್ಯ ಹಾದಿಗುಂಟ ನಡೆದದ್ದನ್ನು ಮಸಾರೆಯಿಂದ ಜೌಗಿನ ಗಡಿವರೆಗಿನ ಪ್ರದೇಶಗಳನ್ನು ವಿಸ್ತೃತವಾಗಿ ವಿವರಿಸಿದ್ದ. ಅದರಿಂದ ಯಾರಿಗಾದರೂ ಸಂದೇಶ ಕಳಿಸಬೇಕಾಗಿದ್ದರೆ ಅಥವಾ ಯಾವುದಾದರೂ ಸುದ್ದಿಯನ್ನು ಸಾರ್ವಜನಿಕರಿಗೆ ತಿಳಿಸಬೇಕಾಗಿದ್ದರೆ, ಅವನಿಗೆ ಎರಡು ಸೆಂಟ್‌ಗಳನ್ನು ಕೊಟ್ಟು ಅವನ ಪಟ್ಟಿಯಲ್ಲಿ ಸೇರಿಸಿಕೊಳ್ಳಲು ಹೇಳಬೇಕಿತ್ತು. ಈ ರೀತಿಯಲ್ಲಿಯೇ ಉರ್ಸುಲಾಗೆ ತನ್ನ ತಾಯಿಯ ಸಾವಿನ ಸುದ್ದಿ ತಿಳಿದದ್ದು. ಹಾಗೆಯೇ ಅವನ ಹಾಡುಗಳನ್ನು ಕೇಳಿಸಿಕೊಂಡದ್ದೂ ಕೂಡಾ ಜೋಸ್ ಆರ್ಕಾಡಿಯೋ ಬಗ್ಗೆ ಏನಾದರೂ ತಿಳಿಯಬಹುದೇನೋ ಎಂಬ ಕುತೂಹಲದಿಂದ.

ತಾಯಿಯ ಸಾವಿನ ಬಗ್ಗೆ ಅವನಿಗೆ ತಿಳಿಯಲು ಸಾಧ್ಯವಾದದ್ದೂ ಅವನು ಅದನ್ನು (ಆತ್ಮ ಅಥವಾ ದೆವ್ವ) ಕರೆದು ಅದನ್ನು ದ್ವಂದ್ವದಲ್ಲಿ ಸೋಲಿಸಿದ್ದರಿಂದ. ಅವನ ನಿಜವಾದ ಹೆಸರು ಏನೆಂದು ತಿಳಿಯದಿದ್ದರೂ, ನಿದ್ದೆಬಾರದ ಕಾಯಿಲೆಯಿಂದ ನರಳುತ್ತಿದ್ದ ದಿನಗಳಲ್ಲಿ ಕಣ್ಮರೆಯಾಗಿ ಮತ್ತೆ ಅದು ಕತಾರಿನೋ ಸ್ಟೋರ್‌ನಲ್ಲಿ ಕಾಣಿಸಿಕೊಂಡಿತು. ಇಡೀ ಪಟ್ಟಣದ ಜನ, ಪ್ರಪಂಚದಲ್ಲಿ ಏನೇನಾಗುತ್ತಿದೆ ಎಂದು ತಿಳಿಯಲು ಅವನ ಹಾಡುಗಳನ್ನು ಕೇಳಲು ಬರುತ್ತಿದ್ದರು. ಆ ಸಮಯದಲ್ಲಿ ಅವನ ಜೊತೆ ಹೆಣ್ಣೊಬ್ಬಳು ಬಂದಿದ್ದಳು. ಅವಳು ಎಷ್ಟು ದಢೂತಿಯಾಗಿದ್ದಳೆಂದರೆ ನಾಲ್ಕು ಜನ ಇಂಡಿಯನ್ನರು ತೂಗು ಕುರ್ಚಿಯಲ್ಲಿ ಕುಳ್ಳಿರಿಸಿ ಎತ್ತಿಕೊಳ್ಳಬೇಕಾಗಿತ್ತು. ವಯಸ್ಸಿಗೆ ಬಂದಿದ್ದ ಐರೋಪ್ಯ ಹಾಗೂ ಮಿಶ್ರ ಜನಾಂಗದ ಹುಡುಗಿಯೊಬ್ಬಳು, ದೃಷ್ಟಿಯೆಲ್ಲೋ ನೆಟ್ಟು ಅವಳಿಗೆ ಕೊಡೆ ಹಿಡಿದು ಜೊತೆಗೆ ನಿಂತಿದ್ದಳು. ಅರೆಲಿಯನ್ ಆ ರಾತ್ರಿ ಕತಾರಿನೋ ಸ್ಟೋರ್‌ಗೆ ಹೋದ. ಜನರ ಗುಂಪಿನ ನಡುವೆ ಏಕಶಿಲಾ ಊಸರವಳ್ಳಿಯಂತೆ ಫ್ರಾನ್ಸಿಸ್ಕೊ ನಿಂತಿದ್ದ. ಈಗ ಚಾಲ್ತಿಯಲ್ಲಿ ಇಲ್ಲದ ತನ್ನ ಹಳೇ ರಾಗದಲ್ಲಿಯೇ ಆರ್ಕಾಡಿಯೋನ್ ವಾದ್ಯದೊಂದಿಗೆ ಸುದ್ದಿಗಳನ್ನು ಹಾಡುತ್ತಿದ್ದ, ಈ ವಾದ್ಯವನ್ನು ಬಹಳ ಹಿಂದೆ ವಾಲ್ಟರ್ ರ‍್ಯಾಲಿ ಕೊಟ್ಟಿದ್ದ. ಅದು ಅದರ ಲಯಕ್ಕೆ ನಡೆಯುತ್ತಿದ್ದ ಭಾರಿ ಪಾದಗಳಲ್ಲಿ, ಪೆಟ್ಲುಪ್ಪಿನಿಂದಾಗಿ ಬಿರುಕು ಬಿಟ್ಟಿದ್ದವು. ಜನರು ಹೋಗಿ ಬರುತ್ತಿದ್ದ ಹಿಂಬಾಗಿಲ ಮುಂದೆ, ತೂಗಾಡುವ ಕುರ್ಚಿಯಲ್ಲಿ ಸುಮ್ಮನೆ ಕುಳಿತಿದ್ದ ಹೆಂಗಸು ಗಾಳಿ ಬೀಸಿಕೊಳ್ಳುತ್ತಿದ್ದಳು. ಕತಾರಿನೋ ಕಿವಿಯಲ್ಲಿ ಗುಲಾಬಿ ಹೂವನ್ನು ಸಿಕ್ಕಿಸಿಕೊಂಡು ಕಬ್ಬಿನ ಹಾಲನ್ನು ಮಾರುತ್ತ, ಮಗ್ಗುಗಳನ್ನು ಶೇಖರಿಸುತ್ತ ಇದ್ದು ಅವಕಾಶದ ಲಾಭ ಪಡೆಯಲು ಗಂಡಸರಿದ್ದೆಡೆಗೆ ಹೋಗಿ, ಎಲ್ಲೆಲ್ಲಿ ಕೈಗಳನ್ನು ಹಾಕಬಾರದಿತ್ತೋ ಅಲ್ಲೆಲ್ಲ ಕೈಗಳನ್ನು ಹಾಕಿದ. ಮಧ್ಯರಾತ್ರಿಯ ಹೊತ್ತಿಗೆ ಸೆಕೆ ಅಸಾಧ್ಯವಾಗಿತ್ತು. ಅರೆಲಿಯಾನೋ, ತನ್ನ ಕುಟುಂಬಕ್ಕೆ ಯಾವುದೇ ರೀತಿಯಲ್ಲಿ ಉಪಯೋಗಕ್ಕೆ ಬಾರದಿದ್ದರೂ, ಸುದ್ದಿಗಳನ್ನು ಕಡೆತನಕ ಕೇಳಿಸಿಕೊಂಡ. ಮನೆಗೆ ಹೊರಡಬೇಕೆಂದುಕೊಳ್ಳುವಷ್ಟರಲ್ಲಿ ಆ ಹೆಂಗಸು ಇವನನ್ನು ಸನ್ನೆಮಾಡಿ ಕರೆದಳು.

"ನೀನೂ ಒಳಗೆ ಹೋಗು" "ಕೇವಲ ಇಪ್ಪತ್ತು ಸೆಂಟುಗಳು ಮಾತ್ರವೇ" ಎಂದಳು. ಅರೆಲಿಯಾನೋ ಪೆಟ್ಟಿಗೆಯಲ್ಲಿ ಒಂದು ನಾಣ್ಯವನ್ನು ಎಸೆದು, ತಾನು ಏಕೆ ಹೋಗುತ್ತಿದ್ದೇನೆ ಎಂಬುದರ ಅರಿವಿಲ್ಲದೆಯೇ ಒಳಗೆ ಹೋದ. ಹರೆಯದ ಆ ಮಿಶ್ರಥಳಿಯ ಹುಡುಗಿ ತನ್ನ ಪುಟ್ಟ ಮೊಲೆಗಳೊಂದಿಗೆ ಹಾಸಿಗೆಯಲ್ಲಿ ಬೆತ್ತಲೆಯಾಗಿ ಮಲಗಿದ್ದಳು. ಅರೆಲಿಯಾನೋಗೆ ಮೊದಲು ಆ ರಾತ್ರಿ ಅರವತ್ತು ಮೂರು ಮಂದಿ ಗಂಡಸರು ಆ ಕೋಣೆಯನ್ನು ಹಾದು ಹೋಗಿದ್ದರು. ಅಷ್ಟೊಂದು ಮಂದಿ ಬಳಸಿದ್ದ ಆ ಕೋಣೆ ಬೆವರು ನಿಟ್ಟುಸಿರುಗಳಿಂದ ತೊಯ್ದು, ಅಲ್ಲಿನ ಗಾಳಿ ಕಲುಷಿತವಾಗಿತ್ತು. ಆ ಹುಡುಗಿ ತೊಯ್ದು ಹೋಗಿದ್ದ ಹಾಸನ್ನು ತೆಗೆದು ಅರೆಲಿಯಾನೋಗೆ ಒಂದು ಕಡೆಯಿಂದ ಹಿಡಿದುಕೊಳ್ಳಲು ಹೇಳಿದಳು. ಅದು ಕ್ಯಾನ್‌ವಾಸ್ ತುಂಡಿನಷ್ಟೇ ಭಾರವಾಗಿತ್ತು. ಅದನ್ನು ಇಬ್ಬರೂ ತುದಿಗಳನ್ನು ಹಿಡಿದು, ಮೊದಲಿನಂತೆ ಹಗುರವಾಗುವ ತನಕ ಹಿಂಡಿದಂತೆ ಹಾಸಿದ ಚಾಪೆಯನ್ನು ಬೋರಲು ಮಾಡಿದಾಗ, ಮತ್ತೊಂದು ಕಡೆಯಿಂದ ಬೆವರು ಆಚೆ ಬಂತು. ಈ ಕಸರತ್ತೆಲ್ಲ ಯಾವಾಗ ಮುಗಿಯುವುದೋ ಎಂದು ಅರೇಲಿಯಾನೋ ಕಾಯುತ್ತಿದ್ದ. ಅವನಿಗೆ ಪ್ರೀತಿಯ

ವಿಧಾನಗಳು ಸೈದ್ಧಾಂತಿಕವಾಗಿ ತಿಳಿದಿತ್ತು. ಅವನಿಗೆ ಮಂಡಿಗಳ ಸಮಸ್ಯೆಯಿಂದ ಹೆಚ್ಚು ಕಾಲ ನಿಲ್ಲಲು ಆಗಲಿಲ್ಲ. ಮುಖದ ಮೇಲೆ ಮೊಡವೆಗಳಿದ್ದರೂ, ಒಳಗಿನ ಒತ್ತಡವನ್ನು ಹೊರಹಾಕುವ ತುರ್ತನ್ನು ತಡೆದುಕೊಳ್ಳಲು ಸಾಧ್ಯವಾಗಲಿಲ್ಲ. ಆ ಹುಡುಗಿ ಹಾಸನ್ನು ಸರಿಪಡಿಸಿದ ಮೇಲೆ ಬಟ್ಟೆ ಕಳಚಲು ಅವನಿಗೆ ಆದೇಶಿಸಿದಳು. ಅವನು ಸ್ವಲ್ಪ ಗಲಿಬಿಲಿಗೊಂಡು ಅವಳಿಗೆ ಹೇಳಿದ. ಅವರು ನನ್ನನ್ನು ಒಳಗೆ ಬರುವಂತೆ ಮಾಡಿದರು. 'ಅವರು ಇಪ್ಪತ್ತು ಸೆಂಟ್‌ಗಳನ್ನು ಎಸೆದು ಬೇಗನೆ ಮುಗಿಸಲು ಹೇಳಿದರು'. ಅವನ ಗೊಂದಲ ಅವಳಿಗೆ ಅರ್ಥವಾಯಿತು. ನೀನು ಹೊರಗೆ ಹೋಗುವಾಗ ಮತ್ತೊಂದು ಇಪ್ಪತ್ತು ಸೆಂಟ್‌ಗಳನ್ನು ಹಾಕಿದರೆ, ಇನ್ನೂ ಸ್ವಲ್ಪ ಹೆಚ್ಚು ಹೊತ್ತು ಇರಬಹುದು, ಎಂದು ಮೆಲ್ಲನೆ ಹೇಳಿದಳು. ಅರೆಲಿಯಾನೋ ಬಟ್ಟೆಯನ್ನು ಕಳಚಿದ. ತನ್ನ ಅಣ್ಣನ ಬೆತ್ತಲೆ ದೇಹದ ಹೋಲಿಕೆಯಲ್ಲಿ ತನ್ನದೇನೂ ಅಲ್ಲ ಎಂಬ ವಿಚಾರದಿಂದ ದೂರವಾಗಲು ಸಾಧ್ಯವೇ ಆಗದೆ ನಾಚಿದ. ಹುಡುಗಿಯ ಪ್ರಯತ್ನಗಳ ನಂತರವೂ ಅವನಲ್ಲಿ ಆಸಕ್ತಿ ಮೂಡಲಿಲ್ಲ. ತನ್ನ ಒಂಟಿತನ ಭಯಂಕರವೆನಿಸಿತು. ಏನೋ ಕಳೆದುಕೊಂಡವನಂತೆ, ಮತ್ತೆ ಇಪ್ಪತ್ತು ಸೆಂಟ್‌ಗಳನ್ನು ಹಾಕುತ್ತೇನೆ ಎಂದ. ಮೌನದಿಂದಲೇ ಹುಡುಗಿ ಕೃತಜ್ಞತೆ ಸಲ್ಲಿಸಿದಳು. ಅವಳ ಬೆನ್ನು ಹಸಿಯಾಗಿತ್ತು. ಅವಳ ಚರ್ಮ ಪಕ್ಕೆಗಳಿಗೆ ಅಂಟಿಕೊಂಡಿತ್ತು. ಅತಿಯಾದ ದಣಿವಿನಿಂದ ಕಷ್ಟದಿಂದ ಉಸಿರಾಡುತ್ತಿದ್ದಳು. ಎರಡು ವರ್ಷಗಳ ಹಿಂದೆ, ಅಲ್ಲಿಂದ ಬಹಳ ದೂರ, ತುಂಬಾ ಗಾಢವಾದ ನಿದ್ದೆಯ ಭರದಲ್ಲಿ ಕ್ಯಾಂಡಲ್ ಆರಿಸುವುದನ್ನು ಮರೆತಿದ್ದಳು. ಸುತ್ತಲೂ ಬೆಂಕಿಯ ಜ್ವಾಲೆಗಳು ಆವರಿಸಿದಾಗ ಎಚ್ಚರಗೊಂಡಳು. ಅವಳು ಅಜ್ಜಿಯ ಜೊತೆ ವಾಸವಾಗಿದ್ದಳು. ಅಜ್ಜಿಯೇ ಅವಳನ್ನು ಬೆಳೆಸಿದ್ದಳು. ಆದರೆ ಆ ಮನೆ ಈ ಬೆಂಕಿಯಲ್ಲಿ ಸುಟ್ಟು ಬೂದಿಯಾಗಿತ್ತು. ಅಂದಿನಿಂದ ಅಜ್ಜಿ ಅವಳನ್ನು ಊರಿಂದ ಊರಿಗೆ ಹೊರುತ್ತ ಅವಳ ಜೊತೆ ಹಾಸಿಗೆಯಲ್ಲಿ ಮಲಗಲು ಇಪ್ಪತ್ತು ಸೆಂಟ್‌ಗಳನ್ನು ಪಡೆಯುವುದರ ಮೂಲಕ ತನಗಾದ ನಷ್ಟವನ್ನು ತುಂಬಿಕೊಳ್ಳಲು, ಪ್ರಯಾಣ ವೆಚ್ಚ ಭರಿಸಲು ತಮ್ಮ ಮತ್ತು ತೂಗಾಡುವ ಕುರ್ಚಿಯನ್ನು ಹೊತ್ತು ತರುವ ಇಂಡಿಯನ್ನರ ಊಟಕ್ಕಾಗಿ ಖರ್ಚು ಭರಿಸಲು ಪ್ರಯತ್ನಿಸುತ್ತಿದ್ದಳು. ಆ ಹೆಂಗಸು ಎರಡನೇ ಬಾರಿ ಬಾಗಿಲು ತಟ್ಟಿದಾಗ ಅರೆಲಿಯಾನೋ ಏನೂ ಮಾಡದೆ, ಅಳಬೇಕೆನ್ನಿಸುವ ಮನಃಸ್ಥಿತಿಯಲ್ಲಿ ಹೊರಗೆ ಬಂದ. ಆ ರಾತ್ರಿಯಲ್ಲಿ ನಿದ್ದೆಯನ್ನೇ ಮಾಡಲಾಗಲಿಲ್ಲ. ಅವಳ ಬಗ್ಗೆಯೇ ಬಯಕೆ ಮತ್ತು ಕರುಣೆಯ ಮಿಶ್ರಭಾವದಿಂದ ಯೋಚಿಸುತ್ತಿದ್ದ. ಅವಳನ್ನು ರಕ್ಷಿಸುವ, ಪ್ರೀತಿಸುವ ಅಗತ್ಯವಿದೆಯೆಂಬ ತುಡಿತಕ್ಕೆ ಒಳಗಾದ. ಬೆಳಗಾದಾಗ, ನಿದ್ದೆ ಇಲ್ಲದ್ದರಿಂದ ಜ್ವರದಿಂದ ಬಹಳ ದಣಿದಿದ್ದರೂ, ಏನಾದರಾಗಲಿ ಅವಳನ್ನು ಮದುವೆಯಾಗಬೇಕು; ಅಜ್ಜಿಯ ಶೋಷಣೆಯಿಂದ ಮುಕ್ತಗೊಳಿಸಬೇಕು; ಎಲ್ಲ ರಾತ್ರಿಗಳಲ್ಲೂ, ಎಪ್ಪತ್ತು ಮಂದಿ ಗಂಡಸರಿಗೆ ಕೊಡುತ್ತಿದ್ದ ಸುಖವನ್ನು ಅವಳಿಂದ ಅನುಭವಿಸಬೇಕು ಎಂಬ ನಿರ್ಧಾರಕ್ಕೆ ಬಂದ. ಆದರೆ ಹತ್ತು ಗಂಟೆ ಸಮಯಕ್ಕೆ ಕತಾರಿನೋ ಅಂಗಡಿ ಬಳಿ ಬರುವಷ್ಟರಲ್ಲಿ ಅಲ್ಲಿಂದ ಅವರು ಹೊರಟು ಹೋಗಿದ್ದರು.

ಅವನ ಹುಚ್ಚು ನಿರ್ಧಾರವನ್ನು ಕಾಲ ಸ್ವಲ್ಪ ಶಮನ ಮಾಡಿತ್ತು. ಆದರೆ ಒಳಗಿನ ಭಾವನೆಗಳು ಉಲ್ಬಣಗೊಂಡಿದ್ದವು. ಕೆಲಸದಲ್ಲಿ ಮರೆಯಲು ಪ್ರಯತ್ನಿಸಿದ. ತನ್ನ

ನಿಷ್ಪ್ರಯೋಜಕತೆಯಿಂದಾಗಿ ಜೀವನದ ಉದ್ದಕ್ಕೂ ಹೆಣ್ಣಿಲ್ಲದೆ ಉಳಿಯಬೇಕೆಂದು ಮನಸ್ಸು ಮಾಡಿದ. ಅದೇ ಸಮಯದಲ್ಲಿ ಮೆಲ್‌ಕಿಯಾಡ್ಸ್ ಮಕೊಂಡೋದಲ್ಲಿ ಮುದ್ರಿಸಬಹುದಾದ ಎಲ್ಲವನ್ನೂ ಫಲಕಗಳ ಮೇಲೆ ಮುದ್ರಿಸಿದ. ಭಾವಚಿತ್ರ ಪ್ರಯೋಗದ ಲ್ಯಾಬೋರೇಟರಿಯನ್ನು, ಜೋಸ್ ಆರ್ಕಾಡಿಯೋನ ಕಲ್ಪನೆಗಳ ಪ್ರಯೋಗಕ್ಕೆಂದು ಬಿಟ್ಟುಹೋದ ಬ್ಯುಂಡಿಯಾ ಅದನ್ನು ದೇವರ ಅಸ್ತಿತ್ವವನ್ನು ವೈಜ್ಞಾನಿಕವಾಗಿ ಸಾಬೀತು ಪಡಿಸುವುದಕ್ಕಾಗಿ ಉಪಯೋಗಿಸಬೇಕೆಂದು ನಿರ್ಧರಿಸಿದ. ದೇವರು ಇರುವುದೇ ನಿಜವಾದರೆ, ಸಂಕೀರ್ಣ ಪ್ರಕ್ರಿಯೆಯಿಂದ ಮನೆಯ ಬೇರೆ ಬೇರೆ ಭಾಗಗಳಲ್ಲಿ ಒಂದರ ಮೇಲೊಂದು ಭಾವಚಿತ್ರಗಳನ್ನು ತೆಗೆದು ತನ್ಮೂಲಕ ಸದ್ಯದಲ್ಲಿ ಇಲ್ಲವೆ ಸ್ವಲ್ಪ ಸಮಯದಲ್ಲಿ ದೇವರ ಭಾವಚಿತ್ರ ತೆಗೆಯುವುದು ಅಸಾಧ್ಯವಲ್ಲ ಎಂದುಕೊಂಡ. ಒಂದು ವೇಳೆ ತಾನು ಅಂದುಕೊಂಡದ್ದು ಆಗಲಿಲ್ಲವೆಂದರೆ ದೇವರ ಇರುವಿಕೆಯ ಬಗೆಗಿನ ನಂಬಿಕೆಯನ್ನು ಬಿಟ್ಟುಬಿಡುವುದು ಎಂದುಕೊಂಡ. ನಾಸ್ಟ್ರಡ್ಯಾಮಸ್‌ನ ವ್ಯಾಖ್ಯಾನಗಳಲ್ಲಿ ಗಂಭೀರವಾಗಿ ಮುಳುಗಿದ. ತಡರಾತ್ರಿಯವರೆಗೂ, ಉಸಿರುಕಟ್ಟಿಸುವ ಅವನ ವೆಲ್‌ವೆಟ್ ಅಂಗಿಯಲ್ಲಿ, ಎದ್ದಿರುತ್ತಾ, ಹಕ್ಕಿಯ ಕೈಗಳಂತಿದ್ದ ಕೈಗಳಿಂದ ಏನೇನನ್ನೋ ಗೀಚುತ್ತಾ ಕುಳಿತಿರುತ್ತಿದ್ದ. ಕೈಗಳಲ್ಲಿನ ಉಂಗುರಗಳು ಮೊದಲಿನ ತಮ್ಮ ಹೊಳಪನ್ನು ಕಳೆದುಕೊಂಡಿದ್ದವು. ಒಂದು ರಾತ್ರಿ ಮಕೊಂಡೋದ ಭವಿಷ್ಯವನ್ನು ತಾನು ಕಂಡುಕೊಂಡದ್ದಾಗಿ ಭಾವಿಸಿದ. ಅದು ಗಾಜಿನ ಮನೆಗಳಿಂದ ಕೂಡಿದ ಹೊಳೆಹೊಳೆವ ನಗರವಾಗಲಿದೆ. ಆದರೆ ಅದರಲ್ಲಿ ಬ್ಯುಂಡಿಯಾ (ವಂಶವೇ) ಇರುವುದಿಲ್ಲ ಎಂದ. "ಇಲ್ಲ ಅದು ತಪ್ಪು" ಎಂದು ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಅಬ್ಬರಿಸಿದ.

ಅವು ಗಾಜಿನ ಮನೆಗಳಾಗಿರುವುದಿಲ್ಲ. ಐಸ್‌ನಿಂದಾದ ಮನೆಗಳಿರುತ್ತವೆ, ನನ್ನ ಕನಸಿನಂತೆ ಬ್ಯುಂಡಿಯಾಗಳು ಯಾವಾಗಲೂ ಇರುತ್ತಾರೆ. ಉರ್ಸುಲಾ ಇಡೀ ದಿನ ಉರಿಯುತ್ತಿದ್ದ ಒಲೆಯಲ್ಲಿ ಮಾಂಸದ ತುಂಡುಗಳನ್ನು ಬೇಯಿಸಿ, ತನ್ನ ವ್ಯಾಪಾರವನ್ನು ಚೆನ್ನಾಗಿ ಕುದುರಿಸಿಕೊಂಡು, ವಿವೇಕದಿಂದ, ಆಗುತ್ತಿದ್ದ ದುಂದುವೆಚ್ಚಕ್ಕೆ ತಡೆ ಹಾಕಿದಳು. ರಾತ್ರಿಯಿಡೀ ಒಲೆ ಉರಿಯುತ್ತಾ, ಮಾಂಸ, ಬ್ರೆಡ್ಡು, ಪುಡ್ಡಿಂಗ್, ಕುಕೀಸ್ ಮೊದಲಾದವುಗಳನ್ನು ಬುಟ್ಟಿಗಳಲ್ಲಿ ತುಂಬಿ, ಆ ಜೌಗು ಪ್ರದೇಶದ ರಸ್ತೆಗೆ ಬರುತ್ತಿದ್ದಂತೆ, ಕೆಲವೇ ಗಂಟೆಗಳಲ್ಲಿ ಖಾಲಿಯಾಗಿಬಿಡುತ್ತಿದ್ದವು. ಇನ್ನು ವಿಶ್ರಾಂತಿ ತೆಗೆದುಕೊಳ್ಳುವ ವಯಸ್ಸಾಗಿದ್ದರೂ, ಮತ್ತೂ ಹೆಚ್ಚಿನ ಚಟುವಟಿಕೆಯಿಂದ ಕೆಲಸ ಮಾಡುತ್ತಿದ್ದಳು. ಸಾಕಷ್ಟು ಅಭಿವೃದ್ಧಿ ಹೊಂದಿದ ತನ್ನ ಉದ್ಯಮದಲ್ಲಿ ಮುಳುಗಿರುವಾಗ, ಒಂದು ಮಧ್ಯಾಹ್ನ, ಇಂಡಿಯನ್ ಹೆಂಗಸು ಹಿಟ್ಟಿಗೆ ಸಿಹಿ ಬೆರೆಸಲು ತನಗೆ ಸಹಕರಿಸುತ್ತಿದ್ದಾಗ ಆಕಸ್ಮಿಕವಾಗಿ ಅವಳ ನೋಟ ಅಂಗಳದ ಕಡೆ ಹೊರಳಿತು. ಅಲ್ಲಿ ವಯಸ್ಸಿಗೆ ಬಂದಿದ್ದ ಚೆಲುವಾದ ಇಬ್ಬರು ಹೆಣ್ಣು ಮಕ್ಕಳು ಮುಳುಗುತ್ತಿರುವ ಸೂರ್ಯನ ಬೆಳಕಲ್ಲಿ ಕಸೂತಿ ಕೆಲಸ ಮಾಡುತ್ತಿದ್ದುದನ್ನು ನೋಡಿದಳು. ಅವರಿಬ್ಬರೂ ರೆಬೆಕಾ ಮತ್ತು ಅಮರಾಂತಾರಾಗಿದ್ದರು. ಅಜ್ಜಿಯ ಸಾವಿನ ಶೋಕ ವಸ್ತ್ರಗಳನ್ನು ಎಡಬಿಡದೆ ಕಟ್ಟುನಿಟ್ಟಾಗಿ ಮೂರು ವರ್ಷಗಳಿಂದಲೂ ಹಾಕುತ್ತಿದ್ದುದನ್ನು ತೆಗೆದು ಕಾಂತಿಯುಕ್ತವಾದ ಬೇರೆ ಉಡುಪನ್ನು ಧರಿಸಿದ್ದರಿಂದ ಅವರಿಗೆ ಅದರಿಂದ ಹೆಚ್ಚಿನ ಚೆಲುವು ಬಂದಿತ್ತು. ರೆಬೆಕಾ ಹೋಲಿಕೆಯಲ್ಲಿ ನಿರೀಕ್ಷಿಸಿದ್ದಕ್ಕೆ ವ್ಯತಿರಿಕ್ತವಾಗಿ

ಸುಂದರಿಯಾಗಿದ್ದಳು. ತೆಳುಬಣ್ಣ, ದೊಡ್ಡದಾದ ಪ್ರಶಾಂತವಾದ ಕಣ್ಣುಗಳು, ಮಾಂತ್ರಿಕ ಕೈಗಳು ಹೊಂದಿದ್ದವಳು. ಕಣ್ಣಿಗೂ ಕಾಣದಷ್ಟು ಸೂಕ್ಷ್ಮವಾದ ದಾರದ ಎಳೆಗಳಿಂದ ಕಸೂತಿಯ ಡಿಸೈನ್‌ಗಳನ್ನು (ಚಿತ್ತಾರಗಳನ್ನು ಬಿಡಿಸುತ್ತಿದ್ದಳು). ಚಿಕ್ಕವಳಾದ ಅಮರಾಂತಾ ಅಷ್ಟು ಆಕರ್ಷಕವೆನಿಸದಿದ್ದರೂ ಒಳಗಿನಿಂದ ಅಜ್ಜಿಯ ಬಿಗುತನದ ಸ್ವಾಭಾವಿಕ ವಿಶೇಷತೆ ಇತ್ತು.

ಅವರಿಬ್ಬರ ಪಕ್ಕದಲ್ಲಿ, ತಂದೆಯಲ್ಲಿದ್ದ ದೈಹಿಕ ಉತ್ಸಾಹವನ್ನು ತೋರುತ್ತಿದ್ದ ಆರ್ಕಾಡಿಯೋ, ಒಂದು ಮಗುವಿನಂತೆ ಕಾಣಿಸುತ್ತಿದ್ದ. ಅರೆಲಿಯಾನೋನಿಂದ ಬೆಳ್ಳಿ ಕೆಲಸವನ್ನು ಕಲಿಯುವ ಪ್ರಯತ್ನದಲ್ಲಿದ್ದ. ಓದು ಬರಹವನ್ನೂ ಅವನಿಂದಲೇ ಕಲಿತು ಉರ್ಸುಲಾಗೆ, ಇದ್ದಕ್ಕಿದ್ದಂತೆ ಮನೆತುಂಬ ಜನ ತುಂಬಿಹೋಗಿದ್ದಾರೆ ಎನ್ನುವ ಅರಿವುಂಟಾಯಿತು. ಮಕ್ಕಳು ಬೆಳೆದು ದೊಡ್ಡವರಾಗಿದ್ದಾರೆ. ಇನ್ನು ಮದುವೆ, ಮಕ್ಕಳು, ಅಂತೆಂದರೆ ಮನೆ ಸಾಕಾಗುವುದಿಲ್ಲ. ಅದಕ್ಕಾಗಿ ಅವರೆಲ್ಲ ಬೇರೆ ಬೇರೆಯೇ ಇರಲೇಬೇಕಾದ ಅನಿವಾರ್ಯತೆ ಉಂಟಾಗಿದೆ ಎಂದು ಕೊಂಡಳು. ಹಲವಾರು ವರ್ಷಗಳಿಂದ ಕಷ್ಟಪಟ್ಟು ಸಂಪಾದಿಸಿದ ಹಣವನ್ನು ಹೊರತೆಗೆದು, ತನ್ನ ಗಿರಾಕಿಗಳ ಜೊತೆ ಮಾತಾಡಿ ಮನೆಯನ್ನು ವಿಸ್ತರಿಸುವ ಯೋಜನೆ ಹಾಕಿದಳು. ಭೇಟಿಗೆಂದು ಒಂದು ದಿವಾನ್‌ಖಾನೆ, ನಿತ್ಯದ ಉಪಯೋಗಕ್ಕಾಗಿ ತಂಪಾಗಿ ಆರಾಮಾಗಿ ಇರುವ ಮತ್ತೊಂದು ಕೊಠಡಿ, ಮನೆಯವರು, ಅತಿಥಿಗಳು ಕುಳಿತು ಊಟ ಮಾಡಲು ಅನುಕೂಲಕರವಾಗಿ ಒಂದು ದೊಡ್ಡ ಊಟದ ಮೇಜು. ಹನ್ನೆರಡು ಕುರ್ಚಿಗಳನ್ನು ಹೊಂದಿರುವ ಊಟದ ಕೋಣೆ; ಅಂಗಳದೆಡೆ ಕಿಟಕಿಗಳಿರುವಂತಹ 9 ಕೋಣೆಗಳು ಮತ್ತು ಬಿಸಿಲಿನ ತಾಪದಿಂದ ರಕ್ಷಿಸಿಕೊಳ್ಳಲು ಉದ್ದನೆಯ ಮುಖಮಂಟಪ. ಫರ್ನ್ ಮತ್ತು ಬೆನೋನಿಯಾ ಗಿಡಗಳ ಕುಂಡಗಳನ್ನು ಇಡಲು ಅನುಕೂಲವಾಗುವಂತಹ ರೈಲಿಂಗ್ಸ್ ಹೊಂದಿದ ಗುಲಾಬಿ ತೋಟ–ಹೊಂದಿದ್ದ ಮನೆ ಕಟ್ಟಿಸಿದಳು. ಎರಡು ಒಲೆಗಳನ್ನು ಇಡಲು ಸಾಧ್ಯವಾಗುವಂತೆ ವಿಶಾಲವಾದ ಅಡಿಗೆ ಮನೆಯನ್ನು ಕಟ್ಟಿಸಿದಳು. ಪಿಲಾರ್ ತರ್ನೆರಾ ಮೊದಲ ಬಾರಿಗೆ ಜೋಸ್ ಆರ್ಕಾಡಿಯೋನ ಭವಿಷ್ಯವನ್ನು ಕಾರ್ಡುಗಳನ್ನು ಓದಿ ಹೇಳಿದ ಉಗ್ರಾಣವನ್ನು ಕೆಡವಿ, ಆ ಜಾಗದಲ್ಲಿ ಎಂದಿಗೂ ಆಹಾರ ಪದಾರ್ಥಗಳ ಅಭಾವ ಆಗದಷ್ಟು ತುಂಬುವ ಎರಡು ಪಟ್ಟು ದೊಡ್ಡದಾದ ಉಗ್ರಾಣವನ್ನು ನಿರ್ಮಿಸಿದಳು.

ಚೆಸ್ಟೆನಟ್ ಮರಗಳ ನೆರಳಿನಡಿ, ಅಂಗಳದಲ್ಲಿ ಗಂಡಸರಿಗೊಂದು, ಹೆಂಗಸರಿಗೊಂದು ಎಂದು ಎರಡು ಬಚ್ಚಲು ಮನೆಗಳನ್ನು ಕಟ್ಟಿಸಿದಳು. ಇವುಗಳ ಹಿಂಭಾಗದಲ್ಲಿ ಒಂದು ದೊಡ್ಡದಾದ ಕುದುರೆಲಾಯ, ಬೇಲಿ ಹಾಕಿದ ಕೋಳಿಗೂಡು, ಹಸುಗಳಿಗಾಗಿ ಒಂದು ಕೊಟ್ಟಿಗೆ, ಹಾರಾಡುವ ಪಕ್ಷಿಗಳು ಬಂದು ಕುಳಿತು ವಿಶ್ರಾಂತಿ ಪಡೆಯಲು ಒಂದು ಜಾಗ – ಹೀಗೆ ಎಲ್ಲವನ್ನೂ ವ್ಯವಸ್ಥೆ ಮಾಡಿದಳು. ಗಂಡನ ಭ್ರಾಮಕ ಕಲ್ಪನೆಯ ಅಂಟು ಇವಳಿಗೂ ತಗುಲಿತೋ ಎಂಬಂತೆ ಡಜನ್ ಗಟ್ಟಲೆ ಮರಗೆಲಸದವರು, ಮೇಸ್ತ್ರಿಗಳು ಇವರನ್ನು ಕೂಡಿಸಿಕೊಂಡು ಜಾಗದ ಮಿತಿಗಳ ಕಲ್ಪನೆಯಿಲ್ಲದೆ, ಬೆಳಕು ಬಿಸಿಲಿನ ಸ್ಥಳಗಳನ್ನು ನಿಗದಿಪಡಿಸಿದಳು. ಇದೆಲ್ಲದರಿಂದ ಆ ಪುರಾತನ ಕಟ್ಟಡವು ಉಪಕರಣಗಳಿಂದ, ಕಟ್ಟಡ

ಸಾಮಗ್ರಿಗಳಿಂದ ತುಂಬಿಹೋಯಿತು. ಕೆಲಸದವರು ದಣಿವು ಬೆವರುಗಳಿಂದ ಸುಸ್ತಾಗಿ ಹೋಗಿದ್ದವರು ಯಾರೂ ತಮ್ಮ ತಂಟೆಗೆ ಬರಬೇಡಿರೆಂದು ಹೇಳಿದರು. ಗಾರೆ ಮತ್ತು ಸುಣ್ಣ ತುಂಬಿದ ಗಾಳಿಯಲ್ಲಿನ ಉಸಿರಾಟದಿಂದ ಹೆಣಗುತ್ತಿದ್ದವರ ಮಧ್ಯೆ, ಭೂಗರ್ಭದಿಂದ, ಇಡೀ ಜೌಗುಪ್ರದೇಶದಲ್ಲಿಯೇ ಅತ್ಯಂತ ದೊಡ್ಡದಾದ ಮತ್ತು ಹಿಂದೆಂದೂ ಕಾಣದಿದ್ದ ತಂಪಾದ, ಮನೆ ಎದ್ದು ಬರುತ್ತಿದೆ ಎನ್ನುವ ವಿಷಯ ಯಾರಿಗೂ ಸರಿಯಾಗಿ ತಿಳಿದಿರಲಿಲ್ಲ. ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಈ ಅನಾಹುತಗಳ ಮಧ್ಯೆ ದೈವೇಚ್ಛೆಯನ್ನು ಎದುರಿಸುವ ಪ್ರಯತ್ನದಲ್ಲಿ ಇದ್ದವನಿಗೇ ಇದೆಲ್ಲಾ ಅರ್ಥವಾಗಿರಲಿಲ್ಲ. ಹೊಸ ಮನೆ ಇನ್ನೇನು ಪೂರ್ತಿಯಾಗುತ್ತಿರುವಾಗ ಉರ್ಸುಲಾ ಗಂಡನನ್ನು ಅವನ ಭ್ರಾಮಕ ಜಗತ್ತಿನಿಂದ ಹೊರಗೆ ಬರುವಂತೆ ಮಾಡಿ, ಅವನಿಗೆ, ತಾವು ಮೊದಲು ಅಂದುಕೊಂಡಂತೆ ಬಿಳಿಬಣ್ಣಕ್ಕೆ ಬದಲಾಗಿ ಮುಂಭಾಗಿಲವನ್ನು ನೀಲಿ ಬಣ್ಣದಿಂದ ಬಳಿಯಬೇಕೆಂದು ತಿಳಿಸಿದಳು. ಅವನಿಗೆ ಅಧಿಕೃತ ದಾಖಲೆಯನ್ನು ತೋರಿಸಿದಳು. ಜೋಸ್ ಆರ್ಕಾಡಿಯೋ ಬ್ಯುಂಡಿಯಾ ತನ್ನ ಹೆಂಡತಿ ಏನು ಹೇಳುತ್ತಿದ್ದಾಳೆ ಎನ್ನುವುದನ್ನೇ ಸರಿಯಾಗಿ ಅರ್ಥಮಾಡಿಕೊಳ್ಳದೆ ಆ ಕಾಗದದಲ್ಲಿ ಇದ್ದ ಸಹಿಯನ್ನು ನೋಡಿದ.

"ಈತ ಯಾರು?" – ಎಂದು ಕೇಳಿದ.

"ಮ್ಯಾಜಿಸ್ಟ್ರೇಟ್, ಸರ್ಕಾರದಿಂದ ನೇಮಿಸಲ್ಪಟ್ಟ ಅಧಿಕಾರಿ" ಎಂದು ತಿಳಿಸಿದಳು.

ಡಾನ್ ಅಪೊಲಿನಾರ್ ಮಾಸ್‌ಕೋಟ್, ಮ್ಯಾಜಿಸ್ಟ್ರೇಟ್ ಆಗಿ ಮಕೊಂಡೋಗೆ ಸದ್ದಿಲ್ಲದೆ ಬಂದು ಸೇರಿದ್ದ. ಆತ ಜಾಕೋಬ್ ಹೋಟೆಲ್‌ನಲ್ಲಿ ಉಳಿದುಕೊಂಡಿದ್ದ. ಈ ಹೋಟೆಲನ್ನು ಮೊದಲಿಗೆ ಬಂದಿದ್ದ ಅರಬನು ಗಿಳಿಗಳನ್ನು ಕೊಟ್ಟು ಸಾಕಷ್ಟು ಗಳಿಸಿದ ಹಣದಿಂದ ಕಟ್ಟಿಸಿದ್ದ. ಅದರಲ್ಲಿನ ಒಂದು ಸಣ್ಣ ಕೊಠಡಿಯನ್ನು ಬಾಡಿಗೆಗೆ ನೀಡಿದ್ದ. ರಸ್ತೆಗೆ ಮುಖ ಮಾಡಿದ ಬಾಗಿಲು ಬ್ಯುಂಡಿಯಾ ಮನೆಯಿಂದ ಎರಡು ಬ್ಲಾಕ್‌ಗಳಷ್ಟು ದೂರವಿತ್ತು. ಜಾಕೋಬ್‌ನಿಂದ ಕೊಂಡ ಮೇಜು ಮತ್ತು ಕುರ್ಚಿಯನ್ನು ಸಜ್ಜುಮಾಡಿದ. ತನ್ನೊಡನೆ ತಂದಿದ್ದ ರಿಪಬ್ಲಿಕ್‌ನ ಫಲಕವನ್ನು ಗೋಡೆಗೆ ಏರಿಸಿದ ಮತ್ತು ಬಾಗಿಲಿನ ಮೇಲೆ 'ಮ್ಯಾಜಿಸ್ಟ್ರೇಟ್' ಎಂದು ಬರೆಸಿದ. ರಾಷ್ಟ್ರೀಯ ಸ್ವಾತಂತ್ರ್ಯದ ವಾರ್ಷಿಕೋತ್ಸವದ ಆಚರಣೆಯ ಅಂಗವಾಗಿ, ಎಲ್ಲ ಮನೆಗಳಿಗೂ ನೀಲಿ ಬಣ್ಣವನ್ನೇ ಬಳಿದಿರಬೇಕೆಂಬುದು ಅವನ ಮೊದಲ ಆದೇಶವಾಗಿತ್ತು. ಜೋಸ್ ಆರ್ಕಾಡಿಯೋ ಆದೇಶದ ಪ್ರತಿಯನ್ನು ಕೈಲಿ ಹಿಡಿದು ಹೋದಾಗ ಅವನು ತನ್ನ ಇಕ್ಕಟ್ಟಾದ ಕೊಠಡಿಯಲ್ಲಿಯೇ, ಮಧ್ಯಾಹ್ನದ ನಿದ್ದೆಮಾಡುತ್ತಿದ್ದ. "ನೀನೇನಾ ಈ ಆದೇಶ ಬರೆದದ್ದು" – ಎಂದು ಅವನನ್ನು ಪ್ರಶ್ನಿಸಿದ. ಡಾನ್ ಅಪೊಲಿನಾ ಮಾಸ್‌ಕೋಟ್ ಒಬ್ಬ ಪ್ರಬುದ್ಧ ಮನುಷ್ಯ. ಸ್ವಲ್ಪ ಹೆದರಿಕೆಯುಳ್ಳ, ಮಂಕು ಬಣ್ಣದ ಆತ ಹೌದೆಂದ. "ಯಾವ ಅಧಿಕಾರದಿಂದ?" ಎಂದು ಆರ್ಕಾಡಿಯೋ ಮತ್ತೆ ಪ್ರಶ್ನಿಸಿದ. ಡಾನ್ ಅಪೊಲಿನಾರ್ ಮೇಜಿನ ಡ್ರಾಯರ್ ಎಳೆದು, ಕಾಗದವನ್ನು ಹೊರತೆಗೆದು, ಅವನಿಗೆ ತೋರಿಸಿದ. ಈ ಊರಿಗೆ ನನ್ನನ್ನು ಮ್ಯಾಜಿಸ್ಟ್ರೇಟ್ ಆಗಿ ನೇಮಕ ಮಾಡಲಾಗಿದೆ. ಜೋಸ್ ಆರ್ಕಾಡಿಯೋ ನೇಮಕಾತಿ ಪತ್ರದ ಕಡೆ ಕಣ್ಣೆತ್ತಿಯೂ ನೋಡಲಿಲ್ಲ.

"ಈ ಊರಿನಲ್ಲಿ ಕಾಗದದ ತುಂಡುಗಳಲ್ಲಿ ಆದೇಶಗಳನ್ನು ನೀಡುವುದಿಲ್ಲ" – ಸಹನೆ ಕಳೆದುಕೊಳ್ಳದೆ ಹೇಳಿದ. "ಅದಕ್ಕೇ ನೀನೊಂದು ಮಾತು ಚೆನ್ನಾಗಿ ಅರ್ಥಮಾಡಿಕೋ, ನಮಗೆ ಯಾರಿಗೂ ಜಡ್ಜುಗಳು(ನ್ಯಾಯಾಧೀಶರು) ಬೇಕಾಗಿಲ್ಲ. ಯಾಕೆಂದರೆ ಜಡ್ಜು ಮಾಡುವುದಕ್ಕೆ ಇಲ್ಲಿ ಏನೂ ಅಗತ್ಯವಿಲ್ಲ".

ಅಪೊಲಿನಾರ್‌ನನ್ನು ನೋಡುತ್ತಲೇ, ತನ್ನ ದನಿಯನ್ನು ಇನ್ನೂ ಎತ್ತರಿಸದೆ ನಿಧಾನವಾಗಿ, "ಆ ಊರು ಅಸ್ತಿತ್ವಕ್ಕೆ ಹೇಗೆ ಬಂದದ್ದು. ತಾವು ಭೂಮಿಯನ್ನು ಹೇಗೆ ಹಂಚಿಕೆ ಮಾಡಿದರು. ರಸ್ತೆಗಳನ್ನು ಹೇಗೆ ಮಾಡಿದರು, ಅಭಿವೃದ್ಧಿ ಕ್ರಮಗಳನ್ನು ಸರಕಾರದಿಂದ ಯಾವುದೇ ಸಹಾಯವಿಲ್ಲದೆ ಹೇಗೆ ಕೈಗೊಂಡರು ಎಂಬುದನ್ನೆಲ್ಲ ಸವಿಸ್ತಾರವಾಗಿ ವಿವರಿಸಿದ. ಸರಕಾರಕ್ಕೆ ತಾವು ತೊಂದರೆ ಕೊಟ್ಟದ್ದಾಗಲೀ ತಮಗೆ ಬೇರೆಯವರು ತೊಂದರೆ ಕೊಟ್ಟದ್ದಾಗಲೀ ನಡೆಯದೆ ಇದೆಲ್ಲವನ್ನೂ ಮಾಡಿದ್ದೆಂದು ವಿವರಿಸಿದ. ನಾವೆಲ್ಲ ಪ್ರಶಾಂತವಾಗಿ ಬದುಕುತ್ತಿದ್ದೇವೆ. ಇಲ್ಲೀವರೆಗೆ ಒಂದಾದರೂ ನೈಸರ್ಗಿಕ ಸಾವು ಸಂಭವಿಸಿದ್ದಿಲ್ಲ" ಎಂದು ಹೇಳಿದ. "ನೀನೇ ನೋಡಬಹುದು, ಇಲ್ಲಿ ಒಂದಾದರೂ ಸಮಾಧಿ ಕಾಣುವುದಿಲ್ಲ. ಸರಕಾರ ಸಹಾಯ ಮಾಡಿಲ್ಲವೆಂದು ಯಾರೂ ಬೇಸರಗೊಂಡದ್ದಿಲ್ಲ, ಅದಕ್ಕೆ ಬದಲಾಗಿ, ಅಲ್ಲಿವರೆಗೆ ತಾವು ನೆಮ್ಮದಿಯಿಂದ ಬಾಳುವುದಕ್ಕೆ ಸಾಧ್ಯವಾಯಿತಲ್ಲ ಎಂದು ಸಂತೋಷದಿಂದ ಇದ್ದಾರೆ. ಅದೇ ರೀತಿ ಬದುಕು ಮುಂದುವರೆಯಲೆಂಬುದು ತಮ್ಮಾಸೆ ಅವರೀಗ ಇರುವಂತೆ ಇರಲು ಬಿಟ್ಟರೆ ಸಾಕು, ಯಾರೋ ಬಂದು ಹಾಗೆ ಮಾಡು ಹೀಗೆ ಮಾಡು ಎಂದು ಹೇಳುವುದನ್ನು ಕೇಳಿಸಿಕೊಳ್ಳಲೆಂದು ಈ ಊರನ್ನು ಕಟ್ಟಿಲ್ಲ. ಡಾನ್ ಅಪೊಲಿನಾರ್ ಬಿಳಿ ಷರಾಯಿ ಮತ್ತು ಜಾಕೆಟ್ ಅನ್ನು ಧರಿಸಿದ್ದ. ಡಾನ್ ಅಪೊಲಿನಾರ್, ಗಾಂಭೀರ್ಯವನ್ನು ಕಳೆದುಕೊಳ್ಳಲಿಲ್ಲ.

"ನೀನೂ ಎಲ್ಲ ಸಾಮಾನ್ಯ ನಾಗರಿಕರಂತೆ ಇಲ್ಲಿ ಇರಲು ಬಯಸಿದರೆ ನಿನಗೆ ಸ್ವಾಗತ" ಎಂದು ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಮಾತನ್ನು ಮುಗಿಸಿ "ಆದರೆ ನೀನೇನಾದರೂ ಜನರಿಗೆ, ಅವರ ಮನೆಗಳಿಗೆ ನೀಲಿ ಬಣ್ಣ ಹಚ್ಚಲು ಹೇಳಿ ಗೊಂದಲ ಶುರುಮಾಡಿದರೆ, ಗಂಟುಮೂಟೆಕಟ್ಟಿಕೊಂಡು ನೀನು ಎಲ್ಲಿಂದ ಬಂದೆಯೋ ಅಲ್ಲಿಗೇ ಹೋಗು. ನನ್ನ ಮನೆಯಂತೂ, ಪಾರಿವಾಳದಂತೆ ಬಿಳಿ ಬಣ್ಣವನ್ನೇ ಹೊಂದಿರುತ್ತೆ" ಎಂದು ಹೇಳಿದ.

ಡಾನ್ ಅಪೊಲಿನಾರ್ ಮಾಸ್‌ಕೋಟ್ ಬಿಳಿಚಿಕೊಂಡ. ಒಂದು ಹೆಜ್ಜೆ ಹಿಂದೆ ಹೋದ. ಔಡುಗಚ್ಚಿ ಅವಮಾನಗೊಂಡವನಂತೆ,

"ಶಸ್ತ್ರ ಸಜ್ಜಿತನಾಗಿದ್ದೀನಿ, ಎಚ್ಚರವಿರಲಿ" ಎಂದ.

ಜೋಸ್ ಆರ್ಕಾಡಿಯೋಗೆ, ಹಿಂದೆ ಕುದುರೆಗಳನ್ನು ಎಳೆಯಲು ಬಳಸುತ್ತಿದ್ದ ಬಲ ಅದು ಈಗ ಅವನ ಕೈಗಳಿಗೆ ಹೇಗೆ ಬಂತೋ ತಿಳಿಯಲಿಲ್ಲ. ಅವನು ಅಪೊಲಿನಾರ್‌ನ ಕತ್ತಿನ ಪಟ್ಟಿ ಹಿಡಿದು ತನ್ನ ಕಣ್ಣುಳತೆಯ ಸಮಾನಕ್ಕೆ ಎತ್ತಿದ.

"ನಾನು ಹೀಗೆ ಯಾಕೆ ಮಾಡುತ್ತಿದ್ದೀನಿ ಎಂದರೆ, ಜೀವಂತವಾಗಿ ನಿನ್ನ ಹೊತ್ತು ಸುತ್ತಾಡುವುದು, ನಿನ್ನ ಶವವನ್ನು ಹೊತ್ತು ಜೀವನದುದ್ದಕ್ಕೂ ಸುತ್ತಾಡುವುದಕ್ಕಿಂತ ಮೇಲು ಎನಿಸಿದ್ದರಿಂದ"

ಅವನನ್ನು ಹಾಗೆಯೇ ರಸ್ತೆಯ ಮಧ್ಯಕ್ಕೆ ಹೊತ್ತು ತಂದು ಕತ್ತಿನ ಪಟ್ಟಿ ಹಿಡಿದು ನೇತಾಡುವಂತೆ ಮಾಡಿದ ನಂತರ ಆ ಜೌಗು ರಸ್ತೆಯಲ್ಲಿ ಕೆಳಕ್ಕೆ ಇಳಿಸಿ, ನಿಲ್ಲಿಸಿದ. ಒಂದು ವಾರದ ನಂತರ ಬರಿಗಾಲಿನ, ಚಿಂದಿ ಧರಿಸಿದ, ಬಂದೂಕು ಹಿಡಿದ ಆರುಮಂದಿ ಸೈನಿಕರೊಂದಿಗೆ ಹಿಂದಿರುಗಿದ, ಜೊತೆಗೆ ತಾನು ಪ್ರಯಾಣಿಸಿದ ಎತ್ತಿನಗಾಡಿ, ಅದರಲ್ಲಿ ಹೆಂಡತಿ ಮತ್ತು ಏಳು ಜನ ಹೆಣ್ಣು ಮಕ್ಕಳೂ ಬಂದಿಳಿದರು. ಅದರ ಹಿಂದೆ ಪಾತ್ರೆ ಪರಡಿ, ಪೀಠೋಪಕರಣ, ಮತ್ತು ಇನ್ನೂ ಹಲವಾರು ಸಾಮಾನುಗಳನ್ನು ತುಂಬಿಕೊಂಡಿದ್ದ ಮತ್ತೆರಡು ಗಾಡಿಗಳೂ ಬಂದವು. ಜಾಕೋಬ್ ಹೋಟೆಲಿನಲ್ಲಿ ಕುಟುಂಬದವರನ್ನು ಇರಿಸಿ, ಮನೆಯನ್ನು ಹುಡುಕಲು ಹೊರಟಿದ್ದವನು ಹಿಂತಿರುಗಿ ಬಂದು ಕಛೇರಿಯ ಬಾಗಿಲನ್ನು ಸೈನಿಕರ ರಕ್ಷಣೆಯಲ್ಲಿ ತೆರೆದ. ಮಕೊಂಡೋದ ಸ್ಥಾಪಕರು ಹೊರಗಿನಿಂದ ಬಂದ ಈ ಆಕ್ರಮಣಕಾರನನ್ನು ಹೊರಡಿಸಬೇಕೆಂದು ನಿರ್ಧರಿಸಿ, ತಮ್ಮ ಹಿರಿಯ ಗಂಡು ಮಕ್ಕಳನ್ನು ಜೊತೆಗೂಡಿಸಿಕೊಂಡು ಜೋಸ್ ಆರ್ಕಾಡಿಯೋ ಬ್ಯುಂಡಿಯಾನ ಸಹಾಯಕ್ಕೆ ನಿಂತರು. ಆದರೆ ಅವನಿಗೆ ಇದು ಬೇಕಿರಲಿಲ್ಲ. ಒಬ್ಬ ಮನುಷ್ಯನಿಗೆ ತೊಂದರೆ ಕೊಡುವುದು ಗಂಡಸಿನ ಲಕ್ಷಣವಲ್ಲ ಅದೂ ಅವನ ಕುಟುಂಬದವರ ಎದುರು. ಅಲ್ಲದೆ ಡಾನ್ ಅಪೊಲಿನಾರ್ ತನ್ನ ಹೆಂಡತಿ ಮಕ್ಕಳೊಂದಿಗೆ ಹಿಂದಿರುಗಿ ಬಂದಿದ್ದಾನೆ ಎಂದು ತಿಳಿಸಿ ಹೇಳಿದ. ಪರಿಸ್ಥಿತಿಯನ್ನು ಸ್ನೇಹಭಾವದೊಂದಿಗೆ ಸುಧಾರಿಸಲು ನಿರ್ಧರಿಸಿದ.

ಅರೆಲಿಯಾನೋ ಅವನ ಜೊತೆಗೆ ಹೊರಟಿದ್ದ. ಅಷ್ಟುಹೊತ್ತಿಗೆ ಮೀಸೆಗೀಸೆ ಚೆನ್ನಾಗಿ ಬೆಳಸಿಕೊಂಡಿದ್ದ. ತುದಿಗಳಿಗೆ ಮೇಣಹಚ್ಚಿದ. ಯುದ್ಧದಲ್ಲಿ ಎದ್ದು ಕೇಳಿಸುವ ಒಂದು ಬಗೆಯ ಗಡಸು ಧ್ವನಿ ಹೊಂದಿದ್ದು ಅದಕ್ಕೆ ಲಾಯಕ್ಕಾಗಿದ್ದ. ನಿಶ್ಶಸ್ತ್ರರಾಗಿ, ಕಾವಲುಗಾರರನ್ನು ಲೆಕ್ಕಿಸದೆ ನೇರವಾಗಿ ಮ್ಯಾಜಿಸ್ಟ್ರೇಟ್ ಕಛೇರಿಯ ಒಳಹೊಕ್ಕರು ಡಾನ್ ಅಪೊಲಿನಾರ್ ಪ್ರಶಾಂತತೆಯನ್ನು ಕಳೆದುಕೊಳ್ಳಲಿಲ್ಲ. ಅಲ್ಲಿದ್ದ ತನ್ನಿಬ್ಬರು ಹೆಣ್ಣು ಮಕ್ಕಳಾದ, ಹದಿನಾರು ವರ್ಷದ, ಕಪ್ಪುಛಾಯೆಯುಳ್ಳ ತಾಯಿಯನ್ನು ಹೋಲುತ್ತಿದ್ದ ಅಂಪಾರೋ ಮತ್ತು ಕೇವಲ ಒಂಭತ್ತು ವರ್ಷದ ಪುಟ್ಟ ಹುಡುಗಿ ಲಿಲಿ ಬಣ್ಣದ ಚರ್ಮ ಮತ್ತು ಹಸಿರು ಕಣ್ಣುಗಳುಳ್ಳ ರೆಮಿಡಿಯೋಸ್‌ರಿಗೆ ಚೆಲುವಾಗಿ ಕಾಣುತ್ತಿದ್ದರಲ್ಲದೆ ಒಳ್ಳೆಯ ನಡತೆಯುಳ್ಳವರಂತೆ ಇದ್ದರು. ಗಂಡಸರು ಒಳಗೆ ಪ್ರವೇಶಿಸುತ್ತಿದ್ದಂತೆಯೇ ಇನ್ನೂ ಪರಿಚಯವಾಗುವುದಕ್ಕೆ ಮೊದಲೆ ಕುರ್ಚಿಗಳನ್ನು ತೋರಿ ಕುಳಿತುಕೊಳ್ಳುವಂತೆ ಸೂಚಿಸಿದರು. ಆದರೆ ಅವರಿಬ್ಬರು ನಿಂತುಕೊಂಡೇ ಇದ್ದರು.

"ಒಳ್ಳೆಯ ಗೆಳೆಯ, ನೀನು ಇಲ್ಲಿ ಇರಬಹುದು", "ಹೀಗೆ ಹೇಳುತ್ತಿರುವುದು ಬಂದೂಕುಧಾರಿಗಳ ಭಯದಿಂದಲ್ಲ, ನಿನ್ನ ಹೆಂಡತಿ ಮಕ್ಕಳನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಹೇಳುತ್ತಿದ್ದೇನೆ" ಎಂದು ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಹೇಳಿದ.

ಡಾನ್ ಅಪೊಲಿನಾರ್‌ಗೆ ಬೇಸರವಾಗಿತ್ತು. ಆದರೆ ಜೋಸ್ ಆರ್ಕಾಡಿಯೋ, ಅವನು ಪ್ರತ್ಯುತ್ತರ ಕೊಡಲು ಅವಕಾಶವೇ ಕೊಡದೆ ಮಾತನ್ನು ಮುಂದುವರೆಸಿದ. "ನಾವು ಎರಡೇ ಎರಡು ಷರತ್ತುಗಳನ್ನು ಮುಂದಿಡುತ್ತೇವೆ. ಒಂದು ಪ್ರತಿಯೊಬ್ಬರೂ ತಮಗೆ ಇಷ್ಟಬಂದ ಬಣ್ಣಗಳನ್ನು ತಮ್ಮ ಮನೆಗಳಿಗೆ ಹಚ್ಚಿಕೊಳ್ಳಬಹುದು. ಎರಡನೆಯದು ಈ ಸೈನಿಕರು ಕೂಡಲೇ ಹೊರಟು ಬಿಡಬೇಕು. ಒಂದು ಕ್ರಮದ ವ್ಯವಸ್ಥೆಯ ಭರವಸೆ ಕೊಡುತ್ತೇವೆ". ಮ್ಯಾಜಿಸ್ಟ್ರೇಟ್ ತನ್ನ ಬಲಗೈಯನ್ನೆತ್ತಿ, ಎಲ್ಲ ಬೆರಳುಗಳನ್ನು ಬಿಡಿಸಿ, "ಇದು ಸತ್ಯ ತಾನೇ?". ಎಂದ. "ನಿನ್ನ, ಶತ್ರುವಿನ ಮಾತು" ಎಂದು ಮಾತು ಮುಂದುವರೆಸಿ ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಕಹಿದನಿಯಲ್ಲಿ, "ಒಂದು ಮಾತು ನಿನಗೆ ನಾನು ಹೇಳಲೇಬೇಕು, ನಾವಿಬ್ಬರೂ ಶತ್ರುಗಳು, ಹಾಗೆಯೇ ಮುಂದುವರೆಯೋಣ."

ಅದೇ ದಿನ ಮಧ್ಯಾಹ್ನ ಸೈನಿಕರು ಹೊರಟು ಹೋದರು. ಕೆಲದಿನಗಳ ನಂತರ ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಡಾನ್ ಅಪೊಲಿನಾರ್‌ಗೆ ಮನೆಯನ್ನು ಹುಡುಕಿಕೊಟ್ಟ. ಅರೆಲಿಯಾನೋ ಹೊರತುಪಡಿಸಿ ಬೇರೆಲ್ಲರೂ ಸಮಾದಾನದಿಂದ ಇದ್ದರು.

ವಯಸ್ಸಿನಿಂದ ತನ್ನ ಮಗಳಾಗಿ ಇರಬಹುದಾಗಿದ್ದ ಮ್ಯಾಜಿಸ್ಟ್ರೇಟನ ಕಿರಿಯ ಮಗಳು ರೆಮೆಡಿಯೋಸ್‌ಳ ರೂಪ ತನ್ನ ದೇಹದ ಯಾವುದೋ ಒಂದು ಮೂಲೆಯನ್ನು ಹಿಂಸಿಸುತ್ತಿತ್ತು. ಅದು ದೈಹಿಕ ಸೆಳೆತಕ್ಕೆ ಸಂಬಂಧಪಟ್ಟದಾಗಿದ್ದು. ನಡಯುವಾಗ ಬೂಟಿನಲ್ಲಿ ಸೇರಿಕೊಂಡ ಕಲ್ಲಿನ ಚೂರುಗಳು ಒತ್ತಿ ಹಿಂಸಿಸುವಂತೆ, ಅವನನ್ನು ಹಿಂಸಿಸುತ್ತಿತ್ತು.

4

ಪಾರಿವಾಳದಂತೆ ಬೆಳ್ಳಗಿದ್ದ ಹೊಸ ಮನೆಯ ಗೃಹಪ್ರವೇಶ ನರ್ತನ ಸಂಭ್ರಮದೊಂದಿಗೆ ಆಯಿತು. ರೆಬೆಕಾ, ಅಮರಾಂತ ಪ್ರಾಯಕ್ಕೆ ಬರುತ್ತಿದ್ದುದನ್ನು ಒಂದು ದಿನ ಮಧ್ಯಾಹ್ನ ಉರ್ಸುಲಾಳ ಗಮನಕ್ಕೆ ಬಂದಾಗ, ಈ ವಿಚಾರ ಅವಳಿಗೆ ಹೊಳೆಯಿತು. ಅದೂ ಅಲ್ಲದೆ ಈ ಮನೆ ಕಟ್ಟುವುದರ ಹಿಂದಿನ ಮುಖ್ಯ ಉದ್ದೇಶವೇ, ಈ ಮಕ್ಕಳಿಗೆ ಬಂದು ಹೋಗುವವರನ್ನು ಭೇಟಿಯಾಗಲು ಅನುಕೂಲವಾಗಲಿ ಎಂಬುದಾಗಿತ್ತು. ಮನೆಯ ಅಂದ ಚೆಂದಕ್ಕೆ ಯಾವುದೇ ರೀತಿಯ ಕೊರತೆಯುಂಟಾಗಬಾರದೆಂದು ಬಹಳಷ್ಟು ಶ್ರಮಿಸಿದಳು. ರಿಪೇರಿ ಕೆಲಸಗಳು ನಡೆಯುತ್ತಿರುವಾಗಲೇ, ಅವು ಪೂರ್ತಿಯಾಗುವುದಕ್ಕೆ ಮೊದಲೇ ಗೃಹಾಲಂಕಾರಕ್ಕೆ ಬೇಕಾದ ಬಹು ಬೆಲೆಯುಳ್ಳ ವಸ್ತುಗಳಿಗೆ ಆರ್ಡರ್ ಕೊಟ್ಟಳು. ಟೇಬಲ್‌ಗಳು, ಇಡೀ ಊರಿನ ಜನ ಕಣ್ಣರಳಿಸಿ ನೋಡುವಂತಹ, ಯುವಜನರ ಉತ್ಸಾಹ, ಅಚ್ಚರಿಗಳನ್ನು ಕೆರಳಿಸುವ ಪಿಯಾನೊ ಮೊದಲಾದವುಗಳನ್ನು ತರಲು ಆದೇಶ ನೀಡಿದಳು. ವಿಯನ್ನಾದ ಪೀಠೋಪಕರಣಗಳು, ಬೊಹೆಮಿಯಾದ ಹರಳು ಇಂಡಿಯಾ ಕಂಪನಿಯ ಟೇಬಲ್‌ಗಳು, ಹಾಲೆಂಡಿನ ಟೇಬಲ್ ಕ್ಲಾತ್, ವಿವಿಧ ಬಗೆಯ ದೀಪಗಳು, ಕ್ಯಾಂಡಲ್‌ಗಳು, ಪರದೆಗಳು, ಎಲ್ಲವೂ ತುಂಬಿದ ಪೆಟ್ಟಿಗೆಗಳು ಬಂದು ತುಂಬಿದವು. ಆಮದು

ಕಂಪನಿಯೇ ಸ್ವತಃ ತನ್ನ ಖರ್ಚಿನಲ್ಲಿ, ಪಿಯಾನೋ ಭಾಗಗಳನ್ನು ಜೋಡಿಸಲು ಮತ್ತು ಕೊಂಡವರಿಗೆ ಅದು ಕೆಲಸ ಮಾಡುವ ರೀತಿಯನ್ನು ತೋರಿಸಿಕೊಡಲು ಮತ್ತು ಆರು ಕಾಗದದ ಸುರುಳಿಗಳಲ್ಲಿ ಮುದ್ರಿಸಿದ ಅತ್ಯಂತ ಆಧುನಿಕವಾದ ಸಂಗೀತಕ್ಕೆ ಹೊಂದಿಕೊಂಡಂತೆ ಹೇಗೆ ನರ್ತಿಸಬೇಕೆಂಬುದನ್ನು ಕಲಿಸಿಕೊಡಲು ಪೀಟ್ರೋ ಕ್ರೆಸ್ಪಿ ಎಂಬ ವ್ಯಕ್ತಿಯನ್ನೂ ಜೊತೆಗೆ ಕಳಿಸಿಕೊಟ್ಟಿತ್ತು.

ಪೀಟ್ರೋ ಕ್ರೆಸ್ಪಿ ಹರಯದವನೂ ಚೆಲುವನೂ ಆಗಿದ್ದ. ಒಳ್ಳೆಯ ನಡತೆಯವನಾಗಿದ್ದ ಅವನು ಇದಕ್ಕೆ ಮೊದಲು ಎಂದೂ ಮಕೊಂಡೋದಲ್ಲಿ ಕಾಣಿಸಿಕೊಂಡಿರಲಿಲ್ಲ. ತನ್ನ ಉಡುಪಿನ ಬಗ್ಗೆ ಎಷ್ಟು ಅಚ್ಚುಕಟ್ಟು ಎಂದರೆ ಉಸಿರುಗಟ್ಟಿಸುವ ಆ ಉರಿಬಿಸಿಲಿನಲ್ಲಿಯೂ ಬ್ರೊಕೇಡ್‌ವೆಸ್ಟ್ ಭಾರವಾದ ಕಪ್ಪು ಕೋಟು ತೊಟ್ಟುಕೊಂಡೇ ಕೆಲಸಮಾಡುತ್ತಿದ್ದ. ಬೆವರಿನಲ್ಲಿ ತೊಯ್ದು, ಮನೆಯವರಿಂದ ಸಾಕಷ್ಟು ಅಂತರದಲ್ಲಿ, ಅರೆಲಿಯಾನೋ ಬೆಳ್ಳಿಕೆಲಸದಲ್ಲಿ ಹೇಗೆ ತನ್ಮಯನಾಗಿ ಇರುತ್ತಿದ್ದನೋ ಹಾಗೆಯೇ ತಾನೂ ಹಲವು ವಾರಗಳು ನಡುಮನೆಯಲ್ಲಿ ಬಾಗಿಲು ಹಾಕಿಕೊಂಡು ಕಳೆದ. ಒಂದು ದಿನ ಬೆಳಿಗ್ಗೆ, ಬಾಗಿಲನ್ನು ತೆರೆಯದೆ, ಯಾರನ್ನೂ ಪವಾಡ ನೋಡಲು ಕರೆಯದೆ, ಮೊದಲ ಸುರುಳಿಯನ್ನು ಪಿಯಾನೋದಲ್ಲಿ ಇರಿಸಿದ್ದೇ, ಕಿವಿಗಡಚಿಕ್ಕುವ ಸುತ್ತಿಗೆಯ ಸದ್ದು ಮರಗೆಲಸದ ಸದ್ದು, ಮೋಹಕ ಸಂಗೀತದ ಎದುರು ಮೌನವಾಯಿತು. ಎಲ್ಲರೂ ಅಲ್ಲಿಗೆ ಓಡಿಬಂದರು. ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಮಿಂಚಿನ ಹೊಡೆತಕ್ಕೆ ಸಿಕ್ಕಂತಾದ. ಅವನಿಗೆ ಸಂಗೀತದ ಮೋಹಕತೆಗಿಂತ ಅಚ್ಚರಿ ಮೂಡಿಸಿದ್ದು ಪಿಯಾನೋದ ಸ್ವಯಂಚಾಲಿತ ಕೀಗಳು. ತಕ್ಷಣವೇ ಮೆಲ್‌ಕಿಯಾಡ್ಸ್‌ನ ಕ್ಯಾಮರಾವನ್ನು ಅಣಿಮಾಡಿ, ಅದೃಶ್ಯ ಸಂಗೀತಗಾರನ ಭಾವಚಿತ್ರವನ್ನು ಹಿಡಿಯಲು ಯೋಚಿಸಿದ. ಆ ದಿನ ಇಟಾಲಿಯನ್ ಅವರೊಂದಿಗೆ ಊಟ ಮಾಡಿದ. ಬಡಿಸುತ್ತಿದ್ದ ರೆಬೆಕಾ ಅಮರಾಂತರಿಗೆ ಉಂಗುರವಿಲ್ಲದ ನಾಜೂಕಾದ ಆತನ ಕೈಗಳು ಪಾತ್ರೆಗಳನ್ನು ನಿಭಾಯಿಸುತ್ತಿದ್ದ ರೀತಿಯಿಂದ ಮುಜುಗರವಾಯಿತು. ನಡುಮನೆ ಪಕ್ಕದಲ್ಲಿದ್ದ ಪಡಸಾಲೆಯಲ್ಲಿ ಪೀಟ್ರೋ ಕ್ರೆಸ್ಪಿ ಅವರಿಗೆ ನರ್ತನ ಮಾಡುವುದನ್ನು ಕಲಿಸಿ. ಅವರನ್ನು ಸ್ಪರ್ಷಿಸದೆಯೇ ಅವರಿಗೆ ಹೆಜ್ಜೆ ಗತ್ತುಗಳನ್ನು ಹೇಳಿಕೊಡುತ್ತಿದ್ದ. ಹೆಣ್ಣುಮಕ್ಕಳು ನೃತ್ಯ ಕಲಿಯುವಷ್ಟೂ ಹೊತ್ತು ಉರ್ಸುಲಾ ತನ್ನ ಕಣ್ಣಾವಲನ್ನು ಒಂದು ಕ್ಷಣವೂ ತಪ್ಪಿಸಲಿಲ್ಲ. ಅಂತಹ ದಿನಗಳಲ್ಲಿ ಪೀಟ್ರೋ ಕ್ರಿಸ್ಪಿ ಎಲಾಸ್ಟಿಕ್ಕಾದ, ಬಿಗಿಯಾದ ಪ್ಯಾಂಟ್‌ನ್ನೂ ಡ್ಯಾನ್ಸಿಂಗ್ ಸ್ಲಿಪ್ಪರ್‌ಗಳನ್ನೂ ವಿಶೇಷವಾಗಿ ಧರಿಸುತ್ತಿದ್ದ. "ನೀನು ಅಷ್ಟೆಲ್ಲಾ ಚಿಂತೆಮಾಡಬೇಕಾದ್ದಿಲ್ಲ" "ಆತ ಬಹಳ ಒಳ್ಳೆಯವನು" – ಎಂದು ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಅವಳಿಗೆ ಹೇಳಿದ. ಆದರೂ ಉರ್ಸುಲಾ, ಆತ ಕಲಿಸುವುದನ್ನು ಮುಗಿಸಿ, ಅಲ್ಲಿಂದ ಬಿಟ್ಟುಹೋಗುವವರೆಗೂ, ಜಾಗರೂಕತೆ ವಹಿಸುವುದನ್ನು ಬಿಡಲಿಲ್ಲ. ಆಮೇಲೆ ಅವರು ಪಾರ್ಟಿಯ ಸಿದ್ಧತೆಗಳಲ್ಲಿ ತೊಡಗಿದರು. ಪಾರ್ಟಿಗೆ ಕರೆಯಬೇಕಾದವರ ಪಟ್ಟಿಯನ್ನು ಬಹಳ ಎಚ್ಚರಿಕೆಯಿಂದ ಸಿದ್ಧಮಾಡಿದಳು. ಮಕೊಂಡೋ ಸ್ಥಾಪಕರ ವಂಶದವರು ಜೊತೆಗೆ, ತಂದೆಯರು ಯಾರೆಂದು ತಿಳಿಯದೆ ಇಬ್ಬರು ಮಕ್ಕಳನ್ನು ಹುಟ್ಟಿಸಿದ ಪಿಲಾರ್ ತರ್ಸಿರಾ – ಇಷ್ಟು ಜನಕ್ಕೆ ಮಾತ್ರವೇ ಆಮಂತ್ರಣ. ನಿಜವಾಗಿಯೂ ಅದೊಂದು ಹೈಕ್ಲಾಸ್ ಪಟ್ಟಿ. ಒಂದೇನೆಂದರೆ, ಆ ಪಟ್ಟಿಯಲ್ಲಿ ಸ್ನೇಹದಭಾವನೆಯಿಂದ ಕೂಡಿದ್ದ ಹೆಸರುಗಳೂ ಇದ್ದವು.

ಜೋಸ್ ಆರ್ಕಾಡಿಯೋ ಬ್ಯುಂಡಿಯಾನ ಮನೆಯ ಹಳೆಯ ಸ್ನೇಹಿತರು, ಮಕೊಂಡೋ ಹುಟ್ಟಿದಂದಿನಿಂದ ಮತ್ತು ಅದಕ್ಕೂ ಮುಂಚಿನಿಂದ ಇದ್ದವರೂ ಸೇರಿದ್ದರು. ಇವರೆಲ್ಲರ ಜೊತೆಗೆ, ಅರೆಲಿಯಾನೋ ಆರ್ಕಾಡಿಯೋರಿಗೆ ಬಾಲ್ಯದಿಂದಲೂ ಸ್ನೇಹಿತರಾಗಿದ್ದ ಮಕೊಂಡೋ ಸ್ಥಾಪಿಸಿದವರ ಮಕ್ಕಳು ಮೊಮ್ಮಕ್ಕಳೂ ಇದ್ದರು. ರೆಬೆಕಾ ಅಮರಾಂತಾರ ಜೊತೆಗೆ ಎಂಬ್ರಾಯಿಡರಿ ಮಾಡಲು ಮನೆಗೆ ಬರುತ್ತಿದ್ದ ಅವರ ಹೆಣ್ಣುಮಕ್ಕಳೂ ಆಹ್ವಾನಿತರ ಪಟ್ಟಿಯಲ್ಲಿದ್ದರು. ಎಲ್ಲರಿಗಿಂತ ಮುಖ್ಯವಾಗಿದ್ದ ಒಬ್ಬ ವ್ಯಕ್ತಿಯೆಂದರೆ ತನ್ನ ಸೀಮಿತ ಆದಾಯದಿಂದಲೇ ಇಬ್ಬರು ಪೋಲಿಸ್‌ರನ್ನು ಇಟ್ಟುಕೊಂಡಿದ್ದ ಸಜ್ಜನ ಅಧಿಕಾರಿ ಡಾನ್ ಅಪೊಲಿನಾರ್. ಮನೆಯ ಖರ್ಚನ್ನು ನಿಭಾಯಿಸಲು ಅವನ ಹೆಣ್ಣುಮಕ್ಕಳು ಹೊಲಿಗೆ ಅಂಗಡಿ ಇಟ್ಟುಕೊಂಡು ಅಲ್ಲಿ ಬಗೆಬಗೆಯ ಹೂಗುಚ್ಛಗಳನ್ನೂ ಸಿಹಿತಿಂಡಿಗಳನ್ನೂ ತಯಾರಿಸುತ್ತಿದ್ದರು. ಅಲ್ಲದೆ ಆದೇಶದ ಮೇರೆಗೆ ಪ್ರೇಮಪತ್ರಗಳನ್ನೂ ಬರೆದುಕೊಡುತ್ತಿದ್ದರು. ಕಷ್ಟಜೀವಿಗಳೂ ಚೆಲುವೆಯರೂ ಆಗಿದ್ದರೂ ಕೂಡಾ, ಮತ್ತು ಹೊಸ ಹೊಸ ರೀತಿಯ ನೃತ್ಯ ಭಂಗಿಗಳಲ್ಲಿ ಕುಶಲರೂ ಆಗಿದ್ದರು. ಪಾರ್ಟಿಗೆ ಆಹ್ವಾನಿತರಾಗಲಿಲ್ಲ.

ಉರ್ಸುಲಾ ಮತ್ತು ಹುಡುಗಿಯರು ಪೀಠೋಪಕರಣಗಳನ್ನೆಲ್ಲ ಮತ್ತು ಪಾಲಿಷ್ ಆದ ಬೆಳ್ಳಿ ವಸ್ತುಗಳನ್ನೆಲ್ಲ ಹೊರತೆಗೆದು ಮೇಸ್ತ್ರಿಗಳು ಖಾಲಿಯಾಗಿ ಇರಿಸಿದ್ದ ಗೋಡೆಗಳ ಮೇಲೆ ಗುಲಾಬಿ ತುಂಬಿ ದೋಣಿಯಲ್ಲಿ ಹುಡುಗಿಯರು ಕುಳಿತಿದ್ದ ಚಿತ್ರವನ್ನು ತೂಗುಹಾಕಿದ ಕೂಡಲೇ ಬೋಳು ಗೋಡೆಗಳಿಗೆ ಜೀವಬಂದಂತಾಯಿತು. ಜೋಸ್ ಆರ್ಕಾಡಿಯೋಗೆ ದೇವರು ಅಸ್ತಿತ್ವದಲ್ಲಿ ಇಲ್ಲ ಎಂದು ಮನವರಿಕೆಯಾಗಿದ್ದರಿಂದ ದೇವರ ಬೆನ್ನುಹತ್ತಿ ಹೋಗುವುದು ನಿಲ್ಲಿಸಿದ್ದ. ಪಿಯಾನೋವನ್ನು ಬೇರೆಡೆಗೆ ತೆಗೆದುಕೊಂಡು ಹೋಗಿ ಸಂಮೋಹಕ ಸಂಗೀತದ ರಹಸ್ಯವನ್ನು ಪತ್ತೆಹಚ್ಚುವುದರಲ್ಲಿ ನಿರತನಾದ. ಪಾರ್ಟಿಗಳು ಎರಡು ದಿನಗಳು ಇರುವ ಪಿಯಾನೋದ ಕೀಗಳು ಮತ್ತು ಇತರೆ ಭಾಗಗಳನ್ನೆಲ್ಲ ಬಿಡಿಬಿಡಿಯಾಗಿ ಬಿಡಿಸಿ, ಜೋಡಿಸಿ, ಬಿಡಿಸಿ ಏನೇನೋ ಕಸರತ್ತು ಮಾಡಿ, ಹಾಗೂ ಹೀಗೂ ಅವುಗಳನ್ನು ಸರಿಯಾಗಿ ಜೋಡಿಸುವಲ್ಲಿ ಯಶಸ್ವಿಯಾದ. ಇಷ್ಟೊಂದು ಅಚ್ಚರಿಗಳು ಅದ್ಭುತಗಳು ಈ ಮೊದಲು ಎಂದೂ ಇರಲಿಲ್ಲ. ಆದರೆ ದೀಪಗಳನ್ನು ಮಾತ್ರ ನಿಗದಿತ ದಿನ, ನಿಗದಿತ ಸಮಯದಲ್ಲಿ ಹಚ್ಚಲಾಯಿತು. ಮನೆಯ ಉದ್ಘಾಟನೆಯಂತೂ ಆಯಿತು. ಇನ್ನೂ ತೇವ ಮತ್ತು ಸುಣ್ಣಬಣ್ಣದ ವಾಸನೆ ಇತ್ತು. ಊರಿನ ಸ್ಥಾಪಕರ ಮಕ್ಕಳು ಮೊಮ್ಮಕ್ಕಳು ಎಲ್ಲರೂ ಕಮಾನು, ಜರ್ರಿ ಗಿಡಗಳು, ಬೆಗೋನಿಯಾಗಳು, ಪ್ರಶಾಂತವಾಗಿದ್ದ ಕೊಠಡಿಗಳು, ಗುಲಾಬಿಗಳ ವಾಸನೆ ಭರಿತಕ್ಕೆ ತೋಟ(ಉದ್ಯಾನ)ಗಳನ್ನು ನೋಡಿದರು. ಎಲ್ಲರೂ ನಡುಮನೆಯಲ್ಲಿ ಸೇರಿ, ಬಿಳಿವಸ್ತ್ರದಿಂದ ಮುಚ್ಚಲ್ಪಟ್ಟಿದ್ದ ಹೊಸ ಆವಿಷ್ಕಾರದೆಡೆಗೆ ಮುಖ ಮಾಡಿ ಕುಳಿತಿದ್ದರು. ಯಾರು ಈಗಾಗಲೇ ಪಿಯಾನೋ ಬಗ್ಗೆ, ಬೇರೆ ಬೇರೆ ಕಡೆಗಳಲ್ಲಿ ಜನಪ್ರಿಯವಾಗಿದ್ದುದರಿಂದ, ಇಲ್ಲಿ ಅದನ್ನು ನೋಡಬಂದಿದ್ದರೋ ಅವರೆಲ್ಲ ನಿರಾಸೆಗೊಂಡರು. ಅವರಿಗಿಂತ ಹೆಚ್ಚಾಗಿ ನಿರಾಸೆಗೊಂಡವಳೆಂದರೆ ಉರ್ಸುಲಾ. ಪಿಯಾನೋಕ್ಕೆ ಮೊದಲ ಸುರಳಿಯನ್ನು ಅಳವಡಿಸಿ ಅಮರಾಂತಾ ರೆಬೆಕಾ ಅದರ ಸಂಗೀತಕ್ಕೆ ನರ್ತಿಸಬೇಕೆಂದು ನಿರೀಕ್ಷಿಸಿದ್ದಳು. ಅವರಿಬ್ಬರೂ ನರ್ತಿಸಲು ಅಣಿಯಾದರು. ಆದರೆ ಪಿಯಾನೋ ಕೆಲಸ ಮಾಡಲಿಲ್ಲ. ಮೆಲ್‌ಕಿಯಾಡ್ಸ್ ಈಗಾಗಲೇ ದೃಷ್ಟಿಯನ್ನು

ಕಳೆದುಕೊಂಡವನಾಗಿದ್ದರೂ ತನ್ನ ಜರ್ಝರಿತ ದೇಹವನ್ನೂ ಲೆಕ್ಕಿಸದೆ, ಅನುಭವದಿಂದ ಗಳಿಸಿದ ಸಮಯ ಪ್ರಜ್ಞೆಯಿಂದ, ಅದನ್ನು ಸರಿಯಾಗಿ ಹೊಂದಿಸಿದ. ಕಡೆಯಲ್ಲಿ ಜೋಸ್ ಆರ್ಕಾಡಿಯೋ ಬ್ಯುಂಡಿಯಾ ತಪ್ಪಿನಿಂದಾಗಿ, ಆ ಯಂತ್ರದ ಭಾಗದಲ್ಲಿ ಯಾವುದನ್ನೋ ಸರಿಯಾಗಿ ಇರಿಸಿರಲಿಲ್ಲ. ಅದನ್ನು ಸರಿಮಾಡಿದ ಮೇಲೆ ಸಂಗೀತ ಹೊಮ್ಮಿತು. ಒಮ್ಮೆಲೇ ಚಿಮ್ಮಿದ ಸಂಗೀತ ಕ್ರಮೇಣ ನಿಧಾನವಾಗಿ ಸ್ವರಗಳಿಗೆ ಹೊಂದಿಕೆಯಾಗುವಂತೆ ಮುಂದೆ ಸಾಗಿತು. ಅದು ಕ್ರಮದಲ್ಲಿ ಜೋಡಣೆಗೊಳ್ಳದ ತಂತಿಗಳ ನಾದವಾಗಿತ್ತು. ಆದರೆ ಸಮುದ್ರವನ್ನು ಹುಡುಕುತ್ತ ಪರ್ವತಶ್ರೇಣಿಗಳನ್ನು ಹತ್ತಿಳಿದ ಇಪ್ಪತ್ತೊಂದು ಮಂದಿಯ ಸಂತತಿಯವರು ಇದರ ಬಗ್ಗೆ ತಲೆಕೆಡಿಸಿಕೊಳ್ಳಲಿಲ್ಲ. ನಾದಮಿಳಿತದೊಂದಿಗೆ ನಡೆದ ನರ್ತನ ಬೆಳಗಿನ ತನಕ ಸಾಗಿತು.

ಪೀಟ್ರೋ ಕ್ರೆಸ್ಪಿ ಪಿಯಾನೋವನ್ನು ಸರಿಪಡಿಸಲೆಂದು ಬಂದ. ರೆಬೆಕಾ ಅಮರಾಂತ, ತಂತಿಗಳನ್ನು ಸರಿಯಾಗಿ ಹೊಂದಿಸುವಲ್ಲಿ ಅವನಿಗೆ ನಗುನಗುತ್ತಲೇ, ಸಹಾಯ ಮಾಡುತ್ತಿದ್ದರು. ಅವರ ಆ ನಡವಳಿಕೆ ಎಷ್ಟು ಪರಿಶುದ್ಧ ಮತ್ತು ಹಾಯೆನಿಸುವಂತೆ ಇದ್ದಿತೆಂದರೆ, ಉರ್ಸುಲಾಗೆ ಅವರ ಮೇಲೆ ಕಣ್ಣಿಡುವ ಅಗತ್ಯ ತೋರಲಿಲ್ಲ. ಆತ ಹೊರಡುವ ಹಿಂದಿನ ದಿನ, ಬೀಳ್ಕೊಡುಗೆ ಸಮಾರಂಭವನ್ನು ನರ್ತನದೊಂದಿಗೆ ಏರ್ಪಡಿಸಲಾಯಿತು. ಸರಿಪಡಿಸಿದ ಪಿಯಾನೋ ಹಿನ್ನೆಲೆಗೆ ರೆಬೆಕಾ ಅತ್ಯಾಧುನಿಕ ನರ್ತನವನ್ನು ತುಂಬಾ ಚೆನ್ನಾಗಿ ಮಾಡಿದಳು. ಆರ್ಕಾಡಿಯೋ ಮತ್ತು ಅಮರಾಂತರದು ಸರಿಜೋಡಿಯಾಗಿತ್ತು. ಆಕರ್ಷಕವಾಗಿಯೂ ಕೌಶಲ್ಯಪೂರ್ವಕವೂ ಆಗಿತ್ತು. ಅವರ ನರ್ತನ. ಈ ಮಧ್ಯೆ, ಪಿಲಾರ್ ತರ್ನಿರಾ, ವೀಕ್ಷಕರ ಜೊತೆಗಿದ್ದ ಒಬ್ಬ ಹೆಂಗಸಿನ ಜೊತೆ ಜಗಳ ಮಾಡುತ್ತಾ ಕೂದಲೆಳೆಯುತ್ತಾ ಕೂಗಾಡುತ್ತಿದ್ದುದರಿಂದ ಅಡಚಣೆಯುಂಟಾಯಿತು. ನೋಡುತ್ತಿದ್ದವರ ಗುಂಪಿನಲ್ಲಿದ್ದ ಹೆಂಗಸೊಬ್ಬಳು ಆರ್ಕಾಡಿಯೋನ ಹಿಂಭಾಗ ಹೆಂಗಸಿನಂತಿದೆ ಎಂದದ್ದಕ್ಕೆ ಆಕ್ರೋಶಗೊಂಡು ಜಗಳ ತೆಗೆದಿದ್ದಳು. ಮಧ್ಯರಾತ್ರಿಯ ವೇಳೆಗೆ ಪೀಟ್ರೋ ಕ್ರಿಸ್ಪಿ ಹೃದಯತುಂಬಿದ ಪುಟ್ಟ ಭಾಷಣವೊಂದನ್ನು ಮಾಡಿದ ಮತ್ತು ಆದಷ್ಟು ಬೇಗನೆ ಮತ್ತೆ ಬರುವುದಾಗಿ ಹೇಳಿದ. ರೆಬೆಕಾ ಬಾಗಿಲವರೆಗೆ ಅವನನ್ನು ಹಿಂಬಾಲಿಸಿದಳು. ಕೋಣೆ ಒಳಗೆ ಸೇರಿಕೊಂಡು, ಕತ್ತಲಲ್ಲಿ ಯಾರಿಗೂ ತಿಳಿಯದಂತೆ ಬಿಕ್ಕಿಬಿಕ್ಕಿ ಅತ್ತಳು. ಈ ಅಳು ಬೇಗ ನಿಲ್ಲಲಿಲ್ಲ. ಬಹಳ ದಿನಗಳವರೆಗೆ ಮುಂದುವರೆಯಿತು. ಅಮರಾಂತಳಿಗೂ ಇದಕ್ಕೆ ಕಾರಣ ಏನೆಂದು ತಿಳಿಯಲು ಸಾಧ್ಯವಾಗಲಿಲ್ಲ. ಅವಳ ನಿರ್ಲಿಪ್ತತೆ ಅಸಹಜವಾಗೇನೂ ಕಾಣಿಸಲಿಲ್ಲ. ಅವಳದು ವಿಶಾಲವಾದ ಆತ್ಮೀಯವಾದ ಮನಸ್ಸು ಆಗಿದ್ದರೂ ಕೂಡ, ಅವಳಿಗೆ ತನ್ನದೆ ಆದ ವಿಶಿಷ್ಟ ವ್ಯಕ್ತಿತ್ವವಿತ್ತು. ಅಂತರಂಗದ ನಿಗೂಢತೆಯನ್ನು ಬಿಟ್ಟುಕೊಡದ ಗಟ್ಟಿತನವಿತ್ತು. ಅದ್ಭುತ ಹರಯದ ದೃಢಮನಸ್ಸಿನ ಯುವತಿಯಾಗಿದ್ದರೂ, ಮನೆಗೆ ಬರುವಾಗ ತಂದಿದ್ದ ತನ್ನ ಪುಟ್ಟ ತೂಗಾಡುವ ಮರದ ಕುರ್ಚಿಯನ್ನೇ ಬೇಕೆನ್ನುತ್ತಿದ್ದಳು. ಕುರ್ಚಿಯ ಕೈಗಳನ್ನು ಎಷ್ಟೋ ಸಲ ಮತ್ತೆ ಮತ್ತೆ ರಿಪೇರಿ ಮಾಡಿಸಲಾಗಿತ್ತು. ಆ ವಯಸ್ಸಿನಲ್ಲೂ ಬೆರಳು ಚೀಪುವ ಅಭ್ಯಾಸ ಹಾಗೇ ಇದೆ ಎಂಬುದು ಯಾರಿಗೂ ಗೊತ್ತಾಗಿರಲಿಲ್ಲ. ಅದಕ್ಕೇ ಅವಳು ಅವಕಾಶ ಸಿಕ್ಕಾಗಲೆಲ್ಲ ಬಚ್ಚಲು ಮನೆಯಲ್ಲಿ ಸೇರಿಕೊಂಡು ಬಿಡುತ್ತಿದ್ದಳು. ಮಲಗುವಾಗ ಗೋಡೆ ಕಡೆಗೆ ಮುಖಮಾಡಿ

ಮಲಗುವುದನ್ನೂ ಅಭ್ಯಾಸ ಮಾಡಿಕೊಂಡಿದ್ದಳು. ಒಂದು ಮಳೆಗಾಲದ ಮಧ್ಯಾಹ್ನ ಬೆಗೋನಿಯಾ ಕಮಾನಿನ ಕೆಳಗೆ ಕೆಲ ಗೆಳತಿಯರ ಗುಂಪಿನೊಂದಿಗೆ ಕಸೂತಿ ಮಾಡುತ್ತಿದ್ದಾಗ, ಎರೆಹುಳುಗಳು ಮಣ್ಣನ್ನು ಮೇಲಕ್ಕೆ ತಳ್ಳುತ್ತಿರುವುದನ್ನು, ಒದ್ದೆಯಾದ ಮಣ್ಣಿನ ಮುದ್ದೆಯನ್ನು ನೋಡುತ್ತಿದ್ದಾಗ, ಕಸೂತಿಯನ್ನೂ ಮರೆತು, ಭಾವಜಗತ್ತಿಗೆ ಇಳಿದು, ಬಾಯಲ್ಲಿ ನೀರೂರಿಸಿಕೊಳ್ಳುತ್ತಿದ್ದಳು. ಮಣ್ಣುತಿನ್ನುವ ಅವಳ ಅಭ್ಯಾಸವನ್ನು ಕಿತ್ತಲೆ ಮತ್ತು ಬೇರೆ ಬೇರೆ ಹಣ್ಣುಗಳ ಮೂಲಕ ತಪ್ಪಿಸಲಾಗಿತ್ತು. ಆದರೆ ಈಗ ಮಣ್ಣುತಿನ್ನುವ ಆಸೆಯನ್ನು ಹತ್ತಿಕ್ಕಲಾಗದ್ದಕ್ಕಾಗಿ ಅಳತೊಡಗಿದಳು, ಮತ್ತೆ ಮಣ್ಣುತಿನ್ನಲು ಆರಂಭಿಸಿದಳು. ಮೊದಲ ಸಲ ಕುತೂಹಲದಿಂದ ಬಾಯಿಗೆ ಇರಿಸಿಕೊಂಡಳು. ಕೆಟ್ಟ ರುಚಿಗಿಂತ ಅಭ್ಯಾಸ ತಪ್ಪಿಸುವ ಮಾರ್ಗ ಮತ್ತೊಂದಿಲ್ಲ ಎಂಬಂತೆ, ಬಾಯಿಗೆ ಇಟ್ಟದ್ದೇ ಅವಳಿಗೆ, ಬಾಯಲ್ಲಿ ಮಣ್ಣು ಸಹಿಸಲಾಗಲಿಲ್ಲ. ಆದರೂ ಅದನ್ನು ಹಾಗೇ ಇರಿಸಿಕೊಂಡಳು. ಹೆಚ್ಚುತ್ತಿರುವ ಕಾತರ, ಸ್ವಲ್ಪ ಸ್ವಲ್ಪವೇ ನಿಧಾನವಾಗಿ ತನ್ನ ಹಳೆಯ ರುಚಿಯನ್ನು, ಖನಿಜಗಳ ಮೂಲ ರುಚಿಯನ್ನು ಹಿಂಪಡೆಯುತ್ತಿದ್ದಳು. ಎಲ್ಲೆಯಿಲ್ಲದ ಸಂತೃಪ್ತಿ ದೊರೆಯಿತು. ಹಿಡಿಹಿಡಿ ಮಣ್ಣನ್ನು ಜೇಬುಗಳಲ್ಲಿ ತುಂಬಿಕೊಂಡು ಯಾರಿಗೂ ಕಾಣದಂತೆ ತಿನ್ನುತ್ತಿದ್ದಳು. ಇದರಲ್ಲಿ ಅವಳಿಗೆ ಸಂತೋಷ ಮತ್ತು ತಿನ್ನಬೇಕೆಂಬ ಹಂಬಲ ಹೆಚ್ಚುತ್ತಿತ್ತು. ತನ್ನ ಗೆಳತಿಯರಿಗೆ ಸೂಜಿ ದಾರಗಳ ಸೂಕ್ಷ್ಮಗಳನ್ನು ಹೇಳಿಕೊಡುತ್ತಾ, ಗಂಡಸರ ಬಗ್ಗೆ ಮಾತಾಡುತ್ತಿದ್ದಳು. ಗೋಡೆ ಮೇಲಿನ ಸುಣ್ಣವನ್ನು ತಿನ್ನುವುದನ್ನು ತಡೆಯಲು ಗಂಡಸರು, ಹೆಂಗಸರಿಗೆ ಯೋಗ್ಯರಲ್ಲ. ಕೈತುಂಬ ಮಣ್ಣನ್ನು ತುಂಬಿಕೊಂಡ ಗಂಡಸು ಕಾಣಿಸುವುದೇ ಅಪರೂಪ. ಅಂಥವನೇನಾದರೂ ಇದ್ದರೆ ಪ್ರಪಂಚದ ಬೇರೆ ಮೂಲೆಯಲ್ಲಿ ಎಲ್ಲೋ ಸುಂದರವಾದ ಚರ್ಮದ ಬೂಟುಗಳನ್ನು ಹಾಕಿಕೊಂಡು ನಡೆಯುವ ನೆಲ. ಅವನು ಅವಳಿಗೆ ಅವನ ರಕ್ತದ ಬಿಸುಪು ಮತ್ತು ಲವಣಗಳ ರುಚಿಯನ್ನು ಇನ್ನೂ ನಾಲಿಗೆಯಲ್ಲಿ ಉಳಿಸಿರುವಂತೆ, ಎದೆಯಲ್ಲಿ ಶಾಂತಿಯ ಕಣಗಳನ್ನು ಬಿಟ್ಟಿರುವಂತೆ ಭಾವಿಸುತ್ತಿದ್ದಳು. ಒಂದು ಮಧ್ಯಾಹ್ನ ಅಂಪಾರೋ ಮಾಸ್ಕೆಂಟ್ ಸುಮ್ಮನೆ ಮನೆಯನ್ನು ನೋಡಲು ಅನುಮತಿ ಕೇಳಿದ. ಅನಿರೀಕ್ಷಿತವಾದ ಅವಳ ಬರವಿನಿಂದ ಮುಜುಗರಗೊಂಡ ಅಮರಾಂತಾ ಮತ್ತು ರೆಬೆಕಾ ಸೌಜನ್ಯಕ್ಕಾಗಿ ಸ್ವಾಗತಿಸಿದರು. ಬಿಗುಮಾನದಿಂದಲೇ ಬದಲಾವಣೆ ಮಾಡಿದ ಮನೆಯನ್ನು ತೋರಿಸಿದರು. ಪಿಯಾನೋ ಸಂಗೀತವನ್ನು ಕೇಳಿಸಿದರು. ಕಿತ್ತಲೆ ರಸವನ್ನು ಮತ್ತು ಬಿಸ್ಕತ್ತುಗಳನ್ನು ಕೊಟ್ಟು ಸತ್ಕರಿಸಿದರು. ಅಂಪಾರೋ ತನ್ನ ವೈಯಕ್ತಿಕ ವರ್ಚಸ್ಸಿನಿಂದ, ಗಾಂಭೀರ್ಯದಿಂದ ಒಳ್ಳೆಯ ನಡವಳಿಕೆಯನ್ನು ತೋರಿದಳು. ಆಕೆಯಿದ್ದಷ್ಟು ಹೊತ್ತಲ್ಲಿಯೇ ಉರ್ಸುಲಾ ಅವಳಿಂದ ಬಹಳ ಪ್ರಭಾವಿತಳಾದಳು. ಎರಡು ಗಂಟೆಗಳ ನಂತರ ಅವರ ಸಂಭಾಷಣೆ ಮುಗಿಯುತ್ತಿದ್ದಂತೆ, ಅಂಪಾರೋ ಅಮರಾಂತಾ ಬೇರೆ ಕಡೆ ಗಮನ ಹರಿಸಿದ್ದನ್ನು ನೋಡಿ ರೆಬೆಕಾ ಕೈಗೆ ಒಂದು ಕಾಗದವನ್ನು ಕೊಟ್ಟಳು. ರೆಬೆಕಾ ಅದರ ಮೇಲೆ ಸೆನೋರಿಟಾ ರೆಬೆಕಾ ಬ್ಯುಂಡಿಯಾ ಎಂದು ಅಚ್ಚುಕಟ್ಟಾದ ಬರವಣಿಗೆಯಲ್ಲಿ ಇದ್ದುದನ್ನು ನೋಡಿದಳು. ಅದೇ ಹಸಿರು ಪೆನ್ನು, ಪಿಯಾನೋ ನುಡಿಸುವುದಕ್ಕೆ ಸೂಚನೆಗಳನ್ನು ಬರೆದುಕೊಟ್ಟ ಅದೇ ಕೈಯಿಂದ, ಮೃದುವಾದ ಶಬ್ದಗಳು ಕಾಣಿಸಿದವು. ಜೋಪಾನವಾಗಿ ಆ ಕಾಗದವನ್ನು ಮಡಿಚಿ ಎದೆಯಬಳಿ ಇಟ್ಟುಕೊಂಡು, ಅಂಪಾರೋ ಕಡೆ, ಮಿತಿಯಿಲ್ಲದ ಕೃತಜ್ಞತೆಯಿಂದ, ಕಡೆಯವರೆಗೂ ಮರೆಯುವುದಿಲ್ಲ ಎಂಬಂತೆ ನೋಡಿದಳು.

ಅಕಸ್ಮಾತ್ತಾಗಿ ಅಂಪಾರೋ ಮತ್ತು ರೆಬೆಕಾ ಬ್ಯುಂಡಿಯಾರ ನಡುವೆ ಏರ್ಪಟ್ಟ ಸ್ನೇಹ ಅರೆಲಿಯಾನೋ ಮನಸ್ಸಿನಲ್ಲಿ ಆಶಾಭಾವನೆಯನ್ನು ಮೂಡಿಸಿತು. ರೆಮಿಡಿಯೋಸ್‌ಳ ನೆನಪಿನಿಂದ ಉಂಟಾಗುತ್ತಿದ್ದ ಹಿಂಸೆ ದೂರವಾಗಿರಲಿಲ್ಲವಾದರೂ ಅವಳನ್ನು ನೋಡುವ ಅವಕಾಶವೇ ಸಿಕ್ಕಿರಲಿಲ್ಲ. ತನ್ನ ಹತ್ತಿರದ ಗೆಳೆಯರಾದ ಮಾಗ್ನಿಫಿಕೊ ವಿಸ್‌ಬಾಲ್ ಮತ್ತು ಜೆರಿಸೆಲ್ಡೊ ಮಾರ್ಕ್ವೇಜ್ ಹೊರಗಡೆ ಸುತ್ತಾಡಲು ಹೋದಾಗ ಕುತೂಹಲದಿಂದ ಹೊಲಿಗೆ ಅಂಗಡಿಯ ಕಡೆ ಕಣ್ಣು ಹಾಯಿಸುತ್ತಿದ್ದನಾದರೂ ಅವಳ ಅಕ್ಕಂದಿರು ಮಾತ್ರವೇ ಕಾಣಿಸುತ್ತಿದ್ದರು. ಮನೆಯಲ್ಲಿ ಅಂಪಾರೋ ಉಪಸ್ಥಿತಿ, ಒಳ್ಳೆಯ ಅವಕಾಶದ ಸೂಚನೆಯಾಗಿ ಕಾಣಿಸಿತು. ಅವಳ ಜೊತೆಗೆ ಅವಳು ಬರಬೇಕು. ಇದನ್ನು ಎಷ್ಟೋ ಸಲ ಹೇಳಿಕೊಂಡ. ಅವನಿಗೆ ಭರವಸೆ ಎಷ್ಟು ಗಟ್ಟಿಯಾಗಿತ್ತೆಂದರೆ ಒಂದು ಮಧ್ಯಾಹ್ನ ತನ್ನ ವರ್ಕ್‌ಶಾಪ್‌ನಲ್ಲಿ ಬೆಳ್ಳಿ ಮೀನನ್ನು ಜೋಡಿಸುತ್ತಿದ್ದಾಗ, ಅವನಿಗೆ ಅವಳಿಂದ ಉತ್ತರ ಸಿಕ್ಕಿತು ಎಂಬುದು ಖಚಿತವಾಯಿತು. ಸ್ವಲ್ಪ ಹೊತ್ತಿನ ನಂತರ ಮಗುವಿನಂತಹ ಧ್ವನಿ ಕೇಳಿಸಿತು. ತಲೆ ಎತ್ತಿ ನೋಡಿದಾಗ ಅವನ ಹೃದಯ ಸ್ತಂಭಿಸಿದಂತಾಯಿತು. ಆ ಹುಡುಗಿ ಬಾಗಿಲ ಬಳಿ, ಪಿಂಕ್ ಉಡುಪು, ಬಿಳಿ ಬೂಟುಗಳನ್ನು ಧರಿಸಿ ನಿಂತಿದ್ದಳು.

"ನೀನಲ್ಲಿಗೆ ಹೋಗಬಾರದು ರೆಮೆಡಿಯೋಸ್ ಅವರು ಅಲ್ಲಿ ಕೆಲಸ ಮಾಡುತ್ತಿದ್ದಾರೆ". ಹಜಾರದಿಂದ ಅಂಪಾರೋ ಮೆಸ್ಕೋಟ್ ಹೇಳಿದಳು.

ಅರೆಲಿಯಾನೊ ಅವಳು ಪ್ರತಿಕ್ರಿಯಿಸುವುದಕ್ಕೆ ಸಮಯಕೊಡದೆ, ಪುಟ್ಟ ಮೀನನ್ನು ಅದರ ಬಾಯೊಳಗಿಂದ ಹೊರ ಬಂದಿದ್ದ ಸರದಿಂದ ಎತ್ತಿಹಿಡಿದು ಹೇಳಿದ – "ಒಳಗೆ ಬಾ"

ರೆಮಿಡಿಯೋಸ್ ಆ ಮೀನಿಗೆ ಸಂಬಂಧಪಟ್ಟಂತೆ ಕೆಲವು ಪ್ರಶ್ನೆಗಳನ್ನು ಕೇಳಿದಳು. ಅರೆಲಿಯಾನೋಗೆ ಆಸ್ತಮಾದ ತೊಂದರೆ ಪ್ರಾರಂಭವಾಗಿದ್ದರಿಂದ, ಉತ್ತರಿಸಲು ಸಾಧ್ಯವಾಗಲಿಲ್ಲ. ಲಿಲಿಯಂತಹ ಚರ್ಮವುಳ್ಳ ಅವಳ ಪಕ್ಕದಲ್ಲಿ ಯಾವಾಗಲೂ ಇರಬೇಕೆಂದು ಅವನಿಗೆ ಅನಿಸಿತು. ಆ ನೀಲಿ ಕಣ್ಣುಗಳಲ್ಲಿ ಪ್ರಶ್ನೆ ಜೊತೆಗೆ 'ಸರ್' ಎಂದು ಕೂಗುತ್ತಿದ್ದ ಆ ದನಿಯಲ್ಲಿ ತಂದೆಗೆ ತೋರುತ್ತಿದ್ದ ಗೌರವ ಭಾವವೇ ಇತ್ತು. ಮೆಲ್‌ಕಿಯಾಡ್ಸ್ ಮೂಲೆಯಲ್ಲಿದ್ದ ಡೆಸ್ಕಿನ ಮೇಲೆ ಏನೇನೋ ಗೀಚುತ್ತಾ ಕುಳಿತಿದ್ದ ಅರೆಲಿಯಾನೋ ಅವನನ್ನು ದ್ವೇಷಿಸುತ್ತಿದ್ದ. ಅವನು ರೆಮಿಡಿಯೋಸ್‌ಗೆ ತಾನು ಬೆಳ್ಳಿಯ ಪುಟ್ಟ ಮೀನನ್ನು, ಕೊಡಬೇಕೆಂದಿದ್ದೇನೆ ಎಂದು ಮಾತ್ರ ಅವನಿಗೆ ಹೇಳಲು ಸಾಧ್ಯವಾಯಿತು. ರೆಮೆಡಿಯೋಸ್ ಎಷ್ಟು ಗಾಭರಿಯಾದಳೆಂದರೆ, ಅದನ್ನು ಕೇಳಿದ್ದೇ ವರ್ಕ್‌ಶಾಪ್‌ನಿಂದ ಎಷ್ಟು ಜೋರಾಗಿ ಸಾಧ್ಯವೋ ಅಷ್ಟು ಜೋರಾಗಿ ಓಡಿಹೋದಳು. ಆ ದಿನ ಮಧ್ಯಾಹ್ನ, ಅರೆಲಿಯಾನೋ, ಅವಳನ್ನು ನೋಡಬೇಕೆಂದು ಎಷ್ಟು ದಿನದಿಂದ ಕಾಯುತ್ತಿದ್ದನೋ, ಅದುಮಿಟ್ಟುಕೊಂಡಿದ್ದ ಸಹನೆಯ ಕಟ್ಟೆಯೊಡೆಯಿತು. ತನ್ನ ಕೆಲಸವನ್ನು ನಿರ್ಲಕ್ಷಿಸಿದ. ಮನಸ್ಸನ್ನು ಕೇಂದ್ರೀಕರಿಸುವುದಕ್ಕಾಗಿ ಬಹಳ ಸಲ ಪ್ರಯತ್ನಿಸುತ್ತಿದ್ದಾಗಲೆಲ್ಲ ಅವಳು ಕಾಣಿಸಿಕೊಳ್ಳಲಿ ಎಂದು ಬಯಸುತ್ತಿದ್ದ. ಆದರೆ ಅದು ಸಾಧ್ಯವಾಗಲಿಲ್ಲ. ಅವಳ ಅಕ್ಕಂದಿರ ಅಂಗಡಿಯಲ್ಲಿ ಅವಳ ಮನೆಯ ಕಿಟಕಿಗಳ ನೆರಳಿನಲ್ಲಿ ಅವಳ ತಂದೆಯ ಕಛೇರಿಯಲ್ಲಿ ಅವಳಿಗಾಗಿ ಹುಡುಕಾಡಿದ. ಆದರೆ ಅವನಲ್ಲಿ ತುಂಬಿಕೊಂಡಿದ್ದ ಅವಳ ಕಲ್ಪನೆಯ ರೂಪವನ್ನು ತನ್ನ

ಏಕಾಂತದಲ್ಲಿ ಮಾತ್ರ ಕಾಣಲು ಸಾಧ್ಯವಿತ್ತು. ರೆಬೆಕಾಳ ಜೊತೆ ಪಿಯಾನೋ ಸಂಗೀತವನ್ನು ಕೇಳುತ್ತ ಗಂಟೆಗಟ್ಟಲೆ ಸಮಯ ಕಳೆಯುತ್ತಿದ್ದ. ಅವಳು ಕೇಳುತ್ತಿದ್ದುದು, ಪೀಟ್ರೋ ಕ್ರೆಸ್ಪಿ ಅದರೊಂದಿಗೆ ಹೇಗೆ ನರ್ತಿಸಬೇಕೆಂಬುದನ್ನು ಕಲಿಸಿದ್ದರಿಂದ. ಅರೆಲಿಯಾನೋ ಕೇಳುತ್ತಿದ್ದುದ್ದು ಯಾಕೆಂದರೆ, ಸಂಗೀತವೂ ಸೇರಿದಂತೆ ಪ್ರತಿಯೊಂದು ವಸ್ತುವೂ ಅವನಿಗೆ ರೆಮೆಡಿಯೋಸ್‌ಳ ನೆನಪನ್ನು ತರುತ್ತಿತ್ತು.

ಮನೆ ಪ್ರೀತಿಯಿಂದ ತುಂಬಿತ್ತು. ಅರೆಲಿಯಾನೋ ಅದನ್ನು ಕೊನೆಮೊದಲಿಲ್ಲದ ಕವಿತೆಯ ಮೂಲಕ ಅಭಿವ್ಯಕ್ತಿಸಿದ. ಅವನು ಅದನ್ನು ಮೆಲ್‌ಕಿಯಾಡ್ಸ್ ಕೊಟ್ಟಿದ್ದ ಚರ್ಮದ ಹಾಳೆ ಮೇಲೆ, ಬಚ್ಚಲು ಮನೆಯ ಗೋಡೆಗಳ ಮೇಲೆ, ತನ್ನ ತೋಳುಗಳ ಮೇಲೆ – ಈ ಎಲ್ಲವುಗಳ ಮೇಲೆ ರೆಮೆಡಿಯೋಸ್‌ಳನ್ನು ಕುರಿತು ಬರೆದ ಮಧ್ಯಾಹ್ನದ ಎರಡು ಗಂಟೆಯ ನಿದ್ದೆ ಮಂಪರಿನಲ್ಲಿ ರೆಮೆಡಿಯೋಸ್, ಗುಲಾಬಿಯ ಮೃದು ಉಸಿರಾಟದಲ್ಲಿ ರೆಮೆಡಿಯೋಸ್ ಚಿಕ್ಕಪುಟ್ಟ ಹುಳುಗಳ ರಹಸ್ಯಗಳು ಬೆಳಗಿನ ಹೊಗೆಯಾಡುವ ಬ್ರೆಡ್ಡಿನಲ್ಲಿ, ಎಲ್ಲೆಲ್ಲಿಯೂ ರೆಮೆಡಿಯೋಸ್, ಎಂದೆಂದಿಗೂ ರೆಮೆಡಿಯೋಸ್, ರೆಬೆಕಾ ಮಧ್ಯಾಹ್ನ ನಾಲ್ಕು ಗಂಟೆಯಲ್ಲಿ ಕಿಟಕಿಯ ಬದಿಯಲ್ಲಿ ಕಸೂತಿ ಮಾಡುತ್ತಾ ತನ್ನ ಪ್ರಿಯತಮನಿಗಾಗಿ ಕಾಯುತ್ತಿದ್ದಳು. ಅಂಚೆ ತರುವ ಹೇಸರಗತ್ತೆಗಳು ಎರಡು ವಾರಕ್ಕೊಮ್ಮೆ ಬರುವುದೆಂದು ತಿಳಿದಿದ್ದರೂ ಎಂದಾದರೂ ಒಂದು ದಿನ ಅಪ್ಪಿತಪ್ಪಿ ಬಂದು ಬಿಟ್ಟಾನೆಂದು ಯಾವಾಗಲೂ ಅವನಿಗಾಗಿ ಎದುರು ನೋಡುತ್ತಿದ್ದಳು. ಆದರೆ ಅವಳ ನಿರೀಕ್ಷೆಗೆ ವಿರುದ್ಧವಾಗಿ, ಅಂಚೆ ಬರಬೇಕಾಗಿದ್ದ ದಿನ ಬರಲೇ ಇಲ್ಲ. ಹತಾಶೆಯ ಹುಚ್ಚಿನಲ್ಲಿ, ಮಧ್ಯರಾತ್ರಿಯಲ್ಲಿ ಎದ್ದು ಹೋಗಿ ತೋಟದಲ್ಲಿನ ಮಣ್ಣನ್ನು ಆತ್ಮಹತ್ಯೆಯ ಉದ್ದೇಶದಿಂದ ಕೈತುಂಬ ತೆಗೆದುಕೊಂಡು ತಿಂದಳು. ನೋವು ಮತ್ತು ಸಿಟ್ಟಿನಿಂದ ಎಳೆಯ ಎರೆಹುಳಗಳನ್ನು ತಿಂದಳು. ಬಸವನಹುಳುವಿನ ಚಿಪ್ಪುಗಳನ್ನು ಕಡಿದಳು. ಬೆಳಗಿನವರೆಗೆ ವಾಂತಿ ಮಾಡುತ್ತಲೇ ಇದ್ದಳು. ತೀವ್ರವಾದ ಜ್ವರದಿಂದ ಪ್ರಜ್ಞೆ ತಪ್ಪಿದಳು. ಉನ್ಮಾದ ಸ್ಥಿತಿ ತಲುಪಿದಳು. ಅಚ್ಚರಿಗೊಂಡ ಉರ್ಸುಲಾ ಅವಳ ಪೆಟ್ಟಿಗೆಯ ಬೀಗವನ್ನು ತೆಗೆದು ಬಟ್ಟೆಗಳ ಅಡಿಯಲ್ಲಿ ಪಿಂಕ್ ರಿಬ್ಬನ್‌ನಿಂದ ಕಟ್ಟಿದ ಸುವಾಸನೆಯುಳ್ಳ 16 ಪ್ರೇಮ ಪತ್ರಗಳ ಕಟ್ಟನ್ನು ನೋಡಿದಳು. ಒಣಗಿದ ಎಲೆಗಳನ್ನು ಹೂವಿನ ದಳಗಳನ್ನು ಪುಸ್ತಕಗಳಲ್ಲಿ ಇರಿಸಿದ್ದಳು. ಒಣಗಿಸಿದ ಚಿಟ್ಟೆಗಳು ಮುಟ್ಟಿದರೆ ಪುಡಿ ಪುಡಿಯಾಗುವ ಸ್ಥಿತಿಯಲ್ಲಿದ್ದವು.

ಏಕಾಂಗಿತನದ ಭಯಂಕರತೆಯನ್ನು ಅರೆಲಿಯಾನೋ ಮಾತ್ರವೇ ಅರ್ಥಮಾಡಿಕೊಂಡಿದ್ದ. ಆ ದಿನ ಮಧ್ಯಾಹ್ನ ಉರ್ಸುಲಾ ರೆಬೆಕಾಳನ್ನು ಅವಳ ಉನ್ಮಾದ ಸ್ಥಿತಿಯಿಂದ ಹೊರತರಲು ಪ್ರಯತ್ನಿಸುತ್ತಿದ್ದಾಗ ಅವನು ಮಾಗ್ನಿಫಿಕೋ ವಿಸ್ಬಾಲ್ ಮತ್ತು ಜೆರಿನೆಲ್ಡೊ ಮಾರ್ಕ್ವೆಜ್ ಜೊತೆ ಕತಾರಿನೋ ಸ್ಟೋರ್‌ಗೆ ಹೋದ. ಅದನ್ನು ಮರದಿಂದ ಮಾಡಿದ ಕೊಠಡಿಗಳ ಗ್ಯಾಲರಿಯೊಂದಿಗೆ ವಿಸ್ತರಿಸಲಾಗಿತ್ತು. ಅವುಗಳಲ್ಲಿ ಒಣಗಿದ ಹೂಗಳ ವಾಸನೆ ಹೊತ್ತ ಒಂಟಿ ಹೆಂಗಸರು ವಾಸಿಸುತ್ತಿದ್ದರು. ಒಂದು ಗುಂಪು ಅಕಾರ್ಡಿಯೋನ್ ಮತ್ತು ಡ್ರಮ್‌ಗಳೊಂದಿಗೆ, ಹಲವಾರು ವರ್ಷಗಳಿಂದ ಮಕೊಂಡೋನಿಂದ ಮರೆಯಾಗಿದ್ದ ಫ್ರಾನ್ಸಿಸ್ಕೋನ ಹಾಡುಗಳನ್ನು ನುಡಿಸುತ್ತಿದ್ದರು. ಹುಳಿಬಂದಿದ್ದ ಕಬ್ಬಿನ ಹಾಲನ್ನು ಮೂರೂ

ಮಂದಿ ಗೆಳೆಯರು ಕುಡಿದರು. ಮ್ಯಾಗ್ನಿಫಿಕೊ ಮತ್ತು ಜೆರಿನೆಲ್ಡೊ ಅರೆಲಿಯಾನೋ ಪ್ರಾಯದವರೇ ಆಗಿದ್ದರು. ಲೋಕ ವ್ಯವಹಾರ ಬಲ್ಲವರಾಗಿದ್ದು, ಕುಡಿಯುವುದರಲ್ಲೂ ಒಂದು ಕ್ರಮವನ್ನು ಅನುಸರಿಸಿದರು. ಹೆಂಗಸರನ್ನು ತೊಡೆ ಮೇಲೆ ಕೂರಿಸಿಕೊಂಡು ಕುಡಿಯುತ್ತಿದ್ದರು. ಸ್ವಲ್ಪ ವಯಸ್ಸಾದ ಬಾಡಿದ ಬಂಗಾರದ ಹಲ್ಲು ಕಟ್ಟಿಸಿಕೊಂಡಿದ್ದ ಹೆಣ್ಣೊಬ್ಬಳು ಅರೆಲಿಯಾನೋಗೆ ಮುತ್ತಿಟ್ಟಳು. ಒಮ್ಮೆಲೇ ಅವನು ಕಂಪಿಸಿದ, ಅವಳನ್ನು ತಿರಸ್ಕರಿಸಿದ. ಹೆಚ್ಚು ಕುಡಿದಷ್ಟೂ ರೆಮೆಡಿಯೋಳ ನೆನಪು ಕಾಡುತ್ತದೆ ಎಂಬುದನ್ನು ಕಂಡುಕೊಂಡ. ತನ್ನ ನೋವಿನ ನೆನಪುಗಳನ್ನು ಚೆನ್ನಾಗಿ ಸಹಿಸಿಕೊಳ್ಳಬಲ್ಲವನಾಗಿದ್ದ. ತೇಲಿ ಹೋಗುತ್ತಿರುವ ಅನುಭವ ಯಾವಾಗ ಶುರುವಾಯಿತೆಂಬುದು ಅವನಿಗೆ ತಿಳಿಯಲಿಲ್ಲ – ಅವನ ಗೆಳೆಯರು ಆ ಹೆಂಗಸರು ಗೆಲುವಿನಿಂದ ತೇಲಿಹೋಗುತ್ತಿದ್ದುದನ್ನು ಗಮನಿಸಿದ. ಮಾತಿಲ್ಲದೆ ಅರ್ಥವಾಗದ ಸನ್ನೆಗಳಿಂದ ವ್ಯವಹರಿಸುತ್ತಿದ್ದರು. ಆ ಸನ್ನೆಗಳು ಅವರ ಭಾವಾಭಿವ್ಯಕ್ತಿಗೆ ತಾಳೆಯಾಗುತ್ತಿರಲಿಲ್ಲ. ಕತಾರಿನೋ ಅವನ ಹೆಗಲ ಮೇಲೆ ಕೈಹಾಕಿ, "ಹನ್ನೊಂದಾಗುತ್ತಿದೆ" ಎಂದ. ಅರೆಲಿಯಾನೋ ತಿರುಗಿ ನೋಡಿದ. ಕಿವಿಯ ಹಿಂದೆ ಫೆಲ್ಟ್ ಫ್ಲವರ್ ಧರಿಸಿದ್ದ ವಕ್ರಮುಖದ ವ್ಯಕ್ತಿಯನ್ನು ಕಂಡ. ಮರೆವಿನ ಕಾಯಿಲೆಯ ದಿನಗಳಲ್ಲಿ ಆಗುತ್ತಿದ್ದಂತೆ, ನೆನಪಿನ ಶಕ್ತಿಯನ್ನು ಕಳೆದುಕೊಂಡ. ಒಂದು ದಿನ ಬೆಳಗಿನ ಜಾವ, ತನಗೆ ತೀರಾ ಅಪರಿಚಿತವಿದ್ದ ಕೋಣೆಯಲ್ಲಿ, ಪಿಲಾರ್ ತರ್ಸಿರಾ ತುಂಡುಲಂಗ, ಬರಿಗಾಲು, ಬಿಟ್ಟ ಕೂದಲಿನಲ್ಲಿ, ತನ್ನ ಮುಖಕ್ಕೆ ದೀಪವಿಟ್ಟು ನಿಂತಿದ್ದನ್ನು ನಂಬಲಾಗದ ಅಚ್ಚರಿಯೊಂದಿಗಿದ್ದಾಗ, ಅವನ ನೆನಪು ಮರುಕಳಿಸಿ "ಅರೆಲಿಯಾನೋ"

ಅರೆಲಿಯಾನೋ ತನ್ನ ಕಾಲಿನತ್ತ ನೋಡಿದ. ತಲೆ ಎತ್ತಿದ. ಅಲ್ಲಿಗೆ ಹೇಗೆ ಬಂದ ಎಂಬುದನ್ನು ತಿಳಿಯದಾಗಿದ್ದ. ಆದರೆ ಅವನ ಗುರಿ ಸ್ಪಷ್ಟವಾಗಿತ್ತು. ತನ್ನ ಎಳೆತನದಿಂದ ಎದೆಯಲ್ಲಿ ಅದನ್ನು ಅಡಗಿಸಿಕೊಂಡಿದ್ದ.

"ನಿನ್ನ ಜೊತೆ ಮಲಗಲು ಬಂದಿದ್ದೇನೆ" ಎಂದ. ಅವನ ಬಟ್ಟೆಗಳೇ ಮಣ್ಣು ಮತ್ತು ವಾಂತಿಯಿಂದ ಕೊಳೆಯಾಗಿತ್ತು. ತನ್ನಿಬ್ಬರು ತಂಗಿಯರ ಜೊತೆ ವಾಸಿಸುತ್ತಿದ್ದ ಪಿಲಾರ್ ತರ್ಸಿರಾ ಅವನನ್ನು ಏನೋಂದೂ ಪ್ರಶ್ನಿಸಲಿಲ್ಲ. ಅವನನ್ನು ಹಾಸಿಗೆಗೆ ಕರೆದುಕೊಂಡಳು. ಒದ್ದೆ ಬಟ್ಟೆಯಿಂದ ಮುಖವನ್ನು ಒರೆಸಿದಳು, ಬಟ್ಟೆಗಳನ್ನೆಲ್ಲ ಕಳಚಿದಳು. ಸೊಳ್ಳೆ ಪರದೆಯನ್ನು, ತನ್ನ ಮಕ್ಕಳು ಎದ್ದುಬಿಟ್ಟರೆ, ನೋಡಬಾರದೆಂದು ಕೆಳಕ್ಕೆ ಇಳಿಸಿದಳು. ಕಾರ್ಡುಗಳ ಅನಿಶ್ಚಿತತೆಯಿಂದ ಗೊಂದಲಗೊಂಡ ಅವಳಿಗೆ ಉಳಿದುಕೊಳ್ಳುವ ಗಂಡಸಿಗೆ, ಬಿಟ್ಟು ಹೊರಟ ಗಂಡಸರಿಗೆ ಮನೆ ದಾರಿ ತಿಳಿಯದ ಅನೇಕ ಗಂಡಸರಿಗೆ ಕಾದು ಕಾದು ಸಾಕಾಗಿ ಹೋಗಿದ್ದಳು. ಈ ಕಾಯುವಿಕೆಯಲ್ಲಿಯೇ ಚರ್ಮ ಸುಕ್ಕಾಯಿತು. ಮೊಲೆಗಳು ಜೋತುಬಿದ್ದವು, ಎದೆಯ ಕಾವು ತಣ್ಣಾರಿತ್ತು. ಕತ್ತಲೆಯಲ್ಲಿ ಅರೆಲಿಯಾನೋನನ್ನು ಸ್ಪರ್ಶಿಸಿದಳು. ಅವನ ಹೊಟ್ಟೆ ಮೇಲೆ ಕೈ ಹಾಕಿದಳು. ಮಾತೃ ಮಾರ್ದವತೆಯಿಂದ ಕತ್ತಿನ ಬಳಿ ಮುತ್ತಿಟ್ಟಳು. "ಬಡಪಾಯಿ ಮಗು" ಎಂದು ತನ್ನಲ್ಲೇ ಹೇಳಿಕೊಂಡಳು. ಅರೆಲಿಯಾನೋ ಕಂಪಿಸಿದ. ಶಾಂತ ಮನಸ್ಸಿನಿಂದ ಮಡುಗಟ್ಟಿದ್ದ ದುಃಖದಿಂದ ಹೊರಗೆ ಬಂದ. ಅವನಿಗೆ ಗರಿಗರಿಯಾಗಿ ಇಸ್ತ್ರಿಮಾಡಿದ ಬಟ್ಟೆ ಹಾಕಿದ, ಪ್ರಾಣಿಯ

ಹಸಿವಾಸನೆಯುಳ್ಳ ರೆಮೆಡಿಯೋಸ್, ಈಗ ಅವನಿಗೆ ವಿಶಾಲ ಜೌಗುಪ್ರದೇಶದಂತೆ ಕಾಣಿಸಿದಳು. ಪ್ರಜ್ಞಾವಸ್ಥೆಗೆ ಬಂದಾಗ ಅವನು ಅಳುತ್ತಿದ್ದ. ಮೊದಲಿಗೆ ಅಪ್ರಯತ್ನಪೂರ್ವಕವಾಗಿ ಬಿಕ್ಕಿ ಬಿಕ್ಕಿ ಅಳುತ್ತಿದ್ದ. ನಂತರ ತನ್ನೊಳಗೆ ಅದುಮಿಟ್ಟುಕೊಂಡಿದ್ದ ದುಃಖವನ್ನೆಲ್ಲಾ ಮಹಾಪೂರದಂತೆ ಹೊರಚೆಲ್ಲಿದ. ಪಿಲಾರ್ ತರ್ಸಿರಾ ಅವನ ಕೂದಲಲ್ಲಿ ಬೆರಳಾಡಿಸಿದಳು. ಅವನು ಸಮಾಧಾನವಾಗುವವರೆಗೆ ಕಾದಳು. "ಯಾರವಳು" ಎಂದು ಕೇಳಿದಳು. ಅರೆಲಿಯಾನೋ ತಿಳಿಸಿದ. ಅವಳು ಜೋರಾಗಿ ನಕ್ಕಳು. ಬೇರೆ ಸಮಯದಲ್ಲಾಗಿದ್ದರೆ, ಪಾರಿವಾಳಗಳು ಹೆದರಿ ಓಡಿ ಹೋಗುತ್ತಿದ್ದವು. ಆದರೆ ಈಗ ಮಕ್ಕಳನ್ನೂ ಎಬ್ಬಿಸಲಿಲ್ಲ. "ಮೊದಲು ಅವಳನ್ನು ಎಬ್ಬಿಸಬೇಕು" ಅಣಕದಿಂದ ಹೇಳಿದಳು. ಆದರೆ ಅವಳ ಅಣಕದ ಮಾತಿನಲ್ಲಿ ಬಹಳಷ್ಟು ಅರ್ಥತುಂಬಿರುವುದನ್ನು ಅರೆಲಿಯಾನೊ ಗುರುತಿಸಿದ. ಅವನಿಗೆ ಅಲ್ಲಿಂದ ಹೊರಗೆ ಹೊರಟಾಗ ಅವನ ಪುರುಷತ್ವದ ಬಗೆಗಿನ ಅನುಮಾನಗಳೆಲ್ಲ ದೂರವಾಗಿತ್ತಲ್ಲದೆ, ತಿಂಗಳುಗಳಿಂದ ಒತ್ತುತ್ತಿದ್ದ ಎದೆಯ ಭಾರವನ್ನೆಲ್ಲ ಕಳೆದುಕೊಂಡಿದ್ದ. ಪಿಲಾರ್ ತರ್ಸಿರಾ ಅವನಿಗೆ ಮಾತು ಕೊಟ್ಟಳು.

"ನಾನು ಆ ಹುಡುಗಿ ಜೊತೆ ಮಾತಾಡುತ್ತೇನೆ" "ತಟ್ಟೆಯಲ್ಲಿ ಅವಳಿಗೆ ತಿನ್ನಲು ಏನು ಕೊಡುತ್ತೇನೆಂಬುದನ್ನು ನೀನು ನೋಡು" – ಎಂದಳು.

ತನ್ನ ಮಾತನ್ನೇನೊ ಉಳಿಸಿಕೊಂಡಳು. ಆದರೆ ಅದು ಸರಿಯಾದ ಸಮಯವಾಗಿರಲಿಲ್ಲ. ಮನೆಯಲ್ಲಿ ಹಿಂದಿನ ಶಾಂತಿ ಇರಲಿಲ್ಲ. ರೆಬೆಕಾಳ ಹುಚ್ಚು ಪ್ರೀತಿ ಅವಳಿಗೆ ಗೊತ್ತಾಯಿತು. ಅವಳ ಚೀರಾಟ, ಹಾರಾಟಗಳಿಂದ ಗುಟ್ಟೂ ಒಳಗೆ ಉಳಿಯಲಿಲ್ಲ. ಜೊತೆಗೆ ಇದರಿಂದ ಅಮರಾಂತ ಜ್ವರಕ್ಕೆ ಗುರಿಯಾದಳು. ಅವಳೂ ಕೂಡ ಒಬ್ಬಳೇ ಇದ್ದಾಗ ಪ್ರೇಮದ ನೋವನ್ನು ಅನುಭವಿಸುತ್ತಿದ್ದಳು. ಬಚ್ಚಲು ಮನೆಯಲ್ಲಿ ಬಾಗಿಲು ಹಾಕಿಕೊಂಡು ಪ್ರೀತಿಯ ಹಿಂಸೆಯನ್ನೆಲ್ಲಾ ತೋಡಿಕೊಂಡು ಪತ್ರಗಳನ್ನು ಬರೆಯುತ್ತಿದ್ದಳು. ಕಡೆಗೆ ಅವುಗಳನ್ನೆಲ್ಲಾ ತನ್ನ ಟ್ರಂಕಿನ ಅಡಿಯಲ್ಲಿ ಮರೆಮಾಚಿಟ್ಟಳು. ರೋಗದಿಂದ ನರಳುತ್ತಿದ್ದ ಈ ಇಬ್ಬರು ಹುಡುಗಿಯರನ್ನು ಸುಧಾರಿಸಲು ಉರ್ಸುಲಾಗೆ ಸಾಕಾಗಿ ಹೋಗಿತ್ತು. ಒಂದೇ ಸಮನೆ ಹಲವಾರು ಪ್ರಶ್ನೆಗಳನ್ನು ಕೇಳಿಯೂ ಅಮರಾಂತಳ ಉದ್ವಿಗ್ನತೆಗೆ ಕಾರಣವೇನೆಂದು ತಿಳಿಯಲು ಅವಳಿಂದ ಸಾಧ್ಯವಾಗಲಿಲ್ಲ. ಕಡೆಗೆ ಒಂದು ಕ್ಷಣದ ಸ್ಫೂರ್ತಿಯಿಂದ, ಟ್ರಂಕಿನ ಬೀಗವನ್ನು ಒಡೆದು ತೆಗೆದು ಅದರೊಳಗೆ ಪತ್ರಗಳ ಕಟ್ಟನ್ನು ಪಿಂಕ್ ರಿಬ್ಬನಿನಿಂದ ಕಟ್ಟಿದ್ದನ್ನು ನೋಡಿದಳು. ತಾಜಾ ಲಿಲಿಗಳಿಂದ ಮತ್ತು ಕಣ್ಣೀರಿನಿಂದ ಒದ್ದೆಯಾದ ಅವುಗಳ ಮೇಲೆ ಪೀಟ್ರೋ ಕ್ರೆಸ್ಪಿ ಎಂದು ವಿಳಾಸ ಬರೆದಿದ್ದರೂ ಅಂಚೆಗೆ ಹಾಕಿರಲಿಲ್ಲ. ಸಿಟ್ಟು ಆವೇಶದಿಂದ ಅಳುತ್ತಾ ತಾನು ಪಿಯಾನೋವನ್ನು ಕೊಂಡ ದಿನಕ್ಕಾಗಿ ಹಿಡಿಶಾಪ ಹಾಕಿಕೊಂಡಳು. ಕಸೂತಿ ಕಲಿಸುವುದನ್ನು ಬಿಟ್ಟಳು. ಮನೆಯಲ್ಲಿ ಯಾರು ಸಾಯದಿದ್ದರೂ, ಮಕ್ಕಳ ಆಸೆ ಪೂರೈಸುವವರೆಗೆ ಸುದೀರ್ಘ ಶೋಕಾಚರಣೆ ನಡೆಸಲು ನಿರ್ಧರಿಸಿದಳು. ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಮಧ್ಯೆ ಪ್ರವೇಶಿಸಿದರೂ ಪ್ರಯೋಜನವಾಗಲಿಲ್ಲ. ಸಂಗೀತ ವಾದ್ಯಗಳನ್ನು ನಿರ್ವಹಿಸುವ ಪೀಟ್ರೋ ಕ್ರೆಸ್ಪಿಯ ಕೌಶಲ್ಯವನ್ನು ಬಹಳವಾಗಿ ಮೆಚ್ಚಿಕೊಂಡಿದ್ದ ಅವನು ಈಗ ತನ್ನ ಅಭಿಪ್ರಾಯವನ್ನು ಬದಲಿಸಿಕೊಂಡಿದ್ದ. ಪಿಲಾರ್ ತರ್ಸಿರಾ,

ಅರೆಲಿಯಾನೋಗೆ ರೆಮಿಡಿಯೋಸ್‌ಗೆ ಮದುವೆ ನಿಶ್ಚಯವಾಗಿರುವ ಸುದ್ದಿಯನ್ನು ತಿಳಿಸಿದಳು. ಇದರಿಂದ ತನ್ನ ತಂದೆತಾಯಿಯರಿಗೆ ಮತ್ತೂ ತೊಂದರೆಯಾಗುವುದನ್ನು ಅರಿತ. ಆದರೂ ಅವರನ್ನು ನಡುಮನೆಗೆ ಕರೆದು ಮಾತಾಡಿದ. ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಮತ್ತು ಉರ್ಸುಲಾ ಮಗನ ನಿರ್ಧಾರವನ್ನು ಯಾವುದೇ ಪ್ರತಿಕ್ರಿಯೆ ಇಲ್ಲದೆ ತಣ್ಣಗೆ ಕೇಳಿಸಿಕೊಂಡರು. ಅವನು ಮದುವೆಯಾಗಲು ಬಯಸುತ್ತಿರುವ ಹುಡುಗಿ ಯಾರೆಂದು ತಿಳಿದಾಗ ಮಾತ್ರ ಕೋಪದಿಂದ ಕೆಂಡವಾದ "ಪ್ರೀತಿ ಅನ್ನೋದು ಒಂದು ರೋಗ ಇದ್ದ ಹಾಗೆ" ಎಂದು ಗುಡುಗಿದ. "ಎಷ್ಟೊಂದು ಸುಂದರವಾದ ಹುಡುಗಿಯರು ಸುತ್ತ ಇರುವಾಗ ನಿನಗೆ ಹೋಗಿ ಹೋಗಿ ನಮ್ಮ ಶತ್ರುವಿನ ಮಗಳನ್ನು ಮದುವೆ ಮಾಡ್ಕೊಳ್ಳೊ ಯೋಚನೆ ಬಂತಾ' ಎಂದ. ಆದರೆ ಉರ್ಸುಲಾಗೆ ಈ ಸಂಬಂಧ ಇಷ್ಟವಾಯಿತು. ಆ ಏಳುಜನ ಅಕ್ಕತಂಗಿಯರು ಅವರ ಸೌಂದರ್ಯ, ನಡತೆ, ಕೆಲಸ ಮಾಡುವ ಸಾಮರ್ಥ್ಯ ಇದೆಲ್ಲ ತನಗೆ ತುಂಬ ಹಿಡಿಸಿದೆ ಎಂದು ಒಪ್ಪಿಕೊಂಡಳು. ಅವನ ಆಯ್ಕೆಯಿಂದ ನಿಜವಾಗಿಯೂ ಸಂತೋಷಪಟ್ಟಳು. ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಒಂದು ಷರತ್ತನ್ನು ಮುಂದಿಟ್ಟ. ತನ್ನ ಪ್ರೀತಿಯ ರೆಬೆಕಾ ಪೀತ್ರೋ ಕ್ರೆಸ್ಪಿಯನ್ನು ಮದುವೆಯಾಗಬೇಕು. ಅಮರಾಂತಳನ್ನು ಅವಳ ಮನಃಸ್ಥಿತಿ ಸರಿಹೋಗಲು ಅವಳನ್ನು ಬಿಡುವಾದಾಗ ಈ ಪ್ರಾಂತದ ರಾಜಧಾನಿಗೆ ಪ್ರವಾಸಕ್ಕೆ ಕರೆದುಕೊಂಡು ಹೋಗಬೇಕು. ಅಲ್ಲಿ ಬೇರೆ ಬೇರೆ ರೀತಿಯ ಜನರ ಸಂಪರ್ಕಕ್ಕೆ ಬರುವುದರಿಂದ ತನ್ನ ದುಃಖವನ್ನು ಮರೆಯುತ್ತಾಳೆ. ರೆಬೆಕಾ ಈ ಒಪ್ಪಂದವನ್ನು ಕೇಳಿಸಿಕೊಂಡ ಕೂಡಲೇ ಚೆನ್ನಾಗಿ ಆಗಿಬಿಟ್ಟಳು. ಕೂಡಲೇ ಕ್ರೆಸ್ಪಿಗೆ ಸಂತೋಷದ ಸುದ್ದಿಯನ್ನು ತಿಳಿಸುತ್ತಾ ಪತ್ರ ಬರೆದಳು. ಅದನ್ನು ಅಂಚೆಗೆ ಹಾಕಿದಳು. ಅಮರಾಂತ ಈ ನಿರ್ಧಾರವನ್ನು ಒಪ್ಪಿಕೊಂಡಂತೆ ನಟಿಸಿದಳು. ಕ್ರಮೇಣ ಅವಳೂ ಜ್ವರದಿಂದ ಪಾರಾದಳು. ಆದರೆ ರೆಬೆಕಾ ಮದುವೆಯಾಗಬೇಕಾದರೆ ತಾನು ಸತ್ತಮೇಲೆ ಎಂದು ತನ್ನಲ್ಲಿ ತಾನೇ ಹೇಳಿಕೊಂಡಳು.

ಮುಂದಿನ ಶನಿವಾರ ಜೋಸ್ ಆರ್ಕಾಡಿಯೋ ಬ್ಯುಂಡಿಯಾ ತನ್ನ ಕಪ್ಪು ಸೂಟುಧರಿಸಿ ಜಿಂಕೆ ಚರ್ಮದ ಬೂಟು ತೊಟ್ಟು [ಪಾರ್ಟಿಯ ರಾತ್ರಿಯಂದು ಬಿಟ್ಟು ಬೇರೆಂದೂ ತೊಟ್ಟಿರದ] ರೆಮೆಡಿಯೋಸ್ ಮಾಸ್ಕೋಟ್‌ಳನ್ನು ಮದುವೆ ಮಾಡಿಕೊಡುವಂತೆ ಕೇಳಲು ಹೋದ. ಮ್ಯಾಜಿಸ್ಟ್ರೇಟ್ ಮತ್ತು ಆತನ ಹೆಂಡತಿ ಏಕಕಾಲದಲ್ಲಿ ಸಂತೋಷ ಮತ್ತು ಚಿಂತೆಯೊಂದಿಗೆ ಬರಮಾಡಿಕೊಂಡರು. ಅವರಿಗೆ ಅನಿರೀಕ್ಷಿತವಾಗಿ ಅವನು ಬಂದ ಕಾರಣ ತಿಳಿದಿರಲಿಲ್ಲ. ಆಮೇಲೆ ಅವರು, ಯಾರನ್ನು ಕೇಳಬೇಕೆಂಬ ವಿಷಯದಲ್ಲಿ ಗೊಂದಲಗೊಂಡಿರಬೇಕು ಎಂದು ಯೋಚಿಸಿದರು. ತಾಯಿ ರೆಮೆಡಿಯೋಸ್‌ಳನ್ನು ಎಬ್ಬಿಸಿ ಪಡಸಾಲೆಗೆ ಕರೆದೊಯ್ದು ಇನ್ನೂ ನಿದ್ದೆಗಣ್ಣಲ್ಲಿದ್ದ ಅವಳನ್ನು, ಮದುವೆಯಾಗುವ ನಿರ್ಧಾರದ ಬಗ್ಗೆ ಕೇಳಿದಳು. ಅವಳು ಮುಲುಗುತ್ತಾ ನಿದ್ದೆಮಾಡಬೇಕಾಗಿದೆ ಎಂದಳು. ಜೋಸ್ ಆರ್ಕಾಡಿಯೋಗೆ ಮಾಸ್ಕೋಟರ ಸಮಸ್ಯೆ ಅರ್ಥವಾಗಿ, ವಿಷಯವನ್ನು ಸ್ಪಷ್ಟಪಡಿಸಿಕೊಳ್ಳಲು ಅರೆಲಿಯಾನೋ ಬಳಿ ಹೋದರು. ಹಿಂತಿರುಗಿ ಮತ್ತೆ ಮಾಸ್ಕೋಟರ ಮನೆಗೆ ಬರುವಷ್ಟರಲ್ಲಿ ಮಾಸ್ಕೋಟ್‌ರು ಒಳ್ಳೆ ಬಟ್ಟೆ ಹಾಕಿದ್ದರು. ಹೂದಾನಿಯಲ್ಲಿ ತಾಜಾ ಹೂಗಳನ್ನು ಇರಿಸಿದ್ದರು. ಪೀಠೋಪಕರಣಗಳನ್ನು ಸರಿಯಾಗಿ ಹೊಂದಿಸಿ ಜೋಡಿಸಿಟ್ಟರು.

ತಮ್ಮ ಹಿರಿಯ ಹೆಣ್ಣುಮಕ್ಕಳೊಂದಿಗೆ ಅವರಿಗಾಗಿ ಎದುರು ನೋಡುತ್ತಿದ್ದರು. ಸಂದರ್ಭ ಅಷ್ಟು ಹಿತವೆನಿಸಿರಲಿಲ್ಲ. ಇಂತಹ ಪರಿಸ್ಥಿತಿ ಮತ್ತು ತನ್ನ ಕಾಲರಿಂದ ಆಗುತ್ತಿದ್ದ ಮುಜುಗರ ಇವುಗಳ ನಡುವೆ, ರೆಮೆಡಿಯೋಸ್‌ಳೇ ಅವನ ಆಯ್ಕೆ ಎಂಬುದು ಖಚಿತವಾಯಿತು. "ಇದು ಸರಿ ಅಲ್ಲ" ಡಾನ್ ಅಪೊಲಿನಾರ್ ಸ್ವಲ್ಪ ಅಸಮಾಧಾನದಿಂದ ಹೇಳಿದ. "ನಮಗೆ ಆರುಜನ ಮದುವೆ ಆಗಬೇಕಾದ ಹೆಣ್ಣು ಮಕ್ಕಳಿದ್ದಾರೆ. ಅವರಿಗೇ ಮೊದಲು ಮದುವೆ ಆಗಬೇಕು. ಅವರಲ್ಲಿ ಯಾರಾದರೂ ಕಷ್ಟಪಟ್ಟು ಕೆಲಸ ಮಾಡುವ ಗೌರವಕ್ಕೆ ಪಾತ್ರನಾದ ನಿಮ್ಮ ಮಗನಂಥವನನ್ನು ಸಂತೋಷದಿಂದ ಮದುವೆಯಾಗಲು ಮುಂದೆ ಬರುತ್ತಾರೆ. ಅದು ಬಿಟ್ಟು ಇನ್ನೂ ಹಾಸಿಗೆ ಒದ್ದೆ ಮಾಡಿಕೊಳ್ಳುವ ವಯಸ್ಸಿನ ಹುಡುಗಿಯ ಮೇಲೆ ಕಣ್ಣುಹಾಕುವುದೆಂದರೆ" ಎಂದು ಆತನ ಹೆಂಡತಿ, ನೋವಿನಿಂದ, ವಿಚಿತ್ರ ರೆಪ್ಪೆಗಳಿದ್ದ ಆಕೆ ಅವನು ಮಾಡಿದ ತಪ್ಪಿಗೆ ಛೀಮಾರಿ ಹಾಕಿದಳು. ಹಣ್ಣಿನ ರಸ ಕುಡಿದಾದ ಮೇಲೆ, ಅರೆಲಿಯಾನೋನ ನಿರ್ಧಾರವನ್ನು ಮನಃಪೂರ್ವಕವಾಗಿ ಒಪ್ಪಿಕೊಂಡರು. ಆದರೆ ಮೇಡಂ ಮಸ್ಕೋಟ್ ಉರ್ಸುಲಾ ಹತ್ತಿರ ಏಕಾಂತದಲ್ಲಿ ಮಾತಾಡಬೇಕೆಂದು ವಿನಂತಿಸಿಕೊಂಡಳು. ಗಂಡಸರ ಮಧ್ಯೆ ಪ್ರವೇಶಿಸುವುದು ಉರ್ಸುಲಾಗೆ ಇಷ್ಟವಿಲ್ಲದಿದ್ದರು ಮನಸ್ಸು ಕರಗಿ, ಮಾರನೆದಿನ ಆಕೆಯನ್ನು ಭೇಟಿಯಾಗಲು ಹೋದಳು. ಅರ್ಧಗಂಟೆಯ ನಂತರ ರೆಮೆಡಿಯೋಸ್ ಇನ್ನೂ ವಯಸ್ಸಿಗೆ ಬಂದಿಲ್ಲ ಎಂಬ ಸುದ್ದಿಯೊಂದಿಗೆ ಬಂದಳು. ಅರೆಲಿಯಾನೋ ಅದನ್ನು ಅಷ್ಟೊಂದು ದೊಡ್ಡ ವಿಷಯ ಅಂತ ಭಾವಿಸಲಿಲ್ಲ. ಇಷ್ಟು ದಿನ ಕಾದಿರುವಾಗ, ಅವಳು ಮದುವೆ ವಯಸ್ಸಿಗೆ ಬರುವವರೆಗೆ ಕಾಯುವುದು ಅಂಥ ಕಷ್ಟವೆನಿಸಲಿಲ್ಲ.

ಹೊಸದಾಗಿ ಉಂಟಾದ ಸ್ನೇಹ ಸಂಬಂಧದ ಮಧ್ಯೆ ಮೆಲ್‌ಕಿಯಾಡ್ಸ್‌ನ ಸಾವು ಬೇರೆ ಸಂಭವಿಸಿತು. ಸಾವು ನಿರೀಕ್ಷಿತವೇ ಆಗಿದ್ದರೂ ಪರಿಸ್ಥಿತಿಗಳು ಹಾಗಿರಲಿಲ್ಲ. ಅವನು ಹಿಂತಿರುಗಿ ಬಂದ ಕೆಲವೇ ತಿಂಗಳುಗಳಲ್ಲಿ ಮುಪ್ಪು ವೇಗವಾಗಿ ಆವರಿಸಿತು. ಎಷ್ಟು ಬೇಗ ಮುಪ್ಪು ಮುಸುಕಿತೆಂದರೆ, ಯಾವುದಕ್ಕೂ ಪ್ರಯೋಜನವಿಲ್ಲದ ಮುತ್ತಜ್ಜರ ಸಾಲಿಗೆ, ಸೇರಿಸಬೇಕಾಯಿತು. ಕೊಠಡಿಗಳಲ್ಲಿ ನೆರಳಿನಂತೆ ಓಡಾಡುವರ ಗುಂಪಿನಲ್ಲಿ ಅವನೂ ಒಬ್ಬನಾದ. ಕಾಲೆಳೆಯುತ್ತಾ ತಮ್ಮ ಹಿಂದಿನ ದಿನಗಳನ್ನು ನೆನಪಿಸಿಕೊಳ್ಳುತ್ತ ಓಡಾಡುವ ಇವರನ್ನು ಬೆಳಗ್ಗೆ ತಮ್ಮ ಹಾಸಿಗೆಗಳಲ್ಲಿ ಸತ್ತು ಬಿದ್ದಿರುವವರೆಗೆ ಯಾರೂ ಮನಸ್ಸಿಗೆ ಹಚ್ಚಿಕೊಳ್ಳುತ್ತಿರಲಿಲ್ಲ. ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಮೊದಲಿಗೆ ಅವನ ಕೆಲಸದಲ್ಲಿ ನೆರವಾಗುತ್ತಿದ್ದ. ಅವನು ತಯಾರಿಸುತ್ತಿದ್ದ ಕ್ಯಾಮರಾಗಳು, ನಾಸ್ತ್ರಡಾಮಸ್‌ನ ಭವಿಷ್ಯವಾಣಿ ಇತ್ಯಾದಿಗಳ ಬಗ್ಗೆ ಬಹಳ ಉತ್ಸಾಹ ತೋರುತ್ತಿದ್ದವ. ಕ್ರಮೇಣ ಅವನ ಪಾಡಿಗೆ ಅವನನ್ನು ಒಂಟಿಯಾಗಿ ಬಿಟ್ಟುಬಿಟ್ಟ. ಕಾರಣ ಅವನೊಂದಿಗೆ ಮಾತುಕತೆ ಕಷ್ಟವಾಗಿತ್ತು. ಒಂದು ಕಡೆ ದೃಷ್ಟಿ ಮತ್ತು ಕೇಳುವ ಶಕ್ತಿಯನ್ನೂ ಕಳೆದುಕೊಂಡಿದ್ದ. ಜನರ ಜೊತೆ ಮಾತಾಡುವಾಗ, ಕೇಳುವವರನ್ನು ಗೊಂದಲದಲ್ಲಿ ಸಿಕ್ಕಿಸುತ್ತಿದ್ದ. ಯಾವುದೋ ಓಬಿರಾಯನ ಕಾಲದ ಮನುಕುಲದ ಕತೆಗಳನ್ನು ಹೇಳುತ್ತಿದ್ದ. ಮಾತಾಡುತ್ತಿದ್ದ ಭಾಷೆಯೂ ಸರಿಯಾಗಿ ಅರ್ಥವಾಗುತ್ತಿರಲಿಲ್ಲ. ಆದರೂ ಕೂಡಾ ಓಡಾಡುವಾಗ ತಡವರಿಸದ ಯಾವುದೋ ಅಂತಃಪ್ರೇರಣೆಯಿಂದ ಸಲೀಸಾಗಿ ಹೆಜ್ಜೆ ಹಾಕುತ್ತಾ ಸಾಮಾನುಗಳಾವುದನ್ನೂ ಉರುಳಿಸದೆ

ನಡೆಯುತ್ತಿದ್ದ. ಒಂದು ದಿನ ಅವನು ಲೋಟದಲ್ಲಿ ರಾತ್ರಿ ತೆಗೆದಿಟ್ಟಿದ್ದ ಹಲ್ಲುಗಳನ್ನು ಹಾಕಿಕೊಳ್ಳುವುದನ್ನು ಮರೆತುಬಿಟ್ಟಿದ್ದ. ಮತ್ತೆ ಅದನ್ನು ಎಂದಿಗೂ ಹಾಕಿಕೊಳ್ಳಲಿಲ್ಲ. ಮನೆಯನ್ನು ದೊಡ್ಡದು ಮಾಡುವಾಗ ಉರ್ಸುಲಾ ಅವನಿಗಾಗಿ ಗದ್ದರಗಿದ್ದಲ ಇಲ್ಲದಂತೆ, ಅರೆಲಿಯಾನೋನ ವರ್ಕ್‌ಶಾಪ್ ಪಕ್ಕದಲ್ಲಿ, ಧಾರಾಳವಾಗಿ ಗಾಳಿ ಬೆಳಕು ಬರುವ ಕಿಟಕಿಗಳಿರುವ ಒಂದು ಪ್ರತ್ಯೇಕವಾದ ಕೊಠಡಿಯನ್ನು ವಿಶೇಷವಾಗಿ ಕಟ್ಟಿಸಿದ್ದಳಲ್ಲದೆ, ಬೇಕಾದ ಎಲ್ಲ ಅನುಕೂಲಗಳನ್ನು ಮಾಡಿಸಿದ್ದಳು. ಧೂಳುಹಿಡಿದು ಹಾಳಾಗಿ ಹೋಗಿದ್ದ ಪುಸ್ತಕ ಷೆಲ್ಫ್‌ನಲ್ಲಿ ಅಚ್ಚುಕಟ್ಟಾಗಿ ಜೋಡಿಸಿ ಇರಿಸಿದ್ದಳು. ಅರ್ಥವಾಗದೆ ಸಹಿಗಳುಳ್ಳ ಒಂದು ಕಾಗದಗಳ ಕಟ್ಟು, ಕೃತಕ ಹಲ್ಲುಗಳನ್ನು ಇರಿಸಲು ಒಂದು ಗ್ಲಾಸು, ಅದರಲ್ಲಿ ಕೆಲವು ಜಲಸಸ್ಯಗಳು ಬೇರುಬಿಟ್ಟಿದ್ದವು.

ಈ ಹೊಸ ಜಾಗ ಅವನಿಗೆ ಬಹಳ ಖುಷಿ ಕೊಟ್ಟಿತ್ತು. ಇದು ಬಿಟ್ಟು ಅವನು ಬೇರೆಯದನ್ನು, ಊಟದ ಮನೆಯನ್ನೂ ನೋಡಿರಲಿಲ್ಲ. ಅರೆಲಿಯಾನೋನ ವರ್ಕ್‌ಶಾಪ್‌ಗೆ ಹೋಗುತ್ತಿದ್ದ. ಅಲ್ಲಿ ಕುಳಿತು ಅವನು ತನ್ನೊಡನೆ ತಂದಿದ್ದ ಚರ್ಮದ ಕಾಗದದ ಮೇಲೆ ಏನೇನನ್ನೋ ಗೀಚುತ್ತಿದ್ದ. ಹೀಗೆ ಅಲ್ಲಿ ಒಂದಷ್ಟು ಗಂಟೆಗಳನ್ನು ಕಳೆಯುತ್ತಿದ್ದ. ವಿಸಿಟಾಸಿಯೋನ್ ದಿನಕ್ಕೆ ಎರಡು ಸಲ ಅಲ್ಲಿಗೆ ತರುತ್ತಿದ್ದ ಊಟವನ್ನು ತಿನ್ನುತ್ತಿದ್ದ. ಅವನ ಕಡೆಯ ದಿನಗಳಲ್ಲಿ ತಿನ್ನುವ ಆಸಕ್ತಿಯನ್ನು ಕಳೆದುಕೊಂಡಿದ್ದ. ಕೇವಲ ತರಕಾರಿಗಳಷ್ಟನ್ನೇ ತಿನ್ನುತ್ತಿದ್ದ. ಸ್ವಲ್ಪ ಸಮಯದಲ್ಲಿಯೇ ಏನನ್ನೋ ಕಳೆದುಕೊಂಡವನಂತೆ ಕಾಣಿಸತೊಡಗಿದ. ಚರ್ಮದ ಮೇಲೆ ಪಾಚಿಯ ಪದರ ಕಾಣಿಸಿತು. ಅದೆ ಹೇಗಿತ್ತೆಂದರೆ ಧರಿಸಿದ್ದುದನ್ನು ಎಂದೂ ತೆಗೆಯದ ಅಂಗಿಯ ಮೇಲೆ ಕಾಣಿಸುವ ಪಾಚಿ ಅಥವಾ ಕೊಳೆಯ ಪದರದಂತೆಯೂ ಇತ್ತು. ಅವನ ನಿಶ್ವಾಸದ ವಾಸನೆ ಮಲಗಿದ ಪ್ರಾಣಿಯ ನಿಶ್ವಾಸದಂತೆ ಇತ್ತು. ಕವಿತೆಗಳನ್ನು ಕಟ್ಟುವುದರಲ್ಲಿ ಮುಳುಗಿದ್ದ ಅರೆಲಿಯಾನೋ ಅವನನ್ನು ಪೂರ್ತಿಯಾಗಿ ಮರೆತುಬಿಟ್ಟ. ಆದರೆ ಒಂದು ಸನ್ನಿವೇಶದಲ್ಲಿ ಮೆಲ್‌ಕಿಯಾಡ್ಸ್ ಹೇಳಿದ್ದೇನನ್ನೋ ಅರ್ಥಮಾಡಿಕೊಂಡ. ತನ್ನಲ್ಲಿ ತಾನೇ ಮಾತನಾಡಿಕೊಳ್ಳುತ್ತಿದ್ದ ಮೆಲ್‌ಕಿಯಾಡ್ಸ್‌ನ ಮಾತುಗಳಲ್ಲಿ ಕೆಲವು ಪದೇ ಪದೇ ಬಳಕೆಯಾಗುತ್ತಿತ್ತು. ಅವನು ಅವುಗಳ ಕಡೆ ಗಮನ ಹರಿಸಿದ. ಈಕ್ವಿನಾಕ್ಸ್, ಈಕ್ವಿನಾಕ್ಸ್, ಈಕ್ವಿನಾಕ್ಸ್, ಎನ್ನುವ ಪದಗಳ ಜೊತೆಗೆ ಅಲೆಕ್ಸ್ಯಾಂಡರ್ ವಾನ್ ಹಮ್‌ಬೋಲ ಜೋಸ್ ಆರ್ಕಾಡಿಯೋ ಅರೆಲಿಯಾನೋಗೆ ಅವನ ಬೆಳ್ಳಿ ಕೆಲಸದಲ್ಲಿ ಸಹಾಯಮಾಡುತ್ತಾ ಅವನಿಗೆ ಹತ್ತಿರವಾದ. ಮೆಲ್‌ಕಿಯಾಡ್ಸ್ ಮಾತಾಡುವಾಗ ಕಷ್ಟವಾದಾಗಲೆಲ್ಲ ಸ್ಪಾನಿಷ್ ಪದಗಳನ್ನು ಬಳಸುತ್ತಿದ್ದ. ಆದರೆ ಅವು ವಾಸ್ತವಕ್ಕೆ ದೂರವಾಗಿದ್ದವು. ಒಂದು ಮಧ್ಯಾಹ್ನ ದಿಢೀರನೆ ಏನೋ ಭಾವನೆಯಿಂದ ಮುಖದಲ್ಲಿ ಗೆಲುವು ಕಾಣಿಸಿತು. ವರ್ಷಗಳ ನಂತರ ಆರ್ಕಾಡಿಯೋ ಗುಂಡಿಕ್ಕಿ ಕೊಲ್ಲುವ ಸೇನಾತಂಡಕ್ಕೆ ಎದುರಾಗಿ ನಿಂತಾಗ, ಮೆಲ್‌ಕಿಯಾಡ್ಸ್ ಅರ್ಥವಾಗದಿದ್ದ, ತಾನು ಬರೆದಿದ್ದ ಹಲವಾರು ಪುಟಗಳನ್ನು ಒಂದೇ ಸಮನೆ ಓದುತ್ತಾ ತನ್ನನ್ನು ನಡುಗುತ್ತಲೇ ಕೇಳಿಸಿಕೊಳ್ಳುವಂತೆ ಮಾಡಿದ. ಆದರೆ ಅದನ್ನು ಗಟ್ಟಿಯಾಗಿ ಓದಿದಾಗ ಲಯಬದ್ಧ ವಾಚನವನ್ನು ಕೇಳಿದಂತೆನಿಸಿತ್ತು ಎಂಬುದನ್ನು ನೆನಪಿಸಿಕೊಂಡ. ನಂತರ ಅವನು ಮೊದಲ ಬಾರಿಗೆ ನಗುತಂದುಕೊಂಡು "ನಾನು ಸತ್ತಾಗ ಮೂರು ದಿನಗಳ ಕಾಲ ನನ್ನ ಕೊಠಡಿಯಲ್ಲಿ

ಪಾದರಸವನ್ನು ಉರಿಸಿರಿ" ಎಂದು ಸ್ಪ್ಯಾನಿಷ್‌ನಲ್ಲಿ ಹೇಳಿದ. ಆರ್ಕಾಡಿಯೋ ಇದನ್ನು ಜೋಸ್ ಆರ್ಕಾಡಿಯೋ ಬ್ಯುಂಡಿಯಾಗೆ ಹೇಳಿದಾಗ, ಇನ್ನಷ್ಟು ಇದರ ಬಗ್ಗೆ ವಿವರ ತಿಳಿಯಲು ಪ್ರಯತ್ನಿಸಿದಾಗ ಒಂದೇ ಒಂದು ಉತ್ತರ ಸಿಕ್ಕಿದ್ದು "ನಾನು ಅಮರತ್ವವನ್ನು ಕಂಡುಕೊಂಡಿದ್ದೇನೆ" ಎಂಬುದು. ಮೆಲ್‌ಕಿಯಾಡ್ಸ್‌ನ ಉಸಿರಾಟದಲ್ಲಿ ವಾಸನೆ ಕಂಡು ಬಂದಾಗ ಅವನನ್ನು ಆರ್ಕಾಡಿಯೋ ಗುರುವಾರಗಳಲ್ಲಿ ಬೆಳಗಿನ ಹೊತ್ತು ಸ್ನಾನ ಮಾಡಿಸಲು ನದಿಗೆ ಕರೆದುಕೊಂಡು ಹೋಗುತ್ತಿದ್ದ. ಅವನು ಬಟ್ಟೆ ಕಳಚಿ ಹುಡುಗರೊಂದಿಗೆ ನೀರಿಗೆ ಇಳಿಯುತ್ತಿದ್ದ. ಅವನಿಗೆ ಇದ್ದ ಅತೀಂದ್ರಿಯ ಶಕ್ತಿಯಿಂದಾಗಿ ನದಿಯಲ್ಲಿನ ಅಪಾಯ ಸ್ಥಾನಗಳನ್ನು ಅರಿಯುತ್ತಿದ್ದುದರಿಂದ, ಅಂಥ ಕಡೆ ಹೋಗುತ್ತಿರಲಿಲ್ಲ. "ನಾವು ನೀರಿನಿಂದ ಬಂದಿದ್ದೇವೆ" ಎಂದು ಒಂದು ಸಂದರ್ಭದಲ್ಲಿ ಹೇಳಿದ್ದ. ಹೀಗೆ ಸಾಕಷ್ಟು ಸಮಯ ಕಳೆಯಿತು. ಅವನು ಮನೆಯಲ್ಲಿ ಕಾಣುತ್ತಲೇ ಇರಲಿಲ್ಲ. ಆದರೆ ಒಂದು ದಿನ, ಪಿಯಾನೋವನ್ನು ಕಷ್ಟಪಟ್ಟು ಸರಿಪಡಿಸುತ್ತಿದ್ದಾಗ, ಆರ್ಕಾಡಿಯೋ ಜೊತೆ, ಕಂಕುಳಲ್ಲಿ ಸೋರೆ ಬುರುಡೆ ಕೈಯಲ್ಲಿ ತಾಳೆಯೆಣ್ಣೆಯಿಂದ ಮಾಡಿದ ಸಾಬೂನನ್ನು ಟವೆಲ್‌ನಲ್ಲಿ ಸುತ್ತಿಹಿಡಿದು, ಹೋಗುತ್ತಿದ್ದಾಗಷ್ಟೆ ಅವನು ಕಾಣಿಸಿದ್ದು. ಒಂದು ಗುರುವಾರದ ದಿನ, ನದಿಗೆ ಹೋಗುವಾಗ ಕರೆಯುವ ಮೊದಲೇ "ನಾನು ಸಿಂಗಪುರದ ಮರಳ ರಾಶಿಯಲ್ಲಿ ಜ್ವರದಿಂದ ಸತ್ತುಹೋಗಿದ್ದೇನೆ" ಎಂದು ಹೇಳುತ್ತಿದ್ದುದನ್ನು ಅರೆಲಿಯಾನೋ ಕೇಳಿಸಿಕೊಂಡ. ಆ ದಿನ ಅವನು ಅಪಾಯದ ಜಾಗಕ್ಕೆ ಹೋಗಿ, ಮರುದಿನದವರೆಗೂ ಕಾಣಿಸಲೇ ಇಲ್ಲ. ನದಿಯ ಕೆಳಹರವಿನಲ್ಲಿ ಕೊಚ್ಚಿಕೊಂಡು ಹೋಗಿ ನೀರಿನ ತಿರುವಿನಲ್ಲಿ ಕಾಣಿಸಿಕೊಂಡ. ಒಂದೇ ಒಂದು ರಣಹದ್ದು ಅವನ ಹೊಟ್ಟೆಯ ಮೇಲೆ ಕುಳಿತ್ತಿತ್ತು. ಉರ್ಸುಲಾ ಅವನ ಸಾವಿಗಾಗಿ ತನ್ನ ತಂದೆಯ ಸಾವಿಗಾಗಿ ಅತ್ತಂತೆ, ಬಹಳವಾಗಿ ದುಃಖಿಸಿದಳು. ಜೋಸ್ ಆರ್ಕಾಡಿಯೋ ಬ್ಯುಂಡಿಯಾ 'ಅವನು ಅಮರ' ಎಂದು ಹೇಳಿ ಸಮಾಧಿ ಮಾಡುವುದನ್ನು ವಿರೋಧಿಸಿದ "ಅವನೇ ಅವನ ಪುನರುತ್ಥಾನದ ವಿಧಾನವನ್ನು ಹೇಳಿದ್ದಾನೆ" ಎಂದು ತಿಳಿಸಿದ. ಮರೆತು ಹೋಗಿದ್ದ ನೀರಿನ ಪೈಪನ್ನು ತಂದು, ಒಂದು ಪಾತ್ರೆಯಲ್ಲಿ ಪಾದರಸವನ್ನು ಕುದಿಯಲು ಬಿಟ್ಟ. ಅದು ಸ್ವಲ್ಪ ಸ್ವಲ್ಪವೇ ನೀಲಿ ಗುಳ್ಳೆಗಳಿಂದ ತುಂಬಿತು. ಡಾನ್ ಅಪೊಲಿನಾರ್ ಮಾಸ್ಕೋಟ್ ನೀರಿನಲ್ಲಿ ಮುಳುಗಿ ಸತ್ತವನನ್ನು ಬಹಳ ದಿನ ಹಾಗೇ ಇರಿಸಿಕೊಳ್ಳುವುದು ಸಾರ್ವಜನಿಕ ಆರೋಗ್ಯದ ದೃಷ್ಟಿಯಿಂದ ಸರಿಯಲ್ಲ ಎಂದು ಎಚ್ಚರಿಸಿದ. "ಅಂಥಾದ್ದೇನೂ ಇಲ್ಲ" ಅವನು ಸತ್ತಿಲ್ಲ ಬದುಕಿಯೇ ಇದ್ದಾನೆ ಎಂದು ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಹೇಳಿದ.

ಎಪ್ಪತ್ತೆರಡು ಗಂಟೆಗಳ ಕಾಲ ಪಾದರಸ ಉರಿದು ಅದರ ಹೊಗೆ ಹನಿಗಳು ಆವರಿಸಿ ದೇಹ ಉಬ್ಬಲು ಮೊದಲಾಗಿ, ಅದರ ಸಣ್ಣಸಣ್ಣ ಮಾರಕ ಮನೆಯೆಲ್ಲ ತುಂಬಿಬಿಟ್ಟಿತು. ಆಗ ಮಾತ್ರವೇ ಅವನನ್ನು ಹೂಳುವುದಕ್ಕೆ ಒಪ್ಪಿಗೆ ಸಿಕ್ಕಿತಾದರೂ ಸಾಮಾನ್ಯ ರೀತಿಯಲ್ಲಿ ಹೂಳದೆ ಬಹಳ ಅದ್ದೂರಿಯಾಗಿ, ಮಕೊಂಡೋಕ್ಕೆ ಬಹಳಷ್ಟು ಉಪಕಾರ ಮಾಡಿದಾತನಿಗೆ, ಅಂತಿಮ ಸಂಸ್ಕಾರ ಮಾಡಲಾಯಿತು. ಅಂಥಾ ಅಂತಿಮ ಸಂಸ್ಕಾರ ಅಷ್ಟೊಂದು ಜನರು ಸೇರಿ ನಡೆಸಿದ್ದರು. ಒಂದು ನೂರು ವರ್ಷಗಳ ನಂತರ ಮಹಾತಾಯಿಯ ಸಾವಿನ ಸಂದರ್ಭದಲ್ಲಿ ಮಾತ್ರವೇ ಸಾಧ್ಯವಾಯಿತು. ಆ ಪ್ರದೇಶದ ಮಧ್ಯ ಭಾಗದಲ್ಲಿ ಗೋರಿ ಅಗೆದು

ಸಮಾಧಿಯನ್ನು ಕಟ್ಟಿದರು. ಸಮಾಧಿಯ ಕಲ್ಲಿನ ಮೇಲೆ, ಅವರಿಗೆ ಅವನ ಕುರಿತು ಗೊತ್ತಿದ್ದ ಒಂದೇ ಒಂದು 'ಮೆಲ್‌ಕಿಯಾಡ್ಸ್' ಎಂಬ ಹೆಸರನ್ನು ಕೆತ್ತಿದರು. ಒಂಭತ್ತು ರಾತ್ರಿಗಳ ಜಾಗರಣೆ ಅವನ ಗೌರವಾರ್ಥ ಆಚರಿಸಲಾಯಿತು. ಅಂಗಳದಲ್ಲಿ ನೆರೆದ ಗುಂಪಿನ ಗದ್ದಲದ ನಡುವೆ ಕಾಫಿ ಸರಬರಾಜಾಯಿತು. ಜೋಕುಗಳ ವಿನಿಮಯ, ಎಲೆಯೂಟ – ಇವುಗಳ ನಡುವೆ ಅಮರಾಂತ ಹೇಗೋ ಅವಕಾಶ ಮಾಡಿಕೊಂಡು ಕ್ರೆಸ್ಪಿಗೆ ತನ್ನ ಪ್ರೀತಿಯನ್ನು ತಿಳಿಸಿದಳು. ಅವನು ಕೆಲವೇ ವಾರಗಳ ಮೊದಲು ರೆಬೆಕಾಳಿಗೆ ತನ್ನ ಪ್ರೀತಿಯನ್ನು ತಿಳಿಸಿಬಿಟ್ಟಿದ್ದ. ಅಲ್ಲದೆ ಅರಬರು ಗಿಳಿಗಳಿಗೆ ಬದಲಾಗಿ ಬೇರೆ ಬೇರೆ ವಹಿವಾಟುಗಳನ್ನು ನಡೆಸಿದ್ದ ಭಾಗದಲ್ಲಿಯೇ ಕ್ರೆಸ್ಪಿ ಸಂಗೀತ ವಾದ್ಯಗಳ ಅಂಗಡಿಯೊಂದನ್ನು ಪ್ರಾರಂಭಿಸಿದ್ದು ಜನ ಆ ಬೀದಿಯನ್ನು ಟರ್ಕಿಗಳ ರಸ್ತೆ ಎಂದು ಕರೆದಿದ್ದರು. ಗುಂಗುರು ಕೂದಲಿನ ಆ ಇಟಾಲಿಯನ್ ಬಗ್ಗೆ, ನಿಟ್ಟುಸಿರು ಬಿಡುತ್ತಿದ್ದರು. ಅವನಾದರೋ ಅಮರಾಂತಳ ಪ್ರೀತಿಯನ್ನು ಅಷ್ಟೊಂದು ಗಂಭೀರವಾಗಿ ತೆಗೆದುಕೊಳ್ಳಬೇಕಾದ ಅಗತ್ಯವಿಲ್ಲವೆಂದು ಭಾವಿಸಿದ್ದ.

"ನನಗೊಬ್ಬ ತಮ್ಮ ಇದ್ದಾನೆ. ಅಂಗಡಿಯಲ್ಲಿ ನನಗೆ ಸಹಾಯವಾಗಿರಲು ಬರುತ್ತಿದ್ದಾನೆ" ಎಂದು ಅವಳಿಗೆ ತಿಳಿಸಿದ.

ಅಮರಾಂತಳಿಗೆ ಇದರಿಂದ ಅವಮಾನವಾದಂತಾಗಿ ಸಿಟ್ಟಿನಿಂದ ಪೀಟ್ರೋ ಕ್ರೆಸ್ಪಿಗೆ "ತಾನು ಸತ್ತು ಬಾಗಿಲ ಬಳಿ ಹೆಣಬಿದ್ದರೂ ಚಿಂತೆಯಿಲ್ಲ, ತನ್ನ ಸೋದರಿಯ ಮದುವೆಯಾಗಲು ಬಿಡುವುದಿಲ್ಲವೆಂದಳು" ಅವಳ ಆ ನಾಟಕೀಯ ನಡವಳಿಕೆ ಕ್ರೆಸ್ಪಿಗೆ ಎಷ್ಟು ಇಷ್ಟವಾಯಿತೆಂದರೆ, ರೆಬೆಕಾಗೆ ಹೇಳದೆ ಇರಲು ಸಾಧ್ಯವಾಗಲಿಲ್ಲ. ಉರ್ಸುಲಾ ಅಮರಾಂತಳ ವಿವಾಹವನ್ನು ಕೆಲಸದ ಒತ್ತಡದಿಂದ ಮುಂದೂಡುತ್ತಿದ್ದವಳು ಈ ವಿಷಯ ತಿಳಿದ ನಂತರ ಕೇವಲ ಒಂದೇ ವಾರದಲ್ಲಿ ನಿಶ್ಚಯಿಸಿದಳು. ಅಮರಾಂತ ಬೇಡವೆನ್ನಲಿಲ್ಲ. ಆದರೆ ರೆಬೆಕಾಳಿಗೆ ಮುತ್ತು ಕೊಡುವಾಗ ಬೀಳ್ಕೊಡುವಾಗ, ಮೆಲ್ಲಗೆ ಕಿವಿಯಲ್ಲಿ "ತುಂಬಾ ಆಸೆ ಇಟ್ಟುಕೊಳ್ಳಬೇಡ, ಪ್ರಪಂಚದ ಯಾವುದೋ ಒಂದು ಮೂಲೆಗೆ ಸಾಗಿಸಿದರೂ, ನಿನ್ನ ಮದುವೆ ನಿಲ್ಲಿಸಲು ಏನಾದರೂ ಉಪಾಯ ಹುಡುಕುತ್ತೇನೆ, ನಿನ್ನನ್ನು ಸಾಯಿಸಲೂ ಸಿದ್ಧವಾಗುತ್ತೇನೆ" ಎಂದಳು.

ಉರ್ಸುಲಾ ಇಲ್ಲದ್ದು, ಮೆಲ್‌ಕಿಯಾಡ್ಸ್ ಅದೃಶ್ಯವಾಗಿ ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ಓಡಾಡುತ್ತಿದ್ದರೂ ಮನೆ ಬಹಳ ದೊಡ್ಡದೆನಿಸಿ ಖಾಲಿಖಾಲಿಯಾಗಿ ಭಾಸವಾಗುತ್ತಿತ್ತು. ರೆಬೆಕಾ ಮನೆ ವ್ಯವಸ್ಥೆ ನೋಡಿಕೊಂಡಳು, ಇಂಡಿಯನ್ನ ಹೆಂಗಸು ಬೇಕರಿ ಜವಾಬ್ದಾರಿ ವಹಿಸಿಕೊಂಡಳು. ಸಂಜೆಗೆ ಪೀಟ್ರೋ ಕ್ರೆಸ್ಪಿ, ಪರಿಮಳವನ್ನು ತನ್ನೊಡನೆ ಹೊತ್ತು ಬರುತ್ತಿದ್ದ. ಬಂದಾಗಲೆಲ್ಲ ಯಾವುದಾದರೂ ಆಟದ ಬೊಂಬೆಯನ್ನು ಉಡುಗೊರೆಯಾಗಿ ತರುತ್ತಿದ್ದ. ಅವನ ಪ್ರೇಮಿ ಅತಿಥಿಯನ್ನು, ಬಾಗಿಲು ಕಿಟಕಿಗಳನ್ನು ಯಾರಿಗೂ ಅನುಮಾನ ಬಾರದಿರಲೆಂದು, ತೆರೆದಿರಿಸಿ ಬರಮಾಡಿಕೊಳ್ಳುತ್ತಿದ್ದಳು. ಈ ತೆರದ ಎಚ್ಚರಿಕೆ ಅಗತ್ಯವಿರಲಿಲ್ಲ. ಆ ಇಟಾಲಿಯನ್ ಗೌರವ ಮರ್ಯಾದೆಗಳಿಂದ ನಡೆದುಕೊಳ್ಳುತ್ತಿದ್ದ. ಮುಂದಿನ ವರ್ಷ ಹೆಂಡತಿಯಾಗುವವಳಾಗಿದ್ದರೂ ಆಕೆಯನ್ನು ಸ್ಪರ್ಶಿಸುತ್ತಿರಲಿಲ್ಲ. ಅವನ ಬರವಿನಿಂದ ಮನೆಯೆಲ್ಲ ಆಟದ ಸಾಮಾನುಗಳಿಂದ ತುಂಬಿಹೋಯಿತು. ಅವನು ತರುತ್ತಿದ್ದ ಕೀಲಿಯಿಂದ

ಕುಣಿಯುವ ನರ್ತಕಿಯರು ಸಂಗೀತ ಹೊಮ್ಮಿಸುವ ಪೆಟ್ಟಿಗೆಗಳು, ಸರ್ಕಸ್ ಮಾಡುವ ಕೋತಿಗಳು, ಕೆನೆಯುವ ಕುದುರೆಗಳು, ವಾದ್ಯ ನುಡಿಸುವ ವಿದೂಷಕರು, ಬೆರಗು ಹುಟ್ಟಿಸುವ ಬಗೆಬಗೆಯ ಪ್ರಾಣಿಗಳು – ಮನೆಯೆಲ್ಲ ತುಂಬಿಹೋಗಿ, ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಮೆಲ್‌ಕಿಯಾಡ್ಸ್‌ನ ಸಾವಿನ ದುಃಖವನ್ನು ಮರೆಯುವಂತಾಯಿತು. ಮತ್ತೆ ಅವನು ರಸಮಣಿಯ ಕೆಲಸದಲ್ಲಿ ತೊಡಗಿದ. ಆ ಸಮಯದಲ್ಲಿ ಅವನು ಬಿಚ್ಚಿಟ್ಟ ಬೊಂಬೆಗಳ ರಾಜ್ಯದಲ್ಲಿ ಮಗ್ನನಾಗಿದ್ದ. ಅವು ಕೆಲಸ ಮಾಡುತ್ತಿದ್ದ ಯಂತ್ರಭಾಗಗಳನ್ನು ಬಿಡಿಬಿಡಿಯಾಗಿ ಬಿಡಿಸಿ, ಪೆಂಡುಲಮ್ ಸಿದ್ಧಾಂತದ ಆಧಾರದ ಮೇಲೆ, ಒಂದೇ ಸಮನೆ ನಿಲ್ಲದೆ ಕೆಲಸ ಮಾಡುವಂತೆ, ಮಾಡುವ ಪ್ರಯತ್ನದಲ್ಲಿದ್ದ. ಅರೆಲಿಯಾನೋ ರೆಮೆಡಿಯೋಸ್‌ಗೆ ಪಾಠ ಹೇಳಿಕೊಡುವ ಕೆಲಸದಲ್ಲಿ ವರ್ಕ್‌ಶಾಪ್‌ನ್ನು ನಿರ್ಲಕ್ಷಿಸಿದ. ಮೊದಮೊದಲಿಗೆ ತನ್ನನ್ನು ಭೇಟಿಯಾಗಲು ಬರುವ ವ್ಯಕ್ತಿಗಾಗಿ, ಸ್ನಾನಮಾಡಿ ನೀಟಾಗಿ ಬಟ್ಟೆ ಹಾಕಿಕೊಂಡು ನಡುಮನೆಯಲ್ಲಿ ಕಾಯುತ್ತಾ ಕುಳಿತಿರುವುದಕ್ಕಿಂತ ಬೊಂಬೆಗಳೇ ಇಷ್ಟವಾಗುತ್ತಿದ್ದವು. ಆದರೆ ಕ್ರಮೇಣ ಅರೆಲಿಯಾನೋನ ಸಹನೆ, ಶ್ರದ್ಧೆಗಳು ಅವಳನ್ನು ಗೆದ್ದವು. ಅವನ ಜೊತೆ ಗಂಟೆಗಟ್ಟಲೆ, ಶಬ್ದಗಳ ಅರ್ಥಗಳನ್ನು ಓದುತ್ತಲೋ, ನೋಟ್‌ಬುಕ್‌ನಲ್ಲಿ ಬಣ್ಣದ ಪೆನ್ಸಿಲ್‌ಗಳಿಂದ ಚಿತ್ರಗಳನ್ನು ಬರೆಯುತ್ತಲೋ ಕಳೆಯುತ್ತಿದ್ದಳು. ಮನೆಯಲ್ಲಿನ ಹಸುಗಳನ್ನು ಹಳದಿ ಕಿರಣಗಳಿಂದ ಕೂಡಿದ ದುಂಡನೆಯ ಸೂರ್ಯ ಬೆಟ್ಟಗಳ ಹಿಂದೆ ಮರೆಯಾಗುತ್ತಿದ್ದಂತೆ ಚಿತ್ರಿಸುತ್ತಿದ್ದಳು.

ಅಮರಾಂತಳ ಬೆದರಿಕೆಯಿಂದ ರೆಬೆಕಾ ಹೆದರಿದ್ದಳು. ಅವಳ ಸೋದರಿಯ ಸ್ವಭಾವ, ಹಟಮಾರಿತನಗಳು ಅವಳಿಗೆ ತಿಳಿದಿದ್ದವು. ಅವಳ ಸಿಟ್ಟಿನ ರಭಸ ಅವಳನ್ನು ಸಂಪೂರ್ಣವಾಗಿ ಭಯಭೀತಗೊಳಿಸಿತ್ತು. ಎಷ್ಟೇ ದೃಢ ನಿರ್ಧಾರ ಮಾಡಿದ್ದರೂ ಮಣ್ಣು ತಿನ್ನಲೇಬಾರದೆಂದು, ತಿನ್ನಬೇಕೆಂಬ ಮನಸ್ಸನ್ನು ಹತ್ತಿಕ್ಕಿ, ಬಚ್ಚಲು ಮನೆಯಲ್ಲಿ ಗಂಟೆಗಟ್ಟಲೆ ಬೆರಳು ಚೀಪುತ್ತಾ ಕಳೆಯುತ್ತಿದ್ದಳು. ಅವಳು ತನ್ನ ಅನಿಶ್ಚಿತತೆಗೊಂದು ಪರಿಹಾರ ಕಂಡುಕೊಂಡಂತೆ, ಪಿಲಾರ್ ತರ್ಸಿರಾಳಿಂದ ಕಾರ್ಡುಗಳನ್ನು ಓದಿಸಿ ಭವಿಷ್ಯ ತಿಳಿದುಕೊಳ್ಳಲು ಪ್ರಯತ್ನಿಸಿದಳು. ಮಾಮೂಲಿ ಸ್ಥಿತ್ಯಂತರಗಳ ನಂತರ "ನಿನ್ನ ತಂದೆ ತಾಯಿಯರನ್ನೂ ಸರಿಯಾಗಿ ಸಮಾಧಿ ಮಾಡದಿದ್ದರೆ, ನೀನೆಂದೂ ಸುಖವಾಗಿ ಇರುವುದಿಲ್ಲ" ಎಂದು ಹೇಳಿದಳು.

ರೆಬೆಕಾ ತಲ್ಲಣಗೊಂಡಳು. ಕನಸಿನಲ್ಲಿಯದನ್ನು ನೆನಪಿಸಿಕೊಳ್ಳತೊಡಗಿದಳು. ಸಣ್ಣಹುಡುಗಿಯಾಗಿ ಒಂದು ಟ್ರಂಕನ್ನು, ತೂಗಾಡುವ ಕುರ್ಚಿಯನ್ನು, ಒಳಗಿನ ವಸ್ತುಗಳು ಏನೆಂದು ಅರಿಯದೆ ನೇತುಹಾಕಿಕೊಂಡ ಚೀಲದೊಂದಿಗೆ ಆ ಮನೆ ಪ್ರವೇಶಿಸಿದ್ದಳು. ಬೋಳು ತಲೆಯ ಬಿಳಿ ಬಟ್ಟೆ ಹಾಕಿದ, ಕಾಲರ್‌ಗೆ ಚಿನ್ನದ ಗುಂಡಿಗಳನ್ನು ಹಾಕಿದ್ದ ಮನುಷ್ಯನನ್ನು ನೆನಪಿಸಿಕೊಂಡಳು. ಸುಗಂಧ ಲೇಪಿತ ಕೈಗಳನ್ನುಳ್ಳ, ಪ್ರೀತಿಯ ಭಾವದೊಂದಿಗೆ, ಸುಂದರವಾಗಿದ್ದ ತರುಣಿಯಿದ್ದಳು. ಅವಳ ಜೊತೆ ಯಾವುದೇ ಹೋಲಿಕೆಯಿಲ್ಲದೆ ಅದುರುವ ಕೈಗಳ ಮನುಷ್ಯನೊಬ್ಬ ಅವಳ ತಲೆಗೆ ಹೂ ಮುಡಿಸುತ್ತಿದ್ದ

ಮತ್ತು ಅವಳನ್ನು ಮಧ್ಯಾಹ್ನದ ಸಮಯದಲ್ಲಿ ಊರಿನ ರಸ್ತೆಗಳಲ್ಲಿ ವಾಕಿಂಗ್‌ಗೆ ಕರೆದುಕೊಂಡು ಹೋಗುತ್ತಿದ್ದ.

"ನನಗೇನೂ ಅರ್ಥವಾಗುತ್ತಿಲ್ಲ" ಅವಳು ಹೇಳಿದಳು. ಪಿಲಾರ್ ತರ್ಸಿರಾ ಅದರ ಕಡೆ ಗಮನ ಕೊಡದೆ ಹೇಳಿದಳು. "ನನಗೂ ಹಾಗೇ ಅನಿಸುತ್ತೆ. ಆದರೆ ಕಾರ್ಡುಗಳಲ್ಲಿ ಮಾತ್ರ ಹಾಗಂತಲೇ ಹೇಳಿದೆ"

ರೆಬೆಕಾ ಇದನ್ನು ಎಷ್ಟು ಹಚ್ಚಿಕೊಂಡುಬಿಟ್ಟಿದ್ದಳೆಂದರೆ ಜೋಸ್ ಆರ್ಕಾಡಿಯೋ ಬ್ಯುಂಡಿಯಾಗೆ ತನಗೆ ಅನಿಸಿದ್ದನ್ನೆಲ್ಲ ಹೇಳಿಬಿಟ್ಟಳು. ಅವನು ಅಂಥಾದ್ದನ್ನೆಲ್ಲ ನಂಬಬೇಡವೆಂದು ಬೈದ. ಆದರೂ ಅವಳಿಗೆ ಗೊತ್ತಿಲ್ಲದಂತೆ ಅವಳ ಪೆಟ್ಟಿಗೆ ಬೀರುಗಳನ್ನೆಲ್ಲ ಹುಡುಕಿದ. ಪೀಠೋಪಕರಣಗಳನ್ನೆಲ್ಲ ಸರಿಸಿ ನೋಡಿದ. ಹಾಸಿಗೆಗಳು, ನೆಲದ ಹಾಸುಗಳು ಎಲ್ಲವನ್ನು ತಡಕಾಡಿ ಅಸ್ಥಿಗಳ ಚೀಲಕ್ಕಾಗಿ ಶೋಧಿಸಿದ. ಮನೆಯ ಪುನರ್ನಿರ್ಮಾಣದ ದಿನದಿಂದ ಅದನ್ನು ನೋಡಿದ್ದರ ನೆನಪಿತ್ತು. ಗುಟ್ಟಾಗಿ ಮೇಸ್ತ್ರಿಗಳನ್ನು ಕರೆಸಿ ಕೇಳಿದ. ಅವರಲ್ಲಿ ಒಬ್ಬಾತ, ಅದರ ಸದ್ದಿನಿಂದ ಬೇಸತ್ತು ಗೋಡೆಯಲ್ಲಿ ಸೇರಿಸಿಬಿಟ್ಟಿದ್ದ ವಿಷಯವನ್ನು ಹೇಳಿದ. ಕಡೆಗೆ ಗೋಡೆಯನ್ನು ಅಗೆದು ಆ ಚೀಲವನ್ನು ಹೊರತೆಗೆದು ಆ ದಿನವೇ ಸ್ಮಶಾನಕ್ಕೆ ಕೊಂಡೊಯ್ದು, ಮೆಲ್‌ಕಿಯಾಡ್ಸ್‌ನ ಸಮಾಧಿ ಕಲ್ಲಿನ ಪಕ್ಕದಲ್ಲಿಯೇ ಕಲ್ಲು ಗಿಲ್ಲು ಏನೂ ಇಲ್ಲದೆ ಹೂಳಿ ಬಿಟ್ಟರು. ಮನೆಗೆ ಬಂದದ್ದೇ, ಸ್ವಲ್ಪ ಸಮಯ, ಪ್ರುಡೆನ್ಷಿಯೋ ಆಗ್ವಿಲಾರ್‌ನ ನೆನಪಿನ ಭಾರದಿಂದ ಬಿಡುಗಡೆಗೊಂಡಂತೆ ಹಗುರಾದ ಅಡಿಗೆ ಮನೆ ಹೊಕ್ಕು ರೆಬೆಕಾಳ ಹಣೆಯನ್ನು ಮುದ್ದಿಸಿದ.

"ಕೆಟ್ಟ ಆಲೋಚನೆಗಳನ್ನೆಲ್ಲ ತಲೆಯಿಂದ ತೆಗೆದುಬಿಡು. ನೀನು ಸುಖವಾಗಿ ಇರುತ್ತೀಯ" ಎಂದ.

ಪಿಲಾರ್ ತರ್ಸಿರಾಗೆ ಉರ್ಸುಲಾ ಇದ್ದಾಗ ಮನೆ ಒಳಗೆ ಪ್ರವೇಶ ಅಸಾಧ್ಯವಾಗಿದ್ದದ್ದು, ಈಗ ರೆಬೆಕಾಳ ಜೊತೆಗಿನ ಸ್ನೇಹದಿಂದ ಸಾಧ್ಯವಾಯಿತು. ಯಾವಾಗ ಬೇಕಾದರೂ ಮುಕ್ತ ಪ್ರವೇಶಪಡೆದಳು. ತನ್ನ ಶಕ್ತಿಸಾಮರ್ಥ್ಯಗಳನ್ನೆಲ್ಲ ಮನೆಯ ಕೆಲಸಗಳಿಗೆ ವಿನಿಯೋಗಿಸಿದಳು. ಕಷ್ಟವಾದ ಕೆಲಸಗಳನ್ನೆಲ್ಲ ಮಾಡಿಮುಗಿಸುತ್ತಿದ್ದಳು. ಕೆಲವು ಸಲ ವರ್ಕ್‌ಷಾಪ್ ಒಳಗೂ ಹೋಗುತ್ತಿದ್ದಳು. ಆರ್ಕಾಡಿಯೋಗೆ ಛಾಯಾ ಚಿತ್ರ ತೆಗೆಯುವ ಪ್ಲೇಟುಗಳನ್ನು ಒಪ್ಪವಾಗಿಡಲು ಸಹಕಾರ ನೀಡುತ್ತಿದ್ದದ್ದು ಕಡೆಗೆ ಅವನನ್ನು ಗೊಂದಲದಲ್ಲಿ ಸಿಲುಕಿಸುತ್ತಿತ್ತು. ಅವಳು ಅವನಿಗೆ ತಲೆನೋವಾಗಿದ್ದಳು. ಕಂದುಬಣ್ಣದ ಅವಳ ಚರ್ಮ, ಹೊಗೆ ವಾಸನೆ, ವಿಕೃತವಾದ ಅವಳ ನಗೆ, ಡಾರ್ಕ್‌ರೂಮಿನಲ್ಲಿ ಅವನನ್ನು, ಕೆಲಸದ ಮಗ್ನತೆಯಿಂದ ವಿಮುಖವಾಗಿಸುತ್ತಿತ್ತು. ಇದರಿಂದ ಯಾವುದನ್ನೋ ಹುಡುಕಲು ಹೋಗಿ ಮತ್ತಾವುದೋ ವಸ್ತುಗಳಿಗೆ ಎಡವುತ್ತಿದ್ದ.

ಒಂದು ಸಂದರ್ಭದಲ್ಲಿ ಅರೆಲಿಯಾನೋ ತನ್ನ ಬೆಳ್ಳಿಯ ಕೆಲಸದಲ್ಲಿ ಮುಳುಗಿದ್ದಾಗ ಪಿಲಾರ್ ತರ್ಸಿರಾ ಅವನ ಕೆಲಸವನ್ನು ಮೆಚ್ಚುವುದಕ್ಕಾಗಿ ಮೇಜಿನ ಮೇಲೆ ವಾಲಿದಳು.

ಅದು ಆದದ್ದು ಆಕಸ್ಮಿಕ. ಅರೆಲಿಯಾನೋ ಪಿಲಾರ್ ತರ್ನೆರಾಳನ್ನು ನೋಡುವುದಕ್ಕೆ ಮೊದಲು ಆರ್ಕಾಡಿಯೋ ಡಾರ್ಕ್‌ರೂಮಿನಲ್ಲಿ ಇರುವುದನ್ನು ಖಚಿತಪಡಿಸಿಕೊಂಡ. ಅರೆಲಿಯಾನೋ ಕಣ್ಣೆತ್ತಿನೋಡಿದಾಗ ಅವಳ ಭಾವನೆ ಮಧ್ಯಾಹ್ನದ ಬೆಳಗಿನಂತೆ ಸ್ಪಷ್ಟವಾಗಿತ್ತು.

"ಸರಿ ಹೇಳು, ಏನಿದೆಲ್ಲ" ಅರೆಲಿಯಾನೋ ಹೇಳಿದ. ಪಿಲಾರ್ ತರ್ನೆರಾ ವಿಷಾದದ ನಗೆಯೊಂದಿಗೆ ತುಟಿಕಚ್ಚಿದಳು.

"ಯುದ್ಧದಲ್ಲಿ ಚೆನ್ನಾಗಿ ಮಾಡ್ತೀಯ, ಕಣ್ಣಿಟ್ಟ ಕಡೆ ಗುಂಡು ಹಾರಿಸ್ತೀಯ" ಎಂದಳು.

ಅವನಿಗೆ ಈ ಭವಿಷ್ಯದ ನುಡಿ ಸಮಾಧಾನ ತಂದಿತು. ಮತ್ತೆ ಅವನು, ಏನೂ ಆಗಿಲ್ಲವೆಂಬಂತೆ ತನ್ನ ಕೆಲಸಕ್ಕೆ ಹಿಂದಿರುಗಿದ. ಅವನ ದನಿಯಲ್ಲಿ ದೃಢತೆ ಕಾಣಿಸಿತು.

"ಅವನನ್ನು ಗುರುತಿಸುತ್ತೇನೆ. ನನ್ನ ಹೆಸರನ್ನು ಪಡೆಯುತ್ತಾನೆ" ಎಂದ.

ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಅಂತಿಮವಾಗಿ, ತಾನು ಹುಡುಕುತ್ತಿದ್ದುದನ್ನು ಪಡೆದ. ಗಡಿಯಾರವನ್ನು ನರ್ತಿಸುವ ಬೊಂಬೆಗೆ ಅಳವಡಿಸಿ, ನಿರಂತರವಾಗಿ, ತನ್ನದೇ ಸಂಗೀತ ಲಯಕ್ಕೆ ಅನುಗುಣವಾಗಿ ಮೂರು ದಿನಗಳ ಕಾಲ ಕುಣಿಯುವಂತೆ ಮಾಡಿದ. ಮೊದಲಿನ ತನ್ನ ಸಂಶೋಧನೆಗಳಿಗಿಂತ, ಈ ಶೋಧದಿಂದ ಅವನು ಬಹಳವಾಗಿ ಉತ್ಸಾಹಿತನಾಗಿದ್ದ. ತಿನ್ನುವುದನ್ನು ನಿಲ್ಲಿಸಿದ; ನಿದ್ದೆಯನ್ನು ಬಿಟ್ಟ. ರೆಬೆಕಾಳ ಜಾಗರೂಕತೆಯಿಂದಾಗಿ, ಎಂದಿಗೂ ವಾಸಿಯಾಗದ ಮತಿಭ್ರಮಣೆಗೆ ಒಳಗಾಗುವುದು ತಪ್ಪಿತು. ಕೊಠಡಿಯಲ್ಲಿ ಇಡೀ ರಾತ್ರಿಗಳನ್ನು, ಪೆಂಡುಲಮ್ ಸಿದ್ಧಾಂತವನ್ನು ಎತ್ತಿನಗಾಡಿಗಳಿಗೆ, ಕುಂಟೆ ಮತ್ತು ಯಾವುದೇ ಚಲನೆಯ ವಸ್ತುಗಳಿಗೆ ಅಳವಡಿಸುವ ವಿಧಾನವನ್ನು ಆಲೋಚಿಸುತ್ತಲೇ ಅಡ್ಡಾಡುತ್ತಿದ್ದ. ನಿದ್ದೆಯಿಲ್ಲದ ಕಾಯಿಲೆಯಿಂದಾಗಿ ಬಹಳವಾಗಿ ಎಷ್ಟು ಬಳಲಿದನೆಂದರೆ ಒಂದು ಬೆಳಿಗ್ಗೆ, ಬಿಳಿಕೂದಲಿನ ಮುದುಕನೊಬ್ಬ ತನ್ನ ಕೋಣೆಯೊಳಗೆ ಬಂದರೂ ಗುರುತಿಸಲಾರದೆ ಹೋಗಿದ್ದ. ಆತ ಪ್ರುಡೆನ್ಸಿಯೋ ಆಗ್ವಿಲಾರ್ ಕಡೆಗೆ ಅವನ ಗುರುತು ಹತ್ತಿದ ಮೇಲೆ, ಸತ್ತವರೂ ಮುದುಕರಾಗುತ್ತಾರೆಯೇ ಎಂದು ದಿಗ್ಭ್ರಮಿತನಾದ. ಈ ವಿಚಾರದಿಂದ ಬ್ಯುಂಡಿಯಾ ಕೊಂಚ ಹೆದರಿದ. "ಪ್ರುಡೆನ್ಸಿಯೋ, ನೀನು ಬಹಳ ದೂರದಿಂದ ಬಂದಿರುವೆಯಲ್ಲವೇ" ಎಂದು ಉದ್ಗರಿಸಿದ. ಸತ್ತ ಎಷ್ಟೋ ವರ್ಷಗಳ ಮೇಲೆ, ಜೀವಂತವಿರುವವರನ್ನು ಕಾಣುವ ತುಡಿತ ಅವರ ಸ್ನೇಹದ ಹಂಬಲದ ತೀವ್ರತೆ, ಸಾವಿನೊಳಗೇ ಇರುವ ಇನ್ನೊಂದು ಸಾವಿನ ಭೀತಿಯ ಒತ್ತಡ ಎಷ್ಟು ಬಲವಾಗಿತ್ತೆಂದರೆ ಕಡೆಗೆ ತನ್ನ ಶತ್ರುವನ್ನೂ ಪ್ರೀತಿಸತೊಡಗಿದ. ಅವನಿಗಾಗಿ ಹುಡುಕುವಲ್ಲಿ ಬಹಳ ಸಮಯವನ್ನು ಕಳೆದ. ರಿಯೋಹಚಾದ ಮೇಲ್ಕಣಿವೆಯಿಂದ ಬಂದ ಸತ್ತವರನ್ನೂ ಇವನಲ್ಲಿ ವಿಚಾರಿಸಿದ. ಜೌಗುಪ್ರದೇಶದಿಂದ ಬಂದವರನ್ನೂ ಕೇಳಿದ. ಆದರೆ ಅವರು ಯಾರೂ ಮಕೊಂಡೋದ ಬಗ್ಗೆಯೇ ಕೇಳಿರಲಿಲ್ಲವಾಗಿ, ಯಾರಿಗೂ ಹೇಳಲು ಸಾಧ್ಯವಾಗಿರಲಿಲ್ಲ. ಮೆಲ್‌ಕಿಯಾಡ್ಸ್ ಬಂದು, ಸಾವಿನ ಭೂಪಟದ ಮೇಲೆ ಒಂದು ಕಪ್ಪು ಗುರುತನ್ನು ಮಾಡುವವರೆಗೂ ಯಾರಿಗೂ ಆ ಊರು ಗೊತ್ತಿರಲಿಲ್ಲ. ಆಗ್ವಿಲಾರ್‌ನ ಜೊತೆ

ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಬೆಳಗಿನವರೆಗೆ ಮಾತನಾಡುತ್ತಿದ್ದ. ಎಚ್ಚರವಿದ್ದ ಕಾರಣ ದಣಿದಿದ್ದರಿಂದ, ಅರೆಲಿಯಾನೊ ವರ್ಕ್‌ಷಾಪ್ ಒಳಗೆ ಹೋದ. ಅವನನ್ನು "ಈ ದಿನ ಯಾವ ದಿನ" ಎಂದು ಕೇಳಿದ. ಅರೆಲಿಯಾನೋ ಮಂಗಳವಾರವೆಂದ. 'ನಾನೂ ಹಾಗೆ ಅಂದುಕೊಂಡಿದ್ದೆ. ಆದರೆ ತಕ್ಷಣ ಹೊಳೆಯಿತು, ಇದು ಇನ್ನೂ ಸೋಮವಾರ ನೆನ್ನೆಯ ದಿನದಂತೆ' ಎಂದ 'ಆಕಾಶ ನೋಡು, ಗೋಡೆಗಳನ್ನು ನೋಡು, ಬೆಗೋನಿಯಾಗಳನ್ನು ನೋಡು, ಇವತ್ತೂ ಕೂಡಾ ಸೋಮವಾರವೇ' ಎಂದ ಬ್ಯುಂಡಿಯಾ ಅವನ ಮತಿಭ್ರಮಿತ ಸ್ಥಿತಿ ಅರಿತಿದ್ದ ಅರೆಲಿಯಾನೋ ಅವನ ಮಾತನ್ನು ಲೆಕ್ಕಕ್ಕೆ ತೆಗೆದುಕೊಳ್ಳಲಿಲ್ಲ. ಮಾರನೆ ದಿನ, ಬುಧವಾರ, ಜೋಸ್ ಆರ್ಕಾಡಿಯೋ ಬ್ಯುಂಡಿಯಾ ವರ್ಕ್‌ಷಾಪ್‌ಗೆ ಹೋದ. "ಇದೊಂದು ದುರಂತ, ಗಾಳಿ ನೋಡು, ಸೂರ್ಯ ಬೆಳಕನ್ನು ನೋಡು, ಎಲ್ಲವೂ ನೆನ್ನೆಯಂತೆ, ಮೊನ್ನೆಯಂತೆ, ಇವತ್ತು ಕೂಡ ಸೋಮವಾರವೆ" ಎಂದ. ಆ ರಾತ್ರಿ ಪೀತ್ರೋ ಕ್ರೆಸ್ಪಿ ಜೋಸ್ ಬ್ಯುಂಡಿಯಾ ಅಂಗಳದಲ್ಲಿ ಒಬ್ಬನೇ ಕುಳಿತು ಪ್ರುಡೆನ್ಸಿಯಾ ಆಗ್ವಿಲಾರ್, ಮೆಲ್‌ಕಿಯಾಡ್ಸ್, ರೆಬೆಕಾಳ ತಂದೆತಾಯಿಗಳು ತನ್ನ ತಂದೆ ತಾಯಿ ಹೀಗೆ ತನಗೆ ನೆನಪಿದ್ದವರನ್ನೆಲ್ಲ, ನೆನಪಿಗೆ ತಂದುಕೊಂಡು, ಸಾವಿನಲ್ಲಿನ ಅವರ ಒಂಟಿತನಕ್ಕಾಗಿ ಅಳುತ್ತಿದ್ದುದನ್ನು ನೋಡಿದ. ಅವನು ಬ್ಯುಂಡಿಯಾಗೆ ಯಂತ್ರಚಾಲಿತ ಕರಡಿ ಬೊಂಬೆಯನ್ನು ಕೊಟ್ಟ. ಅದು ತನ್ನ ಹಿಂಗಾಲಿನ ಮೇಲೆ, ಬಿಗಿಯಾಗಿ ಬಿಗಿದ ಹಗ್ಗದ ಮೇಲೆ ನಡೆಯುತ್ತಿತ್ತು. ಆದರೂ ಅದು ಅವನನ್ನು ಆ ವಿಷಾದ ಭಾವದಿಂದ ವಿಮುಖವಾಗಿಸಲು ಸಾಧ್ಯವಾಗಲಿಲ್ಲ. ಅವನನ್ನು ಪೆಂಡುಲಮ್ ಪ್ರಾಜೆಕ್ಟ್ ಬಗ್ಗೆ ವಿಚಾರಿಸಿದ. ಅದನ್ನು ತನಗೆ ಕೆಲದಿನಗಳ ಹಿಂದೆ ವಿವರಿಸಿದ್ದನ್ನು ನೆನಪಿಸಿದ. ಬ್ಯುಂಡಿಯಾ ಅದನ್ನು ಮನುಷ್ಯರು ಹಾರಲು ಸಾಧ್ಯವಾಗುವಂತೆ ಮಾಡಬೇಕೆಂದಿದ್ದ. ಆದರೆ ಪೆಂಡುಲಮ್ ಏನನ್ನಾದರೂ ಯಾವುದೇ ವಸ್ತುವನ್ನಾದರೂ ಗಾಳಿಯಲ್ಲಿ ಮೇಲೆ ಎತ್ತಲು ಸಾಧ್ಯವಿದೆಯೇ ಹೊರತಾಗಿ ತಾನೇ ಮೇಲೇರಲು ಸಾಧ್ಯವಾಗುವುದಿಲ್ಲ ಎಂದು ಉತ್ತರಿಸಿದ. ಗುರುವಾರ ಮತ್ತೆ ಸಪ್ಪೆ ಮೋರೆಯೊಂದಿಗೆ ವರ್ಕ್‌ಷಾಪ್‌ನಲ್ಲಿ ಕಾಣಿಸಿಕೊಂಡ. "ಕಾಲಯಂತ್ರ ಮುರಿದು ಹೋಗಿದೆ" ಎನ್ನುತ್ತಾ ಬಿಕ್ಕುತ್ತ ಅಳತೊಡಗಿದ. "ಅಲ್ಲದೆ ಅಮರಾಂತ ಉರ್ಸುಲಾ ಬೇರೆ, ಬಹಳ ದೂರದಲ್ಲಿ ಇದ್ದಾರೆ!" ಅರೆಲಿಯಾನೋ ಬೈದು, ಅವನನ್ನು ನಿರ್ಲಕ್ಷಿಸಿದ. ಆರು ಗಂಟೆಗಳ ಕಾಲ ಅಲ್ಲಿನ ವಸ್ತುಗಳನ್ನು ಪರೀಕ್ಷಿಸ ತೊಡಗಿದ. ಅವುಗಳಲ್ಲಿ ನೆನ್ನೆಗಿಂತ ಏನಾದರೂ ವ್ಯತ್ಯಾಸಗಳು ಕಾಣಿಸುತ್ತಿವೆಯೇ ಮತ್ತು ವ್ಯತ್ಯಾಸವಿದ್ದಲ್ಲಿ ಕಾಲದ ಕ್ರಮಣಿಕೆ ಗೋಚರವಾಗುವುದೆಂದು, ಭಾವಿಸಿದ. ಇಡೀ ರಾತ್ರಿಯನ್ನು ಹಾಸಿಗೆಯ ಮೇಲೆ ಬಿದ್ದುಕೊಂಡು ಪ್ರುಡೆನ್ಸಿಯೋ ಆಗ್ವಿಲಾರ್, ಮೆಲ್‌ಕಿಯಾಡ್ಸ್, ಅಲ್ಲದೆ ಸತ್ತವರೆಲ್ಲರ ಹೆಸರು ಹಿಡಿದು ಕರೆಯುತ್ತಲೇ ಕಳೆದ. ಅವರು ಬಂದಲ್ಲಿ ತನ್ನ ದುಃಖವನ್ನು ಹಂಚಿಕೊಳ್ಳಬೇಕೆಂದಿದ್ದ. ಆದರೆ ಯಾರೊಬ್ಬರೂ ಬರಲಿಲ್ಲ. ಶುಕ್ರವಾರ ಬೆಳಿಗ್ಗೆ ಯಾರೊಬ್ಬರೂ ಏಳುವುದಕ್ಕೆ ಮೊದಲೇ ಎದ್ದು, ಪ್ರಕೃತಿಯನ್ನು ಗಮನಿಸತೊಡಗಿದ. ಅದು ಸೋಮವಾರವೆಂಬುದನ್ನು ಖಾತ್ರಿ ಮಾಡಿಕೊಳ್ಳುವವರೆಗೆ ಗಮನಿಸುತ್ತಲೇ ಇದ್ದ. ಆಮೇಲೆ ಬಾಗಿಲ ಬಳಿ ಇದ್ದ ಕಂಬಿಯನ್ನು ಎಳೆದುಕೊಂಡು ತನ್ನೆಲ್ಲ ಶಕ್ತಿಯನ್ನು ಪ್ರಯೋಗಿಸಿ, ಲ್ಯಾಬೋರೇಟರಿ ವಸ್ತುಗಳು, ಭಾವಚಿತ್ರ ಉಪಕರಣಗಳು, ಬೆಳ್ಳಿ ಕೆಲಸದ ವರ್ಕ್‌ಷಾಪ್ ಎಲ್ಲವನ್ನೂ ದೊಡ್ಡ ದನಿಯಲ್ಲಿ, ಅರ್ಥವಾಗದ ಬೈಗುಳೊಂದಿಗೆ

ಅರಚುತ್ತ ನುಜ್ಜುಗುಜ್ಜು ಮಾಡಿಹಾಕಿದ. ಉಳಿದದ್ದನ್ನು ನಿರ್ನಾಮಗೊಳಿಸುವ ಪ್ರಯತ್ನದಲ್ಲಿ ಇದ್ದಾಗ ಅರೆಲಿಯಾನೋ ನೆರೆಹೊರೆಯವರನ್ನು ಸಹಾಯಕ್ಕೆ ಕರೆದ. ಅವನನ್ನು ಹತೋಟಿಗೆ ತರಲು ಹತ್ತು ಜನ ಬೇಕಾಯಿತು. ಹದಿನಾಲ್ಕು ಮಂದಿ ಅವನನ್ನು ಕಟ್ಟಿಹಾಕಲು ಬೇಕಾಯಿತು. ಇಪ್ಪತ್ತು ಮಂದಿ ಅವನನ್ನು ಅಂಗಳಕ್ಕೆ ಎಳೆದುತಂದು ಮರಕ್ಕೆ ಕಟ್ಟಿಹಾಕಲು ಬೇಕಾಯಿತು. ಅವನನ್ನು ಅಲ್ಲಿ ಕಟ್ಟಿಹಾಕಿದ ಮೇಲೆ ವಿಚಿತ್ರ ಭಾಷೆಯಲ್ಲಿ ಏನೇನೋ ಮಾತಾಡತೊಡಗಿದ. ಬಾಯಿಯ ಸುತ್ತ ನೊರೆ ಹೊರ ಚೆಲ್ಲುತ್ತಿತ್ತು. ಉರ್ಸುಲಾ ಮತ್ತು ಅಮರಾಂತ ಹಿಂತಿರುಗಿದಾಗ ಅವನಿನ್ನೂ ಕೈಕಾಲುಗಳಿಂದ ಮರಕ್ಕೆ ಬಿಗಿದ ಸ್ಥಿತಿಯಲ್ಲಿಯೇ ಇದ್ದ. ಮಳೆಯಿಂದ ತೊಯ್ದು ಹೋಗಿದ್ದ. ನೋಡಿದವರಿಗೆ ಬಹಳ ಮುಗ್ಧನಂತೆ ಕಾಣಿಸುತ್ತಿದ್ದ. ಅವನೊಂದಿಗೆ ಮಾತಾಡಿದಾಗ, ಅವರನ್ನು ಗುರುತಿಸದಂತೆ ನಡೆದುಕೊಂಡ. ಯಾರಿಗೂ ಅರ್ಥವಾಗದಂತೆ ಅವರೊಂದಿಗೆ ಮಾತಾಡತೊಡಗಿದ. ಉರ್ಸುಲಾ ಮುಂಗೈ ಮುಂಗಾಲುಗಳ ಕಟ್ಟುಗಳನ್ನು ಬಿಚ್ಚಿ, ಸೊಂಟದ ಕಟ್ಟನ್ನು ಮಾತ್ರ ಹಾಗೇ ಬಿಟ್ಟಳು. ನಂತರ ಅವನಿಗಾಗಿ, ಮಳೆ ಬಿಸಿಲಿಂದ ರಕ್ಷಣೆ ಸಿಗಲು ಗರಿಗಳಿಂದ ಒಂದು ಗುಡಿಸಲನ್ನು ಕಟ್ಟಿದರು.

○

5

ಫಾದರ್ ನಿಕಾನೋರ್, ಹಜಾರದಲ್ಲಿ ನಿರ್ಮಿಸಿದ ವಿವಾಹ ವೇದಿಕೆಯಲ್ಲಿ ಅರೆಲಿಯಾನೊ ಮತ್ತು ರೆಮೆಡಿಯೋಸ್ ಮಾಸ್ಕೋಟ್ ವಿವಾಹವನ್ನು ಮಾರ್ಚ್ ತಿಂಗಳ ಭಾನುವಾರದಂದು ನೆರವೇರಿಸಲಾಯಿತು. ನಾಲ್ಕು ವಾರಗಳ ತಲ್ಲಣಗಳು ಕಡೆಯಾದ ನಂತರ ಮಾಸ್ಕೋಟ್ ಕುಟುಂಬ ಈ ವಿವಾಹವನ್ನು ಸಂಪನ್ನಗೊಳಿಸಿತು. ರೆಮೆಡಿಯೋಸ್ ತನ್ನ ಬಾಲ್ಯದ ನಡವಳಿಕೆಯನ್ನು ಪೂರ್ತಿಯಾಗಿ ಕಳೆದುಕೊಳ್ಳುವುದಕ್ಕೆ ಮೊದಲೇ ವಯಸ್ಸಿಗೆ ಬಂದದ್ದು ಮಾಸ್ಕೋಟ್ ಕುಟುಂಬಕ್ಕೆ ಒಂದು ಬಗೆಯ ಗಾಭರಿ ಹುಟ್ಟಿಸಿತ್ತು. ಅವಳ ತಾಯಿ ಪ್ರಾಯಕ್ಕೆ ಬರುವ ಲಕ್ಷಣಗಳನ್ನೆಲ್ಲ ವಿವರಿಸಿ ಎಚ್ಚರಿಕೆ ನೀಡಿದ್ದರೂ ಒಂದು ದಿನ ಅವಳ ಸೋದರಿಯರೆಲ್ಲ ಅರೆಲಿಯಾನೊ ಜೊತೆ ಮಾತಾಡುತ್ತಿದ್ದಾಗ, ರೆಮೆಡಿಯೋಸ್ ಮುಟ್ಟಿನ ಕಲೆಗಳನ್ನು ಹೊಂದಿದ್ದ ಒಳ ಉಡುಪನ್ನು ಹಿಡಿದು ತಂದು ಪ್ರದರ್ಶಿಸಿದಳು. ಮದುವೆ ಒಂದು ತಿಂಗಳಲ್ಲಿ ಎಂದು ನಿರ್ಧಾರವಾಗಿತ್ತು. ಅವಳಿಗೆ, ಹೇಗೆ ಸ್ವಚ್ಛವಾಗಿ ತೊಳೆದುಕೊಳ್ಳಬೇಕು, ಹೇಗೆ ಬಟ್ಟೆ ಹಾಕಿಕೊಳ್ಳಬೇಕು. ಮನೆಗೆಲಸಗಳನ್ನು ಹೇಗೆ ನಿರ್ವಹಿಸಬೇಕು ಎಂಬುದನ್ನೆಲ್ಲ ಕಲಿಸಿಕೊಡಲು ಸಾಕಷ್ಟು ಸಮಯವಿರಲಿಲ್ಲ. ರಾತ್ರಿ ಹೊತ್ತು ಹಾಸಿಗೆ ಒದ್ದೆ ಮಾಡಿಕೊಳ್ಳುತ್ತಿದ್ದ ಅಭ್ಯಾಸವನ್ನು ತಪ್ಪಿಸಲು ಕಾದ ಇಟ್ಟಿಗೆಗಳ ಮೇಲೆ ಮೂತ್ರ ವಿಸರ್ಜನೆ ಮಾಡಿಸಿದರು.

ವಿವಾಹದ ರಹಸ್ಯಗಳನ್ನೆಲ್ಲ ಮನವರಿಕೆ ಮಾಡಿಕೊಡಲು ಸಾಕಷ್ಟು ಕಷ್ಟ ಪಡಬೇಕಾಯಿತು. ರೆಮೆಡಿಯೋಸ್‌ಗೆ ಸ್ವಲ್ಪ ಗೊಂದಲವಾಗಿ ಕಾಣಿಸಿದರೂ ವಿವಾಹದ ರಾತ್ರಿಗಳ ವಿವರಗಳನ್ನು ಎಲ್ಲರೊಂದಿಗೂ ಹೇಳಿಕೊಳ್ಳಬೇಕೆಂದು ಬಯಸಿದಳು. ಅದು ಸಾಕಷ್ಟು ಶ್ರಮದಾಯಕವೇ. ಆದರೆ ಆ ರಾತ್ರಿ ಬರುತ್ತಿದ್ದಂತೆ, ರೆಮೆಡಿಯೋಸ್ ಅಂದಿನ ನಡವಳಿಕೆಯ ವಿಚಾರವಾಗಿ ಬಹಳ ಪರಿಣತಳಾಗಿದ್ದಳು. ಪ್ರಪಂಚದ ವ್ಯವಹಾರದ ಬಗ್ಗೆ ತನ್ನ ಸೋದರಿಯರಿಗೆ ತಿಳಿದಷ್ಟನ್ನೂ ತಿಳಿದುಕೊಂಡಿದ್ದಳು. ಡಾನ್ ಅಪೊಲಿನಾರ್ ಅವಳ ತೋಳು ಹಿಡಿದು ರಸ್ತೆಗೆ ಕರೆದು ತಂದ. ಬಾಣ, ಬಿರುಸು, ಬಾಜಾ ಬಜಂತ್ರಿಗಳ ಮಧ್ಯೆ ರಸ್ತೆಯಲ್ಲಿ ಮನೆ ಕಿಟಕಿಗಳಿಂದ ಕೈಚಾಚಿ ಶುಭಕೋರುತ್ತಿದ್ದವರಿಗೆ, ಪ್ರತಿಯಾಗಿ ತಾನೂ ಕೈಯಾಡಿಸಿ ಧನ್ಯವಾದ ಹೇಳುತ್ತಿದ್ದಳು. ಅರೆಲಿಯಾನೊ ಕಪ್ಪು ಉಡುಪನ್ನು, ಅದಕ್ಕೆ ಹೊಂದಿಕೆಯಾಗುವ ಬೂಟುಗಳನ್ನು, ಕೆಲಕಾಲದ ನಂತರ ಫೈರಿಂಗ್ ಸ್ಕ್ವಾಡ್ ಎದುರು ನಿಂತಾಗ ಹಾಕಿಕೊಳ್ಳಬೇಕಾದ ರೀತಿಯಲ್ಲಿ, ಹಾಕಿಕೊಂಡಿದ್ದ. ತನ್ನ ಬಾಗಿಲಲ್ಲಿ ವಧುವನ್ನು ಎದುರುಗೊಳ್ಳಬೇಕಾಗಿದ್ದ ಸಮಯದಲ್ಲಿ ಅರೆಲಿಯಾನೊ ಯಾಕೋ ಬಿಳಿಚಿಕೊಂಡಂತೆ, ಕೊರಳು ಬಿಗಿದುಕೊಂಡಂತೆ ಕಾಣಿಸುತ್ತಿದ್ದ. ಆದರೆ ಅವಳು ಮಾತ್ರ ಬಹಳ ಸಹಜವಾಗಿ, ಗಂಭೀರವಾಗಿ ಪ್ರಶಾಂತವಾಗಿ ನಡೆದುಕೊಂಡಳು. ಅರೆಲಿಯಾನೊ ಬೆರಳಿಗೆ ಹಾಕಬೇಕಿದ್ದ ಉಂಗುರವನ್ನು ಕೆಳಗೆ ಬೀಳಿಸಿದಾಗಲೂ ಸಂಯಮವನ್ನು ಕಳೆದುಕೊಳ್ಳಲಿಲ್ಲ. ಬಂದ ಅತಿಥಿಗಳ ಗುಜುಗುಜು, ಗೊಂದಲಗಳ ನಡುವೆಯೂ ರೆಮೆಡಿಯೋಸ್, ಉಂಗುರ ತೊಡಿಸಿಕೊಳ್ಳಲು ಸಿದ್ಧವಾದ ಬೆರಳಿನೊಂದಿಗೆ ಚಾಚಿದ್ದ ಕೈಯನ್ನು, ಅರೆಲಿಯಾನೊ ಉರುಳಿಹೋಗುತ್ತಿದ್ದ ಉಂಗುರವನ್ನು ಕಾಲಿನಿಂದ ತಡೆದು ತೆಗೆದುಕೊಂಡು ಬಂದು ತೊಡಿಸುವವರೆಗೆ ಹಾಗೆಯೇ ಇರಿಸಿಕೊಂಡಿದ್ದಳು. ಅವಳ ತಾಯಿಗೆ ಮತ್ತು ಅಕ್ಕಂದಿರಿಗೆ ಏನು ಅವಾಂತರ ಸೃಷ್ಟಿಸುತ್ತಾಳೊ ಎನ್ನುವ ಭಯವಿತ್ತು. ಆದರೆ ವಿವಾಹ ಸಮಾರಂಭ ಮುಗಿದ ಮೇಲೆ ಅವರೆ ಅವಳನ್ನು ಎತ್ತಿ ಮುತ್ತಿಟ್ಟರು. ಅಂದಿನಿಂದಲೇ ಅವರಿಗೆ, ಮಗಳಿಗಿದ್ದ ಜವಾಬ್ದಾರಿ, ಸಹಜ ಗಾಂಭೀರ್ಯ, ಆತ್ಮಸಂಯಮ ಎಂತಹ ಪ್ರತಿಕೂಲ ಪರಿಸ್ಥಿತಿಯಲ್ಲೂ, ಬಂದದ್ದನ್ನು ಎದುರಿಸುವ ಸಾಮರ್ಥ್ಯಗಳು ಇರುವುದು ಸ್ಪಷ್ಟವಾಗಿ ಗೋಚರಿಸಿದವು. ತನ್ನ ಸ್ವಯಂ ಪ್ರೇರಣೆಯಿಂದಲೇ ಮದುವೆಯ ಕೇಕನ್ನು ಕತ್ತರಿಸಿ ತುಂಡೊಂದನ್ನು ತಟ್ಟೆಯಲ್ಲಿ ಇರಿಸಿಕೊಂಡು ಫೋರ್ಕ್‌ನೊಂದಿಗೆ, ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಬಳಿಗೆ ತೆಗೆದುಕೊಂಡು ಹೋದಳು. ಮರಕ್ಕೆ ಬಿಗಿದಿದ್ದ ಮರದ ಸ್ಟೂಲ್ ಮೇಲೆ, ಹಾಸಿದ ಗರಿಗಳ ಅಡಿಯಲ್ಲಿ ಬಿಸಿಲು ಮಳೆಯಿಂದ ಪೇಲವವಾಗಿದ್ದ. ದೊಡ್ಡ ಗಾತ್ರದ ಮುದುಕ ಕೃತಜ್ಞತೆಯ ನಗೆಯೊಂದಿಗೆ, ತನ್ನ ಬೆರಳುಗಳ ಸಹಾಯದಿಂದ ಕೇಕಿನ ತುಂಡನ್ನು ಎತ್ತಿ ಬಾಯಿಗಿಟ್ಟುಕೊಂಡು, ಯಾರಿಗೂ ಅರ್ಥವಾಗದ ಒಂದು ದೇವರ ಸ್ತೋತ್ರವನ್ನು ಹೇಳಿದ. ಸೋಮವಾರದವರೆಗೆ ನಡೆದ ಈ ಸಮಾರಂಭದಲ್ಲಿ ಅಸುಖಿಯಾಗಿದ್ದವಳೆಂದರೆ ರೆಬೆಕಾ ಮಾತ್ರವೆ. ತನಗೆ ನಡೆಯಬೇಕಾಗಿದ್ದು, ನಿರಾಶೆಗೊಂಡಿದ್ದ ಸಮಾರಂಭವೇ ಅದಾಗಿತ್ತು.

ಅದೇ ದಿನವೇ ರೆಬೆಕಾಳ ಮದುವೆಯೂ ನಡೆಯಬೇಕೆಂದು ಉರ್ಸುಲಾ ಆಯೋಜಿಸಿದ್ದಳು. ಆದರೆ ಆ ಶುಕ್ರವಾರ ಪ್ರೀತ್ರೋ ಕ್ರೆಸ್ಪಿಗೆ, ಅವನ ತಾಯಿ ಸಾಯುವ ಸ್ಥಿತಿಯಲ್ಲಿ ಇದ್ದಾಳೆಂಬ ಸುದ್ದಿ ಬಂತು. ಇದರಿಂದಾಗಿ ಮದುವೆ ಮುಂದೂಡಲಾಯಿತು. ಪತ್ರ

ಕೈಸೇರಿದ ಒಂದು ಗಂಟೆಯೊಳಗೆ ಪೀತ್ರೋ ಕ್ರೆಸ್ಪಿ ಅಲ್ಲಿಂದ ಹೊರಟು ಕರಾರುವಾಕ್ಕಾಗಿ ಶನಿವಾರ ರಾತ್ರಿ ಆ ಪ್ರದೇಶದ ರಾಜಧಾನಿ ತಲುಪಿದ. ದಾರಿಯಲ್ಲಿ ತಾಯಿಯನ್ನು ಭೇಟಿಯಾಗಲಿಲ್ಲ. ಅರೆಲಿಯಾನೊ ಮದುವೆಯಲ್ಲಿ ಮತ್ತು ತನ್ನ ಮಗನ ಮದುವೆಯಲ್ಲಿ ಹಾಡಲೆಂದು ಅವನ ತಾಯಿ ಒಂದು ದುಃಖದ ಹಾಡನ್ನು ಬರೆದಿದ್ದಳು. ಅದನ್ನು ಅರೆಲಿಯಾನೊ ಮದುವೆಯಲ್ಲಿ ಹಾಡಲಾಯಿತು.

ತನ್ನ ಮದುವೆಯ ಸರಿಯಾದ ಸಮಯಕ್ಕೆ ಬರಬೇಕೆಂದು ಕಷ್ಟಪಟ್ಟು ಪಿದು ಕುದುರೆಗಳನ್ನು ಬದಲಾಯಿಸಿ ಬಂದದ್ದು, ಮಧ್ಯರಾತ್ರಿಯ ಸುಮಾರಿಗೆ, ಅದೂ ಅರೆಲಿಯಾನೊ ಮದುವೆಯ ಕಸಗುಡಿಸುವುದಕ್ಕಾಗಿ ಬಂದಂತಾಯಿತು. ಯಾರಿಂದ ಕಾಗದ ಬಂತೆಂಬುದು ಕಡೆಗೂ ತಿಳಿಯಲಿಲ್ಲ. ಉರ್ಸುಲಾ ಹೆದರಿಸಿ ಬೆದರಿಸಿ ಕೇಳಲು ಅಮರಾಂತ ಅಳುತ್ತಲೇ, ರೋಷದಿಂದ ಇನ್ನೂ ಮರಗೆಲಸದವರು ಬಿಚ್ಚದ ಮದುವೆ ಮಂಟಪದ ಎದುರು ತಾನು ಪತ್ರ ಬರೆದಿಲ್ಲವೆಂದು ಆಣೆ ಮಾಡಿ ನಿರಪರಾಧಿತನವನ್ನು ತೋರಿಸಿಕೊಂಡಳು.

ಫಾದರ್ ನಿಕಾನೋರ್‌ನನ್ನು ಡಾನ್ ಅಪೊಲಿನಾರ್ ಮಾಸ್ಕೋಟ್ ಮದುವೆ ಮಾಡಿಸಲೆಂದು ಜೌಗುಪ್ರದೇಶದಿಂದ ಕರೆತಂದಿದ್ದರು. ತನ್ನ ಮಂತ್ರಿಮಂಡಲದವರ ಕೃತಜ್ಞತೆಯಿಂದ ಬೇಸತ್ತ ವೃದ್ಧ ಈತನಾಗಿದ್ದ. ಚರ್ಮ ಸಡಿಲಗೊಂಡು ಮೂಳೆಗಳು ಕಾಣಿಸುತ್ತಿದ್ದವು. ಎದ್ದು ಕಾಣುತ್ತಿದ್ದ ಹೊಟ್ಟೆ, ನೋಡಲು ವಯಸ್ಸಾದ ದೇವರಂತೆ, ಕಾಣುತ್ತಿದ್ದ. ದೈವತ್ವದ ಕಳೆ, ಸರಳತೆ ಮತ್ತು ಒಳ್ಳೆತನಗಳಿಂದ ದತ್ತವಾಗಿತ್ತು. ಮದುವೆಯ ನಂತರ ಚರ್ಚಿಗೆ ಮರಳಲು ಯೋಚಿಸಿದ್ದ. ಆದರೆ ಮಕೊಂಡೋ ಜನರ ಶ್ರಮಜೀವನದಿಂದ ಅಚ್ಚರಿಗೊಂಡಿದ್ದ. ಅನೇಕ ಸಿಕ್ಕುಗಳ ನಡುವೆ, ನೈಸರ್ಗಿಕ ನಿಯಮಗಳಿಗೆ ಬದ್ಧರಾಗಿ, ಯಾವುದೇ ಧಾರ್ಮಿಕ ದೀಕ್ಷೆಗೆ ಒಳಗಾಗದೆ, ಧಾರ್ಮಿಕ ವಿಧಿನಿಯಮ, ಸಂಸ್ಕಾರಗಳಿಂದ ನಾಮಕರಣವಿಲ್ಲದೆ ಅಭಿವೃದ್ಧಿಯನ್ನು ಹೊಂದುತ್ತಿದ್ದುದನ್ನು ಗಮನಿಸಿದ. ಇದಕ್ಕಿಂತ ಯಾವ ಪ್ರದೇಶಕ್ಕೂ ದೈವದ ಅಗತ್ಯವಿಲ್ಲವೆಂದು ಭಾವಿಸಿ, ಮತ್ತೊಂದು ವಾರ ಅಲ್ಲಿಯೇ ಉಳಿದುಕೊಂಡು, ಅಲ್ಲಿನ ಜನರಿಗೆ ಕ್ರೈಸ್ತಮತದ ಬಗ್ಗೆ ತಿಳಿವಳಿಕೆ ನೀಡಲು, ಸಾಯುವವರಿಗೆ ಸಂಸ್ಕಾರವಿಧಿ ನಿರ್ವಹಿಸಲು ತನ್ನ ಅಗತ್ಯವಿದೆಯೆಂದು ಭಾವಿಸಿದ. ಆದರೆ ಯಾರೂ ಅವನ ಬಗ್ಗೆ ಗಮನಕೊಡಲಿಲ್ಲ. ಎಷ್ಟೋ ವರ್ಷಗಳಿಂದ ಯಾವುದೇ ಪಾದ್ರಿಯಿಲ್ಲದೆ ಬದುಕಿರುವುದಾಗಿಯೂ, ಆತ್ಮಗಳ ವಿಚಾರವಾಗಿ ತಾವು ನೇರವಾಗಿ ದೇವರೊಂದಿಗೆ ವ್ಯವಹರಿಸುವುದಾಗಿಯೂ, ಮೂಲಪಾಪದ ಕೇಡಿನಿಂದ ತಾವು ಪಾರಾಗಿರುವೆವೆಂದೂ ಆ ಪಾದ್ರಿಗೆ ಹೇಳುತ್ತಿದ್ದರು. ಬಹಿರಂಗವಾಗಿ ಉಪದೇಶ ನೀಡುವುದರಿಂದ ಬೇಸತ್ತು, ಪ್ರಪಂಚದಲ್ಲಿಯೇ ಅತಿದೊಡ್ಡದಾದ ಚರ್ಚನ್ನು ನಿರ್ಮಿಸಲು ಮನುಷ್ಯಾಕಾರದ ಸಂತರ ಚಿತ್ರಗಳನ್ನು, ಗಾಜಿನ ಕಿಟಕಿಗಳನ್ನು ಉಳ್ಳ ಚರ್ಚನ್ನು ನಿರ್ಮಿಸಿ, ರೋಮ್‌ನಿಂದ ಜನರು, ದೈವಶ್ರದ್ಧೆ, ಧರ್ಮಶ್ರದ್ಧೆ ಇಲ್ಲದ ಕಡೆಗೆ ಬಂದು ಧರ್ಮವನ್ನು, ದೈವವನ್ನು ಗೌರವಿಸುವಂತಾಗಲೆಂದು, ಪ್ರಯತ್ನಕ್ಕೆ ಮುಂದಾದ. ತಾಮ್ರದ ಪಾತ್ರೆಯೊಂದನ್ನು ಹಿಡಿದು ಭಿಕ್ಷಾಟನೆ ಮಾಡುತ್ತಾ ಎಲ್ಲೆಲ್ಲೂ ತಿರುಗಿದ. ಅವರು ಸಾಕಷ್ಟು

ಹಣಕೊಟ್ಟರು. ಅವನಿಗೆ ಇನ್ನೂ ಬೇಕೆನಿಸಿತು. ಯಾಕೆಂದರೆ, ನೀರಿನಲ್ಲಿ ಮುಳುಗಿದವರನ್ನು ತೇಲಿಸಲು, ಮೇಲೆ ಎಬ್ಬಿಸಲು ಬೃಹತ್ ಘಂಟೆಯನ್ನು ಚರ್ಚಿನಲ್ಲಿ ಇರಿಸಬೇಕಿತ್ತು. ಅವನು ಬೇಡಿ ಬೇಡಿ ಗಂಟಲು ಒಣಗಿಸಿಕೊಂಡ. ಅವನ ಮೂಳೆಗಳೆಲ್ಲ ಸದ್ದಿನಿಂದ ತುಂಬಿಹೋದವು. ಒಂದು ಶನಿವಾರ, ಬಾಗಿಲುಕೊಳ್ಳಲೂ ಸಾಕಾಗದಷ್ಟು ಹಣವನ್ನು ಸಂಗ್ರಹಿಸಿದ್ದ ಸಮಯದಲ್ಲಿ ಒಂದು ರೀತಿಯ ಹತಾಶ ಸ್ಥಿತಿಯನ್ನು ತಲುಪಿದ. ಚೌಕದಲ್ಲಿ ಒಂದು ವೇದಿಕೆಯನ್ನು ಸ್ವಲ್ಪಮಟ್ಟಿಗೆ ಸರಿಮಾಡಿದ. ಭಾನುವಾರದ ದಿನ, ಒಂದು ಸಣ್ಣ ಗಂಟೆಯನ್ನು ಕೈಲಿ ಹಿಡಿದು, ನಿದ್ರೆಯಿಲ್ಲದ ಅಂದಿನ ದಿನಗಳಲ್ಲಿಯಂತೆ, ಎಲ್ಲರನ್ನೂ, ಪ್ರಾರ್ಥನೆಗೆಂದು ಬಹಿರಂಗ ಸಭೆಗೆ ಬರಲು ಕರೆಯುತ್ತಿದ್ದ. ಕುತೂಹಲಕ್ಕಾಗಿ ಹಲವು ಮಂದಿ ಬಂದರು. ಮತ್ತೆ ಕೆಲವರು ನೆನಪಿನಿಂದ, ಮತ್ತೆ ಕೆಲವರು ದೇವರು ಇದನ್ನು ತನಗಾದ ವೈಯಕ್ತಿಕ ಅವಮಾನವೆಂದು ಭಾವಿಸಲಾರ ಎಂದು ಭಾವಿಸಿ ಬಂದರು. ಇದರಿಂದಾಗಿ ಬೆಳಿಗ್ಗೆ ಎಂಟುಗಂಟೆ ಸುಮಾರಿಗೆ ಊರಿನ ಅರ್ಧಜನ ಅಲ್ಲಿ ಸೇರಿದ್ದರು. ಪಾದ್ರಿ ನಿಕೊನಾರ್, ಬಿನ್ನವಿಸಿ, ಬಿನ್ನವಿಸಿ, ಕಟ್ಟಿಕೊಂಡಿದ್ದ ಗಂಟಲಿನಿಂದಲೇ ಸುವಾರ್ತೆಗಳನ್ನು ವಾಚಿಸಿದ. ಕಡೆಯಲ್ಲಿ, ಪ್ರಾರ್ಥನಾ ಸಭೆ ಮುಗಿಯುತ್ತಿರುವ ಸಮಯದಲ್ಲಿ ತನ್ನ ಕೈಗಳನ್ನೆತ್ತಿ ಜನರ ಗಮನ ಸೆಳೆದು ಹೇಳಿದ:–

"ಒಂದು ನಿಮಿಷ, ಈಗ ನಾವು ದೇವರ ಅಸ್ತಿತ್ವವನ್ನು ಪ್ರತ್ಯಕ್ಷ ಸಾಕ್ಷಿಯೊಂದಿಗೆ ನೋಡಲಿದ್ದೇವೆ" ಎಂದು ಹೇಳಿದ.

ಪ್ರಾರ್ಥನಾ ಸಭೆಯಲ್ಲಿ ಸಹಾಯ ಮಾಡಿದ್ದ ಹುಡುಗ, ಹೊಗೆಯಾಡುತ್ತಿದ್ದ ಚಾಕೊಲೇಟನ್ನು ಒಂದು ಬಟ್ಟಲಲ್ಲಿರಿಸಿ ತಂದಿದ್ದ. ಒಂದು ಕ್ಷಣವೂ ಉಸಿರಾಡದೆ ಕುಡಿದುಬಿಟ್ಟ. ಕರ್ಚೀಫಿನಿಂದ ತುಟಿಯೊರಸಿಕೊಂಡ. ತನ್ನೆರಡೂ ಕೈಗಳನ್ನು ಚಾಚಿದ, ಕಣ್ಣು ಮುಚ್ಚಿದ. ಆಮೇಲೆ ಪಾದ್ರಿ ನಿಕಾನೋರ್ ನೆಲದಿಂದ ಆರು ಅಂಗಲ ಮೇಲೆ ನಿಂತ. ಇದು ಎಲ್ಲರಿಗೂ ಒಪ್ಪಿಗೆಯಾಗುವ ಸಮರ್ಥನೆಯಾಗಿತ್ತು. ಎಲ್ಲರ ಮನೆಗಳಿಗೂ ಭೇಟಿಕೊಟ್ಟ ಅವರ ಮುಂದೆ ಚಾಕೊಲೇಟ್ ಕುಡಿದು ಮೇಲೇಳುವ ಪ್ರದರ್ಶನವನ್ನು ಪದೇ ಪದೇ ತೋರಿದ. ಅವನ ಜೊತೆ ಬಂದ ಸಹಾಯಕನ ಕೈಚೀಲದಲ್ಲಿ ಸಾಕಷ್ಟು ಹಣ ಸಂಗ್ರಹವಾಯಿತು. ಒಂದು ತಿಂಗಳ ಒಳಗೇ ಚರ್ಚ್‌ನ ನಿರ್ಮಾಣ ಪ್ರಾರಂಭವಾಯಿತು. ಜೋಸ್ ಆರ್ಕಾಡಿಯೋ ಬ್ಯುಂಡಿಯಾನನ್ನು ಹೊರತುಪಡಿಸಿ, ಪ್ರದರ್ಶನದ ಹಿಂದೆ ದೈವೀಶಕ್ತಿ ಇರುವುದನ್ನು ಯಾರೂ ಅನುಮಾನಿಸಲಿಲ್ಲ. ಮರದ ಸುತ್ತಲೂ ಒಂದು ಬೆಳಿಗ್ಗೆ ಜನ ಮತ್ತೊಮ್ಮೆ ಪ್ರದರ್ಶನವನ್ನು ನೋಡಲು ನೆರೆದಿದ್ದರು. ಬ್ಯುಂಡಿಯಾ ಕೂಡಾ ಮುಖದ ಮೇಲಿನ ಭಾವವನ್ನು ಒಂದಿಷ್ಟೂ ಬದಲಾಯಿಸದೆ ಅದನ್ನೇ ನೋಡುತ್ತಿದ್ದ. ಸ್ಟೂಲಿನ ಮೇಲೆ ಕುಳಿತಿದ್ದ ಅವನು ಪಾದ್ರಿ ನಿಕಾನೋರ್ ನೆಲದ ಮೇಲಿಂದ ಕುರ್ಚಿಯೊಂದಿಗೇ ಮೇಲೇರಿದಾಗ, ಅವನು ತನ್ನ ಭುಜ ಹಾರಿಸಿದ. ಲ್ಯಾಟಿನ್ ಭಾಷೆಯಲ್ಲಿ ಏನನ್ನೋ ಹೇಳಿದ. ಪಾದ್ರಿ ನಿಕಾನೋರ್ ಕೈಗಳನ್ನೆತ್ತಿದ. ಕುರ್ಚಿಯ ನಾಲ್ಕೂ ಕಾಲಿನೊಂದಿಗೆ ಒಂದೇ ಸಮಯಕ್ಕೆ ಅದು ನೆಲದ ಮೇಲೆ ಇಳಿಯಿತು. ಮತ್ತೆ ಬ್ಯುಂಡಿಯಾ ಏನನ್ನೋ ಹೇಳಿದ. ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಆಡುತ್ತಿದ್ದ ಭಾಷೆ ಲ್ಯಾಟಿನ್ ಎಂಬುದು ಆಗ ತಿಳಿದು ಬಂತು.

ಫಾದರ್ ನಿಕಾನೋರ್ ಆ ಸಂದರ್ಭವನ್ನು ತನ್ನ ಲಾಭಕ್ಕಾಗಿ ಬಳಸಿಕೊಂಡ. ತನಗೊಬ್ಬನಿಗೆ ಮಾತ್ರ ಅವನೊಂದಿಗೆ ಮಾತನಾಡಲು ಮತ್ತು ದೇವರಲ್ಲಿ ನಂಬಿಕೆ ಹುಟ್ಟಿಸಲು ಸಾಧ್ಯ ಎಂಬುದನ್ನು ಅರಿತ. ಪ್ರತಿ ಮಧ್ಯಾಹ್ನ ಆ ಮರದ ಬಳಿ ಬಂದು ಲ್ಯಾಟಿನ್ ಭಾಷೆಯಲ್ಲಿಯೇ ಉಪದೇಶವನ್ನು ನೀಡಲು ತೊಡಗಿದ್ದ. ಆದರೆ ಜೋಸ್ ಆರ್ಕಾಡಿಯೋ ಬ್ಯುಂಡಿಯಾ ಅವನ ಉಪದೇಶದ ಉಪಾಯಗಳನ್ನು, ಚಾಕೊಲೇಟ್ ಪವಾಡವನ್ನು ತಿರಸ್ಕರಿಸುತ್ತಲೇ ಇದ್ದ. ದೇವರ ಚಿತ್ರವನ್ನು ಸಾಕ್ಷಿಯಾಗಿ ತೋರಿಸುವಂತೆ ಬೇಡಿಕೆಯಿಟ್ಟ. ಫಾದರ್ ನಿಕಾನೋರ್ ಪದಕಗಳನ್ನು, ಚಿತ್ರಗಳನ್ನು ವೆರೋನಿಕಾದ ಪ್ರತಿಕೃತಿಯನ್ನೂ ತೋರಿದ. ಆದರೆ ಬ್ಯುಂಡಿಯಾ ಅವೆಲ್ಲವನ್ನೂ ಕಲಾತ್ಮಕ ವಸ್ತುಗಳೇ ಹೊರತು ವೈಜ್ಞಾನಿಕ ಆಧಾರವಿಲ್ಲದ್ದು ಎಂದು ತಿರಸ್ಕರಿಸಿದ. ಅವನು ಎಷ್ಟು ಹಠಮಾರಿಯಾಗಿದ್ದನೆಂದರೆ ಕಡೆಗೆ ಫಾದರ್ ಅವನನ್ನು ಬದಲಾಯಿಸುವ, ದೈವ ಶ್ರದ್ಧೆಮೂಡಿಸುವ ಪ್ರಯತ್ನಗಳನ್ನೆಲ್ಲ ಬಿಟ್ಟ. ಕೇವಲ ಮಾನವೀಯ ದೃಷ್ಟಿಯಿಂದ ಅವನನ್ನು ಆಗಾಗ ಭೇಟಿಯಾಗುತ್ತಿದ್ದ. ಈಗ ಜೋಸ್ ಆರ್ಕಾಡಿಯೋ ಬ್ಯುಂಡಿಯಾನ ಸರದಿ. ತನ್ನ ವೈಚಾರಿಕ, ತರ್ಕಬದ್ಧ ತಂತ್ರಗಳಿಂದ ಫಾದರ್ ನಿಕಾನೋರ್‌ನ ನಂಬಿಕೆಯನ್ನೇ ಮುರಿಯುವ ಸಾಹಸಕ್ಕೆ ಮುಂದಾದ. ಒಂದು ದಿನ ಫಾದರ್ ನಿಕಾನೋರ್ ಚದುರಂಗದಾಟದ ಹಾಸನ್ನು ತಂದು ಆಡಲು ಬ್ಯುಂಡಿಯಾನನ್ನು ಕರೆದ. ಆದರೆ ಬ್ಯುಂಡಿಯಾ ಒಪ್ಪಲಿಲ್ಲ. ಯಾಕೆಂದರೆ ಅವನ ದೃಷ್ಟಿಯಲ್ಲಿ, ಶತ್ರುಗಳಿಬ್ಬರು ಆಟದ ನಿಯಮಗಳಿಗೆ ಒಟ್ಟಾಗಿ ಒಪ್ಪಿ ಆಡುವುದು ಸಾಧ್ಯವೇ ಇರಲಿಲ್ಲ. ಫಾದರ್ ನಿಕಾನೋರ್ ಚದುರಂಗವನ್ನು ಆ ರೀತಿ ಆಡುವುದನ್ನು ನೋಡಿಯೇ ಇರಲಿಲ್ಲ. ಅದಕ್ಕಿಂತ ಹೆಚ್ಚಾಗಿ ಜೋಸ್ ಆರ್ಕಾಡಿಯೋ ಬ್ಯುಂಡಿಯಾನ ಸ್ಪಷ್ಟನಿಲುವಿಗೆ ಬೆರಗಾಗಿದ್ದ. ಇಂಥವನನ್ನು ಮರಕ್ಕೆ ಕಟ್ಟಿಹಾಕುವುದು ಹೇಗೆ ಸಾಧ್ಯವಾಯಿತೆಂದು ಅವನನ್ನು ಕೇಳಿದ. "ಯಾಕೆಂದರೆ ನಾನೊಂದು ಥರ ಹುಚ್ಚನಾಗಿದ್ದೆ" ಎಂದ.

ಆ ನಂತರ ತನ್ನ ಪಾಡಿಗೆ ತಾನು ತನ್ನ ಧರ್ಮಶ್ರದ್ಧೆಯಲ್ಲಿ ಮುಳುಗಿ ಅಲ್ಲಿಗೆ ಬರುವುದನ್ನು ನಿಲ್ಲಿಸಿದ. ಚರ್ಚಿನ ನಿರ್ಮಾಣದ ಕೆಲಸದಲ್ಲಿ ತೊಡಗಿಸಿಕೊಂಡ. ರೆಬೆಕಾಳಿಗೆ ಹೊಸ ಭರವಸೆ ಮೂಡಿದಂತಾಯಿತು. ಚರ್ಚ್ ಕಟ್ಟುವ ಕೆಲಸದ ಮುಕ್ತಾಯದ ಮೇಲೆ ಅವಳ ಭವಿಷ್ಯ ನಿಂತಿತ್ತು. ಒಂದು ಭಾನುವಾರ ಫಾದರ್ ನಿಕಾನೋರ್ ಮನೆಯವರೊಂದಿಗೆ ಕೂಡಿ ಊಟ ಮಾಡುತ್ತಿದ್ದಾಗ ಫಾದರ್ ಧಾರ್ಮಿಕ ಸಮಾರಂಭಗಳ ಸಂಭ್ರಮ, ವೈಭವಗಳ ಬಗ್ಗೆ ಮಾತಾಡುತ್ತಿದ್ದಾಗ, ಅಮರಾಂತ "ಎಲ್ಲರಿಗಿಂತಲೂ ಅದೃಷ್ಟವಂತೆ ಎನಿಸಿಕೊಳ್ಳುವವಳು ರೆಬೆಕಾಳಾಗಿರುತ್ತಾಳೆ" ಎಂದು ಹೇಳಿದಳು.

ರೆಬೆಕಾಳಿಗೆ ಅವಳ ಮಾತಿನ ಅಂತರಾರ್ಥ ಹೊಳೆದಿರಲಿಲ್ಲವಾಗಿ ಅಮರಾಂತಳೇ ನಿಷ್ಕಲ್ಮಷ ನಗೆಯೊಂದಿಗೆ,

"ನಿನ್ನ ಮದುವೆಯ ಮೂಲಕ ನೀನೇ ಚರ್ಚಿನ ಉದ್ಘಾಟನೆ ಮಾಡುತ್ತೀಯ" ಎಂದು ವಿವರಿಸಿದಳು.

ರೆಬೆಕಾ, ಯಾವುದೇ ರೀತಿಯ ಟೀಕೆ ಮಾಡಲಿಲ್ಲ. ಚರ್ಚಿನ ನಿರ್ಮಾಣದ ರೀತಿಯನ್ನು ನೋಡಿದರೆ, ಇನ್ನು ಹತ್ತು ವರ್ಷಗಳಾದರೂ ಅದು ಮುಗಿಯುವ ಹಾಗೆ ಕಾಣಲಿಲ್ಲ. ಆದರೆ

ಫಾದರ್ ಹಾಗೆ ಭಾವಿಸಲಿಲ್ಲ. ಹೆಚ್ಚುತ್ತಿದ್ದ ಧಾರ್ಮಿಕ ಶ್ರದ್ಧೆಯಿಂದಾಗಿ ಉದಾರವಾದ ದೇಣಿಗೆ ಸಂಗ್ರಹವಾಗುತ್ತಿದ್ದುದರಿಂದ ಭರವಸೆಯ ಲೆಕ್ಕಾಚಾರಗಳನ್ನು ಮಾಡಲು ಸಾಧ್ಯವಾಗಿತ್ತು. ಸಾತ್ವಿಕ ರೋಷದಿಂದ ಮೌನವಾಗಿದ್ದ ರೆಬೆಕಾ ಊಟ ಮುಗಿಸಲಿಲ್ಲ. ಉರ್ಸುಲಾ ಅಮರಾಂತಳ ವಿಚಾರವನ್ನು ನಿಜಮಾಡಲು ಮತ್ತು ಚರ್ಚಿನ ಕೆಲಸ ಆದಷ್ಟು ಬೇಗ ಮುಗಿಯಲು ಸಾಕಷ್ಟು ದೊಡ್ಡ ಮೊತ್ತವನ್ನು ನೀಡಿದಳು. ಫಾದರ್ ನಿಕಾನೋರ್‌ಗೆ ಇದೇ ಮೊತ್ತದ ಮತ್ತೊಂದು ದೇಣಿಗೆ ಲಭಿಸಿದಲ್ಲಿ ಚರ್ಚ್ ನಿರ್ಮಾಣ ಕೇವಲ ಮೂರು ವರ್ಷಗಳಲ್ಲಿ ಮುಗಿಯುತ್ತದೆ ಅನಿಸಿತು. ಅಂದಿನಿಂದ ರೆಬೆಕಾ ಅಮರಾಂತಳಿಗೆ ಏನನ್ನೂ ಹೇಳುತ್ತಿರಲಿಲ್ಲ. ಯಾಕೆಂದರೆ ಅವಳು ಹೇಳಿದ್ದರಲ್ಲಿ ಯಾವುದೇ ಮುಗ್ಧತೆ ಪ್ರಾಮಾಣಿಕತೆ ಇರಲಿಲ್ಲವೆಂಬುದನ್ನು ಅರ್ಥಮಾಡಿಕೊಂಡಿದ್ದಳು. ಆ ದಿನ ರಾತ್ರಿ ಇಬ್ಬರ ನಡುವೆ ವಾಗ್ವಾದ ಪ್ರಾರಂಭವಾದಾಗ "ಅಂಥ ಗಂಭೀರವಾದದ್ದನ್ನು ನಾನೆಂದೂ ಮಾಡುತ್ತಿರಲಿಲ್ಲ, ಅಲ್ಲದೆ ಆ ರೀತಿ ಮಾಡುವುದರಿಂದ ಮೂರು ವರ್ಷ ನಿನ್ನನ್ನು ಕೊಲ್ಲ ಬೇಕಾಗುವುದಿಲ್ಲ" ರೆಬೆಕಾ ಆ ಸವಾಲನ್ನು ಸ್ವೀಕರಿಸಿದಳು.

ಪೀತ್ರೋ ಕ್ರೆಸ್ಪಿಗೆ, ಮತ್ತೆ ಮದುವೆ ಮುಂದೂಡಿದ್ದು ಭಯಂಕರ ನಿರಾಶೆಗೆ ತಳ್ಳಿದಂತೆನಿಸಿತು. ಆದರೆ ರೆಬೆಕಾ ತನ್ನ ಪ್ರೀತಿಯ ಪ್ರಾಮಾಣಿಕತೆಯನ್ನು ಸಾಬೀತುಪಡಿಸಿದಳು. "ನೀನು ಯಾವಾಗ ಬಯಸಿದರೆ ಆಗ ನಿನ್ನೊಂದಿಗೆ ಓಡಿಬರಲು ನಾನು ಸಿದ್ಧಳಿದ್ದೇನೆ" ಎಂದು ಹೇಳಿದಳಾದರೂ ಪೀತ್ರೋ ಕ್ರೆಸ್ಪಿ ಅಂತಹ ಸಾಹಸಕ್ಕೆ ಮುಂದಾಗುವ ಮನುಷ್ಯನಾಗಿರಲಿಲ್ಲ. ತನ್ನ ಭಾವೀ ಪತ್ನಿಯಷ್ಟು ಧೈರ್ಯವಂತನಾಗಿರಲಿಲ್ಲ.

ಒಂದು ಸಲ ಕೊಟ್ಟ ಮಾತನ್ನು ಗೌರವಿಸಬೇಕು. ಅಲ್ಲದೆ ಅದನ್ನು ಹಣದಂತೆ ಪೋಲುಮಾಡಬಾರದು ಎಂದು ನಂಬಿದವನಾಗಿದ್ದ. ಆಗ ರೆಬೆಕಾ ಧೈರ್ಯತಂದುಕೊಂಡು ಹೆಜ್ಜೆ ಮುಂದಿಟ್ಟಳು. ಜೋರಾಗಿ ಗಾಳಿ ಬೀಸಿ ದೀಪಗಳು ಆರಿಹೋಗಿ ಕತ್ತಲು ಕವಿದಿದ್ದ ಸಂದರ್ಭದಲ್ಲಿ ನಡುಮನೆಯಲ್ಲಿ, ಆ ಇಬ್ಬರು ಪ್ರೇಮಿಗಳು ಮುತ್ತಿಡುತ್ತಿದ್ದುದನ್ನು ಉರ್ಸುಲಾ ನೋಡಿಬಿಟ್ಟಳು. ಪೀತ್ರೋ ಕ್ರೆಸ್ಪಿ ತಬ್ಬಿಬ್ಬಾಗಿ ಆಧುನಿಕ ಕಾಲದಲ್ಲಿ ದೀಪಗಳ ಗುಣಮಟ್ಟದ, ವ್ಯವಸ್ಥೆಯ ಕೊರತೆಯ ಬಗ್ಗೆ ವಿವರಿಸುತ್ತಾ, ದೀಪದ ಸರಿಯಾದ ವ್ಯವಸ್ಥೆ ಮಾಡುವಲ್ಲಿ ಉರ್ಸುಲಾಳಿಗೆ ಸಹಾಯ ಮಾಡಿದ. ಆದರೆ ಮತ್ತೆ ದೀಪಗಳು ಕೈಕೊಟ್ಟಾಗ, ಉರ್ಸುಲಾ, ರೆಬೆಕಾ ತನ್ನ ಪ್ರಿಯಕರನ ತೊಡೆಯ ಮೇಲೆ ಕುಳಿತಿದ್ದುದನ್ನು ನೋಡಿದಳು. ಈ ಬಾರಿ ಯಾವುದೇ ವಿವರಣೆಯನ್ನು ಒಪ್ಪಿಕೊಳ್ಳಲಿಲ್ಲ. ಬೇಕರಿಯ ಜವಾಬ್ದಾರಿಯನ್ನು ಇಂಡಿಯನ್ ಹೆಂಗಸಿಗೆ ಒಪ್ಪಿಸಿ, ತೂಗುವ ಕುರ್ಚಿಯಲ್ಲಿ ಕುಳಿತು, ಹದಿವಯಸ್ಸಿನವರು ಬಂದು ಹೋಗುವವರನ್ನು ಗಮನಿಸುತ್ತಿದ್ದಳು. ತಾನು ಹುಡುಗಿಯಾಗಿದ್ದಾಗಿನ ವರಸೆಗಳು ಈಗ ಹಳೆಯದಾಗಿದ್ದವು. ಬಂದು ಹೋಗುವವರನ್ನು ಗಮನಿಸಿ ಬೇಸರಗೊಂಡಿದ್ದ ಉರ್ಸುಲಾ ಆಕಳಿಸಿದ್ದನ್ನು ನೋಡಿ ರೆಬೆಕಾ "ಪಾಪದ ಅಮ್ಮ. ಸತ್ತಾಗ ಸನ್ಮಾನ ಸ್ವೀಕರಿಸಲು ಹೋಗುವಾಗಲೂ ಈ ಕುರ್ಚಿಯೊಂದಿಗೇ ಹೋಗುತ್ತಾಳೆ" ಎಂದಳು. ಮೂರು ತಿಂಗಳ ಕಾಲ ದೃಷ್ಟಿ ಕಾವಲಿನಲ್ಲಿ ನಡೆದ ಪ್ರೀತಿ, ತನ್ನ ಮೇಲ್ವಿಚಾರಣೆಯಲ್ಲಿ ತೀರಾ ನಿಧಾನ ಗತಿಯಲ್ಲಿ ಸಾಗುತ್ತಿದ್ದ ಚರ್ಚಿನ ನಿರ್ಮಾಣ ಅವನಿಗೆ ಸಾಕೆನಿಸಿತ್ತು. ನಿರ್ಮಾಣಕ್ಕೆ ವೇಗ ತರಲು

ಪೀತ್ರೋ ಕ್ರೆಸ್ಪಿ, ಅದನ್ನು ಪೂರೈಸಲು ಬೇಕಾಗುವ ಖರ್ಚಿಗೆ ಹಣ ನೀಡಿದ. ಅಮರಾಂತ ಸಹನೆ ಕಳೆದುಕೊಳ್ಳಲಿಲ್ಲ.

ಅಮರಾಂತ ಒಂದು ದಿನ ತನ್ನ ಗೆಳತಿಯರೊಂದಿಗೆ ನಡುಮನೆಯಲ್ಲಿ ಕಸೂತಿ ಮಾಡುತ್ತಿದ್ದಾಗ, ಹೊಸ ಹಾದಿಗಳ ಬಗ್ಗೆ ಯೋಚಿಸಿದಳು. ಅತ್ಯಂತ ಪರಿಣಾಮಕಾರಿಯೆಂದು ಭಾವಿಸಿದ್ದ ಒಂದು ಉಪಾಯ ಹಾಳಾಗಿ ಹೋಗಿತ್ತು. ಅದೇನೆಂದರೆ ಮದುವೆಯ ಉಡುಪಿನ ಕೆಳಗೆ ರೆಬೆಕಾ ಇರಿಸಿದ್ದ ನುಸಿಗುಳಿಗೆಗಳನ್ನು, ಅಮರಾಂತ ಚರ್ಚ್ ನಿರ್ಮಾಣ ಮುಗಿಯಲು ಎರಡು ತಿಂಗಳು ಇದೆ ಎನ್ನುವಾಗ, ತೆಗೆದು ಬಿಟ್ಟಿದ್ದಳು. ಆದರೆ ರೆಬೆಕಾ ಅಮರಾಂತ ಕಣ್ಣಿಗೆ ಬೀಳುವ ಮೊದಲೇ, ಮದುವೆ ಹತ್ತಿರ ಬರುತ್ತಿದ್ದಂತೆ, ಮದುವೆಯ ಉಡುಪು ಸಿದ್ಧವಾಗಿರಬೇಕೆಂದು ಆತುರಪಡುತ್ತಿದ್ದಳು. ಉಡುಪನ್ನು ಸುತ್ತಿಟ್ಟ ಕಾಗದವನ್ನು ಬಿಚ್ಚಿದಾಗ, ಉಡುಪಿಗೆ ರಕ್ಷಾಕವಚವಾಗಿ ಸುತ್ತಿದ ಬಟ್ಟೆ ಬಿಡಿಸಿದಾಗ, ಉಡುಪಿನ ಹೊಲಿಗೆ ದಾರಗಳು, ಕಿತ್ತಲೆ ಬಣ್ಣದ ಬಟ್ಟೆ ಎಲ್ಲವೂ ತೂತು ತೂತಾಗಿತ್ತು. ನುಸಿಗುಳಿಗೆಗಳನ್ನು ಹಾಕಿರಿಸಿದ್ದರೂ ಅವುಗಳಿಗೆ ಆದ ಗತಿ ಸಹಜವೆಂಬಂತೆ ಕಾಣಿಸಿದ್ದರಿಂದ ಅಮರಾಂತಳನ್ನು ದೂರುವ ಸಾಹಸಕ್ಕೆ ಹೋಗಲಿಲ್ಲ. ಮದುವೆಗೆ ಒಂದು ತಿಂಗಳಿಗಿಂತಲೂ ಕಡಿಮೆ ಅವಧಿ ಇತ್ತು. ಆದರೆ ಅಂಪಾರೊ ಮಾಸ್ಕೋಟ್ ಒಂದು ವಾರದೊಳಗಾಗಿ ಹೊಸ ಉಡುಪನ್ನು ಸಿದ್ಧಗೊಳಿಸಿಕೊಡುವುದಾಗಿ ಭರವಸೆಕೊಟ್ಟ. ಅಂಪಾರೊ ಹೊಲಿದ ಉಡುಪನ್ನು ಒಂದು ಬಟ್ಟೆಯಲ್ಲಿ ಸುತ್ತಿ, ಹೆಣೆದ, ಹೊಲಿದದ್ದೆಲ್ಲವೂ ಸರಿಯಾಗಿದೆಯೇ ಎಂದು ಪರೀಕ್ಷಿಸಿ ನೋಡಲು ಮಳೆಗಾಲದ ಒಂದು ಮಧ್ಯಾಹ್ನ ಮನೆಗೆ ಬಂದ. ಅಮರಾಂತಳಿಗೆ ಕೂಡಲೆ ಮೂರ್ಛೆ ಬರುವಂತಾಯಿತು. ರೆಬೆಕಾ ಫಿಟ್ಟಿಂಗ್ ಸರಿಯಾಗಿದೆಯೇ ಇಲ್ಲವೇ ಎಂದು ಪರೀಕ್ಷಿಸಬೇಕಿತ್ತು. ತನ್ನ ದನಿಯನ್ನೇ ಕಳೆದುಕೊಂಡಳು. ಬೆನ್ನುಹುರಿಯಲ್ಲಿ ಚಳಿಕಾಣಿಸಿಕೊಂಡಿತು. ಇಂತಹ ಅವಕಾಶಕ್ಕಾಗಿ ಬಹಳ ತಿಂಗಳು ಕಾದಿದ್ದಳು. ಈ ಬಾರಿ, ರೆಬೆಕಾಳ ವಿವಾಹಕ್ಕೆ ಸರಿಯಾದ ವಿಘ್ನ ಸನ್ನಿವೇಶವನ್ನು ಯೋಚಿಸಲೇಬೇಕಿತ್ತು. ಒಂದಂತು ಖಚಿತವಾಗಿತ್ತು. ಎಲ್ಲ ಪ್ರಯತ್ನಗಳೂ ಸೋತಾಗ, ಕಡೆಯದಾಗಿ ಅವಳಿಗೆ ವಿಷಕೊಡಲು ಧೈರ್ಯ ಬಂದಿತು. ಆ ದಿನ ಮಧ್ಯಾಹ್ನ ರೆಬೆಕಾ ತಾನು ಧರಿಸಿದ್ದ ಬಟ್ಟೆಯಿಂದ ಸೆಕೆಯನ್ನು ತಾಳಲಾರದೆ ಉಸಿರುಗಟ್ಟಿದಂತಾದಾಗ, ಅಂಪಾರೊ, ಬಹಳ ತಾಳ್ಮೆಯಿಂದ ಸೂಜಿಗಳನ್ನು ನೆಡುತ್ತಿದ್ದ. ಅಮರಾಂತ ಕಸೂತಿ ಕೆಲಸದಲ್ಲಿ ತೊಡಗಿದ್ದಾಗ ಏಕಾಗ್ರತೆ ಕಳೆದುಕೊಂಡು ಎಲ್ಲೆಲ್ಲಿಯೋ ಸೂಜಿ ಚುಚ್ಚುತ್ತಾ ತನ್ನ ಬೆರಳನ್ನೇ ಚುಚ್ಚಿಕೊಂಡಳು. ಆದರೆ ಆ ದಿನ ಮದುವೆಗೆ ಮೊದಲಿನ ಕಡೆಯ ಶುಕ್ರವಾರದಂದು, ಕಾಫಿಯಲ್ಲಿ ವಿಷ ಬೆರೆಸುವುದೆಂದು ನಿರ್ಧರಿಸಿದಳು.

ಅನಿರೀಕ್ಷಿತವಾದ ಒಂದು ದೊಡ್ಡ ಅಡಚಣೆಯಿಂದಾಗಿ ಮದುವೆ ಮತ್ತೊಮ್ಮೆ ಅನಿಶ್ಚಿತಕಾಲಕ್ಕೆ ಮುಂದೂಡಲಾಯಿತು. ಮದುವೆ ದಿನ ಗೊತ್ತಾದ ಒಂದು ವಾರ ಮೊದಲು ಪುಟ್ಟ ರೆಮೆಡಿಯೋಸ್ ರಾತ್ರಿಯ ಮಧ್ಯದಲ್ಲಿ ಕುಡಿದಿದ್ದ ಬಿಸಿ ಮಾಂಸದ ಸಾರನ್ನು ಕಾರಿಕೊಂಡು ಒದ್ದೆಮುದ್ದೆಯಾಗಿ ಸ್ಫೋಟದಂತಹ ತೇಗಿನಿಂದಲೂ ಎಚ್ಚರಗೊಂಡಳು. ಮೂರು ದಿನಗಳ ನಂತರ ತನ್ನ ರಕ್ತವೇ ವಿಷವಾಗಿ ಸಾವನ್ನಪ್ಪಿದಳು. ಅಮರಾಂತ

ಅಪರಾಧಿ ಪ್ರಜ್ಞೆಗೆ ಒಳಗಾದಳು. ದೇವರನ್ನು ತನಗೇ ಏನಾದರೂ ಭಯಂಕರವಾದದ್ದು ಸಂಭವಿಸಲಿ, ಅದರಿಂದ ರೆಬೆಕಾಳಿಗೆ ವಿಷಹಾಕುವ ಕೆಲಸ ತಪ್ಪಿಹೋಗಲಿ, ಎಂದು ಬೇಡಿಕೊಂಡಳು.

ರೆಮೆಡಿಯೋಸ್‌ಳ ಸಾವಿಗೆ ತನ್ನನ್ನೇ ಅಪರಾಧಿಯಾಗಿ ಭಾವಿಸಿಕೊಂಡಳು. ಇಂತಹ ಅಡಚಣೆಯನ್ನು ಅವಳು ಎಂದೂ ಬೇಡಿರಲಿಲ್ಲ. ರೆಮೆಡಿಯೋಸ್‌ಳ ಬರವು ಮನೆಯಲ್ಲಿ ಸಂತಸವನ್ನು ತಂದಿತ್ತು. ವರ್ಕ್‌ಷಾಪ್ ಪಕ್ಕದಲ್ಲಿಯೇ ಇದ್ದ ಕೋಣೆಯಲ್ಲಿ ಗಂಡನೊಂದಿಗೆ ವಾಸಿಸುತ್ತಿದ್ದಳು. ಆ ಕೋಣೆಯನ್ನು ತನ್ನ ಇತ್ತೀಚಿನ ಬಾಲ್ಯದವರೆಗಿನ ಆಟದ ಬೊಂಬೆಗಳು ಮತ್ತು ಇತರೆ ಆಟಿಕೆಗಳಿಂದ ಅಂದವಾಗಿ ಅಲಂಕರಿಸಿದ್ದಳು. ಅವಳ ಗೆಲುವು, ಉತ್ಸಾಹ ಜೀವಂತಿಕೆ ಕೋಣೆಯ ನಾಲ್ಕಗೋಡೆಗಳ ಮಧ್ಯೆ ತುಂಬಿ ತುಳುಕುತ್ತಿತ್ತು. ಓಡಾಡಿದಾಗಲೆಲ್ಲ ಬೆಗೊನಿಯಾಗಳಿಂದ ತುಂಬಿದ್ದ ಅಂಗಳದಲ್ಲಿ ತಾಜಾ ಹವೆಯು ಬೀಸಿದ ಅನುಭವವಾಗುತ್ತಿತ್ತು. ಬೆಳಗಾಗುತ್ತಿದ್ದಂತೆ ಹಾಡಲು ಮೊದಲಿಡುತ್ತಿದ್ದಳು. ರೆಬೆಕಾ ಅಮರಾಂತರ ನಡುವೆ ವಾಗ್ವಾದ ನಡೆದಾಗ ಅವಳೊಬ್ಬಳಿಗೆ ಮಾತ್ರ ಮಧ್ಯೆ ಪ್ರವೇಶಿಸಲು ಸಾಧ್ಯವಿತ್ತು. ಜೋಸ್ ಆರ್ಕಾಡಿಯೋ ಬ್ಯುಂಡಿಯಾನನ್ನು ನೋಡಿಕೊಳ್ಳುವ ಕಷ್ಟದ ಕೆಲಸದಲ್ಲಿ ಪೂರ್ತಿಯಾಗಿ ತೊಡಗಿಸಿಕೊಂಡಳು. ಅವನಿಗಾಗಿ ಊಟವನ್ನು ತರುತ್ತಿದ್ದಳು, ದೈನಂದಿನ ಕೆಲಸಗಳಲ್ಲಿ ಅವನಿಗೆ ನೆರವಾಗುತ್ತಿದ್ದಳು, ಸಾಬೂನು ಮತ್ತು ಬ್ರಶ್‌ನಿಂದ ಶುಭ್ರವಾಗಿ ಸ್ನಾನ ಮಾಡಿಸುತ್ತಿದ್ದಳು. ಅವನ ಕೂದಲು, ಗಡ್ಡವನ್ನು ಹೇನು, ಕೂರೆಗಳು ಬಾರದಂತೆ ಶುಚಿಯಾಗಿ ಇಡುತ್ತಿದ್ದಳು. ವಿಪರೀತ ಗಾಳಿಯಿದ್ದಾಗ ರಕ್ಷಣೆಗೆಂದು ತೆಂಗಿನ ಗರಿಗಳನ್ನು ಸರಿಯಾಗಿ ಹೊದಿಸಿ ಇಡುತ್ತಿದ್ದ. ಮಳೆ ಗಾಳಿಯಿಂದ ರಕ್ಷಿಸಲು ಕ್ಯಾನ್‌ವಾಸ್ ಬಟ್ಟೆಯನ್ನು ಹೊದಿಸಿ ಇರಿಸಿದ್ದಳು. ಕೊನೆ ತಿಂಗಳುಗಳಲ್ಲಿ, ಹರಕು ಮುರುಕು ಲ್ಯಾಟಿನ್ ಭಾಷೆಯಲ್ಲಿ ಸ್ವಲ್ಪಮಟ್ಟಿಗೆ ಅವನೊಂದಿಗೆ ಮಾತಾಡುತ್ತಿದ್ದಳು.

ಅರೆಲಿಯಾನೊ ಮತ್ತು ಪಿಲಾರ್ ತರ್ನಿರಾರಿಗೆ ಹುಟ್ಟಿದ ಮಗುವನ್ನು ಮನೆಗೆ ತಂದಾಗ, ಕೇವಲ ಕೆಲವೇ ಮಂದಿಯೊಂದಿಗೆ ನಡೆದ ನಾಮಕರಣ ಸಮಾರಂಭದಲ್ಲಿ ಆ ಮಗುವಿಗೆ ಅರೆಲಿಯಾನೊ ಜೋಸ್ ಎಂದು ಹೆಸರಿಡಲಾಯಿತು. ರೆಮೆಡಿಯೋಸ್ ಆ ಮಗುವನ್ನೇ ಮನೆಯ ಹಿರಿಯ ಮಗನೆಂದು ತೀರ್ಮಾನಿಸಿದಳು. ಅವಳ ಮಾತೃ ಸಂವೇದನೆಗೆ ಉರ್ಸುಲಾ ಅಚ್ಚರಿಪಟ್ಟಳು. ಅರೆಲಿಯಾನೊ ಅವಳಲ್ಲಿ ತನ್ನ ಬದುಕಿಗೊಂದು ಅರ್ಥವನ್ನು ಕಂಡುಕೊಂಡ. ಇಡೀ ದಿನ ಅವನು ವರ್ಕ್‌ಷಾಪಿನಲ್ಲಿ ಕಷ್ಟಪಟ್ಟು ಕೆಲಸ ಮಾಡುತ್ತಿದ್ದ. ಬೆಳಿಗ್ಗೆ ಹೊತ್ತು ರೆಮೆಡಿಯೋಸ್ ಅವನಿಗಾಗಿ ಬ್ಲಾಕ್ ಕಾಫಿ ತಂದುಕೊಡುತ್ತಿದ್ದಳು. ಪ್ರತಿರಾತ್ರಿಯೂ ಅವರಿಬ್ಬರೂ ಮಾಸ್ಕೋಟರನ್ನು ಮಾತಾಡಿಸಿ ಬರುತ್ತಿದ್ದರು. ಅರೆಲಿಯಾನೊ ಮಾವನೊಂದಿಗೆ ಎಡಬಿಡದೆ ಡೊಮಿನೋಸ್ ಆಟದಲ್ಲಿ ಮಗ್ನನಾಗಿರುತ್ತಿದ್ದರೆ ರೆಮೆಡಿಯೋಸ್ ತಾಯಿ ಮತ್ತು ಅಕ್ಕಂದಿರೊಂದಿಗೆ ಹರಟುತ್ತಾ ಜೊತೆಗೆ ಕೆಲ ಮುಖ್ಯ ವಿಷಯಗಳ ಬಗ್ಗೆಯೂ ಮಾತಾಡುತ್ತಾ ಕಳೆಯುತ್ತಿದ್ದಳು. ಬ್ಯುಂಡಿಯಾ ಕುಟುಂಬದೊಂದಿಗಿನ ಸಂಬಂಧದಿಂದಾಗಿ ಡಾನ್ ಅಪೊಲಿನಾರ್‌ನ ಅಧಿಕಾರ ಊರಿನಲ್ಲಿ ಮತ್ತಷ್ಟು ಗಟ್ಟಿಗೊಂಡಿತು. ಆ ಪ್ರದೇಶದ ರಾಜಧಾನಿಗೆ ಆಗಾಗ ಭೇಟಿ

ಕೊಡುತ್ತಿದ್ದ ಕಾರಣ, ಸರಕಾರದ ವತಿಯಿಂದ ಶಾಲೆಯನ್ನು ನಿರ್ಮಿಸುವ ಪ್ರಯತ್ನದಲ್ಲಿ ಸಫಲನಾದ. ಆರ್ಕಾಡಿಯೊಗೆ ತನ್ನ ತಾತನಿಂದ ಶಿಕ್ಷಣದ ಆಸಕ್ತಿ ಅನುವಂಶಿಕವಾಗಿ ಬಂದದ್ದರಿಂದ ಅವನನ್ನು ಶಿಕ್ಷಣದ ಜವಾಬ್ದಾರಿಯನ್ನು ವಹಿಸಿಕೊಳ್ಳುವಂತೆ ಮಾಡಲು ಆಲೋಚಿಸಿದ. ಒಂದೇ ಸಮನೆ ಮಾಡಿದ ಒತ್ತಾಯದಿಂದಾಗಿ ಕಡೆಗೆ ಎಲ್ಲ ಮನೆಯವರು ಸ್ವಾತಂತ್ರ್ಯ ದಿನಾಚರಣೆ ಹೊತ್ತಿಗೆ ತಮ್ಮ ಮನೆಗಳಿಗೆ ನೀಲಿ ಬಣ್ಣವನ್ನು ಬಳಿಯಲು ಒಪ್ಪಿಸಿದ. ಫಾದರ್ ನಿಕಾನೋರ್‌ನ ಪ್ರಾರ್ಥನೆಯಂತೆ ಕತಾರಿನೊ ಅಂಗಡಿಯನ್ನು ಬೀದಿಯ ಹಿಂಭಾಗಕ್ಕೆ ಸ್ಥಳಾಂತರಿಸಲಾಯಿತು. ಜೊತೆಗೆ ಅವ್ಯವಹಾರಗಳಲ್ಲಿ ತೊಡಗಿಸಿಕೊಂಡಿದ್ದು ಊರಿನ ಮಧ್ಯದಲ್ಲಿದ್ದು ಸಾಕಷ್ಟು ಶ್ರೀಮಂತವಾಗಿದ್ದ ಅಂಗಡಿಗಳನ್ನೆಲ್ಲ ಮುಚ್ಚಿಸಿಬಿಟ್ಟ. ಒಮ್ಮೆ ಅವನು ಆರು ಮಂದಿ ಪೋಲಿಸರನ್ನು ಬಂದೂಕುಗಳೊಂದಿಗೆ ಜೊತೆಗೆ ಕರೆದುತಂದು ಶಾಂತಿ ಭದ್ರತೆಗಳ ರಕ್ಷಣೆಯ ಹೊಣೆವಹಿಸಿಕೊಟ್ಟ. ಊರಿಗೆ ಸಶಸ್ತ್ರ ಪೋಲಿಸರು ಬರಕೂಡದೆಂಬ ಹಿಂದಿನ ಒಪ್ಪಂದದ ಬಗ್ಗೆ ಯಾರಿಗೂ ನೆನಪಿರಲಿಲ್ಲ. ಅರೆಲಿಯಾನೊ ತನ್ನ ಮಾವನ ಸಾಮರ್ಥ್ಯವನ್ನು ಕಂಡು ಸಂಭ್ರಮಿಸಿದ. "ನೀನು ಕೂಡಾ ಅವನಷ್ಟೆ ದಪ್ಪವಾಗಿ ಬಿಡುತ್ತೀ" ಎಂದು ಸ್ನೇಹಿತರು ಹೇಳಿದರು. ಆದರೆ ಒಂದೇ ಕಡೆ ಕುಳಿತು ಮಾಡುವ ಅವನ ಕೆಲಸದಿಂದ ಗಲ್ಲದ ಮೂಳೆಗಳು ಉಬ್ಬಿಕೊಂಡಿದ್ದವು. ಕಣ್ಣಲ್ಲಿ ಹೊಳಪು ಬಂದಿತ್ತು. ಇದರಿಂದಾಗಿ ಅವನ ತೂಕ ಹೆಚ್ಚಲಿಲ್ಲ; ಅವನ ವರ್ತನೆಯೂ ಬದಲಾಗಲಿಲ್ಲ. ಬದಲಿಗೆ ಏಕಾಂತ ಧ್ಯಾನದಿಂದಾಗಿ ತುಟಿಯಂಚು ಮತ್ತು ನಿರ್ಧಾರಗಳು ಗಟ್ಟಿಗೊಂಡಿದ್ದವು. ಇವರಿಬ್ಬರಿಂದಾಗಿ ಎರಡೂ ಕುಟುಂಬಗಳ ಮಧ್ಯೆ ಪ್ರೀತಿ ಎಷ್ಟು ಹೆಚ್ಚಿತ್ತೆಂದರೆ, ರೆಮೆಡಿಯೋಸ್ ತಾನು ತಾಯಿಯಾಗಲಿದ್ದೇನೆ ಎಂಬ ಸುದ್ದಿ ತಿಳಿಸುತ್ತಿದ್ದಂತೆಯೇ, ರೆಬೆಕಾ, ಅಮರಾಂತ ಮೊದಲುಗೊಂಡು ಅವಳಿಗಾಗಿ ಒಂದು ಸಮಾರಂಭವನ್ನು ಏರ್ಪಡಿಸುವುದಾಗಿಯೂ ಮತ್ತು ಗಂಡು ಹುಟ್ಟಿದರೆ ನೀಲಿಬಣ್ಣದ ಉಣ್ಣೆ ಬಟ್ಟೆಗಳನ್ನೂ ಹೆಣ್ಣು ಹುಟ್ಟಿದರೆ ನೇರಳೆ ಬಣ್ಣದ್ದನ್ನೂ ಹೆಣೆಯುವುದಾಗಿ ಘೋಷಿಸಿದರು. ಕೆಲ ವರ್ಷಗಳ ನಂತರ, ಆರ್ಕಾಡಿಯೊ ಗುಂಡಿಕ್ಕುವ ತಂಡದ ಎದುರು ನಿಂತಾಗ ನೆನಪಿಸಿಕೊಂಡವರಲ್ಲಿ ಅವಳೇ ಕೊನೆಯವಳಾಗಿದ್ದಳು.

ಉರ್ಸುಲಾ ಶೋಕಾಚರಣೆಯ ಅವಧಿಯನ್ನು ತಿಳಿಸಿದಳು. ಈ ಸಮಯದಲ್ಲಿ ಬಾಗಿಲು ಕಿಟಕಿಗಳು ಮುಚ್ಚಿರುವುದಲ್ಲದೆ, ತೀರಾ ಅಗತ್ಯದ ಕೆಲಸಗಳ ಹೊರತು ಯಾರೂ ಹೊರಗೆ ಹೋಗುವುದಾಗಲೀ ಒಳಗೆ ಬರುವುದಾಗಲಿ ನಿಷೇಧಿಸಲಾಗಿತ್ತು. ಯಾರೂ ಗಟ್ಟಿಯಾಗಿ ಒಂದು ವರ್ಷದವರೆಗೆ ಮಾತನಾಡಬಾರದೆಂದು ಆದೇಶಿಸಿದಳು. ರೆಮೆಡಿಯೋಸ್‌ಳ ಶವವನ್ನು ಇರಿಸಿದ್ದ ಜಾಗದಲ್ಲಿ ಅವಳ ಭಾವಚಿತ್ರವನ್ನು ಇಟ್ಟರು. ಅದಕ್ಕೆ ಕಪ್ಪು ಪಟ್ಟಿಯನ್ನು ಸುತ್ತಿದ್ದರು. ಅದರ ಮುಂದೆ ಎಣ್ಣೆ ದೀಪವನ್ನು ನಿರಂತರ ಉರಿಯುವಂತೆ ಇಡಲಾಗಿತ್ತು. ಮುಂದೆ ಬರುವ ತಲೆಮಾರು ಆ ದೀಪವನ್ನು ಆರಲು ಬಿಡದವರು ನಿಜವಾಗಿಯೂ ಗೊಂದಲದಲ್ಲಿ ಬೀಳುವ ಸಾಧ್ಯತೆಯಿತ್ತು. ಭಾವಚಿತ್ರದಲ್ಲಿ ನೆರಿಗೆಯುಳ್ಳ ಲಂಗವನ್ನು ಧರಿಸಿ, ಬಿಳಿ ಬೂಟುಗಳೊಂದಿಗೆ, ಮತ್ತು ತಲೆಗೆ ಪಟ್ಟಿಯನ್ನು ಕಟ್ಟಿಕೊಂಡ ಹುಡುಗಿಯನ್ನು ತಮ್ಮ ಮುತ್ತಜ್ಜಿಯ ಕಲ್ಪನೆಯೊಂದಿಗೆ ಹೊಂದಿಸಲು ಎಂದಿಗೂ ಸಾಧ್ಯವಿರಲಿಲ್ಲ. ಅಮರಾಂತ ಅರೆಲೊಯಾನೊ ಜೋಸ್‌ನ ಜವಾಬ್ದಾರಿ ವಹಿಸಿಕೊಂಡಳು.

ಅವನನ್ನು ತನ್ನ ಮಗುವಾಗಿ ಸ್ವೀಕರಿಸಿದಳು. ಇದರಿಂದ ಅವಳ ಒಂಟಿತನ ರೆಬೆಕಾಳ ಕಾಫಿಯಲ್ಲಿ ವಿಷ ಬೆರಸುವ ದುಷ್ಟ ಆಲೋಚನೆಗಳಿಂದ ಬಿಡುಗಡೆಗೊಳ್ಳುವ ಸಾಧ್ಯತೆ ಏರ್ಪಟ್ಟಿತು. ಪೀತ್ರೋ ಕ್ರೆಸ್ಪಿ ಮೆಲ್ಲಗೆ ನುಸುಳಿ ರೆಬೆಕಾಳನ್ನು ಭೇಟಿಯಾಗುತ್ತಿದ್ದ. ಆದರೆ ರೆಬೆಕಾಳಿಗೆ ಧರಿಸಿದ್ದ ಕಪ್ಪು ಉಡುಪಿನಿಂದಾಗಿ ಒಳಗೇ ಉಸಿರುಗಟ್ಟಿ ಸಾಯುವಂತಾಗುತ್ತಿತ್ತು. ಮದುವೆಗೆ ಹೊಸದೊಂದು ದಿನವನ್ನು ಗೊತ್ತುಪಡಿಸುವ ವಿಚಾರವೇ ಅಸಂಬದ್ಧವೆನಿಸಿತು. ಸದ್ಯದ ಅವರ ನಡುವಿನ ಸಂಬಂಧವೇ ಶಾಶ್ವತವೆನಿಸಿತು. ದಣಿದ ಅವರ ಪ್ರೀತಿ ಪ್ರೇಮದ ವಿಚಾರ ಈಗ ಯಾರಿಗೂ ಬೇಕಿರಲಿಲ್ಲ. ಕದ್ದುಮುಚ್ಚಿ ಕತ್ತಲಲ್ಲಿ ಮುತ್ತಿಕ್ಕುವ ಸಾಹಸಕ್ಕೆ, ಓಡಿಹೋಗುವ ಸಾಹಸಕ್ಕೆ ಮುಂದಾಗಿದ್ದ ಅವರನ್ನು ಏನಾದರೂ ಮಾಡಿಕೊಂಡು ಸಾಯಲಿ ಎಂದು ಅವರ ಇಷ್ಟಕ್ಕೆ ಬಿಟ್ಟುಬಿಟ್ಟಿದ್ದರು. ತನ್ನೆಲ್ಲ ಸಹನೆ ಕಳೆದುಕೊಂಡು ಅನೈತಿಕತೆಯನ್ನು ಅಪ್ಪಿದ ರೆಬೆಕಾ ಮತ್ತೆ ಮಣ್ಣು ತಿನ್ನುವುದನ್ನು ಆರಂಭಿಸಿದಳು.

ಇದ್ದಕ್ಕಿದ್ದಂತೆ, ಸೂತಕ ಅಥವಾ ಶೋಕಾಚರಣೆಯ ದಿನಗಳು ಮುಗಿಯುತ್ತಿದ್ದಂತೆ, ಹೆಣಿಗೆ ಕೆಲಸ ಪ್ರಾರಂಭವಾಗುತ್ತಿದ್ದಂತೆ – ಮಧ್ಯಾಹ್ನ ಎರಡುಗಂಟೆ ಸಮಯದಲ್ಲಿ, ರಣ ಬಿಸಿಲಿನ ವೇಳೆಯಲ್ಲಿ ಯಾರೋ ಬೀದಿ ಬಾಗಿಲನ್ನು ತಳ್ಳಿದರು. ಅದರ ರಭಸ ಎಷ್ಟಿತ್ತೆಂದರೆ ಹೊಲಿಗೆ ಕೆಲಸದಲ್ಲಿ ನಿರತರಾಗಿದ್ದ ಅಮರಾಂತ ಮತ್ತು ಗೆಳತಿಯರು ಮಲಗುವ ಕೋಣೆಯಲ್ಲಿ ಬೆರಳು ಚೀಪುತ್ತಿದ್ದ ರೆಬೆಕಾ, ಅಡಿಗೆ ಮನೆಯಲ್ಲಿದ್ದ ಉರ್ಸುಲಾ, ವರ್ಕ್‌ಷಾಪ್‌ನಲ್ಲಿದ್ದ ಅರೆಲಿಯಾನೊ ಚೆಸ್ಟ್‌ನಟ್ ಮರದಡಿಯಿದ್ದ ಜೋಸ್ ಆರ್ಕಾಡಿಯೊ ಬ್ಯುಂಡಿಯಾ ಮೊದಲಾದವರಿಗೆ ಎಲ್ಲಿಯೋ ಭೂಕಂಪವಾಗಿ ಮನೆ ಕುಸಿಯುತ್ತಿರಬೇಕೆಂಬ ಭಾವನೆ ಬಂದಿತು. ದೈತ್ಯಾಕಾರದ ಮನುಷ್ಯ ಬಂದಿದ್ದ. ಅವನ ಅಗಲವಾದ ಭುಜಗಳನ್ನು ಒಳಗೆ ತೂರಿಸುವುದೇ ಅಸಾಧ್ಯವಾಗಿತ್ತು. ಅವನ ಕೋಣದಂಥ ಕುತ್ತಿಗೆಯಲ್ಲಿ ಪದಕ ನೇತಾಡುತ್ತಿತ್ತು. ತೋಳು ಮತ್ತು ಎದೆಯ ಮೇಲೆಲ್ಲ ಬಗೆಬಗೆಯ ಹಚ್ಚೆಯ ಚಿತ್ತಾರಗಳಿದ್ದವು. ಬಲಗೈ ಮುಂಭಾಗದಲ್ಲಿ ತಾಮ್ರದ ಕಡಗವಿತ್ತು. ಅವನ ಚರ್ಮ ಉಪ್ಪುಪ್ಪಾದ ಬಯಲು ಗಾಳಿಯಿಂದ ಕಂದು ಬಣ್ಣದ್ದಾಗಿತ್ತು. ತಲೆಮೇಲೆ ನಿಮಿರಿನಿಂತ ಸಣ್ಣ ಕೂದಲಿತ್ತು. ಅವನ ವಸಡು ಕಬ್ಬಿಣದಂತಿತ್ತು. ತುಟಿಗಳ ಮೇಲೆ ವಿಷಾದದ ನಗೆಯಿತ್ತು. ಧರಿಸಿದ್ದ ಬೆಲ್ಟ್ ಕುದುರೆಗೆ ಕಟ್ಟಿದ ಎರಡರಷ್ಟು ದಪ್ಪವಿತ್ತು. ಕಾಲಿಗೆ ಹಾಕಿದ ಬೂಟುಗಳಿಗೆ ಕಬ್ಬಿಣದ ಲಾಳಗಳಿದ್ದು, ಅವನ ಉಪಸ್ಥಿತಿ ನೋಡಿದವರಿಗೆ ಭೂಕಂಪದ ನಡುಕದ ಅನುಭವವಾಗುತ್ತಿತ್ತು. ಕೈಯಲ್ಲಿ ನೇತಾಡುವ ಚೀಲವನ್ನು ಹಿಡಿದು ಅಂಗಳ, ನಡುಮನೆಗಳನ್ನು ಹಾದುಬಂದ. ಸಿಡಿಲ ಹೊಡೆತದಂತೆ ಕಾಣಿಸಿಕೊಂಡ. ಬೆಗೋನಿಯಾಗಳಿದ್ದ ವರಾಂಡದಲ್ಲಿ ಕುಳಿತಿದ್ದ ಅಮರಾಂತ ಮತ್ತು ಗೆಳತಿಯರು ಅವಾಕ್ಕಾಗಿ ನೋಡುತ್ತಾ ಹೊಲಿಯುವುದನ್ನೇ ಮರೆತರು. ದಣಿದ ದನಿಯಲ್ಲಿ ಅವರಿಗೆ 'ಹಲೋ' ಹೇಳಿ, ಕೈಯಲ್ಲಿ ಚೀಲವನ್ನು ಮೇಜಿನ ಮೇಲೆ ಎಸೆದು, ಮನೆಯ ಹಿಂಭಾಗಕ್ಕೆ ಹೋಗುವಾಗ, ಬೆರಗಿನಿಂದ ನೋಡಿದ ರೆಬೆಕಾಳಿಗೂ 'ಹಲೋ' ಹೇಳಿದ. ಅರೆಲಿಯಾನೊಗೂ 'ಹಲೋ' ಎಂದ. ಅವನು ಮಾತ್ರ ಕೆಲಸಮಾಡುತ್ತಿದ್ದೂ ಬಹಳ ಜಾಗರೂಕನಾಗಿದ್ದ. ಅವನು ಯಾರ ಜೊತೆಗೂ ಹೋಗದೆ ನೇರವಾಗಿ ಅಡಿಗೆ ಮನೆಗೆ ಹೋಗಿ ನಿಂತ. ಪ್ರಪಂಚದ ಯಾವುದೋ ಕೊನೆಯಿಂದ ಪ್ರಾರಂಭವಾದ ಪಯಣ ಕಡೆಗೆ ಇಲ್ಲಿ ನಿಂತಿತು. 'ಹಲೋ' ಎಂದ ಉರ್ಸುಲಾ

ಬಾಯಿಬಿಟ್ಟುಕೊಂಡು ಒಂದು ಕ್ಷಣ ನಿಂತಳು. ಅವನ ಕಣ್ಣಲ್ಲಿ ನೋಡಿದಳು. ನಿಮಿಷಾರ್ಧದಲ್ಲಿ ತನ್ನೆರಡೂ ಕೈಗಳನ್ನು ಚಾಚಿ ಆನಂದ ಬಾಷ್ಪಗಳನ್ನು ಸುರಿಸುತ್ತಾ ಸಂಭ್ರಮೋದ್ಗಾರ ಮಾಡಿದಳು. ಅವನು ಜೋಸ್ ಆರ್ಕಾಡಿಯೊ ಆಗಿದ್ದ. ಹೋಗುವಾಗ ಎಂಥ ಹೀನ ಸ್ಥಿತಿಯಲ್ಲಿದ್ದನೊ. ಹಾಗೆಯೇ ಇದ್ದು ಈಗ ಹಿಂತಿರುಗಿದ್ದ. ಕಡೆಗೆ ಕುದುರೆ ಬಾಡಿಗೆಯಾಗಿ ಎರಡು ಪೇಸೋಗಳನ್ನು ಉರ್ಸುಲಾಳೆ ಕೊಡಬೇಕಾಯಿತು. ಅವನು ನಾವಿಕರ ಶೈಲಿಯ ಸ್ಪ್ಯಾನಿಷ್ ಭಾಷೆಯನ್ನಾಡುತ್ತಿದ್ದ. ಅವನು ಎಲ್ಲಿಗೆ ಹೋಗಿದ್ದನೆಂದು ಕೇಳಿದಾಗ 'ಅಲ್ಲಿ ಬಹಳ ದೂರ' ಎಂದು ಉತ್ತರಿಸಿದ. ಅವರು ತೋರಿಸಿದ ಕೋಣೆಯಲ್ಲಿ ಹಗ್ಗದ ಮಂಚ ಬಿಚ್ಚಿ ಮೂರು ದಿನಗಳ ಕಾಲ ಮಲಗಿಬಿಟ್ಟ. ಅವನು ಎದ್ದು, ಹದಿನಾರು ಹಸಿ ಮೊಟ್ಟೆಗಳನ್ನು ತಿಂದು ನೇರವಾಗಿ ಕತಾರಿನೋ ಅಂಗಡಿಗೆ ಹೋದ. ಇವನ ದೈತ್ಯಾಕಾರವನ್ನು ನೋಡಿದ ಹೆಂಗಸರು ಕುತೂಹಲದಿಂದ ಭಯಭೀತರಾದರು. ಹಾಡು ಹಾಕಲು ಕೇಳಿದ. ತನ್ನ ಲೆಕ್ಕದಲ್ಲಿಯೇ ಎಲ್ಲರಿಗೂ ಕಬ್ಬಿನರಸ ಕೊಡಲು ಹೇಳಿದ. ಐದು ಜನರೊಂದಿಗೆ ಅವನು ಒಬ್ಬನೇ ಏಕಕಾಲದಲ್ಲಿ ಕುಸ್ತಿ ಆಡಬಲ್ಲ ಎಂದು ತಿಳಿಸಿದ. ಆದರೆ ಅವರು ಅದೆಲ್ಲ ಸಾಧ್ಯವಿಲ್ಲ ಎಂದು ಹೇಳಿದರು. ಆದರೂ ಅವನ ತೋಳಬಲದಲ್ಲಿ ನಂಬಿಕೆ ಇರಿಸಿಕೊಂಡಿದ್ದರು. ಶಕ್ತಿಯ ಪವಾಡಗಳಲ್ಲಿ ನಂಬಿಕೆಯಿರಿಸಿಕೊಳ್ಳದಿದ್ದ ಕತಾರಿನೊ, ತನ್ನ ಮುಂದಿನ ಗಲ್ಲಪೆಟ್ಟಿಗೆಯನ್ನು ಕದಲಿಸುವುದಾದರೆ ಹನ್ನೆರಡು ಪೇಸೋಗಳನ್ನು ನೀಡುವುದಾಗಿ ಪಣವಿಟ್ಟ. ಜೋಸ್ ಆರ್ಕಾಡಿಯೊ ಅದನ್ನು ಸಲೀಸಾಗಿ ಕದಲಿಸಿದ್ದೇ ಅಲ್ಲದೆ, ಎತ್ತಿಹಿಡಿದ ಮತ್ತು ಬೀದಿಯಲ್ಲಿಟ್ಟ, ಅದನ್ನು ಒಳಗೆ ತಂದಿರಸಲು ಹನ್ನೊಂದು ಮಂದಿ ಬೇಕಾಯಿತು. ಆ ಪಾರ್ಟಿಯ ಸಂಭ್ರಮದಲ್ಲಿ, ಅವನು ತನ್ನ ಅಸಾಧಾರಣವಾದ ಗಂಡಸುತನವನ್ನು ಪ್ರದರ್ಶಿಸಿದ್ದ. ಹಲವು ಭಾಷೆಗಳಲ್ಲಿ ನೀಲಿ ಮತ್ತು ಕೆಂಪು ಬಣ್ಣಗಳಲ್ಲಿ ಮೈತುಂಬಾ ಹಚ್ಚೆ ಹುಯ್ಸಿಕೊಂಡಿದ್ದ ಅವನು ಅದನ್ನು ಎಲ್ಲರಿಗೂ ಪ್ರದರ್ಶಿಸಿದ. ಅವನಿಗೆ ಮುಗಿಬಿದ್ದಿದ್ದ ಹೆಂಗಸರಿಗೆ ಯಾರು ಹೆಚ್ಚು ಕೊಡಬಲ್ಲಿರಿ ಎಂದು ಸವಾಲೊಡ್ಡಿದ. ತುಂಬಾ ಹಣವಿದ್ದ ಹೆಂಗಸು ಇಪ್ಪತ್ತು ಪೆಸೋಗಳನ್ನು ನೀಡಲು ಮುಂದಾದಳು. ನಂತರ ಅವನು ಲಾಟರಿ ಮೂಲಕ ಒಂದು ಸಲಕ್ಕೆ ಹತ್ತು ಪೇಸೋ ಹಾಕಲು ಸೂಚಿಸಿದ. ಇದು ಬಹಳ ಒಳ್ಳೆಯ ಅವಕಾಶ ಎನಿಸಿತು. ಯಾಕೆಂದರೆ ಬಹಳ ಬೇಡಿಕೆಯಿದ್ದ ಹೆಂಗಸು ಒಂದು ರಾತ್ರಿಗೆ ಎಂಟು ಪೇಸೋ ಸಂಪಾದಿಸುತ್ತಿದ್ದಳು. ಆದ್ದರಿಂದ ಇದು ಎಲ್ಲರಿಗೂ ಒಪ್ಪಿತವಾಯಿತು. ಅವರೆಲ್ಲ ಅವರ ಹೆಸರುಗಳನ್ನು ಹದಿನಾಲ್ಕು ಚೀಟಿಗಳಲ್ಲಿ ಬರೆದು ಹ್ಯಾಟ್‌ನಲ್ಲಿ ಹಾಕಿದರು. ಪ್ರತಿಯೊಬ್ಬ ಹೆಂಗಸೂ ಒಂದೊಂದು ಚೀಟಿಯನ್ನು ಎತ್ತಿಕೊಂಡಳು. ಕಡೆಯಲ್ಲಿ ಎರಡು ಚೀಟಿಗಳು ಉಳಿದಿದ್ದವು. ಅವು ಯಾರವೆಂದು ತಿಳಿಯಲಿಲ್ಲ.

ಒಬ್ಬೊಬ್ಬರಿಂದ ಐದು ಪೇಸೋ ಹೆಚ್ಚಿಗೆ.... ನಾನು ಅವರಿಬ್ಬರೊಂದಿಗೂ ಹಂಚಿಕೊಳ್ಳುತ್ತೇನೆ ಎಂದು ಹೇಳಿದ ಜೋಸ್ ಆರ್ಕಾಡಿಯೊ.

ಅವನು ಈ ರೀತಿಯಲ್ಲಿ ಜೀವನ ನಡೆಸುತ್ತಿದ್ದ. ಅರವತ್ತೆರಡು ಸಲ ಪ್ರಪಂಚವನ್ನು ಸುತ್ತಿದ್ದ. ದೇಶವಿರದ ನಾವಿಕರ ಪಟ್ಟಿಯಲ್ಲಿ ಸೇರಿಕೊಂಡಿದ್ದ. ಕತಾರಿನೋ ಸ್ಟೋರ್‌ನಲ್ಲಿ ಆ ರಾತ್ರಿ ಅವನೊಂದಿಗೆ ಹೋಗಿದ್ದ ಹೆಂಗಸು ಅವನನ್ನು ಬೆತ್ತಲೆಯಾಗಿ ಕುಣಿತ ನಡೆಯುತ್ತಿದ್ದ

ಜಾಗಕ್ಕೆ ಕರೆತಂದು, ಅವನ ಮೈಮೇಲೆ, ಹಿಂದೆ ಮುಂದೆ ಮೇಲೆ ಕೆಳಗೆ ಎಲ್ಲೆಲ್ಲೂ ಒಂದಿಷ್ಟೂ ಖಾಲಿ ಜಾಗವಿಲ್ಲದೆ ಹಚ್ಚೆಯಿಂದ ತುಂಬಿದ್ದನ್ನು ಜನರಿಗೆ ತೋರಿಸಿದಳು. ಮನೆಯವರೊಂದಿಗೆ ಕಲೆತು ಹೋಗಬೇಕೆಂಬ ಅವನ ಪ್ರಯತ್ನ ಸಫಲವಾಗಲಿಲ್ಲ. ಇಡೀ ದಿನ ಮಲಗಿರುತ್ತಿದ್ದ, ರಾತ್ರಿಹೊತ್ತನ್ನು ತನ್ನ ಬಲದ ಆಧಾರದ ಮೇಲೆ ಕೆಂಪುದೀಪಗಳ ಪ್ರದೇಶದಲ್ಲಿ ಕಳೆಯುತ್ತಿದ್ದ. ಅಪರೂಪಕ್ಕೆ ಯಾವಾಗಲಾದರೂ ಬಂದಾಗ ಉರ್ಸುಲಾ ಅವನನ್ನು ಮೇಜಿನ ಬಳಿ ಕುಳ್ಳಿರಿಸಿದಾಗ ಅವನು ದೂರ ದೇಶಗಳಲ್ಲಿನ ತನ್ನ ಅನುಭವಗಳನ್ನು ರೋಚಕವಾಗಿ ಹೇಳಿ ಸಂತೋಷ ಪಡಿಸುತ್ತಿದ್ದ. ನೌಕಾಘಾತವಾಗಿ ಒಮ್ಮೆ ಅವನು ಎರಡು ವಾರಗಳ ಕಾಲ ಜಪಾನಿನ ಸಮುದ್ರದಲ್ಲಿಯೇ ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ತಳ್ಳಲ್ಪಡುತ್ತಲೇ ಬದುಕಿ ಉಳಿಯಬೇಕಾದಾಗ, ತನ್ನ ಗೆಳೆಯನೊಬ್ಬ ಬಿಸಿಲಿನ ಝಳಕ್ಕೆ ಸಾವನ್ನಪ್ಪಿದ್ದರಿಂದ, ಅವನ ಶವವನ್ನೇ ತಿಂದು ಕಾಲ ಕಳೆಯಬೇಕಾಯಿತು. ಸೂರ್ಯಶಾಖದಿಂದ ಬೆಂದು ಉಪ್ಪುನೀರಿನಿಂದ ಉಪ್ಪಾಗಿ, ತಿನ್ನಲು ರುಚಿಯಾಗಿತ್ತು. ಒಂದು ಮಟಮಟ ಮಧ್ಯಾಹ್ನದಂದು ಬಂಗಾಳಕೊಲ್ಲಿಯ ಹಡಗಿನಿಂದಾಗಿ ಸತ್ತ ಮೊಸಳೆಯ ಹೊಟ್ಟೆಯಲ್ಲಿ ಹೆಲ್ಮೆಟ್ ಮತ್ತು ವ್ಯಕ್ತಿಯೊಬ್ಬನ ಬಕಲ್ಸ್, ಯುದ್ಧಾಸ್ತ್ರಗಳು ದೊರೆತವು. ಕ್ಯಾರಿಬಿಯನ್ ಸಮುದ್ರದಲ್ಲಿ ಕಡಲ್ಗಳ್ಳ ವಿಕ್ಟರ್‌ಹ್ಯೂಗ್‌ನ ಬಿರುಗಾಳಿಗೆ ಸಿಕ್ಕಿ ಹರಿದ ಹಾಯಿಗಳು, ಹುಳುಗಳು ತಿಂದ ಪಟಸ್ತಂಭದೊಂದಿಗೆ ಇನ್ನೂ ಗಾದೆಲೋಸ್ ಕಡೆಗೆ ದಾರಿ ಹುಡುಕುತ್ತಿರುವಂತೆ ಕಾಣುತ್ತಿದ್ದ ದೆವ್ವದಾಕಾರವನ್ನು ನೋಡಿದ್ದ. ಉರ್ಸುಲಾ ತನ್ನನೆಂದೂ ತಲುಪದ ಪತ್ರಗಳಲ್ಲಿನ ಜೋಸ್ ಆರ್ಕಾಡಿಯೋನ ಸಾಹಸಗಳನ್ನು ಆಘಾತಗಳನ್ನು ಓದುತ್ತಿರುವಂತೆ, ಕಣ್ಣೀರು ಇಡುತ್ತಿದ್ದಳು. "ಈಗಿಲ್ಲಿ ಮನೆಯಲ್ಲಿ ಬೇಕಾದಷ್ಟಿದೆ..... ಮಿಕ್ಕದ್ದನ್ನು ಹಂದಿಗಳಿಗೆ ಹಾಕುವಷ್ಟಿದೆ" ಎಂದು ಬಿಕ್ಕಿ ಅತ್ತಳು. ಆದರೆ ಅವನು ಜಿಪ್ಸಿಗಳು ಎತ್ತಿಕೊಂಡು ಹೋದವನು ಈಗ ಊಟಕ್ಕೆ ಅರ್ಧ ಹಂದಿಯನ್ನು ತಿನ್ನುವುದನ್ನು, ಹೂಸಿದರೆ ಹೂಗಳು ಕಂಪಿಸುವುದನ್ನು ಅವಳು ತಿಳಿದಿರಲಿಲ್ಲ. ಇದರಂತೆ ಉಳಿದ ಕುಟುಂಬದವರೊಂದಿಗೆ ನಡೆಯಿತು. ಊಟದ ಮೇಜಿನ ಮುಂದೆ ಕುಳಿತಿರುತ್ತಿದ್ದ ಅಮರಾಂತಳಿಗೆ ಅವನ ಭಯಂಕರ ತೇಗಿನ ಸದ್ದು ಸಹಿಸಲಾಗುತ್ತಿರಲಿಲ್ಲ. ಆರ್ಕಾಡಿಯೋಗೆ ಅವರ ಸಂಬಂಧದ ಬಗ್ಗೆ ತಿಳಿದಿರಲಿಲ್ಲ. ಮಾತಾಡಲೇಬೇಕಾದಾಗ ಒಂದೋ ಎರಡೋ ಮಾತಷ್ಟೇ ಆಡುತ್ತಿದ್ದ. ಆದರೆ ಇವನು, ಅವರು ಪ್ರೀತಿಯನ್ನು ಗಳಿಸುವುದಕ್ಕಾಗಿ ಕೇಳುತ್ತಿದ್ದ ಪ್ರಶ್ನೆಗಳಿಗೆ ಉತ್ತರ ಕೊಡುತ್ತಿರಲಿಲ್ಲ. ಅರೆಲಿಯಾನೊ ತಾವಿಬ್ಬರೂ ಒಂದೇ ಕೊಠಡಿಯಲ್ಲಿ ಮಲಗುತ್ತಿದ್ದುದನ್ನು, ತಮ್ಮ ಬಾಲ್ಯದ ದಿನಗಳನ್ನು ನೆನಪಿಸಲು ಪ್ರಯತ್ನಿಸಿದನಾದರೂ ಸಮುದ್ರದ ಬದುಕು ಎಷ್ಟು ಸಂಕೀರ್ಣವಾಗಿತ್ತೆಂದರೆ ಅವನ ನೆನಪಿನಶಕ್ತಿ ಮೊದಲಿನಷ್ಟು ಬಲವಾಗಿ ಇರಲಿಲ್ಲ. ರೆಬೆಕಾ ಮಾತ್ರವೇ ಅವನ ಪ್ರಭಾವಕ್ಕೆ ಸಿಕ್ಕಿದವಳಾಗಿದ್ದಳು. ಅವನು ತನ್ನ ಮಲಗುವ ಕೋಣೆಯನ್ನು ಹಾದು ಹೋದ ದಿನ ಅವನನ್ನು ನೋಡಿದ್ದಳು. ಅವನ ಗೊರಕೆಯ ಸದ್ದು ಕಿವಿಗಡಚಿಕ್ಕುವಂತೆ ಮನೆಯಲ್ಲೆಲ್ಲ ಕೇಳಿಸುವಂತಿದ್ದರೆ, ಅವನ ಹೋಲಿಕೆಯಲ್ಲಿ ಪೀತ್ರೋ ಕ್ರೆಸ್ಪಿ ಕೇವಲ ನಾಜೂಕಿನವನಷ್ಟೇ! ಯಾವುದಾದರೂ ನೆಪದಲ್ಲಿ ಅವನನ್ನು ಸಮೀಪಿಸಲು ಪ್ರಯತ್ನಿಸಿದಳು. ಒಂದು ಸಂದರ್ಭದಲ್ಲಿ ಜೋಸ್ ಆರ್ಕಾಡಿಯೊ ನಾಚಿಕೆಯಿಲ್ಲದಂತೆ ಅವಳ ದೇಹದ ಕಡೆ ಕಣ್ಣುಹಾಯಿಸಿದ, ಹೇಳಿದ, "ಪುಟ್ಟ ಸೋದರಿ

ನೀನೊಬ್ಬ ಹೆಂಗಸು" ಎಂದು. ರೆಬೆಕಾ ಸಂಯಮವನ್ನು ಕಳೆದುಕೊಂಡಳು. ಮತ್ತೆ ಅವಳು ಮಣ್ಣು, ಗೋಡೆಯ ಸುಣ್ಣ ತಿನ್ನುವ, ಬೆರಳು ಚೀಪುವ ಅಭ್ಯಾಸಕ್ಕೆ ಮರಳಿದಳು. ಅವಳ ಹೆಬ್ಬೆಟ್ಟು ಚೀಪಿ ಚೀಪಿ ಮರಗಟ್ಟಿತು. ಅವಳು ವಾಂತಿ ಮಾಡಿಕೊಂಡಳು. ಅದರಲ್ಲಿ ಸತ್ತ ಜಿಗಣೆಗಳಿದ್ದವು. ಇಡೀ ರಾತ್ರಿ ಜ್ವರದಿಂದ ನಡುಗುತ್ತ, ಚಡಪಡಿಸುತ್ತಿದ್ದಳು. ಜೋಸ್ ಆರ್ಕಾಡಿಯೋನ ಬರವಿನೊಂದಿಗೆ ಮನೆಯಲ್ಲಿ ಕಂಪನ ಶುರುವಾಗುವವರೆಗೆ ಈ ಸ್ಥಿತಿಯಲ್ಲಿಯೇ ಇದ್ದಳು. ಒಂದು ಮಧ್ಯಾಹ್ನ, ಎಲ್ಲರೂ ವಿಶ್ರಾಂತಿ ತೆಗೆದುಕೊಳ್ಳುತ್ತಿರುವಾಗ, ಅವಳಿಗೆ ಇನ್ನು ತಡೆದುಕೊಳ್ಳಲು ಸಾಧ್ಯವಾಗದೆ ಅವನ ಮಲಗುವ ಕೋಣೆಗೆ ಹೋದಳು. ಅವನು ತುಂಡುಚಡ್ಡಿಯಲ್ಲಿ, ಹಾಸಿಗೆಯ ಮೇಲೆ ಮೈಚಾಚಿದ್ದ. ಅವನ ದೊಡ್ಡಗಾತ್ರದ ಬೆತ್ತಲೆ ದೇಹದಿಂದ ಬಹಳಷ್ಟು ಆಕರ್ಷಿತಳಾಗಿದ್ದಳು. ಮರಳಿ ಹೋಗುವ ಮನಸ್ಸಾಯಿತು. 'ಕ್ಷಮಿಸು. ನೀನು ಇಲ್ಲಿ ಇರುವುದು ತಿಳಿದಿರಲಿಲ್ಲ' ಮನೆಯವರು ಎಚ್ಚರಗೊಂಡಾರೆಂದು ದನಿಯನ್ನು ತಗ್ಗಿಸಿದಳು. 'ಬಾ ಇಲ್ಲಿ' ಅವನೆಂದ. ರೆಬೆಕಾ ವಿಧೇಯಳಾಗಿ ನಡೆದಳು. ಕೊರೆವ ಬೆವರು, ಕರುಳಲ್ಲಿ ಏನೋ ತಳಮಳದೊಂದಿಗೆ ಹಾಸಿಗೆ ಪಕ್ಕದಲ್ಲಿ ಹೋಗಿ ನಿಂತಳು. ಜೋಸ್ ಆರ್ಕಾಡಿಯೊ ಅವಳ ಮುಂಗಾಲುಗಳನ್ನು ಮೆಲ್ಲನೆ ತಟ್ಟಿದ. ನಂತರ ಒಂದೊಂದಾಗಿ ಕಾಲು, ತೊಡೆ ಮತ್ತು ಮೇಲುಭಾಗದವರೆಗೆ 'ಪುಟ್ಟ ತಂಗಿ, ಪುಟ್ಟ ತಂಗಿ' ಎಂದು ಗುಣುಗುಣಿಸುತ್ತ ಕೈಗಳನ್ನು ಮುಂದು ಮುಂದಕ್ಕೆ ಸರಿಸಿದ. ಅವನು ಅವಳ ಸೊಂಟ ಹಿಡಿದು ಬಿರುಗಾಳಿಯಂತಹ ಶಕ್ತಿಯೊಂದಿಗೆ ಮೇಲೆತ್ತಿದ್ದಾಗ ಪ್ರಾಣವನ್ನು ಉಳಿಸಿಕೊಳ್ಳಲು ಸಾಕುಸಾಕಾಗಿ ಹೋಯಿತು. ಅವಳನ್ನೆತ್ತಿ ಜಾಡಿಸಿ ಹಕ್ಕಿಯಂತೆ ಕೆಳಕ್ಕೆ ಕುಕ್ಕಿದ. ಒಂದು ಕಡೆ ನೋವು ಮತ್ತೊಂದೆಡೆ ಸಂತೋಷದ ಅತಿರೇಕದಲ್ಲಿ ಮೈಮರೆತಳು. ಚಿಮ್ಮಿದ ರಕ್ತವನ್ನು ಬ್ಲಾಟಿಂಗ್ ಪೇಪರಿನಂತೆ ಹೀರಿಕೊಂಡ ಹಾಸಿಗೆ ಮೇಲಿದ್ದ ಅವಳು, ಸಂತೋಷದಲ್ಲಿ ಕೊಚ್ಚಿಹೋಗುವ ಮೊದಲು ಜನ್ಮ ಪಡೆದದ್ದಕ್ಕಾಗಿ ದೇವರಿಗೆ ಕೃತಜ್ಞತೆ ಸಲ್ಲಿಸಿದಳು.

ಮೂರು ದಿನಗಳ ನಂತರ 5 ಗಂಟೆಯ ಸಮಯದಲ್ಲಿ ಪ್ರಾರ್ಥನಾ ಸಭೆಯಲ್ಲಿ ಅವರಿಬ್ಬರೂ ಮದುವೆಯಾದರು. ಜೋಸ್ ಆರ್ಕಾಡಿಯೊ ಒಂದು ದಿನ ಮೊದಲು ಪೀತ್ರೋ ಕ್ರೆಸ್ಪಿ ಸ್ಟೋರ್‌ಗೆ ಹೋಗಿದ್ದ. ಸಂಗೀತ ಪಾಠ ಹೇಳುತ್ತಿದ್ದುದರಿಂದ ಅವನನ್ನು ಪಕ್ಕಕ್ಕೆ ಕರೆದು ಹೆಚ್ಚು ಮಾತನಾಡಿಸಲಿಲ್ಲ. "ನಾನು ರೆಬೆಕಾಳನ್ನು ಮದುವೆಯಾಗಲಿದ್ದೇನೆ" ಎಂದಷ್ಟೇ ಹೇಳಿದ. ಪೀತ್ರೋ ಕ್ರೆಸ್ಪಿ ಮುಖ ಬಿಳುಚಿಕೊಂಡಿತು. ಸಂಗೀತ ಪಾಠವನ್ನು ಒಬ್ಬನಿಗೆ ಮುಗಿಸಿ ಮಿಕ್ಕವರನ್ನು ಹೋಗಲು ಹೇಳಿದ. ಸಂಗೀತ ವಾದ್ಯಗಳಿಂದ, ಯಂತ್ರಚಾಲಿತ ಆಟಿಕೆಗಳಿಂದ, ತುಂಬಿದ್ದ ಕೋಣೆಯಲ್ಲಿ ಇವರಿಬ್ಬರೇ ಇದ್ದಾಗ ಪೀತ್ರೋ ಕ್ರೆಸ್ಪಿ ಹೇಳಿದ.

"ಅವಳು ನಿನ್ನ ತಂಗಿ"

"ಆದರೇನು ನನಗೆ ಪರವಾಗಿಲ್ಲ" ಜೋಸ್ ಆರ್ಕಾಡಿಯೊ ಉತ್ತರಿಸಿದ.

ಪೀತ್ರೋ ಕ್ರೆಸ್ಪಿ ಲ್ಯಾವೆಂಡರ್‌ನಿಂದ ಅದ್ದಿದ ಕರವಸ್ತ್ರದಿಂದ ಮುಖ ಒರೆಸಿಕೊಂಡ.

"ಪ್ರಕೃತಿಗೆ ಇದು ವಿರುದ್ಧ ಅಲ್ಲದೆ ಕಾನೂನಿಗೂ ವಿರುದ್ಧ"

ಜೋಸ್ ಆರ್ಕಾಡಿಯೊ ವಿವಾದಕ್ಕಿಂತಲೂ ಹೆಚ್ಚಾಗಿ ಅವನು ಬಿಳುಚಿಕೊಳ್ಳುತ್ತಿದ್ದುದನ್ನು ನೋಡಿ ತಾಳ್ಮೆಯನ್ನು ಕಳೆದುಕೊಂಡ.

"ಅದೆಲ್ಲ ಬೇಡ.... ನೀನು ರೆಬೆಕಾಳನ್ನು ಇದರ ಬಗ್ಗೆ ಏನೊಂದೂ ಕೇಳೋಕೆ ಹೋಗಬೇಡ".

ಅವನೆಷ್ಟೇ ಒರಟಾಗಿದ್ದರೂ ಪೀತ್ರೋ ಕ್ರೆಸ್ಪಿಯ ಕಣ್ಣು ಒದ್ದೆಯಾದಾಗ ಕರಗಿಹೋದ.

"ನಿಜವಾಗಿಯೂ ನಿನಗೆ ಫ್ಯಾಮಿಲಿ ಇಷ್ಟವಾಗಿದ್ದರೆ, ಅಮರಾಂತಳನ್ನು ನೀನು ಮದುವೆ ಮಾಡಿಕೊ" ಎಂದು ಪೀತ್ರೋಗೆ ಹೇಳಿದ.

ಫಾದರ್ ನಿಕಾನೋರ್ ಭಾನುವಾರದ ಉಪದೇಶದಲ್ಲಿ ಜೋಸ್ ಆರ್ಕಾಡಿಯೊ ಮತ್ತು ರೆಬೆಕಾ ಅಣ್ಣ ತಂಗಿ ಅಲ್ಲ ಅನ್ನುವ ಸತ್ಯವನ್ನು ಬಯಲು ಮಾಡಿದ. ಆದರೆ ಉರ್ಸುಲಾಗೆ ಇದು ಅಕ್ಷಮ್ಯ ಅಪರಾಧವೆನಿಸಿತು. ಮದುವೆ ಮುಗಿಸಿಕೊಂಡು ಬಂದ ದಂಪತಿಯನ್ನು ಇನ್ನೆಂದೂ ಮನೆಯೊಳಗೆ ಕಾಲಿಡಬೇಡಿರೆಂದು ನಿಷೇಧಿಸಿದಳು. ಅವಳ ಪಾಲಿಗೆ ಅವರು ಸತ್ತಂತೆ ಎಂದು ಭಾವಿಸಿದಳು. ಅದಕ್ಕಾಗಿ ಅವರು ಸ್ಮಶಾನದಿಂದ ಸ್ವಲ್ಪ ದೂರದಲ್ಲಿ ಒಂದು ಮನೆಯನ್ನು ಬಾಡಿಗೆಗೆ ತೆಗೆದುಕೊಂಡರು. ಆರ್ಕಾಡಿಯೋನ ಹಾಸಿಗೆ ಬಿಟ್ಟರೆ ಬೇರೆ ಪೀಠೋಪಕರಣಗಳೇ ಇರಲಿಲ್ಲ. ಮದುವೆಯ ದಿನ ರೆಬೆಕಾಳ ಬೂಟಿನೊಳಗೆ ಸೇರಿಕೊಂಡಿದ್ದ ಚೇಳೊಂದು ಅವಳನ್ನು ಕಚ್ಚಿತು. ಮಾತೇ ಹೊರಡುತ್ತಿರಲಿಲ್ಲ. ಆದರೂ ಅವರ ಮಧುಚಂದ್ರದ ಖುಷಿಗೆ ಅಡ್ಡಿಯಾಗಲಿಲ್ಲ. ಒಂದು ರಾತ್ರಿಯಲ್ಲಿ ಅವರ ಕೂಗು ಕಿರಿಚಾಟ ಎಂಟು ಸಲ ಕೇಳಿಬಂದದಕ್ಕೆ ಇಡೀ ಪ್ರದೇಶ ಬೆರಗಾಗಿತ್ತು. ಸದ್ಯಕ್ಕೆ ಇಂಥ ಪ್ರೀತಿಯ ಆವೇಶದ ಅತಿರೇಕ ಸತ್ತವರನ್ನೂ ಎಚ್ಚರಿಸದಿರಲಿ ಎಂದು ದೇವರನ್ನು ಬೇಡಿಕೊಂಡರು.

ಅವರಿಬ್ಬರ ಬಗ್ಗೆ ಅರೆಲಿಯಾನೋಗೆ ಮಾತ್ರವೇ ಕಳಕಳಿಯಿತ್ತು. ಇಂದಷ್ಟು ಪೀಠೋಪಕರಣಗಳನ್ನು ಕೊಂಡು ಕೊಟ್ಟ. ಜೋಸ್ ಆರ್ಕಾಡಿಯೊ ವಾಸ್ತವತೆ ಏನು ಎನ್ನುವುದನ್ನು ಅರ್ಥಮಾಡಿಕೊಂಡು, ಮನೆಯ ಅಂಗಳದ ಬದಿಯಲ್ಲಿದ್ದ ಭೂಮಿಯಲ್ಲಿ ಕೆಲಸ ಶುರುಮಾಡುವವರೆಗೂ ಹಣವನ್ನು ನೀಡುತ್ತಿದ್ದ. ಅಮರಾಂತ ರೆಬೆಕಾಳ ಬಗೆಗಿದ್ದ ತನ್ನ ದ್ವೇಷವನ್ನು ಇಷ್ಟೆಲ್ಲಾ ಆಗಿ ಕನಸಲ್ಲೂ ಊಹಿಸಲಾಗದ ರೀತಿಯಲ್ಲಿ ತನಗೆ ತೃಪ್ತಿ ತರುವಂತಿದ್ದರೂ ಕಡಿಮೆ ಮಾಡಿಕೊಳ್ಳಲಿಲ್ಲ. ಆದ ಅನ್ಯಾಯವನ್ನು ಹೇಗೆ ಸರಿಪಡಿಸಬೇಕೆಂದು ಉರ್ಸುಲಾಗೆ ಅರ್ಥವಾಗಿರಲಿಲ್ಲ. ಉರ್ಸುಲಾಳ ಕೋರಿಕೆಯ ಮೇರೆಗೆ ಪೀತ್ರೋ ಕ್ರೆಸ್ಪಿ ಮಂಗಳವಾರಗಳಲ್ಲಿ ಊಟಕ್ಕೆ ಬರುತ್ತಿದ್ದ. ತನ್ನ ಸೋಲಿನಿಂದ ಮೇಲೇರುವ ಗಾಂಭೀರ್ಯವನ್ನು ರೂಢಿಸಿಕೊಂಡಿದ್ದ. ಕುಟುಂಬದ ಬಗ್ಗೆ ಇದ್ದ ಗೌರವದ ಸೂಚಕವಾಗಿ ಹ್ಯಾಟಿಗೆ ರಿಬ್ಬನ್ನನ್ನು ಉಳಿಸಿಕೊಂಡಿದ್ದ. ಉರ್ಸುಲಾ ಬಗ್ಗೆ ತನಗಿದ್ದ ಪ್ರೀತಿಯನ್ನು ಅಮೂಲ್ಯವಾದ ಉಡುಗೊರೆಗಳನ್ನು ನೀಡುವುದರ ಮೂಲಕ

ತೋರಿಸುತ್ತಿದ್ದ. ಪೋರ್ಚುಗೀಸ್‌ನಲ್ಲಿ ಪ್ರಸಿದ್ಧವಾದ ಶಿಲೆ, ಟರ್ಕಿಯ ಗುಲಾಬಿ ಮುರಬ್ಬ, ಮನಿಲಾದ ಶಾಲು ಮುಂತಾದವುಗಳನ್ನು ಅಮೂಲ್ಯವಾದುದನ್ನು ಉಡುಗೊರೆಯಾಗಿ ಕೊಟ್ಟು ಖುಷಿಪಡುತ್ತಿದ್ದ. ಅಮರಾಂತ ಕೂಡಾ ಅವನನ್ನು ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದಳು. ಅವನ ಬೇಕು ಬೇಡಗಳನ್ನು ಗಮನಿಸುತ್ತಿದ್ದಳು. ಅವನ ಅಂಗಿಯ ತೋಳುಗಳಲ್ಲಿನ ದಾರಗಳನ್ನು ತೆಗೆಯುತ್ತಿದ್ದಳು. ಒಂದು ಡಜನ್ ಕರವಸ್ತ್ರಗಳ ಮೇಲೆ ಅವನ ಹೆಸರಿನ ಇನಿಷಿಯಲ್‌ಗಳನ್ನು ಕಸೂತಿ ಮಾಡಿ ಅವನ ಹುಟ್ಟುಹಬ್ಬಕ್ಕೆ ಉಡುಗೊರೆಯಾಗಿ ಕೊಡುತ್ತಿದ್ದಳು. ಮಂಗಳವಾರಗಳಂದು ನಡುಮನೆಯಲ್ಲಿ ಕಸೂತಿ ಮಾಡುತ್ತ ಕುಳಿತಿರುವಾಗ ಅವನು ಅವಳಿಗೆ ಸರಿಯಾದ ಜೊತೆ ಕೊಟ್ಟು ಸಂತೋಷದಿಂದ ಇರಿಸುತ್ತಿದ್ದ ಯಾವ ಹೆಣ್ಣನ್ನು ಯಾವಾಗಲೂ ಒಂದು ಮಗುವಿನಂತೆ ಭಾವಿಸುತ್ತಿದ್ದನೊ ಅವಳ ಬಗ್ಗೆ ಜ್ಞಾನೋದಯವಾಯಿತು. ಅವಳ ಸ್ವಭಾವದಲ್ಲಿ ಸಾಮ್ಯತೆಯಾಗಲಿ, ಗಾಂಭೀರ್ಯವಾಗಲಿ ಇಲ್ಲದಿದ್ದರೂ ಪ್ರಪಂಚದಲ್ಲಿನ ವಸ್ತುಗಳನ್ನು ಮೆಚ್ಚಬಲ್ಲ ಒಂದು ಅಪರೂಪದ ಸಾಮರ್ಥ್ಯವಿದ್ದ ಅವಳಲ್ಲಿ ಯಾರಿಗೂ ಗುರುತಿಸಲಾಗದ ಮೃದುತನವಿತ್ತು. ಒಂದಲ್ಲ ಒಂದು ದಿನ ಯಾರಿಗಾದರೂ ತಿಳಿಯುತ್ತಿದ್ದ ವಿಷಯ, ಒಂದು ಮಂಗಳವಾರ ಗೊತ್ತಾಯಿತು. ಅವನು ಅವಳನ್ನು, ತನ್ನನ್ನು ಮದುವೆಯಾಗಲು ಕೇಳಿದ. ತನ್ನ ಕೆಲಸವನ್ನು ನಿಲ್ಲಿಸಲಿಲ್ಲ. ನಾಚಿಕೆಯಿಂದ ಕಿವಿಬಿಸಿಯೇರಿ ಅವಳ ಮಾತಿಗೆ ಪ್ರಬುದ್ಧತೆಯನ್ನು ತಂದುಕೊಟ್ಟಿತು.

"ಖಂಡಿತ ಕ್ರೆಸ್ಪಿ. ಆದರೆ ನಾವಿಬ್ಬರೂ ಪರಸ್ಪರ ಒಬ್ಬರನ್ನೊಬ್ಬರು ಅರ್ಥಮಾಡಿಕೊಂಡ ಮೇಲೆ! ಆತುರದ ನಿರ್ಧಾರಗಳು ಒಳ್ಳೆಯದಲ್ಲ" – ಎಂದಳು.

ಉರ್ಸುಲಾಗೆ ಗೊಂದಲವಾಯಿತು. ಪೀತ್ರೋ ಕ್ರೆಸ್ಪಿ ಬಗ್ಗೆ ಗೌರವವಿದ್ದರೂ ನೈತಿಕತೆಯ ದೃಷ್ಟಿಯಿಂದ ಅದೂ ಸಾಕಷ್ಟು ಮುಂದೂಡಲ್ಪಟ್ಟ ರೆಬೆಕಾ ಮತ್ತು ಅವನ ಮದುವೆ ನಿಶ್ಚಯವಾದ ಮೇಲೆ, ಅವನ ನಿರ್ಧಾರ ಸರಿಯೋ ತಪ್ಪೋ ಎನ್ನುವ ತೀರ್ಮಾನ ಮಾಡಲಾಗದೆ ಹೋದರೂ ಕಡೆಗೆ ಅವಳ ಅನುಮಾನ ಯಾರಿಗೂ ಸರಿ ಕಾಣಲಿಲ್ಲವಾಗಿ, ಅವಳೂ ಒಪ್ಪಿಕೊಳ್ಳಲೇ ಬೇಕಾಯಿತು. ಮನೆಯ ಯಜಮಾನನಾಗಿದ್ದ ಅರೆಲಿಯಾನೊ "ಇದು ಮದುವೆಯ ಬಗ್ಗೆ ಯೋಚಿಸಲು ಸರಿಯಾದ ಸಮಯವಲ್ಲ" ಎನ್ನುವ ನಿರ್ಧಾರದ ಮಾತುಗಳಿಂದ ಅವಳನ್ನು ಮತ್ತಷ್ಟು ಗೊಂದಲಕ್ಕೆ ಸಿಕ್ಕಿಸಿದ.

ಉರ್ಸುಲಾಗೆ ಅವನ ಮಾತಿನ ಅರ್ಥ ಕೆಲವು ತಿಂಗಳ ನಂತರ ಅರಿವಿಗೆ ಬಂತು. ಅವಳ ದೃಷ್ಟಿಯಲ್ಲಿ, ಯುದ್ಧವನ್ನು ಹೊರತುಪಡಿಸಿ, ಮದುವೆಯ ಬಗ್ಗೆ ಇದ್ದ ಗೌರವವನ್ನೂ ಇರಿಸಿಕೊಂಡು ಪ್ರಾಮಾಣಿಕವಾಗಿ ಮಾತನಾಡಬಲ್ಲವನು ಅರೆಲಿಯಾನೊ ಒಬ್ಬನೇ ಎನಿಸಿತು. ಗುಂಡಿಕ್ಕುವ ತಂಡದ ಎದುರು ನಿಂತಾಗ, ಆ ಸ್ಥಿತಿಗೆ ತಂದು ನಿಲ್ಲಿಸಲು ಕಾರಣವಾದ ಅನೇಕ ಘಟನೆಗಳು ಆಕಸ್ಮಿಕವಾಗಿ ಸಂಭವಿಸಿದ ಸನ್ನಿವೇಶಗಳ ಸೂಕ್ಷ್ಮಗಳನ್ನೂ ಅರ್ಥಮಾಡಿಕೊಳ್ಳುವವನಾಗಿದ್ದ. ರೆಮೆಡಿಯೋಸ್‌ಳ ಸಾವಿನಿಂದ ಎಲ್ಲರು ಭಾವಿಸಿದಂತೆ ಹತಾಶೆಗೆ ಒಳಗಾಗಿರಲಿಲ್ಲ. ಅದೊಂದು ದುಃಖಾತಿರೇಕದಿಂದ ಉಂಟಾದ ನಿರ್ಲಿಪ್ತತೆ ಕಡೆಗೆ ಮತ್ತು ಏಕಾಂತದತ್ತ ದೂಡಿತು. ಹೆಣ್ಣಿಲ್ಲದೆ ಬದುಕುತ್ತಿದ್ದ ದಿನಗಳಲ್ಲಿನ

ಒಂದು ಬಗೆಯ ವಿರಕ್ತಿ ಏಕಾಂತ ಭಾವವೇ ಈಗಲೂ ಅವನಲ್ಲಿ ಕಾಣಿಸಿಕೊಂಡಿತು. ಸಂಪೂರ್ಣವಾಗಿ ಕೆಲಸದಲ್ಲಿ ಮುಳುಗಿದ್ದ. ಆದರೆ ಮಾವನ ಜೊತೆ ಡೊಮಿನೋಸ್ ಆಡುವುದನ್ನು ಮಾತ್ರ ಬಿಡಲಿಲ್ಲ. ಶೋಕದ ವಾತಾವರಣದಲ್ಲಿದ್ದ ಮನೆಯಲ್ಲಿ ರಾತ್ರಿಹೊತ್ತು ನಡೆಯುತ್ತಿದ್ದ .ಮಾತುಕತೆಯಿಂದಾಗಿ ಸ್ನೇಹ ಇನ್ನಷ್ಟು ಬಲಗೊಂಡಿತು. ಅವನ ಮಾವ 'ಅರೆಲಿಯಾನೋ ಮತ್ತೊಂದು ಮದುವೆಯನ್ನು ಮಾಡಿಕೊ. ನನಗೆ ಆರು ಮಂದಿ ಹೆಣ್ಣು ಮಕ್ಕಳಿದ್ದಾರೆ. ಅವರಲ್ಲಿ ಯಾರಾದರೂ ಒಬ್ಬರನ್ನು ಆಯ್ಕೆ ಮಾಡಿಕೊ' ಎಂದು ಹೇಳುತ್ತಲೇ ಇದ್ದ. ಒಂದು ಸಂದರ್ಭದಲ್ಲಿ ಚುನಾವಣೆಯ ಹಿಂದಿನ ದಿನ ಡಾನ್ ಅಪೊಲಿನಾರ್ ಆಗಾಗ ಹೋಗಿಬರುತ್ತಿದ್ದ ತನ್ನ ಟ್ರಿಪ್‌ಗಳಲ್ಲಿನ ಒಂದು ದಿನ ದೇಶದ ರಾಜಕೀಯ ಪರಿಸ್ಥಿತಿಯಿಂದ ವ್ಯಥಿತನಾಗಿದ್ದ. ಲಿಬರಲ್ ಪಾರ್ಟಿಯ ಯುದ್ಧವೇ ಆಗಬೇಕೆಂದು ತೀರ್ಮಾನಿಸಿದರು. ಅರೆಲಿಯಾನೊಗೆ ಕನ್ಸರ್‌ವೆಟೀವ್ ಮತ್ತು ಲಿಬರಲ್ ಪಾರ್ಟಿಗಳ ನಡುವಿನ ವ್ಯತ್ಯಾಸ ಏನೆಂದು ತಿಳಿದಿರಲಿಲ್ಲ. ಮಾವ ಅಪೊಲಿನಾರ್ ಅವುಗಳ ಬಗ್ಗೆ ಕೆಲವು ವಿಚಾರಗಳ ಸಿದ್ಧಾಂತಗಳನ್ನು ತಿಳಿಸಿಕೊಟ್ಟ. ಲಿಬರಲ್ಸ್ ಮುಕ್ತ ಮನಸ್ಸಿನವರು, ಕೆಟ್ಟವರು, ಪಾದ್ರಿಗಳನ್ನು ನೇಣುಹಾಕುವ ಯೋಚನೆಯುಳ್ಳವರು. ವಿವಾಹ ಮತ್ತು ವಿಚ್ಛೇದನೆಗಳನ್ನು, ಅನೈತಿಕ ಸಂಬಂಧದಿಂದ ಹುಟ್ಟಿದ ಮಕ್ಕಳನ್ನು, ನ್ಯಾಯಸಮ್ಮತವಾಗಿ ಹುಟ್ಟಿದ ಮಕ್ಕಳ ಹಕ್ಕುಗಳಿಗೆ ಬಾಧ್ಯರನ್ನಾಗಿಸಬೇಕೆಂದು, ಜಾರಿಗೊಳಿಸಬೇಕೆಂಬ ಉದ್ದೇಶವನ್ನು ಹೊಂದಿದವರಾಗಿದ್ದರು. ಅಲ್ಲದೆ ದೇಶವನ್ನು ಒಡೆದು ಪಾಲುಮಾಡಿ ಈಗಿರುವ ಪರಮೋನ್ನತ ಅಧಿಕಾರವನ್ನು ಮೊಟಕುಗೊಳಿಸಬೇಕೆಂದಿದ್ದಾರೆ. ಕನ್‌ಸರ್ವೆಟೀವ್ ಪಕ್ಷದವರು ದೇವರಿಂದ ನೇರವಾಗಿ ಅಧಿಕಾರ ಪಡೆದವರು. ಸಾರ್ವಜನಿಕ ಶಿಸ್ತು, ಕೌಟುಂಬಿಕ ನೈತಿಕತೆಯ ವ್ಯವಸ್ಥೆಯನ್ನು ಬಯಸುತ್ತಾರೆ. ಅವರು ದೇವರಲ್ಲಿ ನಂಬಿಕೆ, ಅಧಿಕಾರದ ಸಿದ್ಧಾಂತಗಳ ರಕ್ಷಕರು, ಸ್ವ ಆಡಳಿತ ಘಟಕಗಳನ್ನಾಗಿ ದೇಶವನ್ನು ವಿಭಜಿಸಲು ಅವರು ಅವಕಾಶ ಕೊಡುವುದಿಲ್ಲ. ಅರೆಲಿಯಾನೊ ಮಾನವೀಯ ಭಾವನೆಗಳನ್ನು ಉಳ್ಳವನಾದ್ದರಿಂದ ಅನಾಥ ಮಕ್ಕಳ ಹಕ್ಕುಗಳ ಪರವಾಗಿದ್ದ ಲಿಬರಲ್ ಮನೋಧರ್ಮದ ಬಗ್ಗೆ ಸಹಾನುಭೂತಿಯುಳ್ಳವನಾಗಿದ್ದ.

ಕೈಯಲ್ಲೂ ಮುಟ್ಟಲಾಗದ ವಿಚಾರಗಳ ಬಗ್ಗೆ ಹೇಗೆ ಯುದ್ಧವೇ ಆಗಬೇಕೆಂಬ ಅಂತಿಮ ತೀರ್ಮಾನಕ್ಕೆ ಬರುತ್ತಾರೆಂಬ ವಿಷಯ ಅವನಿಗೆ ಅರ್ಥವಾಗಲಿಲ್ಲ. ಅವನಿಗೆ ತನ್ನ ಮಾವ ಚುನಾವಣೆಗೋಸ್ಕರ, ಯಾವುದೇ ರಾಜಕೀಯ ಆಕಾಂಕ್ಷೆಗಳಿಲ್ಲದ ಪ್ರದೇಶಕ್ಕೆ ಸಾರ್ಜೆಂಟ್‌ನ ನೇತೃತ್ವದಲ್ಲಿ ಆರು ಜನ ಬಂದೂಕುಧಾರಿಗಳನ್ನು ಕಳಿಸಿಕೊಡುವಂತೆ ಮಾಡಿದ್ದು ಅತಿರೇಕವೆನಿಸಿತು. ಅವರು ಅಲ್ಲಿಗೆ ಆಗಮಿಸಿದ್ದೇ ಅಲ್ಲದೆ ಮನೆಮನೆಗೂ ಹೋಗಿ ಬೇಟೆಯ ಆಯುಧಗಳು, ಅಡಿಗೆ ಮನೆ ಚಾಕುಗಳು ಮೊದಲಾದವುಗಳನ್ನು ****** ಹೆಚ್ಚಿದ್ದ ಕನ್ಸರ್‌ವೇಟಿವ್ ಅಭ್ಯರ್ಥಿಗಳ ನೀಲಿ ಬಣ್ಣದ ಮತಚೀಟಿಗಳನ್ನು, ಲಿಬರಲ್ ಪಕ್ಷದ ಅಭ್ಯರ್ಥಿಗಳ ಹೆಸರುಗಳನ್ನುಳ್ಳ ಮತಚೀಟಿಗಳನ್ನು ಗಂಡಸರಿಗೆ ಹಂಚುವುದಕ್ಕೆ ಮೊದಲೇ, ವಶಪಡಿಸಿಕೊಂಡರು. ಅಪೊಲಿನಾರ್ ಚುನಾವಣೆಗೆ ಹಿಂದಿನದಿನವೇ ಮದ್ಯದ ಮಾರಾಟವನ್ನು ಒಂದು ಕುಟುಂಬಕ್ಕೆ ಸೇರದವರು 3 ಜನಕ್ಕಿಂತ ಹೆಚ್ಚು ಒಂದೆಡೆ ಗುಂಪು ಸೇರುವುದನ್ನು ನಿಷೇಧಿಸಿರುವ ಆದೇಶವನ್ನು ಹೊರಡಿಸಿ ಯಾವುದೇ ಅಹಿತಕರ ಘಟನೆ ಜರುಗದೆ ಚುನಾವಣೆ ನಡೆಯಿತು. ಭಾನುವಾರ ಬೆಳಿಗ್ಗೆ ಮತ ಪೆಟ್ಟಿಗೆಯನ್ನು ಊರಿನ

ಚೌಕದಲ್ಲಿ ಆರು ಜನ ಸೈನಿಕರ ಕಾವಲಿನಲ್ಲಿ ಇರಿಸಲಾಯಿತು. ಮತ ಚಲಾವಣೆ ಮುಕ್ತವಾಗಿ ನಡೆಯಿತು. ಅರೆಲಿಯಾನೊ ಕೂಡಾ ತನ್ನ ಮಾವನಿಗೆ ಸಹಾಯವಾಗಿ ಯಾರೂ ಒಂದು ಸಲಕ್ಕಿಂತ ಹೆಚ್ಚಾಗಿ ಮತಚಲಾವಣೆ ಮಾಡದಿರುವಂತೆ ಕಣ್ಣಿಟ್ಟಿದ್ದ. ಸಂಜೆ ನಾಲ್ಕು ಘಂಟೆಗೆ ಮತ ಚಲಾವಣೆಯ ಕಾರ್ಯಕ್ರಮ ಮುಗಿದದ್ದನ್ನು ಡ್ರಮ್ ಸದ್ದಿನೊಂದಿಗೆ ಘೋಷಿಸಲಾಯಿತು. ಡಾನ್ ಅಪೊಲಿನಾರ್ ಮತಪೆಟ್ಟಿಗೆಗೆ ಸೀಲು ಹಾಕಿ, ತನ್ನ ಸಹಿಯುಳ್ಳ ಲೇಬಲ್ ಅನ್ನು ಅಂಟಿಸಿದ. ಆ ರಾತ್ರಿ ಅರೆಲಿಯಾನೊ ಜೊತೆ ಡೊಮಿನೋಸ್ ಆಡುತ್ತಿರುವಾಗ, ಮತ ಎಣಿಕೆ ಮಾಡುವ ಮತಪೆಟ್ಟಿಗೆಯ ಸೀಲು ಒಡೆಯಲು ಸಾರ್ಜೆಂಟ್‌ಗೆ ಆದೇಶಿಸಿದ. ಅದರಲ್ಲಿ ಹೆಚ್ಚುಕಡಿಮೆ ನೀಲಿ ಮತಚೀಟಿಗಳಷ್ಟು ಕೆಂಪು ಮತ ಚೀಟಿಗಳಿದ್ದವು. ಹತ್ತು ಕೆಂಪು ಮತ ಚೀಟಿಗಳಿದ್ದವು. ಸಾರ್ಜೆಂಟ್ ಅವುಗಳಷ್ಟೇ ಮತಚೀಟಿಗಳನ್ನು ನೀಲಿ ಮತಚೀಟಿಗಳಿಂದ ಸರಿಮಾಡಿದ. ನಂತರ ಸೀಲು ಮಾಡಿ ಪೆಟ್ಟಿಗೆಯ ಮೇಲೆ ಹೊಸ ಲೇಬಲನ್ನು ಅಂಟಿಸಿ ಮರುದಿನ ಆ ಪ್ರದೇಶದ ರಾಜಧಾನಿಗೆ ಕೊಂಡೊಯ್ಯಲಾಯಿತು. ಲಿಬರಲ್ ಪಕ್ಷದವರು ಯುದ್ಧಕ್ಕೇ ಮುಂದಾಗುತ್ತಾರೆ ಎಂದು ಅರೆಲಿಯಾನೊ ಹೇಳಿದ. 'ಡಾನ್ ಅಪೊಲಿನಾರ್ ಡೊಮಿನೊ ಆಟದ ಮೇಲೆ ಗಮನವಿದ್ದು, ಮತ ಚೀಟಿಗಳನ್ನು ಬದಲಾಯಿಸಿದ್ದರಿಂದ ನೀನು ಹಾಗೆ ಹೇಳುತ್ತಿರುವುದಾದರೆ, ಒಳಗೆ ಒಂದಷ್ಟು ಕೆಂಪು ಮತಚೀಟಿಗಳನ್ನು ಇರಿಸಿದ್ದೇವೆ. ಯಾರೂ ತಂಟೆ ಮಾಡೊಲ್ಲ' ಎಂದ. ವಿರೋಧ ಪಕ್ಷದಲ್ಲಿ ಇರುವುದರ ಅನಾನುಕೂಲ ಏನೆಂದು ಅರೆಲಿಯಾನೊ ಅರ್ಥಮಾಡಿಕೊಂಡ. 'ನಾನೇನಾದರೂ ಲಿಬರಲ್ ಆಗಿದ್ದ ಪಕ್ಷದಲ್ಲಿ, ಆ ಮತಚೀಟಿಗಳಿಂದಾಗಿ ಯುದ್ಧವನ್ನೇ ಮಾಡುತ್ತೇನೆ' ಎಂದ. ಅವನ ಮಾವ ಕನ್ನಡಕ ಜಾರಿಸಿ ನೋಡಿದ.

"ಬಿಡು ಅರೆಲಿಯಾನೊ, ನೀನು ಲಿಬರಲ್ ಆಗಿದ್ದರೂ ನನ್ನ ಅಳಿಯನೇ ಆಗಿದ್ದರೂ, ಮತಚೀಟಿಗಳಲ್ಲಿ ಆದ ವ್ಯತ್ಯಾಸವ ನೋಡಿರಲಾರೆ"

ಊರಿನಲ್ಲಿ, ಚುನಾವಣೆಯ ಫಲಿತಾಂಶಕ್ಕಿಂತ ತಮ್ಮಿಂದ ಕಸಿದುಕೊಂಡ ವಸ್ತುಗಳನ್ನು ಸೈನಿಕರು ಹಿಂತಿರುಗಿಸಲಿಲ್ಲವೆಂದು ಆಕ್ರೋಶಗೊಂಡಿದ್ದರು. ಹೆಂಗಸರ ಗುಂಪೊಂದು ಅರೆಲಿಯಾನೊನನ್ನು ಭೇಟಿಯಾಗಿ, ಅವನ ಮಾವನಿಗೆ ಹೇಳಿ ಅಡಿಗೆ ಮನೆ ಚಾಕುಗಳನ್ನು ಹಿಂತಿರುಗಿಸುವಂತೆ ಕೇಳಿಕೊಂಡಿತು. ಆದರೆ ಅಪೊಲಿನಾರ್, ಸೈನಿಕರು ಅವುಗಳನ್ನು ಲಿಬರಲ್‌ರು ಯುದ್ಧಕ್ಕೆ ಸಿದ್ಧರಾಗುತ್ತಿದ್ದಾರೆ ಎಂಬುದಕ್ಕೆ ಸಾಕ್ಷಿಯಾಗಿ ತೋರಿಸಲು ಅವುಗಳನ್ನು ತೆಗೆದುಕೊಂಡು ಹೋಗಿದ್ದಾರೆ ಎಂದು ಗುಟ್ಟಾಗಿ ವಿವರಿಸಿದ. ಆ ಮಾತಿನಲ್ಲಿದ್ದ ಅಸಡ್ಡೆ ಅವನನ್ನು ಎಚ್ಚರಿಸಿತು. ಅವನೇನೂ ಮಾತಾಡಲಿಲ್ಲ. ಆದರೆ ಒಂದು ಸಂದರ್ಭದಲ್ಲಿ, ಅವನ ಗೆಳೆಯರಾಗಿದ್ದ ಜೆರಿನಾಲ್ಡೊ ಮಾರ್ಕ್ವೇಜ್ ಮತ್ತು ಮ್ಯಾಗ್ನಿಫಿಕೊವಿಸ್ಬಾಲ್ ಮತ್ತು ಇತರರು ಚಾಕುಗಳ ಪ್ರಸಂಗದ ಬಗ್ಗೆ ಮಾತಾಡುತ್ತಿರುವಾಗ, ಅವನನ್ನು ಯಾವ ಪಕ್ಷವೆಂದು ಕೇಳಿದ. ಅರೆಲಿಯಾನೊ ಒಂದಿಷ್ಟೂ ಸಂಕೋಚವಿಲ್ಲದೆ "ನಾನು ಯಾವುದಾದರೂ ಪಕ್ಷವನ್ನು ಆರಿಸಿಕೊಳ್ಳುವುದಾದರೆ ಲಿಬರಲ್ ಪಕ್ಷವನ್ನೇ ಆರಿಸಿಕೊಳ್ಳುತ್ತೇನೆ. ಏಕೆಂದರೆ ಕನ್‌ಸರ್‌ವೆಟೀವ್‌ಗಳು ಕುತಂತ್ರಿಗಳು" ಎಂದ.

ಮರುದಿನ, ಗೆಳೆಯರ ಒತ್ತಾಯದಿಂದ, ಪಿತ್ತಜನಕಾಂಗದಲ್ಲಿನ ನೋವಿನ ಚಿಕಿತ್ಸೆಗೆಂದು ಡಾಕ್ಟರ್ ಅಲಿರಿಯೊನಗೆರಾ ಬಳಿಗೆ ಹೋದ. ಅವರ ಕಪಟವೇನೆಂಬುದು ಅರ್ಥವಾಗಿರಲಿಲ್ಲ. ಕೆಲ ವರ್ಷಗಳ ಹಿಂದೆ ಅಲಿರಿಯೊನಗೆರಾ ಔಷಧಿ ಪೆಟ್ಟಿಗೆ ಮತ್ತು ರುಚಿಯಿಲ್ಲದ ಒಂದಷ್ಟು ಗುಳಿಗೆಗಳೊಂದಿಗೆ ಮಕೊಂಡೋಕ್ಕೆ ಬಂದು ನೆಲಸಿದ್ದನಾದರೂ, ಅವನಲ್ಲಿ ಯಾರಿಗೂ ನಂಬಿಕೆಯಿರಲಿಲ್ಲ. ಅವನು ಆಷಾಢಭೂತಿಯಾಗಿದ್ದ. ವಾಸ್ತವವಾಗಿ ಅವನೊಬ್ಬ ಮೋಸಗಾರ. ಅವನ ಮುಗ್ಧ ಮುಖದ ಹಿಂದೆ ಉಗ್ರವಾದಿಯೊಬ್ಬ ಅಡಗಿದ್ದ. ಐದು ವರ್ಷಗಳ ಕಾಲ ಕಾರ್ಯಕರ್ತನಾಗಿದ್ದಾಗ ಕಾಲುಗಳಲ್ಲಿ ಉಂಟಾದ ಕಲೆಗಳನ್ನು ಮರೆಮಾಚುವಂತೆ ಬೂಟುಗಳನ್ನು ತೊಟ್ಟಿದ್ದ. ಸಂಯುಕ್ತ ರಾಷ್ಟ್ರವಾದಿಗಳ ಪ್ರಥಮ ಸಾಹಸದಲ್ಲಿ ಸೆರೆಯಾಗಿದ್ದು, ಹೇಗೋ, ಅವನು ಹೆಚ್ಚು ದ್ವೇಷಿಸುತ್ತಿದ್ದ ನಿಲುವಂಗಿಯ ಮರೆಯಲ್ಲಿ ಕುರಾಸಾವೊ ಕಡೆ ಪರಾರಿ ಆದ. ದೀರ್ಘಕಾಲದ ಅಲ್ಲಿನ ವಾಸದ ಸಮಯದಲ್ಲಿ, ಕ್ಯಾರಿಬಿಯಾದಿಂದ ತಲೆಮರೆಸಿಕೊಂಡವರನ್ನು ಕುರಾಸಾವೊಗೆ ತರಲಾಗುತ್ತಿದೆ ಎನ್ನುವ ಸುದ್ದಿ ಕೇಳಿ, ಅವನ ಕಳ್ಳ ಸಾಗಣೆದಾರರ ಹಡಗಿನಲ್ಲಿ, ಬೂಟುಗಳಲ್ಲಿ ಸಕ್ಕರೆ ಗುಳಿಗೆಗಳನ್ನು, ಮತ್ತು ವೈದ್ಯನೆಂಬ ಸುಳ್ಳು ಪ್ರಮಾಣಪತ್ರವನ್ನು ಲೀಪ್ಜಿಗ್ ವಿಶ್ವವಿದ್ಯಾಲಯದಿಂದ ಪಡೆದದ್ದೆಂದು ತೋರಿಸಿಕೊಂಡು ತಂದು ರಿಯೋಹಚಾ ತಲುಪಿದ. ನಿರಾಶೆಯಿಂದ ಕಣ್ಣೀರುಗರೆದ. ಸಿಡಿಮದ್ದಿನಂತೆ ಸ್ಫೋಟಿಸಬಹುದೆಂದು ಭಾವಿಸಿದ್ದ ಸಂಯುಕ್ತ ರಾಷ್ಟ್ರವಾದಿಗಳ ಕನಸು ಚುನಾವಣೆ ಫಲಿತಾಂಶದಿಂದ ಕರಗಿಹೋಯಿತು. ಸೋಲಿನ ಕಹಿಯಲ್ಲಿ ಬೇಸತ್ತಿದ್ದ ಡಾಕ್ಟರ್ ಸುರಕ್ಷಿತ ಸ್ಥಳವೊಂದು ದೊರೆತಲ್ಲಿ ಮುಪ್ಪಿನ ದಿನಗಳನ್ನು ನೆಮ್ಮದಿಯಿಂದ ಕಳೆಯಬಹುದೆಂದು ಯೋಚಿಸಿದ್ದ. ಈ ಹೋಮಿಯೋಪತಿ ವೈದ್ಯ ಕಡೆಗೆ ಮಕೊಂಡೊದಲ್ಲಿ ಆಶ್ರಯ ಪಡೆದ. ಚೌಕದ ಒಂದು ಕಡೆಗಿದ್ದ ಇಕ್ಕಟ್ಟಾದ ಒಂದು ಕೋಣೆಯನ್ನು ಬಾಡಿಗೆಗೆ ತೆಗೆದುಕೊಂಡಿದ್ದ. ತೀವ್ರಕಾಯಿಲೆಗೆ ಒಳಗಾಗಿ ಯಾವುದೇ ಚಿಕಿತ್ಸೆಯಿಂದ ಗುಣಮುಖರಾಗದ ರೋಗಿಗಳು ಕಡೆಗೆ ಇವನ ಸಕ್ಕರೆ ಗುಳಿಗೆಗಳಲ್ಲೇ ಸಮಾಧಾನ ಕಂಡುಕೊಂಡು ಬರುತ್ತಿದ್ದುದರಿಂದ, ಬಹಳ ಕಾಲ ಬದುಕಿದ. ಡಾನ್ ಅಪೊಲಿನಾರ್ ಅಧಿಕಾರಿಯಾಗಿದ್ದಷ್ಟೂ ಕಾಲ ಅವನಲ್ಲಿ ಅಸಮಾಧಾನ ಒಳಗೆ ಹೊಗೆಯಾಡುತ್ತಲೇ ಇತ್ತು. ಇದನ್ನು ನೆನಪಿಸಿಕೊಳ್ಳುತ್ತಾ, ಅಸ್ತಮಾ ವಿರುದ್ಧ ಹೋರಾಡುತ್ತಲೇ ಕಾಲ ಕಳೆಯುತ್ತಿದ್ದ. ಚುನಾವಣೆ ಹತ್ತಿರ ಬಂದಂತೆ ಅವನೊಳಗಿನ ಅಸಮಾಧಾನ ವ್ಯವಸ್ಥೆಯನ್ನು ಬುಡಮೇಲು ಮಾಡುವತ್ತ ಮಾಡಿತು. ಯುವಕರನ್ನು ಸಂಪರ್ಕಿಸಿ, ಅವರನ್ನು ಒಟ್ಟುಗೂಡಿಸಿ, ರಾಜಕೀಯ ವಿಚಾರಗಳ ಅರಿವಿಲ್ಲದ ಅವರನ್ನು ಗುಟ್ಟಾಗಿ ಪ್ರಚೋದಿಸಲು ಆರಂಭಿಸಿದ. ಡಾನ್ ಅಪೊಲಿನಾರ್ ಮತ ಚೀಟಿಗಳಲ್ಲಿ ವ್ಯತ್ಯಾಸ ಮಾಡಿದ್ದೆಂದು ನಂಬಲಾಗಿದ್ದ ವಿಷಯ ವಾಸ್ತವವಾಗಿ ಯುವಕರಲ್ಲಿ ಕುತೂಹಲ ಮೂಡುವಂತೆ ಮಾಡಿದ್ದು ಡಾಕ್ಟರ್ ರೂಪಿಸಿದ ತಂತ್ರವಾಗಿತ್ತು. ತನ್ನ ಶಿಷ್ಯರ ಕೈಯಲ್ಲಿ ಮತಹಾಕಿಸಿ ಚುನಾವಣೆ ಒಂದು ಪ್ರಹಸನವೆಂಬಂತೆ ತೋರಿಸಲು ಯತ್ನಿಸಿದ. "ಹಿಂಸೆಯೊಂದೇ ಪರಿಣಾಮಕಾರಿಯಾದ ಮಾರ್ಗ" ಎಂದು ಹೇಳುತ್ತಿದ್ದ.

ಅರೆಲಿಯಾನೊ ಸ್ನೇಹಿತರಲ್ಲಿ ಹೆಚ್ಚು ಮಂದಿ ಕನ್‌ಸರ್ವೇಟಿವ್ ವ್ಯವಸ್ಥೆಯನ್ನು ಇಲ್ಲದಂತೆ ಮಾಡಬೇಕೆಂಬ ಉತ್ಸಾಹ ಹೊಂದಿದ್ದರು. ಆದರೆ ಮ್ಯಾಜಿಸ್ಟ್ರೇಟ್ ಜೊತೆಗಿನ

ಸಂಬಂಧದಿಂದಾಗಿ ಯಾರೂ ಅರೆಲಿಯಾನೋನನ್ನು ತಮ್ಮ ಯೋಜನೆಗಳಲ್ಲಿ ಸೇರಿಸಿಕೊಳ್ಳುತ್ತಿರಲಿಲ್ಲ. ಅಷ್ಟೇ ಅಲ್ಲದೆ ಮಾವನ ನಿರ್ದೇಶದಂತೆ ನೀಲಿ ಬಣ್ಣದ ಮತವನ್ನು ಹಾಕಿದ್ದ ಎಂಬುದೂ ತಿಳಿದು ಬಂದಿತ್ತು. ಅವನು ಸುಮ್ಮನೆ ತನ್ನ ರಾಜಕೀಯ ಭಾವನೆಗಳನ್ನು ವ್ಯಕ್ತಪಡಿಸಿದ್ದ. ತನಗೆ ಯಾವುದೇ ಬೇನೆ ಇಲ್ಲದಿದ್ದರೂ ಕುತೂಹಲದಿಂದ ಡಾಕ್ಟರ್ ಬಳಿಗೆ ನೋವಿನ ನೆಪದಲ್ಲಿ ಚಿಕಿತ್ಸೆಗೆಂದು ಬಂದಿದ್ದ. ಕರ್ಪೂರದ ವಾಸನೆಯಿಂದ ತುಂಬಿದ್ದ. ಜೇಡಬಲೆಗಳಿಂದ ಆವರಿಸಿದ್ದ ಗುಹೆಯೊಳಗೆ ಬಂದು, ಉಸಿರಾಡಿದಾಗ ಸೀಟಿಯಂತ ಸದ್ದು ಕೇಳಿಸುತ್ತಿದ್ದ ಒಬ್ಬ ಕೊಳಕು ಮನುಷ್ಯನ ಎದುರು ನಿಂತು ಪ್ರಶ್ನೆಗಳನ್ನು ಕೇಳುವುದಕ್ಕೆ ಮುಂಚೆಯೇ ಅವನು ಇವನನ್ನು ಕಿಟಕಿಯ ಬಳಿ ಕರೆದುಕೊಂಡು ಹೋಗಿ ಕೆಳರೆಪ್ಪೆಯ ಬಿಳಿ ಭಾಗವನ್ನು ಪರೀಕ್ಷಿಸಿದ. "ಅಲ್ಲಲ್ಲಿ" ಎಂದ ಅರೆಲಿಯಾನೊ ಪಿತ್ತಜನಕಾಂಗವನ್ನು ತನ್ನೆರಡು ಬೆರಳುಗಳಿಂದ ಒತ್ತಿ ತೋರಿಸಿದ. "ಈ ಜಾಗದಲ್ಲಿಯೇ ನೋವು ಮಲಗುವುದಕ್ಕೂ ಸಾಧ್ಯವಾಗುತ್ತಿಲ್ಲ ಎಂದು ತಿಳಿಸಿದ. ಡಾ. ನಗೇರಾ, ಬಿಸಿಲು ಜಾಸ್ತಿಯಾಗಿದೆ ಎಂದು ಕಿಟಕಿಯ ಬಾಗಿಲು ಮುಚ್ಚಿದ. ಸರಳವಾದ ಮಾತುಗಳಲ್ಲಿ ಕನ್‌ಸರ್ವೇಟಿವ್‌ಗಳನ್ನು ಕೊಲೆ ಮಾಡುವುದು ದೇಶಭಕ್ತಿಯ ಕರ್ತವ್ಯ ಎಂದು ವಿವರಿಸಿ ಹೇಳಿದ. ಅನೇಕ ದಿನಗಳು ಅರೆಲಿಯಾನೊ ಸಕ್ಕರೆ ಗುಳಿಗೆಗಳ ಬಾಟಲನ್ನು ಕೊಂಡೊಯ್ಯುತ್ತಿದ್ದ. ಪ್ರತಿ ಎರಡು ಗಂಟೆಗಳಿಗೊಮ್ಮೆ ಬಾಟಲಿನಿಂದ ಮೂರು ಮಾತ್ರೆಗಳನ್ನು ಅಂಗೈ ಮೇಲೆ ಹಾಕಿಕೊಂಡು ಬಾಯೊಳಗೆ ಎಸೆದುಕೊಳ್ಳುತ್ತಿದ್ದ. ಕೂಡಲೇ ಅವು ಕರಗುತ್ತಿದ್ದವು. ಅಪೊಲಿನಾರ್ ಮಾಸ್ಕೋಟ್ ಅಳಿಯನ ಹೋಮಿಯೋಪತಿಯಲ್ಲಿನ ನಂಬಿಕೆಯನ್ನು ಗೇಲಿ ಮಾಡುತ್ತಿದ್ದ. ಆದರೆ ಅವನ ಗೆಳೆಯರು ಅವನಲ್ಲಿ, ತಮ್ಮಲ್ಲಿನ ಒಬ್ಬನನ್ನು ಕಾಣುತ್ತಿದ್ದರು. ಆ ಊರಿನ ಸ್ಥಾಪಕರ ಸರಿಸುಮಾರು ಮಕ್ಕಳೆಲ್ಲ ಪ್ರಚೋದಿತರಾಗಿದ್ದರು. ಆದರೆ ಅವರಲ್ಲಿ ಯಾರಿಗೂ ಯಾವ ರಹಸ್ಯ ಯೋಜನೆ ರೂಪುಗೊಳ್ಳುತ್ತಿದೆ ಎಂಬುದು ತಿಳಿದಿರಲಿಲ್ಲ. ಒಂದು ದಿನ ಡಾಕ್ಟರ್ ಅರೆಲಿಯಾನೋಗೆ ರಹಸ್ಯವನ್ನು ತಿಳಿಸಿದಾಗ, ಅವನು ಅದನ್ನು ಅವರೆಲ್ಲರಿಗೂ ವಿವರಿಸಿ ಹೇಳಿದ. ಕನ್‌ಸರ್ವೇಟಿವ್ ಪಕ್ಷವನ್ನು ನಿರ್ನಾಮ ಮಾಡುವ ತುರ್ತನ್ನು ಒಪ್ಪಿಕೊಂಡಿದ್ದನಾದರೂ, ಈಗಿನ ಯೋಜನೆ ಕೇಳಿ ಹೌಹಾರಿದ. ಡಾ. ನಗೇರ ವೈಯಕ್ತಿಕ ಕೊಲೆಯ ಯೋಚನೆ ಮಾಡಿದ್ದ. ಒಂದೇ ಸಮಯದಲ್ಲಿ ಸರಪಳಿಯಂತೆ ಒಬ್ಬೊಬ್ಬರ ಕೊಲೆಯನ್ನು ಮಾಡುತ್ತಾ, ಕುಟುಂಬದವರು, ಮಕ್ಕಳೂ ಎಲ್ಲರೂ ಸೇರಿದಂತೆ ಕೊಲೆಯಾದಲ್ಲಿ, ಕನ್‌ಸರ್ವೇಟಿವ್ ವ್ಯವಸ್ಥೆ ಬೇರು ಸಹಿತ ಉಚ್ಚಾಟನೆಯಾಗುವುದೆಂದು ಭಾವಿಸಿದ್ದ. ಅಂತೆಯೇ ಅಪೊಲಿನಾರ್ ಅವನ ಹೆಂಡತಿ, ಅವನ ಆರುಮಂದಿ ಹೆಣ್ಣುಮಕ್ಕಳೂ ಕೊಲೆಯಾಗಬೇಕಾದವರ ಪಟ್ಟಿಯಲ್ಲಿದ್ದರು.

"ನೀನು ಯಾವ ರೀತಿಯಿಂದಲೂ ಲಿಬರಲ್ ಅಲ್ಲ ಬರಿ ಕೊಲೆಗಡುಕ" ಎಂದು ಹೇಳುತ್ತಾ ಭಾವಾವೇಶಕ್ಕೆ ಒಳಗಾಗಿದ್ದ.

"ಹಾಗಾದರೆ ನೀನು ಆ ಬಾಟಲನ್ನು ಹಿಂತಿರುಗಿಸು ಇನ್ನು ನಿನಗೆ ಅದರ ಅಗತ್ಯವಿಲ್ಲ" ಎಂದು ಸಮಾಧಾನಕರವಾಗಿಯೇ ಮಾತನಾಡಿದ.

ಆರುತಿಂಗಳ ನಂತರವೇ ಡಾಕ್ಟರ್ ತನ್ನನ್ನು ಕೆಲಸಕ್ಕೆ ಬಾರದ, ಭಾವುಕ, ಯಾವುದೇ ಭವಿಷ್ಯವಿಲ್ಲದ, ನಿಷ್ಕ್ರಿಯ ಮನುಷ್ಯ ಎಂದು ತನ್ನ ಗುಂಪಿನಿಂದ ಹೊರಗೆ ಇರಿಸಿದ ವಿಷಯ ಅರೆಲಿಯಾನೋಗೆ ತಿಳಿದುಬಂತು. ಅಲ್ಲದೆ ತಮ್ಮ ದೇಶದ್ರೋಹದ ವಿಚಾರಗಳನ್ನು ಬಯಲು ಮಾಡುತ್ತಾನೆಂಬ ಹೆದರಿಕೆಯಿಂದ ಅವನ ಮೇಲೆ ಕಣ್ಣಿಟ್ಟಿದ್ದರು. ಅರೆಲಿಯಾನೊ ತಾನೆಂದಿಗೂ ರಹಸ್ಯವನ್ನು ಬಯಲು ಮಾಡುವುದಿಲ್ಲವೆಂದು ಸಮಾಧಾನ ಮಾಡಿದ.

ಆದರೆ ಮಾಸ್ಕೋಟ್ ಕುಟುಂಬವನ್ನು ಕೊಲೆ ಮಾಡಲು ಹೋದ ರಾತ್ರಿ ಅರೆಲಿಯಾನೊ ಬಾಗಿಲು ಕಾಯುತ್ತಿದ್ದ. ಅವನ ಖಚಿತವಾದ ನಿರ್ಧಾರದಿಂದ ಆ ಯೋಜನೆಯನ್ನು ಅನಿರ್ದಿಷ್ಟಕಾಲ ಮುಂದೂಡಬೇಕಾಯಿತು. ಇಂಥ ಸಂದಿಗ್ಧ ಸಂದಭದಲ್ಲಿಯೇ, ಪೀತ್ರೋ ಕ್ರೆಸ್ಪಿ ಮತ್ತು ಅಮರಾಂತಳ ಮದುವೆಯ ವಿಚಾರವನ್ನು ಅವನಲ್ಲಿ ಪ್ರಸ್ತಾಪ ಮಾಡಿದ್ದು, ಆದ್ದರಿಂದಲೇ ಅವನು ಮದುವೆ ವಿಷಯ ಚರ್ಚೆ ಮಾಡುವುದಕ್ಕೆ ಅದು ಸರಿಯಾದ ಸಮಯವಲ್ಲ ಎಂದು ತಿಳಿಸಿದ್ದು, ಒಂದು ವಾರ ಅವನು ಹಳೆಯ ಪಿಸ್ತೂಲೊಂದನ್ನು ಷರ್ಟಿನ ಅಡಿಯಲ್ಲಿ ಮರೆಸಿ ಇಟ್ಟುಕೊಂಡಿದ್ದ. ಅವನು ತನ್ನ ಗೆಳೆಯರ ಮೇಲೆ ಕಣ್ಣಿಟ್ಟೇ ಇದ್ದ. ಮಧ್ಯಾಹ್ನದಲ್ಲಿ ಜೋಸ್ ಆರ್ಕಾಡಿಯೋ ಮತ್ತು ರೆಬೆಕಾರೊಂದಿಗೆ ಕಾಫಿ ಕುಡಿಯುತ್ತಿದ್ದ. ಆಗ ತಾನೇ ಅವರು ಮನೆಯನ್ನು ಒಂದು ವ್ಯವಸ್ಥೆಗೆ ತರಲು ಪ್ರಯತ್ನಿಸುತ್ತಿದ್ದರು. ಏಳುಗಂಟೆಯಿಂದ ಮಾವನ ಜೊತೆ ಡೊಮಿನೋಸ್ ಆಟದಲ್ಲಿ ಮಗ್ನನಾಗಿರುತ್ತಿದ್ದ. ಊಟದ ಹೊತ್ತಿನಲ್ಲಿ ಪ್ರಾಪ್ತವಯಸ್ಸಿಗೆ ಬರುತ್ತಿದ್ದ ಆರ್ಕಾಡಿಯಾನೊಂದಿಗೆ ಹರಟೆ ಹೊಡೆಯುತ್ತಿದ್ದ. ಯುದ್ಧ ಸಮೀಪಿಸುತ್ತಲಿದೆ ಎನ್ನುವ ವಿಚಾರ ಕೇಳಿ ಬಹಳ ಉತ್ಸುಕನಾಗಿದ್ದ. ಶಾಲೆಯಲ್ಲಿ ಆರ್ಕಾಡಿಯೋಗಿಂತ ದೊಡ್ಡ ವಿದ್ಯಾರ್ಥಿಗಳೂ ಇದ್ದರು ಮತ್ತು ಇನ್ನೂ ಮಾತುಕೂಡ ಸರಿಯಾಗಿ ಬರುತ್ತಿರದ ವಿದ್ಯಾರ್ಥಿಗಳೂ ಇದ್ದು, ಸ್ವಲ್ಪಮಟ್ಟಿಗೆ ಲಿಬರಲ್ ವಾತಾವರಣ ಸೃಷ್ಟಿಯಾಗುತ್ತಿತ್ತು. ನಿಕಾನೋರ್‌ನನ್ನು ಕೊಲ್ಲುವ, ಚರ್ಚನ್ನು ಶಾಲೆಯಾಗಿ ಪರಿವರ್ತಿಸುವ, ಮುಕ್ತ ಪ್ರೀತಿಗೆ ಅವಕಾಶ ಕೊಡುವ ವಿಚಾರಗಳು ಅಲ್ಲಲ್ಲಿ ಕೇಳಿ ಬರುತ್ತಿದ್ದವು. ಅರೆಲಿಯಾನೊ ಅವನ ಉತ್ಸಾಹದ ವೇಗವನ್ನು ತಗ್ಗಿಸುವಂತೆ, ವಿವೇಕದಿಂದ ಯೋಚಿಸುವಂತೆ ಬುದ್ಧಿ ಹೇಳಿದ. ಅವನ ಸಮಾಧಾನ ತರ್ಕ, ವಾಸ್ತವತೆಯ ಪ್ರಜ್ಞೆ–ಯಾವುದಕ್ಕೂ ಕಿವಿಗೊಡದ ಸಾರ್ವಜನಿಕರ ಎದುರು ಅವನ ದುರ್ಬಲ ವ್ಯಕ್ತಿತ್ವದ ಬಗ್ಗೆ ಆರ್ಕಾಡಿಯೊ ಕಟಕಿಯಾಡಿದ. ಅರೆಲಿಯಾನೋ ಕಾದ. ಕೊನೆಗೆ ಡಿಸೆಂಬರ್ ತಿಂಗಳ ಆರಂಬದಲ್ಲಿ ಉರ್ಸುಲಾ ಬಿರುಗಾಳಿಯಂತೆ ವರ್ಕ್‌ಷಾಪನ್ನು ಪ್ರವೇಶಿಸಿ "ಯುದ್ಧ ಶುರುವಾಗಿದೆ" ಎಂದು ಕಿರುಚಿದಳು. ಯುದ್ಧ ವಾಸ್ತವವಾಗಿ ಮೂರು ತಿಂಗಳ ಹಿಂದೆಯೇ ಪ್ರಾರಂಭವಾಗಿತ್ತು. ಇಡೀ ದೇಶದಲ್ಲಿ ಸೈನಿಕ ಶಾಸನ ಜಾರಿಯಲ್ಲಿತ್ತು. ಇದು ಕೂಡಲೇ ತಿಳಿದದ್ದು ಅಪೊಲಿನಾರ್ ಮಾಸ್ಕೋಟ್‌ಗೆ ಮಾತ್ರ. ಆದರೆ ಈ ಸುದ್ದಿಯನ್ನು ತನ್ನ ಹೆಂಡತಿಗೂ ಹೇಳಿರಲಿಲ್ಲ. ಸೈನಿಕರ ದಂಡು ಇಡೀ ಊರನ್ನು ಇದ್ದಕ್ಕಿದ್ದಂತೆ ವಶಪಡಿಸಿಕೊಂಡು ಅಚ್ಚರಿಪಡಿಸಬೇಕೆಂದಿತ್ತು. ಬೆಳಗಿನ ಹೊತ್ತಿಗೆ ಸದ್ದಿಲ್ಲದೆ, ಎರಡು ಲಘು ಫಿರಂಗಿಗಳನ್ನು ಹೇಸರಗತ್ತೆಗಳಿಂದ ಎಳೆಸಿಕೊಂಡು ಪ್ರವೇಶಿಸಿ ಶಾಲೆಯಲ್ಲಿ ಮುಖ್ಯ ಕೇಂದ್ರಗಳನ್ನು ಸ್ಥಾಪಿಸಿಕೊಂಡರು. ರಾತ್ರಿ ಆರುಗಂಟೆಗೆ ಕರ್ಫ್ಯೂ ಜಾರಿಯಾಯಿತು. ಹಿಂದಿನ ಸಲಕ್ಕಿಂತಲೂ ಗಂಭೀರವಾಗಿ ಮನೆಗಳ ಶೋಧ ಆರಂಭವಾಯಿತು. ಈ ಸಲ ಕೃಷಿ

ಸಂಬಂಧ ಉಪಕರಣಗಳನ್ನು ಬಿಡದೆ ತೆಗೆದುಕೊಂಡು ಹೋದರು. ಡಾ. ನಗೇರಾನನ್ನು ಹೊರಕ್ಕೆ ಎಳೆದು ತಂದು ಚಾಕದಲ್ಲಿ ಒಂದು ಮರಕ್ಕೆ ಕಟ್ಟಿ, ಕಾನೂನಿನ ಯಾವುದೇ ನಿಯಮವನ್ನೂ ಪಾಲಿಸದೆ ಗುಂಡಿಕ್ಕಿ ಗೊಂದರು. ಫಾದರ್ ನಿಕಾನೋರ್ ಮಾಂತ್ರಿಕ ಶಕ್ತಿಯಿಂದ ಮೇಲೇಳುವ, ಬಂದೂಕಿನ ತುದಿಯಿಂದ ತಲೆಹೋಳಾಗಿಸುವ ಪವಾಡಶಕ್ತಿಯಿಂದ ಮಿಲಿಟರಿ ಅಧಿಕಾರಿಗಳನ್ನು ಪ್ರಭಾವಿಸಲು ಪ್ರಯತ್ನಿಸಿದ. ಲಿಬರಲ್ ಧೋರಣೆಯನ್ನು ಮೌನ ಉಗ್ರವಾದವೆಂದು ನಂದಿಸಿಬಿಟ್ಟರು. ಅರೆಲಿಯಾನೊ ಮಂಕಾಗಿ, ನಿಗೂಢವಾಗಿ ಕಾಣಿಸಿಕೊಂಡ ವ್ಯಕ್ತಿಯಾಗಿ ಮಾವನೊಂದಿಗೆ ಡೊಮಿನೋಸ್ ಆಟವನ್ನು ಮುಂದುವರೆಸಿದ. ಅವನಿಗೆ ತನ್ನ ಮಾವ ಈಗ ಊರಿನಲ್ಲಿ ಸಿವಿಲ್ ಮತ್ತು ಮಿಲಿಟರಿ ನಾಯಕನಾಗಿದ್ದುಕೊಂಡೂ ಅವನೇ ಮತ್ತೊಮ್ಮೆ ಈ ಊರಿನ ಪ್ರಮುಖನೆಂಬುದನ್ನು ಕಂಡುಕೊಂಡ. ನಿರ್ಧಾರಗಳನ್ನು ಸೇನಾನಾಯಕನೇ ತೆಗೆದುಕೊಳ್ಳುತ್ತಿದ್ದ. ಸಾರ್ವಜನಿಕ ವ್ಯವಸ್ಥೆಯ ರಕ್ಷಣೆಗಾಗಿ ಅತಿ ಹೆಚ್ಚಾದ ತೆರಿಗೆಯನ್ನು ಸಂಗ್ರಹಿಸುತ್ತಿದ್ದ. ಅವನ ಆದೇಶದ ಅಡಿಯಲ್ಲಿದ್ದ ನಾಲ್ಕುಜನ ಸೈನಿಕರು ಹುಚ್ಚುನಾಯಿಯ ಕಡಿತಕ್ಕೆ ಒಳಗಾಗಿದ್ದ ಹೆಂಗಸೊಬ್ಬಳನ್ನು ಮನೆಯಿಂದ ಹೊರಗೆ ಎಳೆದು ತಂದು ಬಂದೂಕಿನ ತುದಿಯಿಂದ ಚುಚ್ಚಿ ಕೊಂದರು. ಒಂದು ಭಾನುವಾರ ಸೇನೆ ವಶಪಡಿಸಿಕೊಂಡ ಎರಡು ವಾರಗಳ ನಂತರ ಅರೆಲಿಯಾನೊ, ಜೆರಿನೆಲ್ಡೊ ಮಾರ್ಕ್ವೆಜ್‌ನ ಮನೆಗೆ ಹೋಗಿ ಅವನ ಮಾಮೂಲಿಯಾದ ದನಿಯಲ್ಲಿ ಸಕ್ಕರೆಯಿಲ್ಲದ ಒಂದು ಲೋಟ ಕಾಫಿ ನೀಡುವಂತೆ ಕೇಳಿದ. ಅಡಿಗೆ ಮನೆಯಲ್ಲಿ ಅವರಿಬ್ಬರೇ ಇದ್ದಾಗ, ಎಂದೂ ಕೇಳದಿದ್ದ ಅಧಿಕಾರ ವಾಣಿಯಲ್ಲಿ "ಹುಡುಗರನ್ನು ಸಿದ್ಧವಾಗಿರಲು ಹೇಳು, ನಾವು ಯುದ್ಧಕ್ಕೆ ಹೋಗೋಣ" ಎಂದು ಆದೇಶಿಸಿ ಜೆರಿನಾಲ್ಡೊ ಮಾರ್ಕ್ವೆಜ್‌ಗೆ ನಂಬಲಾಗಲಿಲ್ಲ.

"ಯಾವ ಆಯುಧಗಳಿಂದ" ಮಾರ್ಕ್ವೆಜ್ ಕೇಳಿದ.

"ಅವರದೇ ಆಯುಧಗಳಿಂದ" ಅರೆಲಿಯಾನೋ ಉತ್ತರಿಸಿದ'.

ಮಂಗಳವಾರ ಮಧ್ಯರಾತ್ರಿ ಹುಚ್ಚು ಕಾರ್ಯಾಚರಣೆಗೆಂದು, ಮೂವತ್ತು ವರ್ಷಕ್ಕೂ ಕೆಳಗಿನ ವಯಸ್ಸಿನ ಇಪ್ಪತ್ತೊಂದು ಮಂದಿ ಅರೆಲಿಯಾನೊ ನೇತೃತ್ವದಲ್ಲಿ ತೀಕ್ಷ್ಣವಾದ ಚಾಕುಚೂರಿಗಳೊಂದಿಗೆ ರಕ್ಷಣಾಧಿಕಾರಿ ತಬ್ಬಿಬ್ಬಾಗುವಂತೆ ಮುತ್ತಿ ಅವರಲ್ಲಿದ್ದ ಆಯುಧಗಳನ್ನು ಕಸಿದುಕೊಂಡು, ಅಂಗಳದಲ್ಲಿ ಸೇನಾಧಿಕಾರಿ ಮತ್ತು ನಾಲ್ಕು ಜನ ಸೈನಿಕರನ್ನು, ಆ ಹೆಂಗಸನ್ನು ವಿನಾಕಾರಣ ಕೊಂದದ್ದಕ್ಕಾಗಿ, ಕೊಚ್ಚಿಹಾಕಿದರು.

ಅದೇ ರಾತ್ರಿ ಗುಂಡಿಕ್ಕುವ ತಂಡದ ಸದ್ದು ಕೇಳಿ ಬಂದಾಗ, ಆರ್ಕಾಡಿಯೋನನ್ನು ಆ ಊರಿನ ಸಿವಿಲ್ ಮತ್ತು ಮಿಲಿಟರಿ ನಾಯಕನೆಂದು ನಾಮಕರಣ ಮಾಡಿದರು.

ಮದುವೆಯಾಗಿದ್ದ ಕ್ರಾಂತಿಕಾರರಿಗೆ ತಮ್ಮ ಹೆಂಡತಿಯರಿಂದ ಬೀಳ್ಕೊಳ್ಳಲು ಅವಕಾಶವೇ ಇಲ್ಲದಂತಾಗಿ ಅವರ ಪಾಡಿಗೆ ಅವರನ್ನು ಬಿಟ್ಟುಬಿಟ್ಟರು. ತಮ್ಮನ್ನು ಭೀತಿಮುಕ್ತರನ್ನಾಗಿ ಮಾಡಿದವರಿಗೆ ಊರಿನ ಜನರು ಬೆಳಿಗ್ಗೆ ಅವರೆಲ್ಲ ಹೊರಟು ನಿಂತಾಗ ಉತ್ಸಾಹದಿಂದ ಉಘೇ ಉಘೇ ಹೇಳುತ್ತಾ ಮಸಾರೆ ಕಡೆ ಹೊರಟಿದ್ದ ಕ್ರಾಂತಿಕಾರಿಯೆಂದು

ಗುರುತಿಸಿಕೊಂಡಿದ್ದ ಜನರಲ್ ವಿಕ್ಟೋರಿಯಾ ಮೆದಿನಾ ಪಡೆಯನ್ನು ಸೇರಲು ಹೋಗುತ್ತಿದ್ದವರನ್ನು ಬೀಳ್ಕೊಟ್ಟರು. ಹೊರಡುವುದಕ್ಕೆ ಮೊದಲು, ಅರೆಲಿಯಾನೊ ಡಾನ್ ಅಪೊಲಿನಾರ್ ಮಾಸ್ಕೋಟ್‌ಯನ್ನು ಹೊರಗೆ ಕರೆತಂದು "ಹೆದರದಿರಿ ಮಾವಯ್ಯ, ಹೊಸ ಸರಕಾರ ನಿಮ್ಮ ಮತ್ತು ನಿಮ್ಮ ಕುಟುಂಬದ ಸುಭದ್ರತೆಯನ್ನು ನೋಡಿಕೊಳ್ಳುವುದಾಗಿ ಮಾತು ಕೊಟ್ಟಿದೆ" ಎಂದ. ಹೆಗಲಿಗೆ ಬಂದೂಕು ನೇತುಹಾಕಿ, ಉದ್ದನೆಯ ಬೂಟುಗಳನ್ನು ಧರಿಸಿ, ರಾತ್ರಿ ಒಂಭತ್ತು ಗಂಟೆವರೆಗೆ ಡೊಮಿನೋಸ್ ಆಡುತ್ತಿದ್ದ ಸಂಚುಕೋರನನ್ನು ಗುರುತು ಹಿಡಿಯುವುದು ಡಾನ್ ಅಪೊಲಿನಾರ್ ಮಾಸ್ಕೋಟ್‌ಗೆ ಬಹಳ ಕಷ್ಟವೆನಿಸಿತ್ತು.

"ಇದು ಹುಚ್ಚಾಟ ಅರೆಲಿಯೊ" ಎಂದು ಉದ್ಗರಿಸಿದ.

"ಹುಚ್ಚಾಟವಲ್ಲ, ಯುದ್ಧ. ಇನ್ನು ಮುಂದೆ ನನ್ನನ್ನು ಅರೆಲಿಯಾನೋ ಎಂದು ಕರೆಯಬೇಡಿ, ಈಗ ನಾನು ಕರ್ನಲ್ ಅರೆಲಿಯಾನೊ ಬ್ಯುಂಡಿಯಾ" ಎಂದ.

○

# 6

**ಕ**ರ್ನಲ್ ಅರೆಲಿಯಾನೊ ಬ್ಯುಂಡಿಯಾ ಮೂವತ್ತೆರಡು ದಂಗೆಗಳನ್ನು ವ್ಯವಸ್ಥೆ ಮಾಡಿದ. ಆದರೆ ಎಲ್ಲದರಲ್ಲೂ ಸೋತ. ಅವನಿಗೆ ಬೇರೆ ಬೇರೆ ಹದಿನೇಳು ಹೆಂಗಸರಿಂದ ಹದಿನೇಳು ಮಂದಿ ಗಂಡು ಮಕ್ಕಳಿದ್ದರು. ಹಿರಿಯನಿಗೆ ಮೂವತ್ತೆರಡು ವರ್ಷ ವಯಸ್ಸು ಆಗುವುದಕ್ಕೆ ಮೊದಲೇ ಒಬ್ಬೊಬ್ಬರನ್ನಾಗಿ ಹಿಡಿದು ಕೊಲ್ಲಲಾಯಿತು. ಅವನ ಮೇಲೆ ನಡೆದ ಹದಿನಾಲ್ಕು ಹಲ್ಲೆಗಳು, ಸೈನಿಕರಿಂದ ಹೊಂಚುಹಾಕಿ ಕೊಲ್ಲುವ ಪ್ರಯತ್ನಗಳು. ಗುಂಡಿಕ್ಕುವ ತಂಡ–ಹೀಗೆ ಎಲ್ಲದರಿಂದಲೂ ಅರೆಲಿಯಾನೊ ಪಾರಾಗಿದ್ದ. ಒಂದು ಕುದುರೆಯನ್ನು ಕೊಲ್ಲಲು ಸಾಕಾಗಿದ್ದ ಪ್ರಮಾಣದ ವಿಷವನ್ನು ಕಾಫಿಯಲ್ಲಿ ಬೆರೆಸಿ ಕುಡಿದೂ ಬದುಕುಳಿದ. ರಿಪಬ್ಲಿಕ್‌ನ ಅಧ್ಯಕ್ಷ ನೀಡಿದ 'ಆರ್ಡರ್ ಆಫ್ ಮೆರಿಟ್' ಪ್ರಶಸ್ತಿಯನ್ನೂ ನಿರಾಕರಿಸಿದ. ಕ್ರಾಂತಿಕಾರಿ ಸೈನ್ಯದ ಪ್ರಧಾನ ಸೇನಾಧಿಕಾರಿ ಎತ್ತರಕ್ಕೆ ಬೆಳೆದ. ಒಂದು ಗಡಿಯಿಂದ ಮತ್ತೊಂದು ಗಡಿವರೆಗೆ ಅವನ ಅಧಿಕಾರದ ವ್ಯಾಪ್ತಿಯಿತ್ತು. ಸರಕಾರವೇ ಹೆದರುತ್ತಿದ್ದ ಒಬ್ಬನೇ ಒಬ್ಬ ವ್ಯಕ್ತಿ ಇವನಾಗಿದ್ದ. ಆದರೆ ಎಂದೂ ತನ್ನ ಭಾವಚಿತ್ರವನ್ನು ತೆಗೆಯಲು ಬಿಡುತ್ತಿರಲಿಲ್ಲ. ಯುದ್ಧ ಮುಗಿದ ನಂತರ, ಜೀವನ ನಿರ್ವಹಣೆಗೆ, ಕಡೆತನಕ ನೀಡಲು ಮುಂದಾಗಿದ್ದ ಪಿಂಚಣಿಯನ್ನು ಬೇಡವೆಂದು ಪುಟ್ಟ ಪುಟ್ಟ ಚಿನ್ನದ ಮೀನುಗಳ ಕೆಲಸವನ್ನು ವರ್ಕ್‌ಷಾಪ್‌ನಲ್ಲಿ ಮುಂದುವರೆಸಿ

ಮಕೊಂಡೊದಲ್ಲಿಯೇ ಉಳಿದ. ತನ್ನವರ ಮುಂದಾಳಾಗಿ ಯುದ್ಧ ಮಾಡಿದರೂ, ಅವನಿಗೆ ಆಘಾತವಾದದ್ದು, ಇಪ್ಪತ್ತು ವರ್ಷ ನಡೆದ ಜನರ ಹೋರಾಟಕ್ಕೆ ತೆರೆಎಳೆದ ನಿರ್ಲಾಂಡಿಯಾ ಒಪ್ಪಂದಕ್ಕೆ ಸಹಿಮಾಡಿದಂದು ಬಿಟ್ಟರೆ, ಮತ್ತಾವ ಆಘಾತವೂ ಆಗಿರಲಿಲ್ಲ. ಎದೆಗೆ ಗುಂಡಿಕ್ಕಿಕೊಂಡ, ಎದೆಯನ್ನು ಹೊಕ್ಕು ಬೆನ್ನಿಂದ ಹೊರಗೆ ಬಂತಲ್ಲದೆ ಯಾವುದೇ ಮುಖ್ಯಾಂಗಗಳಿಗೆ ಹಾನಿ ಮಾಡಿರಲಿಲ್ಲ. ಒಂದೇ ಒಂದು ಇದೆಲ್ಲ ಮುಗಿದ ಮೇಲೆ ಉಳಿದದ್ದೆಂದರೆ ಮಕೊಂಡೊದಲ್ಲಿ ಅವನ ಹೆಸರಿನ ಬೀದಿ. ಆದರೂ ಮುಪ್ಪಿನಿಂದ ಸಾವಿಗೆ ಒಳಗಾಗುವ ಮೊದಲು, ತನ್ನ ಇಪ್ಪತ್ತೊಂದು ಮಂದಿಯ ತಂಡದೊಂದಿಗೆ ಜನರಲ್ ವಿಕ್ಟೋರಿಯಾ ಮೆದಿನಾನ ಪಡೆ ಸೇರಲು ಹೊರಟು ನಿಂತ ಬೆಳಿಗ್ಗೆ, "ಇದೆಲ್ಲ ತನಗೆ ಬೇಕಾಗಿರಲಿಲ್ಲ ಎಂಬ ವಿಷಯವನ್ನು ವ್ಯಕ್ತಪಡಿಸಿದ.

"ಮಕೊಂಡೊವನ್ನು ನಿನ್ನ ರಕ್ಷಣೆಗೆ ಒಪ್ಪಿಸುತ್ತಿದ್ದೇವೆ" ಎಂದಷ್ಟೇ, ಹೊರಡುವ ಮೊದಲು ಆರ್ಕಾಡಿಯೋಗೆ ಹೇಳಿದ. "ಸುಸ್ಥಿತಿಯಲ್ಲಿ ನಿನಗಿದನ್ನು ಒಪ್ಪಿಸುತ್ತಿದ್ದೇವೆ, ಇನ್ನಷ್ಟು ಚೆನ್ನಾಗಿ, ನಾವು ಬರುವಷ್ಟರಲ್ಲಿ ಅಭಿವೃದ್ಧಿಗೊಳಿಸು"

ಆರ್ಕಾಡಿಯೊ ತನಗೆ ನೀಡಿದ ಸಲಹೆ ನಿರ್ದೇಶನಗಳನ್ನು ವೈಯಕ್ತಿಕವಾಗಿ ವ್ಯಾಖ್ಯಾನಿಸಿಕೊಂಡ. ಸೈನ್ಯಾಧಿಕಾರಿಗಳಿಗೆ ಇರುವಂತೆ ಸಮವಸ್ತ್ರ, ಭುಜಕೀರ್ತಿಗಳನ್ನು ಮೆಲ್‌ಕಿಯಾಡ್ಸ್ ಪುಸ್ತಕಗಳಿಂದ ಕಲಿತು ರೂಪಿಸಿಕೊಂಡ. ಕೊಲೆಯಾದ ಸೈನ್ಯಾಧಿಕಾರಿಯ ಚಿನ್ನದ ಕಟ್ಟುಹಾಕಿದ ಖಡ್ಗವನ್ನು ಸೊಂಟಕ್ಕೆ ಸಿಕ್ಕಿಸಿಕೊಂಡ. ಊರಿನ ಪ್ರವೇಶದ್ವಾರದಲ್ಲಿ ಎರಡು ಫಿರಂಗಿಗಳನ್ನು ಇರಿಸಿದ. ತನ್ನ ಕ್ರಾಂತಿಕಾರಿ ಮಾತುಗಳಿಂದ ಉತ್ತೇಜಿತರಾಗಿದ್ದ ತನ್ನ ಹಳೆಯ ವಿದ್ಯಾರ್ಥಿಗಳಿಂದ ಸಮವಸ್ತ್ರ ತೊಡುವಂತೆ ಮತ್ತು ಹೊರಗಿನವರಿಗೆ ಊರಿನಲ್ಲಿ ಬಿಗಿ ಬಂದೋಬಸ್ತ್ ಇದೆಯೆಂಬ ಭಾವನೆ ಮೂಡುವುದಕ್ಕಾಗಿ ಅವರನ್ನು ಊರಿನ ಬೀದಿಗಳಲ್ಲಿ ಗಸ್ತು ತಿರುಗುವಂತೆ ಮಾಡಿದ. ಇದು ಎರಡು ರೀತಿಯಲ್ಲಿ ಮೋಸವಾಗಿತ್ತು. ಸರಕಾರ ಹತ್ತು ತಿಂಗಳ ಕಾಲ ಆಕ್ರಮಣಕ್ಕೆ ಮುಂದಾಗದೆ ಇತ್ತು. ಆದರೆ ಮುಂದಾಗಿ ಒಂದು ಸಲ ಆಕ್ರಮಣ ಮಾಡಿದ್ದೇ, ಕೇವಲ ಅರ್ಧಗಂಟೆಯಲ್ಲಿ ಪ್ರತಿರೋಧವನ್ನು ನಿರ್ನಾಮಮಾಡಿಬಿಟ್ಟಿತು. ತನ್ನ ಆಡಳಿತದ ಮೊದಲ ದಿನದಿಂದಲೇ ಕಟ್ಟಳೆಗಳನ್ನು ಜಾರಿಗೊಳಿಸುವುದಕ್ಕೆ ಮುಂದಾದ. ಪ್ರತಿದಿನವೂ ತನ್ನ ತಲೆಗೆ ಬಂದದ್ದೆಲ್ಲವನ್ನೂ ದಿನಕ್ಕೆ ನಾಲ್ಕರಂತೆ ಜಾರಿಮಾಡಿದ. ಹದಿನೆಂಟು ವರ್ಷ ಮೇಲ್ಪಟ್ಟ ಹುಡುಗರನ್ನು ಮಿಲಿಟರಿ ಸೇವೆಗೆ ಸೇರುವುದನ್ನು ಕಡ್ಡಾಯ ಮಾಡಿದ; ಸಂಜೆ ಆರುಗಂಟೆಯ ಮೇಲೆ ಬೀದಿಗಳಲ್ಲಿ ಓಡಾಡುವ ಪ್ರಾಣಿಗಳನ್ನು ಸಾರ್ವಜನಿಕ ಸ್ವತ್ತೆಂದು ಘೋಷಿಸಿದ. ವಯಸ್ಸಾದವರು ತೋಳಿಗೆ ಕೆಂಪು ಪಟ್ಟಿಯನ್ನು ಕಟ್ಟಿಕೊಳ್ಳಬೇಕೆಂದು ವಿಧಿಸಿದ. ಫಾದರ್ ನಿಕಾನೋರ್‌ನನ್ನು ಪ್ರತ್ಯೇಕವಾಗಿರಿಸಿ, ಅವನ ಪ್ರಾರ್ಥನಾ ಸಭೆ, ಗಂಟೆಗಳ ಮೊಳಗು, ಲಿಬರಲ್‌ರ ವಿಜಯೋತ್ಸವ ಸಂದರ್ಭಕ್ಕೆಂದೇ ಸೀಮಿತಗೊಳಿಸಲಾಯಿತು. ಅವನ ಗುರಿಗಳ ಬಗ್ಗೆ ಯಾರೂ ಅನುಮಾನಿಸಬಾರದೆಂಬುದನ್ನು ತಿಳಿಸಲು ಚೌಕವೊಂದರಲ್ಲಿ ಬೆದರು ಬೊಂಬೆಯನ್ನು ನಿಲ್ಲಿಸಿ ಅದಕ್ಕೆ ಗುಂಡಿಕ್ಕುವಂತೆ ಮಾಡಿದ. ಮೊದಲಿಗೆ ಯಾರೂ ಇದೆಲ್ಲವನ್ನೂ ಗಂಭೀರವಾಗಿ ಭಾವಿಸಲಿಲ್ಲ. ಎಷ್ಟಾಗಲಿ ಅವರೆಲ್ಲ ವಯಸ್ಸಿಗೆ ಬರುತ್ತಿದ್ದ ಶಾಲಾ

ಮಕ್ಕಳಾಗಿದ್ದರು. ಒಂದು ರಾತ್ರಿ ಆರ್ಕಾಡಿಯೊ ಕತಾರಿನೋನ ಅಂಗಡಿಗೆ ಹೋದ. ತುತೂರಿ ಊದುವವನೊಬ್ಬ ಅವನನ್ನು ಬಹಳ ಸಂಭ್ರಮದಿಂದ ಸ್ವಾಗತಿಸಿದ. ಇದನ್ನು ನೋಡಿದ ಗಿರಾಕಿಗಳು ನಗುವಂತೆ ಮಾಡಿತು. ಕೂಡಲೇ ಆರ್ಕಾಡಿಯೊ ಅಧಿಕಾರಿಗಳಿಗೆ ಅಗೌರವ ತೋರಿಸಿದ್ದಕ್ಕಾಗಿ ಗುಂಡಿಕ್ಕಿಸಿದ. ಇದನ್ನು ವಿರೋಧಿಸಿದವರನ್ನು ಸ್ಕೂಲಿನಲ್ಲಿ ಕಟ್ಟಿದ್ದ ಗೂಟಗಳಿಗೆ ಕಟ್ಟಿ ಬ್ರೆಡ್ಡು ಮತ್ತು ನೀರನ್ನು ಕೊಟ್ಟಿದ್ದ. ಅವನ ಅತಿರೇಕದ ಚರ್ಯೆಗಳು, ಒಂದೊಂದಾಗಿ ಕಿವಿಗೆ ಬಿದ್ದಾಗಲೆಲ್ಲ "ಕೊಲೆಗಾರ" ಎಂದು ಉರ್ಸುಲಾ ಅಬ್ಬರಿಸುತ್ತಿದ್ದಳು. "ಅರೆಲಿಯಾನೋಗೆ ಇದೆಲ್ಲ ಗೊತ್ತಾದರೆ ನಿನ್ನನ್ನು ಗುಂಡಿಕ್ಕಿ ಕೊಲ್ಲದೆ ಬಿಡುವುದಿಲ್ಲ. ಇದನ್ನು ನೋಡಿ ಎಲ್ಲರಿಗಿಂತ ಹೆಚ್ಚು ಖುಷಿ ಪಡುವವರಲ್ಲಿ ನಾನೇ ಮೊದಲಿಗಳಾಗಿರುತ್ತೇನೆ" ಎಂದಳು. ಆದರೆ ಇದರಿಂದ ಏನೂ ಪ್ರಯೋಜನವಾಗಲಿಲ್ಲ. ಆರ್ಕಾಡಿಯೊ ನಿಯಮಗಳನ್ನು ಮತ್ತಷ್ಟು ಬಿಗಿಗೊಳಿಸುತ್ತ, ಅನವಶ್ಯಕ ಶಾಸನಗಳನ್ನು ಎಷ್ಟರಮಟ್ಟಿಗೆ ಮುಂದುವರೆಸಿದನೆಂದರೆ, ಮಕೊಂಡೊ ಎಂದೂ ಕಾಣದ ಅತ್ಯಂತ ಕ್ರೂರಿಯಾದ ಆಡಳಿತಗಾರನೆಂದು ಗುರುತಿಸಿಕೊಂಡ. ಒಂದು ಸಂದರ್ಭದಲ್ಲಿ ಅಪೊಲಿನಾರ್ "ಲಿಬರಲ್‌ಗಳ ಸ್ವರ್ಗ ಇದೇ, ವ್ಯತ್ಯಾಸವೇನೆಂಬುದನ್ನು ತಿಳಿದುಕೊಂಡು ಅನುಭವಿಸಲಿ" ಎಂದ. ಆರ್ಕಾಡಿಯೋಗೆ ವಿಷಯ ತಿಳಿಯಿತು. ಸೈನಿಕರೊಂದಿಗೆ ಹೋಗಿ ಮನೆ ಮೇಲೆ ಮುಗಿಬಿದ್ದ. ಪೀಠೋಪಕರಣಗಳನ್ನು ಹಾಳುಮಾಡಿದ. ಹೆಣ್ಣುಮಕ್ಕಳನ್ನು ಎಳೆದಾಡಿದ. ಡಾನ್ ಅಪೊಲಿನಾರ್‌ನನ್ನು ಎಳೆದ. ಉರ್ಸುಲಾ, ಜನ ಛೀಮಾರಿ ಹಾಕುತ್ತಿದ್ದುದನ್ನು ಕೇಳಿಸಿಕೊಳ್ಳುತ್ತಾ ಹೋಗಿ ಕೇಂದ್ರ ಕಛೇರಿಯ ಅಂಗಳವನ್ನು ಪ್ರವೇಶಿಸಿದಳು. ಆರ್ಕಾಡಿಯೊ ಕೂಡ ತನ್ನ ತಂಡದವರಿಗೆ ಗುಂಡಿಕ್ಕಲು ಆದೇಶ ಕೊಡುವ ಪ್ರಯತ್ನದಲ್ಲಿದ್ದ.

"ನಿಂಗೆಷ್ಟು ಧೈರ್ಯ ಸೂಳೆ ಮಗನೆ" ಕಿರುಚಿ ಹೇಳಿದಳು ಉರ್ಸುಲಾ.

ಆರ್ಕಾಡಿಯೊ ಪ್ರತಿಕ್ರಿಯಿಸಲು ಹೊರಡುವುದಕ್ಕೆ ಮೊದಲೆ ಉರ್ಸುಲಾ ಒಂದು ಸಲ ಕಪಾಳಕ್ಕೆ ಹೊಡೆದಳು. "ಎಷ್ಟು ಧೈರ್ಯ ನಿನಗೆ ಕೊಲೆಗಡುಕ" ಜೋರಾಗಿ ಹೇಳಿದಳು. "ಕೆಟ್ಟ ಮಗನ ತಾಯಿಯಾದ ನನ್ನನ್ನೂ ಕೊಂದು ಬಿಡು, ಇದರಿಂದ ನಿನ್ನಂಥ ಮಗನಿಗೆ ಜನ್ಮಕೊಟ್ಟ ನಿನ್ನಿಂದ ಆಗಬಹುದಾದ ನಾಚಿಕೆ ಅವಮಾನ ನೋಡಿ ಅಳಬೇಕಾದ ಅಗತ್ಯ ಇರುವುದಿಲ್ಲ. ನಿರ್ದಯವಾಗಿ ಅವನನ್ನು ಹೊಡೆಯುತ್ತಲೆ ಅಂಗಳದವರೆಗೂ ಅಟ್ಟಿಸಿಕೊಂಡು ಹೋದಳು. ಆರ್ಕಾಡಿಯೊ ಬಸವನ ಹುಳುವಿನಂತೆ ಸಿಂಬೆ ಸುತ್ತಿಕೊಂಡು ಉರುಳಿದ". ಅಪೊಲಿನಾರ್, ಬೆದರು ಬೊಂಬೆ ಕಟ್ಟಿದ್ದ ಕಂಬಕ್ಕೆ ಬಿಗಿಯಲ್ಪಟ್ಟಿದ್ದು ಪ್ರಜ್ಞಾಹೀನ ಸ್ಥಿತಿಯಲ್ಲಿದ್ದ ಬೆದರು ಬೊಂಬೆಯನ್ನು ತಮಾಶೆಗೆಂದು ಗುಂಡು ಹೊಡೆದು ಚೂರು ಚೂರು ಮಾಡಿದ್ದರು. ಗುಂಪಿನಲ್ಲಿದ್ದ ಹುಡುಗರು ಉರ್ಸುಲಾ ತಮ್ಮನ್ನೂ ಅಟ್ಟಿಸಿಕೊಂಡು ಬಂದಾಳು ಎಂದು ಹೆದರಿ ದಿಕ್ಕಾಪಾಲಾಗಿ ಓಡಿದರು. ಆದರೆ ಅವಳು ಅವರತ್ತ ಕಣ್ಣೆತ್ತಿಯೂ ನೋಡಲಿಲ್ಲ. ಸಮವಸ್ತ್ರವನ್ನು ಹರಿದುಕೊಂಡು, ನೋವಿನಿಂದ ಕುಂಯ್‌ಗುಡುತ್ತಾ, ರೋಷಕಾರುತ್ತಾ ಇದ್ದ ಆರ್ಕಾಡಿಯೋನನ್ನು ಬಿಟ್ಟು ಅಪೊಲಿನಾರ್‌ನ ಕಟ್ಟುಗಳನ್ನು ಬಿಚ್ಚಿ ಮನೆಗೆ ಕರೆದುಕೊಂಡು ಹೋದಳು. ಕೇಂದ್ರ ಕಛೇರಿಯನ್ನು ಬಿಡುವುದಕ್ಕೆ ಮೊದಲು ಗೂಟಕ್ಕೆ ಕಟ್ಟಿದ್ದವರನ್ನೆಲ್ಲ ಬಿಡಿಸಿದಳು.

ಆ ದಿನದಿಂದ ಅವಳದೇ ರಾಜ್ಯವಾಯಿತು. ಭಾನುವಾರಗಳಲ್ಲಿ ಪ್ರಾರ್ಥನಾ ಸಭೆಗಳನ್ನು ಮತ್ತೊಮ್ಮೆ ಆರಂಭಿಸಿದಳು. ತೋಳಿನ ಕೆಂಪು ಪಟ್ಟಿಗಳನ್ನು ಕೈಬಿಟ್ಟಳು. ಹುಚ್ಚುಚ್ಚಾದ ಕಟ್ಟಳೆಗಳನ್ನು ತೊಡೆದು ಹಾಕಿದಳು. ಅಷ್ಟೆಲ್ಲ ಸಾಮರ್ಥ್ಯದ ನಡುವೆಯೂ ತನ್ನ ದುರದುಷ್ಟಕ್ಕಾಗಿ ಅತ್ತಳು. ಅವಳನ್ನು ಒಂಟಿತನ ಎಷ್ಟು ಕಾಡಿತೆಂದರೆ, ಕೆಲಸಕ್ಕೆ ಬಾರದ ಎಲ್ಲರೂ ಮರೆತಿದ್ದ ಗಂಡನ ಸಹವಾಸವನ್ನು ಬಯಸಿದಳು. ಜೂನ್ ತಿಂಗಳ ಮಳೆಯ ರಭಸಕ್ಕೆ ಛಾವಣಿ ಬಿದ್ದು ಹೋಗುವ ಭಯ ಉಂಟಾದಾಗ, "ನೋಡು, ನಮ್ಮ ಸ್ಥಿತಿ ಎಲ್ಲಿಗೆ ಬಂದಿದೆ" ಎಂದು ಅವನೊಂದಿಗೆ ಹೇಳಿದಳು. "ನೋಡು ಮನೆ ಎಷ್ಟು ಖಾಲಿಯಾಗಿದೆ. ಮಕ್ಕಳೆಲ್ಲ ಎಲ್ಲೆಲ್ಲೋ ಚದುರಿ ಪ್ರಪಂಚದ ಯಾವ ಯಾವುದೋ ಮೂಲೆಯಲ್ಲಿದ್ದಾರೆ. ನಾವೀಗ ಮತ್ತೆ ಮೊದಲಿನ ಹಾಗೆ ಇಬ್ಬರೇ ಒಂಟಿಯಾಗಿದ್ದೇವೆ" ಎಂದಳು. ಜೋಸ್ ಆರ್ಕಾಡಿಯೊ ಬ್ಯುಂಡಿಯಾ ಯಾವುದರ ಪರಿವೆಯೂ ಇಲ್ಲದಿದ್ದವನಾಗಿ ಅವಳ ಅಳಲಿಗೆ ಕಿವುಡಾಗಿದ್ದ. ಮತಿಭ್ರಮಣೆಯ ಮೊದಲ ದಿನಗಳಲ್ಲಿ, ದೈನಂದಿನ ಅತಿ ಅಗತ್ಯಗಳನ್ನು ಹರಕುಮುರುಕ ಲ್ಯಾಟಿನ್ ವಾಕ್ಯಖಂಡಗಳಲ್ಲಿ ತಿಳಿಸುತ್ತಿದ್ದ. ಒಮ್ಮೊಮ್ಮೆ ಸ್ಪಷ್ಟವಾಗಿ ಮಾತನಾಡುತ್ತಿದ್ದ ಸಂದರ್ಭಗಳಲ್ಲಿ, ಅಮರಾಂತ ಅವನಿಗೆ ಊಟವನ್ನು ತರುತ್ತಿದ್ದಾಗ, ಅವನಿಗೆ ಏನಾಗುತ್ತಿದೆ ಏನು ಚಿಂತೆ ಎನ್ನುವುದನ್ನು ತಿಳಿಸುತ್ತಿದ್ದ. ಅವಳು ಕೊಡುತ್ತಿದ್ದ ಚೀಪುವ ವಸ್ತುಗಳನ್ನು, ಸಾಸಿವೆ ಲೇಪವನ್ನು ಸ್ವೀಕರಿಸುತ್ತಿದ್ದ. ಆದರೆ ಉರ್ಸುಲಾ ಅವನೊಂದಿಗೆ ತನ್ನ ಸಂಕಟವನ್ನು ಹೇಳಿಕೊಳ್ಳಲು ಹೋಗುವ ಹೊತ್ತಿಗೆ, ವಾಸ್ತವದ ಅರಿವನ್ನೇ ಕಳೆದುಕೊಂಡ ಸ್ಥಿತಿಯಲ್ಲಿದ್ದ. ಸ್ಟೂಲಿನ ಮೇಲೆ ಸ್ನಾನಕ್ಕೆ ಕುಳ್ಳಿರಿಸಿ, ಮನೆಯ ವಿಷಯಗಳನ್ನು ಮಾತಾಡುತ್ತಲೇ, ಸ್ವಲ್ಪ ಸ್ವಲ್ಪವಾಗಿ ನೀರಿನಿಂದ ಮೀಯಿಸುತ್ತಿದ್ದಳು. "ನಾಲ್ಕು ತಿಂಗಳ ಹಿಂದೆ ಅರೆಲಿಯಾನೊ ಯುದ್ಧಕ್ಕೆಂದು ಹೋದ. ಆದರೆ ಅವನ ವಿಷಯವಾಗಿ ಏನೂ ತಿಳಿದುಬಂದಿಲ್ಲ" ಎಂದು ಬೆನ್ನಿಗೆ ಸೋಪು ಹಚ್ಚಿ ಬ್ರಷ್‌ನಿಂದ ಉಜ್ಜುತ್ತಾ ಹೇಳಿದಳು. "ಆರ್ಕಾಡಿಯೊ ದೊಡ್ಡ ಮನುಷ್ಯನಾಗಿ ಬಂದ. ನಿನಗಿಂತ ಎತ್ತರ, ಮೈಯೆಲ್ಲ ಹಚ್ಚೆಯಿಂದ ತುಂಬಿಸಿಕೊಂಡಿದ್ದ. ಆದರೆ ಅವನು ನಮ್ಮನ್ನೆಲ್ಲ ತಲೆತಗ್ಗಿಸುವಂತೆ ಮಾಡಿದ". ಇಂಥ ಕೆಟ್ಟ ಸುದ್ದಿಗಳಿಂದ ತನ್ನ ಗಂಡ ದುಃಖಿಸುತ್ತಾನೆ ಎಂದು ಯೋಚಿಸಿ, ಸುಳ್ಳನ್ನು ಹೇಳಬೇಕೆಂದು ನಿರ್ಧರಿಸಿದಳು. ಅವನ ಬಹಿಷ್ಠದ ಮೇಲೆ ಬೂದಿಯನ್ನು ಚೆಲ್ಲಿ ಅದನ್ನು ಸನಿತೆಯಿಂದ ಎತ್ತಿಕೊಳ್ಳಬೇಕೆಂದುಕೊಳ್ಳುತ್ತಾ, ನಾನು ಹೇಳಬೇಕೆಂದುಕೊಂಡದ್ದನ್ನು ಕೇಳಿದರೆ ನಿನಗೆ ನಂಬಿಕೆ ಬರೊಲ್ಲ. ದೇವರು ಅನುಗ್ರಹಿಸಿ ಅವರಿಬ್ಬರೂ ಮದುವೆಯಾದರು. ಅವರು ಬಹಳ ಸುಖವಾಗಿದ್ದಾರೆ – ಎಂದು ತಿಳಿಸಿದಳು. ಮೋಸ ಮಾಡುವುದರಲ್ಲಿಯೂ ಎಷ್ಟು ಪ್ರಾಮಾಣಿಕತೆ ತೋರಿದಳೆಂದರೆ ಕಡೆಗೆ ತನ್ನ ಸುಳ್ಳುಗಳಿಂದ ತಾನೇ ಸಮಾಧಾನ ಪಟ್ಟುಕೊಳ್ಳುವಂತಾಯಿತು. "ಆರ್ಕಾಡಿಯೊ ಈಗ ಬಹಳ ಗಂಭೀರ ಮನುಷ್ಯನಾಗಿದ್ದಾನೆ. ತುಂಬ ಧೈರ್ಯವಂತ, ನೋಡಲು ಚೆನ್ನಾಗಿದ್ದಾನೆ, ಸಮವಸ್ತ್ರ, ಖಡ್ಗದೊಂದಿಗೆ ಚೆನ್ನಾಗಿ ಕಾಣುತ್ತಾನೆ" ಎಂದಳು. ಅವಳ ಮಾತು ಹೆಣದೊಂದಿಗೆ ಮಾತಿನಂತಿತ್ತು. ಜೋಸ್ ಆರ್ಕಾಡಿಯೊ ಬ್ಯುಂಡಿಯಾ ಎಲ್ಲ ದುಃಖಗಳನ್ನು ದಾಟಿದ ಸ್ಥಿತಿಯಲ್ಲಿದ್ದ. ಅವನು ಪ್ರಶಾಂತವಾಗಿ, ಯಾವುದನ್ನೂ ಹಚ್ಚಿಕೊಳ್ಳದ ಸ್ಥಿತಿಯಲ್ಲಿದ್ದುದನ್ನು ಗಮನಿಸಿದ ಉರ್ಸುಲಾ ಅವನನ್ನು ಬಿಡುಗಡೆ ಮಾಡಲು ನಿರ್ಧರಿಸಿದಳು. ಅವನು ಸ್ಟೂಲಿನ ಮೇಲಿಂದ ಕದಲಲಿಲ್ಲ.

ಬಿಸಿಲು ಗಾಳಿಗೆ ಒಡ್ಡಿಕೊಂಡು ಕುಳಿತಲ್ಲಿಯೇ ಕುಳಿತಿದ್ದ. ಕಣ್ಣಿಗೆ ಕಾಣುವ, ಮರದ ಬೊಡ್ಡೆಗೆ ಕಟ್ಟಿಹಾಕಿದ ಯಾವ ಬಂಧನವೂ ಅಗತ್ಯವಿಲ್ಲವೆಂಬಂತೆ ಕುಳಿತೇ ಇದ್ದ. ಆಗಸ್ಟ್ ಹೊತ್ತಿಗೆ, ಕೊನೆಯೇ ಇಲ್ಲದ ಚಳಿಗಾಲದಲ್ಲಿ, ಉರ್ಸುಲಾಗೆ ಕಡೆಯದಾಗಿ ಒಂದು ಸಣ್ಣ ಸುದ್ದಿಯನ್ನು ಕೊಡುವುದಕ್ಕಾಯಿತು.

"ಇನ್ನೂ ಅದೃಷ್ಟ ನಮ್ಮ ಬಾಗಿಲು ತಟ್ಟುತ್ತಿದೆ ಎನ್ನುವ ವಿಚಾರವನ್ನು ನಂಬುತ್ತೀಯಾ?... ಅಮರಾಂತ ಮತ್ತು ಪಿಯಾನೊ ಇಟಾಲಿಯನ್ ಹುಡುಗ ಮದುವೆಯಾಗಲಿದ್ದಾರೆ" – ಎಂದು ತಿಳಿಸಿದಳು.

ಉರ್ಸುಲಾಳ ರಕ್ಷಣೆಯಲ್ಲಿ ಅಮರಾಂತ ಮತ್ತು ಪೀತ್ರೋ ಕ್ರೆಸ್ಪಿ ನಡುವೆ ಸ್ನೇಹ ಗಾಢವಾಯಿತು. ಈಗ ಅವಳಿಗೆ ಅವರಿಬ್ಬರ ಭೇಟಿಯ ಬಗ್ಗೆ ಕಣ್ಗಾವಲಿನ ಅಗತ್ಯವಿರಲಿಲ್ಲ. ಸಂಜೆಯ ಸಮಯದಲ್ಲಿ ಇಟಾಲಿಯನ್ ಗುಂಡಿಗೆ ಗಾರ್ಡೆನಿಯಾ ಹೂ ಸಿಕ್ಕಿಸಿಕೊಂಡು ಬಂದು, ಅಮರಾಂತಳಿಗೆ ಪೆಟ್ರಾರ್ಕನ ಸಾನೆಟ್‌ಗಳನ್ನು ಭಾಷಾಂತರಿಸುತ್ತಿದ್ದ. ಅವರು ಮುಂಭಾಗದಲ್ಲಿ, ಉಸಿರುಗಟ್ಟಿಸುವ ಹೂಗಳ ನಡುವೆ ಕುಳಿತುಕೊಳ್ಳುತ್ತಿದ್ದರು. ಯುದ್ಧದ ಆಘಾತಕಾರಿ ಸುದ್ದಿಗಳಿಗೆ ತಲೆಕೆಡಿಸಿಕೊಳ್ಳದೆ ಅವನು ಓದುತ್ತಲೂ ಅವಳು ಕಸೂತಿ ಮಾಡುತ್ತಲೂ ಸೊಳ್ಳೆಗಳ ಕಾಟ ಶುರುವಾಗಿ ನಡುಮನೆಗೆ ಹೋಗಬೇಕಾಗುವವರೆಗೂ ಕುಳಿತಿರುತ್ತಿದ್ದರು. ಅಮರಾಂತಳ ಸೂಕ್ಷ್ಮತೆ, ಮೃದುತೆಗಳು ಅವನೊಳಗೆ ಅದೃಶ್ಯದ ಬಲೆಯೊಂದನ್ನು ಹೆಣೆಯುತ್ತಿದ್ದವು. ಆದರೂ ಎಂಟುಗಂಟೆಗೆ ಹೊರಡಬೇಕಾಗುತ್ತಿದ್ದುದರಿಂದ ಉಂಗುರವಿಲ್ಲದ ಬೆರಳುಗಳಿಂದ ಅದನ್ನು ಪಕ್ಕಕ್ಕೆ ಸರಿಸುತ್ತಿದ್ದ. ಇಟಲಿಯಿಂದ ಅವನಿಗೆ ಬರುತ್ತಿದ್ದ ಸುಂದರವಾದ ಪೋಸ್ಟ್‌ಕಾರ್ಡ್‌ಗಳ ಆಲ್ಬಮನ್ನು ತಯಾರಿಸಿದರು. ಅವೆಲ್ಲವೂ ಪ್ರಶಾಂತವಾದ ಪಾರ್ಕುಗಳಲ್ಲಿ ಏಕಾಂತದಲ್ಲಿದ್ದ ಪ್ರಣಯಿಗಳ ಚಿತ್ರಗಳಾಗಿದ್ದವು. ಹೃದಯದ ಚಿತ್ರ, ನಡುವೆ ಭೇದಿಸುತ್ತಿರುವ ಬಾಣಗಳು, ಪಾರಿವಾಳಗಳು ಹಿಡಿದಿದ್ದ ಚಿನ್ನದ ಪಟ್ಟಿಗಳು ಇತ್ಯಾದಿಯಾದ ಚಿತ್ರಗಳಾಗಿದ್ದವು. ಕಾರ್ಡುಗಳನ್ನು ಗಮನಿಸುತ್ತಾ 'ಫ್ಲಾರೆನ್ಸಿನ ಈ ಪಾರ್ಕಿಗೆ ನಾನು ಹೋಗಿದ್ದೆ, ಯಾರಾದರೂ ಕೈಯನ್ನು ಹೊರಚಾಚಿದರೆ ಸಾಕು, ಕಾಳುಗಳನ್ನು ತಿನ್ನಲು ಹಕ್ಕಿಗಳು ಬಂದುಬಿಡುತ್ತವೆ' ಎಂದು ವಿವರಿಸುತ್ತಿದ್ದ. ಒಂದೊಂದು ಸಲ ವೆನಿಸಿನ ವಾಟರ್ ಕಲರ್ಸ್ ನೋಡಿದಾಗ, ಅಲ್ಲಿನ ಮಣ್ಣಿನ ವಾಸನೆ, ಕೊಳೆತ ಮೀನಿನ ವಾಸನೆಯ ನೆನಪು ಹೂವಿನ ಸುಗಂಧವಾಗಿ ಪರಿವರ್ತಿತವಾಗುತ್ತಿತ್ತು. ಅಮರಾಂತ ನಿಟ್ಟುಸಿರುಬಿಡುತ್ತಿದ್ದಳು; ನಗುತ್ತಿದ್ದಳು, ಸರ್ವನಾಶವಾದ ಆ ಪುರಾತನನಗರಗಳ ಅವಶೇಷಗಳ ಪ್ರದೇಶದಲ್ಲಿನ, ಗತವೈಭವ, ಅಲ್ಲಿ ಮಗುವಿನಂತೆ ಮಾತಾಡುವ ಚೆಲುವಾದ ಗಂಡು ಹೆಣ್ಣುಗಳ, ಎರಡನೆ ಮಾತೃಭೂಮಿಯ ಕನಸನ್ನು ಕಾಣುತ್ತಿದ್ದಳು. ಅದನ್ನು ಹುಡುಕುತ್ತಾ ಸಮುದ್ರವನ್ನು ದಾಟಿದ ಮೇಲೆ, ರೆಬೆಕಾಳ ಜೊತೆಗಿನ ಪ್ರೀತಿಯ ಗೊಂದಲದ ನಂತರ ಪೀತ್ರೋ ಕ್ರೆಸ್ಪಿಗೆ, ಪ್ರೀತಿ ಎಂಬುದು ದೊರೆತಿತ್ತು. ಸಂತೋಷ ಸಮೃದ್ಧಿಗಳೆರಡೂ ಒಟ್ಟಿಗೆ ಲಭಿಸಿದ್ದವು. ಅವನ ಅಂಗಡಿ ಸಾಕಷ್ಟು ಬೆಳೆದು ಇಡೀ ಬ್ಲಾಕನ್ನೇ ಆವರಿಸಿಕೊಂಡಿತ್ತು. ಕಲ್ಪನಾ ಜಗತ್ತೇ ಅಲ್ಲಿತ್ತು. ಫ್ಲಾರೆನ್ಸಿನ ಬೆಲ್‌ಟವ ಪ್ರತಿಕೃತಿ, ಸೊರೆಂಟೋದ ಮ್ಯೂಸಿಕ್ ಬಾಕ್ಸ್‌ಗಳು, ತೆಗೆದಾಗ ಪಂಚಸ್ವರ ಸಂಗೀತವನ್ನು

ಹೊಮ್ಮಿಸುತ್ತಿದ್ದ ಚೀನಾದ ಕಾಂಪ್ಯಾಕ್ಸ್‌ಗಳು ಅಲ್ಲದೆ ಊಹೆಗೆ ನಿಲುಕಬಹುದಾದ ಎಲ್ಲ ಬಗೆಯ ಸಂಗೀತ ವಾದ್ಯಗಳು, ಯಂತ್ರಚಾಲಿತ ಬೊಂಬೆಗಳು ಮತ್ತು ಇತರೆ ಆಟಿಕೆಗಳು – ಹೀಗೆ ಏನೆಲ್ಲ ಸಾಧ್ಯವೊ ಅವೆಲ್ಲವೂ ಅವನ ಅಂಗಡಿಯಲ್ಲಿದ್ದವು. ಅವನಿಗೂ ಟರ್ಕಿಯರ ಆ ಬೀದಿಗೂ ನಿಜವಾಗಿ ಕೃತಜ್ಞತೆ ಸಲ್ಲಬೇಕು. ಅಲ್ಲಿ ಬಂದರೆ ಸಾಕು ಆರ್ಕಾಡಿಯೋನ ಹುಚ್ಚಾಟಗಳು, ದೂರದಲ್ಲಿ ನಡೆಯುತ್ತಿದ್ದ ಯುದ್ಧದ ಭೀತಿ ಎಲ್ಲದರಿಂದಲೂ ಸಂಗೀತದ ಓಯಸಿಸ್ ಆದ ಆ ಪ್ರದೇಶಗಳು ಮುಕ್ತಿ ಪಡೆಯುತ್ತಿತ್ತು. ಪೀತ್ರೋ ಕ್ರೆಸ್ಪಿಗೆ ಸಂಗೀತ ಶಾಲೆಯಿಂದ ಅಷ್ಟಾಗಿ ಬಿಡುವು ದೊರೆಯುತ್ತಿರಲಿಲ್ಲವಾಗಿ, ಅವನ ತಮ್ಮ ಬ್ರೂನೊ ಕ್ರೆಸ್ಪಿಯೇ ಅಂಗಡಿಯನ್ನು ನೋಡಿಕೊಳ್ಳುತ್ತಿದ್ದ. ಉರ್ಸುಲಾ ಮತ್ತೆ ಪ್ರಾರ್ಥನಾ ಸಭೆಗೆ ಚಾಲನೆ ನೀಡಿದಾಗ ಪೀತ್ರೋ ಕ್ರೆಸ್ಪಿ ಚರ್ಚಿಗೆ ಹಾರ್ಮೋನಿಯಮ್ಮನ್ನು ದಾನವಾಗಿ ಕೊಟ್ಟ. ಮಕ್ಕಳ ಸಮೂಹ ಸಂಗೀತವನ್ನು ಯೋಜಿಸಿದ. ಫಾದರ್ ನಿಕಾನೋರ್‌ನ ಮತಾಚರಣೆಗೆ ಮತ್ತಷ್ಟು ಕಳೆ ಬರಲೆಂದು ಗ್ರೆಗೊರಿಯನ್ ರಿಪರ್ಟರಿಯನ್ನು ಸೇರಿಸಿದ. ಅಮರಾಂತಳ ಅದೃಷ್ಟದ ಸಹಚರನಾಗುವುದರಲ್ಲಿ ಯಾರಿಗೂ ಅನುಮಾನವಿರಲಿಲ್ಲ. ಭಾವಾತಿರೇಕಕ್ಕೆ ಒಳಗಾಗದೆ, ಸಹಜವಾದ ರೀತಿಯಲ್ಲಿ ಪ್ರೀತಿ ಬೆಳೆಯಲು ಬಿಟ್ಟು, ಮದುವೆಯ ದಿನವನ್ನು ಗೊತ್ತುಮಾಡುವ ನೆಲೆಯನ್ನಷ್ಟೇ ತಲುಪಿದ್ದರು. ಅವರಿಗೆ ಯಾವುದೇ ಅಡಚಣೆಗಳು ಎದುರಾಗಲಿಲ್ಲ. ರೆಬೆಕಾಳ ಹಣೆಬರಹ ಪದೇಪದೇ ಮುಂದೂಡಲ್ಪಟ್ಟ ಮದುವೆ – ಎಲ್ಲವನ್ನೂ ನೆನಸಿಕೊಂಡು ಒಳಗೊಳಗೇ ತನ್ನನ್ನು ಹಳಿದುಕೊಂಡಳು. ಅದಕ್ಕೆ ಮತ್ತಷ್ಟು ದುಃಖ ಸೇರಿಸುವುದು ಸರಿಯಲ್ಲವೆಂದುಕೊಂಡಳು.

ಯುದ್ಧದಿಂದಾದ ಮಾನಸಿಕ ಆಘಾತ, ಅರೆಲಿಯಾನೋವ ಅನುಪಸ್ಥಿತಿ, ಆರ್ಕಾಡಿಯೋನ ಕ್ರೌರ್ಯ, ಜೋಸ್ ಆರ್ಕಾಡಿಯೋ ಮತ್ತು ರೆಬೆಕಾಳ ಬಹಿಷ್ಕಾರ – ಇವುಗಳ ಹಿನ್ನೆಲೆಯಲ್ಲಿ ರೆಮೆಡಿಯೋಸ್‌ಳ ಸಾವಿನ ದುಃಖದ ತೀವ್ರತೆ ಕಡಿಮೆಯಾಗಿತ್ತು. ಅರೆಲಿಯಾನೊ ಜೋಸ್ ಬಗ್ಗೆ ಪೀತ್ರೋ ಕ್ರೆಸ್ಪಿ ಮಗನೆಂಬ ಭಾವನೆ ಬೆಳೆಸಿಕೊಂಡದ್ದರಿಂದ, ಅವನನ್ನು ಅವರ ಹಿರಿಯ ಮಗನಾಗಿ ಸ್ವೀಕರಿಸುತ್ತಿರುವ ವಿಚಾರವನ್ನು, ಮದುವೆ ಇನ್ನೇನು ಹತ್ತಿರ ಬರುತ್ತಿದೆ ಎನ್ನುವಾಗ, ತಿಳಿಸಿದ. ಇದೆಲ್ಲವನ್ನೂ ನೋಡಿದಾಗ ಅಮರಾಂತಳಿಗೆ ಮದುವೆ ಸುಗಮವಾಗಿ ಸಾಗುವುದು ಎನಿಸಿತು. ರೆಬೆಕಾಳ ಹಾಗೆ ಅಮರಾಂತ ಇದರ ಬಗ್ಗೆ ಹೆಚ್ಚಿನ ಆತಂಕವನ್ನೇನೂ ವ್ಯಕ್ತಪಡಿಸಲಲ್ಲ. ಸಹನೆಯಿಂದ ಟೇಬಲ್ ಕ್ಲಾತ್‌ಗೆ ಬಣ್ಣ ಹಾಕಿದಳು. ಹೆಣಿಗೆಯಿಂದ ಸುಂದರವಾದ ಬಟ್ಟೆ ತಯಾರಿಸಿದಳು. ಬಣ್ಣಬಣ್ಣದ ನವಿಲಿನ ಚಿತ್ತಾರಗಳನ್ನು ಕಸೂತಿ ಮಾಡಿದಳು. ಇದರಷ್ಟೇ ತಾಳ್ಮೆಯಿಂದಿದ್ದು ಪೀತ್ರೋ ಕ್ರೆಸ್ಪಿ ಪ್ರೀತಿಯ ಒತ್ತಡವನ್ನು ತಾಳಲಾರದಷ್ಟು ಕಾಲದವರೆಗೆ ಕಾದಳು. ಅಕ್ಟೋಬರ್‌ನ ಅನಿಷ್ಟ ಮಳೆಯ ಜೊತೆ ಆ ದಿನ ಬಂತು. ಪೀತ್ರೋ ಕ್ರೆಸ್ಪಿ ಹೊಲಿಗೆ ಬುಟ್ಟಿಯನ್ನು ಅವಳ ಮಡಿಲಲ್ಲಿ ಇದ್ದುದನ್ನು ತೆಗೆದುಕೊಂಡು, "ನಾವು ಮುಂದಿನ ತಿಂಗಳು ಮದುವೆಯಾಗೋಣ" ಎಂದು ಹೇಳಿದ. ತಣ್ಣನೆಯ ಅವನ ಕೈಗಳ ಸ್ಪರ್ಶದಿಂದ ವಿಚಲಿತಳಾಗಲಿಲ್ಲ. ಹೆದರಿದ ಪುಟ್ಟ ಪ್ರಾಣಿಯಂತೆ ಕೈಗಳನ್ನು ಹಿಂದಕ್ಕೆಳೆದುಕೊಂಡು ತನ್ನ ಕೆಲಸಕ್ಕೆ ಹಿಂತಿರುಗಿದಳು.

"ಬುದ್ಧಿಯಿಲ್ಲದವನಂತೆ ವರ್ತಿಸಬೇಡ ಕ್ರೆಸ್ಪಿ, ನಾನು ಸತ್ತರೂ ನಿನ್ನನ್ನು ಮದುವೆಯಾಗಲಾರೆ" ಎಂದಳು.

ಪೀತ್ರೋ ಕ್ರೆಸ್ಪಿ ತನ್ನ ಸಂಯಮವನ್ನು ಕಳೆದುಕೊಂಡ. ಹತಾಶತೆಯಿಂದ ಅಳಲು ತೊಡಗಿದ. ಆದರೆ ಅವಳನ್ನು ಬದಲಿಸಲು ಆಗಲಿಲ್ಲ. "ನಿನ್ನ ಸಮಯವನ್ನು ಹಾಳು ಮಾಡಬೇಡ" ಎಂದಷ್ಟೇ ಹೇಳಿದಳು ಅಮರಾಂತ. ಮುಂದುವರೆದು, "ನಿಜವಾಗಿ ನೀನು ನನ್ನನ್ನು ಅಷ್ಟೊಂದು ಪ್ರೀತಿಸುವುದಾದರೆ, ಈ ಮನೆಗೆ ಮತ್ತೆ ಹೆಜ್ಜೆ ಇಡಬೇಡ" ಎಂದಳು. ಉರ್ಸುಲಾಗೆ ನಾಚಿಕೆಯಿಂದ ಹುಚ್ಚಳಾಗಿಬಿಡುತ್ತೇನೆ ಎನಿಸಿತು. ಪೀತ್ರೋ ಕ್ರೆಸ್ಪಿ ಎಷ್ಟು ರೀತಿಯಲ್ಲಿಯೋ ಕೇಳಿಕೊಂಡ. ಅವಮಾನದ ಪರಾಕಾಷ್ಠೆಯನ್ನು ತಲುಪಿದ. ಒಂದು ಇಡೀ ಮಧ್ಯಾಹ್ನ ಕ್ರೆಸ್ಪಿ ಉರ್ಸುಲಾಳ ತೊಡೆ ಮೇಲೆ ಮುಖವಿಟ್ಟು ಅಳುತ್ತಲೇ ಇದ್ದ. ಅವನನ್ನು ಸಮಾಧಾನ ಪಡಿಸಲು ಏನೂ ಮಾಡಲು ಸಿದ್ಧಳಿದ್ದಳು. ಮಳೆಗಾಲದ ರಾತ್ರಿಗಳಲ್ಲಿ ಕೊಡೆಹಿಡಿದು, ಅಮರಾಂತಳ ಕೊಠಡಿಯಲ್ಲಿ ದೀಪ ಕಾಣುವುದೇನೊ ಎಂದು ಅಡ್ಡಾಡುತ್ತಲೇ ಇದ್ದ. ಆಗ ಅವನು ತೊಟ್ಟಿದ್ದ ಉಡುಪು ಹಿಂದೆಂದೂ ತೊಟ್ಟಿರಲಿಲ್ಲ. ನೋವಿನ ಯಾತನೆಗೆ ಒಳಗಾಗಿದ್ದ ಚಕ್ರವರ್ತಿಯ ಮುಖದ ಮೇಲೆ ವಿಚಿತ್ರವಾದ ಕಳೆ ಬಂದಿತ್ತು. ಅಮರಾಂತಳ ಜೊತೆ ಹೊಲಿಗೆ, ಹೆಣಿಗೆಗೆ ಸೇರುತ್ತಿದ್ದ ಗೆಳತಿಯರನ್ನು ಅಮರಾಂತಳನ್ನು ಒಪ್ಪಿಸಲು ಪ್ರಯತ್ನಿಸುವಂತೆ ಕೇಳಿಕೊಂಡ. ವ್ಯಾಪಾರದಲ್ಲಿ ಆಸಕ್ತಿ ಕಳೆದುಕೊಂಡ. ಅಂಗಡಿಯ ಹಿಂಭಾಗದ ಉತ್ಕಟವಾದ ಪ್ರೇಮಗೀತೆಗಳನ್ನು ಬರೆಯುತ್ತಾ ದಿನ ಕಳೆಯುತ್ತಿದ್ದ. ಬರೆದದ್ದನ್ನು ಹೂವಿನ ದಳಗಳ ಜೊತೆ ಒಣಗಿಸಿದ ಚಿಟ್ಟೆಗಳ ಜೊತೆ ಇಟ್ಟು ಕಳಿಸುತ್ತಿದ್ದ. ಆದರೆ ಅವು ಕಳಿಸಿದ ಹಾಗೆಯೇ, ತೆಗೆದು ನೋಡದೆಯೇ ಹಿಂತಿರುಗಿ ಬರುತ್ತಿದ್ದವು. ಗಂಟೆಗಟ್ಟಲೆ ಬಾಗಿಲು ಹಾಕಿಕೊಂಡು ಝಿದರ್ ನುಡಿಸುತ್ತಿದ್ದ. ಒಂದು ದಿನ ರಾತ್ರಿ ಅವನು ಹಾಡಿದ. ಅವನು ಹಾಡಿದ ಹಾಡಿಗೆ ಮಕೊಂಡೊ ಎದ್ದು ಯಾವುದೋ ಯಕ್ಷಲೋಕದ ಅನುಭೂತಿಯನ್ನು ಪಡೆಯಿತು. ಹಾಡಿದ ಹಾಡಿನಲ್ಲಿ ಹರಿದ ಉತ್ಕಟ ಪ್ರೀತಿಯನ್ನು ಬೇರೆ ಯಾರಲ್ಲಿಯೂ ಸಾಧ್ಯವಿಲ್ಲ ಎಂದು ಭಾವಿಸಿದರು. ಊರಿನ ಎಲ್ಲ ಮನೆಗಳ ದೀಪಗಳು, ಅಮರಾಂತಳ ಕೊಠಡಿಯಲ್ಲಿನದನ್ನು ಬಿಟ್ಟು ಝಗ್ಗನೆ ಹೊತ್ತಿಕೊಂಡದ್ದನ್ನು ಕ್ರೆಸ್ಪಿ ನೋಡಿದ. ನವೆಂಬರ್ ಎರಡನೇ ತಾರೀಖು 'ಆಲ್ ಸೋಲ್ಸ್ ಡೆ', ಅವನ ತಮ್ಮ ಅಂಗಡಿ ಬಾಗಿಲು ತೆಗೆದ. ದೀಪಗಳೆಲ್ಲವನ್ನೂ ಉರಿಸಿದ. ಎಲ್ಲ ಮ್ಯೂಸಿಕ್ ಬಾಕ್ಸ್‌ಗಳು ತೆರೆಯಲ್ಪಟ್ಟವು. ಎಲ್ಲ ಗಡಿಯಾರಗಳು ಗಂಟೆ ಹೊಡೆಯ ತೊಡಗಿದವು. ಇಂತಹ ಹುಚ್ಚೆದ್ದ ಸಂಗೀತದ ಮೊಳಗಿನ ನಡುವೆ, ಹಿಂಭಾಗದಲ್ಲಿ ಪೀತ್ರೋ ಕ್ರೆಸ್ಪಿ ಮಣಿಕಟ್ಟನ್ನು ಸೀಳಿಕೊಂಡು, ಕೈಯನ್ನು ಬೆನ್‌ಜೋಯಿನ್ ಬೋಗುಣಿಯಲ್ಲಿ ತುರುಕಿದ್ದನ್ನು ಕಂಡ.

ಉರ್ಸುಲಾ ಜಾಗರಣೆ ತನ್ನ ಮನೆಯಲ್ಲಿ ಆಗಲೆಂದು ಆದೇಶಿಸಿದಳು. ಫಾದರ್ ನಿಕಾನೋರ್ ಧಾರ್ಮಿಕ ಸಮಾರಂಭ ಮತ್ತು ಪವಿತ್ರ ಸ್ಥಳದಲ್ಲಿ ಹೂಳುವುದನ್ನು ವಿರೋಧಿಸಿದ. ಉರ್ಸುಲಾ ಅವನ ಸಮಕ್ಕೆ ನಿಂತು 'ಒಂದು ರೀತೀಲಿ ನೀವಾಗಲೀ ನಾನಾಗಲಿ ಅರ್ಥಮಾಡಿಕೊಳ್ಳಲು ಆಗುವುದಿಲ್ಲ. ಆತನೊಬ್ಬ ಸಂತನಾಗಿದ್ದ' ಎಂದಳು. "ನಿಮ್ಮ ಅಭಿಪ್ರಾಯಕ್ಕೆ ವಿರುದ್ಧವಾಗಿ ಆತನನ್ನು ಮೆಲ್‌ಕಿಯಾಡ್ಸ್‌ನ ಸಮಾಧಿ ಪಕ್ಕದಲ್ಲಿಯೇ ಹೂಳುತ್ತೇನೆ" ಎಂದಳು. ಅದ್ದೂರಿಯಾಗಿ ಇಡೀ ಊರಿನ ಜನರ ಬೆಂಬಲದೊಂದಿಗೆ

ಶವಸಂಸ್ಕಾರ ನೆರವೇರಿಸಿದಳು. ಅಮರಾಂತ ಮಲಗುವ ಕೋಣೆಯಿಂದ ಹೊರಗೆ ಬರಲಿಲ್ಲ. ಹಾಸಿಗೆ ಮೇಲಿಂದಲೇ ಉರ್ಸುಲಾ ಅಳುತ್ತಿದ್ದುದನ್ನು ಕೇಳಿಸಿಕೊಂಡಳು. ಮನೆ ಹೆಜ್ಜೆ ಸದ್ದುಗಳಿಂದ ಪಿಸುಮಾತುಗಳಿಂದ ತುಂಬಿತು. ಶೋಕತಪ್ತರ ಬಿಕ್ಕುವಿಕೆ, ನಂತರ ಗಂಭೀರ ಮೌನ, ತುಳಿತಕ್ಕೆ ಒಳಗಾದ ಹೂಗಳ ವಾಸನೆಯಂತೆ ಭಾಸವಾಯಿತು. ಸಂಜೆ ಆಯಿತೆಂದರೆ, ಪೀತ್ರೋ ಕ್ರೆಸ್ಪಿಯ ಲ್ಯಾವೆಂಡರ್ ವಾಸನೆಯನ್ನೇ ಅನುಭವಿಸುತ್ತಿದ್ದಳು. ಆದರೆ ತಾಳಿಕೊಳ್ಳುವ ಶಕ್ತಿ ಇದ್ದುದರಿಂದ ಮತಿಭ್ರಮಣದ ಸ್ಥಿತಿ ತಲುಪಲಿಲ್ಲ. ಉರ್ಸುಲಾ ಅವಳನ್ನು ಪರಿತ್ಯಜಿಸಿದಳು. ಒಂದು ಮಧ್ಯಾಹ್ನ ಅಮರಾಂತ ತನ್ನ ಕೈಯನ್ನು ಕೆಂಡದ ಮೇಲಿರಿಸಿ ಸುಟ್ಟುಕೊಳ್ಳುತ್ತಿರುವಾಗಲೂ ಒಂದಿಷ್ಟು ಕರಗಲಿಲ್ಲ. ಒಲೆಯ ಮೇಲಿಟ್ಟು ಕೈನ ಸುಟ್ಟ ಮಾಂಸದ ಕಮರುವಾಸನೆ ಬಂದಾಗಲೂ ಅವಳ ಕಡೆ ಕಣ್ಣೆತ್ತಿ ನೋಡಲಿಲ್ಲ. ಅದು ಅವಳ ಪಶ್ಚಾತ್ತಾಪಕ್ಕೆ ಮಾಡಿಕೊಂಡ ಮೂರ್ಖತನದ ಪ್ರಾಯಶ್ಚಿತ್ತವಾಗಿತ್ತು. ಹಲವು ದಿನಗಳವರೆಗೆ ತನ್ನ ಕೈಯನ್ನು ಮೊಟ್ಟೆಯ ಬಿಳಿಭಾಗ(ಲೋಳೆ) ತುಂಬಿಸಿದ್ದ ತಂಬಿಗೆಯಲ್ಲಿ ಕೈಯಿರಿಸಿಕೊಂಡೇ ಓಡಾಡಿದಳು. ಅದು ವಾಸಿಯಾದಾಗ, ಅಲ್ಲಿನ ಗಾಯದ ಗುರುತುಗಳನ್ನು ಹೃದಯದ ಮೇಲೆ ಉಳಿಸಿದಂತಿತ್ತು. ಹೊರಗಿನಿಂದ ಗುರುತಾಗಿ ಉಳಿದದ್ದೆಂದರೆ, ಸುಟ್ಟ ಕೈಸುತ್ತ ಹಾಕಿಕೊಂಡಿದ್ದ ಕಪ್ಪು ಬ್ಯಾಂಡೇಜ್ ಪಟ್ಟಿ, ಇದು ಕೊನೆಗಳಿಗೆವರೆಗೆ ಅವಳ ಕೈ ಮೇಲಿತ್ತು.

ಆರ್ಕಾಡಿಯೊ ಪೀತ್ರೋ ಕ್ರೆಸ್ಪಿಗಾಗಿ ಶೋಕಾಚರಣೆಯನ್ನು ಆದೇಶಿಸಿ ಸ್ವಲ್ಪ ಔದಾರ್ಯವನ್ನು ತೋರಿದ್ದ. ಉರ್ಸುಲಾಗೆ ಕಳೆದುಹೋದ ಕುರಿ ಹಿಂತಿರುಗಿದಂತೆನಿಸಿತು. ಆದರೆ -ಅವಳು ತಪ್ಪಾಗಿ ಗ್ರಹಿಸಿದ್ದಳು. ಅವಳು ಅವನನ್ನು ಮಿಲಿಟರಿ ಸಮವಸ್ತ್ರ ಧರಿಸಿದಂದಿನಿಂದಲ್ಲದೆ ಮೊದಲಿನಿಂದಲೂ ಅವನು ಕೈಜಾರಿ ಬಿಟ್ಟಿದ್ದ. ಅವನನ್ನು ರೆಬೆಕಾಳನ್ನು ಹೇಗೆ ಬೆಳೆಸಿದಳೊ ಹಾಗೆಯೇ ಅವರಿಬ್ಬರ ನಡುವೆ ಯಾವುದೇ ವ್ಯತ್ಯಾಸ ಮಾಡದೆ ಮಗನಂತೆ ಬೆಳೆಸಿದ್ದೇನೆ ಅಂದುಕೊಂಡಿದ್ದಳು. ಇಷ್ಟೆಲ್ಲ ಇದ್ದರೂ ನಿದ್ದೆಬಾರದಿದ್ದ ಆ ದಿನಗಳಲ್ಲಿ, ಉರ್ಸುಲಾಳ ಮನೆಗೆಲಸ ಮತ್ತಿತರ ಕೆಲಸಗಳ ರಭಸದಲ್ಲಿ, ಜೋಸ್ ಆರ್ಕಾಡಿಯೊ ಬ್ಯುಂಡಿಯಾನ ಮತಿಭ್ರಮಿತ ಸ್ಥಿತಿಯಲ್ಲಿ, ಅರೆಲಿಯಾನೋನ ನಿರ್ಲಿಪ್ತತೆಯಲ್ಲಿ, ಅಮರಾಂತ ರೆಬೆಕಾರ ನಡುವಿನ ದ್ವೇಷದ ಸೆಣಸಾಟದಲ್ಲಿ, ಇವನು ಒಂಟಿಯಾಗಿ ಹೆದರಿದ ಮಗುವಾಗಿ ಬೆಳೆದಿದ್ದ. ಅರೆಲಿಯಾನೊ ಅವನಿಗೆ ಓದು ಬರಹವನ್ನು ತನ್ನ ಇತರೆ ಕೆಲಸಗಳ ನಡುವೆಯೇ ಯಾರೋ ಅಪರಿಚಿತನಿಗೆ ಹೇಳಿಕೊಟ್ಟಂತೆ, ಹೇಳಿಕೊಡುತ್ತಿದ್ದ. ವಿಸಿಟಾಸಿಯೋನ್ ತೆಗೆದುಕೊಳ್ಳುವವರೆಗೆ ಹಾಕಿಕೊಳ್ಳಬಹುದಾದ ತನ್ನ ಬಟ್ಟೆಗಳನ್ನು ಕೊಟ್ಟ. ಆರ್ಕಾಡಿಯೋಗೆ ಸೈಜು ಮೀರಿದ ಬೂಟುಗಳಿಂದ, ತೇಪೆ ಪ್ಯಾಂಟುಗಳಿಂದ, ಹೆಂಗಸಿನ ಹಾಗೆ ಇದ್ದ ತನ್ನ ನಿತಂಬಗಳಿಂದ ಮುಜುಗರವಾಗುತ್ತಿತ್ತು. ವಿಸಿಟಾಸಿಯೋನ್ ಮತ್ತು ಕತಾರೆ ಜೊತೆ ಮಾತನಾಡುವುದಕ್ಕಿಂತ ಚೆನ್ನಾಗಿ ಯಾರೊಂದಿಗೂ ಮಾತಾಡಲು ಸಮರ್ಥನಾಗಿರಲಿಲ್ಲ. ಮೆಲ್‌ಕಿಯಾಡ್ಸ್ ಒಬ್ಬನು ಮಾತ್ರವೆ ಅವನೊಂದಿಗೆ ಸಹಾನುಭೂತಿಯಿಂದ ನಡೆದುಕೊಳ್ಳುತ್ತಿದ್ದ. ತಾನು ಹೇಳುತ್ತಿದ್ದ ಅದ್ಭುತ ಕಷ್ಟಸಾಧ್ಯವಾದ ಪಠ್ಯಗಳನ್ನು ಕೇಳಿಸಿಕೊಳ್ಳುವಂತೆ ಮಾಡುತ್ತಿದ್ದ. ಭಾವಚಿತ್ರ ತೆಗೆಯುವ ತಂತ್ರಜ್ಞಾನವನ್ನೂ ತಿಳಿಸಿಕೊಟ್ಟ. ಮೆಲ್‌ಕಿಯಾಡ್ಸ್‌ನ ನಿಷ್ಪ್ರಯೋಜಕ

ಕಾಗದಗಳನ್ನು ಓದುವುದರ ಮೂಲಕ ಅವನನ್ನು ನೆನಪಿಸಿಕೊಂಡು ರಹಸ್ಯವಾಗಿ ಎಷ್ಟು ಅತ್ತನೆಂಬುದನ್ನು ಯಾರಿಗೂ ಊಹಿಸಿಕೊಳ್ಳಲು ಸಾಧ್ಯವಿಲ್ಲ. ಅವನಿಗೆ ಹೆಚ್ಚಿನ ಗೌರವ ನೀಡುತ್ತಿದ್ದ ಶಾಲೆ, ಅವನ ಅಧಿಕಾರ, ಕೊನೆಯಿಲ್ಲದ ಕಟ್ಟಳೆಗಳ ಶಾಸನ, ವೈಭವಯುತವಾದ ಸಮವಸ್ತ್ರ. ಹಿಂದಿನ ದಿನಗಳ ಕಹಿಯ ಭಾರದಿಂದ ಬಿಡುಗಡೆಗೊಳಿಸಿದವು. ಒಂದು ದಿನ ರಾತ್ರಿ ಕತಾರಿನೋನ ಅಂಗಡಿಯಲ್ಲಿ ಯಾರೊ ಒಬ್ಬರು ಧೈರ್ಯಮಾಡಿ, "ನಿನ್ನ ಹೆಸರಿನ ಕೊನೆಯದಕ್ಕೆ ನೀನು ಅರ್ಹನಲ್ಲ" ಎಂದು ಹೇಳಿಯೇ ಬಿಟ್ಟ. ಆದರೆ ಆಶ್ಚರ್ಯದ ಸಂಗತಿಯೆಂದರೆ ಅವನನ್ನು ಗುಂಡಿಕ್ಕಿ ಸಾಯಿಸಲಿಲ್ಲ.

"ನನ್ನ ಗೌರವಕ್ಕೆ, ನಾನು ಬ್ಯುಂಡಿಯಾ ಅಲ್ಲವೇ ಅಲ್ಲ" – ಎಂದ.

ಅವನ ತಾಯಿತಂದೆಗಳು ಯಾರೆಂಬ ರಹಸ್ಯವನ್ನು ತಿಳಿದಿದ್ದವರು ಅವನ ಉತ್ತರದಿಂದ ಬಹುಶಃ ಅವನಿಗೂ ಆ ರಹಸ್ಯ ಗೊತ್ತಿರಬೇಕೆಂದು ಭಾವಿಸಿದರಾದರೂ ವಾಸ್ತವದಲ್ಲಿ ಅವನಿಗೆ ಅದು ತಿಳಿದೇ ಇರಲಿಲ್ಲ. ಡಾರ್ಕ್‌ರೂಮಿನಲ್ಲಿ ತನ್ನ ರಕ್ತ ಕುದಿಯುವ ಹಾಗೆ ಮಾಡಿದ ತನ್ನ ತಾಯಿ ಪಿಲಾರ್ ತರ್ಸಿರಾ, ಜೋಸ್ ಆರ್ಕಾಡಿಯೊ, ಅರೆಲಿಯಾನೋರಿಗೆ ಹುಚ್ಚು ಹಿಡಿಸಿದಷ್ಟೇ ತೀವ್ರವಾಗಿ ತನಗೂ ಹುಚ್ಚು ಹಿಡಿಸಿದ್ದಳು. ವಯಸ್ಸಿನಲ್ಲಿದ್ದಾಗಿನ ಆಕರ್ಷಣೆ, ನಗುವಿನ ಮೋಹಕತೆಗಳು ಮರೆಯಾಗಿದ್ದರೂ ಹೊಗೆಯ ವಾಸನೆಯ ಜಾಡಿನಿಂದಲೇ ಅವಳನ್ನು ಪತ್ತೆ ಹಚ್ಚುತ್ತಿದ್ದ. ಯುದ್ಧಕ್ಕೆ ಸ್ವಲ್ಪದಿನ ಮೊದಲು ಒಂದು ಮಧ್ಯಾಹ್ನ ತನ್ನ ಚಿಕ್ಕ ಮಗನಿಗಾಗಿ ಮಾಮೂಲಾಗಿ ಶಾಲೆಗೆ ಬರುತ್ತಿದ್ದ ಸಮಯಕ್ಕಿಂತ ತಡವಾಗಿ ಬರುತ್ತಿದ್ದಾಗ ಆರ್ಕಾಡಿಯೊ ಮಾಮೂಲಾಗಿ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದ ಕೊಠಡಿಯಲ್ಲಿ ಅವಳಿಗಾಗಿ ಕಾಯುತ್ತಿದ್ದ. ನಂತರ ಅದೇ ಕೊಠಡಿಯಲ್ಲಿಯೇ ಗೂಟಗಳ ವ್ಯವಸ್ಥೆ ಮಾಡಿದ್ದ. ಮಗು ಆಟವಾಡುತ್ತಿದ್ದಾಗ ಅವನು ಆತಂಕದಿಂದ ಕಂಪಿಸುತ್ತ ತನ್ನ ಹಾಸಿಗೆಯಲ್ಲಿ ಅವಳು ಅಲ್ಲಿಂದಲೇ ಹಾದು ಹೋಗುತ್ತಾಳೆಂದು ಕಾದ. ಅವಳು ಆ ಕಡೆ ಬಂದದ್ದೇ ಆರ್ಕಾಡಿಯೊ ಅವಳ ಮಣಿಕಟ್ಟು ಹಿಡಿದು ಹಾಸಿಗೆಗೆ ಎಳೆದುಕೊಂಡ. "ಬೇಡ, ಬೇಡ ನನ್ನಿಂದಾಗದು, ಪಿಲಾರ್ ತರ್ಸಿರಾ ಭಯದಿಂದ ತತ್ತರಿಸಿ", ನಿನಗೆ ಗೊತ್ತಿಲ್ಲ ನಿನ್ನನ್ನು ಎಷ್ಟೊಂದು ಸಂತೋಷಪಡಿಸಬೇಕೆಂಬ ಆಸೆ ನನಗೂ ಇದೆ. ಆದರೆ ದೇವರೇ ನನಗೆ ಸಾಕ್ಷಿಯಾಗಿರುವಾ. ಅದು ನನ್ನಿಂದ ಸಾಧ್ಯವಿಲ್ಲ ಎಂದು ಉತ್ತರಿಸಿದಳು. ಆರ್ಕಾಡಿಯೊ ಅವಳ ಸೊಂಟವನ್ನು ಆನುವಂಶಿಕವಾಗಿ ದತ್ತವಾದ ಬಲದಿಂದ ಸೆಳೆದುಕೊಂಡ. ಅವನಿಗೆ ಪ್ರಪಂಚವೇ ಮರೆತು ಹೋದಂತೆನಿಸಿತು. ಸಂನ್ಯಾಸಿ ಥರ ಆಡಬೇಡ ಎಲ್ಲರಿಗೂ ಗೊತ್ತಿದೆ ನೀನೊಬ್ಬ ಸೂಳೆ ಎಂದು ಹೇಳಿದ. ತನ್ನೊಳಗೆ ದುರಾದೃಷ್ಟದಿಂದ ಉಂಟಾದ ಜಿಗುಪ್ಸೆಯನ್ನು ಹತ್ತಿಕ್ಕಿದಳು.

"ಮಕ್ಕಳಿಗೆ ಗೊತ್ತಾಗುತ್ತೆ" "ಇವತ್ತು ರಾತ್ರಿ ಬಾಗಿಲು ಹಾಕದೆ ಇರಿಸು" ಎಂದು ಮಣಮಣಿಸಿದಳು.

ಆರ್ಕಾಡಿಯೊ ಜ್ವರ ಬಂದವನಂತೆ ನಡುಗುತ್ತಾ ಆ ರಾತ್ರಿ ತನ್ನ ಹಾಸಿಗೆಯಲ್ಲಿ ಅವಳಿಗಾಗಿ ಎದುರು ನೋಡುತ್ತಾ ಕುಳಿತ. ನಿದ್ದೆಯಿಲ್ಲದ, ಪಕ್ಷಿಗಳ, ಮಿಡತೆಗಳ

ಸದ್ದಿನೊಂದಿಗೆ ಬೆಳಗಿನವರೆಗೆ ಕಾದ. ಕಾಯುತ್ತಿದ್ದಂತೆಯೇ ಅವಳು ತನಗೆ ಮೋಸ ಮಾಡಿದ್ದಾಳೆಂಬುದು ಸ್ಪಷ್ಟವಾಯಿತು. ಆತಂಕ ಆಕ್ರೋಶವಾಗಿ ಪರಿವರ್ತಿತವಾದಾಗ, ಇದ್ದಕ್ಕಿದ್ದಂತೆ ಬಾಗಿಲು ತೆರೆದುಕೊಂಡಿತು. ಕೆಲ ತಿಂಗಳು ನಂತರ, ಗುಂಡಿಕ್ಕುವ ತಂಡದ ಎದುರು ನಿಂತಾಗ ಅವನ ಮುಂದೆ, ತರಗತಿಯಲ್ಲಿ ನಡೆದಾಡುವ ಹೆಜ್ಜೆಗಳು ಬೆಂಚುಗಳನ್ನು ಎಡವುತ್ತಾ, ತರಗತಿಯ ಕೊಠಡಿಯ ನೆರಳಿನಲ್ಲಿ ದೊಡ್ಡ ಗಾತ್ರದ ಶರೀರ, ಅವನದಲ್ಲದ ಹೃದಯದಿಂದ ಹೊಮ್ಮಿಸಿದ ಉಸಿರಗಾಳಿ ಎಲ್ಲವನ್ನೂ ನೆನಪಿಸಿಕೊಂಡ. ತನ್ನ ಕೈಯನ್ನು ಚಾಚಿದಾಗ, ಮತ್ತೊಂದು ಕೈ ಒಂದೇ ಬೆರಳಿಗೆ ಎರಡು ಉಂಗುರಗಳನ್ನು ಧರಿಸಿದ್ದುದು ಕತ್ತಲಲ್ಲಿ ಎತ್ತೆತ್ತಲೊ ಸರಿಯುತ್ತಿತ್ತು. ನರಗಳನ್ನು, ದುರಾದೃಷ್ಟದ ಮಿಡಿತಗಳನ್ನು ಒದ್ದೆಯಾದ ಅಂಗೈಯನ್ನು, ಹೆಬ್ಬೆರಳಿನ ಕೆಳಗೆ ಸಾವಿನ ರೇಖೆಗಳನ್ನು ಸೂಚಿಸುತ್ತಾ ತುಂಡಾಗಿತ್ತು. ಆಗ ಅವನಿಗೆ ತಾನು ಕಾಯುತ್ತಿದ್ದುದು ಈ ಹೆಣ್ಣಿಗಲ್ಲ ಎಂಬುದು, ಹೊಗೆಯ ವಾಸನೆಗೆ ಬದಲಾಗಿ ಹೂವಿನ ವಾಸನೆ, ಉಬ್ಬಿದ ದೇಹ, ಗಂಡಸಿನ ಮೊಲೆಯ ತೊಟ್ಟುಗಳಂತೆ ಇದ್ದದ್ದು, ಗುಪ್ತಾಂಗ ಗುಂಡಗೆ ಕಲ್ಲಿನಂತೆ ಇದ್ದದ್ದು ಅನುಭವವಿಲ್ಲದ ಉತ್ಸಾಹದೊಂದಿಗಿನ ಕೋಮಲತೆ – ಇವೆಲ್ಲವುಗಳಿಂದ ಅವನಿಗೆ ಅವಳು, ಅವಳಲ್ಲವೆಂಬುದು ಖಚಿತವಾಯಿತು. ಅವಳು ಕನ್ಯೆಯಾಗಿದ್ದಳು. ಅವಳದು ಸಾಮಾನ್ಯವಲ್ಲದ ಸಾಂತ ಸೋಫಿಯಾ ಜಿ ಲಾ ಪೀದಾದ್ ಎಂಬ ಹೆಸರಾಗಿತ್ತು. ಪಿಲಾರ್ ತರ್ಸಿರಾ ಜೀವಮಾನದ ಸಂಪಾದನೆಯ ಅರ್ಧಭಾಗವಾಗಿದ್ದ ಐವತ್ತು ಪೆಸೋಗಳನ್ನು ಅವಳಿಗೆ ಕೊಟ್ಟು ತಾನು ಮಾಡಬೇಕಿದ್ದ ಆ ದಿನದ ಕೆಲಸವನ್ನು ಮಾಡಲು ಕಳಿಸಿದ್ದಳು. ಆರ್ಕಾಡಿಯೊ ಅವಳನ್ನು ಅವಳ ತಂದೆತಾಯಿಯರ ಸಣ್ಣ ಫುಡ್ ಸ್ಟೋರ್‌ನಲ್ಲಿ ಕೆಲಸ ಮಾಡುತ್ತಿದ್ದುದನ್ನು ನೋಡಿದನಾದರೂ ಸರಿಯಾಗಿ ಗಮನಿಸಿರಲಿಲ್ಲ. ಯಾಕೆಂದರೆ ಅವಳು ಕಾಣಿಸುತ್ತಿದ್ದುದೆ ಆಗೊಮ್ಮೆ ಈಗೊಮ್ಮೆ ಅಪರೂಪಕ್ಕೆ, ಆದರೆ ಅವನು ಅಂದಿನಿಂದ ಅವಳ ಕಂಕುಳಲ್ಲಿ ಬೆಕ್ಕಿನ ಹಾಗೆ ಬೆಚ್ಚಗೆ ಮುದುಡಿ ಕುಳಿತಿರುತ್ತಿದ್ದ. ತಂದೆತಾಯಿಯ ಅಪ್ಪಣೆ ಮೇರೆಗೆ ಮಧ್ಯಾಹ್ನದ ಹೊತ್ತು ಶಾಲೆಗೆ ಹೋಗುತ್ತಿದ್ದಳು. ಅದಕ್ಕಾಗಿ ಪಿಲಾರ್ ತರ್ಸಿರಾ ಇನ್ನರ್ಧಭಾಗದ ಸಂಪಾದನೆಯನ್ನು ನೀಡುತ್ತಿದ್ದಳು. ನಂತರ ಸರಕಾರ ಆ ಜಾಗವನ್ನು ಖಾಲಿ ಮಾಡಿಸಿದಾಗ, ಸ್ಟೋರ್ ಹಿಂಭಾಗದಲ್ಲಿ ಧಾನ್ಯದ ಮೂಟೆಗಳ ನಡುವೆ, ಡಬ್ಬಗಳ ನಡುವೆ ಜಾಗ ಹುಡುಕಿಕೊಂಡರು. ಆರ್ಕಾಡಿಯೋನನ್ನು ಸಿವಿಲ್ ಮತ್ತು ಮಿಲಿಟರಿ ಅಧಿಕಾರಿ ಎಂದು ಹೆಸರಿಸುವಷ್ಟು ಹೊತ್ತಿಗೆ ಅವರಿಗೆ ಒಬ್ಬ ಮಗಳಿದ್ದಳು.

ಇದರ ಬಗ್ಗೆ ತಿಳಿದಿದ್ದವರೆಂದರೆ ಜೋಸ್ ಆರ್ಕಾಡಿಯೋ ಮತ್ತು ರೆಬೆಕಾ ಮಾತ್ರ. ಅವರಿಬ್ಬರ ಜೊತೆ, ಬಂಧುತ್ವದಿಂದಲ್ಲದೆ ಸಾಮಾನ್ಯವಾಗಿ ಹತ್ತಿರದ ಸಂಬಂಧವಿರಿಸಿಕೊಂಡಿದ್ದ. ಜೋಸ್ ಆರ್ಕಾಡಿಯೊ ಮದುವೆಯ ನೊಗಕ್ಕೆ ಕೊರಳೊಡ್ಡಿದ್ದ. ರೆಬೆಕಾಳ ದೃಢ ವ್ಯಕ್ತಿತ್ವ, ಅವಳ ಮಹತ್ವಾಕಾಂಕ್ಷೆ, ಗಂಡನ ಅಗಾಧ ಶಕ್ತಿಯನ್ನು ಹೀರಿಕೊಂಡು, ಅವನನ್ನು ಸೋಮಾರಿತನ, ಲಂಪಟತನಗಳಿಂದ ದೂರಮಾಡಿ ಪ್ರಚಂಡವಾಗಿ ದುಡಿವ ಪ್ರಾಣಿಯಾಗಿ ಪರಿವರ್ತಿಸಿತ್ತು. ಮನೆಯನ್ನು ಸ್ವಚ್ಛವಾಗಿ ಅಚ್ಚುಕಟ್ಟಾಗಿ ಇರಿಸಿಕೊಂಡಿದ್ದರು. ರೆಬೆಕಾ ಬೆಳಗಿನ ಹೊತ್ತು ಬಾಗಿಲುಗಳನ್ನು ದೊಡ್ಡದಾಗಿ ತೆರೆದಿರಿಸುತ್ತಿದ್ದಳು. ಇದರಿಂದ ಸಮಾಧಿ ಕಡೆಯಿಂದ ಬೀಸಿಬಂದ ಗಾಳಿ ಕಿಟಕಿಗಳ ಮೂಲಕ

ಹಾದು ಅಂಗಳದ ಕಡೆಗಿನ ಬಾಗಿಲು ದಾಟಿ ಹೋಗುತ್ತಿದ್ದುದರಿಂದ ಸುಣ್ಣ ಬಳಿದಿದ್ದ ಗೋಡೆಗಳು, ಪೀಠೋಪಕರಣಗಳು ಸತ್ತವರ ಕಲೆಗಳನ್ನು ಹೊತ್ತಿದ್ದವು. ಮಣ್ಣು ತಿನ್ನಬೇಕೆಂಬ ಆಸೆ, ಕ್ಲಕ್ ಕ್ಲಕ್ ಸದ್ದುಮಾಡುತ್ತಿದ್ದ ತಂದೆತಾಯಿಯ ಅಸ್ಥಿಗಳು, ಪೀತ್ರೋ ಕ್ರೆಸ್ಪಿಯ ನಿಸ್ಪಂದತೆಯ ನಿಲುವು – ಎಲ್ಲವೂ ಈಗ ನೆನಪಿನ ಮೂಲೆಯನ್ನು ಸೇರಿದ್ದವು. ಇಡೀ ದಿನ, ಯುದ್ಧದ ಮುಜುಗರದಿಂದ ಬಿಡಿವುಗೊಂಡು, ಅಲಮಾರಿನಲ್ಲಿ ಪಿಂಗಾಣಿ ಮಡಕೆಗಳು ಅದುರುತನಕ ಕಿಟಕಿಯ ಪಕ್ಕದಲ್ಲಿ ಕುಳಿತು ಕಸೂತಿ ಹಾಕುತ್ತಿದ್ದಳು. ಅನಂತರ ಎದ್ದು, ಮೊದಲು ಬೇಟೆನಾಯಿಗಳು, ನಂತರ ಹಿಮ್ಮಡಿ ಮೊಳೆಗಳಿದ್ದ ಪಾದರಕ್ಷೆ ತೊಟ್ಟು ಡಬಲ್ ಬ್ಯಾರೆಲ್ ಬಂದೂಕು ಹಿಡಿದು, ಜಿಂಕೆಯನ್ನು ಹೊತ್ತು, ಒಮ್ಮೊಮ್ಮೆ ಹತ್ತಾರು ಮೊಲಗಳು, ಬಾತುಕೋಳಿಗಳು ಮೊದಲಾದವುಗಳನ್ನು ಹೊತ್ತು ತರುತ್ತಿದ್ದ ಅವನು ಪ್ರವೇಶಿಸುತ್ತಿದ್ದಂತೆ, ಅಡಿಗೆ ಬಿಸಿಮಾಡುತ್ತಿದ್ದಳು. ಅವನು ಆಳುತ್ತಿದ್ದ ಒಂದು ಮಧ್ಯಾಹ್ನ ಆರ್ಕಾಡಿಯೊ ಅನಿರೀಕ್ಷಿತವಾಗಿ ಆಗಮಿಸಿದ. ಮನೆಬಿಟ್ಟ ದಿನದಿಂದ ಅವನನ್ನು ನೋಡಿಯೇ ಇರಲಿಲ್ಲ. ಆದರೆ ಅವನು ಎಷ್ಟು ಪ್ರೀತಿಯಿಂದ, ಸ್ನೇಹದಿಂದ ಇರುವುದನ್ನು ನೋಡಿ, ಅವನನ್ನು ತಮ್ಮ ಜೊತೆ ಊಟಕ್ಕೆ ಆಹ್ವಾನಿಸಿದರು.

ಕಾಫಿ ಕುಡಿಯುವಾಗಷ್ಟೆ ಆರ್ಕಾಡಿಯೊ ತಾನು ಬಂದಿದ್ದ ಉದ್ದೇಶವನ್ನು ಹೇಳಿದ. ಜೋಸ್ ಆರ್ಕಾಡಿಯೊ ಬಗ್ಗೆ ಒಂದು ದೂರು ಬಂದಿತ್ತು. ಅದರಲ್ಲಿ ತನ್ನ ಸ್ವಂತ ಭೂಮಿಯನ್ನು ಉಳುವಾಗ ಪಕ್ಕದವರ ಭೂಮಿಯನ್ನೂ, ಅದಕ್ಕೆ ಹಾಕಿದ್ದ ಬೇಲಿ, ಅಲ್ಲಿದ್ದ ಕಟ್ಟಡಗಳನ್ನು ಉರುಳಿಸಿ, ಫಲವತ್ತಾದ ಸುತ್ತಮುತ್ತಲಿನ ಭೂಮಿಯನ್ನೆಲ್ಲ ಬಲವಂತದಿಂದ ಆಕ್ರಮಿಸಿಕೊಳ್ಳುತ್ತಾ ಹೋಗಿದ್ದನೆಂದು ದೂರು ದಾಖಲಿಸಲಾಗಿತ್ತು. ಅವನು ಆಕ್ರಮಿಸಿಕೊಳ್ಳದಿದ್ದ ಭೂಮಿಯ ರೈತರಿಂದ ಪ್ರತಿ ಶನಿವಾರ ತನ್ನ ನಾಯಿ ಮತ್ತು ಬಂದೂಕಿನೊಂದಿಗೆ ಹೊರಟು ಕರ ವಸೂಲು ಮಾಡುತ್ತಿದ್ದ. ತನ್ನ ಮೇಲಿನ ಆರೋಪವನ್ನು ನಿರಾಕರಿಸಲಿಲ್ಲ. ತಾನು ವಶಪಡಿಸಿಕೊಂಡ ಭೂಮಿ ಊರಿನ ಸ್ಥಾಪನೆಯ ಕಾಲದಲ್ಲಿ ಜೋಸ್ ಆರ್ಕಾಡಿಯೊ ಎಲ್ಲರಿಗೂ ಹಂಚಿಕೊಂಡಿದ್ದರಿಂದ ಅವುಗಳ ಮೇಲೆ ತನ್ನ ಹಕ್ಕಿದೆ ಎಂದು ತೋರಿಸಿದ. ಅಲ್ಲದೆ ವಾಸ್ತವವಾಗಿ ತನ್ನ ಸಂಸಾರಕ್ಕೆ ಸೇರಿದ ಭೂಮಿಯನ್ನು ಕೊಟ್ಟುಬಿಟ್ಟದ್ದರಿಂದಲೇ ತನ್ನ ತಂದೆ ಆಗಿನಿಂದಲೇ ಹುಚ್ಚುಹುಚ್ಚಾಗಿ ಆಡುತ್ತಿದ್ದಾನೆಂದು ಸಾಬೀತು ಪಡಿಸಲು ಸಾಧ್ಯವಿದೆ. ಅದು ಅನಗತ್ಯವಾದ ಆರೋಪ. ಆರ್ಕಾಡಿಯೊ ನ್ಯಾಯ ತೀರ್ಮಾನ ಮಾಡಲು ಬಂದಿರಲಿಲ್ಲ. ಅವನು ಜೋಸ್ ಆರ್ಕಾಡಿಯೋಗೆ ರಿಜಿಸ್ಟರಿ ಆಫೀಸನ್ನು ತೆರೆದು ತಾನು ಅತಿಕ್ರಮಿಸಿ ತೆಗೆದುಕೊಂಡ ಭೂಮಿಯನ್ನು ಕಾನೂನುಬದ್ಧಗೊಳಿಸುವ ಸಲಹೆ ನೀಡಲು ಬಂದಿದ್ದ. ಇದನ್ನು ಮಾಡುವಾಗ ಒಂದು ಷರತ್ತಿನಂತೆ ಸ್ಥಳೀಯ ಸರಕಾರಕ್ಕೆ ಕಾಣಿಕೆ ಪಡೆಯುವ ಅಧಿಕಾರವನ್ನು ವಹಿಸಿಕೊಡುವಂತೆ ಸೂಚಿಸಿದ. ಅವರು ಒಂದು ಒಪ್ಪಂದವನ್ನು ಮಾಡಿಕೊಂಡರು. ವರ್ಷಗಳ ನಂತರ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಆಸ್ತಿಯ ಪತ್ರಗಳನ್ನು ಪರಿಶೀಲಿಸಿದ. ನೋಡಿದಾಗ ಎಲ್ಲ ಭೂಮಿ ಗುಡ್ಡ ಮತ್ತು ಅವನ ಅಂಗಳದ ನಡುವಿದ್ದುದಷ್ಟೇ ಅಲ್ಲದೆ, ಸ್ಮಶಾನ ಭೂಮಿಯೂ ಸೇರಿದಂತೆ, ಎಲ್ಲವೂ ತಮ್ಮನ ಹೆಸರಿನಲ್ಲಿ ರಿಜಿಸ್ಟರ್ ಆಗಿದೆ ಎಂಬುದು ತಿಳಿದು ಬಂತು. ಅದಷ್ಟೆ ಅಲ್ಲದೆ ಇನ್ನೂ ಅನೇಕ ವಿಷಯಗಳು

ತಿಳಿದುಬಂದವು. ಹನ್ನೊಂದು ತಿಂಗಳ ಅವನ ಆಡಳಿತದಲ್ಲಿ ಕಾಣಿಕೆಗಳನ್ನಷ್ಟೇ ಅಲ್ಲದೆ, ಶವ ಹೂಳುವುದಕ್ಕೂ ಜನರಿಂದ ಹಣ ತೆಗೆದುಕೊಂಡು [ತನ್ನ ಭೂಮಿಯಲ್ಲಿ] ಅವಕಾಶ ಕೊಡುತ್ತಿದ್ದನೆಂದೂ ತಿಳಿಯಿತು.

ಜನಕ್ಕೆಲ್ಲ ಈ ವಿಷಯಗಳು ತಿಳಿದಿದ್ದರೂ ಉರ್ಸುಲಾಗೆ ತಿಳಿಯಲು ಎಷ್ಟೊ ತಿಂಗಳು ಬೇಕಾಯಿತು. ಜನ ಅವಳ ನೋವನ್ನು ಹೆಚ್ಚಿಸಬಾರದೆಂದು ತಮಗೆ ತಿಳಿದಿದ್ದರೂ ಅವಳಿಗೆ ಹೇಳಿರಲಿಲ್ಲ. ಮೊದಲಿಗೆ ಅವಳಿಗೆ ಸ್ವಲ್ಪ ಅನುಮಾನ ಬಂತು. "ಆರ್ಕಾಡಿಯೊ ಮನೆ ಕಟ್ಟಿಸುತ್ತಿದ್ದಾನೆ" ಎಂದು ಸ್ವಲ್ಪ ಬೇಸರದಿಂದಲೇ, ಜೋಸ್ ಆರ್ಕಾಡಿಯೊ ಬ್ಯುಂಡಿಯಾಗೆ ಚಮಚೆಯಿಂದ ಕುಂಬಳಕಾಯಿ ರಸ ಕುಡಿಸುತ್ತಾ ಹೇಳಿದಳು. ಅಲ್ಲದೆ ಒಂದು ನಿಟ್ಟುಸಿರುಬಿಟ್ಟು "ಅದ್ಯಾಕೊ ನನ್ನ ಮನಸ್ಸಿಗೆ, ಏನೋ ಕೇಡಿನದು ಎಂಬಂತೆ ಅನಿಸುತ್ತಿದೆ" ಎಂದಳು. ಆಮೇಲೆ ಗೊತ್ತಾಯಿತು. ಅವನು ಮನೆ ಕಟ್ಟಿಸುತ್ತಿರೋದಷ್ಟೇ ಅಲ್ಲ, ವಿಯನ್ನಾದಿಂದ ಪೀಠೋಪಕರಣಗಳು ಬರುತ್ತಿವೆ ಎಂದು ತಿಳಿದ ಮೇಲೆ, ಸಾರ್ವಜನಿಕರ ಹಣವನ್ನು ಬಳಸಿಕೊಳ್ಳುತ್ತಿದ್ದಾನೆ ಎನ್ನುವ ಅನುಮಾನ ಖಾತ್ರಿಯಾಯಿತು. ಒಂದು ಭಾನುವಾರದ ದಿನ ಪ್ರಾರ್ಥನಾ ಸಭೆ ಮುಗಿಸಿಕೊಂಡು ಬರುತ್ತಿರುವಾಗ ಆರ್ಕಾಡಿಯೊ ಮನೆಯಲ್ಲಿ ಆಫೀಸರುಗಳ ಜೊತೆ ಕುಳಿತು ಕಾರ್ಡ್ ಆಡುತ್ತಿದ್ದುದನ್ನು ನೋಡಿದಾಗ "ನಿನ್ನಿಂದ ಮನೆಗೇ ಕೆಟ್ಟ ಹೆಸರು" ಎಂದು ಜೋರಾಗಿ ಕೂಗಿ ಹೇಳಿದಳು. ಆರ್ಕಾಡಿಯೊ ಅದರ ಕಡೆ ಗಮನವನ್ನೇ ಕೊಡಲಿಲ್ಲ. ಆಗ ಅವಳಿಗೆ, ಅವನಿಗೆ ಆರುತಿಂಗಳ ಹೆಣ್ಣು ಮಗು ಇರುವುದು ಮತ್ತು ಸಾಂತಾ ಸೋಫಿಯಾ ಡೆಲಾ ಪೀದಾದ್‌ನ ಜೊತೆಗಿನ ವಿವಾಹ ಬಾಹಿರ ಸಂಬಂಧದಿಂದಾಗಿ ಮತ್ತೆ ಅವಳು ಗರ್ಭಿಣಿ ಎಂಬ ವಿಷಯವು ತಿಳಿದುಬಂತು. ಆಗ ಅವಳು ಕರ್ನಲ್ ಅರೆಲಿಯಾನೊ ಎಲ್ಲೇ ಇದ್ದರು ಅವನಿಗೆ ಇಲ್ಲಿವರೆಗಿನ ವಿಷಯಗಳನ್ನೆಲ್ಲ ತಿಳಿಸಿ ಬರೆಯಲು ನಿರ್ಧರಿಸಿದಳು. ಆದರೆ ಆಗಿನ ದಿನಗಳಲ್ಲಿ ವೇಗವಾಗಿ ಸಂಭವಿಸುತ್ತಿದ್ದ ಘಟನೆಗಳಿಂದಾಗಿ ಅಂದುಕೊಂಡದ್ದನ್ನು ಮಾಡಲಾಗದಂತೆಯೂ ಮತ್ತು ಅಂತಹ ಆಲೋಚನೆಗೆ ಪರಿತಪಿಸುವಂತೆಯೂ ಆಯಿತು. ಯುದ್ಧದ ಬಗ್ಗೆ ಊಹಾಪೋಹದ ಮಾತುಗಳು ಕೇಳಿ ಬರುತ್ತಿದ್ದುವಾದರೂ ಈಗ ಅದು ವಾಸ್ತವ ಸತ್ಯವಾಯಿತು. ಫೆಬ್ರವರಿಯ ಕೊನೆಯ ಹೊತ್ತಿಗೆ ವಯಸ್ಸಾದ ಮುದುಕಿಯೊಬ್ಬಳು ಕತ್ತೆಗಳ ಮೇಲೆ ಪೊರಕೆಗಳ ರಾಶಿಯನ್ನು ಹೇರಿ ಮಕೊಂಡೊಗೆ ಬಂದಳು. ಅವಳು ಎಷ್ಟು [ಬಡಪಾಯಿ ಪಾಪದ] ಹೆಂಗಸಾಗಿ ಕಾಣುತ್ತಿದ್ದಳೆಂದರೆ ಕಾವಲು ಭಟರು ಯಾರೂ ಅವಳನ್ನು ತಡೆಯಲಿಲ್ಲ, ಯಾವುದೇ ಪ್ರಶ್ನೆ ಕೇಳಲಿಲ್ಲ. ಸುಮ್ಮನೆ ಹೋಗಲು ಬಿಟ್ಟರು, ವ್ಯಾಪಾರ ಮಾಡೋಕೆ ಬರುವ ಇತರರ ಹಾಗೆ ಎಂದುಕೊಂಡರು. ಆರ್ಕಾಡಿಯೊ ಆಕೆಯನ್ನು ಮೊದಲು ಕ್ಲಾಸ್‌ರೂಂ ಆಗಿದ್ದ ಜಾಗಕ್ಕೆ ಬರಮಾಡಿಕೊಂಡಿದ್ದ. ಅದನ್ನು ಸೈನಿಕರಿದ್ದ ಜಾಗವಾಗಿ ಪರಿವರ್ತಿಸಲಾಗಿತ್ತು. ಅಲ್ಲಿ ಕೊಕ್ಕೆಗಳಿದ್ದು ಸುತ್ತಿಟ್ಟ ಹಾಸಿಗೆಗಳು, ಚಾಪೆಗಳು ಅದಕ್ಕೆ ನೇತುಹಾಕಲಾಗಿತ್ತು. ಎಲ್ಲೆಂದರಲ್ಲಿ ಬಂದೂಕುಗಳು, ಪಿಸ್ತೂಲುಗಳು ಮತ್ತು ಇತರೆ ವಸ್ತುಗಳು ಹರಡಿಕೊಂಡು ಬಿದ್ದಿದ್ದವು. ವಯಸ್ಸಾದ ಹೆಂಗಸು, ತನ್ನ ಪರಿಚಯ ಕೊಡುವುದಕ್ಕೆ ಮೊದಲು ಮಿಲಿಟರಿ ಸಲ್ಯೂಟ್ ಮಾಡಿ, "ನಾನು ಕರ್ನಲ್ ಗ್ರೆಗೊರಿಯೊ ಸ್ಟೀವನ್‌ಸನ್" ಎಂದಳು.

ಅವನು ಕೆಟ್ಟ ಸುದ್ದಿಯನ್ನು ತಂದಿದ್ದ. ಲಿಬರಲ್ ಪ್ರತಿರೋಧದ ಕಟ್ಟ ಕಡೆಯ ಕೇಂದ್ರಗಳೆಲ್ಲವನ್ನೂ ಪೂರ್ತಿಯಾಗಿ ಒರೆಸಿ ಹಾಕಲಾಗಿದೆ. ಕರ್ನಲ್ ಅರೆಲಿಯಾನೊನನ್ನು ಹೋರಾಡುತ್ತಲೆ ರಿಯೋಹಚಾ ಬಳಿಬಿಟ್ಟು ಹಿಂತಿರುಗುತ್ತಿದ್ದವನೊಂದಿಗೆ ಅವನು ಆರ್ಕಾಡಿಯೋಗೆ ಸಂದೇಶವೊಂದನ್ನು ಕಳಿಸಿದ್ದ. ಲಿಬರಲ್‌ಗಳ ಪ್ರಾಣಕ್ಕೆ ಆಸ್ತಿಪಾಸ್ತಿಗೆ ಹಾನಿಯಾಗದಂತೆ, ಯಾವುದೇ ಪ್ರತಿರೋಧವಿಲ್ಲದೆ ಊರನ್ನು ವಶಕ್ಕೆ ಕೊಟ್ಟು ಬಿಡಬೇಕೆಂಬ ಷರತ್ತಿನೊಂದಿಗೆ ತಿಳಿಸಲಾಗಿತ್ತು. ನೋಡಿದರೆ ಮರುಕ ಹುಟ್ಟುವ ಹಾಗಿದ್ದ. ಸಂದೇಶ ತಂದವನು ತಲೆಮರೆಸಿಕೊಳ್ಳಲು ಬಂದವನೇನೊ ಎಂಬಂತೆ ಪರೀಕ್ಷಿಸಿದ.

"ಬರವಣಿಗೆಯಲ್ಲಿ ಏನಾದರೂ ತಂದಿರಬೇಕಲ್ಲ" ಎಂದ

"ಆ ಥರದ್ದು ನಾನೇನೂ ತಂದಿಲ್ಲ. ವರ್ತಮಾನ ಪರಿಸ್ಥಿತಿಯಲ್ಲಿ ಯಾವ ವ್ಯಕ್ತಿಯೂ ಅನುಮಾನ ಹುಟ್ಟಿಸುವ ಏನನ್ನೂ ತರುವುದು ಸಾಧ್ಯವಿಲ್ಲ ಎನ್ನುವುದು ಎಲ್ಲರಿಗೂ ಗೊತ್ತಿದೆ" ಎಂದ.

ಅವನು ಮಾತಾಡುತ್ತಲೇ ಒಳಗೆ ಕೈಹಾಕಿ ಒಂದು ಸಣ್ಣ ಚಿನ್ನದ ಮೀನನ್ನು ಹೊರತೆಗೆದ. "ಬಹುಶಃ ಇದಿಷ್ಟು ಸಾಕು ಎನಿಸುತ್ತೆ" ಎಂದ.

ಅದನ್ನು ನೋಡಿದ ಕೂಡಲೇ ಆರ್ಕಾಡಿಯೋಗೆ ಕರ್ನಲ್ ಅರೆಲಿಯಾನೊ ತಯಾರಿಸಿದ ಮೀನುಗಳಲ್ಲಿ ಒಂದು ಎಂಬುದು ತಿಳಿಯಿತು. ಆದರೆ ಅದನ್ನು ಯುದ್ಧಕ್ಕೆ ಮುಂಚೆ ಕೊಂಡಿರಬಹುದು ಇಲ್ಲವೆ ಕಳ್ಳತನ ಮಾಡಿರಬಹುದು. ಸುರಕ್ಷತೆಯ ಬೆಲೆ ಅದಕ್ಕೆ ಬರಲಾರದು. ಆ ಸಂದೇಶವಾಹಕ ಮಿಲಿಟರಿ ರಹಸ್ಯಗಳನ್ನು ಕಾಪಾಡಬೇಕೆಂಬ ನೀತಿಯನ್ನೂ ಮೀರಿ ತನ್ನ ಗುರುತನ್ನು ನಂಬಿಸಲು ನೋಡಿದ. ಅವನು ಕುರಾಸಾವೋಗೆ ಹೋಗಿ ಕ್ಯಾರೀಬಿಯಾದ ಎಲ್ಲ ಕಡೆಯಿಂದ, ದೇಶ ಬಿಟ್ಟು ಬಂದವರನ್ನೆಲ್ಲ ಸೇರಿಸಿಕೊಂಡು, ಸಾಕಷ್ಟು ಆಯುಧಗಳನ್ನೆಲ್ಲ ಸಂಗ್ರಹಿಸಿ ವರ್ಷದ ಕಡೆಯಲ್ಲಿ ಅವರ ಮೇಲೆ ಆಕ್ರಮಣ ಮಾಡುವ ಉದ್ದೇಶವನ್ನು ಹೊಂದಿರುವುದಾಗಿ ತಿಳಿಸಿದ. ಆ ಒಂದು ಯೋಜನೆಯಲ್ಲಿ ನಂಬಿಕೆ ಇರಿಸಿದ್ದ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ, ಅರ್ಥಹೀನವಾದ ಬಲಿದಾನಗಳನ್ನು ಮಾಡುವ ವಿಚಾರದ ಪರವಾಗಿರಲಿಲ್ಲ. ಆದರೆ ಆರ್ಕಾಡಿಯೊ ಕಿವಿಗೊಡಲಿಲ್ಲ. ತನ್ನ ಪರಿಚಯವನ್ನು ಸಾಬೀತುಪಡಿಸುವವರೆಗೆ ಅವನನ್ನು ಕೈದಿಯಾಗಿ ಇರಿಸಿದ. ಕೊನೆ ಗಳಿಗೆಯವರೆಗೂ ಊರನ್ನು ರಕ್ಷಿಸಲು ಕಟಿಬದ್ಧನಾದ.

ಅವನಿಗೆ ಬಹಳ ಕಾಲ ಕಾಯಬೇಕಾಗಲಿಲ್ಲ. ಲಿಬರಲ್‌ರ ಸೋಲು ದಿನೇ ದಿನೇ ಖಚಿತಗೊಂಡಿತು. ಮಾರ್ಚ್ ತಿಂಗಳ ಕೊನೆಯಲ್ಲಿ ಮಳೆಗಾಲವಲ್ಲದಿದ್ದ ಮಳೆಯದಿನ ಬೆಳಿಗ್ಗೆ, ಇದ್ದಕ್ಕಿದ್ದಂತೆ ಹಿಂದಿನ ದಿನಗಳ ಪ್ರಕ್ಷುಬ್ಧ ಪ್ರಶಾಂತತೆ ಮದ್ದುಗುಂಡುಗಳ ಸದ್ದಿನಿಂದ ಕದಡಿತು. ಚರ್ಚಿನ ಗೋಪುರವನ್ನು ಫಿರಂಗಿಗಳು ಉರುಳಿಸಿದ್ದವು. ವಾಸ್ತವವಾಗಿ ಆರ್ಕಾಡಿಯೋನ ಪ್ರತಿರೋಧದ ನಿರ್ಧಾರ ಹುಚ್ಚುತನವಾಗಿತ್ತು. ಅವನ ಬಳಿ ಕೇವಲ ಐವತ್ತು ಜನ ಮಾತ್ರವಿದ್ದರು. ಅವರಲ್ಲಿ ಸಾಕಷ್ಟು ಶಸ್ತ್ರಾಸ್ತ್ರಗಳೂ ಇರಲಿಲ್ಲ. ಕೇವಲ ಇಪ್ಪತ್ತಿಪ್ಪತ್ತು ಸಿಡಿಮದ್ದುಗಳು ಮಾತ್ರವೇ ಒಬ್ಬೊಬ್ಬರ ಬಳಿ ಇತ್ತು. ಆದರೆ ಅವರಲ್ಲಿ ಅವನ

ಹಳೆಯ ಶಿಷ್ಯರು ಇದ್ದು ದೊಡ್ಡ ದೊಡ್ಡ ಘೋಷಣೆಗಳೊಂದಿಗೆ ಕಡೆತನಕ ಹೋರಾಡಿ ಗುರಿಮುಟ್ಟಲು ನಿರ್ಧರಿಸಿದ್ದರು. ಬೂಟುಕಾಲಿನ ಸದ್ದುಗಳು, ಪರಸ್ಪರ ವಿರುದ್ಧವಾದ ಆದೇಶಗಳು ಭೂಮಿ ಕಂಪಿಸುವಂತಹ ಫಿರಂಗಿಗಳ ಸದ್ದು, ಹುಚ್ಚಾಪಟ್ಟೆ, ಗುಂಡುಹಾರಾಟ, ವ್ಯರ್ಥವಾಗುತ್ತಿದ್ದ ಸಿಡಿಮದ್ದಿನ ಸದ್ದು ಇವುಗಳ ನಡುವೆ, ಕರ್ನಲ್ ಸ್ಟೀವನ್‌ಸನ್ ಎಂದು ನಂಬಿಸಲಾಗಿದ್ದವನು ಆರ್ಕಾಡಿಯೋಗೆ "ನನ್ನನ್ನು ಈ ಬಂದೀಖಾನೆಯಲ್ಲಿ ಅದೂ ಹೆಂಗಸಿನ ವೇಷದಲ್ಲಿ ಅಗೌರವದಿಂದ ಸಾಯುವಂತೆ ಮಾಡಬೇಡಿ" "ನಾನು ಸಾಯಬೇಕೆಂದಿದ್ದರೆ, ಹೋರಾಡುತ್ತ ಸಾಯಲು ಅವಕಾಶ ಕೊಡಿ" ಎಂದು ಹೇಳಿದ. ಅವನ ಮನವೊಲಿಸುವಲ್ಲಿ ಯಶಸ್ವಿಯಾದ. ಆರ್ಕಾಡಿಯೋ ಅವನಿಗೆ ಒಂದು ಆಯುಧ ಮತ್ತು ಇಪ್ಪತ್ತು ಸಿಡಿಮದ್ದುಗುಂಡುಗಳನ್ನು ನೀಡಲು ಹೇಳಿ, ಐದು ಜನರನ್ನು ಅವನ ಜೊತೆಗಿರಿಸಿ ಮುಖ್ಯ ಕೇಂದ್ರ ರಕ್ಷಣೆ ಒಪ್ಪಿಸಿ, ತಾನು ಉಳಿದವರ ಜೊತೆ ಪ್ರತಿರೋಧದ ತಂಡದ ಮುಂದಾಳಾಗಿ ಹೊರಟ. ಜೌಗುಪ್ರದೇಶಕ್ಕೆ ಹೋಗಲು ದಾರಿ ಸಿಗಲಿಲ್ಲ. ಅಡೆತಡೆಗಳನ್ನು ನಾಶಮಾಡಿ ರಕ್ಷಣೆಗೆ ಹೋರಾಡುತ್ತಿದ್ದವರು ರಸ್ತೆಗಳಲ್ಲೆ ಹೊಡೆದಾಡುತ್ತಿದ್ದರು. ಮೊದಲಿಗೆ ತಮ್ಮಲ್ಲಿದ್ದ ಗುಂಡುಗಳನ್ನೆಲ್ಲ ಹಾರಿಸಿಬಿಟ್ಟರು. ನಂತರ, ಬಂದೂಕುಗಳಿಗೆ ಬದಲಾಗಿ ಪಿಸ್ತೂಲುಗಳನ್ನು ಬಳಸಿದರು. ಕಡೆಯದಾಗಿ ಕೈಕೈ ಮಿಲಾಯಿಸಿದರು. ಸೋಲು ಹತ್ತಿರವಾಗುತ್ತಿದೆ ಎನಿಸಿದ್ದೆ ಹೆಂಗಸರು ಕೋಲುಗಳನ್ನು ಅಡಿಗೆ ಚಾಕುಗಳನ್ನು ಹಿಡಿದು ರಸ್ತೆಗೆ ಬಂದರು. ಗೊಂದಲದಲ್ಲಿದ್ದ ಆರ್ಕಾಡಿಯೊ, ಹುಚ್ಚಿಯಂತೆ ನೈಟ್‌ಗೌನಿನಲ್ಲಿಯೇ ಕೈಲಿ ಎರಡು ಹಳೆಯ ಪಿಸ್ತೂಲುಗಳನ್ನು ಹಿಡಿದು (ಜೋಸ್ ಆರ್ಕಾಡಿಯೊ ಬ್ಯುಂಡಿಯಾಗೆ ಸೇರಿದ್ದು) ಕೊಂಡು ಅವನು ಅವರನ್ನು ಹುಡುಕುತ್ತ ಬರುತ್ತಿದ್ದುದನ್ನು ನೋಡಿದ. ಅವನು ಬಂದೂಕನ್ನು ಯುದ್ಧ ಮಾಡುತ್ತಾ ಅಸ್ತ್ರವಿಹೀನನಾಗಿದ್ದ ಆಫೀಸರ್ ಕೈಗೆ ಅಸ್ತ್ರವಿಲ್ಲದಿದ್ದ ಸೈನಿಕನಿಗೆ ಕೊಟ್ಟು ಅಮರಾಂತ ಜೊತೆಗೆ, ಅವಳನ್ನು ಮನೆಗೆ ಬಿಡಲು ತಪ್ಪಿಸಿಕೊಂಡು ಹತ್ತಿರದ ರಸ್ತೆಯಿಂದ ಓಡಿಹೋದ. ಉರ್ಸುಲಾ ಕಾಯುತ್ತಾ ಮನೆಯ ಮುಂಭಾಗಿಲಲ್ಲೇ, ಸಿಡಿಮದ್ದುಗಳಿಂದ ಪಕ್ಕದ ಮನೆಯ ಬಾಗಿಲಿಗೆ ತೂತು ಬಿದ್ದಿದ್ದರೂ ಲೆಕ್ಕಿಸದೆ, ನಿಂತಿದ್ದಳು. ಮಳೆ ಬರುತ್ತಿತ್ತು. ರಸ್ತೆಗಳು ಜಾರುತ್ತಿದ್ದವು. ಕತ್ತಲಲ್ಲಿ ದಾರಿಯನ್ನು ಊಹೆಯಿಂದ ಕಂಡುಕೊಳ್ಳಬೇಕಿತ್ತು. ಆರ್ಕಾಡಿಯೊ ಅಮರಾಂತಳನ್ನು ಮನೆಯಲ್ಲಿದ್ದ ಉರ್ಸುಲಾ ಬಳಿಗೆ ಬಿಟ್ಟು ಮೂಲೆಯಲ್ಲಿ ಅಡಗಿಕೊಂಡು ಗುಂಡುಹಾರಿಸುತ್ತಿದ್ದ ಇಬ್ಬರು ಸೈನಿಕರಿಗೆ ಎದುರಾಗಲು ಪ್ರಯತ್ನಿಸಿದ. ಹಳೆಯ ಪಿಸ್ತೂಲುಗಳು ಬಹಳ ವರ್ಷಗಳಿಂದ ಹಾಗೇ ಇದ್ದುದರಿಂದ, ಅವು ಕೆಲಸ ಮಾಡಲಿಲ್ಲ. ಆರ್ಕಾಡಿಯೋನನ್ನು ರಕ್ಷಿಸುತ್ತಾ ಉರ್ಸುಲಾ ಅವನನ್ನು ಮನೆಯ ಒಳಗೆ ಎಳೆದುಕೊಳ್ಳಲು ಪ್ರಯತ್ನಿಸಿದಳು.

"ದೇವರಾಣೆ, ಒಳಗೆ ಬಾ.... ಸಾಕಷ್ಟು ಹುಚ್ಚಾಟ ಮಾಡಿದ್ದು ಆಗಿದೆ" ಎಂದು ಜೋರಾಗಿ ಹೇಳಿದಳು.

ಸೈನಿಕರು ಅವರಿಗೆ ಗುರಿಯಿಟ್ಟರು.

"ಅವನನ್ನು ಹೋಗಲು ಬಿಡಿ ಮೇಡಮ್, ಇಲ್ಲವಾದಲ್ಲಿ ನಾವು ಜವಾಬ್ದಾರರಲ್ಲ" ಎಂದು ಅವರಲ್ಲೊಬ್ಬ ಹೇಳಿದ.

ಆರ್ಕಾಡಿಯೊ ಉರ್ಸುಲಾಳನ್ನು ಮನೆ ಒಳಕ್ಕೆ ದೂಡಿ ತಾನು ಅವರಿಗೆ ಶರಣಾದ. ಸ್ವಲ್ಪ ಹೊತ್ತಿನಲ್ಲಿ ಗುಂಡುಹಾರಿಸುವುದು ನಿಂತಿತು. ಗಂಟೆಗಳು ಮೊಳಗಲು ಆರಂಭಿಸಿದವು. ಅರ್ಧಗಂಟೆ ಒಳಗೇ ಪ್ರತಿರೋಧವನ್ನು ಪೂರ್ತಿಯಾಗಿ ಹತ್ತಿಕ್ಕಲಾಯಿತು. ಆರ್ಕಾಡಿಯೊ ಕಡೆಯವರಲ್ಲಿ ಒಬ್ಬನೂ ಉಳಿಯಲಿಲ್ಲ. ಆದರೆ ಸಾಯುವುದಕ್ಕೆ ಮೊದಲು ಮುನ್ನೂರು ಮಂದಿ ಸೈನಿಕರನ್ನು ಕೊಂದಿದ್ದರು. ಅತ್ಯಂತ ಬಲಿಷ್ಠವಾದ ಜಾಗವೆಂದರೆ ಸೇನಾಸ್ಥಾವರ ಆಕ್ರಮಣಕ್ಕೆ ಒಳಗಾಗುವುದಕ್ಕೆ ಮೊದಲು, ಕರ್ನಲ್ ಸ್ಟೀವನ್‌ಸನ್ ಎಂದು ನಂಬಲಾಗಿದ್ದ ವ್ಯಕ್ತಿ, ಕೈದಿಗಳನ್ನೆಲ್ಲಾ ಬಿಡುಗಡೆ ಮಾಡಿ, ತನ್ನವರನ್ನೆಲ್ಲ ರಸ್ತೆಯಲ್ಲಿ ಯುದ್ಧ ಮಾಡಲು ಆದೇಶಿಸಿ ಅತಿಶಯದ ಚಲನೆ, ನಿಖರವಾದ ಗುರಿಯೊಂದಿಗೆ ಇಪ್ಪತ್ತು ಸಿಡಿಮದ್ದುಗಳೊಂದಿಗೆ, ಇದ್ದ ಸೈನಿಕರನ್ನು ನೋಡಿದಾಗ ಆಯಕಟ್ಟು ಸ್ಥಳಗಳು ಸುಭದ್ರವಾಗಿವೆ ಎನ್ನುವ ಭಾವನೆ ಬರುತ್ತಿತ್ತು. ಆಕ್ರಮಣಕಾರರು ಅದನ್ನು ಚೂರು ಚೂರಾಗುವಂತೆ ಮದ್ದುಗುಂಡಿನಿಂದ ಸಿಡಿಸಿಬಿಟ್ಟರು. ಈ ರೀತಿ ಮಾಡಲು ಆದೇಶಿಸಿದ ಕ್ಯಾಪ್ಟನ್ ಹಾಳುಬಿದ್ದಿದ್ದ ಅವಶೇಷಗಳಲ್ಲಿ, ಇನ್ನೂ ಕೈಯಲ್ಲಿ ಖಾಲಿಯಾದ ಬಂದೂಕು ಹಿಡಿದು ಒಳ ಉಡುಪಿನಲ್ಲಿಯೇ ಸತ್ತಿದ್ದ ಮನುಷ್ಯನೊಬ್ಬನನ್ನು ನೋಡಿ ಅಚ್ಚರಿಗೊಂಡ. ಅವನಿಗೆ ಹೆಂಗಸಿನ ಹಾಗೆ ತಲೆಗೂದಲಿತ್ತು. ಕೊರಳಲ್ಲಿ ಒಂದು ಚಿನ್ನದ ಮೀನಿನ ಪದಕವಿದ್ದ ಸರವೊಂದಿತ್ತು. ಅವನು ತನ್ನ ಬೂಟುಕಾಲಿನಿಂದ ಸತ್ತ ಮನುಷ್ಯನನ್ನು ಹೊರಳಿಸಿದ. ಮುಖದ ಮೇಲೆ ಬೆಳಕುಬಿಟ್ಟು ಗಲಿಬಿಲಿಗೊಂಡ. "ಜೀಸಸ್ ಕ್ರೈಸ್ಟ್" ಎಂದು ಉದ್ಗರಿಸಿದ. ಬೇರೆಬೇರೆ ಆಫೀಸರುಗಳೂ ಬಂದರು.

"ನೋಡಿ, ಈ ಮನುಷ್ಯ ಎಲ್ಲಿ ಸಿಕ್ಕಿದ್ದಾನೆ! ..... ಇವನು ಗ್ರೆನೊರಿಯೊ ಸ್ಟೀವನ್‌ಸನ್" ಎಂದು ಕ್ಯಾಪ್ಟನ್ ಹೇಳಿದ.

ಬೆಳಿಗ್ಗೆ ಸೈನಿಕ ನ್ಯಾಯಾಸ್ಥಾನದ ವಿಚಾರಣೆಯ ನಂತರ ಸ್ಮಶಾನದ ಗೋಡೆಗೆ ನಿಲ್ಲಿಸಿ ಗುಂಡಿಕ್ಕಿ ಕೊಲೆ ಮಾಡಿದರು. ತನ್ನ ಜೀವನದ ಕಡೆಯ ಎರಡು ಗಂಟೆಗಳಲ್ಲಿ, ಬಾಲ್ಯದಿಂದಲೂ ತನ್ನ ಬೆನ್ನಟ್ಟಿಯೇ ಕಾಡಿದ ಭಯ ಈಗ ಯಾಕೆ ಮರೆಯಾಯಿತು ಎಂಬುದನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ತನ್ನ ಇತ್ತೀಚಿನ ಸಾಹಸದ ಬಗ್ಗೆ ಯೋಚನೆಯೂ ಮಾಡದೆ, ನಿರ್ಲಿಪ್ತನಾಗಿ ತನ್ನ ಮೇಲಿನ ಆಪಾದನೆಗಳನ್ನೆಲ್ಲ ಕೇಳಿಸಿಕೊಂಡ. ಅವನಿಗೆ ಚೆಸ್ಟ್‌ನಟ್ ಮರದ ಕೆಳಗೆ ಕುಳಿತಿರುವ ಜೋಸ್ ಆರ್ಕಾಡಿಯೊ ಬ್ಯುಂಡಿಯಾ ಜೊತೆ ಇಷ್ಟು ಹೊತ್ತಿನಲ್ಲಿ ಕಾಫಿ ಕುಡಿಯುತ್ತಿರಬಹುದಾದ ಉರ್ಸುಲಾ ಬಗ್ಗೆ ಯೋಚಿಸಿದ. ಇನ್ನೂ ಹೆಸರಿಡದ ತನ್ನ ಎಂಟು ತಿಂಗಳ ಮಗಳ ಬಗ್ಗೆ ಮತ್ತು ಆಗಸ್ಟ್‌ನಲ್ಲಿ ಹುಟ್ಟಲಿರುವ ಮಗುವಿನ ಬಗ್ಗೆ ಯೋಚಿಸಿದ. ಮರುದಿನದ ಊಟಕ್ಕೆಂದು ಜಿಂಕೆಮಾಂಸಕ್ಕೆ ಉಪ್ಪು ಹಚ್ಚುತ್ತಿದ್ದ ಸಾಂತಾ ಸೋಫಿಯಾ ದ ಲಾ ಪೀದಾರ್ದಳನ್ನು ಬಿಟ್ಟು ಬಂದ ಆ ರಾತ್ರಿ ನೆನಪಾಯಿತು. ಅವಳಿಲ್ಲದ್ದು ಅವನಿಗೆ ಬಹಳ ಬೇಸರವೆನಿಸಿತು. ಬೆನ್ನಿಗೆ ಇಳಿಬಿದ್ದಿರುತ್ತಿದ್ದ ಅವಳ ಕೂದಲು. ಕೃತಕವೆಂಬಂತೆ ಕಾಣುತ್ತಿದ್ದ

ಕಣ್ಣ ರೆಪ್ಪೆಗಳು ಎಲ್ಲವೂ ನೆನಪಾದವು. ಯಾವುದೇ ಭಾವುಕತೆಯಿಲ್ಲದೆ ಬದುಕಿನ ಲೆಕ್ಕಾಚಾರವನ್ನು ಮುಗಿಸುತ್ತಾ ತನ್ನವರನ್ನು ತಾನೆಷ್ಟು ಪ್ರೀತಿಸಿದೆ, ಎಷ್ಟು ದ್ವೇಷಿಸಿದೆ ಎಂಬುದನ್ನು ಯೋಚಿಸಿದ. ಮಿಲಿಟರಿ ವಿಚಾರಣೆಯ ಅಧ್ಯಕ್ಷ ತನ್ನ ಕಡೆಯ ಭಾಷಣ ಆರಂಭಿಸಿದಾಗ ಆರ್ಕಾಡಿಯೋಗೆ ಎರಡು ಗಂಟೆ ಮುಗಿಯುತ್ತಿದ್ದುದರ ಅರಿವಾಯಿತು. "ಸಾಬೀತಾದ ಆಪಾದನೆಗಳು ಅಷ್ಟು ಗಂಭೀರವಲ್ಲದಿದ್ದರೂ, ಬೇಜವಾಬ್ದಾರಿಯಾದ ಮತ್ತು ಧಾರ್ಷ್ಟ್ಯಗಳಿಂದ ತನ್ನ ಕೆಳಗಿನವರನ್ನು, ವಿನಾಕಾರಣ ಸಾವಿನತ್ತ ದೂಡಿದ ಅಪರಾಧವೇ, ಮರಣದಂಡನೆಗೆ ಈ ಆರೋಪಿಯನ್ನು ಅರ್ಹನನ್ನಾಗಿಸಿದೆ" ಎಂದು ಹೇಳಿದ. ಛಿದ್ರಗೊಂಡಿದ್ದ ಶಾಲಾಕಟ್ಟಡ, ಒಂದು ಕಾಲದಲ್ಲಿ ಅಧಿಕಾರ ಭದ್ರತೆಯ ಭಾವವನ್ನು ಅನುಭವಿಸಿದ್ದ, ಅಲ್ಲಿಂದ ಕೆಲವೇ ಅಡಿಗಳ ಅಂತರದಲ್ಲಿ ಪ್ರೀತಿಯ ಅನಿಶ್ಚಿತತೆಯ ಅರಿವನ್ನು ಪಡೆದಿದ್ದ. ಆರ್ಕಾಡಿಯೋಗೆ ಆ ಕೊಠಡಿಯಲ್ಲಿ ಸಾವಿನ ಔಪಚಾರಿಕತೆ ಹಾಸ್ಯಾಸ್ಪದವೆನಿಸಿತು. ಸಾವಿನ ಬಗ್ಗೆ ಅವನಿಗೆ ಏನೂ ಅನಿಸಲಿಲ್ಲ. ಆದರೆ ಬದುಕಿನ ಬಗ್ಗೆ ಅವನಿಗೆ ಯೋಚನೆಯಿತ್ತು. ಆದ್ದರಿಂದ ಅವರು ತಮ್ಮ ಕಡೆಯ ನಿರ್ಧಾರವನ್ನು ಹೇಳಿದಾಗ ಅವನಿಗೆ ಭಯವೆನಿಸಲಿಲ್ಲ. ಬದಲಾಗಿ ಮನೋವ್ಯಥೆಯಾಯಿತು. ಕಡೆಯ ಪ್ರಾರ್ಥನೆ ಏನೆಂದು ಅವರು ಕೇಳುವವರೆಗೆ ಅವನು ಮಾತಾಡಲಿಲ್ಲ. "ನನ್ನ ಹೆಂಡತಿಗೆ ತಿಳಿಸಿ, ನನ್ನ ಮಗಳಿಗೆ ಉರ್ಸುಲಾ ಹೆಸರು ಇಡಬೇಕೆಂದು" – ಎಂದು ಸಮಾಧಾನದ ದನಿಯಲ್ಲಿ ಹೇಳಿದ. ಸ್ವಲ್ಪ ಹೊತ್ತು ಸುಮ್ಮನಿದ್ದು ಮತ್ತೆ "ಉರ್ಸುಲಾ ಅವಳ ಅಜ್ಜಿ. ಅಲ್ಲದೆ ಒಂದು ವೇಳೆ ಗಂಡು ಮಗುವಾದರೆ ಜೋಸ್ ಆರ್ಕಾಡಿಯೊ ಬ್ಯುಂಡಿಯಾ ಚಿಕ್ಕಪ್ಪನ ಹೆಸರಲ್ಲ, ಅಜ್ಜನ ಹೆಸರು" ಎಂದ.

ದಂಡನೆಗೆ ಗುರಿಪಡಿಸಬೇಕಿದ್ದ ಗೋಡೆಯ ಬಳಿ ಕರೆದುಕೊಂಡು ಹೋಗುವ ಮೊದಲು ಫಾದರ್ ನಿಕಾನೋರ್ ಅವನ ಬಳಿ ಬಂದ. ಪಶ್ಚಾತ್ತಾಪ ಪಡಲು ನನ್ನಲ್ಲಿ ಏನೂ ಇಲ್ಲ ಎಂದು ಹೇಳಿ ಆರ್ಕಾಡಿಯೊ ಕಪ್ಪು ಕಾಫಿ ಕುಡಿದ ನಂತರ ತಂಡದ ಆದೇಶಕ್ಕೆ ಒಳಪಡಿಸಿಕೊಂಡ. ತಂಡದ ನಾಯಕ, ಸೈನಿಕ, ವಿಚಾರಣೆ ನಡೆಸುವಲ್ಲಿ ಪರಿಣತನೆನಿಸಿಕೊಂಡಿದ್ದ. ಅವನಿಗೆ ಕಟುಕನೆಂಬ ಹೆಸರು ಬೇರೆ ಇತ್ತು. ಕ್ಯಾಪ್ಟನ್ ರೋಬ್ ಕಾರ್ನಿಸೆರೊ – ಇದು ಅನ್ವರ್ಥನಾಮವಾಗಿತ್ತು. ಸ್ಮಶಾನದ ಕಡೆಗೆ ಹೋಗುವಾಗ, ನಿರಂತರವಾಗಿ ಮಳೆ ಹನಿಸುತ್ತಿತ್ತು. ದಿಗಂತದತ್ತ ಕಣ್ಣು ಹಾಯಿಸಿದಾಗ ಉಜ್ವಲವಾದ ಬುಧವಾರದ ಬೆಳಕು ಕಾಣಿಸಿತು. ಮನೋವ್ಯಥೆ ಮರೆಯಾಗಿ ಆ ಜಾಗದಲ್ಲಿ ಕುತೂಹಲ ಕಾಣಿಸಿಕೊಂಡಿತು. ಗೋಡೆ ಕಡೆಗೆ ಬೆನ್ನುಮಾಡಲು ಅವರು ಆದೇಶಿಸುತ್ತಿದ್ದಾಗ ಒದ್ದೆ ಕೂದಲಲ್ಲಿ, ನೇರಳೆ ಬಣ್ಣದ ಹೂಗಳಿದ್ದ ಉಡುಪಿನಲ್ಲಿ ಬಾಗಿಲು ತೆರೆಯುತ್ತಿದ್ದ ರೆಬೆಕಾ ಕಾಣಿಸಿದಳು. ಅವನನ್ನು ನೋಡುವಂತೆ ಮಾಡಲು ಪ್ರಯತ್ನಿಸಿದ ರೆಬೆಕಾ ಸುಮ್ಮನೆ ಹಾಗೇ ಕಣ್ಣಾಡಿಸಿದಳು. ದಿಗ್ಭ್ರಮೆಯಿಂದ ನಿಶ್ಚಲಳಾದಳು. ಪ್ರತಿಕ್ರಿಯಿಸುವುದಕ್ಕಾಗಲಿ, ವಿದಾಯ ಹೇಳುವುದಕ್ಕಾಗಲಿ ಸಾಧ್ಯವಾಗದ ರೀತಿಯಲ್ಲಿದ್ದಳಾದರೂ ಹೇಗೋ ಹೇಳಿದಳು ಅವನೂ ಅದೇ ರೀತಿಯಲ್ಲಿ ಉತ್ತರಿಸಿದ. ಹೊಗೆಯಾಡುತ್ತಿದ್ದ ಬಂದೂಕುಗಳು ಅವನಿಗೆ ಗುರಿ ಇಟ್ಟಿದ್ದವು. ಮೆಲ್‌ಕಿಯಾಡ್ಸ್ ತರಿಸಿದ ಪೋಪ್ ಗುರುವಿನ ನಿರೂಪಣೆಯ ಮಾತುಗಳು ಕೇಳಿಸಿದವು. ಸಾಂತಾ ಸೋಫಿಯಾ ದ ಲಾ ಪೀದಾದ್‌ಳು ಕ್ಲಾಸ್ ರೂಂನಲ್ಲಿ ನಡೆದು

ಬಂದಳು ಹೆಜ್ಜೆಗಳು ಕೇಳಿಸಿದವು. ರೆಮೆಡಿಯೋಸ್‌ಳ ಶವದ ಮೂಗಿನ ಹೊಳ್ಳೆಗಳಲ್ಲಿದ್ದಂಥ ಕೊರೆಯುವ ಬಿಗಿತ ತನ್ನ ಮೂಗಿನಲ್ಲೂ ಅನುಭವಕ್ಕೆ ಬಂತು. "ಓ ದೇವರೆ ಏನಿದು!" ಎಂದು ಯೋಚಿಸುವುದು ಸಾಧ್ಯವಾಯಿತು. "ಒಂದನ್ನು ಹೇಳುವುದನ್ನು ಮರೆತೆ. ಹೆಣ್ಣು ಮಗುವಾಗಿದ್ದರೆ ರೆಮೆಡಿಯೋಸ್ ಎಂದು ಅವರು ಹೆಸರಿಸಬೇಕು ಎಂದು" ನಂತರ ಎಲ್ಲವೂ ಜೀವಮಾನದ ಉದ್ದಕ್ಕೂ ಹಿಂಸಿಸಿದ ಭಯದ ಯಾತನೆ ಒಟ್ಟೊಟ್ಟಿಗೆ ಮತ್ತೆ ಸೇರಿದಂತೆನಿಸಿತು. ಕ್ಯಾಪ್ಟನ್ ಗುಂಡು ಹೊಡೆಯಲು ಆದೇಶಿಸಿದ. ತನ್ನ ತೊಡೆಗಳಿಗೆ ಬಿಸುಪು ನೀಡುತ್ತಿರುವ ದ್ರವ ಎಲ್ಲಿಂದ ಬರುತ್ತಿದೆ ಎನ್ನುವುದನ್ನು ಅರಿಯುವುದಕ್ಕೂ ಸಮಯವಿಲ್ಲದೆ ಎದೆಯೊಡ್ಡಿ ತಲೆ ಎತ್ತಿ ನಿಂತ.

"ಸೂಳೆ ಮಕ್ಕಳಾ.... ಲಿಬರಲ್ ಪಾರ್ಟಿ ಚಿರಾಯುವಾಗಲಿ" – ಎಂದ.

❍

# 7

ಮೇ ತಿಂಗಳಲ್ಲಿ ಯುದ್ಧ ಮುಗಿಯಿತು. ಸರಕಾರ ಅಧಿಕೃತವಾಗಿ ದಂಗೆಯನ್ನು ಆರಂಭಿಸಿದವರಿಗೆ ನಿರ್ದಾಕ್ಷಿಣ್ಯವಾಗಿ ಶಿಕ್ಷೆ ವಿಧಿಸುವ ಘೋಷಣೆಯನ್ನು ಮಾಡುವುದಕ್ಕೆ ಎರಡು ವಾರಗಳ ಮೊದಲು, ಮಾಯಾಮಾಟ ಮಾಡುವ ತಾಂತ್ರಿಕನ ವೇಷದಲ್ಲಿ ಪಶ್ಚಿಮ ಗಡಿಯನ್ನು ಸೇರುವಷ್ಟರಲ್ಲಿ ಕರ್ನಲ್ ಅರೆಲಿಯಾನೊ ಸೆರೆಸಿಕ್ಕ. ಅವನ ಜೊತೆಗಿದ್ದ ಇಪ್ಪತ್ತೊಂದು ಮಂದಿಯಲ್ಲಿ ಹದಿನಾಲ್ಕು ಮಂದಿ ಯುದ್ಧದಲ್ಲಿ ಪ್ರಾಣ ಕಳೆದುಕೊಂಡರು. ಆರು ಮಂದಿ ಗಾಯಗೊಂಡಿದ್ದರು. ಕಡೆಯದಾಗಿ ಉಳಿದಿದ್ದ ಒಬ್ಬನೇ ಒಬ್ಬ ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್ ಸೋಲಿನ ಈ ಸಂದರ್ಭದಲ್ಲಿದ್ದ. ಅವನು ಸೆರೆಯಾದ ವಿಷಯವನ್ನು ಮಕೊಂಡೊದಲ್ಲಿ ವಿಶೇಷ ರೀತಿಯಲ್ಲಿ "ಅವನು ಬದುಕಿದ್ದಾನೆ" ಎಂದು ಘೋಷಿಸಲಾಯಿತು. ಉರ್ಸುಲಾ ತನ್ನ ಗಂಡನಿಗೆ ಈ ವಿಷಯವನ್ನು ತಿಳಿಸಿದಳು. "ಅವನಿಗೆ ಅವನ ಶತ್ರುಗಳು ಕರುಣೆ ತೋರಲೆಂದು ದೇವರನ್ನು ಪ್ರಾರ್ಥಿಸೋಣ" ಎಂದಳು. ಮೂರು ದಿನ ಅಳುತ್ತಲೇ ಇದ್ದಳು. ಒಂದು ದಿನ ಮಧ್ಯಾಹ್ನ ಅಡುಗೆ ಮನೆಯಲ್ಲಿ ಹಾಲಿನಿಂದ ಸಿಹಿಪದಾರ್ಥವನ್ನೇನೊ ಮಾಡುತ್ತಿದ್ದಾಗ ಮಗನ ಧ್ವನಿ ಸ್ಪಷ್ಟವಾಗಿ ಕೇಳಿಸಿತು "ಅವನು ಅರೆಲಿಯಾನೊ" ಕೂಗುತ್ತಾ ಗಂಡನಿದ್ದ ಕಡೆಗೆ, ಸುದ್ದಿ ತಿಳಿಸಲು ಓಡಿದಳು. "ಇದು ಹೇಗಾಯಿತೊ ನನಗೆ

ಗೊತ್ತಿಲ್ಲ. ಆದರೆ ಅವನು ಬದುಕಿದ್ದಾನೆ. ಅವನನ್ನು ಆದಷ್ಟು ಬೇಗ ನೋಡಲಿದ್ದೇವೆ" ಬಂದೇ ಬರುತ್ತಾನೆಂದು ನಂಬಿಬಿಟ್ಟಳು. ಮನೆಯನ್ನೆಲ್ಲ ಉಜ್ಜಿ ಶುಭ್ರ ಮಾಡಿದಳು. ಪೀಠೋಪಕರಣಗಳನ್ನೆಲ್ಲ ಸರಿಮಾಡಿದಳು; ಒಂದು ವಾರದ ನಂತರ, ಇನ್ನೂ ಖಚಿತವಾಗದ ವದಂತಿಗಳು, ನಾಟಕೀಯವಾಗಿ ಸಾಬೀತಾದವು. ಕರ್ನಲ್ ಅರೆಲಿಯಾನೋಗೆ ಮರಣದಂಡನೆಯ ತೀರ್ಮಾನವಾಯಿತು. ಅದನ್ನು ಜನಕ್ಕೆ ಪಾಠ ಕಲಿಸಲೆಂದು 'ಮಕೊಂಡೊ'ದಲ್ಲಿಯೇ ಜಾರಿಗೊಳಿಸಬೇಕೆಂದೂ ನಿರ್ಧಾರವಾಯಿತು. ಒಂದು ಸೋಮವಾರ ಅರೆಲಿಯಾನೋ ಜೋಸ್‌ಗೆ ಬಟ್ಟೆ ತೊಡಿಸುತ್ತಿದ್ದಾಗ ದೂಗದಲ್ಲಿ ಉರ್ಸುಲಾ ಬರುವುದಕ್ಕೆ ಒಂದು ಸೆಕೆಂಡ್ ಮೊದಲು, ದೂರದಲ್ಲಿ ಸೈನಿಕರ ಸದ್ದು ಕಹಳೆಯ ಮೊಳಗು ಕೇಳಿಸಿಕೊಂಡಳು. ಬರುತ್ತಿದ್ದಂತೆಯೇ ಉರ್ಸುಲಾ ಜೋರಾಗಿ "ಅವನನ್ನು ಈಗ ಕರೆತರುತ್ತಿದ್ದಾರೆ!" ಎಂದಳು. ನುಗ್ಗಿ ಬರುತ್ತಿದ್ದ ಜನರ ಗುಂಪನ್ನು ಬಂದೂಕಿನ ತುದಿಗಳಿಂದ ನಿಯಂತ್ರಿಸಲು ಯತ್ನಿಸುತ್ತಿದ್ದರು. ಅಮರಾಂತ ಮತ್ತು ಉರ್ಸುಲಾ ಆ ಗುಂಪಿನಲ್ಲಿ ನುಗ್ಗಿ ದಾರಿಮಾಡಿಕೊಂಡು ಅವನನ್ನು ನೋಡಿದರು. ಭಿಕ್ಷುಕನಂತೆ ಕಾಣುತ್ತಿದ್ದ. ಅವನ ಬಟ್ಟೆಯೆಲ್ಲ ಹರಿದಿತ್ತು. ಅವನ ತಲೆಕೂದಲು, ಗಡ್ಡದಕೂದಲು ಗಂಟುಗಂಟಾಗಿತ್ತು. ಬರಿಗಾಲಲ್ಲಿದ್ದ. ಸುಡುತ್ತಿದ್ದ ಧೂಳನ್ನೂ ಲೆಕ್ಕಿಸದೆ ನಡೆಯುತ್ತಿದ್ದ ಅವನ ಕೈಗಳನ್ನು ಹಿಂದಕ್ಕೆ ಬಿಗಿದು ಕಟ್ಟಿದ್ದರು. ಅದನ್ನೂ ಆಫೀಸರ್ ಸವಾರಿ ಮಾಡಿಕೊಂಡು ಬರುತ್ತಿದ್ದ ಕುದುರೆಗೆ ಬಿಗಿದಿದ್ದಂತೆ ಅವನ ಜೊತೆಗೆ, ಚಿಂದಿ ಬಟ್ಟೆ ತೊಟ್ಟಿದ್ದ ಮತ್ತು ಸೋತಿದ್ದ ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್‌ನನ್ನೂ ತರುತ್ತಿದ್ದರು. ಅವರು ದುಃಖಿಸುತ್ತಿರಲಿಲ್ಲ. ಜೊತೆಗಿದ್ದ ಸೇನಾತಂಡಕ್ಕೆ ಏನೇನೋ ಬೈಯುತ್ತಾ ಕೂಗುತ್ತಾ ಇದ್ದ. ಜನರ ಗುಂಪನ್ನು ನೋಡಿಯೇ ಹೆಚ್ಚು ಅಸ್ವಸ್ಥರಾಗಿದ್ದರು.

"ಮಗನೆ" ಎಂದು ಉರ್ಸುಲಾ ಉದ್ಗರಿಸಿದಳು, ಗುಂಪಿನ ಗದ್ದಲದ ನಡುವೆಯೇ, ಅವನ ಬಳಿಗೆ ಹೋಗಲು ಯತ್ನಿಸಿದ ಅವಳನ್ನು ತಡೆದ ಸೈನಿಕರ ಕೆನ್ನೆಗೆ ಏಟು ಬಿಗಿದಳು. ಆಫೀಸರನನ್ನು ಹೊತ್ತಿದ್ದ ಕುದುರೆ ಹಿಂಗಾಲಿನ ಮೇಲೆ ನಿಂತಿತ್ತು. ಹೆದರುತ್ತಲೇ ಅರೆಲಿಯಾನೊ ಅಮ್ಮನ ಕೈಗಳನ್ನು ತಡೆದನು. ತೀಕ್ಷ್ಣವಾಗಿ ಅವಳ ಕಣ್ಣಲ್ಲಿ ನೋಡಿದ.

"ಅಮ್ಮ ಮನೆಗೆ ಹೋಗು. – ಅಧಿಕಾರಿಗಳಿಂದ ಪರವಾನಗಿ ಪಡೆದು ಜೈಲಿನಲ್ಲಿ ಬಂದು ಕಾಣು" ಎಂದ.

ಅಮರಾಂತಳನ್ನು ನೋಡಿದ. ಉರ್ಸುಲಾಗಿಂತ ಒಂದೆರಡು ಹೆಜ್ಜೆ ಹಿಂದೆ ನಿಂತಿದ್ದಳು. ಅವನು ಮುಗುಳ್ನಕ್ಕು "ನಿನ್ನ ಕೈಗೆ ಏನಾಗಿದೆ?" ಎಂದು ಕೇಳಿದ. ಅಮರಾಂತ ಕೈ ಎತ್ತಿ ತೋರಿ ಸುಟ್ಟಗಾಯ ಎಂದಳು. ಕುದುರೆಗಳು ಏರಿ ಬಂದು ಅವಳನ್ನು ತುಳಿದಾವು ಎಂದು ಉರ್ಸುಲಾಳನ್ನು ದೂರಕ್ಕೆ ಕರೆದೊಯ್ದಳು. ಸೈನ್ಯ ಮುಂದೆ ಸಾಗಿತು. ವಿಶೇಷ ರಕ್ಷಣಾಪಡೆ ಸೆರೆಯಾಳುಗಳನ್ನು ಸುತ್ತುಗಟ್ಟಿ ನಡೆಸುತ್ತಾ ಜೈಲಿನತ್ತ ಕರೆದೊಯ್ದರು.

ಸಂಜೆಗೆ ಉರ್ಸುಲಾ ಕರ್ನಲ್ ಅರೆಲಿಯಾನೊ ಬ್ಯುಂಡಿಯಾನನ್ನು ಜೈಲಿನಲ್ಲಿ ಭೇಟಿಯಾದಳು. ಅಪೊಲಿನಾರ್ ಮಾಸ್ಕೋಟ್ ಮೂಲಕ ಅಪ್ಪಣೆ ಪಡೆಯಲು

ಪ್ರಯತ್ನಿಸಿದಳು. ಆದರೆ ಮಿಲಿಟರಿ ಎದುರು ಅವನು ಅಷ್ಟು ಹೊತ್ತಿಗೆ ಅಧಿಕಾರವನ್ನೆಲ್ಲ ಕಳೆದುಕೊಂಡಿದ್ದ. ಫಾದರ್ ನಿಕೊಲಿನಾರ್ ಜ್ವರದಿಂದ ಹಾಸಿಗೆ ಹಿಡಿದಿದ್ದ. ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್ ತಂದೆತಾಯಿಯರು ಮಗನನ್ನು ನೋಡಲು ಪ್ರಯತ್ನಿಸಿದಾಗ, ಅವರನ್ನೂ ನೋಡಲು ಬಿಡದೆ ಬಂದೂಕಿನಿಂದ ಹೆದರಿಸಿ ಅಟ್ಟಿದ್ದರು. ಯಾರ ಮಧ್ಯಸ್ಥಿಕೆಯಿಂದಲೂ ಸಾಧ್ಯವಿಲ್ಲವೆಂದು ಖಚಿತವಾದ ಮೇಲೆ, ಬೆಳಗಾಗುತ್ತಿದ್ದಂತೆ ಮರಣದಂಡನೆಗೆ ಗುರಿಯಾಗಲಿರುವ ಮಗನಿಗೆ ಬೇಕಾದ್ದೆಲ್ಲವನ್ನೂ ತೆಗೆದುಕೊಂಡು, ತಾನೊಬ್ಬಳೇ ಜೈಲಿಗೆ ಹೋದಳು.

"ನಾನು ಕರ್ನಲ್ ಅರೆಲಿಯಾನೊ ಬ್ಯುಂಡಿಯಾಳ ತಾಯಿ" ಎಂದು ಪರಿಚಯಿಸಿಕೊಂಡಳು.

ಕಾವಲಿದ್ದವರು ಅವಳನ್ನು ತಡೆದರು. ಏನೇ ಮಾಡಿದರೂ 'ನಾನು ಹೋಗಿಯೇ ಹೋಗುತ್ತೇನೆ – ಗುಂಡಿಕ್ಕಬೇಕೆಂಬ ಆದೇಶವಿದ್ದರೆ ಈಗಲೇ ಗುಂಡುಹಾರಿಸಿ' ಎಂದು ಒಬ್ಬನನ್ನು ಪಕ್ಕಕ್ಕೆ ತಳ್ಳಿ ಮೊದಲು ಶಾಲಾ ಕೊಠಡಿಯಾಗಿದ್ದಲ್ಲಿಗೆ ಹೋದಳು. ಅರೆಬೆತ್ತಲಾಗಿದ್ದ ಸೈನಿಕರು ತಮ್ಮ ಶಸ್ತ್ರಗಳಿಗೆ ಎಣ್ಣೆ ಸವರುತ್ತಿದ್ದರು. ಸಮವಸ್ತ್ರವುಟ್ಟು, ದಪ್ಪ ಕನ್ನಡಕ ಹಾಕಿದ್ದ ಕೆಂಚು ಮುಖದ ಅಧಿಕಾರಿಯೊಬ್ಬ, ಅವರನ್ನು ಹಿಂದಕ್ಕೆ ಸರಿಯಲು ಸೂಚಿಸಿದ.

"ನಾನು ಕರ್ನಲ್ ಅರೆಲಿಯಾನೊ ಬ್ಯುಂಡಿಯಾನ ತಾಯಿ" – ಎಂದು ಮತ್ತೊಮ್ಮೆ ಪರಿಚಯ ಹೇಳಿದಳು.

"ಓ ಹಾಗೋ, ನೀನು ಮಿಸ್ಟರ್ ಅರೆಲಿಯಾನೊ ಬ್ಯುಂಡಿಯಾ ತಾಯಿ" ಎಂದು ಸ್ನೇಹದ ನಗೆಯೊಂದಿಗೆ ಹೇಳಿದ.

ಉಚ್ಚಾರಣೆಯ ರೀತಿಯಿಂದ. ಮಾತಿನ ಶೈಲಿಯಿಂದ ಆತ ಪ್ರಸ್ಥಭೂಮಿಯ (ಸ್ಕಾಟ್‌ಲ್ಯಾಂಡಿನ ಉತ್ತರ ಭಾಗ) ಕಡೆಯವನಾಗಿರಬೇಕೆಂದು ಗುರುತಿಸಿದಳು.

'ನೀವು ಹೇಳಿದ ಹಾಗೆ ಮಿಸ್ಟರ್' ಅವನನ್ನು ನೋಡಲು ಸಾಧ್ಯವಾಗುವುದಾದರೆ ಅಷ್ಟೇ ಸಾಕು ಎಂದು ಅವನು ಹೇಳಿದ್ದನ್ನು ಒಪ್ಪಿಕೊಂಡಳು.

ಮೇಲಧಿಕಾರಿಗಳಿಂದ "ಮರಣ ಶಿಕ್ಷೆಗೆ" ಗುರಿಯಾದವರನ್ನು ಭೇಟಿಯಾಗಲು ಅನುಮತಿ ಇಲ್ಲ. ಆದರೂ ಆಫೀಸರು ತನ್ನ ಜವಾಬ್ದಾರಿಯ ಮೇಲೆ ಅವಳಿಗೆ ಕೇವಲ ಹದಿನೈದು ನಿಮಿಷ ಮಾತ್ರ ಅವಕಾಶ ಕೊಟ್ಟು ಹೋಗಿ ನೋಡಲು ಹೇಳಿದ. ತಾನು ತಂದಿದ್ದ ಗಂಟನ್ನು ತೋರಿದಳು. ಅದರಲ್ಲಿ ಶುಭ್ರವಾದ ಬಟ್ಟೆ, ಮದುವೆಯಲ್ಲಿ ಹಾಕಿಕೊಂಡಿದ್ದ ಬೂಟು, ಮಗ ಬರುವ ಕಲ್ಪನೆಯಲ್ಲಿ ಸಿದ್ಧಮಾಡಿದ ಹಾಲಿನ ಸಿಹಿತಿಂಡಿ, ಮಾತ್ರವೇ ಇತ್ತು. ಕರ್ನಲ್ ಅರೆಲಿಯಾನೊ, ಸೆರೆಮನೆಯಾಗಿ ಪರಿವರ್ತಿಸಿದ್ದ ಕೊಠಡಿಯಲ್ಲಿ ಮಂಚದ ಮೇಲೆ, ಕಂಕುಳಲ್ಲಿ ಕುರಗಳೆದಿದ್ದ ಕಾರಣ ಎರಡೂ ಕೈಗಳನ್ನು ಆಕಡೆ ಈಕಡೆ ಹರಡಿಕೊಂಡು ಬಿದ್ದಿದ್ದ. ಮುಖಕ್ಷೌರ ಮಾಡಿಕೊಳ್ಳಲು ಅನುಮತಿ ನೀಡಿದ್ದರು. ತುದಿಗಳಲ್ಲಿ

ತಿರುಚಿದ್ದ ಮೀಸೆ ಕೆನ್ನೆಯ ಮೂಳೆಗಳನ್ನು ಮತ್ತಷ್ಟು ಢಾಳಾಗಿ ಕಾಣಿಸುತ್ತಿದ್ದವು. ಉರ್ಸುಲಾಗೆ, ಅವನು ಹೋಗುವಾಗ ಇದ್ದುದಕ್ಕಿಂತ ಪೇಲವವಾಗಿ, ಸ್ವಲ್ಪ ಎತ್ತರವಾಗಿ ಮತ್ತು ಎಂದಿಗಿಂತಲೂ ಹೆಚ್ಚು ಏಕಾಂತದಲ್ಲಿ ಇದ್ದಂತೆನಿಸಿತು. ಮನೆಗೆ ಸಂಬಂಧಪಟ್ಟ ಎಲ್ಲ ವಿಷಯಗಳೂ ಅವನಿಗೆ ತಿಳಿದಿದ್ದವು. ಪೀತ್ರೋ ಕ್ರೆಸ್ಪಿಯ ಆತ್ಮಹತ್ಯೆ; ಆರ್ಕಾಡಿಯೋನ ದುರ್ವ್ಯವಹಾರಗಳು ಮರಣದಂಡನೆ, ಚೆಸ್ಟ್‌ನಟ್ ಮರದ ಕೆಳಗಿದ್ದ ಜೋಸ್ ಆರ್ಕಾಡಿಯೋ ಬ್ಯುಂಡಿಯಾನ ಎದೆಗಾರಿಕೆ ಇತ್ಯಾದಿ. ಅಮರಾಂತಾ ಕನ್ಯೆಯಾಗಿದ್ದರೂ ಒಪ್ಪಿಕೊಂಡ ವೈಧವ್ಯವನ್ನು ಅರೆಲಿಯಾನೊ ಜೋಸ್‌ನನ್ನು ಬೆಳೆಸುವುದಕ್ಕಾಗಿಯೇ ಮುಡಿಪಿಟ್ಟು ಅವನಿಗೆ ಓದು ಬರಹವನ್ನು ಕಲಿಸಿದಳು. ಓದು ಬರಹ ಕಲಿಯುತ್ತಿರುವಾಗಲೇ ಮಾತಾಡುವುದನ್ನೂ ಕಲಿತುಕೊಂಡಿದ್ದ. ಕೊಠಡಿಯನ್ನು ಪ್ರವೇಶಿಸಿದ ಕ್ಷಣದಿಂದಲೇ ಉರ್ಸುಲಾ ಮಗನ ಅಧಿಕಾರದ ದರ್ಪ, ಪ್ರಬುದ್ಧತೆಗಳನ್ನು ಗ್ರಹಿಸಿದಳು. ಅವನಿಗೆ ಇಷ್ಟೆಲ್ಲ ಗೊತ್ತಿರುವುದರ ಬಗ್ಗೆ ಅಚ್ಚರಿ ಎನಿಸಿತು. "ನಿನಗೆ ಗೊತ್ತು ನಾನು ಮೊದಲಿನಿಂದಲೂ ಒಬ್ಬ ಮಂತ್ರವಾದಿ" ತಮಾಷೆಯಾಗಿ ಹೇಳಿದ. ನಂತರ ಗಂಭೀರವಾಗಿ "ಈ ದಿನ ಬೆಳಿಗ್ಗೆ ನನ್ನನ್ನು ಇಲ್ಲಿಗೆ ತಂದಾಗ, ಇದೆಲ್ಲವನ್ನೂ ಮೊದಲೇ ಅನುಭವಿಸಿದ್ದಾಗಿದೆ ಎನ್ನುವ ಭಾವನೆ ಬಂತು" ಎಂದ! ಹಾಗೆ ನೋಡಿದರೆ ಹೊರಗೆ ಗುಂಪು ಗದ್ದಲ ಮಾಡುತ್ತಿದ್ದಾಗ ಇವನು ಆಲೋಚನೆಗಳಲ್ಲಿ ಮುಳುಗಿದ್ದ. ಥಟ್ಟನೆ ಅವನಿಗೆ ಊರು ಬದಲಾದದ್ದು ಗಮನಕ್ಕೆ ಬಂದು ಬೆರಗಾದ. ಬಾದಾಮಿ ಮರಗಳ ಎಲೆಗಳು ಉದುರಿದ್ದವು. ಮನೆಗಳಿಗೆ ನೀಲಿ ಬಣ್ಣ ಹಾಕಲಾಗಿತ್ತು; ಕೆಂಪು ಬಣ್ಣವೂ ಒಂದು ಕಡೆಗೆ ಯಾವ ಬಣ್ಣವೆಂದು ನಿರ್ಧರಿಸಲಾಗದಂತಾಗಿತ್ತು.

"ಏನನ್ನು ನಿರೀಕ್ಷಿಸಿದ್ದೆ? ನಿಟ್ಟುಸಿರಿಟ್ಟಳು" – ಸಮಯ ಸರಿದುಹೋಗುತ್ತೆ.

"ಅದು ಹಾಗೇನೆ", "ಆದರೆ ಅಷ್ಟೊಂದಲ್ಲ" ಎಂದ.

ಹೀಗೆ ಬಹಳ ಸಮಯದಿಂದ ಎದುರುನೋಡುತ್ತಿದ್ದ – ಭೇಟಿ, ಸಿದ್ಧಮಾಡಿಕೊಂಡ ಪ್ರಶ್ನೆಗಳು, ನಿರೀಕ್ಷಿಸಿದ ಉತ್ತರಗಳು ಮತ್ತೆ ಮಾಮೂಲಿಯಾದ ಮಾತುಕತೆ ಮುಗಿಯಿತು. ಕಾವಲುಗಾರ ಭೇಟಿ ಸಮಯ ಮುಗಿಯಿತೆಂದು ಹೇಳಿದಾಗ, ಅರೆಲಿಯಾನೊ ಮಂಚದ ಕೆಳಗಿನಿಂದ ಬೆವರಂಟಿದ್ದ ಕಾಗದಗಳನ್ನು ಹೊರತೆಗೆದ. ಆ ಕಾಗದಗಳು ರೆಮೆಡಿಯೋಸ್‌ಳ ಸ್ಫೂರ್ತಿಯಿಂದ ಬರೆದವುಗಳು. ಹೋಗುವಾಗ ಅವುಗಳನ್ನು ತನ್ನೊಟ್ಟಿಗೆ ತೆಗೆದುಕೊಂಡುಹೋಗಿದ್ದ. ಅವುಗಳ ಜೊತೆಗೆ, ಯುದ್ಧಭೂಮಿಯಲ್ಲಿ ಅವಕಾಶ ಸಿಕ್ಕಾಗಲೆಲ್ಲ ಬರೆದ ಕವಿತೆಗಳೂ ಇದ್ದವು. – "ಇವುಗಳನ್ನು ಯಾರಿಗೂ ಓದಲು ಕೊಡುವುದಿಲ್ಲ ಎಂದು ಮಾತುಕೊಡು. ಇವುಗಳಿಂದಲೇ ಇವತ್ತು ರಾತ್ರಿ ಒಲೆ ಹಚ್ಚು" ಎಂದು ಹೇಳಿದ. ಉರ್ಸುಲಾ ಮಾತುಕೊಟ್ಟಳು. ಬೀಳ್ಕೊಡುವ ಮೊದಲು ಮುತ್ತು ಕೊಡಲು ಎದ್ದು ನಿಂತಳು.

"ನಿನಗಾಗಿ ಒಂದು ರಿವಾಲ್ವರ್ ತಂದಿದ್ದೇನೆ" ಎಂದಳು. ಅರೆಲಿಯಾನೊ ಕಾವಲುಗಾರ ನೋಡುತ್ತಿಲ್ಲವೆಂಬುದನ್ನು ಗಮನಿಸಿ "ಇದರಿಂದ ನನಗೇನೂ ಪ್ರಯೋಜನವಾಗುವುದಿಲ್ಲ" ಎಂದು ತಗ್ಗಿದ ದನಿಯಲ್ಲಿ ಹೇಳಿದ. "ಆದರೂ ಕೊಡು, ನೀನು ಹೊರಗೆ ಹೋಗುವಾಗ

ನಿನ್ನನ್ನು ಶೋಧಿಸಬಹುದು" ಎಂದ. ಉರ್ಸುಲಾ ಒಳಗೆ ಬಚ್ಚಿಟ್ಟುಕೊಂಡಿದ್ದ ರಿವಾಲ್ವರ್ ಅನ್ನು ಹೊರತೆಗೆದು ಕೊಟ್ಟಳು. ಅವನು ಅದನ್ನು ಮಂಚದ ಕೆಳಗೆ ಎಸೆದ. ಪ್ರಶಾಂತವಾಗಿ, "ಗುಡ್ ಬೈ ಹೇಳಬೇಡ" ಯಾರ ಮುಂದೆಯೂ ತಲೆಬಾಗಬೇಡ. ಬಹಳ ಹಿಂದೆಯೇ ನನ್ನನ್ನು ಗುಂಡಿಕ್ಕಿಕೊಂಡಿದ್ದಾರೆ ಎಂದು ಊಹಿಸಿಕೊ" ಎಂದ. ಅಳು ಬರುತ್ತಿದ್ದರೂ ಉರ್ಸುಲಾ ತುಟಿಕಚ್ಚಿ ಹಿಡಿದುಕೊಂಡಳು.

"ಆ ಗಾಯಗಳಿಗೆ ಸ್ವಲ್ಪ ಕಾವು ಕೊಡು" ಹೇಳಿದಳು. ಹೊರಟವಳು ಮಧ್ಯದಲ್ಲೊಮ್ಮೆ ತಿರುಗಿ ನೋಡಿದಳು. ಕರ್ನಲ್ ಅರೆಲಿಯಾನೊ ಬ್ಯುಂಡಿಯಾ, ಬಾಗಿಲು ಮುಚ್ಚಿಕೊಳ್ಳುವವರೆಗೆ ಆಲೋಚಿಸುತ್ತಾ ನಿಂತಿದ್ದ. ಮತ್ತೆ ಅವನು ಮೊದಲಿನಂತೆ ಕೈಗಳನ್ನು ಹರಡಿ ಬಿದ್ದುಕೊಂಡ. ಪ್ರಾಯಕ್ಕೆ ಹೆಜ್ಜೆಯಿಡುತ್ತಿದ್ದ ಸಮಯದಿಂದಲೇ ತನಗೆ ಮುಂದೇನಾಗಬಹುದೆಂಬುದನ್ನು ಗಮನಿಸಿದ್ದ. ಅನುಮಾನಕ್ಕೆಡೆಯಿಲ್ಲದ, ಖಚಿತವಾದ, ಬದಲಾಯಿಸಲಾಗದ, ರೀತಿಯಲ್ಲಿ ಸಾವಿನ ಮುನ್ಸೂಚನೆ ದೊರೆಯುತ್ತದೆಂದು ಯೋಚಿಸಿದ್ದ. ಆದರೆ ಈಗ ಸಾವಿಗೆ ಕೇವಲ ಕೆಲವೇ ಗಂಟೆಗಳಿದ್ದರೂ ಯಾವುದೇ ಬಗೆಯ ಸೂಚನೆ ಕಾಣಿಸುತ್ತಿಲ್ಲ ಎಂದುಕೊಂಡ. ಒಂದು ಸಂದರ್ಭದಲ್ಲಿ ಟ್ಯುಕುರಿಂಕಾ ಕ್ಯಾಂಪ್‌ನಲ್ಲಿದ್ದಾಗ ಒಬ್ಬ ಸುಂದರವಾಗಿದ್ದ ಹೆಂಗಸು, ಕಾವಲುಗಾರರಿಂದ ನನ್ನನ್ನು ಕಾಣಲು ಪರವಾನಗಿ ಕೇಳಿದ್ದಳು. ಅವರು ಅವಳನ್ನು ಹೋಗಲು ಬಿಟ್ಟರು. ಅವರಿಗೆ ಗೊತ್ತಿತ್ತು, ಕೆಲವು ತಾಯಂದಿರು ಅತಿರೇಕದ ನಂಬಿಕೆಯಿಂದ ವಂಶದ ಉತ್ತಮ ಥಳಿಗಳನ್ನೂ ಪಡೆಯಲು ತಮ್ಮ ಹೆಣ್ಣುಮಕ್ಕಳನ್ನು ಇಂಥ ಪ್ರಖ್ಯಾತ ಯೋಧರ ಬಳಿಗೆ ಕಳಿಸುತ್ತಿದ್ದುದು ಸಾಮಾನ್ಯ ಸಂಗತಿಯಾಗಿತ್ತು. ಆ ರಾತ್ರಿ, ಆ ಹೆಂಗಸು ಕೋಣೆಯೊಳಗೆ ಬರುವುದಕ್ಕೆ ಮುಂಚೆ ಅರೆಲಿಯಾನೊ ಬ್ಯುಂಡಿಯಾ, ಮಳೆಯಲ್ಲಿ ಕೊಚ್ಚಿಹೋದ ಮನುಷ್ಯನೊಬ್ಬನ ಮೇಲೆ ಕವಿತೆ ಬರೆಯುತ್ತಿದ್ದ. ಆಕೆಗೆ ಬೆನ್ನುಕೊಟ್ಟು ಕಾಗದದ ಹಾಳೆಗಳನ್ನು ಡ್ರಾನಲ್ಲಿ ಇಡಲು ಹೋದ. ತಕ್ಷಣ ಅವನಿಗೆ ಏನೋ ಭಾಸವಾಯಿತು. ತಲೆಯನ್ನು ತಿರುಗಿಸದೆ ತೆರೆದ ಡ್ರಾಯರ್‌ನಲ್ಲಿದ್ದ ಪಿಸ್ತೂಲನ್ನು ಕೈಗೆತ್ತಿಕೊಂಡ.

"ದಯವಿಟ್ಟು ಶೂಟ್ ಮಾಡಬೇಡ" ಎಂದ.

ಕೈಲಿ ಪಿಸ್ತೂಲು ಹಿಡಿದುಕೊಂಡೇ ಅವಳತ್ತ ತಿರುಗಿದಾಗ ಆಗಲೇ ಅವಳು ಪಿಸ್ತೂಲನ್ನು ಕೆಳಗಿಳಿಸಿದ್ದಳು. ಏನು ಮಾಡಬೇಕೆಂದು ತೋಚಲಿಲ್ಲ. ಈ ರೀತಿಯಲ್ಲಿ ಅವನು ಹನ್ನೊಂದರಲ್ಲಿ ನಾಲ್ಕು ಸಲ ತಪ್ಪಿಸಿಕೊಂಡಿದ್ದ. ಇದಕ್ಕೆ ವ್ಯತಿರೇಕವಾಗಿ, ಎಂದೂ ಸಿಕ್ಕಿಹಾಕಿಕೊಳ್ಳದ ಯಾವನೊ ಒಬ್ಬ ಕ್ರಾಂತಿಕಾರಿಗಳ ಮಸಾರೆ ಶಿಬಿರದಲ್ಲಿ ಪ್ರವೇಶಿಸಿ ತನ್ನ ಆತ್ಮೀಯ ಗೆಳೆಯನಾಗಿದ್ದ ಕರ್ನಲ್ ವಿಸ್ಬಾಲ್‌ನನ್ನು, ತನ್ನ ಬದಲಾಗಿ ತನ್ನ ಹಾಸಿಗೆಯಲ್ಲಿ ಮಲಗಿದ್ದವನನ್ನು ಕೊಂದು ಹಾಕಿದರು. ಬೆವರ ಮೂಲಕ ಜ್ವರತಾಪ ಕಡಿಮೆಯಾಗಲೆಂದು ಅವನು ಕೊಟ್ಟ ಹಾಸಿಗೆಯಲ್ಲಿ ಅವನು ಮಲಗಿದ್ದ. ಅವನಿಂದ ಕೆಲವೇ ಗಜಗಳ ಅಂತರದಲ್ಲಿ ಮಲಗಿದ್ದ ಅರೆಲಿಯಾನೋಗೆ ಏನೂ ತಿಳಿಯಲಿಲ್ಲ. ಮುನ್ಸೂಚನೆಗಳು ವ್ಯವಸ್ಥಿತಗೊಳಿಸಲು ಮಾಡಿದ ಪ್ರಯತ್ನಕ್ಕೆ ಪ್ರಯೋಜನವಾಗಲಿಲ್ಲ. ಅವು ಇದ್ದಕ್ಕಿದ್ದಂತೆ ಅಲೌಕಿಕ ತರಂಗಗಳಂತೆ, ಆ ಕ್ಷಣದಲ್ಲಿನ ನಂಬಿಕೆಗಳಂತೆ ಬಂದೆರಗುತ್ತಿದ್ದವು. ಆದರೆ ಅವುಗಳು ಹೇಗೆಂಬುದನ್ನು

ಗ್ರಹಿಸಲಾಗುತ್ತಿರಲಿಲ್ಲ. ಕೆಲವು ಸಂದರ್ಭಗಳಲ್ಲಿ ಅವು ಸಹಜವಾಗಿ ಸಂಭವಿಸುತ್ತಿದ್ದವು. ನಂತರವೇ ಅವುಗಳನ್ನು ಮುನ್ಸೂಚನೆಗಳೆಂಬುದನ್ನು ಗ್ರಹಿಸಲಾಗುತ್ತಿತ್ತು. ಹಲವು ಬಾರಿ ಅವು ಕೇವಲ ಮೂಢನಂಬಿಕೆಗಳೆಂಬ ಭಾವನೆ ಬರುತ್ತಿತ್ತು. ಆದರೆ ಅವನಿಗೆ ಮರಣಶಿಕ್ಷೆ ನಿರ್ಧಾರವಾಗಿ, ಕಡೆಯ ಆಸೆ ಏನೆಂದು ಕೇಳಿದಾಗ, ತನಗೆ ದೊರೆತ ಮುನ್ಸೂಚನೆಯನ್ನು ಗುರುತಿಸುವುದರಲ್ಲಿ ಯಾವುದೇ ಕಷ್ಟವಿರಲಿಲ್ಲವಾಗಿ ಉತ್ತರಿಸುವುದು ಸುಲಭವೆನಿಸಿತು.

"ಮಕೊಂಡೋದಲ್ಲಿ ಈ ಶಿಕ್ಷೆಯನ್ನು ಜಾರಿಗೊಳಿಸಬೇಕೆಂದು ಕೇಳಿಕೊಳ್ಳುತ್ತೇನೆ" ಎಂದ.

ಸೈನಿಕ ನ್ಯಾಯಾಲಯದ ಅಧ್ಯಕ್ಷನಿಗೆ ಇದರಿಂದ ಸಿಟ್ಟು ಬಂತು.

"ಬುದ್ಧಿ ತೋರಿಸಬೇಡ ಬ್ಯುಂಡಿಯಾ, ನನಗೆ ಗೊತ್ತು, ಇದರಿಂದ ನಿನಗೆ ಸ್ವಲ್ಪ ಕಾಲಾವಕಾಶ ಸಿಗುತ್ತೆ" ಎಂದ.

"ಆಸೆ ನೆರವೇರಲಿಲ್ಲವಾದರೆ, ನಿಮ್ಮ ತಲೆನೋವು", ಆದರೆ "ಅದೇ ನನ್ನ ಆಸೆ" ಎಂದ ಕರ್ನಲ್ ಅರೆಲಿಯಾನೊ ಅಂದಿನಿಂದ ಮುನ್ಸೂಚನೆಗಳು ಅವನ ಕೈಬಿಟ್ಟಿದ್ದವು. ಉರ್ಸುಲಾ ಅವನನ್ನು ಜೈಲಿನಲ್ಲಿ ಭೇಟಿಯಾಗಲು ಬಂದ ದಿನ, ಬಹಳ ಯೋಚನೆ ಮಾಡಿದ ಮೇಲೆ ಅವನಿಗೆ ಅರ್ಥವಾಯಿತು. ಅಷ್ಟು ಹೊತ್ತಿಗೆ ಅವನಿಗೆ ಮರಣದಂಡನೆ ಘೋಷಿತವಾಗಿರಲಿಲ್ಲ. ಕಾರಣ ಅದು ಆಕಸ್ಮಿಕದಿಂದಲ್ಲದೆ ಶಿಕ್ಷೆಯನ್ನು ಜಾರಿಗೊಳಿಸುವವರ ಇಷ್ಟವನ್ನು ಅವಲಂಬಿಸಿತ್ತು. ಅವನು ಇಡೀ ರಾತ್ರಿ ಗಾಯಗಳ ನೋವಿನಿಂದ ನಿದ್ದೆಯನ್ನು ಮಾಡಲೇ ಇಲ್ಲ. ಬೆಳಗಾಗುವುದಕ್ಕೆ ಸ್ವಲ್ಪ ಮೊದಲು ಅವನಿಗೆ ಹೆಜ್ಜೆ ಸಪ್ಪಳ ಕೇಳಿಸಿತು. "ಅವರು ಬರುತ್ತಿದ್ದಾರೆ" ಎಂದು ತನಗೆ ತಾನೇ ಹೇಳಿಕೊಂಡ. ಚೆಸ್ಟ್‌ನಟ್ ಮರದ ಕೆಳಗೆ ಇಷ್ಟು ಹೊತ್ತಲ್ಲಿ ಜೋಸ್ ಆರ್ಕಾಡಿಯೊ ಬ್ಯುಂಡಿಯಾ ಕುಳಿತು ತನ್ನ ಬಗ್ಗೆ ಯೋಚಿಸುತ್ತಿರಬೇಕೆಂದುಕೊಂಡ. ಅವನನ್ನು ಭಯವಾಗಲೀ ಹಳೆಯ ನೆನಪುಗಳಾಗಲಿ ಕಾಡಲಿಲ್ಲವಾದರೂ ತಾನಂದುಕೊಂಡಿದ್ದ ಕೆಲಸಗಳಾವುವನ್ನೂ ಪೂರೈಸಲು ಆಗಲಿಲ್ಲವೆಂದು ರೋಷ, ಸಂಕಟಗಳು ಉಂಟಾದವು. ಬಾಗಿಲು ತೆರೆಯಿತು. ಕಾವಲುಗಾರ ಕಾಫಿ ಬಟ್ಟಲನ್ನು ಹಿಡಿದು ತಂದ. ಮರುದಿವಸವೂ ಇದೇ ಸಮಯದಲ್ಲಿ ಇಂಥ ಕೆಲಸಗಳನ್ನೇ ಮಾಡುತ್ತಿರುತ್ತಾನೆ. ಕಂಕುಳಲ್ಲಿನ ನೋವಿನಿಂದ ಆಕ್ರೋಶಿತನಾಗಿರುತ್ತಾನೆ – ಎಂದುಕೊಂಡಂತೆಯೇ ಆಯಿತು. "ಗುರುವಾರ ಹಾಲಿನ ಸಿಹಿ ತಿಂಡಿಯನ್ನು ಕಾವಲುಗಾರರೊಂದಿಗೆ ಹಂಚಿಕೊಂಡು ಸ್ವಲ್ಪ ಬಿಗುವಾಗಿದ್ದ ಶುಭ್ರವಾದ ಬಟ್ಟೆಗಳನ್ನು ತೊಟ್ಟು, ಲೆದರ್ ಬೂಟುಗಳನ್ನು ಹಾಕಿಕೊಂಡ, ಶುಕ್ರವಾರವಾದರೂ ಅವನನ್ನು ಗುಂಡಿಕ್ಕಿ ಕೊಲ್ಲಲಿಲ್ಲ".

ವಾಸ್ತವವಾಗಿ ಅವರು ತೀರ್ಪನ್ನು ಜಾರಿಗೊಳಿಸಲಿಲ್ಲ. ಊರಿನಲ್ಲಿ ಉದ್ರಿಕ್ತ, ದಂಗೆಯ ವಾತಾವರಣ, ಸೇನಾಧಿಕಾರಿಗಳು ಮತ್ತೊಮ್ಮೆ ಯೋಚಿಸುವಂತೆ ಮಾಡಿತು. ಅರೆಲಿಯಾನೋ ಬ್ಯುಂಡಿಯಾನನ್ನು ಶಿಕ್ಷೆಗೆ ಗುರಿಪಡಿಸಿದರೆ ಮಕೊಂಡೊ ಅಷ್ಟೆ ಅಲ್ಲ ಇಡೀ ಜೌಗುಪ್ರದೇಶದಲ್ಲಿ ಗಂಭೀರವಾದ ರಾಜಕೀಯ ಸಮಸ್ಯೆಗಳಿಗೆ ದಾರಿ ಮಾಡಬಹುದೆಂದು

ಭಾವಿಸಿದ ಅವರು ಆ ಪ್ರದೇಶದ ರಾಜಧಾನಿಯಲ್ಲಿ ಇದ್ದ ಅಧಿಕಾರಿಗಳೊಂದಿಗೆ ಚರ್ಚಿಸಿದರು. ಉತ್ತರಕ್ಕಾಗಿ ಕಾಯುತ್ತಿದ್ದಾಗ, ಶನಿವಾರ ರಾತ್ರಿ, ಕ್ಯಾಪ್ಟನ್ ರೋಖ್ ಕಾರ್ನಿಸೆರೊ ಇನ್ನೂ ಕೆಲವು ಅಧಿಕಾರಿಗಳೊಂದಿಗೆ ಕತಾರಿನೊ ಇದ್ದ ಪ್ರದೇಶಕ್ಕೆ ಹೋದರು. ಎಷ್ಟೇ ಬೆದರಿಕೆಯಿದ್ದರೂ ಒಬ್ಬಳೇ ಒಬ್ಬ ಹೆಂಗಸು ಅವನನ್ನು ತನ್ನ ಕೋಣೆಯೊಳಗೆ ಕರೆದೊಯ್ಯುವ ಧೈರ್ಯಮಾಡಿದಳು. "ಸಾಯಲು ಹೊರಟಿರುವ ಗಂಡಸಿನೊಂದಿಗೆ ಮಲಗಲು ಅವರು ಇಷ್ಟ ಪಡುವುದಿಲ್ಲ" ಎಂದು ಹೇಳಿದಳು. "ಹೇಗೆ ಆಗುತ್ತೇಂತ ಹೇಳೋಕೆ ಆಗೋದಿಲ್ಲ. ಜನ ಎಲ್ಲಾ ಮಾತಾಡಿಕೊಳ್ತಾ ಇದ್ದಾರೆ. ಕರ್ನಲ್ ಬ್ಯುಂಡಿಯಾ ಮತ್ತು ಆತನ ತಂಡದವರನ್ನು ಒಬ್ಬೊಬ್ಬರಾಗಿ ಕೊಲ್ಲುವ ಅಧಿಕಾರಿಯನ್ನು ಸಾಯಿಸದೆ ಬಿಡುವುದಿಲ್ಲ ಎಂದುಕೊಳ್ಳುತ್ತಿದ್ದಾರೆ. ಅವರು ಪ್ರಪಂಚದ ಯಾವುದೇ ಮೂಲೆಯಲ್ಲಿ ಅಡಗಿರಲಿ ಇಂದೋ ನಾಳೆಯೋ ಕೊಲ್ಲದೆ ಅವರನ್ನು ಬಿಡುವುದಿಲ್ಲವಂತೆ" ಎಂದು ಹೇಳಿದಳು. ಕ್ಯಾಪ್ಟನ್ ರೋಖ್ ಕಾರ್ನಿಸೆರೊ ಉಳಿದ ಅಧಿಕಾರಿಗಳಿಗೆ ಹೇಳಿದ. ಅವರು ಅವರ ಮೇಲಧಿಕಾರಿಗಳಿಗೆ ತಿಳಿಸಿದರು. ಭಾನುವಾರ, ಯಾರೂ ಬಹಿರಂಗವಾಗಿ ವಿಷಯ ತಿಳಿಸದಿದ್ದರೂ ಮಿಲಿಟರಿ ತನ್ನ ಕಡೆಯಿಂದ ಯಾವುದೇ ರೀತಿಯ ಕಾರ್ಯಾಚರಣೆಯಿಂದ ಊರಿನ ಗಂಭೀರ ಮೌನವನ್ನು, ಆ ಪರಿಸ್ಥಿತಿಯಲ್ಲಿ ಕದಡಲು ಮುಂದಾಗಿರಲಿಲ್ಲ. ಆದರೆ ಊರಿನ ಜನಕ್ಕೆ, ದಂಡ ವಿಧಿಸುವ ಜವಾಬ್ದಾರಿಯಿಂದ ತಪ್ಪಿಸಿಕೊಳ್ಳಲು ಯಾವ ಯಾವುದೋ ನೆಪಗಳಿಗೆ ಪ್ರಯತ್ನಿಸುತ್ತಿದ್ದಾರೆಂಬುದು ತಿಳಿದಿತ್ತು. ಸೋಮವಾರದ ಅಂಚೆಯಲ್ಲಿ, ದಂಡನೆಯನ್ನು ಇಪ್ಪತ್ತನಾಲ್ಕು ಗಂಟೆಗಳೊಳಗಾಗಿ ಜಾರಿಗೊಳಿಸಲೇಬೇಕೆಂಬ ಆದೇಶದ ಪತ್ರ ತಲುಪಿತು. ಆ ದಿನ ರಾತ್ರಿ ಏಳು ಜನರ ಹೆಸರು ಬರೆದಿದ್ದ ಏಳು ಚೀಟಿಗಳನ್ನು ಕ್ಯಾಪ್‌ನಲ್ಲಿ ಹಾಕಿದರು. ದುರಾದೃಷ್ಟ ಕ್ಯಾಪ್ಟನ್ ರೋಖ್ ಕಾರ್ನಿಸಿರೊ ಹೆಸರು ಬಂದು ಅವನ ಹಣೆಬರಹ ನಿರ್ಧಾರವಾಯಿತು. 'ದುರಾದೃಷ್ಟಕ್ಕೆ ಯಾವುದೇ ಮುಲಾಜಿಲ್ಲ' ಎಂದು ನೋವಿನಿಂದ ಹೇಳಿಕೊಂಡ. 'ನಾನೊಬ್ಬ ಸೂಳೆ ಮಗನಾಗಿ ಹುಟ್ಟಿದ್ದೆ, ಸೂಳೆ ಮಗನಾಗಿ ಸಾಯುತ್ತಿದ್ದೇನೆ' – ಎಂದುಕೊಂಡ. ಬೆಳಿಗ್ಗೆ ಐದು ಗಂಟೆಗೆ ಲಾಟರಿ ಮೂಲಕ ಒಂದು ತಂಡವನ್ನು ಆಯ್ಕೆ ಮಾಡಿ, ಅಂಗಳದಲ್ಲಿ ವ್ಯವಸ್ಥಿತವಾಗಿ ನಿಲ್ಲಿಸಿದ. ದಂಡನೆಗೆ ಒಳಗಾಗಿದ್ದ ವ್ಯಕ್ತಿಯನ್ನು ಪೂರ್ವ ಸೂಚನೆಯಾಗಿ ಎಬ್ಬಿಸಿದ.

"ಎದ್ದೇಳು ಬ್ಯುಂಡಿಯಾ, ಹೋಗೋಣ... ನಮ್ಮ ಸಮಯ ಬಂದಾಯಿತು" ಎಂದ.

"ಹಾಗೇ ಆಗಲಿ, ನನ್ನ ಗುಳ್ಳೆಗಳು ಒಡೆದಿರುವ ಕನಸನ್ನು ಕಾಣುತ್ತಿದ್ದೆ" ಎಂದ.

ರೆಬೆಕಾ ಬ್ಯುಂಡಿಯಾ ಬೆಳಗಿನ ಜಾವ ಮೂರು ಗಂಟೆಗೇ, ಅರೆಲಿಯಾನೊನನ್ನು ಕೊಲ್ಲುತ್ತಾರೆಂದು ತಿಳಿದು ಎದ್ದಿದ್ದಳು. ಸ್ಮಶಾನದ ಗೋಡೆಯನ್ನು ಅರೆತೆರೆದ ಕಿಟಕಿಯ ಮೂಲಕ ಹಾಸಿಗೆಯ ಮೇಲೆ ಕುಳಿತು ಆ ಕತ್ತಲ ಕೋಣೆಯಲ್ಲಿ ಉಳಿದಿದ್ದಳು. ಆರ್ಕಾಡಿಯೋನ ಗೊರಕೆಯಿಂದ ಹಾಸಿಗೆ ಸ್ವಲ್ಪ ಅಲುಗಾಡಿತು. ಬೇರೆ ಬೇರೆ ಸಮಯದಲ್ಲಿ, ಪೀತ್ರೋ ಕ್ರೆಸ್ಪಿಯ ಪತ್ರಗಳಿಗಾಗಿ ಎದುರು ನೋಡುತ್ತಿದ್ದಂತೆ, ಇಡೀ ವಾರ ಒಂದೇ ಸಮನೆ ಕಾಯುತ್ತಿದ್ದಳು.

"ಅವನನ್ನು ಇಲ್ಲಿ ಗುಂಡಿಕ್ಕಿ ಸಾಯಿಸುವುದಿಲ್ಲ... ಮಧ್ಯ ರಾತ್ರಿ ಸೇನಾಠಾಣೆಗಳಲ್ಲಿ ಕೊಲ್ಲುತ್ತಾರೆ. ಯಾಕೆಂದರೆ, ಯಾರು ತಂಡವನ್ನು ನಿರ್ಧರಿಸಿದರು ಎಂಬುದು ಗೊತ್ತಾಗಬಾರದು ಅಂತ. ಅಲ್ಲದೆ ಅವನನ್ನು ಅಲ್ಲಿಯೇ ಹೂಳುತ್ತಾರೆ" ಎಂದಿದ್ದರು. ರೆಬೆಕಾ ಕಾಯುತ್ತಲೇ ಇದ್ದಳು. "ಇಲ್ಲಿ ಕೊಲ್ಲೋದಕ್ಕೆ ಅವರು ಮೂರ್ಖರಾಗಿರಬೇಕು" ಎಂದಳು. ಅವಳಿಗೆ ಅವರು ಬರುವ ದಾರಿ ಖಚಿತವಾಗಿ ಗೊತ್ತಿರುವುದರಿಂದಲೇ "ಗುಡ್ ಬೈ ಹೇಳಲು ಬಾಗಿಲನ್ನು ಈ ರೀತಿ ತೆರೆದಿರಿಸಿದ್ದಾಳೆ" "ಅವನನ್ನು ರಸ್ತೆಗಳ ಮೂಲಕ ಕರೆತರುವುದಿಲ್ಲ" ಜೋಸ್ ಆರ್ಕಾಡಿಯೊ ಒತ್ತಿ ಹೇಳಿದ. – "ಹೆದರಿದ ಆರು ಜನ ಸೈನಿಕರೊಂದಿಗೆ, ಅದೂ ಜನ ಏನೂ ಮಾಡಲು ಸಿದ್ಧರಾಗಿದ್ದಾರೆ ಎಂಬ ಅರಿವಿನೊಂದಿಗೆ" – ಎಂದು ಮಾತನ್ನು ಮುಂದುವರೆಸಿದ. ಗಂಡನ ಮಾತಿಗೆ ಲಕ್ಷ್ಯ ಕೊಡದೆ ಕಿಟಕಿಯ ಬಳಿ ರೆಬೆಕಾ ಕಾಯುತ್ತಿದ್ದಳು.

"ನೀನೇ ನೋಡುವಿಯಂತೆ ಅವರೆಷ್ಟು ಪೆದ್ದರೂಂತ" – ಅವಳು ಹೇಳಿದಳು.

ಮಂಗಳವಾರ, ಬೆಳಿಗ್ಗೆ ಐದು ಗಂಟೆಗೆ ಜೋಸ್ ಆರ್ಕಾಡಿಯೊ ಕಾಫಿ ಕುಡಿದು ನಾಯಿಗಳನ್ನು ಹೊರಗೆ ಬಿಟ್ಟಾಗ ರೆಬೆಕಾ ಕಿಟಕಿಮುಚ್ಚಿ, ಬೀಳದಿರಲೆಂದು ಹಾಸಿಗೆ ತುಂದಿ ಹಿಡಿದುಕೊಂಡಳು. "ಅಗೋ, ಅವರು ಅವನನ್ನು ಕರೆತರುತ್ತಿದ್ದಾರೆ" – ಒಂದು ನಿಟ್ಟುಸಿರೆಳೆದಳು. "ಅವನೆಷ್ಟು ಚೆನ್ನಾಗಿದ್ದಾನೆ" ಜೋಸ್ ಆರ್ಕಾಡಿಯೊ ಕಿಟಕಿಯಿಂದ ಹೊರಗೆ ನೋಡಿದ. ಬೆಳಗಿನ ಬೆಳಕಿನಲ್ಲಿ ಕಂಪಿಸುತ್ತಿದ್ದಂತೆ ಕಾಣಿಸಿದ. ಆಗಲೇ ಅವನು ಗೋಡೆಗೆ ಬೆನ್ನುಕೊಟ್ಟಿದ್ದ. ಕೈಗಳನ್ನು, ಕಂಕುಳಲ್ಲಿದ್ದ ಕುರುಗಳಿಂದ ಸೊಂಟದ ಮೇಲೆ ಇರಿಸಿಕೊಂಡಿದ್ದ. "ಒಬ್ಬ ಮನುಷ್ಯ ಎಷ್ಟು... ಎಷ್ಟು ಕುಗ್ಗಿ ಹೋಗುತ್ತಾನೆಂದರೆ, ದುರ್ಬಲರು ಕೂಡಾ ಕೊಲ್ಲಲು ಸಮರ್ಥರಾಗುತ್ತಾರೆ. ಆದರೂ ಅವನಿಗೆ ಏನೂ ಮಾಡಲು ಆಗುವುದಿಲ್ಲ" ಅವನು ಈ ಮಾತನ್ನು ಎಷ್ಟು ಆಕ್ರೋಶದಿಂದ ಪದೇ ಪದೇ ಹೇಳಿದನೆಂದರೆ, ಕ್ಯಾಪ್ಟನ್ ರೋಖ್ ಕಾರ್ನಿಸೆರೊ ಕೂಡಾ ಕರಗಿದ. ಅವನು ಪ್ರಾರ್ಥಿಸುತ್ತಿದ್ದಾನೆಂದು ಭಾವಿಸಿದ. ತಂಡ ಗುರಿಯಿಟ್ಟಾಗ, ಆಕ್ರೋಶ ಹೆಪ್ಪುಗಟ್ಟಿತ್ತು. ನಾಲಿಗೆ ಸತ್ತಿತ್ತು. ಕಣ್ಣು ಮುಚ್ಚಿತ್ತು. ಬೆಳ್ಳಂ ಬೆಳಕು ಮರೆಯಾಗಿತ್ತು. ಮತ್ತೆ ತಾನು ತುಂಡು ಪ್ಯಾಂಡು, ಕೊರಳಲ್ಲಿ ಟೈ ಧರಿಸಿದ್ದುದನ್ನು ಕಂಡ. ಅಲ್ಲದೆ ಅಮೋಘವಾದ ಒಂದು ಮಧ್ಯಾಹ್ನ ತನ್ನ ತಂದೆ ಟೆಂಟಿನೊಳಗೆ ಕರೆದೊಯ್ಯುತ್ತಿದ್ದುದನ್ನು, ತಾನು ಪಿಸ್ ಮುಂದೆ ನಿಂತಿದ್ದುದನ್ನು ನೋಡಿದ. ಗಟ್ಟಿಯಾಗಿ ಕೂಗಿದ್ದನ್ನು ಕೇಳಿಸಿಕೊಂಡಾಗ, ತಂಡಕ್ಕೆ ಅದು ಅಂತಿಮ ಆದೇಶವಿರಬೇಕೆಂದುಕೊಂಡ. ಕುತೂಹಲದ ಕಂಪನದಿಂದ ಕಣ್ಣು ತೆರೆದ. ಸಾಲು ಸಾಲು ಗುಂಡುಗಳನ್ನು ನಿರೀಕ್ಷಿಸಿದವನಿಗೆ ಕ್ಯಾಪ್ಟನ್ ರೋಖ್ ಕಾರ್ನಿಸೆರೊ ಗಾಳಿಯಲ್ಲಿ ಕೈ ಎತ್ತಿದ್ದನ್ನು ಮತ್ತು ಹೊಡೆಯಲು ಸಿದ್ಧವಾದ ಭಯಾನಕವಾದ ಷಾಟ್‌ಗನ್ ಹೊತ್ತು ರಸ್ತೆ ದಾಟುತ್ತಿದ್ದ ಜೋಸ್ ಆರ್ಕಾಡಿಯೊ ಕಾಣಿಸಿದ.

"ಹೊಡೀಬೇಡ... ದೇವರು ಕಳಿಸಿಕೊಟ್ಟಿದ್ದಾನೆ ನಿನ್ನನ್ನು" ಎಂದು ಕ್ಯಾಪ್ಟನ್ ಜೋಸ್ ಆರ್ಕಾಡಿಯೋಗೆ ಹೇಳಿದ.

ಅಲ್ಲಿಯೇ ಮತ್ತೊಂದು ಯುದ್ಧ ಶುರುವಾಯಿತು. ಕ್ಯಾಪ್ಟನ್ ರೋಖ್ ಕಾರ್ನಿಸೆರೊ ಮತ್ತು ಅವನ ಜೊತೆಗಿನ ಆರುಮಂದಿ, ಕರ್ನಲ್ ಅರೆಲಿಯಾನೊ ಬ್ಯುಂಡಿಯಾನೊಂದಿಗೆ ರಿಯೋಹಚಾದಲ್ಲಿ ಮರಣದಂಡನೆಗೆ ಗುರಿಯಾಗಿದ್ದ ಕ್ರಾಂತಿಕಾರಿ ಜನರಲ್ ಆಗಿದ್ದ ವಿಕ್ಟೋರಿಯೊ ಮೆದಿನಾನನ್ನು ಬಿಡುಗಡೆ ಮಾಡಲು ಹೊರಟರು. ಪರ್ವತಗಳನ್ನು ದಾಟಿ ಹೋದರೆ ಸಮಯ ಉಳಿತಾಯವಾಗುತ್ತದೆಂದು, 'ಮಕೊಂಡೊ' ಸ್ಥಾಪಿಸಲು ಜೋಸ್ ಆರ್ಕಾಡಿಯೊ ಬ್ಯುಂಡಿಯಾ ಹೊರಟ ಹಾದಿಯನ್ನು ಹಿಡಿದರು. ಆದರೆ ಒಂದು ವಾರ ಮುಗಿಯುವುದಕ್ಕೆ ಮೊದಲೇ ಅವರಿಗೆ ಇದು ಅಸಾಧ್ಯದ ಕೆಲಸವೆಂದು ತೋರಿತು. ಆದ್ದರಿಂದ ಯಾವುದೇ ಸವಲತ್ತುಗಳಿಲ್ಲದೆ, ಗುಂಡಿಕ್ಕುವ ತಂಡದವರಲ್ಲಿದ್ದ ಅಲ್ಪಸ್ವಲ್ಪ ಮದ್ದುಗುಂಡುಗಳೊಂದಿಗೆ ಅಪಾಯಕಾರಿಯಾದ ಹಾದಿಯನ್ನೇ ಹಿಡಿಯಬೇಕಾಯಿತು.

ಊರುಗಳ ಸಮೀಪದಲ್ಲಿ ಬಿಡಾರ ಹೂಡುತ್ತಿದ್ದರು. ಅವರಲ್ಲಿ ಒಬ್ಬ ಚಿನ್ನದ ಮೀನೊಂದನ್ನು ಕೈಲಿಹಿಡಿದು ವೇಷ ಮರೆಸಿಕೊಂಡು ಬೆಳ್ಳಂಬೆಳಗಿನಲ್ಲಿ ಅಡಗಿ ಕುಳಿತಿರುವ ಲಿಬರಲ್‌ಗಳನ್ನು ಭೇಟಿಯಾಗುತ್ತಿದ್ದರು. ಮಾರನೆದಿನ ಅವರು ಬೇಟೆಗೆ ಹೋಗುತ್ತಿದ್ದರಾದರೂ ಯಾರೂ ಹಿಂತಿರುಗುತ್ತಿರಲಿಲ್ಲ. ಪರ್ವತಗಳ ತುದಿಯಿಂದ ರಿಯೋಹಚಾವನ್ನು ನೋಡಿದಾಗ ಜನರಲ್ ವಿಕ್ಟೋರಿಯಾ ಮೆದಿನಾನನ್ನು ಗುಂಡಿಕ್ಕಿ ಕೊಲ್ಲಲಾಗಿತ್ತು. ಕರ್ನಲ್ ಅರೆಲಿಯಾನೊ ಬ್ಯುಂಡಿಯಾನನ್ನು ಕರೀಬಿಯನ್ ಕೋಸ್ಟ್‌ನ ಕ್ರಾಂತಿಕಾರಿ ಸೇನೆಯ ಜನರಲ್ ಎಂದು ಘೋಷಿಸಿದರು. ಪದವಿಯನ್ನು ಒಪ್ಪಿಕೊಂಡನಾದರೂ ಪದೋನ್ನತಿಯನ್ನು, ಕನ್‌ಸರ್ವೆಟೀವ್‌ಗಳು ಅಧಿಕಾರದಲ್ಲಿ ಇರುವವರೆಗೂ ಒಪ್ಪಿಕೊಳ್ಳುವುದಿಲ್ಲವೆಂದು ಮೂರು ತಿಂಗಳು ಮುಗಿಯುವಷ್ಟರಲ್ಲಿ ಸಾವಿರಕ್ಕಿಂತಲೂ ಹೆಚ್ಚು ಮಂದಿಯನ್ನು ಸಶಸ್ತ್ರರನ್ನಾಗಿಸಿದರು. ಆದರೆ ಅವರೆಲ್ಲರನ್ನೂ ಹೇಳ ಹೆಸರಿಲ್ಲದಂತೆ ಒರೆಸಿ ಹಾಕಿದರು. ಬದುಕುಳಿದವರು ಪೂರ್ವದ ಗಡಿಯನ್ನು ತಲುಪಿದರು. ಮತ್ತೆ ಬಂದ ಸುದ್ದಿಯ ಪ್ರಕಾರ ಅವರು ಆಂಟಿಲೆಸ್ ದ್ವೀಪಗಳಿಂದ ಹೊರಟು ಕಾಬೊಡೆ ಲಾ ವೆಲಾ ತಲುಪಿದ್ದಾರೆಂದೂ ಅನಂತರ ಎಲ್ಲಾ ಕಡೆಗೂ ಟೆಲಿಗ್ರಾಂ ಮಾಡಿ ಸರಕಾರದಿಂದ ಕಳಿಸಲಾದ ಸಂದೇಶದಲ್ಲಿ ಕರ್ನಲ್ ಅರೆಲಿಯಾನೋನ ಸಾವಿನ ಸುದ್ದಿಯನ್ನು ಬಹಳ ಸಂತೋಷೋತ್ಸಾಹದಿಂದ ಬಿತ್ತರಿಸಲಾಗಿದೆ ಎಂದೂ ಹೇಳಲಾಗಿತ್ತು. ಆದರೆ ಎರಡು ದಿನಗಳ ನಂತರ, ಈ ಸಂದೇಶವನ್ನು ಮೀರಿಸುವಂತಹ ಮತ್ತಷ್ಟು ಸಂದೇಶಗಳು ಬಂದು ಅದರಲ್ಲಿ ದಕ್ಷಿಣ ಪ್ರಾಂತಗಳಲ್ಲಿ ಮತ್ತೊಂದು ದಂಗೆ ಎದ್ದಿದೆ ಎಂದು ತಿಳಿಸಲಾಗಿತ್ತು. ಹಾಗಾಗಿ ಕರ್ನಲ್ ಅರೆಲಿಯಾ ಬ್ಯುಂಡಿಯಾ ದಂತಕತೆ ಸರ್ವವ್ಯಾಪಿಯಾಗಿ ಪ್ರಚಾರವಾಯಿತು. ಒಂದೇ ಸಮಯದಲ್ಲಿ ಪರಸ್ಪರ ವಿರುದ್ಧವಾದ ಸುದ್ದಿಗಳು ಕೇಳಿಬಂದವು. ವಿಲಾನುವಾದಲ್ಲಿ ಗೆದ್ದನೆಂದೂ ಗೂಕಾಮಯಾಲ್‌ನಲ್ಲಿ ಸೋತನೆಂದೂ, ಮೋಟಿಲೋನ್ ಇಂಡಿಯನ್‌ರಿಂದ ನಾಶವಾದನೆಂದೂ, ಜೌಗುಪ್ರದೇಶದ ಹಳ್ಳಿಯಲ್ಲಿ ಸತ್ತನೆಂದೂ ಉರುಮಿಟಾದಲ್ಲಿ ಮತ್ತೆ ಎದ್ದು ನಿಂತನೆಂದೂ ಬಗೆಬಗೆಯ ಸುದ್ದಿಗಳು ತೇಲಾಡಿದವು. ಆ ಸಮಯದಲ್ಲಿ ಲಿಬರಲ್ ಪಕ್ಷದ ಮುಖಂಡರು ಕಾಂಗ್ರೆಸ್‌ನಲ್ಲಿ ಭಾಗವಹಿಸುವ ವಿಚಾರದಲ್ಲಿ ಚರ್ಚೆಮಾಡುತ್ತಿದ್ದವರು, ಕರ್ನಲ್ ಅರೆಲಿಯಾನೊ ಬ್ಯುಂಡಿಯಾನನ್ನು "ಸಾಹಸಿಗ" ನೆಂದು ಗುರುತಿಸಿದರೇ ಹೊರತು ಪಕ್ಷದ ಪ್ರತಿನಿಧಿಯೆಂದು ಒಪ್ಪಿಕೊಳ್ಳಲಿಲ್ಲ. ರಾಷ್ಟ್ರೀಯ ಸರಕಾರ

ಅವನನ್ನು "ಡಕಾಯಿತ" ವರ್ಗದಲ್ಲಿ ಪರಿಗಣಿಸಿ, ಅವನ ತಲೆ ತಂದು ಒಪ್ಪಿಸಿದವರಿಗೆ ಐದುಸಾವಿರ ಪೆಸೋಗಳನ್ನು ಬಹುಮಾನವಾಗಿ ನೀಡುವುದಾಗಿ ಘೋಷಿಸಿತು. ಹದಿನಾರು ಬಾರಿ ಸೋಲನ್ನು ಕಂಡ ಮೇಲೆ, ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಎರಡು ಸಾವಿರ ಸಶಸ್ತ್ರ ಇಂಡಿಯನ್ನರು ಮತ್ತು ರಕ್ಷಣಾದಳದೊಂದಿಗೆ ನಿದ್ರಿಸುತ್ತಿದ್ದ ರಿಯೋಹಚಾವನ್ನು, ತ್ಯಜಿಸಿ ಅಚ್ಚರಿಗೊಳ್ಳುವಂತೆ ಮಾಡಿ ಗುವಾಜಿರಾಗೆ ಹೋದ. ಅಲ್ಲಿ ಕೇಂದ್ರ ಸ್ಥಾನವನ್ನು ಸ್ಥಾಪಿಸಿ, ಅಲ್ಲಿನ ಆಳುತ್ತಿದ್ದ ಸರಕಾರದ ವಿರುದ್ಧ ಯುದ್ಧವನ್ನು ಘೋಷಿಸಿದ. ಅವನಿಗೆ ಬಂದ ಮೊದಲ ಸಂದೇಶದಲ್ಲಿ, ಅವನು ಕೂಡಲೇ ತನ್ನ ಸೇನಾಪಡೆಗಳೊಂದಿಗೆ ನಲವತ್ತೆಂಟು ಗಂಟೆಗಳ ಒಳಗೆ ಪೂರ್ವ ಪ್ರದೇಶಕ್ಕೆ ಹಿಂತಿರುಗಿ ಹೋಗದಿದ್ದರೆ ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್‌ನನ್ನು ಗುಂಡಿಕ್ಕಿ ಕೊಲ್ಲಲಾಗುತ್ತದೆ ಎಂಬ ಬೆದರಿಕೆಯ ಮಾತುಗಳಿದ್ದವು. ಆಗ ದಂಡನಾಯಕನಾಗಿದ್ದ ಕರ್ನಲ್ ರೋಖ್ ಕಾರ್ನಿಸೆರೊ, ಗಾಭರಿಗೊಳ್ಳುವ ರೀತಿಯಲ್ಲಿ ಸುದ್ದಿಯನ್ನು ಟೆಲಿಗ್ರಾಂ ಮೂಲಕ ಕಳಿಸಿದ. ಆದರೆ ಅವನು ಗಾಭರಿಗೆ ಬದಲಾಗಿ ಅನಿರೀಕ್ಷಿತ ಸಂತಸದಿಂದ "ಅದ್ಭುತವಾಗಿದೆ! ಮಕೊಂಡೋದಲ್ಲಿ ನಮಗೆ ಈಗ ಒಂದು ಟೆಲಿಗ್ರಾಫ್ ಆಫೀಸ್ ಲಭಿಸಿದೆ?" ಎಂದು ಉದ್ಗರಿಸಿದ. ಅವನ ಉತ್ತರ ಖಚಿತವಾದುದಾಗಿತ್ತು. ಮೂರು ತಿಂಗಳಲ್ಲಿ ಮಕೊಂಡೊದಲ್ಲಿ ಕೇಂದ್ರ ಸ್ಥಾನವನ್ನು ಸ್ಥಾಪಿಸುವ ಆಲೋಚನೆಯಲ್ಲಿದ್ದ. ಜನರಲ್ ಜೆರಿನೆಲ್ಡೊನನ್ನು ಜೀವಂತವಾಗಿ ನೋಡದಿದ್ದರೆ, ತನ್ನಲ್ಲಿ ಸೆರೆಯಾಳುಗಳಾಗಿರುವ ಎಲ್ಲರನ್ನೂ ಜನರಲ್‌ಗಳಿಂದ ಮೊದಲು ಮಾಡಿ, ಆ ಕ್ಷಣದಲ್ಲಿ ಗುಂಡಿಕ್ಕಿ ಸಾಯಿಸುವುದೇ ಅಲ್ಲದೆ, ತನ್ನ ಕೆಳಗಿನವರೆಲ್ಲರಿಗೂ ಮುಂದೆ ಯುದ್ಧದಲ್ಲಿ ಹಾಗೇ ಮಾಡುವಂತೆ ಆದೇಶಿಸುತ್ತೇನೆ ಎಂದುಕೊಂಡು ಮೂರು ತಿಂಗಳ ನಂತರ ದಿಗ್ವಿಜಯದೊಂದಿಗೆ ಮಕೊಂಡೋಗೆ ಪ್ರವೇಶಿಸಿದಾಗ, ಜೌಗುಪ್ರಾಂತದಲ್ಲಿ ಮೊಟ್ಟ ಮೊದಲ ಆಲಿಂಗನ ದೊರೆತದ್ದು ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್‌ನದು.

ಮನೆ ಮಕ್ಕಳಿಂದ ತುಂಬಿ ಹೋಗಿತ್ತು. ಆರ್ಕಾಡಿಯೊ ಗುಂಡಿಗೆ ಬಲಿಯಾದ ನಂತರ, ಉರ್ಸುಲಾ ಸಾಂತಾ ಸೋಫಿಯಾ ದೆಲಾ ಪೀದಾದ್‌ಳನ್ನು ಅವಳ ಹಿರಿಯ ಮಗಳು, ನಂತರ ಹುಟ್ಟಿದ ಅವಳಿ ಮಕ್ಕಳೊಂದಿಗೆ, ಮನೆಗೆ ಬರಮಾಡಿಕೊಂಡಿದ್ದರು. ಸತ್ತವನ ಇಷ್ಟಕ್ಕೆ ವಿರುದ್ಧವಾಗಿ, ಹುಡುಗಿಗೆ ರೆಮೆಡಿಯೋಸ್ ಎಂದು ನಾಮಕರಣ ಮಾಡಿಸಿದಳು. "ಆರ್ಕಾಡಿಯೊ ಅದನ್ನೇ ಬಯಸಿರುವುದೆಂದು ನನಗೆ ನಂಬಿಕೆಯಿದೆ" ಎಂದಳು. "ಅವಳನ್ನು ಉರ್ಸುಲಾ ಎಂದು ಕರೆಯುವುದು ಬೇಡ. ಆ ಹೆಸರಿನವರು ಯಾವಾಗಲೂ ಕಷ್ಟವನ್ನೇ ಅನುಭವಿಸುತ್ತಿರುತ್ತಾರೆ". ಅವಳಿ ಮಕ್ಕಳನ್ನು ಜೋಸ್ ಆರ್ಕಾಡಿಯೊ ಸೆಗುಂಡೊ. ಅರೆಲಿಯಾನೊ ಸೆಗುಂಡೊ ಎಂದು ಕರೆದರು. ಅಮರಾಂತ ಅವರೆಲ್ಲರ ಜವಾಬ್ದಾರಿಯನ್ನು ಹೊತ್ತಳು. ಹಜಾರದಲ್ಲಿ ಪುಟ್ಟ ಪುಟ್ಟ ಮರದ ಕುರ್ಚಿಗಳನ್ನು ಹಾಕಿ ನರ್ಸರಿಯಾಗಿ ಅಣಿಮಾಡಿದಳು. ಮನೆ ಮಕ್ಕಳ ಜೊತೆ ಅಕ್ಕಪಕ್ಕದ ಕುಟುಂಬಗಳಲ್ಲಿನ ಮಕ್ಕಳನ್ನೂ ಸೇರಿಸಿಕೊಂಡಳು. ರಾಕೆಟ್‌ಗಳ ಸ್ಫೋಟ, ಗಂಟೆಗಳ ಮೊಳಗುಗಳ ನಡುವೆ ಮಕ್ಕಳ ಸಮೂಹಗೀತೆ ಅವನನ್ನು ಸ್ವಾಗತಿಸಿತು. ಅರೆಲಿಯಾನೊ ಜೋಸ್. ತನ್ನ ಅಜ್ಜನ ಹಾಗೆ ಎತ್ತರವಿದ್ದ. ಕ್ರಾಂತಿಕಾರಿ ಅಧಿಕಾರಿಯಂತೆ ಬಟ್ಟೆ ಧರಿಸಿದ್ದ. ಅವನಿಗೆ ಮಿಲಿಟರಿ ಗೌರವವನ್ನು ಸೂಚಿಸಿದ.

ಸುದ್ದಿಗಳೆಲ್ಲ ಸಂತೋಷದ್ದಾಗಿರಲಿಲ್ಲ. ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಮನೆಬಿಟ್ಟು ಹೋದ ವರ್ಷದ ನಂತರ, ಜೋಸ್ ಆರ್ಕಾಡಿಯೊ ಮತ್ತು ರೆಬೆಕಾ ಆರ್ಕಾಡಿಯೊ ಕಟ್ಟಿಸಿದ್ದ ಮನೆಯಲ್ಲಿ ವಾಸಕ್ಕೆ ಹೋದರು. ಯಾವ ರೀತಿ ತನ್ನಿಂದ ಅವನ ಶಿಕ್ಷೆ ತಪ್ಪಿಹೋಯಿತೆಂಬುದು ಯಾರಿಗೂ ಗೊತ್ತಿರಲಿಲ್ಲ. ಚೌಕದ ಆಯಕಟ್ಟದ ಮೂಲೆಯಲ್ಲಿ, ಬಾದಾಮಿ ಗಿಡದ ನೆರಳಿನಲ್ಲಿ ರಾಬಿನ್ ಹಕ್ಕಿಗಳ ಮೂರು ಗೂಡುಗಳಿದ್ದ ಆ ಮನೆಯಲ್ಲಿ, ಅತಿಥಿ ಅಭ್ಯಾಗತರಿಗೆಂದು ದೊಡ್ಡ ಬಾಗಿಲು ಬೆಳಕಿಗಾಗಿ ನಾಲ್ಕು ಕಿಟಕಿಗಳ ವ್ಯವಸ್ಥೆಯೊಂದಿಗೆ, ಆಪ್ತವೆನಿಸುವಂತಹ ರೀತಿಯಲ್ಲಿತ್ತು. ರೆಬೆಕಾಳ ಹಳೆಯ ಸ್ನೇಹಿತರು – ಇನ್ನೂ ಮದುವೆಯಾಗದೆ ಉಳಿದಿದ್ದ ಮಾಸ್ಕೋಟ್ ಸೋದರಿಯರು, ವರ್ಷಗಳ ಹಿಂದೆ ಬಿಟ್ಟು ಬಿಟ್ಟಿದ್ದ ಕಸೂತಿ ಕೆಲಸವನ್ನು, ಬೆಗೋನಿಯಾ ಗಿಡಗಳಿದ್ದ ಅಂಗಳದಲ್ಲಿ ಮತ್ತೆ ಆರಂಭಿಸಿದ್ದರು. ಜೋಸ್ ಆರ್ಕಾಡಿಯೊ ಬಲಾತ್ಕಾರದಿಂದ ಕಿತ್ತುಕೊಂಡಿದ್ದ ಭೂಮಿಯಿಂದ ಲಾಭ ಗಳಿಕೆ ಮುಂದುವರೆಸಿದ. ಭೂಮಿಯ ಒಡೆತನವನ್ನು ಕನ್‌ಸರ್ವೆಟೀವ್ ಪಕ್ಷ ಮಂಜೂರು ಮಾಡಿತ್ತು. ಪ್ರತಿದಿನ ಮಧ್ಯಾಹ್ನ, ಕುದುರೆಮೇಲೆ ಕುಳಿತು ಜೋಡು ನಳಿಗೆ ಬಂದೂಕು, ಬೇಟೆನಾಯಿಗಳು, ಕುದುರೆ ಬೆನ್ನಿನಿಂದ ಆ ಕಡೆ ಈ ಕಡೆ ನೇತಾಡುತ್ತಿದ್ದ ಮೊಲಗಳ ಸರಗಳೊಂದಿಗೆ, ಮನೆಗೆ ಹಿಂದಿರುಗುತ್ತಿದ್ದುದನ್ನು ನೋಡಬಹುದಾಗಿತ್ತು. ಸೆಪ್ಟೆಂಬರ್‌ನ ಒಂದು ದಿನ ಮಧ್ಯಾಹ್ನ, ಬಿರುಗಾಳಿಯ ಮುನ್ಸೂಚನೆಯಿಂದಾಗಿ, ದಿನಾ ಬರುತ್ತಿದ್ದ ಸಮಯಕ್ಕಿಂತ ಮೊದಲೆ ಮನೆಗೆ ಹಿಂತಿರುಗಿದ. ಊಟದ ಮನೆಯಲ್ಲಿ ರೆಬೆಕಾಳನ್ನು ಮಾತಾಡಿಸಿದ. ನಾಯಿಗಳನ್ನು ಅಂಗಳದಲ್ಲಿ ಕಟ್ಟಿಹಾಕಿದ. ಅಡಿಗೆ ಮನೆಯಲ್ಲಿ ಮೊಲದ ಸರಗಳನ್ನು, ನಾಳೆಗೆ ಉಪ್ಪು ಸವರಿ ಇಡಲೆಂದು ನೇತುಹಾಕಿದ. ನಂತರ ಬಟ್ಟೆಬದಲಾಯಿಸಲು ಮಲಗುವ ಕೋಣೆಗೆ ಹೋದ. ನಂತರ ರೆಬೆಕಾ ಗಂಡ ಮಲಗುವ ಕೋಣೆಗೆ ಹೋದಾಗ, ಸ್ನಾನದ ಮನೆಯಲ್ಲಿ ತನ್ನನ್ನು ಬೀಗ ಹಾಕಲಾಗಿತ್ತಾಗಿ ತನಗೆ ಏನೂ ಕೇಳಿಸಿರಲಿಲ್ಲವೆಂದು ಹೇಳಿದಳು. ಆದರೆ ಇದು ನಂಬಲು ಅಸಾಧ್ಯವೆನಿಸಿತ್ತಾದರೂ, ಗಂಡನನ್ನು ಕೊಲ್ಲುವುದಕ್ಕೆ ರೆಬೆಕಾಳಿಗೆ ಯಾವ ಕಾರಣವೂ ಇರಲಿಲ್ಲ. ಅವನು ಅವಳನ್ನು ಸಂತೋಷವಾಗಿಯೇ ಇರಿಸಿದ್ದ. ಅಂಥಾದ್ದರಲ್ಲಿ ಇದು ಕದೆತನಕ ಮಕೊಂಡೊದಲ್ಲಿ ನಿಗೂಢವಾಗಿಯೇ ಉಳಿದಿತ್ತು. ಜೋಸ್ ಆರ್ಕಾಡಿಯೊ ಮಲಗುವ ಕೋಣೆ ಬಾಗಿಲು ಮುಚ್ಚುತ್ತಿದ್ದಂತೆ ಗುಂಡಿನ ಸದ್ದು ಮನೆಯಲ್ಲೆಲ್ಲಾ ಅನುರಣಿಸಿತು. ಬಾಗಿಲ ಕೆಳಗಿನಿಂದ ರಕ್ತದ ಧಾರೆ ಹರಿದು ಬರುತ್ತಿತ್ತು. ಪಡಸಾಲೆಯಲ್ಲೂ ಹರಿದು, ರಸ್ತೆಗೆ ಸರಿದು ಸಮತಲವಿಲ್ಲದ ಜಗಲಿಗಳ ಮೇಲಿಂದ ಹರಿದು ಮುಂದೆ ಹೋಗಿ, ಮೆಟ್ಟಿಲುಗಳನ್ನಿಳಿದ ದಿಬ್ಬಗಳನ್ನು ಏರಿ, ಟರ್ಕಿಗಳ ರಸ್ತೆ ಹಾಯುತ್ತಾ, ಬಲಕ್ಕೆ ಮೂಲೆ ತಿರುಗಿ ಮತ್ತೆ ಎಡಕ್ಕೆ ಹೋಗಿ, ಬ್ಯುಂಡಿಯಾ ಮನೆಯ ಬಳಿ ಸಮಕೋನ ಮಾಡಿ, ಕಂಬಳಿಗಳನ್ನು ಕರೆ ಮಾಡದೆ ಗೋಡೆಗಳನ್ನು ತಬ್ಬಿ, ಊಟದ ಮೇಜನ್ನು ತಪ್ಪಿಸಿ ದೊಡ್ಡ ತಿರುವನ್ನು ಮಾಡಿ, ಬೆಗೋನಿಯಾಗಳಿದ್ದ ಕಡೆ ಪಕ್ಕಕ್ಕೆ, ಅರೆಲಿಯಾನೊ ಜೋಸ್‌ಗೆ ಗಣಿತದ ಪಾಠ ಹೇಳುತ್ತಿದ್ದ ಅಮರಾಂತಳ ಕುರ್ಚಿಯ ಕೆಳಗಿನಿಂದ ಅವಳಿಗೆ ಕಾಣಿಸದಂತೆ, ಉಗ್ರಾಣದ ಮುಖಾಂತರ ಹಾಗೂ, ಮೂವತ್ತಾರು ಮೊಟ್ಟೆಗಳನ್ನು ಬ್ರೆಡ್ ಮಾಡಲೆಂದು ಒಡೆಯುತ್ತಿದ್ದ, ಉರ್ಸುಲಾ ಇದ್ದ ಅಡಿಗೆ ಮನೆಗೆ ಬಂತು.

"ಓ ದೇವರೇ!" ಎಂದು ಉರ್ಸುಲಾ ಕೂಗಿದಳು. ರಕ್ತದ ಜಾಡನ್ನೇ ಹಿಡಿದು ಹೋಗಿ, ಅದು ಪ್ರಾರಂಭವಾದಲ್ಲಿಗೆ, ಹೋದಳು. ಅರೆಲಿಯಾನೊ ಜೋಸ್ ಮೂರರ ಮಗ್ಗಿ ಹೇಳುತ್ತಿದ್ದ. ಬೆಗೋನಿಯಾಗಳಿದ್ದ ವರಾಂಡಾ, ಊಟದ ಮನೆ ಧಾಟಿ ರಸ್ತೆ, ರಸ್ತೆಯಿಂದ ಬಲಕ್ಕೆ, ನಂತರ ಎಡಕ್ಕೆ ಟರ್ಕಿಗಳ ರಸ್ತೆಗೆ, ತಾನಿನ್ನೂ ಏಪ್ರಾನ್‌ನಲ್ಲಿರುವುದನ್ನು ಕಾಲಿಗೆ ಮನೆ ಚಪ್ಪಲಿಯಲ್ಲದೆ ಬೇರೆ ಚಪ್ಪಲಿ ಇಲ್ಲದ್ದನ್ನೂ ಮರೆತು, ಮುಂದುವರಿಯುತ್ತಲೇ ಇದ್ದಳು. ಚೌಕಕ್ಕೆ, ಚೌಕದಿಂದ ಮನೆ ಬಾಗಿಲಿಗೆ ಹೋದಳು. ಅಲ್ಲಿಗೆ ಅವಳು ಎಂದೂ ಹೋದದ್ದಿಲ್ಲ. ಹೋದವಳೆ ಬಾಗಿಲನ್ನು ತಳ್ಳಿದಳು. ತಳ್ಳುತ್ತಿದ್ದಂತೆಯೇ ಬಂದೂಕಿನ ಗಂಧಕದ ಘಾಟು ವಾಸನೆಯಿಂದ ಉಸಿರು ಕಟ್ಟಿದಂತಾಗಿತ್ತು. ಜೋಸ್ ಆರ್ಕಾಡಿಯೊ ಕೆಳಮುಖವಾಗಿ ಬಿದ್ದುಕೊಂಡಿದ್ದ. ಕಾಲುಚೀಲವನ್ನು ಪೂರ್ತಿಯಾಗಿ ತೆಗೆದಿರಲಿಲ್ಲ. ರಕ್ತದ ಧಾರೆ ಎಲ್ಲಿಂದ ಎಂದು ನೋಡಿದಾಗ ಅದು ಅವನ ಬಲಗಿವಿಯಿಂದ ಹೊರಬಂದಿತ್ತು. ರಕ್ತಸ್ರಾವ ಸದ್ಯಕ್ಕೆ ನಿಂತಿತ್ತು. ದೇಹದ ಮೇಲೆಲ್ಲೂ ಗಾಯ ಕಾಣಲಿಲ್ಲ. ಯಾವುದೇ ಆಯುಧಗಳೂ ಇರಲಿಲ್ಲ. ಶವದ ದೇಹದಿಂದ ವಾಸನೆಯನ್ನೂ ದೂರಮಾಡಲಾಗಲಿಲ್ಲ. ಮೊದಲು ದೇಹವನ್ನು ಸಾಬೂನು ಮತ್ತು ಬ್ರಷ್‌ನಿಂದ ಉಜ್ಜಿ ಮೂರು ಸಲ ತೊಳೆದರು. ನಂತರ ಉಪ್ಪು ಮತ್ತು ವಿನಿಗರ್ ಅನ್ನು ಚೆನ್ನಾಗಿ ಸವರಿದರು. ನಂತರ ಬೂದಿ ಮತ್ತು ನಿಂಬೆ ಹಣ್ಣುಗಳಿಂದ ಲೇಪಿಸಿದರು. ಕಡೆಯಲ್ಲಿ ಒಂದು ಡ್ರಮ್ಮಿನಲ್ಲಿ ಉಪ್ಪು ನೀರಿನಲ್ಲಿ ಆರುಗಂಟೆಗಳ ಕಾಲ ಇರಿಸಿದರು. ಎಷ್ಟು ಜೋರಾಗಿ ತಿಕ್ಕಿ ತಿಕ್ಕಿ ಉಜ್ಜಿದರೆಂದರೆ ಅವನ ಮೈಮೇಲಿದ್ದ ಹಚ್ಚೆಯೆಲ್ಲವೂ ಮಂಕಾಯಿತು. ಕಡೆಗೆ ಹತಾಶರಾಗುತ್ತ ಜೀರಿಗೆ, ಮೆಣಸು ಮತ್ತು ಯಾವ ಯಾವುದೋ ಎಲೆಗಳನ್ನು ಹಾಕಿ ಕುದಿಯುವ ನೀರಿನಲ್ಲಿ, ನಿಧಾನದ ಉರಿಯಲ್ಲಿ ಕುದಿಸೋಣವೆಂದುಕೊಳ್ಳುವಷ್ಟರಲ್ಲಿ ಅದು ಕೊಳೆಯಲು ಪ್ರಾರಂಭಿಸಿದ್ದರಿಂದ ಆತುರಾತುರವಾಗಿ ಹೂಳಿಬಿಡಬೇಕಾಯಿತು. ಅವನನ್ನು ವಿಶೇಷವಾಗಿ ತಯಾರಿಸಿದ ಏಳು ಅಡಿ ಉದ್ದ ನಾಲ್ಕು ಅಡಿ ಅಗಲದ ಶವ ಪೆಟ್ಟಿಗೆಯಲ್ಲಿ ಇರಿಸಲಾಯಿತು. ಅದು ಒಳಗೆ ಕಬ್ಬಿಣದ ಪಟ್ಟಿಗಳು ಮತ್ತು ಸ್ಟೀಲ್ ಬೋಲ್ಟ್‌ಗಳಿಂದ ಭದ್ರಪಡಿಸಲಾಗಿತ್ತು. ಅಷ್ಟಾದರೂ ಶವದಿಂದ ಹೊಮ್ಮುತ್ತಿದ್ದ ವಾಸನೆಯೊಂದಿಗೇ ರಸ್ತೆಗಳಲ್ಲಿ ಶವಯಾತ್ರೆಯೊಂದಿಗೆ ಸಾಗಿಸಲಾಯಿತು. ಲಿವರ್ ಸಮಸ್ಯೆಯಿಂದಾಗಿ ದೇಹ ಊದಿಕೊಂಡು ಬಿಗಿಯಾಗಿದ್ದ ಫಾದರ್ ನಿಕಾನೋರ್ ತಾನು ಮಲಗಿದ್ದ ಹಾಸಿಗೆ ಮೇಲಿದ್ದೇ ಆಶೀರ್ವಾದ ಮಾಡಿದ. ಮುಂದಿನ ತಿಂಗಳುಗಳಲ್ಲಿ, ಸಮಾಧಿ ಮೇಲೆ ಗೋಡೆಗಳನ್ನು ನಿಲ್ಲಿಸಿ, ಗೋಡೆಗಳ ಮಧ್ಯೆ ಬೂದಿ, ಸುಣ್ಣ ಮರದಪುಡಿಯನ್ನು ತುಂಬಿ ಭದ್ರಗೊಳಿಸಿದರು. ಆದರೂ ಬನಾನ ಕಂಪನಿಯ ಇಂಜನಿಯರ್‌ಗಳು ಕಾಂಕ್ರೀಟನ್ನು ಹೂಳಿದ ಜಾಗದ ಮೇಲೆ ಹಾಕಿ ಮುಚ್ಚುವವರೆಗೂ ವಾಸನೆ ಹೋಗಿರಲಿಲ್ಲ. ಶವವನ್ನು ಹೊರತೆಗೆದಾಗ ರೆಬೆಕಾ ತನ್ನ ಮನೆಯ ಬಾಗಿಲುಗಳನ್ನು ಮುಚ್ಚಿಕೊಂಡು, ಜೀವಂತವಾಗಿ ಜಿಗುಪ್ಸೆಯಲ್ಲಿ ಹೂತುಹೋದಳು. ಪ್ರಪಂಚದ ಯಾವ ಆಮಿಷವೂ ಅವಳನ್ನು ಹೊರಬರುವಂತೆ ಮಾಡಲು ಸಾಧ್ಯವಾಗಲಿಲ್ಲ. ತುಂಬಾ ವಯಸ್ಸಾದ ಮೇಲೆ ಒಂದೇ ಒಂದು ಸಲ ಅವಳು ರಸ್ತೆಗೆ ಬಂದಿದ್ದಳು. ಹಳೆಯದಾದ ಬೆಳ್ಳಿ ಶೂ, ಸಣ್ಣಸಣ್ಣ ಹೂಗಳಿದ್ದ ಹ್ಯಾಟ್ ತೊಟ್ಟಿದ್ದಳು. ಆ ಸಮಯದಲ್ಲಿ ಅಲೆಮಾರಿ ಯಹೂದಿಯೊಬ್ಬ ಎಷ್ಟೊಂದು ಸುಡು ಬಿಸಿಲನ್ನು

ತಂದನೆಂದರೆ, ಹಕ್ಕಿಗಳು ಕಿಟಕಿ ಬಾಗಿಲುಗಳನ್ನು ಒಡೆದು, ಸಾಯಂಕಾಲ ಮಲಗುವ ಕೋಣೆಗಳನ್ನು ಪ್ರವೇಶಿಸುತ್ತಿದ್ದವು. ಯಾರಾದರೂ ಕಡೆಯ ಸಲ ಅವಳನ್ನು ನೋಡಿದ್ದು, ತನ್ನ ಮನೆಯ ಬಾಗಿಲೊಡೆದು ಒಳಗೆ ಪ್ರವೇಶಿಸಲು ಯತ್ನಿಸುತ್ತಿದ್ದ ಕಳ್ಳನನ್ನು, ಪಿಸ್ತೂಲಿನಿಂದ ಒಡೆದು ಸಾಯಿಸಿದಾಗ ಮಾತ್ರ! ಅದಾದನಂತರ ತನ್ನ ಸೇವಕಿಯೂ ನಂಬಿಕಸ್ತಳೂ ಆಗಿದ್ದ ಅರ್ಜೆನಿಡಾ ಜೊತೆ ಸಂಬಂಧ ಬಿಟ್ಟರೆ ಬೇರೆ ಯಾರೊಂದಿಗೂ ಸಂಬಂಧವಿರಿಸಿಕೊಂಡಿದ್ದಂತೆ ಕಾಣಿಸಲಿಲ್ಲ. ಒಮ್ಮೆ, ತನ್ನ ಹತ್ತಿರದ ಬಂಧುವೆಂದು ಹೇಳಿಕೊಂಡಿದ್ದ ಬಿಷಪ್‌ಗೆ ಪತ್ರಗಳನ್ನು ಬರೆಯುತ್ತಿದ್ದ ವಿಚಾರ ತಿಳಿಯಿತಾದರೂ, ಅವಳಿಗೆ ಉತ್ತರಗಳು ಬರುತ್ತಿತ್ತೆಂಬುದನ್ನು ಯಾರೂ ಹೇಳಲಿಲ್ಲ. ಊರು ಅವಳನ್ನು ಮರೆಯಿತು.

ದಿಗ್ವಿಜಯಿಯಾಗಿ ಹಿಂತಿರುಗಿದರೂ, ಅಲ್ಲಿದ್ದ ಪರಿಸ್ಥಿತಿಗಳಿಂದಾಗಿ, ಕರ್ನಲ್ ಬ್ಯುಂಡಿಯಾ ಉತ್ಸಾಹದಿಂದ ಇದ್ದಂತೆ ತೋರಲಿಲ್ಲ. ಪ್ರತಿರೋಧವಿಲ್ಲದೆ ಸರಕಾರಿ ಸೇನಾ ತುಕಡಿಗಳು ತಮ್ಮ ಸ್ಥಾನಗಳನ್ನು ತೊರೆದರು. ಲಿಬರಲ್ ಪಕ್ಷದವರಲ್ಲಿ ಜಯಗಳಿಸಿದ ಭ್ರಮೆಯನ್ನು ಹುಟ್ಟಿಸಿದರು. ನಾಶಮಾಡುವುದು ಸರಿಯಲ್ಲವೆಂಬಂತೆ ಕಾಣಿಸಿದರು. ಆದರೆ ಕ್ರಾಂತಿಕಾರರಿಗೆ ಸತ್ಯ ಏನೆಂಬುದು ತಿಳಿದಿತ್ತು. ಅದರಲ್ಲೂ ಕರ್ನಲ್ ಅರೆಲಿಯಾನೊ ಪೂರ್ಣ ಸತ್ಯವನ್ನು ಚೆನ್ನಾಗಿ ತಿಳಿದಿದ್ದ. ಆದರೂ ಆ ಕ್ಷಣದಲ್ಲಿ, ಅವನ ಬಳಿ ಐದುಸಾವಿರ ಜನ ಇದ್ದರೂ ಎರಡು ತೀರಪ್ರದೇಶಗಳ ಒಡೆತನವಿದ್ದರೂ ತಾವು ಸಮುದ್ರದ ಒಡ್ಡಿನಿಂದ ತಡೆಯಲ್ಪಟ್ಟಿದ್ದೇವೆ ಎಂಬ ಭಾವನೆಗೆ ಒಳಗಾಗಿದ್ದ. ಚರ್ಚ್ ಗೋಪುರವನ್ನು ಮರುನಿರ್ಮಿಸಲು ಆದೇಶ ನೀಡುವ ಸಮಯದಲ್ಲಿ ಅವನು ಗೊಂದಲಕ್ಕೆ ಈಡಾಗಿದ್ದ. ಫಿರಂಗಿಗಳಿಂದ ಕೆಡವಲ್ಪಟ್ಟಿದ್ದು ಅದರ ಪುನರ್ ನಿರ್ಮಾಣಕ್ಕೆ ಸಜ್ಜಾಗಿದ್ದಾಗ, ಫಾದರ್ ನಿಕಾನೋರ ಖಾಯಿಲೆ ಹಿಡಿದು ಮಲಗಿದ್ದ ಹಾಸಿಗೆ ಮೇಲಿಂದಲೇ "ಇದು ಮೂರ್ಖತನ. ಕ್ರೈಸ್ತಧರ್ಮದ ರಕ್ಷಕರು ಚರ್ಚನ್ನು ಕೆಡವುತ್ತಾರೆ, ಮೇಸ್ತ್ರಿಗಳು ಅದನ್ನು ಮತ್ತೆ ಕಟ್ಟುತ್ತಾರೆ" ಎಂದು ತಪ್ಪಿಸಿಕೊಳ್ಳಲು ದಾರಿಗಳೇನಾದರೂ ಇರಬಹುದೆ ಎಂದು ಯೋಚಿಸುತ್ತಿರುವಾಗ ಟೆಲಿಗ್ರಾಫ್ ಆಫೀಸಿನಲ್ಲಿ ಕುಳಿತೇ ಗಂಟೆಗಟ್ಟಲೆ ಬೇರೆ ಊರಿನ ದಂಡನಾಯಕರ ಜೊತೆ ಮಾತುಕತೆಯಾಡುತ್ತಾ ಕಳೆಯುತ್ತಿದ್ದ. ಪ್ರತಿಬಾರಿಯೂ ಯುದ್ಧ ನಿರ್ಣಾಯಕ ನೆಲೆ ತಲುಪುತ್ತಿಲ್ಲವೆಂಬ ಭಾವನೆಯೊಂದಿಗೆ ಹೊರಬರುತ್ತಿದ್ದ. ಲಿಬರಲ್ ಪಕ್ಷದವರಿಗೆ ಜಯದೊರೆತ ತಾಜಾ ಸುದ್ದಿ ಬರುತ್ತಿದ್ದಂತೆ ಬಹಳ ಸಂಭ್ರಮೋತ್ಸಾಹದ ಹೇಳಿಕೆಗಳೊಂದಿಗೆ ಆಚರಿಸಿದರು. ಆದರೆ ಅವರು ಭೂಪಟದ ಮೇಲಿಂದ ಅದರ ವಾಸ್ತವವನ್ನು ಅರಿಯುತ್ತಿದ್ದ. ಅವನಿಗೆ ಇದರಿಂದ ಅವನ ಸೈನ್ಯ ಕಾಡುಗಳ ಮೂಲಕ ಹಾದು ಮಲೇರಿಯಾ ಹಾಗೂ ಸೊಳ್ಳೆಗಳಿಂದ ತಮ್ಮನ್ನು ಕಾಪಾಡಿಕೊಳ್ಳುತ್ತಾ, ವಾಸ್ತವದ ಸುದ್ದಿಗಿಂತ ವಿರುದ್ಧವಾದ ದಿಕ್ಕಿನಲ್ಲಿ ಹೋಗುತ್ತಿರುವುದನ್ನು ಮನಗಂಡ. "ನಾವು ಸಮಯವನ್ನು ಹಾಳು ಮಾಡುತ್ತಿದ್ದೇವೆ" ಎಂದು ಆಕ್ಷೇಪಿಸಿದ. "ಇಲ್ಲಿ ನಾವು ಸಮಯ ಹಾಳುಮಾಡುತ್ತಾ ಕೂತಿದ್ದರೆ ಅಲ್ಲಿ ಪಕ್ಷದ ಸೂಳೆಮಕ್ಕಳು ಕಾಂಗ್ರೆಸ್ಸಿನಲ್ಲಿ ಸೀಟುಗಳಿಗಾಗಿ ಬೇಡಿಕೊಳ್ಳುತ್ತಿದ್ದಾರೆ" ಎಂದು ಆಫೀಸರುಗಳೊಂದಿಗೆ ಹೇಳಿದ. ರಾತ್ರಿ ಎಚ್ಚರವಾಗಿಸಿಕೊಂಡು ಹಾಸಿಗೆ ಮೇಲೆ ಮೈಚಾಚಿ, ಮರಣದಂಡನೆಯನ್ನು ತನಗೆ ಆದೇಶಿಸಲಾಗಿದ್ದ ಕೋಣೆಯಲ್ಲಿ, ಆಲೋಚನೆಗಳಲ್ಲಿ ಮುಳುಗಿದ್ದ. ವಕೀಲರು ಕಪ್ಪು ಉಡುಪಿನಲ್ಲಿ ಅಧ್ಯಕ್ಷರ ಪ್ಯಾಲೇಸಿನಿಂದ ಕೊರೆವ ಚಳಿಯ

ಬೆಳಗಿನಲ್ಲಿ ತಮ್ಮ ಕೋಟಿನ ಕಾಲರುಗಳನ್ನು ಕತ್ತಿನ ಹಿಂದೆ ಕಿವಿಯ ಪಕ್ಕದಲ್ಲಿ ಏರಿಸಿಕೊಳ್ಳುತ್ತಾ ಕೈಗಳನ್ನು ಉಜ್ಜಿಕೊಳ್ಳುತ್ತಾ, ಪಿಸುಮಾತುಗಳನ್ನಾಡುತ್ತ ಕಾಫಿ ಬಾರುಗಳಲ್ಲಿ ರಕ್ಷಣೆ ಪಡೆದು, ಅಧ್ಯಕ್ಷರು ಹೇಳಿದ್ದರಲ್ಲಿ ಏನು ಅರ್ಥವಿತ್ತು. ಹೌದು ಎಂದದ್ದು ಯಾಕೆ, ಇಲ್ಲ ಎಂದದ್ದು ಯಾಕೆ, ಅಧ್ಯಕ್ಷರು ಏನೊ ಬೇರೆಯಾಗಿ ಹೇಳಿದಾಗ, ಅದು ಏನಿರಬಹುದೆಂದು ಊಹಿಸಿಕೊಳ್ಳುತ್ತಾ ಕುಳಿತಿರುವ ಚಿತ್ರಗಳನ್ನು ಮನಸ್ಸಿನ ಮುಂದೆ ತಂದುಕೊಳ್ಳಲು ಪ್ರಯತ್ನಿಸಿದ. ತೊಂಭತ್ತು ಡಿಗ್ರಿ ಉಷ್ಣಾಂಶದಲ್ಲಿಯೂ ಸೊಳ್ಳೆಗಳನ್ನು ಅಟ್ಟುತ್ತಾ ಭಯಾನಕ ಬೆಳಗು ಹತ್ತಿರವಾಗುತ್ತಿದ್ದಂತೆ ತನ್ನವರಿಗೆ ಸಮುದ್ರಕ್ಕೆ ನೆಗೆಯಲು ಆದೇಶಿಸಬೇಕಾಗುತ್ತದೆ ಎಂದೆಲ್ಲಾ ಯೋಚಿಸುತ್ತಿದ್ದ.

ಯಾವುದೋ ಒಂದು ದಿನ ರಾತ್ರಿ, ಪಿಲಾರ್ ತರ್ನಿರಾ ಅಂಗಳದಲ್ಲಿ ಬೇರೆ ಸೈನಿಕರೊಂದಿಗೆ ಹಾಡುತ್ತಿದ್ದಾಗ, ಅವನು ಅವಳನ್ನು ಕಾರ್ಡುಗಳಿಂದ ತನ್ನ ಭವಿಷ್ಯವನ್ನು ಹೇಳಲು ಕೇಳಿಕೊಂಡ. ಅವಳು ಕಾರ್ಡುಗಳನ್ನು ಹರಡಿಕೊಂಡು, ಮೂರು ಸಲ ಕಾರ್ಡುಗಳನ್ನು ಎತ್ತಿ ನೋಡಿ "ನಿನ್ನ ಬಾಯಿ ಬಗ್ಗೆ ಜೋಪಾನ" ಅದರ ಅರ್ಥ ಏನೆಂದು ನನಗೆ ಗೊತ್ತಿಲ್ಲ. ಆದರೆ ಸೂಚನೆ ಮಾತ್ರ ಸ್ಪಷ್ಟವಾಗಿದೆ. ಬಾಯಿ ಜೋಪಾನ..ಎಚ್ಚರವಿರಲಿ – ಎಂದಳು. ಎರಡು ದಿನಗಳ ನಂತರ ಯಾರೊ ಒಬ್ಬರು ಸೇವಕನಿಗೆ ಒಂದು ಮಗ್ ಕಾಫಿ ಕೊಟ್ಟರು. ಅವನು ಅದನ್ನು ಇನ್ನ್ಯಾರೋ ಒಬ್ಬರಿಗೆ ಕೊಟ್ಟ. ಅವನು ಮತ್ತೊಬ್ಬನಿಗೆ, ಹೀಗೆ ಕೈಯಿಂದ ಕೈಗೆ ಬದಲಾಗುತ್ತ, ಕಡೆಗೆ ಅರೆಲಿಯಾನೊ ಬ್ಯುಂಡಿಯಾನ ಆಫೀಸನ್ನು ತಲುಪಿತು. ಅವನೇನೂ ಕಾಫಿಗೆ ಹೇಳಿರಲಿಲ್ಲ ಆದರೂ ಅದು ಅಲ್ಲಿ ಬಂದಿದ್ದರಿಂದ ಅವನು ಅದನ್ನು ಕುಡಿದುಬಿಟ್ಟ. ಅದರಲ್ಲಿ ನಕ್ಸ್‌ವೊಮಿಕಾ ಎಂಬ ಒಂದು ಕುದುರೆಯನ್ನು ಕೊಲ್ಲಲು ಸಾಕಾಗುವಷ್ಟು ಭಯಂಕರ ವಿಷಯ ಪದಾರ್ಥವಿತ್ತು. ಅವನನ್ನು ಮನೆಗೆ ಎತ್ತಿಕೊಂಡು ಹೋಗುವಷ್ಟು ಹೊತ್ತಿಗೆ ಅವನು ಸೆಡೆತುಕೊಂಡಿದ್ದ. ನಾಲಗೆ ಹಲ್ಲುಗಳ ಮಧ್ಯೆ ಸಿಲುಕಿಕೊಂಡಿತ್ತು. ಉರ್ಸುಲಾ ಅವನನ್ನು ಉಳಿಸುವುದಕ್ಕಾಗಿ ಹೆಣಗಾಡಿದಳು. ವಾಂತಿ ಮಾಡುವ ಔಷಧಿಕೊಟ್ಟು ಹೊಟ್ಟೆ ಖಾಲಿಯಾಗಿಸಿದಳು. ಬೆಚ್ಚಗೆ ರಗ್ಗುಗಳಿಂದ ಸುತ್ತಿದಳು. ಮೊಟ್ಟೆ ಲೋಳೆ ಭಾಗವನ್ನು ಎರಡುದಿನ ತಿನ್ನಿಸಿ ಮಂಜುಗಟ್ಟಿದ ದೇಹಕ್ಕೆ ಶಾಖ ಬರುವಂತೆ ಮತ್ತು ಮಾಮೂಲಿ ಸ್ಥಿತಿಗೆ ಹೊರಳುವಂತೆ ಮಾಡಿದಳು. ನಾಲ್ಕನೆ ದಿನದಷ್ಟು ಹೊತ್ತಿಗೆ ಅಪಾಯದಿಂದ ಅವನು ಪಾರಾಗಿದ್ದ. ತನಗೆ ಇಷ್ಟವಿಲ್ಲದಿದ್ದರೂ ಉರ್ಸುಲಾ ಮತ್ತು ಇತರೆ ಆಫೀಸರುಗಳ ಒತ್ತಾಯದಿಂದ, ಮತ್ತೊಂದು ವಾರ ಹಾಸಿಗೆಯಲ್ಲಿ ವಿಶ್ರಾಂತಿ ಪಡೆದ. ಆಗ ಅವನಿಗೆ, ತಾನು ಕೊಟ್ಟಿದ್ದ ಕವಿತೆಗಳನ್ನು ಸುಟ್ಟುಹಾಕಿಲ್ಲವೆಂಬ ವಿಚಾರ ತಿಳಿದುಬಂತು. "ಆತುರ ಮಾಡೋದು ಬೇಡ ಅಂತ ಸುಮ್ಮನಿದ್ದೆ" ಎಂದು ಉರ್ಸುಲಾ ವಿವರಿಸಿದಳು. ಮತ್ತೆ ಮುಂದುವರೆದು "ಆ ರಾತ್ರಿ ನಾನು ಒಲೆಹಚ್ಚಲು ಹೋದಾಗ, ಅವನ ಮೃತದೇಹವನ್ನು ಮನೆಗೆ ತರುವವರೆಗೆ ಕಾಯೋಣ ಎಂದು ನನಗೆ ನಾನೇ ಹೇಳಿಕೊಂದೆ" ಎಂದಳು. ಆರೋಗ್ಯದಲ್ಲಿ ಸುಧಾರಣೆ ಕಾಣಿಸುತ್ತಿರುವಾಗ ರೆಮೆಡಿಯೋಸ್‌ಳ ಧೂಳುತುಂಬಿದ ಬೊಂಬೆಗಳಿಂದ ಆವರಿಸಲ್ಪಟ್ಟು ಇದ್ದಾಗ ಕರ್ನಲ್ ಅರೆಲಿಯಾನೊ ಕವಿತೆಗಳನ್ನು ಓದುತ್ತ ತನ್ನ ಹಿಂದಿನ ದಿನಗಳನ್ನು ನೆನಪುಮಾಡಿಕೊಂಡ. ಮತ್ತೆ ಬರೆಯಲು ಆರಂಭಿಸಿದ. ಗಂಟೆಗಟ್ಟಲೆ, ಭವಿಷ್ಯವೆ ಇಲ್ಲಿನ ಯುದ್ಧದ ಅಚ್ಚರಿಗಳ ತುದಿಯಲ್ಲಿ

ಸಮತೋಲಿಸಿಕೊಳ್ಳುತ್ತ; ಪ್ರಾಸಬದ್ಧ, ಲಯಬದ್ಧ ಕವಿತೆಗಳಲ್ಲಿ ತನ್ನ ಸಾವಿನ ಅಂಚಿನಲ್ಲಿದ್ದಾಗಿನ ಅನುಭವಗಳನ್ನು ದಾಖಲಿಸತೊಡಗಿದ. ಅವನ ಆಲೋಚನೆಗಳು ಎಷ್ಟು ಸ್ಪಷ್ಟವಾಗತೊಡಗಿತೆಂದರೆ, ಹಿಂದನ್ನು ಮುಂದನ್ನು ವಿವೇಚಿಸಬಲ್ಲವನಾಗಿದ್ದ. ಒಂದು ರಾತ್ರಿ ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್‌ನನ್ನು ಕೇಳಿದ.

"ನನ್ನ ಹಳೆಯ ಗೆಳೆಯನೆ, ಹೇಳು ನೀನು ಯಾಕೆ ಯುದ್ಧ ಮಾಡುತ್ತಿರುವೆ?"

"ಬೇರೆ ಏನು ಕಾರಣ ಇರಲು ಸಾಧ್ಯ? ಮಹತ್ವದ ಲಿಬರಲ್ ಪಕ್ಷಕ್ಕಾಗಿ" ಎಂದು ಹೇಳಿದ ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್.

"ನೀನು ಯಾಕೆ ಯುದ್ಧ ಮಾಡುತ್ತಿರುವೆ ಎನ್ನುವುದಕ್ಕೆ ನಿನಗೆ ಕಾರಣ ಗೊತ್ತಿದೆ... ನೀನು ಅದೃಷ್ಟವಂತ!" ಆದರೆ ನನ್ನ ವಿಚಾರದಲ್ಲಿ ಹೇಳುವುದಾದರೆ, "ಈಗಷ್ಟೆ ನನಗೆ ಅರ್ಥವಾಯಿತು... ನಾನು ನನ್ನ ಅಹಂಕಾರಕ್ಕಾಗಿ ಯುದ್ಧ ಮಾಡುತ್ತಿದ್ದೇನೆ" ಎಂದು.

"ಅದು ಸರಿ ಅಲ್ಲ" ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್ ಹೇಳಿದ. ಕರ್ನಲ್ ಅರೆಲಿಯಾನೊಗೆ ಅವನ ಮಾತು ತಮಾಶೆಯಾಗಿ ಕಂಡಿತು. "ಸಹಜವಾಗಿ" "ಆದರೆ ಏನೇ ಆಗಲಿ ಯಾಕೆ ಯುದ್ಧ ಮಾಡುತ್ತಿದ್ದೇವೆ ಎಂಬುದನ್ನು ತಿಳಿಯದೆ ಮಾಡುವುದಕ್ಕಿಂತ ಇದು ಒಳ್ಳೆಯದೆ" ಎಂದು ಅವನನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಿದ. ಮತ್ತು ಒಂದು ಮುಗುಳ್ನಗೆಯೊಂದಿಗೆ,

"ಇಲ್ಲ, ನಿನ್ನ ಹಾಗೆ, ಯಾರಿಗೂ ಏನೂ ಪ್ರಯೋಜನವಿಲ್ಲದ್ದಕ್ಕಾಗಿ ಯುದ್ಧ ಮಾಡೋದು" ಎಂದ.

ಅವನಲ್ಲಿದ್ದ ದರ್ಪ, ಅವನನ್ನು ಒಳ ಪ್ರದೇಶಗಳಲ್ಲಿದ್ದ ಸಶಸ್ತ್ರ ಗುಂಪುಗಳೊಂದಿಗೆ ಬೆರೆಯುವುದನ್ನು ತಡೆದಿತ್ತು. ಆದರೆ ಪಾರ್ಟಿಯ ನಾಯಕರು ಅವನನ್ನು ದರೋಡೆಕೋರ ಎಂದು ಹೇಳಿದ್ದನ್ನು ಸರಿಪಡಿಸಿದ ಮೇಲೆ ಸರಿಯೋಯಿತು. ಅವನಿಗೆ ಗೊತ್ತಿತ್ತು, ತನ್ನಲ್ಲಿನ ನೈತಿಕ ಹಿಂಜರಿಕೆಯನ್ನು ಪಕ್ಕಕ್ಕೆ ಇರಿಸಿದ ಮೇಲೆ ಯುದ್ಧದ ಸುತ್ತಲಿನ ವಿಷವರ್ತುಲವನ್ನು ಭೇದಿಸಲು ಸಾಧ್ಯವೆಂದು ಯೋಚಿಸಿದ. ನಂತರ ಉರ್ಸುಲಾಳಿಂದ ಅವಳ ಪೈತೃಕ ಆಸ್ತಿ ಮತ್ತು ಸಾಕಷ್ಟು ಉಳಿತಾಯದ ಹಣವನ್ನು ಪಡೆಯುವಲ್ಲಿ ಯಶಸ್ವಿಯಾದ. ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್‌ನನ್ನು ಮಕಾಂಡೊದ ಸಿವಿಲ್ ಮತ್ತು ಮಿಲಿಟರಿ ನಾಯಕನೆಂದು ಘೋಷಿಸಿ ತಾನು ಒಳ ಪ್ರದೇಶಗಳಲ್ಲಿನ ಕ್ರಾಂತಿಕಾರಿ ಗುಂಪುಗಳನ್ನು ಸಂಪರ್ಕಿಸಲು ಹೊರಟ.

ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್ ಕರ್ನಲ್ ಅರೆಲಿಯಾನೊ ಬ್ಯುಂಡಿಯಾಗೆ ಬಹಳ ಹತ್ತಿರದವನಾಗಿದ್ದುದಷ್ಟೇ ಅಲ್ಲ, ಉರ್ಸುಲಾ ಕೂಡಾ ಅವನನ್ನು ತನ್ನ ಕುಟುಂಬದ ಸದಸ್ಯನಂತೆಯೆ ಸ್ವೀಕರಿಸಿದಳು. ಭಯಸ್ಥನೂ ಸಂಕೋಚ ಸ್ವಭಾವದವನೂ ಒಳ್ಳೆಯ ನಡವಳಿಕೆ ಉಳ್ಳವನೂ ಆಗಿದ್ದರೂ ಯುದ್ಧಕ್ಕೆ ಸರಿಹೊಂದುತ್ತಿದ್ದನೇ ಹೊರತು ಆಡಳಿತಕ್ಕಲ್ಲ. ಅವನ ರಾಜಕೀಯ ಸಲಹೆಗಾರರು ಅವನನ್ನು ಸೈದ್ಧಾಂತಿಕ ಗೋಜಲುಗಳಲ್ಲಿ

ಸಿಲುಕಿಸುತ್ತಿದ್ದರು. ಆದರೂ ಅವನು, ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಕನಸು ಕಾಣುತ್ತಿದ್ದ ಶಾಂತ ವಾತಾವರಣವನ್ನು ಮಕಾಂಡೊದಲ್ಲಿ ನಿರ್ಮಿಸುವಲ್ಲಿ ಯಶಸ್ವಿಯಾದ. ಇಂತಹ ಪ್ರಶಾಂತ ಪರಿಸರದಲ್ಲಿ ಚಿನ್ನದ ಮೀನುಗಳನ್ನು ಮಾರುತ್ತ ಮುಪ್ಪನ್ನು ಕಳೆಯಬೇಕೆನ್ನುವುದು ಅರೆಲಿಯಾನೋನ ಆಸೆಯಾಗಿತ್ತು.

ಕರ್ನಲ್ ಜೆರಿನೆಲ್ಡೊ ತಂದೆ ತಾಯಿಗಳ ಜೊತೆಯೇ ಇದ್ದರೂ ವಾರದಲ್ಲಿ ಒಂದೆರಡು ಬಾರಿಯಾದರೂ ಉರ್ಸುಲಾ ಮನೆಗೆ ಊಟಕ್ಕೆ ಬರುತ್ತಿದ್ದ. ಅರೆಲಿಯಾನೊ ಜೋಸ್‌ಗೆ ಶಸ್ತ್ರಾಸ್ತ್ರಗಳ ಬಳಕೆಯನ್ನು ಹೇಳಿಕೊಟ್ಟ. ಮಿಲಿಟರಿ ಪಾಠಗಳನ್ನು ಸೇನಾಠಾಣೆಗಳಲ್ಲಿ ಆರೇಳು ತಿಂಗಳು ವಾಸಿಸಲೆಂದು ಕರೆದುಕೊಂಡುಹೋದ. ಇದರಿಂದಾಗಿ ಅವನೊನ್ನ ಮನುಷ್ಯನಾಗಲಿ ಎಂಬುದು ಅವನ ಆಸೆಯಾಗಿತ್ತು. ಹಲವು ವರ್ಷಗಳ ಹಿಂದೆ, ಅವನಿನ್ನೂ ಮಗುವಿನಷ್ಟೇ ಇದ್ದಾಗ, ಜೆರಿನೆಲ್ಡೊ ಅಮರಾಂತಳಿಂದ ಪ್ರೀತಿಯನ್ನು ಬಯಸಿದ್ದ. ಆ ಸಮಯದಲ್ಲಿ ಅವಳು ಪೀತ್ರೋ ಕ್ರೆಸ್ಪಿಯ ಭ್ರಮೆಯಲ್ಲಿ ಎಷ್ಟು ಮುಳುಗಿದ್ದಳೆಂದರೆ ಅವನ ಮಾತಿಗೆ ನಕ್ಕುಬಿಟ್ಟಿದ್ದಳು. ಜೆರಿನೆಲ್ಡೊ ಮಾರ್ಕ್ವೆಜ್ ಕಾದು ನೋಡಿದ. ಒಂದು ಸಂದರ್ಭದಲ್ಲಿ, ಅವನು ಜೈಲಿನಿಂದ ಒಂದು ಪತ್ರ ಬರೆದು ತನ್ನ ತಂದೆಯ ಇನಿಷಿಯಲ್ ಇರುವಂತೆ ಒಂದು ಡಜನ್ ********* ಕರವಸ್ತ್ರಗಳನ್ನು ಕಸೂತಿ ಮಾಡಿ ಕಳಿಸಿಕೊಡಬೇಕೆಂದು ಕೇಳಿಕೊಂಡಿದ್ದ. ಅವಳಿಗೆ ಹಣವನ್ನೂ ಕಳಿಸಿದ್ದ. ಒಂದು ವಾರದ ನಂತರ ಅಮರಾಂತ ಒಂದು ಡಜನ್ ಕರವಸ್ತ್ರಗಳನ್ನು ಮತ್ತು ಹಣದೊಂದಿಗೆ ಜೈಲಿಗೆ ಬಂದಳು. ಹಿಂದೆ ನಡೆದದ್ದರ ಬಗ್ಗೆ ಮಾತಾಡುತ್ತ, ಹಲವು ಗಂಟೆಗಳನ್ನು ಕಳೆದರು. ಅವಳು ಹೋಗುವಾಗ ಅವನು "ನಾನು ಇಲ್ಲಿಂದ ಬಿಡುಗಡೆಯಾದ ಮೇಲೆ ನಿನ್ನನ್ನು ಮದುವೆಯಾಗುತ್ತೇನೆ" ಎಂದ. ಅಮರಾಂತ ನಕ್ಕುಬಿಟ್ಟಳು. ಆದರೆ ಮಕ್ಕಳಿಗೆ ಓದುಬರಹ ಹೇಳಿಕೊಡುವಾಗ, ಅವನ ಬಗ್ಗೆ ಯೋಚಿಸುತ್ತ, ಪೀತ್ರೋ ಕ್ರೆಸ್ಪಿಯ ಜೊತೆಗಿನ ಬಾಲ್ಯದ ಪ್ರೀತಿಯ ಅತಿರೇಕವನ್ನು ಯೋಚಿಸುತ್ತಿದ್ದಳು. ಶನಿವಾರದ ದಿನಗಳು ಸಂದರ್ಶಕರಿಗಾಗಿ ಜೈಲಿನಲ್ಲಿ ಪರವಾನಗಿ ಇರುತ್ತಿತ್ತು. ಅಮರಾಂತ ಜೆರಿನೆಲ್ಡೊ ಮನೆಯ ಮುಂದೆ ನಿಂತು ಅವನ ತಂದೆತಾಯಿಗಳನ್ನು ತನ್ನೊಂದಿಗೆ ಜೈಲಿಗೆ ಕರೆದೊಯ್ಯುತ್ತಿದ್ದಳು. ಇಂಥ ಶನಿವಾರಗಳಲ್ಲಿ ಒಂದು ಶನಿವಾರ, ಅಮರಾಂತಳನ್ನು ಅಡಿಗೆ ಮನೆಯಲ್ಲಿ ನೋಡಿ ಆಶ್ಚರ್ಯಪಟ್ಟಳು. ಓವೆನ್‌ನಿಂದ ಹೊರಬರುವ ಬಿಸ್ಕತ್ತುಗಳಿಗಾಗಿ ಕಾಯುತ್ತಿದ್ದಳು. ಅವನ್ನು ಅವನಿಗಾಗಿ ತೆಗೆದುಕೊಂಡು ಹೋಗಬೇಕಿತ್ತು.

"ಅವನನ್ನು ಮದುವೆಯಾಗು. ಅಂಥ ಹುಡುಗ ಸಿಗೋದು ಬಹಳ ಕಷ್ಟ" ಎಂದಳು ಉರ್ಸುಲಾ.

ಅಮರಾಂತ ಅಸಂತೋಷವನ್ನು ವ್ಯಕ್ತಪಡಿಸಿದಳು.

"ಗಂಡಸರ ಬೇಟೆಗೆ ಅಲೆದಾಡಬೇಕಾದ ಅಗತ್ಯ ನನಗಿಲ್ಲ".... "ಈ ಬಿಸ್ಕತ್ತುಗಳನ್ನು, ಅವನಿಗಾಗಿ ತೆಗೆದುಕೊಂಡು ಹೋಗ್ತಿದ್ದೀನಿ. ಯಾಕೇಂದ್ರೆ ನಾಳೇನೊ ನಾಳಿದ್ದೊ ಹೇಗೂ ಅವನನ್ನು ಗುಂಡಿಕ್ಕಿ ಕೊಲ್ಲುತ್ತಾರೆ. ಅದಕ್ಕೆ ಪಾಪ! ಅಂತ ಅನಿಸಿ ತಗೊಂಡು ಹೋಗ್ತಿದ್ದೀನಿ" ಎಂದು ಉತ್ತರಿಸಿದಳು.

ಯೋಚನೆ ಮಾಡಿ ಅವಳು ಹೇಳಿದ ಮಾತಾಗಿರದಿದ್ದರೂ, ಅದೇ ಹೊತ್ತಿನಲ್ಲಿ ಸರಕಾರ, ಕ್ರಾಂತಿ ಪಡೆಗಳು ರಿಯೊಹಚಾವನ್ನು ವಶಕ್ಕೆ ಕೊಡದಿದ್ದರೆ ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್‌ನನ್ನು ಗುಂಡಿಟ್ಟು ಕೊಲ್ಲುವುದಾಗಿ ಘೋಷಿಸಿತು. ಇದರಿಂದ ಭೇಟಿಯ ಅವಕಾಶಗಳು ತಪ್ಪಿಹೋದವು. ತನ್ನನ್ನು ತಾನು ಕೋಣೆಯಲ್ಲಿ ಬಂಧಿಸಿಕೊಂಡು ಅಳತೊಡಗಿದಳು. ರೆಮೆಡಿಯೋಸ್ ಸಾವಿನ ಸಂದರ್ಭದಲ್ಲಿ ಪಾಪ ಪ್ರಜ್ಞೆಯಿಂದ ಅನುಭವಿಸಿದ ರೀತಿಯಲ್ಲಿಯೇ ಈಗಲೂ ಮಾನಸಿಕ ಹಿಂಸೆ ಅನುಭವಿಸಿದಳು. ಹಿಂದು ಮುಂದು ಆಲೋಚಿಸದೆ ಥಟ್ಟನೆ ಆಡಿದ ಬೇಜವಾಬ್ದಾರಿ ಮಾತುಗಳೇ ಇದಕ್ಕೆ ಕಾರಣವೇನೋ ಎನಿಸಿತು. ಅವಳ ತಾಯಿ ಅವಳನ್ನು ಸಮಾಧಾನಪಡಿಸಿದಳು. ಅರೆಲಿಯಾನೊ ಬ್ಯುಂಡಿಯಾ ಅವನ ಮರಣದಂಡನೆ ತಪ್ಪಿಸಲು ಏನಾದರೂ ಉಪಾಯ ಮಾಡುತ್ತಾನೆಂದು ಹೇಳಿದ್ದಲ್ಲದೆ, ಒಮ್ಮೆ ಯುದ್ಧ ಮುಗಿದರೆ ತಾನೇ ಸ್ವತಃ ಜೆರಿನೆಲ್ಡೊ ಮಾರ್ಕ್ವೆಜ್‌ನನ್ನು ಸೆಳೆದುಕೊಳ್ಳುವುದಾಗಿ ವಾಗ್ದಾನ ಮಾಡಿದಳು. ಊಹಿಸಿದ ಸಮಯಕ್ಕಿಂತ ಮೊದಲೇ ತಾನು ಕೊಟ್ಟ ಮಾತನ್ನು ಪೂರೈಸಿದಳು. ಜೆರಿನೆಲ್ಡೊ ಮಾರ್ಕ್ವೆಜ್ ಮನೆಗೆ ಹಿಂತಿರುಗಿದಾಗ ವಹಿಸಿಕೊಂಡ ಹೊಸ ಮಿಲಿಟರಿ ಅಧಿಕಾರ ಮತ್ತು ಸಿವಿಲ್ ಅಧಿಕಾರಗಳ ಗಾಂಭೀರ್ಯದೊಂದಿಗಿದ್ದ ನಾಯಕನನ್ನು ಉರ್ಸುಲಾ ಮಗನಂತೆ ಬರಮಾಡಿಕೊಂಡಳು. ಅದೂ ಇದೂ ಹೊಗಳಿಕೆ ಮಾತುಗಳಿಂದ ಅಲ್ಲಿ ಉಳಿಸಿಕೊಳ್ಳಲು ಪ್ರಯತ್ನಿಸಿದಳು. ಅಮರಾಂತಳನ್ನು ಮದುವೆಯಾಗುವ ವಿಚಾರ ಅವನಿಗೆ ನೆನಪಿರುವಂತಾಗಲಿ ಎಂದು ದೇವರನ್ನು ಪ್ರಾರ್ಥಿಸಿದಳು. ಅವಳ ಪ್ರಾರ್ಥನೆಗೆ ಫಲ ದೊರೆಯಿತು. ಊಟಕ್ಕೆ ಬರುತ್ತಿದ್ದ ದಿನಗಳಲ್ಲಿ ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್ ಬೆಗೊನಿಯಾಗಳಿದ್ದ ವರಾಂಡದಲ್ಲಿ ಅಡ್ಡಾಡುತ್ತಾ, ಅಮರಾಂತಳೊಂದಿಗೆ ಚೈನೀಸ್ ಚೆಕ್ಕರ್ ಆಡುತ್ತಾ ಕಳೆಯುತ್ತಿದ್ದ. ಅವರಿಗಾಗಿ ಉರ್ಸುಲಾ ಕಾಫಿ ಹಾಲು, ಬಿಸ್ಕತ್ತುಗಳನ್ನು ತರುತ್ತಿದ್ದಳು. ಅವರಿಗೆ ಅಡ್ಡಿಯಾಗದಿರಲಿ ಎಂದು ಮಕ್ಕಳನ್ನು ದೂರಕ್ಕೆ ಕರೆದೊಯ್ಯುತ್ತಿದ್ದಳು. ಪ್ರಾಯದ ಭಾವನೆಗಳನ್ನು ಎಚ್ಚರಿಸಲು ಅಮರಾಂತ ಶತ ಪ್ರಯತ್ನ ಮಾಡುತ್ತಿದ್ದಳು. ಹತ್ತಿಕ್ಕಲಾಗದ ಭಾವೋತ್ಕಟತೆಯೊಂದಿಗೆ ಅವನು ಬರುತ್ತಿದ್ದ ಊಟದ ದಿನಗಳಿಗೆ, ಚೈನೀಸ್ ಚೆಕ್ಕರ್ ಆಟದ ಮಧ್ಯಾಹ್ನಗಳಿಗೆ ಎದುರು ನೋಡುತ್ತಿದ್ದಳು. ಯೋಧನ ಸಹವಾಸದಲ್ಲಿ ಸಮಯ ಸರಿಯಿತು. ಅದುರುವ ಬೆರಳುಗಳಿಂದ ಕಾಯಿಗಳನ್ನು ಸರಿಸುತ್ತಲೇ ಕಾಲ ಸರಿದುಹೋಯಿತು. ಆದರೆ ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್ ಅವಳನ್ನು ಮದುವೆಯಾಗುವ ಇಚ್ಛೆಯನ್ನು ಮತ್ತೆ ಹೇಳಿದಾಗ, ಅವನನ್ನು ತಿರಸ್ಕರಿಸಿದಳು.

"ನಾನು ಯಾರನ್ನೂ ಮದುವೆಯಾಗುವುದಿಲ್ಲ... ಅದರಲ್ಲೂ ನಿನ್ನನ್ನು, ಅರೆಲಿಯಾನೋನನ್ನು ನೀನು ಎಷ್ಟು ಪ್ರೀತಿಸುತ್ತಿರುವೆಯೆಂದರೆ, ಅವನನ್ನು ಮದುವೆಯಾಗುವುದು ಸಾಧ್ಯವಿಲ್ಲದ್ದಕ್ಕಾಗಿ ನನ್ನನ್ನು ಮದುವೆಯಾಗಬೇಕೆಂದಿರುವಿ" – ಎಂದಳು.

ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್ ಬಹಳ ಸಮಾಧಾನದ ಮನುಷ್ಯ "ನಾನು ಒತ್ತಾಯಿಸುತ್ತಲೇ ಇರುತ್ತೇನೆ... ಇವತ್ತಲ್ಲ ನಾಳೆಯಾದರೂ ನಿನ್ನನ್ನು ಒಪ್ಪಿಸಿಯೇ

ಒಪ್ಪಿಸುತ್ತೇನೆ" ಎಂದು ತಿಳಿಸಿದ. ಆತ ಮನೆಗೆ ಮಾಮೂಲಿನಂತೆ ಬಂದು ಹೋಗುತ್ತಿದ್ದ. ತನ್ನ ಮಲಗುವ ಕೋಣೆಯ ಬಾಗಿಲು ಹಾಕಿಕೊಂಡು ಕಾಣದಂತೆ ಕಣ್ಣೀರಿಡುತ್ತಾ ಅವನ ಧ್ವನಿ ಕೇಳಿಸಿಕೊಳ್ಳದಂತೆ ಕಿವಿ ಮುಚ್ಚಿಕೊಂಡಳು. ಉರ್ಸುಲಾಗೆ ಯುದ್ಧ ಕುರಿತಾದ ತಾಜಾ ಸುದ್ದಿಯನ್ನು ಹೇಳುತ್ತಿದ್ದಾಗ, ಅವನನ್ನು ನೋಡಲೇಬೇಕೆಂದು ಮನಸ್ಸು ತುಡಿಯುತ್ತಿದ್ದರೂ ಅದನ್ನು ಹತ್ತಿಕ್ಕಿಕೊಂಡು, ಭೇಟಿಯಾಗುವುದನ್ನು ತಡೆದುಕೊಂಡಳು.

ಆ ಸಮಯದಲ್ಲಿ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಎರಡು ವಾರಕ್ಕೊಮ್ಮೆ ಮಕಾಂಡೊಗೆ ವಿಸ್ತೃತವಾದ ವರದಿಯನ್ನು ಕಳಿಸುತ್ತಿದ್ದ. ಆದರೆ, ಅವನು ಅಲ್ಲಿಂದ ಹೋದ ಎಂಟು ತಿಂಗಳ ನಂತರ ಒಂದೇ ಒಂದು ಸಲ ಉರ್ಸುಲಾಗೆ ಬರೆದಿದ್ದ. ವಿಶೇಷವಾದ ಸಂದೇಶವಾಹಕನ ಕೈಲಿ, ಒಂದು ಸೀಲು ಮಾಡಿದ ಲಕೋಟೆಯನ್ನು ಕಳಿಸಿದ್ದ. ಅದರೊಳಗೆ ಕರ್ನಲ್‌ನ ಮುದ್ದಾದ ಕೈ ಬರಹದಲ್ಲಿ, 'ಅಪ್ಪನನ್ನು ಜಾಗರೂಕತೆಯಿಂದ ನೋಡಿಕೊ ಯಾಕೆಂದರೆ ಅವನು ಸಾಯುವವನಿದ್ದಾನೆ' ಎಂದು ಬರೆದ ಹಾಳೆಯನ್ನು ಇರಿಸಿದ್ದ. ಉರ್ಸುಲಾಗೆ ಗಾಭರಿಯಾಯಿತು. ಅವಳಿಗೆ ತಿಳಿದಿತ್ತು ಅರೆಲಿಯಾನೊ ಹೇಳಿದ್ದು, ಅವನಿಗೆ ತಿಳಿದಿರುವುದರಿಂದ, ಹೇಳಿದಂತೆಯೇ ಆಗುತ್ತದೆ ಎಂದು. ಜೋಸ್ ಆರ್ಕಾಡಿಯೊ ಬ್ಯುಂಡಿಯಾನನ್ನು ಅವನ ಮಲಗುವ ಕೋಣೆಗೆ ಸೇರಿಸಲು ಅವರೆಲ್ಲರ ಸಹಾಯ ತೆಗೆದುಕೊಳ್ಳಬೇಕಾಯಿತು. ಅವನು ಬಹಳ ಭಾರಿಯಾಗಿಬಿಟ್ಟಿದ್ದ. ಬಹಳ ಕಾಲದಿಂದ ಒಂದೇ ಸಮನೆ ಮರದ ಕೆಳಗೆ ಕುಳಿತಿರುತ್ತಿದ್ದುದರಿಂದ, ತೂಕ ಹೆಚ್ಚಿಸಿಕೊಳ್ಳುವ ಪ್ರಕ್ರಿಯೆಗೆ ಎಷ್ಟು ಒಳಗಾಗಿದ್ದನೆಂದರೆ, ಏಳು ಮಂದಿಯ ಕೈಲೂ ಎತ್ತಲು ಸಾಧ್ಯವಾಗದೆ ಕೋಣೆಯೊಳಕ್ಕೆ ಎಳೆದುಕೊಂಡು ಹೋಗಬೇಕಾಯಿತು. ಎಳೆ ನಾಯಿಕೊಡೆಗಳ ವಾಸನೆ, ಹಳೆ ಮತ್ತು ಹೊರಗಿನ ಸಾಂದ್ರತೆಯ ಗಾಳಿ, ಮಳೆ, ಬಿಸಿಲಿನಿಂದಾಗಿ ಮುದುಕನ ಉಸಿರಾಟದಿಂದ ತುಂಬಿದ್ದ ಮಲಗುವ ಕೋಣೆಯಲ್ಲಿನ ಗಾಳಿಯೊಂದಿಗೆ ಸೇರಿಕೊಂಡಿತು. ಮಾರನೆ ದಿನ ಅವನು ಹಾಸಿಗೆ ಮೇಲೆ ಇರಲಿಲ್ಲ. ಅವನ ಶಕ್ತಿ ಕುಂದಿರದಿದ್ದರೂ ಅವನಿಗೆ ತಡೆದುಕೊಳ್ಳುವುದು ಸಾಧ್ಯವಿರಲಿಲ್ಲ. ಅವನಿಗೆ ಎಲ್ಲವೂ ಒಂದೇ ಆಗಿತ್ತು. ಅವನು ಚೆಸ್ಟ್‌ನಟ್ ಮರದ ಬಳಿಗೆ ಹೋಗಿದ್ದಾನೆಂದರೆ, ಹೋಗಬೇಕೆಂಬ ಬಯಕೆಯಿಂದಲ್ಲದೆ, ಅಭ್ಯಾಸದಿಂದ ಹೋಗಿರುತ್ತಾನೆ. ಉರ್ಸುಲಾ ಅವನನ್ನು ಚೆನ್ನಾಗಿ ನೋಡಿಕೊಂಡಳು, ತಿನ್ನಿಸುತ್ತಿದ್ದಳು. ಅರೆಲಿಯಾನೊ ಬಗ್ಗೆ ಸುದ್ದಿ ತಿಳಿಸುತ್ತಿದ್ದಳು. ವಾಸ್ತವವಾಗಿ ಬಹಳ ಕಾಲದವರೆಗೆ ಸಂಪರ್ಕವಿರಿಸಿಕೊಂಡಿದ್ದ ಒಬ್ಬನೇ ಒಬ್ಬ ವ್ಯಕ್ತಿಯೆಂದರೆ ಫ್ರುಡೆನ್ಷಿಯೊ ಆಗ್ವಿಲಾರ್. ಸಾಯುತ್ತೇನೆಂಬ ಕಲ್ಪನೆಯಿಂದ ತತ್ತರಿಸಿದ್ದ ಅವನ ಜೊತೆ ಮಾತನಾಡಲು ಫ್ರುಡೆನ್ಷಿಯೊ ಆಗ್ವಿಲಾರ್ ದಿನಕ್ಕೆರಡು ಬಾರಿ ಬರುತ್ತಿದ್ದ. ಅವರು ಹುಂಜಗಳ ಕಾಳಗದ ಬಗ್ಗೆ ಮಾತನಾಡುತ್ತಿದ್ದರು. ಹುಂಜಗಳ ಪಾರಂ ಅನ್ನು ಗೆಲುವಿನ ಸಂಭ್ರಮಕ್ಕಾಗಿ ಮತ್ತು ಬೇಸರದ ಭಾನುವಾರಗಳೆಂದು ಏನಾದರೂ ಮಾಡುವ ಉದ್ದೇಶಕ್ಕಾಗಿ, ಮಾಡುವುದರ ಬಗ್ಗೆ ಒಬ್ಬರಿಗೊಬ್ಬರು ಮಾತುಕೊಟ್ಟುಕೊಂಡರು. ಫ್ರುಡೆನ್ಷಿಯೊ ಆಗ್ವಿಲಾರ್‌ನೇ ವಾಸ್ತವವಾಗಿ ಅವನನ್ನು ಶುಭ್ರವಾಗಿ ಇಡುತ್ತಿದ್ದ ಊಟ ಮಾಡಿಸುತ್ತಿದ್ದ. ಯುದ್ಧದಲ್ಲಿ ಕರ್ನಲ್ ಆಗಿದ್ದ ಅರೆಲಿಯಾನೋನ ಅಪರಿಚಿತ ವ್ಯಕ್ತಿಯ ಬಗ್ಗೆ ಅದ್ಭುತವಾದ ಸುದ್ದಿಗಳನ್ನು ತಿಳಿಸುತ್ತಿದ್ದ. ಜೋಸ್ ಆರ್ಕಾಡಿಯೊ ಬ್ಯುಂಡಿಯಾ ತಾನೊಬ್ಬನೇ ಇದ್ದಾಗ ಕೊನೆಯಿರದ ರೂಮುಗಳ

ಬಗ್ಗೆ ಕನಸುಕಾಣುತ್ತಿದ್ದ ಅಲ್ಲದೆ ತಾನು ಹಾಸಿಗೆಯಿಂದ ಎದ್ದು ಬಾಗಿಲುತೆಗೆದು ಒಂದೇ ಹಾಸಿಗೆಯಿದ್ದ, ಅದೇ ಕಬ್ಬಿಣದ ಹಿಂಬದಿಯಿದ್ದ, ಅದೇ ಹಗ್ಗದ ಕುರ್ಚಿಯಿದ್ದ, ಹಿಂಬದಿಯ ಗೋಡೆ ಮೇಲೆ ವರ್ಜಿನ್ ಆಫ್ ಹೆಲ್ಪ್ ಚಿತ್ರವಿದ್ದ, ಒಂದೇ ಥರದ ಎರಡು ರೂಮುಗಳ ಕನಸು ಕಂಡ. ಆ ರೂಮಿನಿಂದ ಮತ್ತೊಂದು ರೂಮಿಗೆ, ಅದರಿಂದ ಮತ್ತೊಂದು ರೂಮಿಗೆ ಮತ್ತೆ ಅದರಿಂದ ಇನ್ನೊಂದು ರೂಮಿಗೆ ಕೊನೆಯಿರದ ರೂಮುಗಳಿಗೆ ಹೋಗುತ್ತಲೇ ಇದ್ದ. ರೂಮಿನಿಂದ ರೂಮಿಗೆ, ಸಮಾಂತರ ಕನ್ನಡಿಗಳಿದ್ದ ಗ್ಯಾಲರಿಗೆ ಹೋಗುವಾಗಿನಷ್ಟೇ ಹೋಗುವುದನ್ನು ಇಷ್ಟಪಡುತ್ತಿದ್ದ. ಫ್ರುಡೆನ್ಸಿಯೊ ಆಗ್ವಿಲಾರ್ ಅವನನ್ನು ಭುಜಮುಟ್ಟಿ ಸ್ಪರ್ಶಿಸುವವರೆಗೂ ಹೀಗೆ ಹೋಗುತ್ತಲೇ ಇದ್ದ. ನಂತರ ಅವನು ಬಂದ ಹಾಗೆ, ಮರಳಿ ರೂಮಿನಿಂದ ರೂಮುಗಳನ್ನು ಹಾದು ಫ್ರುಡೆನ್ಸಿಯೊ ಆಗ್ವಿಲಾರ್ ಇದ್ದ ವಾಸ್ತವದ ರೂಮಿಗೆ ಬರುತ್ತಿದ್ದ. ರೂಮಿಗೆ ಬರುತ್ತಿದ್ದ. ಆದರೆ ಒಂದು ರಾತ್ರಿ ಹಾಸಿಗೆಗೆ ಅವನನ್ನು ಮತ್ತೆ ಎರಡು ವಾರಗಳ ನಂತರ ಕರೆದೊಯ್ದಾಗ ಮಧ್ಯದ ರೂಮಿನಲ್ಲಿ ಫ್ರುಡೆನ್ಸಿಯೊ ಆಗ್ವಿಲಾರ್ ಅವನ ಭುಜವನ್ನು ಸ್ಪರ್ಷಿಸಿದಾಗ, ಅವನು ಅದೇ ವಾಸ್ತವದ ರೂಮೆಂದು ಭಾವಿಸಿ ಶಾಶ್ವತವಾಗಿ ಅಲ್ಲಿಯೇ ಇದ್ದುಬಿಟ್ಟ. ಮರುದಿನ ಬೆಳಿಗ್ಗೆ ಉರ್ಸುಲಾ ಅವನಿಗೆ ಬೆಳಗಿನ ಉಪಹಾರವನ್ನು ತೆಗೆದುಕೊಂಡು ಬರುತ್ತಿದ್ದಾಗ, ಹಜಾರದಿಂದ ಒಬ್ಬ ವ್ಯಕ್ತಿ ಬರುತ್ತಿದ್ದುದನ್ನು ನೋಡಿದಳು. ಆತ ಕುಳ್ಳಗಿದ್ದ, ಕಪ್ಪು ಸೂಟು, ಕಪ್ಪು ಹ್ಯಾಟು ಧರಿಸಿದ್ದ, ಹ್ಯಾಟನ್ನು ಕಣ್ಣಿನ ಕಡೆಗೆ ಎಳೆದುಕೊಂಡಿದ್ದ. 'ಓ ದೇವರೆ" 'ಅವನು ಮೆಲ್‌ಕಿಯಾಡ್ಸ್ ಎಂಬುದನ್ನು ಖಂಡಿತವಾಗಿ ಪ್ರಮಾಣಮಾಡಿ ಹೇಳಬಲ್ಲೆ' ಎಂದು ಯೋಚಿಸಿದಳು. ಆದರೆ ಅವನು ವಿಸಿಟಾಸಿಯೋನ್‌ನ ಸೋದರ ಕತಾವುರೆ ಆಗಿದ್ದ. ನಿದ್ದೆಯಿಲ್ಲದ ರೋಗದಿಂದ ನರಳುತ್ತಿದ್ದಾಗ ಮನೆಯಿಂದ ಓಡಿಹೋಗಿದ್ದ. ನಂತರ ಅವನ ಸುದ್ದಿಯೇ ಇರಲಿಲ್ಲ. ವಿಸಿಟಾಸಿಯೋನ್ ಅವನು ಬಂದದ್ದೇಕೆಂದು ಕೇಳಿದಳು. ಅವನು ಅವನದೇ ರೀತಿಯಲ್ಲಿ ಉತ್ತರಿಸಿದ. "ನಾನು ರಾಜನ ಅಪರಕರ್ಮ ಮಾಡಲೆಂದು ಬಂದಿದ್ದೀನಿ" ಎಂದ.

ನಂತರ ಅವರು ಜೋಸ್ ಆರ್ಕಾಡಿಯೊ ಬ್ಯುಂಡಿಯಾ ಇದ್ದ ರೂಮಿಗೆ ಬಂದು ಅವನನ್ನು ಅಲುಗಾಡಿಸಿದರು, ಕಿವಿಯಲ್ಲಿ ಗಟ್ಟಿಯಾಗಿ ಕೂಗಿದರು. ಮೂಗಿನ ಹೊಳ್ಳೆಗಳ ಮುಂದೆ ಕನ್ನಡಿ ಇಟ್ಟರು, ಆದರೂ ಅವನು ಏಳಲೇ ಇಲ್ಲ. ಸ್ವಲ್ಪ ಹೊತ್ತಿನ ನಂತರ, ಕಾರ್ಪೆಂಟರ್ ಶವಪೆಟ್ಟಿಗೆಗೆ ಅಳತೆಗಳನ್ನು ತೆಗೆದುಕೊಳ್ಳುತ್ತಿರುವಾಗ, ಕಿಟಕಿಯೊಳಗಿಂದ ಹಳದಿ ಹೂವಿನ ಮಳೆ ಆಗುತ್ತಿರುವುದು ಕಾಣಿಸಿತು. ಸಣ್ಣ ಬಿರುಗಾಳಿಯೊಂದಿಗೆ ಇಡೀ ರಾತ್ರಿ ಬೀಳುತ್ತಿದ್ದ ಆ ಮಳೆ, ಛಾವಣಿಗಳನ್ನು ಆವರಿಸಿತು. ಮನೆಬಾಗಿಲುಗಳಿಗೆ ಅಡ್ಡವಾಯಿತು. ಹೊರಗೆ ಮಲಗಿದ್ದ ಪ್ರಾಣಿಗಳನ್ನು ಸಂಪೂರ್ಣವಾಗಿ ಮುಚ್ಚಿಹಾಕಿತು. ಬೆಳಿಗ್ಗೆ ನೋಡಿದರೆ ಎಷ್ಟೊಂದು ಹೂ ಬಿದ್ದಿದೆಯೆಂದರೆ ರಸ್ತೆಗಳಲ್ಲಿ ಹೂವಿನ ಹಾಸಿಗೆ ಹಾಸಿದಂತಿತ್ತು. ಅದನ್ನೆಲ್ಲ ಅವರು ಸಲಿಕೆ, ಕುಂಟೆಗಳಿಂದ ಎತ್ತಿಹಾಕಿ ಶವಯಾತ್ರೆಗೆ ದಾರಿ ಮಾಡಿಕೊಳ್ಳಬೇಕಾಯಿತು.

○

8

ತೂಗಾಡುವ ಕುರ್ಚಿಯಲ್ಲಿ ಕುಳಿತು, ಒಂದೇ ಸಮನೆ ಮಾಡುತ್ತಿದ್ದ ಕೆಲಸ ಬಿಟ್ಟು ಅಮರಾಂತ, ಅರೆಲಿಯಾನೊ ಜೋಸ್ ಮೊದಲ ಬಾರಿಗೆ ಷೇವ್ ಮಾಡಿಕೊಳ್ಳುವ ಪ್ರಯತ್ನದಲ್ಲಿ ಇದ್ದುದನ್ನು ನೋಡುತ್ತಿದ್ದಳು. ಅವನ ಮುಖದ ಮೇಲಿನ ಮೊಡವೆಗಳಿಂದ ರಕ್ತ ಬರುತ್ತಿತ್ತು. ಮೀಸೆಯನ್ನು ಸರಿಯಾದ ಆಕಾರಕ್ಕೆ ತಿದ್ದುವ ಪ್ರಯತ್ನದಲ್ಲಿ ಮೇಲ್ತುಟಿಯನ್ನು ಕತ್ತರಿಸಿಕೊಂಡಿದ್ದ. ಇಷ್ಟೆಲ್ಲ ಆದ ಮೇಲೂ ಅವನು ಮೊದಲು ಇದ್ದ ಹಾಗೆಯೇ ಕಾಣಿಸುತ್ತಿದ್ದ. ಆದರೆ ಅಷ್ಟು ಶ್ರಮದಾಯಕ ಪ್ರಯತ್ನವನ್ನು ನೋಡಿದ ಮೇಲೆ ಅವನು ದೊಡ್ಡವನಾಗುತ್ತಿದ್ದಾನೆ ಎನ್ನುವ ಭಾವನೆಯುಂಟಾಯಿತು ಅಮರಾಂತಳಿಗೆ.

"ನಿನ್ನ ವಯಸ್ಸಿನಲ್ಲಿ ಅರೆಲಿಯಾನೊ ಹೇಗಿದ್ದನೊ ನೀನು ಹಾಗೆಯೇ ಇದ್ದಿ. ಈಗ ನೀನು ಗಂಡಸು" ಎಂದಳು.

ಅವನು ಹಾಗಾದದ್ದು ಬಹಳ ಹಿಂದೆಯೆ! ಆದರೆ ಅಮರಾಂತ ಅವನನ್ನು ಇನ್ನೂ ಮಗುವೆಂದೇ ತಿಳಿದು ಬಾತ್ ರೂಮಿನಲ್ಲಿ ಅವನೆದುರೆ ಬಟ್ಟೆ ಕಳಚುತ್ತಿದ್ದಳು. ಪಿಲಾರ್ ತರ್ನಿರಾ ಅವನನ್ನು ಬೆಳೆಸುವ ಹೊಣೆ ಅವಳಿಗೆ ಒಪ್ಪಿಸಿದಾಗಿನಿಂದ ಹೇಗೆ ಮಾಡುತ್ತಿದ್ದಳೊ ಹಾಗೆಯೇ ಅವನೆದುರು ನಡೆದುಕೊಳ್ಳುತ್ತಿದ್ದಳು. ಮೊಟ್ಟಮೊದಲ ಸಲ ಅವಳನ್ನು ನೋಡಿದಾಗ ಅವನು ಆಕರ್ಷಿತನಾದದ್ದು

ಸ್ತನಗಳ ನಡುವಿನ ಕಣಿವೆ ಭಾಗದಿಂದ. ಅವನು ಎಷ್ಟು ಮುಗ್ಧನಾಗಿದ್ದನೆಂದರೆ, ಅವಳನ್ನು ಅಲ್ಲಿ ಏನಾಗಿದೆ ಎಂದು ಕೇಳಿದ. ಅಮರಾಂತ ತನ್ನ ಸ್ತನಗಳನ್ನು ಬೆರಳಿನಿಂದ ಒತ್ತಿ ಅವು ತುಂಡಾಗಿವೆ ಎಂದಳು. ಕೆಲ ಸಮಯದ ನಂತರ ಪೀತ್ರೋ ಕ್ರೆಸ್ಪಿಯ ಆತ್ಮಹತ್ಯೆಯ ಆಘಾತದಿಂದ ಸುಧಾರಿಸಿಕೊಂಡಾಗ ಅರೆಲಿಯಾನೊ ಜೊತೆ ಸ್ನಾನ ಮಾಡುತ್ತಿದ್ದಾಗ ಅವನು ಅವುಗಳ ಕಡೆ ಮತ್ತು ಆಳವಾದ ಭಾಗದ ಕಡೆ ಗಮನ ಕೊಡಲಿಲ್ಲವಾದರೂ, ಕಂದು ಬಣ್ಣದ ತೊಟ್ಟಿನಿಂದ ಕೂಡಿದ ರೋಮಾಂಚಕವೆನಿಸುವ ರೀತಿಯ ಸ್ತನಗಳನ್ನು ನೋಡುತ್ತಿದ್ದಂತೆ ಒಂದು ಬಗೆಯ ಕಂಪನಕ್ಕೆ ಒಳಗಾದ. ಅವಳನ್ನು ಗಮನಿಸುತ್ತಲೇ ಇದ್ದ. ಅಂಗುಲಂಗುಲವಾಗಿ ಸಾಮಿಪ್ಯದಿಂದ ಉಂಟಾಗುತ್ತಿದ್ದ ರೋಮಾಂಚನವನ್ನು ಅನುಭವಿಸಿದ. ನೀರಿನ ಸ್ಪರ್ಷಕ್ಕೆ ಅವಳ ಚರ್ಮಕ್ಕೆ ಜುಮ್ಮೆನಿಸುತ್ತಿದ್ದುದನ್ನು ನೆನಪಿಸಿಕೊಂಡ. ಸಣ್ಣ ಮಗುವಾಗಿದ್ದಾಗಿನಿಂದಲೂ, ತನ್ನ ಹಾಸಿಗೆಯನ್ನು ಬಿಟ್ಟು, ಕತ್ತಲಿನ ಹೆದರಿಕೆಯಿಂದ ಪಾರಾಗಲು ಅಮರಾಂತಳ ಹಾಸಿಗೆಗೆ ಸೇರಿಬಿಡುವುದು ಅವನ ವಾಡಿಕೆಯಾಗಿತ್ತು. ಆದರೆ ತನ್ನ ನಗ್ನತೆಯ ಪ್ರಜ್ಞೆಮಾಡುತ್ತಿದ್ದಂತೆ, ಅವನು ಹೋಗಿ ಸೊಳ್ಳೆ ಪರದೆ ಒಳಗೆ ಸೇರಿಕೊಳ್ಳುತ್ತಿದ್ದುದು ಕತ್ತಲೆಯ ಭಯದಿಂದಲ್ಲ ಬೆಳಗಿನ ಅವಳ ಬೆಚ್ಚನೆಯ ಉಸಿರಾಟದ ಅನುಭವಕ್ಕೆ. ಒಂದು ದಿನ ಮುಂಬೆಳಗಿನಲ್ಲಿ, ಅಮರಾಂತ ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್‌ನನ್ನು ಮದುವೆಯಾಗಲು ನಿರಾಕರಿಸಿದ್ದ ಸಮಯದಲ್ಲಿ ಅರೆಲಿಯಾನೊ ಜೋಸ್ ತನಗೆ ಉಸಿರಾಟ ಕಷ್ಟವಾಗುತ್ತಿದೆ ಎನ್ನುವ ಅರಿವಿನೊಂದಿಗೆ ಎದ್ದ. ಆಗ ಅವನಿಗೆ ಅಮರಾಂತ ತನ್ನ ಹೊಟ್ಟೆಯ ಮೇಲೆ ಬೆಚ್ಚನೆಯ ಕಂಬಳಿ ಹುಳುಗಳಂತೆ ಹುಡುಕಾಡುತ್ತಿದ್ದುದರ ಅನುಭವವಾಯಿತು. ನಿದ್ದೆ ಮಾಡುವವನಂತೆ ನಟಿಸುತ್ತ ಅವಳ ಹುಡುಕಾಟ ಸುಲಭವಾಗಲಿ ಎಂದು ಪಕ್ಕ ಹೊರಳಿದ. ಕಪ್ಪು ಬ್ಯಾಂಡೇಜ್ ಇಲ್ಲದ ಕೈ ತನ್ನ ಆತಂಕದ ಕಡಲಿನಲ್ಲಿ ಮೀನೊಂದು ಮುಳುಕು ಹಾಕುತ್ತಿದ್ದಂತೆ ಭಾಸವಾಯಿತು. ತಮ್ಮಿಬ್ಬರಿಗೂ ಗೊತ್ತಿರುವುದನ್ನು ನಿರ್ಲಕ್ಷಿಸುತ್ತ, ಒಬ್ಬರಿಗೆ ಗೊತ್ತಿರುವುದು ಮತ್ತೊಬ್ಬರಿಗೂ ಗೊತ್ತಿದೆ ಎಂಬ ತಿಳಿವಳಿಕೆಯಿಂದ, ಆ ರಾತ್ರಿಯಿಂದ ಇಬ್ಬರೂ ಒಬ್ಬರನ್ನೊಬ್ಬರು ಅತಿಕ್ರಮಿಸುವ ಕ್ರಿಯೆಯಲ್ಲಿ ಒಟ್ಟಾಗಿಯೇ ಇರುತ್ತಿದ್ದರು. ಅರೆಲಿಯಾನೊ ಜೋಸ್‌ಗೆ ಪಡಸಾಲೆಯ ಗಡಿಯಾರ ಹನ್ನೆರಡು ಗಂಟೆ ಬಾರಿಸುವವರೆಗೂ ನಿದ್ದೆ ಹತ್ತುತ್ತಿರಲಿಲ್ಲ. ಪ್ರಬುದ್ಧ ಹೆಣ್ಣಾದ ಅವಳಿಗೂ, ಅವನು ನಿದ್ದೆಯಲ್ಲಿ ತನ್ನ ಸೊಳ್ಳೆ ಪರದೆಯೊಳಗೆ ನುಸುಳಿಬರುವವರೆಗೂ ಸಮಾಧಾನವಿರುತ್ತಿರಲಿಲ್ಲ. ನಂತರ ಇಬ್ಬರೂ ಒಟ್ಟಿಗೆ ಬೆತ್ತಲೆಯಾಗಿ ಮಲಗಿ ರತಿಕ್ರೀಡೆಯಲ್ಲಿ ಪರಸ್ಪರ ಸಂತೃಪ್ತಿ ಪಡೆಯುತ್ತಿದ್ದುದೇ ಅಲ್ಲದೆ, ಇಬ್ಬರೂ ಒಬ್ಬರನ್ನೊಬ್ಬರು ಅಟ್ಟಿಕೊಂಡು ಮನೆಯಲ್ಲೆಲ್ಲಾ ಓಡಾಡುತ್ತಿದ್ದುದರ ಜೊತೆಗೆ ಯಾವಾಗಂದರೆ ಆವಾಗ ಅವರಿಬ್ಬರೂ ಕೋಣೆಯೊಳಗೆ ಸೇರಿಕೊಂಡು ತಣಿಯದ ಭಾವೋತ್ಕಟತೆಯಲ್ಲಿ ಮುಳುಗಿಬಿಡುತ್ತಿದ್ದರು. ಉರ್ಸುಲಾ ಒಂದು ದಿನ ಮಧ್ಯಾಹ್ನ ಉಗ್ರಾಣಕ್ಕೆ ಹೋದಾಗ ಅವರಿಬ್ಬರೂ ಅಲ್ಲಿ ಮುತ್ತು ಕೊಟ್ಟುಕೊಳ್ಳುತ್ತಿದ್ದುದನ್ನು ನೋಡಿಬಿಟ್ಟಳು. "ನಿನ್ನ ಚಿಕ್ಕಮ್ಮನನ್ನು ತುಂಬಾ ಪ್ರೀತಿಸುತ್ತಿಯೇನು?" ಎಂದು ಏನೂ ತಿಳಿಯದವಳಂತೆ ಅರೆಲಿಯಾನೊ ಜೋಸ್‌ನನ್ನು ಕೇಳಿದಳು. ಅವನು ಹೌದೆಂದು ಉತ್ತರಿಸಿದ. "ಹಾಗಾದರೆ ಒಳ್ಳೇದು" ಎಂದು ಹೇಳಿ, ಬ್ರೆಡ್ ಮಾಡಲು ಹಿಟ್ಟನ್ನು ಅಳತೆ

ಮಾಡುವುದು ಮುಗಿಸಿ ಅಡಿಗೆ ಮನೆ ಕಡೆ ನಡೆದಳು. ಈ ಘಟನೆ ಅವಳನ್ನು ಉನ್ಮಾದದಿಂದ ಹೊರತಂದಿತು. ಅವಳಿಗೆ ಈಗ ಅರ್ಥವಾಯಿತು. ತಾನು ಪ್ರೀತಿಸುತ್ತಿರುವುದು ಮುತ್ತಿಡುತ್ತಿರುವ ಮಗುವೆಂಬ ಭಾವನೆಯಿಂದಲ್ಲ. ತಾನು ಬಹಳ ಮುಂದುವರೆದಿದ್ದೇನೆ ಎನಿಸಿತು. ಮಾಗಿಯ ಕಾಲದ ಉನ್ಮಾದದಲ್ಲಿ ಅಡ್ಡಾಡುತ್ತಿದ್ದೇನೆ, ಆದರೆ ಅದು ಬಹಳ ಅಪಾಯಕಾರಿಯಾದದ್ದು. ಅದಕ್ಕೆ ಭವಿಷ್ಯವಿಲ್ಲ ಎಂದುಕೊಂಡದ್ದೇ ಕ್ಷಣಾರ್ಧದಲ್ಲಿ ಸಂಬಂಧವನ್ನು ಕಡಿದುಕೊಂಡುಬಿಟ್ಟಳು. ಅರೆಲಿಯಾನೊ ಜೋಸ್, ತಾನು ಮಿಲಿಟರಿ ಟ್ರೈನಿಂಗ್ ಮುಗಿಸುತ್ತಿದ್ದಾಗ, ತಾನೂ ವಾಸ್ತವಕ್ಕೆ ಎಚ್ಚೆತ್ತುಕೊಂಡು ಸೇನಾಶಿಬಿರದಲ್ಲಿಯೇ ಮಲಗಲು ಹೊರಟ. ಶನಿವಾರಗಳಲ್ಲಿ ಸೈನಿಕರೊಂದಿಗೆ ಕತಾರಿನೊ ಸ್ಟೋರ್‌ಗೆ ಹೋಗುತ್ತಿದ್ದ. ದಿಢೀರನೆ ಉಂಟಾದ ಏಕಾಕಿತನ, ಸಮಯಕ್ಕೆ ಮೊದಲೇ ಬಂದ ಪ್ರಾಯವನ್ನು ತಣಿಸಲು ಸತ್ತ ಹೂಗಳ ವಾಸನೆಯ ಹೆಣ್ಣುಗಳ ಸಹವಾಸದಲ್ಲಿ ತನ್ನ ಕಲ್ಪನೆಯ ಮೂಲಕ ಅಮರಾಂತಳೆಂಬ ಭಾವನೆ ತಳೆದು ಸಮಾಧಾನ ಪಟ್ಟುಕೊಳ್ಳುತ್ತಿದ್ದ.

ಸ್ವಲ್ಪ ಸಮಯದ ನಂತರ ಪರಸ್ಪರ ವಿರುದ್ಧವಾದ, ಯುದ್ಧಕ್ಕೆ ಸಂಬಂಧಪಟ್ಟ ಸುದ್ದಿಗಳು ಕೇಳಿ ಬರತೊಡಗಿದವು. ಸರಕಾರವೇ ಕ್ರಾಂತಿಯ ಬೆಳವಣಿಗೆಯನ್ನು ಒಪ್ಪಿಕೊಂಡಿರುವಾಗ, ಮಕಾಂಡೊದಲ್ಲಿನ ಆಫೀಸರುಗಳು ಶಾಂತಿ ಸಂಧಾನದ ಮಾತುಕತೆಯ ಗುಪ್ತವರದಿಗಳನ್ನು ಪಡೆದರು. ಏಪ್ರಿಲ್ ಒಂದರ ಸುಮಾರಿಗೆ ವಿಶೇಷ ಸಂದೇಶವಾಹಕನೊಬ್ಬ ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್ ಪರಿಚಯಿಸಿಕೊಂಡ. ಪಾರ್ಟಿಯ ನಾಯಕರು ಕದನ ವಿರಾಮ ಕ್ರಾಂತಿ ನಾಯಕರನ್ನು ಭೇಟಿಯಾಗಿ ಭೇಟಿ ಮಾತುಕತೆ ನಡೆಸಿ, ಪ್ರತಿಯಾಗಿ ಲಿಬರಲ್‌ಗಳಿಗೆ (ಉದಾರವಾದಿಗಳಿಗೆ) ಮೂರು ಕ್ಯಾಬಿನೆಟ್ ಪೋಸ್ಟ್‌ಗಳನ್ನು, ಕಾಂಗ್ರೆಸ್‌ನಲ್ಲಿ ಅಲ್ಪಸಂಖ್ಯಾತ ಪ್ರತಿನಿಧಿತ್ವವನ್ನು ಕ್ರಾಂತಿಕಾರರು ಶಸ್ತ್ರ ತ್ಯಾಗ ಮಾಡಿದಲ್ಲಿ ಕ್ಷಮಾದಾನವನ್ನು ನೀಡಲಾಗುವುದೆಂಬ ಸುದ್ದಿಗಳು ನಿಜವೆಂದು ದೃಢಪಡಿಸಿದ. ಸಂದೇಶವಾಹಕ, ಶಾಂತಿ ಸಂಧಾನಕ್ಕೆ ಒಪ್ಪುವ ಕರ್ನಲ್ ಅರೆಲಿಯಾನೊ ಬ್ಯುಂಡಿಯಾನ ಕಡೆಯಿಂದ ಅತ್ಯಂತ ಗುಪ್ತವಾದ ಆದೇಶವನ್ನು ತಂದಿದ್ದ. ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್ ಸಮರ್ಥರಾದ ತನ್ನ ಐದು ಮಂದಿಯನ್ನು ತನ್ನೊಡನೆ ಹೊರಡಲು ಅಣಿಮಾಡಿದ. ಆದೇಶವನ್ನು ಅತ್ಯಂತ ನಿಷ್ಠುರತೆಯಿಂದ ಮತ್ತು ರಹಸ್ಯವಾಗಿ ಅನುಷ್ಠಾನಗೊಳಿಸಲಾಗುತ್ತದೆ. ಒಪ್ಪಂದವನ್ನು ಘೋಷಿಸುವ ಒಂದು ವಾರ ಮೊದಲೇ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ತನ್ನ ನಂಬಿಕಸ್ಥರಾದ ಹತ್ತು ಮಂದಿ ಆಫೀಸರುಗಳೊಂದಿಗೆ ಗುಟ್ಟಾಗಿ ಮಧ್ಯರಾತ್ರಿಯ ನಂತರ ಮಕಾಂಡೊಗೆ ಆಗಮಿಸಿದರು. ಕಾವಲುಗಾರನನ್ನು ಕಳಿಸಿಬಿಟ್ಟು, ತಮ್ಮ ಆಯುಧಗಳನ್ನು ಹೂತಿಟ್ಟು, ರೆಕಾರ್ಡ್‌ಗಳನ್ನು ನಾಶಮಾಡಿದರು. ಬೆಳಗಾಗುವ ಹೊತ್ತಿಗೆ ಅವರೆಲ್ಲ ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್ ಮತ್ತು ಅವನ ಐದು ಮಂದಿ ಆಫೀಸರುಗಳ ಜೊತೆ ಊರು ಬಿಟ್ಟರು. ಎಷ್ಟು ವೇಗವಾಗಿ ಈ ಎಲ್ಲ ಕಾರ್ಯಚಟುವಟಿಕೆಗಳು ಮುಗಿದುವೆಂದರೆ, ಕಡೆಯ ಕ್ಷಣದಲ್ಲಿ ಯಾರೂ ಉರ್ಸುಲಾಳ ಮಲಗುವ ಕೊಠಡಿಯ ಕಿಟಕಿಯಲ್ಲಿ "ಕರ್ನಲ್ ಅರೆಲಿಯಾನೊ ಬ್ಯುಂಡಿಯಾನನ್ನು ನೋಡಬೇಕಾದರೆ ಕೂಡಲೇ ಬಾಗಿಲ ಬಳಿ ಬಾ ಎಂದು ಪಿಸು ಮಾತಿನಲ್ಲಿ ಹೇಳುವವರೆಗೂ ಅವಳಿಗೆ ಗೊತ್ತಿರಲಿಲ್ಲ. ಉರ್ಸುಲಾ ಕ್ಷಣಮಾತ್ರದಲ್ಲಿ ಜಿಗಿದು ನೈಟ್ ಗೌನ್ ಹಾಕಿಕೊಂಡೆ

ಬಾಗಿಲಬಳಿ ಬಂದಳಾದರೂ ಅವಳಿಗೆ ಕಾಣಲು ಸಾಧ್ಯವಾದದ್ದು ಧೂಳಿನ ಮೋಡದ ನಡುವೆ ಕುದುರೆ ಸವಾರರು ವೇಗವಾಗಿ ಊರನ್ನು ಬಿಡುತ್ತಿದ್ದ ದೃಶ್ಯ ಮಾತ್ರ. ಮರುದಿನವೇ ಅರೆಲಿಯಾನೊ ಜೋಸ್ ಕೂಡಾ ತನ್ನ ತಂದೆಯೊಂದಿಗೆ ಹೋಗಿದ್ದಾನೆಂಬ ವಿಚಾರ ತಿಳಿದುಬಂದದ್ದು ಜಂಟಿಹೇಳಿಕೆ ನೀಡಿದ ಹತ್ತು ದಿನಗಳ ನಂತರ ಯುದ್ಧದ ಮುಗಿತಾಯವನ್ನು ಘೋಷಿಸಲಾಯಿತು. ಆದರೆ ಪಶ್ಚಿಮ ಗಡಿಯಲ್ಲಿ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ದಂಗೆ ಎದ್ದಿರುವ ಸುದ್ದಿ ಬಂತು. ಒಂದು ವಾರಕ್ಕಿಂತ ಮೊದಲೇ ಅವನು ಅಷ್ಟಾಗಿ ಶಸ್ತ್ರಸಜ್ಜಿತವಾಗದ ಸೇನೆಯನ್ನು ಚೆಲ್ಲಾಪಿಲ್ಲಿ ಓಡುವಂತೆ ಮಾಡಲಾಯಿತು. ಆದರೆ ಅದೇ ವರ್ಷ ಲಿಬರಲ್‌ಗಳು ಕನ್‌ಸರ್ವೆಟೀವ್‌ಗಳು ಪರಸ್ಪರ ಒಪ್ಪಂದ ಮಾಡಿಕೊಂಡಿದ್ದಾರೆ ಎಂಬುದನ್ನು ನಂಬುವಂತೆ ಮಾಡುವಷ್ಟರಲ್ಲಿಯೇ ಅವನು ಏಳು ದಂಗೆಗಳಿಗೆ ಪ್ರಯತ್ನಿಸಿದ. ಒಂದು ರಾತ್ರಿ ರಿಯೊಹಚಾ ಮೇಲೆ ಬಾಂಬಿನ ದಾಳಿ ಮಾಡಿದ್ದೇ ಅಲ್ಲದೆ ಕಾವಲುಗಾರನನ್ನು ಹಾಸಿಗೆಯಿಂದ ಎಳೆದು ತಂದುದೇ ಅಲ್ಲದೆ, ಸೇಡಿಗೆ ಪ್ರತೀಕಾರವಾಗಿ ಅತ್ಯಂತ ಸಮರ್ಥರಾಗಿದ್ದ ಊರಿನ ಹದಿನಾಲ್ಕು ಮಂದಿ ಲಿಬರಲ್‌ಗಳನ್ನು ಕೊಂದ. ಎರಡು ವಾರಗಳಿಗೂ ಹೆಚ್ಚು ಕಾಲ ಗಡಿಯಲ್ಲಿ ಕಸ್ಟಮ್ಸ್ ಕೇಂದ್ರವನ್ನು ತನ್ನ ಅಧೀನದಲ್ಲಿ ಇರಿಸಿಕೊಂಡಿದ್ದ ಮತ್ತು ಅಲ್ಲಿಂದಲೇ ಯುದ್ಧ ಘೋಷಣೆಯನ್ನು ಮಾಡಿದ. ಅವನ ಮತ್ತೊಂದು ಸಾಹಸವೆಂದರೆ, ರಾಜಧಾನಿಯ ಹೊರವಲಯದಲ್ಲಿಯೂ ಯುದ್ಧವನ್ನು ಘೋಷಿಸಬೇಕೆಂದುಕೊಂಡು, ಸಾವಿರ ಮೈಲಿಗಳ ವರ್ಜಿನ್ ಟೆರ್ರಿಟೆರಿಯುನ್ನು ದಾಟುವ ಸಾಹಸದಲ್ಲಿ ಮೂರು ತಿಂಗಳು ಕಾಡು ಪ್ರದೇಶದಲ್ಲಿ ಇರುವ ಪ್ರಯತ್ನ ಸಂಪೂರ್ಣವಾಗಿ ಸೋತಿತು. ಒಂದು ಸಂದರ್ಭದಲ್ಲಿ, ಅವನು ಮಕಾಂಡೊದಿಂದ ಹದಿನೈದು ಮೈಲಿ ದೂರದಲ್ಲಿದ್ದಾಗ, ಗಸ್ತುತಿರುಗುವವರ ಕಣ್ಣು ತಪ್ಪಿಸಲು ಪರ್ವತಗಳ ಮಧ್ಯೆ ಅಡಗಿ ಕುಳಿತುಕೊಳ್ಳಬೇಕಾಯಿತು. ಅದು ತನ್ನ ತಂದೆ ಸ್ಪೈನ್ ನೌಕೆಯ ಪಳಿಯುಳಿಕೆಗಳನ್ನು ನೋಡಿದ ಅತ್ಯಂತ ಮೋಹಕ ಪ್ರದೇಶಕ್ಕೆ ಬಹಳ ಹತ್ತಿರವಾಗಿತ್ತು.

ವಿಸಿಟಾಸಿಯೋನ್ ಅದೇ ಸಮಯದಲ್ಲಿ ಸಾವನ್ನಪ್ಪಿದ್ದಳು. ಸಹಜ ಸಾವಿನ ಸುಖ ಅವಳಿಗೆ ಸಿಕ್ಕಿತ್ತು. ನಿದ್ದೆಯಿಲ್ಲದ ಕಾಯಿಲೆಯ ಭಯದಿಂದ ಸಿಂಹಾಸನವನ್ನೇ ತೊರೆದು ಬಂದ ಅವಳ ಕೊನೆಯಾಸೆಯೆಂದರೆ, ಇಪ್ಪತ್ತು ವರ್ಷಗಳಿಂದ ಉಳಿಸಿಕೊಂಡು ಬಂದ ತನ್ನ ಸಂಬಳದ ಹಣವನ್ನು ತನ್ನ ಹಾಸಿಗೆಯ ಕೆಳಗಿಂದ ತೆಗೆದು ಕರ್ನಲ್ ಅರೆಲಿಯಾನೊಗೆ ಯುದ್ಧಕ್ಕೆ ಸಹಾಯವಾಗಲು ಕಳಿಸಿಕೊಡಬೇಕು ಎಂಬುದಾಗಿತ್ತು. ಉರ್ಸುಲಾ ಅದೆಲ್ಲವನ್ನು ಮಾಡುವುದರಲ್ಲಿ ಆಸಕ್ತಿ ತೋರಿಸಲಿಲ್ಲ. ಕಾರಣ ಅಷ್ಟು ಹೊತ್ತಿಗೆ ಪ್ರಾಂತೀಯ ರಾಜಧಾನಿಯ ಬಳಿ, ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಭೂಮಿಗೆ ಇಳಿಯುವಾಗ ಕೊಲ್ಲಲ್ಪಟ್ಟನೆಂಬ ವದಂತಿಗಳು ಹಬ್ಬಿದ್ದವು. ಎರಡು ವರ್ಷಗಳಲ್ಲಿ ನಾಲ್ಕನೇ ಬಾರಿ ಬಂದ ವದಂತಿಯನ್ನು ನಿಜವೆಂದು ನಂಬಲಾಯಿತು. ಕಾರಣ ಅವನನ್ನು ಕುರಿತು ಅಲ್ಲಿವರೆಗೆ ಯಾವುದೇ ವಿಚಾರ ತಿಳಿದು ಬಂದಿರಲಿಲ್ಲ. ಹಿಂದಿನದರ ಜೊತೆಗೆ ಈ ಶೋಕಾಚರಣೆಯನ್ನೂ ಉರ್ಸುಲಾ ಮತ್ತು ಅಮರಾಂತ ಸೇರಿಸುವ ಪ್ರಯತ್ನದಲ್ಲಿದ್ದಾಗ, ದಿಢೀರನೆ ಅನಿರೀಕ್ಷಿತ ಸುದ್ದಿಯೊಂದು ಬಂತು. ಅದರ ಪ್ರಕಾರ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಜೀವಂತವಾಗಿದ್ದಾನೆ. ಸರಕಾರಕ್ಕೆ ಸದ್ಯಕ್ಕೆ ಅವನಿಂದ ಯಾವುದೇ

ತೊಂದರೆಯಿಲ್ಲ. ಕ್ಯಾರಿಬಿಯಾದ ಇತರ ಗಣತಂತ್ರಗಳಾಗಿ ಜಯ ಪಡೆದ ಸಂಯುಕ್ತರಾಷ್ಟ್ರದೊಂದಿಗೆ ಜೊತೆಗೂಡಿದ್ದಾನೆ. ಮತ್ತು ತನ್ನ ದೇಶದಿಂದ ದೂರ, ದೂರ, ದೂರಗಳಲ್ಲಿ ಬೇರೆಬೇರೆ ಹೆಸರುಗಳಲ್ಲಿ ಕಾಣಿಸಿಕೊಳ್ಳುತ್ತಾನೆ ಎಂದೆಲ್ಲ ಸುದ್ದಿಗಳಿದ್ದವು. ನಂತರ ಅವನ ತಲೆಯಲ್ಲಿ ಕೆಲಸ ಮಾಡುತ್ತಿದ್ದ ವಿಚಾರವೆಂದರೆ, ಅಲ್ಯಾಸ್ಕಾ ಮತ್ತು ಫಟಾಗೋನಿಯಾದಲ್ಲಿ ಕನ್‌ಸರ್ವೆಟೀವ್ ಸರ್ಕಾರವನ್ನು ಹೇಳಹೆಸರಿಲ್ಲದಂತೆ ಮಾಡಲು ಸೆಂಟ್ರಲ್ ಅಮೆರಿಕಾದ ಸಂಯುಕ್ತ ರಾಷ್ಟ್ರವಾದಿ ಶಕ್ತಿಗಳನ್ನು ಒಗ್ಗೂಡಿಸಬೇಕು ಎಂಬುದಾಗಿತ್ತು. ಉರ್ಸುಲಾಗೆ, ಅವನು ಬಿಟ್ಟುಹೋದ ಹಲವು ವರ್ಷಗಳ ನಂತರ ಸ್ಯಾಂತಿಯಾಗೊ, ಕ್ಯೂಬಾದಿಂದ ಕೈಯಿಂದ ಕೈ ದಾಟುತ್ತಾ ಸಾಕಷ್ಟು ಮಡಿಕೆಗಳಿಂದ ಕೂಡಿದ ಬಣ್ಣಗೆಟ್ಟು ಬಂದ ಪತ್ರವೇ ನೇರವಾಗಿ ತಲುಪಿದ ಸುದ್ದಿಯಾಗಿತ್ತು.

ಅದನ್ನು ಓದಿದ ಮೇಲೆ "ಅವನನ್ನು ನಾವು ಶಾಶ್ವತವಾಗಿ ಕಳೆದುಕೊಂಡು ಬಿಟ್ಟೆವು" ಇದದೇ ದಾರಿಯಲ್ಲಿ ಹೋದರೆ ಕ್ರಿಸ್‌ಮಸ್ಸನ್ನು ಭೂಮಿಯ ಯಾವುದೋ ಒಂದು ತುದಿಯಲ್ಲಿ ಕಳೆಯುತ್ತಾನೆ ಎಂದು ಉರ್ಸುಲಾ ಉದ್ಗರಿಸಿದಳು. ಈ ಮಾತುಗಳನ್ನು ಆಡಿದ್ದು, ಪತ್ರತೋರಿಸಿದ್ದು, ಯುದ್ಧದ ನಂತರ ಮಕಾಂಡೊದ ಮೇಯರ್ ಆಗಿದ್ದ ಜೋಸ್ ರಾಖ್ವೆಲ್ ಮಾಂಕಾಡ ಎಂಬ ಕನ್‌ಸರ್ವೆಟೀವ್ ಜನರಲ್ ಎಂಬ ಮೊದಲ ವ್ಯಕ್ತಿಗೆ. "ಈ ಅರೆಲಿಯಾನೊ... ಎಂಥ ಅನ್ಯಾಯ ಅವನು ಕನ್‌ಸರ್ವೆಟೀವ್ ಆಗಲಿಲ್ಲವಲ್ಲ" ಎಂದು ವಿಷಾದಿಸಿದ. ಕನ್‌ಸರ್ವೆಟೀವ್ ಪಕ್ಷದ ಇತರೆ ಜನರಂತೆ ರಾಕ್ವೆಲ್ ಕೂಡಾ ಅರೆಲಿಯಾನೊ ಬ್ಯುಂಡಿಯಾನನ್ನು ಮೆಚ್ಚಿಕೊಂಡಿದ್ದ; ಜೋಸ್ ರಾಕ್ವೆಲ್ ಮಾಂಕಾಡಸ, ವೃತ್ತಿಯಿಂದ ಮಿಲಿಟರಿ ವ್ಯಕ್ತಿಯಾಗಿಲ್ಲದಿದ್ದರೂ ಪಾರ್ಟಿಯ ಪರವಾಗಿ ಯುದ್ಧಗಳಲ್ಲಿ ಭಾಗವಹಿಸಿ 'ಜನರಲ್' ಎಂಬ ಬಿರುದನ್ನು ಕೊಟ್ಟಿದ್ದರು. ಇದಕ್ಕೆ ತದ್ವಿರುದ್ಧವಾಗಿ, ವಾಸ್ತವದಲ್ಲಿ ಅವನು ಮಿಲಿಟರಿ ವಿರೋಧಿಯಾಗಿದ್ದ. ಮಿಲಿಟರಿ ಮಂದಿಯನ್ನು ಸಿದ್ಧಾಂತಗಳಿಲ್ಲದವರು, ಮಹತ್ವಾಕಾಂಕ್ಷಿ, ಕುತಂತ್ರಿಗಳು, ಅರಾಜಕ ದಿನಗಳಲ್ಲಿ, ತಮ್ಮ ಏಳ್ಗೆಗಾಗಿ ಪ್ರಜೆಗಳನ್ನು ನೀಚರನ್ನಾಗಿಸುವಲ್ಲಿ ಪರಿಣತರಾಗಿದ್ದರು. ಬುದ್ಧಿವಂತ, ಪ್ರಶಾಂತ ಕೆಂಚು ಮುಖದವ. ತಿನ್ನುವುದನ್ನು ಹುಂಜ ಕಾಳಗವನ್ನು ಇಷ್ಟಪಡುತ್ತಿದ್ದವ, ಒಂದು ಕಾಲದಲ್ಲಿ ಅರೆಲಿಯಾನೊ ಬ್ಯುಂಡಿಯಾಗೆ ಭಯ ಹುಟ್ಟಿಸುತ್ತಿದ್ದ ವಿರೋಧಿಯಾಗಿದ್ದ. ಸಮುದ್ರತೀರದ ವಿಶಾಲಪ್ರದೇಶದ ಆಫೀಸರುಗಳ ಪ್ರಗತಿಯ ಮೇಲೆ ಅಧಿಕಾರದ ಹೇರಿಕೆಯಿಂದ ನಿಯಂತ್ರಿಸುವಲ್ಲಿ ಯಶಸ್ವಿಯಾಗಿದ್ದ. ಒಮ್ಮೆ ಅವನಿಗೆ ಬಲಿಷ್ಠವಾದ ಪ್ರದೇಶದ ಮೇಲಿನ ಅಧಿಕಾರವನ್ನು ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ವಶಕ್ಕೆ ಬಿಟ್ಟು ಕೊಡಬೇಕಾಗಿ ಬಂದಾಗ. ಎರಡು ಪತ್ರಗಳನ್ನು ಅವನಿಗಾಗಿ ಬಿಟ್ಟುಹೋಗಿದ್ದ. ಅವುಗಳಲ್ಲಿನ ಒಂದು ಪತ್ರದಲ್ಲಿ ಬಹಳ ಹಿಂದೆ ಯುದ್ಧವನ್ನು ಹೆಚ್ಚು ಮಾನವೀಯಗೊಳಿಸುವ ಪ್ರಚಾರ ಕಾರ್ಯಕ್ರಮದಲ್ಲಿ ಬಂದು ಸೇರಬೇಕೆಂದು ಕರ್ನಲ್ ಅರೆಲಿಯಾನೊ ಬ್ಯುಂಡಿಯಾನನ್ನು ಆಹ್ವಾನಿಸಿದ್ದ. ಮತ್ತೊಂದು ಪತ್ರ ಲಿಬರಲ್ ಪ್ರದೇಶದಲ್ಲಿದ್ದ ತನ್ನ ಹೆಂಡತಿಗಾಗಿ ಬರೆದದ್ದು. ಅದು ಅವಳನ್ನು ಸೇರುವಂತೆ ನೋಡಿಕೊಳ್ಳಬೇಕೆಂಬ ಪ್ರಾರ್ಥನೆಯೂ ಇತ್ತು. ಅಂದಿನಿಂದ ಇಬ್ಬರೂ ಯುದ್ಧದ ಭಯಾನಕ ಸನ್ನಿವೇಶಗಳಲ್ಲಿಯೂ ಕೈದಿಗಳ ವಿನಿಮಯಕ್ಕಾಗಿ ಕದನ ವಿರಾಮಗಳನ್ನು ಏರ್ಪಾಡು ಮಾಡಿಕೊಳ್ಳುತ್ತಿದ್ದರು. ಮಧ್ಯೆ ಮಧ್ಯೆ ಹಬ್ಬದ

ವಾತಾವರಣವಿರುತ್ತಿತ್ತು. ಜನರಲ್ ಮಕಾಂಡೊ ಅದರ ಪ್ರಯೋಜನವನ್ನು ಪಡೆದುಕೊಳ್ಳುತ್ತಿದ್ದ. ಕರ್ನಲ್ ಅರೆಲಿಯಾನೊ ಬ್ಯುಂಡಿಯಾಗೆ ಚೆಸ್ ಆಡುವುದನ್ನು ಕಲಿಸುವ ಅವಕಾಶವನ್ನು ಗಿಟ್ಟಿಸಿಕೊಂಡ. ಅಂದಿನಿಂದ ಅವರಿಬ್ಬರೂ ಬಹಳ ಹತ್ತಿರದ ಗೆಳೆಯರಾದರು. ಅವರಿಬ್ಬರೂ ಹಲವುಸಲ, ಎರಡೂ ಪಾರ್ಟಿಗಳಲ್ಲಿ ಇರುವ ಜನಪ್ರಿಯ ಅಂಶಗಳನ್ನು ಒಗ್ಗೂಡಿಸಿಕೊಂಡು ಮಿಲಿಟರಿಯವರ ಮತ್ತು ವೃತ್ತಿಪರ ರಾಜಕಾರಣಿಗಳ ಪ್ರಭಾವದಿಂದ ದೂರವಿದ್ದು, ಅವುಗಳಲ್ಲಿನ ಉತ್ತಮಾಂಶಗಳನ್ನು ಮಾತ್ರವೇ ತೆಗೆದುಕೊಂಡು ಮಾನವೀಯ ಆಳ್ವಿಕೆಯನ್ನು ತರುವ ಆಲೋಚನೆಯನ್ನು ಮಾಡುತ್ತಿದ್ದರು. ಯುದ್ಧ ಮುಗಿದ ಮೇಲೆ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಸಂಪೂರ್ಣ ಉಚ್ಚಾಟನೆಯ ಆಲೋಚನೆಯಿಂದ ತಲೆಮರೆಸಿಕೊಂಡು ಓಡಾಡುತ್ತಿದ್ದಾಗ ಮಕಾಂಡೊದ ಜನರಲ್ ಆಗಿ ಮಾಂಕಾಡಾನನ್ನು ಹೆಸರಿಸಲಾಯಿತು. ಮಿಲಿಟರಿ ಸಮವಸ್ತ್ರವನ್ನು ಬಿಟ್ಟು ಜನಸಾಮಾನ್ಯರ ಉಡುಪು ಧರಿಸುತ್ತಿದ್ದ ಸೈನಿಕರ ಬದಲಾಗಿ ಶಸ್ತ್ರಾಸ್ತ್ರಗಳಿಲ್ಲದ ಪೊಲೀಸರನ್ನು ಸಾವನ್ನಪ್ಪಿದ್ದ ಲಿಬರಲ್ ಪಕ್ಷದವರ ಕುಟುಂಬಗಳಿಗೆ ಸಹಾಯಮಾಡಿದ. ಮಕಾಂಡೊವನ್ನು ಮುನಿಸಿಪಾಲಿಟಿ ದರ್ಜೆಗೆ ಏರಿಸಿ ತಾನೇ ಮೊದಲ ಮೇಯರ್ ಆದ. ಅವನು ಎಂತಹ ವಿಶ್ವಾಸ ಭದ್ರತೆಯ ವಾತಾವರನ ಸೃಷ್ಟಿಸಿದನೆಂದರೆ ಜನ ಯುದ್ಧವನ್ನು ಗತಕಾಲದ ಅಸಂಬದ್ಧ ಕೆಟ್ಟ ಕನಸೆಂದು ಭಾವಿಸತೊಡಗಿದರು. ಫಾದರ್ ನಿಕಾನೋರ್ ಹೆಪಾಟಿಕ್ ಜ್ವರದಿಂದ ನರಳುತ್ತಿದ್ದುದರಿಂದ ಆತನ ಸ್ಥಾನದಲ್ಲಿ ಫಾದರ್ ಕೊರೊನೆಲ್ ಬಂದ. ಅವನನ್ನು 'ದಿ ಪಪ್' ಎಂದು ಕರೆಯುತ್ತಿದ್ದರು. ಆತ ಮೊದಲನೆ ಸಂಯುಕ್ತ ರಾಷ್ಟ್ರವಾದಿಗಳ ಯುದ್ಧದ ಅನುಭವಿ ಎಂದು ಪರಿಗಣಿಸಲಾಗಿತ್ತು. ಅಂಪಾರೊ ಮಾಸ್ಕೋಟ್‌ನನ್ನು ವಿವಾಹವಾಗಿದ್ದ ಬ್ರೂನೊ ಕ್ರೆಸ್ಪಿ, ತನ್ನ ಆಟಿಕೆಗಳ ಅಂಗಡಿ ಮತ್ತು ವಾದ್ಯಗಳ ಅಂಗಡಿಗಳನ್ನು ಅಭಿವೃದ್ಧಿಪಡಿಸಿದ ಮತ್ತು ಪಡೆಯುತ್ತಲೇ ಹೋದ. ಒಂದು ಥಿಯೇಟರನ್ನು ನಿರ್ಮಿಸಿದ. ಸ್ಪ್ಯಾನಿಷ್ ಕಂಪನಿಗಳು ಅದನ್ನು ತಮ್ಮ ಪಟ್ಟಿಯಲ್ಲಿ ಸೇರಿಸಿಕೊಂಡರು. ಅದು ಬಹಳ ವಿಸ್ತಾರವಾದ ಬಯಲು ರಂಗಮಂದಿರ. ಅದರಲ್ಲಿ ಮರದ ಬೆಂಚುಗಳನ್ನು, ವೆಲ್ವೆಟ್ ಪರದೆಗಳನ್ನು ಅಳವಡಿಸಲಾಗಿದ್ದವು. ಸಿಂಹದ ತಲೆಗಳುಳ್ಳ ಎರಡು ಪೆಟ್ಟಿಗೆಗಳಿದ್ದು, ಅವುಗಳ ಬಾಯಿಯ ಮೂಲಕ ಟಿಕೇಟುಗಳ ಮಾರಾಟವಾಗುತ್ತಿತ್ತು. ಅದೇ ಸರಿ ಸುಮಾರಿನಲ್ಲಿ ಶಾಲೆಯನ್ನು ಪುನರ್ ನಿರ್ಮಿಸಲಾಯಿತು. ಅದನ್ನು ಜೌಗುಪ್ರದೇಶದಿಂದ ಕರೆತಂದಿದ್ದ ಹಿರಿಯ ಅಧ್ಯಾಪಕ ಡಾನ್ ಮೆಲ್ಕೋರ್ ಫಾಸ್ಕಾಲೋನ್ ಸುಪರ್ದಿಗೆ ಒಪ್ಪಿಸಲಾಗಿತ್ತು. ಆತ ಸೋಮಾರಿಗಳಾದ ಹುಡುಗರನ್ನು ಸುಣ್ಣದಿಂದ ಸಾರಿಸಿದ ಅಂಗಳದಲ್ಲಿ ಮೊಣಕಾಲ ಮೇಲೆ ನಡೆಯಲು ಹಚ್ಚುತ್ತಿದ್ದ. ತರಗತಿಯಲ್ಲಿ ಮಾತಾಡುವವರನ್ನು ಅವರ ತಂದೆತಾಯಿಗಳ ಅಪ್ಪಣೆ ಪಡೆದು ಮೆಣಸಿನಕಾಯಿ ತಿನ್ನುವಂತೆ ಮಾಡುತ್ತಿದ್ದ. ಸಾಂತಾ ಸೋಫಿಯಾ ದ ಲಾ ಪೀದಾದ್‌ಳ ಅವಳಿ ಮಕ್ಕಳಾದ ಅರೆಲಿಯಾನೊ ಸೆಗುಂಡೊ ಜೋಸ್ ಆರ್ಕಾಡಿಯೊ ಸೆಗುಂಡೊ ಸ್ಲೇಟು, ಚಾಕ್ ಪೀಸ್, ಅಲ್ಯುಮಿನಿಯಂ ಜಗ್ಸ್‌ಗಳೊಂದಿಗೆ ತರಗತಿಗೆ ಬಂದು ಕುಳಿತವರಲ್ಲಿ ಮೊದಲಿಗರಾಗಿದ್ದರು. ರೆಮೆಡಿಯೋಸ್‌ನ ಮಗಳಾದ ರೆಮೆಡಿಯೋಸ್ ತನ್ನ ತಾಯಿಯ ಸೌಂದರ್ಯವನ್ನು ಬಳುವಳಿಯಾಗಿ ಪಡೆದಿದ್ದವಳನ್ನು 'ರೆಮೆಡಿಯೋಸ್ ದ ಬ್ಯೂಟಿ' ಎಂದೇ ಗುರುತಿಸಿದ್ದರು. ಕಾಲದ ಜೊತೆ ಜೊತೆಗೆ ಮೇಲಿಂದ ಮೇಲಿನ ಶೋಕತಪ್ತ

ದಿನಗಳು, ಹೆಚ್ಚುತ್ತಿದ್ದ ಸಂಕಷ್ಟಗಳ ನಡುವೆಯೂ ಮುಪ್ಪನ್ನು ಹತ್ತಿಕ್ಕಿದಳು, ಸಾಂತಾ ಸೋಫಿಯಾ ದ ಲಾ ಪೀದಾದಳ ನೆರವಿನೊಂದಿಗೆ ತನ್ನ ಪೇಸ್ಟ್ರಿ ಬಿಸಿನೆಸ್‌ಗೆ ಹೊಸ ಚಾಲನೆ ಕೊಟ್ಟು ಅಭಿವೃದ್ಧಿಪಡಿಸಿದಳು. ಒಳ್ಳೆಯ ವ್ಯಾಪಾರದಿಂದಾಗಿ ಸಾಕಷ್ಟು ಸಂಪಾದನೆಯಾಯಿತು. ಮಗ ಯುದ್ಧಕ್ಕೆಂದು ಖರ್ಚು ಮಾಡಿದ ಹಣವನ್ನು ಮತ್ತೆ ಗಳಿಸಿಕೊಂಡದ್ದಷ್ಟೆ ಅಲ್ಲದೆ, ಮತ್ತೊಮ್ಮೆ ಸೋರೆ ಬುರುಡೆಗಳಲ್ಲಿ ಚಿನ್ನವನ್ನು ತುಂಬಿ ಮಲಗುವ ಕೋಣೆಯಲ್ಲಿ ನೆಲದಲ್ಲಿ ಹೂತಿರಿಸಿದಳು "ದೇವರು ನನಗೆ ಆಯುಸ್ಸು ಕೊಟ್ಟಿರುವಷ್ಟು ಕಾಲ, ಈ ಮನೆಯಲ್ಲಿ ಯಾವಾಗಲೂ ಸಂಪತ್ತು ತುಂಬಿರುತ್ತದೆ" ಎಂದು ಹೇಳುತ್ತಿದ್ದಳು. ಅರೆಲಿಯಾನೊ ಜೋಸ್ ನಿಕಾರಗುವಾದಲ್ಲಿ ಒಕ್ಕೂಟದ ಸೇನಾತುಕಡಿಗಳನ್ನು ತ್ಯಜಿಸಿ, ಜರ್ಮನ್ ನೌಕೆಯಲ್ಲಿ ಅದರ ಸಿಬ್ಬಂದಿ ಎಂದು ಸಹಿಮಾಡಿ ಅಶ್ವದಷ್ಟು ಬಲಿಷ್ಠನಾಗಿ, ಇಂಡಿಯನ್‌ನ ಹಾಗೆ ಉದ್ದಕೂದಲು ಬಿಟ್ಟುಕೊಂಡು ಅಮರಾಂತಳನ್ನು ಮದುವೆಯಾಗಬೇಕೆಂಬ ಗುಪ್ತ ಬಯಕೆಯೊಂದಿಗೆ ಅಡಿಗೆ ಮನೆಯಲ್ಲಿ ಕಾಣಿಸಿಕೊಂಡಾಗ, ಇದ್ದ ಪರಿಸ್ಥಿತಿ ಅದಾಗಿತ್ತು.

ಅವನು ಒಳಗೆ ಬರುವುದನ್ನು ಅಮರಾಂತ ನೋಡಿದಳು. ಅವನು ಏನನ್ನೂ ಹೇಳದಿದ್ದರೂ, ಅವನು ಯಾಕೆ ಬಂದಿದ್ದಾನೆಂಬುದನ್ನು ಅವಳು ತಿಳಿದಿದ್ದಳು. ಊಟದ ಮೇಜಿನ ಮುಂದೆ ಕುಳಿತಾಗ ಒಬ್ಬರನ್ನೊಬ್ಬರು ನೋಡುವ ಸಾಹಸ ಮಾಡಲಿಲ್ಲ. ಆದರೆ ಎರಡು ವಾರಗಳ ನಂತರ, ಉರ್ಸುಲಾಳ ಎದುರಿನಲ್ಲಿ, ಅವಳತ್ತ ನೋಡಿ ಹೇಳಿದ. "ಯಾವಾಗಲೂ ನಿನ್ನನ್ನೇ ಯೋಚಿಸುತ್ತಿದ್ದೆ" ಎಂದು. ಅಮರಾಂತ ಅವನಿಂದ ದೂರವೇ ಇದ್ದಳು. ಆಕಸ್ಮಿಕವಾಗಿ ಎದುರಾಗುವ ಸನ್ನಿವೇಶಗಳಿಂದಲೂ ತನ್ನನ್ನು ರಕ್ಷಿಸಿಕೊಂಡಳು. 'ರೆಮೆಡಿಯೋಸ್ ದ ಬ್ಯೂಟಿ' ಯಿಂದ ದೂರವಾಗದಿರಲು ಪ್ರಯತ್ನಿಸಿದಳು. ಅವಳ ಸಂಬಂಧಿ ಅವಳನ್ನು ಎಷ್ಟು ದಿನ ಈ ಕಪ್ಪು ಪಟ್ಟಿಯನ್ನು ಕೈಮೇಲೆ ಇರಿಸಿಕೊಳ್ಳ ಬಯಸುತ್ತಿ ಎಂದು ಕೇಳಿದಾಗ ಉಂಟಾದ ನಾಚಿಕೆ ಅವಳಿಗೆ ಒಂದು ರೀತಿಯ ಸಂಕೋಚಕ್ಕೆ ದಾರಿಮಾಡಿತು. ಪಟ್ಟಿಯನ್ನು ಅವಳು ತನ್ನ ಕನ್ಯತ್ವಕ್ಕೆ ಸಂಬಂಧಪಟ್ಟುದೆಂದಳು. ಅವನು ಬಂದಾಗ, ಅವಳು ತನ್ನ ಮಲಗುವ ಕೋಣೆಯ ಬಾಗಿಲನ್ನು ಮುಚ್ಚಿಬಿಟ್ಟಳು. ಆದರೆ ಪಕ್ಕದ ಕೋಣೆಯಿಂದ ಪ್ರಶಾಂತವಾಗಿ ಮಲಗಿದ್ದ ಅವನ ಗೊರಕೆಗಳು ಎಷ್ಟು ರಾತ್ರಿಗಳು ಕೇಳಿಸಿಕೊಂಡಳೆಂದರೆ, ಜಾಗರೂಕತೆಯನ್ನೇ ಮರೆತುಬಿಟ್ಟಳು. ಅವನು ಹಿಂತಿರುಗಿದ ಎರಡು ತಿಂಗಳ ನಂತರ, ಒಂದು ದಿನ ಬೆಳಗಿನ ಜಾವ, ಮಲಗುವ ಕೋಣೆಯೊಳಗೆ ಬರುವ ಸದ್ದನ್ನು ಕೇಳಿಸಿಕೊಂಡಳು. ಆಗ ಓಡಿಹೋಗುವುದನ್ನಾಗಲೀ, ಜೋರಾಗಿ ಕೂಗಿಕೊಳ್ಳುವುದಾಗಲಿ, ಮಾಡಿಕೊಳ್ಳಬೇಕೆಂದಿದ್ದವಳು ಮಾಡದೆ, ಒಂದು ಬಗೆಯ ಮಧುರವಾದ ನಿರಾಳತೆಯನ್ನು ಅನುಭವಿಸಿದ್ದು ಸೊಳ್ಳೆ ಪರದೆ ಒಳಗೆ ತೂರಿಕೊಂಡಿದ್ದುದನ್ನು, ಅವನು ಮಗುವಾಗಿದ್ದಾಗ ಮತ್ತು ಯಾವಾಗಲೂ ಮಾಡುತ್ತಿದ್ದಂತೆ ಮಾಡುತ್ತಿದ್ದುದನ್ನು ಅನುಭವಿಸಿದಳು. ಅವನು ಸಂಪೂರ್ಣ ಬೆತ್ತಲಾಗಿದ್ದಾನೆಂದು ಅರಿವಿಗೆ ಬಂದ ಕೂಡಲೆ, ಹಲ್ಲು ಕಟಕಟಿಸುತ್ತ, ಶೀತ ಬೆವರನ್ನು ಹತ್ತಿಕ್ಕಲಾಗದೆ, "ಹೊರಟು ಹೋಗು" ಎಂದು ಪಿಸುದನಿಯಲ್ಲಿ ಹೇಳಿದಳು. ಆದರೆ ಅರೆಲಿಯಾನೊ ಜೋಸ್ ಈಗ

ಮಗುವಾಗಿರಲಿಲ್ಲ. ಸೇನೆಯಲ್ಲಿದ್ದ ಒಂದು ಮೃಗವಾಗಿದ್ದ. ಅವನಿಗೆ ಆಗ ಏನು ಮಾಡಬೇಕೆಂಬುದು ಗೊತ್ತಿತ್ತು. ಆ ರಾತ್ರಿಯಿಂದಲೇ ನೀರಸ, ಪರಿಣಾಮಹೀನವಾದ ಘರ್ಷಣೆಗಳು ಪ್ರಾರಂಭವಾಗಿ ಬೆಳಗಿನವರೆಗೂ ಮುಂದುವರೆಯುತ್ತಿತ್ತು. ಸುಸ್ತಾದ ಅಮರಾಂತ, "ನಾನು ನಿನ್ನ ಚಿಕ್ಕಮ್ಮ, ಅಷ್ಟೇ ಅಲ್ಲ ಹೆಚ್ಚು ಕಡಿಮೆ ನಿನ್ನ ಅಮ್ಮನೆ. ವಯಸ್ಸಿನಿಂದಷ್ಟೇ ಅಲ್ಲ, ನಿನ್ನನ್ನು ಬೆಳೆಸಿದ್ದೂ ಕೂಡಾ ನಾನೆ ಆದ್ದರಿಂದ" ಬೆಳಗಿನ ಜಾವದಲ್ಲಿ ಅರೆಲಿಯಾನೊ ಹೊರಟು ಹೋಗುತ್ತಿದ್ದ ಮತ್ತು ಮರುದಿನ ಬೆಳಿಗ್ಗೆ ಹಿಂತಿರುಗುತ್ತಿದ್ದ. ಪ್ರತಿಸಲವೂ ಅವಳು ಬಾಗಿಲು ಹಾಕದ್ದನ್ನು ನೋಡಿ ಮತ್ತಷ್ಟು ಉದ್ವೇಗಕ್ಕೆ ಒಳಗಾಗುತ್ತಿದ್ದ. ಒಂದು ಕ್ಷಣವೂ ಅವಳನ್ನು ಬಯಸುವುದನ್ನು ನಿಲ್ಲಿಸಲಿಲ್ಲ. ಅವಳನ್ನು ವಶಕ್ಕೆ ತೆಗೆದುಕೊಂಡ. ಊರುಗಳಲ್ಲಿನ ಕತ್ತಲೆಯ ಮಲಗುವ ಕೋಣೆಗಳಲ್ಲಿ, ಮುಖ್ಯವಾಗಿ ಹೇಸಿಗೆಯ ಸ್ಥಳಗಳಲ್ಲಿ, ಗಾಯಾಳುಗಳ ಪಟ್ಟಿಯ ಮೇಲಿನ ಒಣಗಿದ ರಕ್ತದ ವಾಸನೆಯಲ್ಲಿ, ಸಾವಿನ ಹಠಾತ್ ಅಪಾಯದ ಭೀತಿಯಲ್ಲಿ, ಎಲ್ಲ ಸ್ಥಳಗಳಲ್ಲಿ. ಎಲ್ಲ ಸಮಯಗಳಲ್ಲಿ ಅವಳನ್ನು ಕಾಣುತ್ತಿದ್ದ. ನೆನಪಿನಿಂದ ಅವಳನ್ನು ಅಳಿಸಿಹಾಕಲು ದೂರ ಓಡಿಹೋಗಲು ನೋಡಿದ್ದಷ್ಟೆ ಅಲ್ಲ, ಅವನ ಸಂಗಾತಿಗಳು ಸಾಹಸವೆಂದು ಭಾವಿಸಿದ ಹುಚ್ಚು ಆವೇಶದಿಂದಲೂ ಪ್ರಯತ್ನಿಸಿದ. ಆದರೆ ಯುದ್ಧದ ಹೊಲಸಿನಲ್ಲಿ ಈಜಾಡುತ್ತಿದ್ದರೂ ಅವಳ ರೂಪದ ಕಲ್ಪನೆ ಹೆಚ್ಚುತ್ತಿತ್ತು. ಕಡೆಗೆ ಯುದ್ಧವೇ ಅಮರಾಂತಳನ್ನು ಹೋಲುತ್ತಿತ್ತು. ಹಾಗಾಗಿ ತನ್ನ ಸಾವಿನಿಂಧ ಅವಳನ್ನು ಸಾಯಿಸುವ ಮಾರ್ಗವನ್ನು ಹುಡುಕುತ್ತ ವೇದನೆ ಅನುಭವಿಸುತ್ತ ಅಲೆಯುತ್ತಿದ್ದ.

ಯಾರೋ ಒಬ್ಬ ವಯಸ್ಸಾದ ವ್ಯಕ್ತಿ ಅಮರಾಂತಳನ್ನು, ಅವಳಿಗೆ ಸಂಬಂಧಿಯೇ ಆಗಿದ್ದವನನ್ನು ಮದುವೆಯಾಗಿ, ಅವನ ಮಗನೆ ******* ವಿಷಯವನ್ನು ತಿಳಿಸಿದಾಗಲೇ ಇದೆಲ್ಲಕ್ಕೂ ಕೊನೆ ಕಂಡದ್ದು.

"ಯಾರಾದರೂ ತನ್ನ ಚಿಕ್ಕಮ್ಮನನ್ನೇ ಮದುವೆಯಾಗಬಹುದಾ?" – ಎಂದು ದಿಗ್ಭ್ರಮೆಯಿಂದ ಕೇಳಿದ.

"ಅಷ್ಟೇ ಅಲ್ಲ, ಈ ಹೋರಾಟವನ್ನು ಪಾದ್ರಿಗಳ ವಿರುದ್ಧ ಮುಂದುವರೆಸಿದ್ದೇವೆ. ಇದರಿಂದ ತಮ್ಮ ಸ್ವಂತ ತಾಯಂದಿರನ್ನೂ ಮದುವೆಯಾಗಲು ಸಾಧ್ಯವಾಗಲಿ ಎಂದು" ಒಬ್ಬ ಸೈನಿಕ ಉತ್ತರಿಸಿದ.

ಎರಡು ವಾರಗಳ ನಂತರ ಅವನು ಅದನ್ನು ತೊರೆದ. ತನ್ನ ಕಲ್ಪನೆಯಲ್ಲಿದ್ದುದಕ್ಕಿಂತ ಅಮರಾಂತ ಹೆಚ್ಚು ಸೊರಗಿದ್ದಳು. ದುಃಖಿತಳಾಗಿದ್ದಳು. ಪ್ರಬುದ್ಧತೆಯ ಕೊನೆಯಂಚಿನಲ್ಲಿದ್ದಳು. ಆದರೆ ಮಲಗುವ ಕೋಣೆಯ ಕತ್ತಲಿನಲ್ಲಿ, ಎಂದಿಗಿಂತಲೂ ಉದ್ರಿಕ್ತಳಾಗಿದ್ದಳು. ಆದರೆ ಪ್ರತಿರೋಧದ ಕ್ರಿಯೆಯಲ್ಲಿ ಸವಾಲೆನಿಸುವಂತಹ ಉಗ್ರತೆಯಲ್ಲಿದ್ದಳು. "ನೀನೊಬ್ಬ ಕಾಡು ಮನುಷ್ಯ"... "ಪೋಪ್‌ರಿಂದ ವಿಶೇಷವಾಗಿ ಅನುಮತಿ ಪಡೆಯದೆ ನಿನ್ನ ಚಿಕ್ಕಮ್ಮನ ಜೊತೆ ಹೀಗೆಲ್ಲ ಮಾಡುವುದು ಸರಿಯಲ್ಲ" ಎಂದು ಅವನ ಕಿರುಕುಳದಿಂದ ಬೇಸತ್ತು ಹೇಳಿದಳು. ಅವಳು ಸ್ವಲ್ಪ ಸಡಿಲವಾಗಲು, ಬೇಕಾದರೆ

ತಾನು ರೋಮಿಗೆ ಹೋಗುವುದಾಗಿಯೂ ಯೂರೋಪಿಗೆ ಹೋಗಿ ಧರ್ಮಾಧಿಕಾರಿಯ ಚಪ್ಪಲಿಗಳನ್ನಾದರೂ ಮುತ್ತಿಕ್ಕುವುದಾಗಿ ವಚನ ಕೊಟ್ಟ.

"ಅದಷ್ಟೇ ಅಲ್ಲ, ಯಾವುದೇ ಮಕ್ಕಳಾದರೂ ಹಂದಿಬಾಲದೊಂದಿಗೆ ಹುಟ್ಟುತ್ತಾರೆ" ಎಂದು ಅಮರಾಂತ ತಿರುಗೇಟು ನೀಡಿದಳು.

ಅರೆಲಿಯಾನೊ ಜೋಸ್ ಇದಾವುದನ್ನು ಕಿವಿ ಮೇಲೆ ಹಾಕಿಕೊಳ್ಳಲಿಲ್ಲ.

"ಅವರು ಆರ್ಮಡಿಲ್ಲೋ (...............)ಗಳಾಗಿ ಹುಟ್ಟಿದರೂ ನಾನು ತಲೆ ಕೆಡಿಸಿಕೊಳ್ಳೋದಿಲ್ಲ" ಎಂದು ಬೇಡಿಕೊಂಡ.

ಒಂದು ದಿನ ಬೆಳಗಿನ ಜಾವ ಸಹಿಸಲಸಾಧ್ಯವಾದ ಕಾಮೋತ್ಕಟತೆಯ ನೋವಿನಿಂದ ಕತಾರಿನೊ ಕಡೆ ಹೋದ. ಅಲ್ಲಿ ಜೋತುಬಿದ್ದ ಮೊಲೆಗಳ ಪ್ರೀತಿಯ ಅಗ್ಗದ ಹೆಣ್ಣೊಬ್ಬಳು ಸಿಕ್ಕಿ ಅವನ ಕಾಮತೃಷೆಯನ್ನು ಸ್ವಲ್ಪ ಸಮಯದ ಮಟ್ಟಿಗೆ ತಣಿಸಿದಳು.

ಅಮರಾಂತಳ ಬಗ್ಗೆ ನಿರ್ಲಕ್ಷ್ಯ ತೋರಿಸಲು ಪ್ರಯತ್ನಿಸಿದ. ವರಾಂಡದಲ್ಲಿ ಹೊಲಿಗೆ ಯಂತ್ರದ ಮೇಲೆ ಕುಳಿತು ಕೆಲಸ ಮಾಡುತ್ತಿದ್ದುದನ್ನು ನೋಡುತ್ತಿದ್ದ. ಹೊಲಿಗೆ ಯಂತ್ರವನ್ನು ಕುಶಲತೆಯಿಂದ ಬಳಸುವುದನ್ನು ಕಲಿತಿದ್ದಳು. ಅವನು ಅವಳೊಂದಿಗೆ ಮಾತೂ ಆಡುತ್ತಿರಲಿಲ್ಲ. ಅಮರಾಂತಾಗೆ ಬಿಡುಗಡೆಯ ಭಾವವುಂಟಾಯಿತು. ಆದರೆ ಅದೇ ಸಮಯದಲ್ಲಿ, ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್, ಚೈನೀಸ್ ಚೆಕರ್ ಆಡುತ್ತಿದ್ದ ಆ ಮಧ್ಯಾಹ್ನಗಳು, ತನ್ನ ಮಲಗುವ ಕೋಣೆಯಲ್ಲಿ ಅವನು ಬರಬೇಕೆಂಬ ಬಯಕೆ – ಇವೆಲ್ಲವೂ ಮತ್ತೆ ತನ್ನನ್ನೇಕೆ ಯೋಚಿಸುವಂತೆ ಮಾಡುತ್ತಿವೆ ಎನ್ನುವುದು ಮಾತ್ರ ಅರ್ಥವಾಗಲಿಲ್ಲ. ಅರೆಲಿಯಾನೊ ಜೋಸ್ ತನ್ನ ನಿರ್ಲಕ್ಷ್ಯದಿಂದ ರಾತ್ರಿಗಳಲ್ಲಿ ತಾನೆಷ್ಟು ಕಳೆದುಕೊಂಡೆ ಎಂಬುದನ್ನು ಅರ್ಥಮಾಡಿಕೊಳ್ಳಲಿಲ್ಲ. ತನ್ನ ಈ ಪ್ರಹಸನ ಸಾಕೆನಿಸಿ ಅವಳ ರೂಮಿಗೆ ಹೋದ. ಅವಳು ದೃಢತೆಯಿಂದ ಸ್ಪಷ್ಟ ನಿಲುವಿನಿಂದ ಅವನನ್ನು ತಿರಸ್ಕರಿಸಿ ಎಂದೆಂದಿಗೂ ಪ್ರವೇಶವಿಲ್ಲದಂತೆ ಮಲಗುವ ಕೋಣೆಯ ಬಾಗಿಲುಗಳನ್ನು ಮುಚ್ಚಿಬಿಟ್ಟಳು.

ಅರೆಲಿಯಾನೊ ಜೋಸ್ ಹಿಂತಿರುಗಿದ ಕೆಲ ತಿಂಗಳ ನಂತರ ಬಹಳ ಉತ್ಸಾಹದಲ್ಲಿದ್ದ ಮತ್ತು ಮಲ್ಲಿಗೆ ಪರಿಮಳವನ್ನು ಸೂಸುತ್ತಿದ್ದ ಹೆಂಗಸೊಬ್ಬಳು ಐದು ವರ್ಷ ಹುಡುಗನೊಂದಿಗೆ ಮನೆಗೆ ಬಂದಳು. ಅವಳು ಆ ಹುಡುಗ ಕರ್ನಲ್ ಅರೆಲಿಯಾನೊ ಬ್ಯುಂಡಿಯಾನ ಮಗನೆಂದೂ ಅವನಿಗೆ ಹೆಸರಿಡಲು ಉರ್ಸುಲಾ ಬಳಿಗೆ ಕರೆತಂದಿರುವುದಾಗಿ ತಿಳಿಸಿದಳು. ಹೆಸರಿಲ್ಲದ ಆ ಹುಡುಗನ ಹುಟ್ಟಿನ ಬಗ್ಗೆ ಯಾರೂ ಸಂದೇಹಿಸಲಿಲ್ಲ. ಐಸ್ ನೋಡಲು ಮೊದಲ ಬಾರಿಗೆ ಕರೆದುಕೊಂಡು ಹೋಗಿದ್ದ ಸಮಯದಲ್ಲಿ ಅರೆಲಿಯಾನೊ ಬ್ಯುಂಡಿಯಾ ಹೇಗಿದ್ದನೊ ಹಾಗೇ ಕಾಣಿಸುತ್ತಿದ್ದ ಆ ಹುಡುಗ. ಆ ಹೆಂಗಸು ಅವನು ಹುಟ್ಟಿದಾಗ ಕಣ್ಣುಗಳನ್ನು ಅಗಲವಾಗಿ ಬಿಟ್ಟುಕೊಂಡೇ ಇದ್ದುದನ್ನು ಮತ್ತು ತಾನು ಅದರಿಂದ ಗಾಭರಿಗೊಂಡದ್ದನ್ನು ತಿಳಿಸಿದಳು. "ಅವನು ಅಪ್ಪನಂತೆಯೇ! ಆದರೆ ಒಂದೇ ಒಂದು ಇಲ್ಲದ್ದೆಂದರೆ ಅವನ ದೃಷ್ಟಿ ಬಿದ್ದಕೂಡಲೇ

ತೂಗಾಡುವ ಕುರ್ಚಿ ತೂಗಾಡದೆ ಹೋದದ್ದು". ಅವನಿಗೆ ಅರೆಲಿಯಾನೊ ಎಂದು ಹೆಸರಿಸಿ ಹೆಸರಿನ ಕೊನೆಯಲ್ಲಿ ತಾಯಿ ಹೆಸರನ್ನೂ ಸೇರಿಸಿದರು. ಕಾರಣ ತಂದೆ ಯಾರೆಂದು ತಿಳಿಯುವವರೆಗೂ ತಂದೆ ಹೆಸರನ್ನು ಕಾನೂನು ಒಪ್ಪಿಕೊಳ್ಳುವುದಿಲ್ಲ. ಜನರಲ್ ಮಾಂಕಾಡಾ ಅವನಿಗೆ ಸಾಕು ತಂದೆಯಾದರು. ಅಮರಾಂತ ಅವನನ್ನು ನೋಡಿಕೊಳ್ಳುವ ಜವಾಬ್ದಾರಿಯನ್ನು ತನಗೇ ಕೊಡಲು ಕೇಳಿದರೂ ಉರ್ಸುಲಾ ಅದನ್ನು ವಿರೋಧಿಸಿದಳು. ಕೋಳಿಗಳನ್ನು ಹುಂಜಗಳ ಕಡೆಗೆ ಮುಕ್ತವಾಗಿ ಹೋಗಲು ಬಿಡುವಂತೆ, ಸೈನಿಕರ ಮಲಗುವ ಕೋಣೆಗಳಿಗೆ ಕನ್ಯೆಯರನ್ನು ಕಳಿಸುವ ಸಂಪ್ರದಾಯದ ಬಗ್ಗೆ ಉರ್ಸುಲಾಗೆ ತಿಳಿದಿರಲಿಲ್ಲ. ಕ್ರಮೇಣ ಕರ್ನಲ್ ಅರೆಲಿಯಾನೊ ಬ್ಯುಂಡಿಯಾನ ಮತ್ತೆ ಒಂಭತ್ತು ಮಕ್ಕಳಿಗೆ ನಾಮಕರಣ ಮಾಡಲು ಮನೆಗೆ ಕರೆತರಲಾಯಿತು. ಅವರೆಲ್ಲರಲ್ಲಿ ದೊಡ್ಡವನಾದವನು ಹತ್ತು ವರ್ಷದವನಾಗಿದ್ದು, ಸ್ವಲ್ಪ ಭಿನ್ನವಾಗಿ ಹಸಿರು ಕಣ್ಣುಗಳಿದ್ದವನಲ್ಲಿ ಮಾತ್ರ ತಂದೆಯ ಕುಟುಂಬದ ಯಾವ ಹೋಲಿಕೆಗಳನ್ನೂ ಹೊಂದಿರಲಿಲ್ಲ. ಬಂದವರಲ್ಲಿ ಎಲ್ಲ ಗಂಡು ಮಕ್ಕಳೇ ಆಗಿದ್ದರು. ಅಲ್ಲದೆ ಎಲ್ಲ ವಯಸ್ಸಿನವರೂ ಇದ್ದರು. ಆದರೆ ಅವರೆಲ್ಲರಲ್ಲಿ ಸಾಮಾನ್ಯವಾಗಿ ಕಾಣುತ್ತಿದ್ದ ಒಂಟಿತನದ ನೋಟ ಅವರ ಸಂಬಂಧದ ಬಗ್ಗೆ ಯಾವ ಅನುಮಾನವನ್ನೂ ಉಳಿಸಿರಲಿಲ್ಲ. ಆ ಗುಂಪಿನಲ್ಲಿ ಇಬ್ಬರು ಮಾತ್ರ ಭಿನ್ನವಾಗಿದ್ದರು. ಒಬ್ಬ ವಯಸ್ಸಿಗಿಂತ ದೊಡ್ಡವನಾಗಿ ಕಾಣುತ್ತಿದ್ದುದೇ ಅಲ್ಲದೆ ಚೀನಿ ಹೂವಿನ ಕುಂಡಗಳನ್ನು ಒಡೆದು ಚೂರು ಚೂರು ಮಾಡುತ್ತಿದ್ದುದನ್ನು ನೋಡಿದರೆ ಕಂಡದ್ದನ್ನೆಲ್ಲ ಪುಡಿ ಪುಡಿ ಮಾಡುವ ಅಭ್ಯಾಸ ಅವನ ಕೈಗಳಿಗೆ ಇದ್ದಂತೆ ಕಾಣಿಸಿತು. ಮತ್ತೊಬ್ಬ ಹುಡುಗ ಕೆಂಗೂದಲಿನವ ತಾಯಿಯಂಥ ಕಣ್ಣುಗಳನ್ನು ಹೊಂದಿದ್ದ. ಕೂದಲನ್ನು ಹೆಂಗಸಿನಂತೆ ಉದ್ದವಾಗಿ ಗುಂಗುರು ಗುಂಗುರಾಗಿ ಬೆಳೆಯಲು ಬಿಟ್ಟಿದ್ದ. ಅವನು ಆ ಮನೆಯಲ್ಲಿ ಹುಟ್ಟಿ ಬೆಳೆದವನಂತೆ ತೀರಾ ಪರಿಚಯವಿರುವಂತೆ ಮನೆಯೊಳಗೆ ಬಂದವ ನೇರವಾಗಿ ಉರ್ಸುಲಾಳ ಪೆಠಾರಿ ಇಟ್ಟಿದ್ದ ಮಲಗುವ ಕೋಣೆಗೆ ಪ್ರವೇಶಿಸಿ "ನನಗೆ ಕುಣಿಯುವ ಹುಡುಗಿಯನ್ನು ಕೊಡು" ಎಂದು ಅಧಿಕಾರವಾಣಿಯಿಂದ ಕೇಳಿದ. ಉರ್ಸುಲಾಗೆ ದಿಗ್ಭ್ರಮೆಯಾಯಿತು. ಅವಳು ಪೆಠಾರಿಯ ಬಾಗಿಲನ್ನು ತೆರೆದು ಮೆಲ್‌ಕಿಯಾಡ್ಸ್ ಬಿಟ್ಟುಹೋಗಿದ್ದ ಕಾಲದ ಹಳೆಯ ಧೂಳು ಹಿಡಿದ ವಸ್ತುಗಳಲ್ಲಿ ಹುಡುಕಾಡಿದಳು. ಕಡೆಗೆ ಕಾಲುಚೀಲಗಳಲ್ಲಿ ಸುತ್ತಿ ಇಟ್ಟಿದ್ದ ಪೀತ್ರೋ ಕ್ರೆಸ್ಪಿ ತಂದು ಕೊಟ್ಟಿದ್ದ ಅವನು ಕೇಳಿದ ಬೊಂಬೆಯಿತ್ತು. ಇದರ ವಿಚಾರವನ್ನು ಎಲ್ಲರೂ ಮರೆತೇ ಹೋಗಿದ್ದರು.

ಹನ್ನೆರಡು ವರ್ಷದ ಒಳಗಾಗಿ ಎಲ್ಲ ಮಕ್ಕಳಿಗೂ ಅರೆಲಿಯಾನೊ ಹೆಸರನ್ನು ಕೊಟ್ಟು ಕಡೆಯಲ್ಲಿ, ಯುದ್ಧದ ಅವಧಿಯಲ್ಲಿ ಅವನಿಂದ ಹುಟ್ಟಿದ 17 ಮಕ್ಕಳ ತಾಯಂದಿರ ಹೆಸರುಗಳನ್ನು ಜೋಡಿಸಲಾಯಿತು. ಮೊದಲಿಗೆ ಉರ್ಸುಲಾ ಅವರ ಜೇಬುಗಳನ್ನು ಹಣದಿಂದ ತುಂಬಿದರೆ ಅಮರಾಂತ ಅವರು ಅಲ್ಲಿಯೇ ಉಳಿಯುವಂತೆ ಮಾಡಲು ಪ್ರಯತ್ನಿಸುತ್ತಿದ್ದಳು. ಕಡೆಗೆ ಅವರು ಉಡುಗೊರೆಗಳನ್ನೂ ಕೊಟ್ಟು ಸಾಕು ತಾಯಂದಿರಾಗಿರಲಷ್ಟಕ್ಕೇ ಸೀಮಿತಗೊಳಿಸಿಕೊಂಡರು. "ನಾವು ನಾಮಕರಣ ವಿಧಿಯೊಂದಿಗೆ ನಮ್ಮ ಕರ್ತವ್ಯ ಪೂರೈಸಿದ್ದೇವೆ" ಎಂದು ಹೇಳುತ್ತಾ, ಒಂದು ಲೆಡ್ಜರ್‌ನಲ್ಲಿ ಆ ಮಕ್ಕಳ ತಾಯಂದಿರ ಹೆಸರು, ವಿಳಾಸ, ಹುಟ್ಟಿದ ದಿನಾಂಕ ಮತ್ತು ಸ್ಥಳ ಎಲ್ಲವನ್ನೂ

ನಮೂದಿಸಿದಳು. ಅರೆಲಿಯಾನೊ ಹಿಂತಿರುಗಿದಾಗ ಅವನಿಗೆ ಸರಿಯಾದ ಮಾಹಿತಿಗಳು ಸಿಗಬೇಕು ಎಂದುಕೊಂಡಳು. ಊಟದ ಸಮಯದಲ್ಲಿ ಜನರಲ್ ಮಾಂಕಾಡೋಗೆ ಕುಲಗೋತ್ರ ಸಂಬಂಧವಿಲ್ಲದ ಈ ಮಕ್ಕಳನ್ನು ಎಂದಾದರೂ ಒಂದು ದಿನ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಹಿಂತಿರುಗಿದಾಗ ಅವನ ಎಲ್ಲ ಮಕ್ಕಳನ್ನೂ ಒಟ್ಟಿಗೆ ಈ ಮನೆಯಲ್ಲಿ ಒಪ್ಪಿಸಿಬಿಡಬೇಕೆಂಬ ಅಭಿಪ್ರಾಯವನ್ನು ತಿಳಿಸಿದಳು.

"ನೀವೇನೂ ಚಿಂತೆಮಾಡಬೇಡಿ, ನೀವು ಅಂದುಕೊಳ್ಳುತ್ತಿರುವುದಕ್ಕೆ ಮೊದಲೇ ಬರುತ್ತಾನೆ" ಎಂದು ಒಗಟಾಗಿ ಹೇಳಿದ.

ಜನರಲ್ ಮಾಂಕಾಡಾಗೆ ತಿಳಿದಿದ್ದ ಮತ್ತು ತಿಳಿಸಲು ಇಷ್ಟಪಡದ ವಿಷಯವೇನೆಂದರೆ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಆಗಲೇ, ತಾನು ಪ್ರಾರಂಭಿಸಿದ್ದ ಎಷ್ಟೋ ದಿನದಿಂದ ಮುಂದೂಡಲ್ಪಟ್ಟ ಕ್ರಾಂತಿಕಾರಿ, ಭಯಾನಕ ದಂಗೆಯನ್ನು ತನ್ನ ನೇತೃತ್ವದಲ್ಲಿ ಮುಂದುವರೆಸಲು, ಬರುವ ಹಾದಿಯಲ್ಲಿದ್ದ.

ಮೊದಲ ಯುದ್ಧಕ್ಕೆ ಮುಂಚಿನಂತೆ ವಾತಾವರಣ ಬಹಳ ಗಂಭೀರವಾಗಿತ್ತು. ಮೇಯರನೇ ಪ್ರಾರಂಭಿಸಿದ್ದ ಹುಂಜದ ಕಾಳಗವನ್ನು ನಿಷೇಧಿಸಲಾಯಿತು. ಮುನಿಸಿಪಲ್ ಅಧಿಕಾರ ಚಲಾವಣೆಯನ್ನು ಕ್ಯಾಪ್ಟನ್ ರಿಕಾರ್ಡೊರ್ ವಹಿಸಿಕೊಂಡ. ಲಿಬರಲ್‌ಗಳ ದೃಷ್ಟಿಯಲ್ಲಿ ಅವನೊಬ್ಬ ಪ್ರಚೋದಕನಾಗಿ ಕಾಣಿಸಿದ. "ಭಯಂಕರವಾದದ್ದು, ಏನೋ ಸಂಭವಿಸುತ್ತದೆ" ಎಂದು ಉರ್ಸುಲಾ ಅರೆಲಿಯಾನೊ ಜೋಸ್‌ಗೆ ಹೇಳಿದಳು. "ಆರು ಗಂಟೆಯ ನಂತರ ರಸ್ತೆಗಳಲ್ಲಿ ಓಡಾಡಬೇಡ" ಎಂದೂ ಎಚ್ಚರಿಸಿದಳು. ಆದರೆ ಅವಳು ಹೇಳಿದ್ದು ಪ್ರಯೋಜನವಾಗಲಿಲ್ಲ. ಅರೆಲಿಯಾನೊ ಜೋಸ್, ಆರ್ಕಾಡಿಯಾನಂತೆ ಅವಳಿಂದ ದೂರವೇ ಇದ್ದ. ಮನೆಗೆ ಹಿಂತಿರುಗಿದ್ದು ಒಂದು ರೀತಿಯಲ್ಲಿ ದಿನನಿತ್ಯದ ಅಗತ್ಯಗಳಿಗೆ ಗಮನಕೊಡದೆ ಸೋಮಾರಿಯಾಗಿ ದುರಭ್ಯಾಸಗಳಿಗೆ, ಅವನ ಚಿಕ್ಕಪ್ಪನಂತೆ ಒಳಗಾಗುವ ಸಾಧ್ಯತೆಗಳಿಗೆ ದಾರಿಯಾಯಿತು. ಅವನ ಮನಸ್ಸಿನ ಮೇಲೆ ಯಾವುದೇ ಗಾಯದ ಗುರುತಿಲ್ಲದಂತೆ ಅಮರಾಂತಳ ನೆನಪು ಪೂರ್ತಿಯಾಗಿ ಅಳಿಸಿಹೋಯಿತು. ಸುಮ್ಮನೆ ಅಲ್ಲಿ ಇಲ್ಲಿ ಅಲೆದಾಡುತ್ತ, ತನ್ನ ಒಂಟಿತನವನ್ನು ಹೋಗಲಾಡಿಸಿಕೊಳ್ಳಲು ಆಗಾಗ ಹೆಣ್ಣಿನ ಸಹವಾಸ ಮಾಡುತ್ತ, ಉರ್ಸುಲಾ ಬಚ್ಚಿಟ್ಟು ತಾನೇ ಮರೆತುಹೋಗಿದ್ದ ಹಣವನ್ನು ಎಗರಿಸುತ್ತ ಸಮಯ ಕಳೆಯುತ್ತಿದ್ದ. ಕೇವಲ ಬಟ್ಟೆ ಬದಲಾಯಿಸುವುದಕ್ಕಷ್ಟೇ ಮನೆಗೆ ಬರುತ್ತಿದ್ದ. "ಎಲ್ಲಾ ಒಂದೇ ಥರ" "ಮೊದಮೊದಲು ಚೆನ್ನಾಗಿಯೇ ನಡೆದುಕೊಳ್ಳುತ್ತಾರೆ, ಬಹಳ ವಿನಯ ವಿಧೇಯತೆಗಳಿಂದ ಇರುತ್ತಾರೆ, ಒಂದು ನೊಣವನ್ನೂ ಸಾಯಿಸಲಾಗದಷ್ಟು ಅಸಮರ್ಥರಾಗಿ ಕಾಣುತ್ತಾರೆ, ಗಡ್ಡ ಮೀಸೆ ಮೂಡಿ ಬಂದ ತಕ್ಷಣ ಹಾಳಾಗಿ ಹೋಗುತ್ತಾರೆ." ಎಂದು ವಿಷಾದದಿಂದ ಗೊಣಗಿದಳು. ತಾನು ಯಾರು ಎಂಬುದನ್ನು ತಿಳಿಯದಿದ್ದ ಆರ್ಕಾಡಿಯೋ ಥರ ಅಲ್ಲದೆ ಇವನು ತಾನು ಪಿಲಾರ್ ತರ್ನಿರಾ ಮಗ ಎಂಬುದನ್ನು ಪತ್ತೆಹಚ್ಚಿ ಅವಳ ಮಂಚದ ಮೇಲೆ ಮಲಗಿಕೊಳ್ಳುವ ಹಕ್ಕನ್ನು ಪಡೆದುಕೊಂಡ. ತಾಯಿ ಮಗನ ಸಂಬಂಧಕ್ಕಿಂತ ಏಕಾಂತದಲ್ಲಿ ಅವರಿಬ್ಬರೂ ಅಪರಾಧದ ಸಹಭಾಗಿಗಳಾಗಿದ್ದರು. ಪಿಲಾರ್ ತರ್ನಿರಾ ಭರವಸೆಯನ್ನೇ ಕಳೆದುಕೊಂಡಿದ್ದಳು. ಅವಳ

ದನಿ ಉಡುಗಿತ್ತು. ಅವಳ ಮೊಲೆಗಳು ಅತಿಯಾದ ಪ್ರೀತಿಯ ಒತ್ತಡಗಳಿಂದ ಜೋತು ಬಿದ್ದಿದ್ದವು. ಹೊಟ್ಟೆ ಮತ್ತು ತೊಡೆಗಳು ಮೇಲಿಂದ ಮೇಲೆ ಹಂಚಿಕೊಂಡು, ದರಿದ್ರ ಸ್ಥಿತಿಗೆ ಒಳಗಾಗಿತ್ತು. ಆದರೆ ಯಾವುದೇ ಕಹಿಭಾವನೆಗಳಲ್ಲದೆ ಅವಳ ಹೃದಯಕ್ಕೆ ವಯಸ್ಸಾಯಿತು. ದಢೂತಿ, ವಾಚಾಳಿ, ಅವಮಾನಕರ ಸೂಲಗಿತ್ತಿಯಂತೆ ಕಾಣುತ್ತಿದ್ದ ಪಿಲಾರ್ ತರ್ನಿರಾ ತನ್ನ ಕಾರ್ಡುಗಳ ಬಗ್ಗೆ ಇದ್ದ ನಿಷ್ಪ್ರಯೋಜಕ ಭ್ರಮೆಯನ್ನು ಬಿಟ್ಟು, ಬೇರೆಯವರ ಪ್ರೀತಿಯಲ್ಲಿ ಶಾಂತಿ ಸಮಾಧಾನಗಳನ್ನು ಪಡೆಯುತ್ತಿದ್ದಳು. ಅರೆಲಿಯಾನೊ ಜೋಸ್ ಮಧ್ಯಾಹ್ನ ನಿದ್ದೆ ಮಾಡುತ್ತಿದ್ದ ಮನೆಯಲ್ಲಿ ಅಕ್ಕಪಕ್ಕ ಹುಡುಗಿಯರು ತಮ್ಮ ಪ್ರೇಮಿಗಳನ್ನು ಬರಮಾಡಿಕೊಳ್ಳುತ್ತಿದ್ದರು ಒಳಗೆ ಬಂದು ಬಿಟ್ಟು "ಪಿಲಾರ್ ನಿನ್ನ ಕೋಣೆಯನ್ನು ಕಡವಾಗಿ ಕೊಡು" ಎಂದು ಕೇಳುತ್ತಿದ್ದರು. "ಖಂಡಿತ" ಎಂದು ಪಿಲಾರ್ ಉತ್ತರಿಸುತ್ತಿದ್ದು ಯಾರಾದರೂ ಇದ್ದಾಗ,

"ಹಾಸಿಗೆಯಲ್ಲಿ ಜನ ಸಂತೋಷವಾಗಿದ್ದರೆ ನನಗೂ ಸಂತೋಷ" – ಎಂದು ವಿವರಿಸಿ ಹೇಳುತ್ತಿದ್ದಳು.

ಅವಳೆಂದೂ ತನ್ನ ಸಹಾಯಕ್ಕೆ ಹಣವನ್ನು ಪಡೆಯುತ್ತಿರಲಿಲ್ಲ. ಯಾರಿಗೂ ಸಹಾಯವನ್ನು ನಿರಾಕರಿಸುತ್ತಿರಲಿಲ್ಲ. ಹಾಗೆಯೇ ತನ್ನ ಬಳಿಗೆ ಬರುತ್ತಿದ್ದ ಎಷ್ಟೊಂದು ಮಂದಿ ಗಂಡಸರಿಂದ ಹಣವನ್ನೂ ಪಡೆಯದೆ ತನ್ನ ಆ ವಯಸ್ಸಿನಲ್ಲಿಯೂ ಪ್ರೀತಿಯನ್ನು, ಸಾಂದರ್ಭಿಕವಾಗಿ ಲೈಂಗಿಕ ತೃಪ್ತಿಯನ್ನೂ ನೀಡುತ್ತಿದ್ದಳು. ಅವಳ ಐದು ಜನ ಹೆಣ್ಣುಮಕ್ಕಳು ಹದಿವಯಸ್ಸಿನಲ್ಲಿಯೇ ಕಳೆದುಹೋದರು. ಇದ್ದ ಇಬ್ಬರು ಗಂಡು ಮಕ್ಕಳಲ್ಲಿ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಸೈನ್ಯದಲ್ಲಿದ್ದು ಹೋರಾಡುತ್ತಲೇ ಸಾವನ್ನಪ್ಪಿದ. ಮತ್ತೊಬ್ಬ ಹದಿನಾಲ್ಕು ವಯಸ್ಸಿನವನು ಯುದ್ಧದಲ್ಲಿ ಗಾಯಗೊಂಡು, ಜೌಗು ಪ್ರದೇಶದ ಊರೊಂದರಲ್ಲಿ ಕೋಳಿಗಳ ಬುಟ್ಟಿಯನ್ನು ಕದಿಯುತ್ತಿದ್ದಾಗ ಸಿಕ್ಕುಬಿದ್ದು ಸೆರೆಯಾಗಿದ್ದ. ಒಂದು ರೀತಿಯಲ್ಲಿ ಅರೆಲಿಯಾನೊ ಜೋಸ್, ಎತ್ತರದ ಕಪ್ಪಾದ ಅವನಿಗೆ ಕಾರ್ಡುಗಳ ಮೂಲಕ ಅರ್ಧ ಶತಮಾನದ ಆಶ್ವಾಸನೆ ಸಿಕ್ಕಿತ್ತು. ಕಾರ್ಡುಗಳ ಮೂಲಕ ಅವಳನ್ನು ತಲುಪಿದ ಎಲ್ಲ ಗಂಡಸರ ಹಾಗೆ, ಅವನಿಗೂ ಕಾರ್ಡುಗಳ ಮೂಲಕ ಸಾವಿನ ಮುದ್ರೆಬಿದ್ದಿತ್ತು.

"ಇವತ್ತು ರಾತ್ರಿ ಹೊರಗೆ ಹೋಗಬೇಡ. ಇಲ್ಲೇ ಇದ್ದು ಇಲ್ಲಿಯೇ ಮಲಗು. ಕಾರ್ಮೆಲಿಟಾ ಮೋಂಟಿಯೆಲ್ ಅವಳನ್ನು ನಿನ್ನ ಕೋಣೆಗೆ ಕಳಿಸುವಂತೆ ಪೀಡಿಸುತ್ತಿದ್ದಾಳೆ" ಎಂದಳು.

ಅರೆಲಿಯಾನೊ ಜೋಸ್‌ಗೆ ಅಷ್ಟೊಂದು ಕೇಳಿಕೊಳ್ಳುತ್ತಿದ್ದುದರ ಹಿಂದೆ ಏನಿತ್ತು ಎಂಬುದು ತಿಳಿದಿರಲಿಲ್ಲ.

"ಮಧ್ಯರಾತ್ರಿಗೆ ನನ್ನನ್ನು ನಿರೀಕ್ಷಿಸುವಂತೆ ಅವಳಿಗೆ ಹೇಳು" ಎಂದ.

ಅವನು ಥಿಯೇಟರ್‌ಗೆ ಹೋದ. ಸ್ಪ್ಯಾನಿಷ್ ಕಂಪನಿ ಝೊರಿಲ್ಲಾನ ನಾಟಕವನ್ನು

ಕ್ಯಾಪ್ಟನ್ ಆಕ್ವಿಲೇಸ್ ರಿಕಾರ್ಡೋನ ಆದೇಶದ ಮೇರೆಗೆ 'ದಿ ಡ್ಯಾಗರ್ ಆಫ್ ದಿ ಫಾಕ್ಸ್' ಎಂದು ಬದಲಾದ ನಾಟಕದ ಪ್ರದರ್ಶನವಿತ್ತು. ಈ ಬದಲಾವಣೆಗೆ ಕಾರಣ ಲಿಬರಲ್‌ಗಳು, ಕನ್‌ಸರ್ವೆಟೀವ್‌ಗಳನ್ನು ಅನಾಗರಿಕರು ಎಂದು ಭಾವಿಸಿದ್ದರು. ಅರೆಲಿಯಾನೊ ಜೋಸ್ ಬಾಗಿಲಲ್ಲಿ ತನ್ನ ಟಿಕೇಟನ್ನು ತೋರಿಸಿದ್ದಾಗಲೇ ಕ್ಯಾಪ್ಟನ್ ಆಕ್ವಿಲೇಸ್ ರಿಕಾರ್ಡೋ ಮತ್ತಿಬ್ಬರು ಸೈನಿಕರು ಪ್ರೇಕ್ಷಕರನ್ನು ಪರೀಕ್ಷಿಸುತ್ತಿದ್ದುದು(ಶೋಧಿಸುತ್ತಿದ್ದುದು) ಮನವರಿಕೆಯಾಯಿತು.

"ಎಚ್ಚರಿಕೆಯಿರಲಿ ಕ್ಯಾಪ್ಟನ್" ಅರೆಲಿಯಾನೊ ಜೋಸ್ ಅವನನ್ನು ಹೆದರಿಸಿದ.

"ನನ್ನ ಮೇಲೆ ಕೈ ಹಾಕುವ ಎದೆಗಾರಿಕೆ ಇರುವವನ್ಯಾವನೂ ಇನ್ನೂ ಹುಟ್ಟಿಲ್ಲ" ಎಂದ. ಕ್ಯಾಪ್ಟನ್ ಬಲವಂತದಿಂದ ಅವನನ್ನು ಶೋಧಿಸಲು ತೊಡಗಿದಾಗ, ಅರೆಲಿಯಾನೊ ಜೋಸ್ ಬಳಿ ಯಾವ ಆಯುಧವೂ ಇರಲಿಲ್ಲವಾಗಿ ಓಡಿಹೋಗಲು ಪ್ರಯತ್ನಿಸಿದ. ಅವನನ್ನು ಗುಂಡಿಕ್ಕಲು ನೀಡಿದ ಆದೇಶವನ್ನು ಸೈನಿಕರು ಪಾಲಿಸಲಿಲ್ಲ. "ಅವನೊಬ್ಬ ಬ್ಯುಂಡಿಯಾ" ಎಂದು ಅವರಲ್ಲಿ ಒಬ್ಬ ಹೇಳಿದ. ಇದರಿಂದ ಸಿಟ್ಟಿಗೆದ್ದ ಕ್ಯಾಪ್ಟನ್ ಬಂದೂಕನ್ನು ಕಿತ್ತುಕೊಂಡು ರಸ್ತೆಗೆ ಇಳಿದು ಅವನಿಗೆ ಗುರಿಯಿಟ್ಟ.

"ಹೇಡಿಗಳು, ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಆಗಿದ್ದರೆ!" – ಎಂದು ಕೂಗಾಡಿದ.

ಕಾರ್ಮೆಲಿಟಾ ಮೋಂಟಿಯೆಲ್, ಇಪ್ಪತ್ತು ವರ್ಷದ ಕನ್ಯೆ ಆಗತಾನೇ ಸ್ನಾನಮಾಡಿ, ಪಿಲಾರ್ ತರ್ನೆರಾಳ ಮಂಚದ ಮೇಲೆ ಗುಲಾಬಿ ಪಕಳೆಗಳನ್ನು ಹರವುತ್ತಿದ್ದಾಗ, ಗುಂಡಿನ ಸದ್ದು ಕೇಳಿಸಿತು. ಅರೆಲಿಯಾನೊ ಜೋಸ್, ಅಮರಾಂತಳಿಂದ ವಂಚಿತವಾದ ಪ್ರೀತಿ ಸಂತೋಷಗಳನ್ನು ಇವಳಲ್ಲಿ ಪಡೆಯಬೇಕೆಂದಿದ್ದ. ತನ್ನ ಮುಪ್ಪಿನ ದಿನಗಳಲ್ಲಿ, ಏಳು ಮಕ್ಕಳನ್ನು ಪಡೆದ ಮೇಲೆ, ಅವಳ ತೋಳುಗಳಲ್ಲಿ ಸಾಯಬೇಕೆಂದಿದ್ದ. ಆದರೆ ಕಾರ್ಡುಗಳು ಹೇಳಿದ ಭವಿಷ್ಯ ತಪ್ಪಾಗಿ ತಿರುಗುಮರುಗಾಗಿತ್ತು. ಗುಂಡು ಬೆನ್ನಿನಿಂದ ನುಗ್ಗಿ ಎದೆಯ ಭಾಗವನ್ನು ಸೀಳಿಬಿಟ್ಟಿತ್ತು. ಕ್ಯಾಪ್ಟನ್ ಆಕ್ವಿಲೇಸ್ ರಿಕಾರ್ಡೋ ಕೂಡ ಸಾಯಬೇಕಿದ್ದವನು ಅರೆಲಿಯಾನೊ ಜೋಸ್‌ಗಿಂತ ನಾಲ್ಕು ಗಂಟೆ ಮೊದಲೇ ಸಾವನ್ನಪ್ಪಿದ. ಗುಂಡಿನ ಸದ್ದು ಕೇಳುತ್ತಿದ್ದಂತೆ ಮತ್ತೆರಡು ಗುಂಡುಗಳು ಬಂದುವಾದರೂ ಎಲ್ಲಿಂದ ಬಂದುವೆಂದು ತಿಳಿಯಲಾಗಲಿಲ್ಲ. ಅನೇಕ ಧ್ವನಿಗಳು ರಾತ್ರಿಯನ್ನು ನಡುಗುವಂತೆ ಮಾಡಿದವು.

"ಲಿಬರಲ್ ಪಕ್ಷ ಚಿರಾಯುವಾಗಲಿ! ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಚಿರಾಯುವಾಗಲಿ" ಘೋಷಣೆಗಳು ಕೇಳಿ ಬಂತು.

ಹನ್ನೆರಡು ಗಂಟೆ ಸುಮಾರಿಗೆ ಅರೆಲಿಯಾನೊ ಜೋಸ್ ಅತಿ ರಕ್ತಸ್ರಾವದಿಂದ ಸತ್ತ. ಕಾರ್ಮೆಲಿಟಾ ಮೋಂಟಿಯಲ್ ಕಾರ್ಡುಗಳನ್ನು ನೋಡಿದಾಗ ತನ್ನ ಭವಿಷ್ಯ ಶೂನ್ಯವೆಂಬುದನ್ನು ತೋರಿಸುತ್ತಿದ್ದಾಗಿನಾ ನೂರಕ್ಕೂ ಹೆಚ್ಚು ಮಂದಿ ಥಿಯೇಟರ್‌ನಿಂದ ಹೊರಗೆ ಬಂದು ಕ್ಯಾಪ್ಟನ್ ಆಕ್ವಿಟೇಸ್ ರಿಕಾರ್ಡೋನ ಅನಾಥ ಶವಕ್ಕೆ ರಿವಾಲ್ವರ್‌ಗಳಿಂದ ಗುರಿಯಿಟ್ಟು ಗುಂಡು ಹಾರಿಸಿದರು. ಗಸ್ತುಹೊಡೆಯುತ್ತಿದ್ದವನೊಬ್ಬ, ಸೀಸದ

ಗುಂಡುಗಳಿಂದ ಭಾರವಾಗಿದ್ದ ಮತ್ತು ನೀರಿನಿಂದ ತುಂಬಿದ ಬ್ರೆಡ್ಡಿನಂತಿದ್ದ ಮೃತದೇಹವನ್ನು ಗಾಡಿಯಲ್ಲಿಟ್ಟು ಒಯ್ದ.

ಸೈನ್ಯದಲ್ಲಿ ಉಂಟಾಗುತ್ತಿದ್ದ ಉದ್ರಿಕ್ತತೆಯಿಂದ ಬೇಸತ್ತ ಜನರಲ್ ಜೋಸ್ ರಾಕ್ವೆಲ್ ಮಾಂಕಾಡಾ ತನ್ನ ರಾಜಕೀಯ ಪ್ರಭಾವವನ್ನು ಬಳಸಿಕೊಂಡ. ಮತ್ತೆ ಸಮವಸ್ತ್ರಧರಿಸಿ ಮಕೊಂಡಾದ ಸಿವಿಲ್ ಮತ್ತು ಮಿಲಿಟರಿ ಅಧಿಕಾರವನ್ನು ವಹಿಸಿಕೊಂಡ. ಈ ಒಂದು ಬದಲಾದ ನಿಲುವಿನಿಂದ, ಸಂಭವಿಸಬಹುದಾದ್ದನ್ನು ತಡೆಯಲು ಸಾಧ್ಯವೆಂದೇನೂ ಅವನು ನಿರೀಕ್ಷಿಸಲಿಲ್ಲ. ಸೆಪ್ಟೆಂಬರ್‌ನಲ್ಲಿ ಬಂದ ಸುದ್ದಿ ವ್ಯತಿರಿಕ್ತವಾಗಿತ್ತು. ದೇಶಾದ್ಯಂತ ಪರಿಸ್ಥಿತಿ ಹತೋಟಿಯಲ್ಲಿದೆ ಎಂದು ಸರಕಾರ ಘೋಷಿಸಿತಾದರೂ, ಲಿಬರಲ್ ಮಂದಿಗೆ ಒಳಪ್ರದೇಶದಲ್ಲಿ ಅಲ್ಲಲ್ಲಿ ದಂಗೆಗಳು ಆಗುತ್ತಿರುವ ಸುದ್ದಿ ಗುಟ್ಟಿನಿಂದ ತಲುಪುತ್ತಿತ್ತು. ಸರಕಾರ ಯುದ್ಧವನ್ನು ಘೋಷಿಸುವುದನ್ನು ಒಪ್ಪಿಕೊಳ್ಳಲಿಲ್ಲ. ಕರ್ನಲ್ ಅರೆಲಿಯಾನೊ ಬ್ಯುಂಡಿಯಾನ ಅನುಪಸ್ಥಿತಿಯಲ್ಲಿಯೇ ಸೇನಾ ನ್ಯಾಯಾಲಯದಲ್ಲಿ ಅವನಿಗೆ ಮರಣದಂಡನೆ ಘೋಷಿತವಾಗುವವರೆಗೂ ಯುದ್ಧದ ಪರಿಸ್ಥಿತಿ ಸಾಧ್ಯವಿರಲಿಲ್ಲ. ಮೊದಲ ತಂಡ ಅವನನ್ನು ಸೆರೆಹಿಡಿದಾಗ, ತೀರ್ಪನ್ನು ಜಾರಿಗೊಳಿಸಲು ಆದೇಶಿಸಲಾಯಿತು. "ಅಂದರೆ, ಅವನು ಹಿಂತಿರುಗಿ ಬಂದಿದ್ದಾನೆ ಎಂದು ಅರ್ಥ" ಎಂದು ಉರ್ಸುಲಾ ಖುಷಿಯಿಂದ ಮಾಂಕಾಡಾಗೆ ಹೇಳಿದಳು. ಆದರೆ ಅವನಿಗೇ ವಿಷಯ ಏನೆಂದು ತಿಳಿದಿರಲಿಲ್ಲ.

ವಾಸ್ತವವಾಗಿ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಒಂದು ತಿಂಗಳಿಗೂ ಹೆಚ್ಚಾಗಿ ದೇಶದಲ್ಲಿಯೇ ಇದ್ದ. ಪರಸ್ಪರ ವಿರುದ್ಧವಾದ ವದಂತಿಗಳು, ಒಂದೇ ಸಮಯದಲ್ಲಿ ಬೇರೆ ಬೇರೆ ಕಡೆಗಳಲ್ಲಿ ಇದ್ದಂತೆ ಸುದ್ದಿ. ಅಧಿಕೃತವಾಗಿ ಅವನು ಬಂಡದ್ದನ್ನು, ತೀರಪ್ರದೇಶದ ಎರಡು ರಾಜ್ಯಗಳನ್ನು ವಶಪಡಿಸಿಕೊಂಡದ್ದನ್ನು ಘೋಷಿಸುವವರೆಗೂ ಜನರಲ್ ಮಾಂಕಾಡಾಗೆ ನಂಬಿಕೆ ಉಂಟಾಗಿರಲಿಲ್ಲ. "ಅಭಿನಂದನೆಗಳು... ಆದಷ್ಟು ಬೇಗ ಅವನು ಇಲ್ಲಿ ಇರುತ್ತಾನೆ" ಎಂದು ಬಂದಿದ್ದ ಟೆಲಿಗ್ರಾಮನ್ನು ತೋರಿಸಿದ. ಮೊದಲಬಾರಿಗೆ ಉರ್ಸುಲಾ ಚಿಂತೆಗೊಂಡಿದ್ದಳು. "ನೀವೇನು ಮಾಡುತ್ತೀರಿ" ಎಂದು ಪ್ರಶ್ನಿಸಿದಳು. ಜನರಲ್ ಮಾಂಕಾಡಾ ಇದೇ ಪ್ರಶ್ನೆಯನ್ನು ತನ್ನಲ್ಲಿ ಹಲವು ಬಾರಿ ಕೇಳಿಕೊಂಡಿದ್ದ.

"ಅವನು ಮಾಡಿದ ಹಾಗೆ – ನಾನು ನನ್ನ ಕರ್ತವ್ಯ ಮಾಡುತ್ತೇನೆ" – ಎಂದ.

ಅಕ್ಟೋಬರ್ ಒಂದರ ಬೆಳಗಿನ ಜಾವ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಸಾವಿರಮಂದಿ ಸಶಸ್ತ್ರ ಸೈನಿಕರೊಂದಿಗೆ ಆಕ್ರಮಣ ಮಾಡಿದ. ರಕ್ಷಣಾಪಡೆಗೆ, ಕಡೆತನಕ ಅದನ್ನು ಎದುರಿಸಿ ನಿಲ್ಲಲು ಆದೇಶಗಳು ಬಂದವು. ಮಧ್ಯಾಹ್ನ ಜನರಲ್ ಮಾಂಕಾಡಾ ಉರ್ಸುಲಾ ಜೊತೆಯಲ್ಲಿ ಊಟ ಮಾಡುತ್ತಿದ್ದಾಗ, ದಂಗೆಕೋರರ ಫಿರಂಗಿ ಗುಂಡು, ಇಡೀ ಊರನ್ನೇ ಪ್ರತಿಧ್ವನಿಸುತ್ತ ಮುನಿಸಿಪಲ್ ಟ್ರಷರಿಯ ಮುಂಭಾಗವನ್ನು ಛಿದ್ರಗೊಳಿಸಿ ಮಣ್ಣುಪಾಲು ಮಾಡಿತು. "ನಮ್ಮಷ್ಟೇ ಚೆನ್ನಾಗಿ ಶಸ್ತ್ರ ಸಜ್ಜಿತರಾಗಿದ್ದಾರೆ... ಅಲ್ಲದೆ ಅವರು ಯುದ್ಧ ಮಾಡಲೇಬೇಕೆಂದು ಮಾಡುತ್ತಿದ್ದಾರೆ" ಎಂದು ನಿಟ್ಟುಸಿರಿನೊಂದಿಗೆ ಹೇಳಿದ.

ಮಧ್ಯಾಹ್ನ ಎರಡುಗಂಟೆ ಸಮಯದಲ್ಲಿ, ಎರಡೂ ಕಡೆಯ ಶಸ್ತ್ರಾಸ್ತ್ರಗಳಿಂದ ಭೂಮಿ ಕಂಪಿಸಿದಾಗ, ತಾವು ಸೋಲುವುದು ನಿಶ್ಚಿತ ಎಂಬ ಭಾವನೆಯೊಂದಿಗೆ, ಮಾಂಕಾಡಾ ಉರ್ಸುಲಾಳಿಂದ ಬೀಳ್ಕೊಂಡ.

"ಈ ರಾತ್ರಿ ಅರೆಲಿಯಾನೊ ನಿಮ್ಮ ಮನೆಗೆ ಬಾರದಿರಲಿ ಎಂದು ದೇವರನ್ನು ಬೇಡಿಕೊಳ್ಳುತ್ತೇನೆ... ಆಗಬಾರದ್ದು ಆದರೆ, ಅವನಿಗೆ ನಾನು ವಿಚಾರಿಸಿದೆ ಎಂದು ತಿಳಿಸಿ. ಯಾಕೆಂದರೆ ಅವನನ್ನು ಮತ್ತೆ ನೋಡುತ್ತೇನೆಂಬ ನಿರೀಕ್ಷೆಯಿಲ್ಲ" ಎಂದ.

ಆ ರಾತ್ರಿ ಅವನು, ಕರ್ನಲ್ ಅರೆಲಿಯಾನೋಗೆ ಸುದೀರ್ಘವಾದ ಪತ್ರ ಬರೆದ. ನಂತರ ಮಕೊಂಡೋದಿಂದ ಓಡಿಹೋಗಲು ಪ್ರಯತ್ನಿಸುತ್ತಿದ್ದಾಗ ಸೆರೆಸಿಕ್ಕ. ಅವನು ಬರೆದ ಪತ್ರದಲ್ಲಿ, ಯುದ್ಧವನ್ನು ಮಾನವೀಯಗೊಳಿಸುವ ತಮ್ಮಿಬ್ಬರ ಸಮಾನ ಅಭಿಪ್ರಾಯವನ್ನು, ಮಿಲಿಟರಿ ವಲಯದಲ್ಲಿನ ಭ್ರಷ್ಟತೆ, ಎರಡೂ ಪಕ್ಷಗಳಲ್ಲಿನ ರಾಜಕಾರಣಿಗಳ ಮಹತ್ವಾಕಾಂಕ್ಷೆಗಳ ಮೇಲೆ ಅಂತಿಮ ವಿಜಯವನ್ನು ಸಾಧಿಸಬೇಕೆಂಬ ಅವನ ಆಸೆ ಎಲ್ಲವನ್ನೂ ನೆನಪಿಸಿದ್ದ. ಮರುದಿನ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಉರ್ಸುಲಾಳ ಮನೆಯಲ್ಲಿ ಅವನೊಂದಿಗೆ ಊಟ ಮಾಡುತ್ತಿದ್ದಾಗ, ಸೈನಿಕ ನ್ಯಾಯಾಲಯದಲ್ಲಿ ಅವನ ಹಣೆಬರಹ ತೀರ್ಮಾನವಾಗುವವರೆಗೂ ಅವನನ್ನು ಅವಳ ಮನೆಯಲ್ಲಿಯೇ ಉಳಿಸಿಕೊಳ್ಳಲಾಗಿತ್ತು. ಅದೊಂದು ಸ್ನೇಹಕೂಟವಾಗಿತ್ತು. ವಿರೋಧಿಗಳು, ಹಿಂದಿನದನ್ನು ನೆನಪಿನಲ್ಲಿರಿಸಿಕೊಳ್ಳಲು ಯುದ್ಧವನ್ನು ಮರೆತರು. ಉರ್ಸುಲಾಗೆ ತನ್ನ ಮಗನೆ ಹೊರಗಿನವನಾಗಿದ್ದಾನೆ ಎನ್ನುವ ವಿಷಾದಭಾವ ಕವಿದಿತ್ತು. ಗದ್ದಲದ ಮಿಲಿಟರಿ ವ್ಯಕ್ತಿಗಳ ರಕ್ಷಣೆಯಲ್ಲಿ ಒಳಗೆ ಬರುತ್ತಿದ್ದಂತೆಯೇ, ಮತ್ತು ಬಂದವರು ಮಲಗುವ ಕೋಣೆಗಳನ್ನು ಅಸ್ತವ್ಯಸ್ತಗೊಳಿಸಿ ಯಾವುದೇ ಅಪಾಯ ಇಲ್ಲವೆಂಬುದನ್ನು ಖಾತ್ರಿಮಾಡಿಕೊಂಡು ಹೊರ ನಡೆದಾಗಲೇ ಈ ಭಾವನೆ ಬಂದಿತ್ತು. ಇದೆಲ್ಲವನ್ನೂ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಒಪ್ಪಿಕೊಂಡಿದ್ದ. ಜೊತೆಗೆ ಅವನ ರಕ್ಷಕದಳದವರು ಮನೆಯ ಸುತ್ತ ಕಾವಲು ನಿಲ್ಲುತ್ತಿದ್ದಾಗ ಉರ್ಸುಲಾಳೂ ಸೇರಿದಂತೆ ಯಾರೂ ತನಗೆ ಹತ್ತು ಅಡಿಗಿಂತ ಹತ್ತಿರ ಬರುವಂತಿಲ್ಲವೆಂದು ಆದೇಶವನ್ನೂ ನೀಡಿದ. ಅವನು ಯಾವುದೇ ಲಾಂಛನಗಳಿಲ್ಲದ ಸಾಧಾರಣವಾದ ಯೂನಿಫಾರಂ, ಮಣ್ಣು ಮತ್ತು ಒಣಗಿದ ರಕ್ತದಿಂದ ಮೆತ್ತಿಕೊಂಡಿದ್ದ ಬೂಟುಗಳನ್ನು ಧರಿಸಿದ್ದ. ಸೊಂಟಕ್ಕೆ ಪಿಸ್ತೂಲನ್ನು ಸಿಕ್ಕಿಸಿಕೊಂಡು, ಅದರ ಮೇಲೆ ಕೈಯನ್ನು ಇರಿಸಿದ್ದ. ಅವನ ನೋಟದಲ್ಲಿ ಜಾಗರೂಕತೆ ಮತ್ತು ಗಾಭರಿಗಳು ಕಾಣಿಸುತ್ತಿದ್ದವು. ತೆಳ್ಳಗಾದ ಕೂದಲಿನ ತಲೆ ಈಗ ಸಣ್ಣ ಉರಿಯಮೇಲೆ ಕಾಯಿಸಿ ಹದಗೊಂಡಂತಿತ್ತು. ಕ್ಯರಿಬಿಯಾದ ಉಪ್ಪಿನ ಗಾಳಿಯಿಂದ ಲೋಹದ ಗಡಸುತನ ಪಡೆದಿದ್ದ. ಒಳಗಿನ ಚೈತನ್ಯ ಶಕ್ತಿಯಿಂದ, ಮುಪ್ಪಿನಿಂದ ದೂರವಾಗಿ ಜೀವಂತಿಕೆಯನ್ನು ಉಳಿಸಿಕೊಂಡಿದ್ದ. ಅವನು ಬಿಟ್ಟಾಗ ಇದ್ದುದಕ್ಕಿಂತ ಎತ್ತರವಾಗಿದ್ದ. ಪೇಲವನಾಗಿದ್ದ, ಮೂಳೆ ಬಿಟ್ಟುಕೊಂಡಿತ್ತು. ಹಿಂದಿನ ನೆನಪುಗಳನ್ನು ಹತ್ತಿಕ್ಕಿಕೊಂಡಿದ್ದ. "ಓ ದೇವರೇ! ಈಗ ಅವನು ಗಂಡಸಿನಂತೆ ಏನಾದರೂ ಮಾಡಲು ಸಮರ್ಥನೆಂಬಂತ ಕಾಣುತ್ತಿದ್ದಾನೆ" ಎಂದು ತನ್ನಲ್ಲಿಯೇ ಹೇಳಿಕೊಂಡಳು ಉರ್ಸುಲಾ. ಅವಳು ಅರಿದುಕೊಂಡ ಹಾಗೇ ಇದ್ದ ಕೂಡಾ! ಅಮರಾಂತಳಿಗೆಂದು ತಂದಿದ್ದ

ಶಾಲು, ಊಟದ ಸಮಯದಲ್ಲಿ ಮಾತಾಡುತ್ತಿದ್ದ ನೆನಪುಗಳು ವಿನೋದಪೂರಿತ ಕತೆಗಳು, ಇವೆಲ್ಲವೂ ಬೇರೆ ಸಮಯದಲ್ಲಿನ ಹಾಸ್ಯಕ್ಕಿಂತ ಬಹಳ ಸರಳ ಮತ್ತು ಹಳಸಲಂತೆ ಇತ್ತು. ಸತ್ತವರನ್ನು ಆದಷ್ಟು ಬೇಗ ಒಂದೇ ಜಾಗದಲ್ಲಿ ಹೂಳಬೇಕೆಂಬ ಆದೇಶವನ್ನು ಪಾಲಿಸಿದ ಕೂಡಲೇ ಕರ್ನಲ್ ರೋಕ್ ಕಾರ್ನಿಸೆರೋಗೆ ಮಿಲಿಟರಿ ನ್ಯಾಯಾಲಯ ವ್ಯವಸ್ಥೆ ಮಾಡುವ ಕೆಲಸವನ್ನು ವಹಿಸಿಕೊಟ್ಟು, ಶ್ರಮದಾಯಕವಾದ ಕ್ರಾಂತಿಕಾರಕ ಬದಲಾವಣೆಗಳನ್ನು ಹೇರುವ ಪ್ರಯತ್ನದಲ್ಲಿ, ಮರುಸ್ಥಾಪನೆಯಾದ ಕನ್‌ಸರ್ವೆಟೀವ್ ಸರಕಾರವನ್ನು ಉರುಳಿಸುವ ಯಾವ ಮಾರ್ಗವನ್ನೂ ಬಿಡಲಿಲ್ಲ. "ಪಾರ್ಟಿಯಲ್ಲಿ ರಾಜಕಾರಣಿಗಳಿಗಿಂತ ಮುಂದಿರಬೇಕು" ಎಂದು ತನ್ನ ಸಹಾಯಕರಿಗೆ ಹೇಳಿದ. "ವಾಸ್ತವಕ್ಕೆ ಕಣ್ಣು ತೆರೆದಾಗ ನಮ್ಮ ಸಾಧನೆ ಏನು ಎಂಬುದು ತಿಳಿಯುತ್ತೆ". ಆಗಲೆ ಅವನು ನೂರು ವರ್ಷಗಳು ಹಿಂದಕ್ಕೆ ಹೋಗಿ ಭೂಮಿಯ ಒಡೆತನದ ವಿಚಾರವನ್ನು ಪರಿಶೀಲಿಸಲು ಮುಂದಾದ. ಆಗ ಅವನಿಗೆ ತನ್ನ ತಮ್ಮ ಜೋಸ್ ಆರ್ಕಾಡಿಯೊ ಮಾಡಿದ ದುರ್ವ್ಯವಹಾರಗಳು ಪತ್ತೆಯಾದವು. ಕೇವಲ ಒಂದೇ ಸಲಕ್ಕೆ ಒಂದು ಸಹಿಯ ಮೂಲಕ ಎಲ್ಲ ದಾಖಲೆಗಳನ್ನು ಅನೂರ್ಜಿತಗೊಳಿಸಿದ. ಸಭ್ಯತೆಯ ಸಂಕೇತವಾಗಿ ತನ್ನ ಕೆಲಸಗಳ ಮಧ್ಯೆ ಒಂದು ಗಂಟೆ ಬಿಡುವುಮಾಡಿಕೊಂಡು ರೆಬೆಕಾಳನ್ನು ಕಂಡು ತಾನು ಮಾಡಬೇಕೆಂದಿರುವುದನ್ನು ತಿಳಿಸಿದ.

ಮನೆಯ ನೆರಳುಗಳಲ್ಲಿ ಏಕಾಂಗಿಯಾದ ವಿಧವೆ, ಅವನು ಬಚ್ಚಿಟ್ಟುಕೊಂಡಿದ್ದ ಪ್ರೇಮದ ವಿಶ್ವಾಸಪಾತ್ರಳಾಗಿದ್ದ ಮತ್ತು ಪಟ್ಟುಹಿಡಿದು ಅವನ ಜೀವವನ್ನು ಉಳಿಸಿದ ವಿಷಯಗಳೆಲ್ಲವೂ ಗತಕಾಲದ್ದಾಗಿತ್ತು. ಮಂಡಿಯವರೆಗೆ ಧರಿಸಿದ್ದ ಕಪ್ಪು ಗೌನು, ಬೂದಿಯಾಗಿದ್ದ ಹೃದಯವಿರಿಸಿಕೊಂಡಿದ್ದ ಅವಳಿಗೆ ಯುದ್ಧದ ಬಗ್ಗೆ ಏನೊಂದೂ ತಿಳಿದಿರಲಿಲ್ಲ. ಕರ್ನಲ್ ಅರೆಲಿಯಾನೊ ಬ್ಯುಂಡಿಯಾ, ಚರ್ಮದ ಒಳಗಿನಿಂದ ಅವಳ ಮೂಳೆಗಳು ಕಾಣುತ್ತಿದ್ದಂತೆ ಸಂತ ಎಲ್ಮೋಳ ಬೆಂಕಿಯ ಪರಿಸರದಲ್ಲಿ ಓಡಾಡುತ್ತಿರುವಂತೆಯೂ ಅವನಿಗೆ ಭಾಸವಾಯಿತು. ಜೊತೆಗೆ ಮಡುಗಟ್ಟಿದ ಗಾಳಿಯಲ್ಲಿ ಇನ್ನೂ ಗಂಧಕದ ವಾಸನೆ ಅಡಗಿದ್ದಂತೆನಿಸಿತು. ಇಷ್ಟೊಂದು ತೀವ್ರವಾದ ದುಃಖದಲ್ಲಿ ಮುಳುಗದೆ ಸ್ವಲ್ಪ ಮಟ್ಟಿಗಾದರೂ ಹೊರಗೆ ಬರುವಂತೆ ಬುದ್ಧಿವಾದ ಹೇಳಿದ. ಮನೆಯಲ್ಲಿ ಬೆಳಕು ಬರುವಂತೆ ಮಾಡೆಂದು ತಿಳಿಸಿದ. ಜೋಸ್ ಆರ್ಕಾಡಿಯೊ ಸಾವಿಗೆ ಪ್ರಪಂಚವನ್ನು ಕ್ಷಮಿಸೆಂದು ಕೇಳಿಕೊಂಡ. ಆದರೆ ರೆಬೆಕಾ ಅಷ್ಟು ಹೊತ್ತಿಗೆ ಎಲ್ಲ ಬಗೆಯ ಪ್ರತಿಷ್ಠೆಯಿಂದ ಆಚೆ ಇದ್ದಳು. ಅದನ್ನು ಮಣ್ಣಿನ ಸವಿಯಲ್ಲಿ, ಸುಗಂಧ ಪೂರಿತವಾದ ಪೀತ್ರೋ ಕ್ರೆಸ್ಪಿಯ ಪತ್ರಗಳಲ್ಲಿ, ಗಂಡನ ಮದಮತ್ತ ಹಾಸಿಗೆಯಲ್ಲಿ ವ್ಯರ್ಥವಾಗಿ ಹುಡುಕಿದ ನಂತರ ಭಾವೋತ್ಕರ್ಷದ ಉನ್ಮಿಲನದ ಶಕ್ತಿಯಿಂದ ಆ ಮನೆಯಲ್ಲಿ ನೆನಪುಗಳು ಸಾಕಾರಗೊಂಡು ಶಾಂತಿಯನ್ನು ಅನುಭವಿಸಿದಳು. ಮನುಷ್ಯಳಂತೆ, ಮಠಗಳಂತಿರುವ ಕೋಣೆಗಳಲ್ಲಿ ಓಡಾಡುತ್ತಿದ್ದಳು. ತನ್ನ ತೂಗಾಡುವ ಕುರ್ಚಿಯಲ್ಲಿ ಬೆನ್ನಿಗೆ ಒರಗಿಕೊಂಡು ಕರ್ನಲ್ ಅರೆಲಿಯೋನನ್ನು, ಭೂತಕಾಲದಿಂದ ಎದ್ದು ಬಂದ ಭೂತವೊ ಎಂಬಂತೆ ನೋಡುತ್ತಿದ್ದಳು. ಜೋಸ್ ಆರ್ಕಾಡಿಯೊ ಅನ್ಯಾಯವಾಗಿ ಕಸಿದುಕೊಂಡಿದ್ದ ಭೂಮಿಯನ್ನು ನ್ಯಾಯವಾದ ಹಕ್ಕುದಾರರಿಗೆ ಹಿಂತಿರುಗಿಸಿಕೊಡಲಾಗುತ್ತದೆ ಎಂಬ ವಿಷಯವನ್ನು ಕೇಳಿಯೂ ಅಸಮಾಧಾನಗೊಳ್ಳಲಿಲ್ಲ.

"ನೀನು ಹೇಗೆ ತೀರ್ಮಾನ ಮಾಡುತ್ತೀಯಾ ಹಾಗೇ ಆಗಲಿ ಅರೆಲಿಯಾನೊ".

"ನೀನು ಸ್ವಪಕ್ಷದ್ರೋಹಿ ಎಂದು ಆಲೋಚಿಸುತ್ತಿದ್ದೆ. ಅದು ಈಗ ಸಾಬೀತಾಯಿತು" ಎಂದು ಒಂದು ನಿಟ್ಟುಸಿರಿನೊಂದಿಗೆ ಹೇಳಿದಳು.

ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್‌ನ ಅಧ್ಯಕ್ಷತೆಯಲ್ಲಿ ಮಿಲಿಟರಿ ವಿಚಾರಣೆ ನಡೆದು, ಕ್ರಾಂತಿಕಾರರ ಕೈಯಲ್ಲಿ ಸೆರೆಯಾಳುಗಳಾಗಿದ್ದ ಸೈನ್ಯಾಧಿಕಾರಿಗಳಿಗೆ ಮರಣದಂಡನೆಯ ತೀರ್ಪು ನೀಡುವುದರೊಂದಿಗೆ ಮುಕ್ತಾಯವಾದ ಸಮಯದಲ್ಲಿಯೇ ಭೂಮಿ ಸಂಬಂಧ ಹಕ್ಕು ಪತ್ರಗಳ ಪರಿಷ್ಕರಣೆಯಾಯಿತು. ಕೊನೆಯ ವಿಚಾರಣೆ ಜೋಸ್ ರಾಕ್ವೆಲ್ ಮಾಂಕಾಡಾದಾಗಿತ್ತು. ಉರ್ಸುಲಾ ಮಧ್ಯೆ ಪ್ರವೇಶಿಸಿದಳು "ಮಾಕಾಂಡೋದಲ್ಲಿ ಇದ್ದ ಎಲ್ಲ ಆಡಳಿತಗಳಿಗಿಂತಲೂ, ಒಳ್ಳೆಯ ಆಡಳಿತವನ್ನು ಕಂಡದ್ದು ಈತನ ಅವಧಿಯಲ್ಲಿಯೇ" "ಆತನ ಒಳ್ಳೆಯ ಮನಸ್ಸು ನಮ್ಮ ಬಗ್ಗೆ ಇದ್ದ ಪ್ರೀತಿ ಕುರಿತು ನಾನು ನಿನಗೇನೂ ಹೇಳಬೇಕಾಗಿಲ್ಲ ಎಂದು ಕರ್ನಲ್ ಅರೆಲಿಯಾನೊ ಬ್ಯುಂಡಿಯಾಗೆ ಹೇಳಿದಳು. ಆದರೆ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಅದನ್ನು ಒಪ್ಪಿದಂತೆ ಕಾಣಲಿಲ್ಲ.

"ನ್ಯಾಯ ತೀರ್ಮಾನದ ಕೆಲಸ ನನ್ನದಲ್ಲ" ನಿನಗೇನಾದರೂ ಹೇಳುವುದಿದ್ದರೆ ಸೇನಾ ನ್ಯಾಯಾಲಯದಲ್ಲಿ ಹೇಳಿಕೊ ಎಂದು ಉತ್ತರಿಸಿದ.

ಉರ್ಸುಲಾ ಅವನು ಹೇಳಿದಂತೆ ಮಾಡಿದ್ದೇ ಅಲ್ಲದೆ ಮಕೊಂಡೋದಲ್ಲಿದ್ದ ಕ್ರಾಂತಿಕಾರಿ ಆಫೀಸರುಗಳ ತಾಯಂದಿರೆಲ್ಲರನ್ನೂ ಸಾಕ್ಷಿಗಾಗಿ ಕರೆತಂದಳು. ವಯಸ್ಸಾದ ಹೆಂಗಸರು, ಮಕೊಂಡೋವನ್ನು ಸ್ಥಾಪಿಸುವಲ್ಲಿ ಭಯಾನಕವಾದ ಪರ್ವತಗಳನ್ನು ದಾಟಿ ಬರುವ ಸಾಹಸ ಮಾಡಿದವರು, ಒಬ್ಬೊಬ್ಬರಾಗಿ ಬಂದು ಜನರಲ್ ಮಾಂಕಾಡೋನ ಗುಣಗಳನ್ನು ಎತ್ತಿ ಕೊಂಡಾಡಿದರು. ಎಲ್ಲರಿಗಿಂತ ಕೊನೆಗೆ ಬಂದವಳು ಉರ್ಸುಲಾ. ಅವಳ ಗಾಂಭೀರ್ಯ, ಅವಳ ಹೆಸರಿನ ತೂಕ, ತರ್ಕಬದ್ಧವಾದ ಮಾತು, ಸಮರ್ಥಿಸಿಕೊಳ್ಳುವ ಶೈಲಿ ನ್ಯಾಯದ ತಕ್ಕಡಿಯನ್ನು ಒಂದು ಕ್ಷಣ ಸ್ಥಗಿತಗೊಳಿಸಿತು. "ಈ ಭಯಂಕರವಾದ ಕೆಲಸವನ್ನು ನೀವು ಗಂಭೀರವಾಗಿ ತೆಗೆದುಕೊಂಡಿದ್ದೀರಿ ನಿಮ್ಮ ಕರ್ತವ್ಯವನ್ನು ನೀವು ಚೆನ್ನಾಗಿ ನಿರ್ವಹಿಸುತ್ತಿದ್ದೀರಿ. ಆದರೆ, ದೇವರು ನಮಗೆ ಆಯುಸ್ಸು ಎಲ್ಲಿಯವರೆಗೆ ಕೊಟ್ಟಿರುತ್ತಾನೋ ಅಲ್ಲಿವರೆಗೆ ನಾವು ತಾಯಂದಿರಾಗಿಯೇ ಇರುತ್ತೇವೆ. ನೀವು ಎಷ್ಟೇ ಕ್ರಾಂತಿಕಾರರಾಗಿದ್ದರೂ, ಅಗೌರವದ ಸೂಚನೆ ನಿಮ್ಮಿಂದ ದೊರೆತರೆ ಸಾಕು, ನಿಮ್ಮ ಬಟ್ಟೆ ಕಳಚಿ, ಕಪಾಳಮೋಕ್ಷ ಮಾಡುವ ಹಕ್ಕು ನಮಗಿರುತ್ತದೆ" ಎಂದು ಮಿಲಿಟರಿ ನ್ಯಾಯಾಲಯದ ಸದಸ್ಯರಿಗೆ ಹೇಳಿದಳು. ಸೇನಾಠಾಣೆಗಳಾಗಿ ಪರಿವರ್ತಿತವಾಗಿದ್ದ ಆ ಶಾಲೆಯಲ್ಲಿ ಆ ಮಾತುಗಳು ಪ್ರತಿಧ್ವನಿಸುತ್ತಿರುವಂತೆನಿಸಿ ಅವರೆಲ್ಲರೂ ಹಿಂತಿರುಗಿದರು. ಮಧ್ಯರಾತ್ರಿ ಸಮಯಕ್ಕೆ ಜನರಲ್ ಜೋಸ್ ರಾಕ್ವೆಲ್ ಮಾಂಕಾಡಾಗೆ ಮರಣದಂಡನೆ ವಿಧಿಸಲಾಯಿತು. ಉರ್ಸುಲಾಳ ಕೂಗಾಟ ಚೀರಾಟಗಳ ನಡುವೆ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಯಾವುದನ್ನೂ ಕಿವಿಗೆ ಹಾಕಿಕೊಳ್ಳಲಿಲ್ಲ. ಸ್ವಲ್ಪ ಹೊತ್ತಿನ ನಂತರ ಬೆಳಕು ಹರಿಯುವುದಕ್ಕೆ ಮೊದ್ದಲು ದಂಡನೆಗೆ ಗುರಿಯಾದವನನ್ನು, ಜೈಲಾಗಿ ಪರಿವರ್ತಿತವಾದ ಕೋಣೆಯಲ್ಲಿ ಭೇಟಿಯಾದ.

"ನೆನಪಿರಲಿ ಗೆಳೆಯ... ನಾನು ನಿನ್ನನ್ನು ಕೊಲ್ಲುತ್ತಿಲ್ಲ ಕ್ರಾಂತಿ ನಿನ್ನನ್ನು ಕೊಲ್ಲುತ್ತಿದೆ" ಎಂದ.

ಜನರಲ್ ಮಾಂಕಾಡ ಅವನು ಬರುತ್ತಿದ್ದುದನ್ನು ನೋಡಿಯೂ ಮಂಚದಿಂದ ಮೇಲೇಳಲಿಲ್ಲ.

"ಸಾಯಹೋಗು, ಗೆಳೆಯ" ಅವನು ಉತ್ತರಿಸಿದ. ಆ ಕ್ಷಣದವರೆಗೂ, ಕರ್ನಲ್ ಅರೆಲಿಯಾನೊ ಬ್ಯುಂಡಿಯಾಗೆ ಅವನನ್ನು ಮನಃಪೂರ್ವಕವಾಗಿ ನೋಡುವ ಅವಕಾಶವನ್ನು ಹೊಂದಿರಲಿಲ್ಲ. ಎಷ್ಟು ವಯಸ್ಸಾಗಿದೆ, ಕೈಗಳು ನಡುಗುತ್ತಿದೆ, ಸಾವು ಖಚಿತವೆಂದು ನಂಬಿ ಅದನ್ನು ಎದುರು ನೋಡುತ್ತಿರುವಂತಹ ನೋಟ – ಇದೆಲ್ಲವನ್ನು ಗಮನಿಸಿದ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ದಿಗ್ಭ್ರಮೆಗೊಂಡ. ಅವನಿಗೆ ಅವನ ಮೇಲೇ ಉಂಟಾಗುತ್ತಿದ್ದ ಜಿಗುಪ್ಸೆಯಲ್ಲಿ ಕರುಣೆ ಮೊಳೆಯುತ್ತಿದ್ದಂತೆನಿಸಿತು.

"ನನಗಿಂತ ನಿನಗೇ ಚೆನ್ನಾಗಿ ಗೊತ್ತು" "ಎಲ್ಲ ಮಿಲಿಟರಿ ನ್ಯಾಯಾಸ್ಥಾನಗಳಲ್ಲಿನ ವಿಚಾರಣೆ ಕೇವಲ ನಾಟಕ. ಯಾರೋ ಬೇರೆಯವರು ಮಾಡಿದ ಅಪರಾಧಗಳಿಗೆ ನೀನು ಬೆಲೆ ತೆರುತ್ತಿದ್ದೀಯ. ಈ ಸಲ ಏನೇ ಆದರೂ ನಾವು ಯುದ್ಧವನ್ನು ಗೆಲ್ಲುತ್ತೇವೆ, ನನ್ನ ಜಾಗದಲ್ಲಿದ್ದರೆ ನೀನೂ ಇದನ್ನೇ ಮಾಡುತ್ತಿರಲಿಲ್ಲವೇನು?" ಎಂದು ಕೇಳಿದ.

ಜನರಲ್ ಮಾಂಕಾಡೊ ತನ್ನ ಕನ್ನಡಕವನ್ನು ಅಂಗಿಯ ತುದಿಯಿಂದ ಒರೆಸಲೆಂದು ಎದ್ದ. "ಬಹುಶಃ, ಆದರೆ ನನಗಿರುವ ಚಿಂತೆ ಎಂದರೆ ನೀನು ನನಗೆ ಗುಂಡಿಕ್ಕಿ ಕೊಲ್ಲುತ್ತೀಯ ಎಂಬುದಲ್ಲ, ಯಾಕೆಂದರೆ ಅದು ಅಥವಾ ಅಂಥ ಸಾವು ನಮಗೆಲ್ಲ ಸ್ವಾಭಾವಿಕ" ಎಂದ. ಕನ್ನಡಕವನ್ನು ತೆಗೆದು ಮಂಚದ ಮೇಲಿಟ್ಟ. ತನ್ನ ಗಡಿಯಾರ ಮತ್ತು ಚೈನನ್ನು ಕಳಚಿದ, "ನನಗಿರುವ ಚಿಂತೆ ಎಂದರೆ, ಮಿಲಿಟರಿ ಬಗ್ಗೆ ಅಷ್ಟೊಂದು ದ್ವೇಷ ಇರಿಸಿಕೊಂಡಿದ್ದು, ಅದರೊಂದಿಗೆ ಎಷ್ಟು ಹೋರಾಟಗಳನ್ನು ಮಾಡುತ್ತಾ, ಎಷ್ಟೊಂದು ಅದರ ಬಗ್ಗೆ ಆಲೋಚಿಸುತ್ತಿದ್ದವನು, ಕಡೆಯಲ್ಲಿ ಅವರಷ್ಟೆ ಕೆಟ್ಟವನಾಗಿಬಿಟ್ಟೆ ಅಷ್ಟು ಕೀಳುಮಟ್ಟಕ್ಕೆ ಇಳಿಯಲು ಬಹುಶಃ ಯಾವ ಆದರ್ಶವೂ ಬಿಡುವುದಿಲ್ಲ" ಎಂದು ಹೇಳುತ್ತಲೇ ಹೋದ. ತನ್ನ ವಿವಾಹದ ಉಂಗುರವನ್ನು ಮತ್ತು ವರ್ಜಿನ್ ಆಫ್ ಹೆಲ್ಪ್‌ನ ಪದಕವನ್ನೂ ಕಳಚಿ ಕನ್ನಡಕ ಮತ್ತು ಗಡಿಯಾರದ ಬದಿಯಲ್ಲಿ ಇರಿಸಿದ.

"ನೀನು ಮಾಡುತ್ತಿರುವುದನ್ನು ಹೀಗೇ ಮುಂದುವರೆಸಿದರೆ ನಮ್ಮ ಚರಿತ್ರೆಯಲ್ಲಿ ರಕ್ತಪಿಪಾಸು ಸರ್ವಾಧಿಕಾರಿಯಾಗುವುದಷ್ಟೇ ಅಲ್ಲ, ನಿನ್ನ ಆತ್ಮಸಾಕ್ಷಿಯನ್ನು ಸಂತೃಪ್ತಿಪಡಿಸುವ ಭರದಲ್ಲಿ ನನಗೆ ಬಹಳ ಆಪ್ತಳಾದ ಉರ್ಸುಲಾಳನ್ನೂ ಗುಂಡಿಕ್ಕಿ ಕೊಲ್ಲುತ್ತೀಯ" ಎಂದು ಮಾತು ಮುಗಿಸಿದ.

ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ವಿಚಲಿತವಾಗದೆ ಎದ್ದು ನಿಂತ. ಜನರಲ್ ಮಾಂಕಾಡಾ ಆಗ ಅವನಿಗೆ ತನ್ನ ಕನ್ನಡಕ, ಪದಕ, ಗಡಿಯಾರ ಮತ್ತು ಉಂಗುರ ಎಲ್ಲವನ್ನೂ ಕೊಟ್ಟು ದನಿಯನ್ನು ಬದಲಿಸಿದ.

"ನಾನು ಬೈಯ್ಯುವುದಕ್ಕಾಗಿ ನಿನ್ನನ್ನು ಕರೆಸಲಿಲ್ಲ, ಇವೆಲ್ಲವನ್ನೂ ನನ್ನ ಹೆಂಡತಿಗೆ ತಲುಪಿಸಿ ಉಪಕಾರ ಮಾಡಬೇಕೆಂದು ಕೇಳಿಕೊಳ್ಳಲು ಬರಹೇಳಿದೆ" ಎಂದ.

ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಅವುಗಳನ್ನು ಜೇಬಿನಲ್ಲಿ ಇರಿಸಿಕೊಂಡ.

"ಅವಳಿನ್ನೂ ಮಸೌರೆಯಲ್ಲಿಯೇ ಇರುವಳೇನು?"

"ಹೌದು ಅವಳಿನ್ನೂ ಅಲ್ಲಿಯೇ ಇದ್ದಾಳೆ. ಅದೇ ಮನೆಯಲ್ಲಿ, ಚರ್ಚಿನ ಹಿಂಭಾಗದಲ್ಲಿ, ನೀನು ಪತ್ರವನ್ನು ಕಳಿಸಿಕೊಟ್ಟೆಯಲ್ಲ, ಅದೇ" ಎಂದು ಖಚಿತಪಡಿಸಿದ.

"ಜೋಸ್ ರಾಕ್ವೆಲ್, ಸಂತೋಷದಿಂದ ಮಾಡುತ್ತೇನೆ" – ಎಂದು ಹೇಳಿದ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ.

ಅವನು ಮಂಜಿನಿಂದ ಒದ್ದೆಯಾದ ನೀಲಿ ಗಾಳಿಯಲ್ಲಿ ಹೊರಗೆ ಹೋದಾಗ ಅವನ ಮುಖ ಹಿಂದೆ ಇದೇ ರೀತಿ ಬೆಳಗಿನಲ್ಲಿ ಒದ್ದೆಯಾಗಿದ್ದಂತೆ ಭಾಸವಾಯಿತು. ಆಗಷ್ಟೇ ಅವನಿಗೆ ಸ್ಮಶಾನದ ಗೋಡೆಯಲ್ಲದೆ ಅಂಗಳದಲ್ಲಿಯೇ ಮರಣದಂಡನೆಯ ತೀರ್ಪನ್ನು ಜಾರಿಗೊಳಿಸಬೇಕೆಂದು ಆದೇಶಿಸಿದ್ದು ನೆನಪಿಗೆ ಬಂತು. ಬಾಗಿಲಿಗೆ ಎದುರಾಗಿ ನಿಂತಿದ್ದ ಗುಂಡಿಕ್ಕುವ ತಂಡ ಅವನಿಗೆ ರಾಷ್ಟ್ರ ನಾಯಕನಿಗೆ ಗೌರವ ಸಲ್ಲಿಸಿದರು.

"ಅವನನ್ನೀಗ ಹೊರಗೆ ತರಬಹುದು" ಎಂದು ಅವನು ಆದೇಶಿಸಿದ.

# 9

ಯುದ್ಧದ ಶೂನ್ಯತೆಯನ್ನು ಮೊದಲಬಾರಿಗೆ ಪರಿಕಲ್ಪಸಿದವನು ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್ ಆಗಿದ್ದ. ಮಕೊಂಡೋದ ಸಿವಿಲ್ ಮತ್ತು ಮಿಲಿಟರಿ ನಾಯಕತ್ವವನ್ನು ವಹಿಸಿಕೊಂಡಿದ್ದಾಗ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಜೊತೆ ವಾರಕ್ಕೆ ಒಂದೆರಡು ಬಾರಿಯಾದರೂ ಟೆಲಿಗ್ರಾಫಿಕ್ ಸಂಭಾಷಣೆ ಮಾಡುತ್ತಿದ್ದ. ಈ ಸಂಭಾಷಣೆಗಳಿಂದಾಗಿ ಪ್ರಾರಂಭದಲ್ಲಿ ಯುದ್ಧದ ದಿಕ್ಕನ್ನು ನಿರ್ಧರಿಸುತ್ತಿದ್ದವು. ಎಲ್ಲಿ ಯಾವ ಕ್ಷಣದಲ್ಲಿ ಹೇಗೆ ಮುಂದುವರೆಯಬೇಕೆಂಬುದನ್ನೂ ತಿಳಿಯಬಹುದಾಗಿತ್ತು. ತನಗೆಷ್ಟು ಆತ್ಮೀಯ ಗೆಳೆಯರಾಗಿದ್ದರೂ ವಿಶ್ವಾಸಕ್ಕೆ ತೆಗೆದುಕೊಳ್ಳುತ್ತಿರಲಿಲ್ಲವಾದರೂ ಕರ್ನಲ್ ಅರೆಲಿಯಾನೊ ಬ್ಯುಂಡಿಯಾನ ಪರಿಚಿತವಾದ ಧ್ವನಿಯಿಂದ ತಂತಿಯ ಆ ಕಡೆ ಇರುವವರಿಗೆ ಅದನ್ನು ಗುರುತಿಸಲು ಸಾಧ್ಯವಾಗುವಂತಿತ್ತು. ಕೆಲವೊಮ್ಮೆ ನಿರೀಕ್ಷಿಸಿದ ಸಮಯಕ್ಕಿಂತಲೂ ಹೆಚ್ಚು ಹೊತ್ತು ಸಂಭಾಷಣೆ ಮುಂದುವರೆಯುತ್ತಿದ್ದು, ಮಾತು ಎಲ್ಲೆಲ್ಲೊ ಹರಿದು ಮನೆಗೆ ಸಂಬಂಧಿಸಿದ ವಿಚಾರಗಳೂ ಚರ್ಚೆಯಾಗುತ್ತಿದ್ದವು. ಕ್ರಮೇಣ ಯುದ್ಧದ ತೀವ್ರತೆ ವ್ಯಾಪಕತೆ ಹೆಚ್ಚುತ್ತಿದ್ದಾಗ ಅವನ ಬಗೆಗಿದ್ದ ವಿಚಾರಗಳು ಅವಾಸ್ತವ ಜಗತ್ತಿನಲ್ಲಿ ಕರಗಿಹೋಗುತ್ತಿತ್ತು. ಅವನ ಮಾತುಗಳೂ ಬರಬರುತ್ತಾ ಅನಿಶ್ಚಿತವೂ ಅರ್ಥಹೀನವೂ ಆಗುತ್ತಿತ್ತು. ಆಗ ಕರ್ನಲ್

ಜೆರಿನೆಲ್ಡೊ ಮಾರ್ಕ್ವೆಜ್ ಮಾತಾಡುವುದನ್ನು ನಿಲ್ಲಿಸಿ ಕೇವಲ ಮಾತನ್ನು ಕೇಳಿಸಿಕೊಳ್ಳುವಷ್ಟಕ್ಕೇ ಉಳಿದ. ಅಷ್ಟೇ ಅಲ್ಲ, ಬೇರೆ ಯಾವುದೋ ಲೋಕದ ಅಪರಿಚಿತ ವ್ಯಕ್ತಿಯ ಮಾತುಗಳು ಹೊರೆ ಎಂಬ ಭಾವನೆಗೆ ಒಳಗಾದ.

"ನನಗೆ ಅರ್ಥವಾಗುತ್ತದೆ ಅರೆಲಿಯಾನೊ" "ಲಿಬರಲ್ ಪಾರ್ಟಿ ಚಿರಾಯುವಾಗಲಿ" ಎಂಬುದರೊಂದಿಗೆ ಮುಗಿಸುತ್ತಿದ್ದ.

ಕಡೆಗೆ ಅವನು ಯುದ್ಧದೊಂದಿಗಿನ ಸಂಬಂಧವನ್ನು ಪೂರ್ತಿಯಾಗಿ ಕಳೆದುಕೊಂಡ. ಹಿಂದಿನ ದಿನಗಳಲ್ಲಿ ಯಾವುದು ತನ್ನ ಅತ್ಯಂತ ಪ್ರೀತಿಯ ಚಟುವಟಿಕೆಯಾಗಿತ್ತೋ ಯಾವುದು ತನ್ನ ಪ್ರಾಯದ ದಿನಗಳಲ್ಲಿ ಹತ್ತಿಕ್ಕಲಾಗದ ಉತ್ಸಾಹದ ಆಸಕ್ತಿಯಾಗಿತ್ತೋ ಅದು ಈಗ ಅವನಿಗೆ ಸಂಬಂಧವಿಲ್ಲದ ಸಾಮಾನ್ಯ ಸಂಗತಿಯಾಗಿತ್ತು. ಏನೋ ಒಂದು ಬಗೆಯ ಖಾಲಿತನದ ಭಾವನೆ ಆವರಿಸಿತ್ತು. ಅವನಿಗಿದ್ದ ಒಂದೇ ಒಂದು ಆಶ್ರಯ ತಾಣವೆಂದರೆ ಅಮರಾಂತಳ ಹೊಲಿಗೆ ಕೋಣೆ. ಪ್ರತಿದಿನ ಮಧ್ಯಾಹ್ನ ಅವಳನ್ನು ಭೇಟಿಯಾಗುತ್ತಿದ್ದ. ಅವಳು ಪೆಟ್ಟಿಕೋಟಿಗೆ ನೆರಿಗೆಗಳನ್ನು ಹೊಲಿಯುತ್ತಿರುವ ಕೈಗಳನ್ನು ನೋಡುವುದು, ರೆಮೆಡಿಯೋಸ್‌ನ ಬ್ಯೂಟಿ ಯಂತ್ರಚಾಲನೇ ಸಹಕರಿಸುತ್ತಿದ್ದುದನ್ನು ನೋಡುವುದು ಅವನಿಗೆ ಬಹಳ ಇಷ್ಟವಾಗಿತ್ತು. ಮಾತಿಲ್ಲದೆಯೇ ಎಷ್ಟೋ ಸಮಯವನ್ನು ಕಳೆಯುತ್ತಿದ್ದರು. ಸುಮ್ಮನೆ ಒಬ್ಬರ ಸನಿಹದಲ್ಲಿ ಮತ್ತೊಬ್ಬರು ಇರುವುದಷ್ಟೇ ಅವರಿಗೆ ಸಮಾಧಾನಕರವಾಗಿತ್ತು. ಆದರೆ ಅಮರಾಂತಾಳಿಗೆ ಅವನ ಆರಾಧನಾಭಾವದ ತೀವ್ರತೆಯನ್ನು ಹಾಗೆಯೇ ಉಳಿಯುವುದನ್ನು ಒಳಗೊಳಗೇ ಬಯಸುತ್ತಿದ್ದಳು. ಅವಳ ಅಂತರಂಗದ ಸೂಕ್ಷ್ಮತೆಗಳ, ಆಳದ ಅರಿವು ಅವನಿಗಿದ್ದಂತಿರಲಿಲ್ಲ; ಅವನು ಹಿಂತಿರುಗುವ ಸುದ್ದಿ ತಿಳಿದಾಗ ಅಮರಾಂತ ಉದ್ವಿಗ್ನಗೊಂಡಳು. ಕರ್ನಲ್ ಅರೆಲಿಯಾನೊ ಬ್ಯುಂಡಿಯಾನನ್ನು ರಕ್ಷಣಾದಳದ ನಡುವೆ ಗದ್ದಲದ ವಾತಾವರಣದೊಂದಿಗೆ ಮನೆಯಲ್ಲಿ ನೋಡಿದಾಗ, ಕಠಿಣವಾದ ಪರದೇಶವಾಸದಲ್ಲಿ ಅವನನ್ನು ಹೇಗೆ ಕ್ರೂರವಾಗಿ ನಡೆಸಿಕೊಂಡಿರಬಹುದೆಂಬುದನ್ನು ಅರಿತಳು. ವಿಕಾರವಾಗಿ, ವಯಸ್ಸಾದವನಂತೆ, ಎಡಗೈಗೆ ದಾರಕಟ್ಟಿ ಕುತ್ತಿಗೆಗೆ ನೇತುಹಾಕಿಕೊಂಡು, ಕೊಳೆ, ಧೂಳು, ಬೆವರು, ಕೆಟ್ಟವಾಸನೆ ಹೊರಸೂಸುತ್ತ ಕಾಣಿಸಿಕೊಂಡ ಅವನ ಬಗ್ಗೆ ಸ್ವಲ್ಪಮಟ್ಟಿಗೆ ಭ್ರಮನಿರಸನಗೊಂಡಳು. "ಅಯ್ಯೋ ದೇವರೇ!" "ನಾನು ಎದುರು ನೋಡುತ್ತಿದ್ದ ವ್ಯಕ್ತಿ ಈತನಲ್ಲ" ಎಂದು ಆಲೋಚಿಸಿದಳು. ಮರುದಿನ ಮನೆಗೆ ಬಂದಾಗ ಶುಭ್ರವಾಗಿದ್ದ, ಕ್ಷೌರಮಾಡಿಕೊಂಡಿದ್ದ ಮೀಸೆಗೆ ಲ್ಯಾವೆಂಡರ್ ಪರಿಮಳವನ್ನು ಸಿಂಪಡಿಸಿಕೊಂಡಿದ್ದ. ಕೈಗೆ ಆ ತೂಗುಪಟ್ಟಿಯೂ ಇರಲಿಲ್ಲ. ಮದರ್ ಆಫ್ ಪರ್ಲ್‌ನಿಂದ ಮಾಡಿದ ಕವಚದೊಂದಿಗಿದ್ದ ಪ್ರಾರ್ಥನಾ ಪುಸ್ತಕವನ್ನು ಅವಳಿಗೆ ನೀಡಿದ.

"ಗಂಡಸರು ಎಷ್ಟು ವಿಚಿತ್ರ!" ಎಂದಳು. ಅವಳಿಗೆ ಬೇರೇನೂ ಹೇಳಲು ಹೊಳೆಯಲಿಲ್ಲ. "ತಮ್ಮ ಬದುಕನ್ನು ಪಾದ್ರಿಗಳ ವಿರುದ್ಧ ಹೋರಾಡುವುದರಲ್ಲೇ ಸವೆಸುತ್ತಾರೆ, ನೋಡಿದರೆ ನಂತರ ಪ್ರಾರ್ಥನಾ ಗ್ರಂಥಗಳನ್ನೂ ಉಡುಗೊರೆಯಾಗಿ ಕೊಡುತ್ತಾರೆ".

ಅಲ್ಲಿಂದ ಮುಂದೆ, ಯುದ್ಧದ ಸಂಕಟ ಪರಿಸ್ಥಿತಿಗಳಲ್ಲೂ ಪ್ರತಿದಿನ ಮಧ್ಯಾಹ್ನ ಅವಳನ್ನು ಭೇಟಿಯಾಗುತ್ತಿದ್ದ. ಎಷ್ಟೋ ಸಲ, ರೆಮೆಡಿಯೋಸ್ ಇಲ್ಲದಿದ್ದಾಗ ತಾನೇ ಹೊಲಿಗೆ ಯಂತ್ರದ ಚಕ್ರವನ್ನು ತಿರುಗಿಸುತ್ತಿದ್ದ. ಅಷ್ಟೊಂದು ಅಧಿಕಾರವಿದ್ದರೂ, ಹೀಗೆ ಪಟ್ಟುಹಿಡಿದು, ತಗ್ಗಿ ನಡೆಯುವ ವರ್ತನೆಯಿಂದ ಬೇಸರಗೊಂಡಿದ್ದಳು. ಅವನೂ ಹೊಲಿಗೆ ಕೋಣೆಗೆ ಬರುವಾಗ ಆಯುಧಗಳು ಜೊತೆಗೆ ಇರಬಾರದೆಂದು ಪಡಸಾಲೆಯಲ್ಲಿಯೇ ಕಳಚಿಟ್ಟು ಬರುತ್ತಿದ್ದ. ಆದರೆ ನಾಲ್ಕು ವರ್ಷಗಳ ಕಾಲ ನಿರಂತರವಾಗಿ ಪ್ರೇಮನಿವೇದನೆಯನ್ನು ಮಾಡಿಕೊಂಡು ಬರುತ್ತಿದ್ದರೂ ಅವಳು ಯಾವುದೊ ಒಂದು ನೆಪದೊಂದಿಗೆ ಅದನ್ನು ತಿರಸ್ಕರಿಸುತ್ತಲೇ ಬರುತ್ತಿದ್ದಳು. ಅವನಿಗೆ ತಾನು ತಿರಸ್ಕರಿಸುವಾಗ ನೋವಾಗದಂತೆ ಎಚ್ಚರ ವಹಿಸುತ್ತಿದ್ದಳು. ಅವನ ಪ್ರೀತಿಯನ್ನು ಸ್ವೀಕರಿಸಲು ಸಾಧ್ಯವಾಗದಿದ್ದರೂ, ಅವನಿಲ್ಲದೆ ಅವಳಿಗೆ ಇರಲು ಸಾಧ್ಯವಾಗುತ್ತಿರಲಿಲ್ಲ. ರೆಮೆಡಿಯೋಸ್ ದ ಬ್ಯೂಟಿ, ಬುದ್ಧಿಮಾಂದ್ಯಳೆಂದು ಭಾವಿಸಲಾಗಿದ್ದವಳು ಯಾವುದೇ ವಿಚಾರದ ಬಗ್ಗೆ ಗಮನ ಕೊಡುತ್ತಿರಲಿಲ್ಲ. ಅವನ ಬಗ್ಗೆ ಗಮನ ಹರಿಸದಿರಲು ಆಗಲಿಲ್ಲ. ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್‌ನ ವಿಚಾರದಲ್ಲಿ ಆಸಕ್ತಿ ತೋರಿದಳು. ಅಮರಾಂತಾಗೆ ಒಮ್ಮೆ ಥಟ್ಟನೆ, ತಾನು ಬೆಳೆಸಿದ ಹುಡುಗಿ ಪ್ರಾಯಕ್ಕೆ ಬರುತ್ತಿರುವುದನ್ನು, ಮಕೊಂಡೊದಲ್ಲಿ ಎಂದೂ ಕಾಣಲಾಗದಿದ್ದ ಅತ್ಯಂತ ಚೆಲುವೆ ಎಂಬುದನ್ನು ಅರಿತುಕೊಂಡಳು. ಹಿಂದೆ ರೆಬೆಕಾಳ ವಿಷಯದಲ್ಲಿ ತನ್ನ ಮನಸ್ಸಿನಲ್ಲಿ ಪೋಷಿಸಿಕೊಂಡು ಬಂದ ದ್ವೇಷ ಸಾಯಿಸುವವರೆಗೂ ವಿಸ್ತರಿಸಿದಂತೆ ಇವಳ ವಿಷಯದಲ್ಲೂ ಆಗದಿರಲಿ ದೇವರೇ ಎಂದುಕೊಂಡಳಲ್ಲದೆ ಹೊಲಿಗೆ ಕೋಣೆಯೊಳಗೆ ಬಾರದಂತೆ ನಿಷೇಧಿಸಿದಳು. ಇದೇ ಅವಧಿಯಲ್ಲಿಯೇ ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್ ಯುದ್ಧವೆಂದರೆ ಬೇಸರಪಡುತ್ತಿದ್ದ. ಪಟ್ಟುಬಿಡದೆ ಬೆನ್ನು ಹತ್ತುವುದಕ್ಕೆ ಬೇಕಾದುದೆಲ್ಲವನ್ನು ಸಿದ್ಧಗೊಳಿಸಿಕೊಂಡ. ಅಮರಾಂತಾಳಿಗಾಗಿ ತನ್ನ ಮಹತ್ವದ ದಿನಗಳನ್ನೆಲ್ಲ ತ್ಯಾಗ ಮಾಡಲು ಸಿದ್ಧನಿದ್ದ. ಆದರೆ ಅವಳನ್ನು ಒಪ್ಪಿಸಲು ಅವನಿಂದ ಆಗಲಿಲ್ಲ. ಆಗಸ್ಟ್ ತಿಂಗಳ ಒಂದು ಮಧ್ಯಾಹ್ನ, ತನ್ನದೇ ಹಠಮಾರಿತನದ ಭಾರವನ್ನು ಸಹಿಸಲಾಗದೆ ತನ್ನ ಮಲಗುವ ಕೋಣೆಗೆ ಹೋಗಿ ಬಾಗಿಲು ಹಾಕಿಕೊಂಡು ಒಂಟಿತನವನ್ನು ಸಾಯುವವರೆಗೆ ಅನುಭವಿಸಬೇಕಾದುದಕ್ಕೆ ತನ್ನ ಪ್ರೀತಿಯನ್ನೂ ಬಯಸಿದವನಿಗೆ ತಾನು ಕೊಟ್ಟ ಉತ್ತರಕ್ಕೆ ಅವಳನ್ನು ಅಳುವಂತೆ ಮಾಡಿತ್ತು.

"ನಾವಿಬ್ಬರೂ ಒಬ್ಬರನ್ನೊಬ್ಬರು ಶಾಶ್ವತವಾಗಿ ಮರೆತುಬಿಡೋಣ. ಇಂಥದ್ದಕ್ಕೆಲ್ಲಾ ನಾವೀಗ ವಯಸ್ಸಾದವರಾಗಿದ್ದೇವೆ" ಎಂದಳು.

ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್‌ಗೆ ಕರ್ನಲ್ ಅರೆಲಿಯಾನೊ ಬ್ಯುಂಡಿಯಾನಿಂದ ಆ ದಿನ ಮಧ್ಯಾಹ್ನ ಟೆಲಿಗ್ರಾಫಿಕ್ ಕರೆ ಬಂದಿತ್ತು. ಅದು ದಿನ ನಿತ್ಯದ ಸಾಮಾನ್ಯ ಮಾತುಕತೆಯಾಗಿದ್ದು, ಯುದ್ಧಕ್ಕೆ ಯಾವುದೇ ತೊಂದರೆಯ ಸಾಧ್ಯತೆಗಳಿರಲಿಲ್ಲ. ಮಾತು ಮುಗಿದ ಮೇಲೆ ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್, ನಿರ್ಜನವಾದ ರಸ್ತೆಗಳನ್ನು, ಬಾದಾಮಿ ಗಿಡದ ಮೇಲೆ ನೀರಿನ ಹನಿಗಳನ್ನು ನೋಡಿದ. ಒಂಟಿತನದಲ್ಲಿ ಕಳೆದು ಹೋದದ್ದರ ಅರಿವಾಯಿತು.

"ಅರೆಲಿಯಾನೊ.... ಮಕೊಂಡೊದಲ್ಲಿ, ಮಳೆಯಾಗುತ್ತಿದೆ" ಎಂದು ಟೆಲಿಗ್ರಾಫ್ ಮೂಲಕ ಹೇಳಿದ.

ಆ ಕಡೆಯಿಂದ ದೀರ್ಘ ಮೌನ. ನಂತರ ದಿಢೀರನೆ ನಿರ್ದಯವಾದ ಪತ್ರಗಳು ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಕಡೆಯಿಂದ ಸುರಿದು ಬಂದವು.

"ಹುಚ್ಚನ ಥರ ಆಡಬೇಡ ಜೆರಿನೆಲ್ಡೊ. ಆಗಸ್ಟ್‌ನಲ್ಲಿ ಮಳೆ ಬರುವುದು ಸಹಜ" ಎಂದು ಸಿಗ್ನಲ್ಸ್ ಉತ್ತರ ಕೊಟ್ಟಿತು.

ಅವರಿಬ್ಬರೂ ಬಹಳ ಕಾಲ ಒಬ್ಬರನ್ನೊಬ್ಬರು ಭೇಟಿಯಾಗಿರಲಿಲ್ಲ. ಕರ್ನಲ್ ಅರೆಲಿಯಾನೊ ಬ್ಯುಂಡಿಯಾನ ನಿರ್ದಯ ಪ್ರತಿಕ್ರಿಯೆಯಿಂದ ದುಃಖಿತನಾಗಿದ್ದ. ಎರಡು ತಿಂಗಳ ನಂತರ ಕರ್ನಲ್ ಮಕೊಂಡೊಗೆ ಮರಳಿದಾಗ, ಜೆರಿಗೆಲ್ಡೊನಲ್ಲಿ ದುಃಖ ಕಾಣಲಿಲ್ಲ ಬದಲಾಗಿ ಸ್ತಬ್ಧನಾಗಿದ್ದ. ಅವನೆಷ್ಟು ಬದಲಾಗಿದ್ದಾನೆಂದು ಉರ್ಸುಲಾ ಕೂಡಾ ಆಶ್ಚರ್ಯಪಟ್ಟಳು. ಅವನು ಬಂದಾಗ ಗದ್ದಲವಿಲ್ಲ, ರಕ್ಷಣಾಪಡೆಯಿಲ್ಲ, ಬಿಸಿಲಿನಲ್ಲೂ ಕೋಟನ್ನು ಧರಿಸಿದ್ದ. ಜೊತೆಗೆ ಮೂವರು ಪ್ರೇಯಸಿಯರನ್ನೂ ಕರೆತಂದಿದ್ದ. ಅವರನ್ನು ಮನೆಯಲ್ಲಿಯೇ ಉಳಿಸಿಕೊಂಡ. ಮಾಮೂಲಿ ಕಾರ್ಯಾಚರಣೆಗೆ ಸಂಬಂಧಿಸಿದ ಟೆಲಿಗ್ರಾಫಿಕ್ ಸಂದೇಶಗಳನ್ನು ಓದುತ್ತಲೂ ಇರಲಿಲ್ಲ. ಒಂದು ಸಂದರ್ಭದಲ್ಲಿ ಕರ್ನಲ್ ಮಾರ್ಕ್ವೆಜ್ ಅಂತರ್‌ರಾಷ್ಟ್ರೀಯ ಘರ್ಷಣೆಯ ಅಪಾಯವಿರುವ ಗಡಿಪ್ರದೇಶದಿಂದ ಸೇನೆಯನ್ನು ತೆರವು ಮಾಡಿಸುವ ವಿಚಾರದಲ್ಲಿ ಸಲಹೆ ಕೇಳಿದಾಗ.

"ಸಣ್ಣಪುಟ್ಟ ವಿಚಾರಗಳಿಂದ ನನ್ನ ತಲೆಕೆಡಿಸಬೇಡ"

"ದೇವರನ್ನು ಪರಾಮರ್ಶಿಸು" – ಎಂದು ಆದೇಶಿಸಿದ.

ಯುದ್ಧದ ಅತ್ಯಂತ ಸಂದಿಗ್ಧ ಸಮಯ, ಲಿಬರಲ್ ಪಕ್ಷದ (ಜಮೀಂದಾರರು) ಭೂಮಾಲಿಕರು, ಮೊದಲಿಗೆ ಕ್ರಾಂತಿಯ ಪರವಾಗಿ ಇದ್ದರೂ, ನಂತರ ರಹಸ್ಯವಾಗಿ ಆಸ್ತಿಯ ಮಾಲಿಕತ್ವದ ಪರಿಷ್ಕರಣೆಯನ್ನು ತಪ್ಪಿಸಲು ಕನ್‌ಸರ್ವೆಟೀವ್‌ಗಳ ಕೈ ಜೋಡಿಸಿದರು. ಪರದೇಶಗಳಿಂದ ಯುದ್ಧಕ್ಕೆಂದು ಹಣ ಒದಗಿಸುತ್ತಿದ್ದ ರಾಜಕಾರಣಿಗಳು ಬಹಿರಂಗವಾಗಿ ಸಾರ್ವಜನಿಕರ ಮುಂದೆ ಕರ್ನಲ್ ಅರೆಲಿಯಾನೊ ಬ್ಯುಂಡಿಯಾನ ತೀವ್ರ ಪರಿಣಾಮದ ನಿರ್ಣಯಗಳನ್ನು ಖಂಡಿಸುತ್ತಿದ್ದರು. ಪ್ರಮಾಣೀಕರಣದ ಪ್ರಕ್ರಿಯೆಯನ್ನು ಹಿಂತೆಗೆದುಕೊಂಡರು. ಅವನು ವಿಚಲಿತನಾಗಲಿಲ್ಲ. ತನ್ನ ಕವಿತೆಗಳನ್ನು ಓದುವುದರ ಕಡೆಗೂ ಬರಲಿಲ್ಲ. ಸುಮಾರು ಐದು ಸಂಪುಟಗಳ ಕವಿತೆಗಳು ಟ್ರಂಕಿನ ಅಡಿಯಲ್ಲಿ ಬಿದ್ದಿದ್ದು ಮರೆತೇ ಹೋಗಿತ್ತು. ರಾತ್ರಿಯ ಹೊತ್ತಿನಲ್ಲೊ ಅಥವಾ ಮಧ್ಯಾಹ್ನದ ವಿಶ್ರಾಂತಿ ಸಮಯದಲ್ಲೊ ತನ್ನ ಹೆಂಗಸರಲ್ಲಿ ಯಾರಾದರೊಬ್ಬರನ್ನು ಕರೆದು ಸ್ವಲ್ಪಮಟ್ಟಿನ ತೃಪ್ತಿಯನ್ನು ಪಡೆದನಂತರ, ಬಿಂಡೆತರ ಬಿದ್ದುಕೊಂಡು ನಿದ್ರಿಸುತ್ತಿದ್ದವನನ್ನು ನೋಡಿದರೆ ಚಿಂತೆಯ ಗೆರೆಯೊಂದೂ ಕಾಣುತ್ತಿರಲಿಲ್ಲ. ಆ ಸಮಯದಲ್ಲಿ ಅವನಿಗೆ ತನ್ನ ಗೊಂದಲದ ಹೃದಯದಲ್ಲಿ ನಿರಂತರವಾಗಿರುವುದು ಅನಿಶ್ಚಿತತೆಯೊಂದೇ ಎಂಬುದನ್ನು ತಿಳಿದಿದ್ದ.

ಮೊದಲಿಗೆ ತನಗೆ ದೊರೆತ ಅದ್ಭುತ ಗೆಲುವುಗಳಿಂದಾಗಿ ದೊರೆತ ಕೀರ್ತಿಯ ಅಮಲಿನಲ್ಲಿ, ದೊಡ್ಡಸ್ಥಿಕೆಯ ಕೂಪದಲ್ಲಿ ಬಿದ್ದ. ಯುದ್ಧ ವಿದ್ಯೆಯನ್ನು ಕಲಿಸಿದ ಗುರುವೂ ಚರ್ಮದ ಉಡುಪು ಮತ್ತು ಹುಲಿಯುಗುರುಗಳಿಂದ ದೊಡ್ಡವರಲ್ಲಿ ಗೌರವವನ್ನು ಮಕ್ಕಳಲ್ಲಿ ಭೀತಿಯನ್ನೂ ಹುಟ್ಟಿಸುತ್ತಿದ್ದ ಮಾರ್ಲಬರೊ ಡ್ಯೂಕನ್ನು ತನ್ನ ಬಲಗಡೆ ಇರಿಸಿಕೊಳ್ಳುವುದರಲ್ಲಿ ಖುಷಿಪಡುತ್ತಿದ್ದ. ಆ ಸಮಯದಲ್ಲಿಯೇ ಅವನು ಯಾವುದೇ ವ್ಯಕ್ತಿ ಉರ್ಸುಲಾ ಕೂಡಾ ಸೇರಿದಂತೆ ಹತ್ತು ಅಡಿಗಳಿಗಿಂತ ಹತ್ತಿರ ಬರಬಾರದೆಂದು ನಿರ್ಧರಿಸಿದ. ಅವನು ನಿಂತ ಕಡೆಯಲ್ಲಿ ಸೀಮೆಸುಣ್ಣದಿಂದ ಒಂದು ವೃತ್ತವನ್ನು ಅವನ ಸಹಾಯಕರು ಬರೆಯುತ್ತಿದ್ದರು. ಅದರ ಮಧ್ಯಪ್ರವೇಶಿಸಿ, ಜಗತ್ತಿನ ಹಣೆಬರಹಕ್ಕೆ ಸಂಬಂಧವಿಲ್ಲದ ಕೆಲವು ಸಂಕ್ಷಿಪ್ತ ಆದೇಶಗಳನ್ನು ನಿರ್ಧರಿಸುತ್ತಿದ್ದ. ಮೊದಲ ಬಾರಿ ಅವನು ಮಸಾರೆಗೆ ಹೋದ. ಜನರಲ್ ಮಾಂಕಾಡಾನನ್ನು ಗುಂಡಿಕ್ಕಿ ಕೊಂದ ಮೇಲೆ ಅವನ ಕಡೆಯ ಆಸೆಯನ್ನು ಪೂರೈಸಲು ಮಾತ್ರ. ಅಲ್ಲಿಗೆ ಹೋದ ಮೇಲೆ ಆತನ ಹೆಂಡತಿಯ ಕೈಗೆ, ಜನರಲ್ ನೀಡಿದ್ದ ಕನ್ನಡಕ, ಪದಕ, ಗಡಿಯಾರ, ಉಂಗುರಗಳನ್ನು ಕೊಟ್ಟಾಗ ಅವುಗಳನ್ನು ಆಕೆ ತೆಗೆದುಕೊಂಡಳೇ ಹೊರತು ಅವನನ್ನು ಒಳಗೆ ಬರಲು ಬಿಡಲಿಲ್ಲ.

"ಕರ್ನಲ್ ನೀನು ಒಳಗೆ ಬರುವ ಹಾಗಿಲ್ಲ, ಯುದ್ಧದ ಮೇಲಿನ ಅಧಿಕಾರ ನಿನ್ನದಾದರೆ, ಮನೆಯ ಅಧಿಕಾರ ನನ್ನದು" ಎಂದಳು.

ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಕೋಪವನ್ನೇನೂ ತೋರಿಸಲಿಲ್ಲವಾದರೂ, ಅವನ ಅಂಗರಕ್ಷಕ ಮನೆಯನ್ನೆಲ್ಲ ಧ್ವಂಸಮಾಡಿ, ಬೂದಿ ಮಾಡಿದ ಮೇಲೆ ಸಮಾಧಾನಗೊಂಡ. "ನಿನ್ನೊಳಗೆ ನೋಡಿಕೊ ಅರೆಲಿಯಾನೊ, ಜೀವಂತವಾಗಿ ಕೊಳೆಯುತ್ತಿದ್ದೀಯ" ಎಂದು ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್ ಆಗ ಹೇಳುತ್ತಿದ್ದ. ಅದೇ ಸಮಯದಲ್ಲಿ ಪ್ರಮುಖ ಕ್ರಾಂತಿಕಾರಿ ಸೇನಾಧಿಪತಿಗಳ ಎರಡನೆ ಸಭೆಯನ್ನು ಕರೆದಿದ್ದ. ಅದರಲ್ಲಿ ಆದರ್ಶವಾದಿಗಳು, ಮಹತ್ವಾಕಾಂಕ್ಷಿಗಳು, ಸಾಹಸಪ್ರಿಯರು, ಸಾಮಾಜಿಕ ವ್ಯವಸ್ಥೆಯ ಬಗ್ಗೆ ಅಸಂತೃಪ್ತರು ಅಲ್ಲದೆ ಸಾಮಾನ್ಯ ಕ್ರಿಮಿನಲ್‌ಗಳೂ ಇದ್ದರು. ಅವರಲ್ಲಿ ಮಾಜಿ ಕನ್‌ಸರ್ವೆಟೀವ್ ಪಕ್ಷದ ಕಾರ್ಯಕರ್ತನೂ ಹಣದ ದುರುಪಯೋಗದ ಆಪಾದನೆಗೆ ಒಳಗಾಗಿ ವಿಚಾರಣೆ ನಡೆಯುವ ಸಂದರ್ಭದಲ್ಲಿ ಅದನ್ನು ತಪ್ಪಿಸಿಕೊಳ್ಳಲು ಕ್ರಾಂತಿಯ ಆಶ್ರಯ ಪಡೆದಿದ್ದವನೂ ಆಗಿದ್ದವನೊಬ್ಬನಿದ್ದ. ತಾವು ಯುದ್ಧ ಮಾಡುತ್ತಿರುವುದು ಯಾಕೆಂಬುದು ಎಷ್ಟೋ ಜನಕ್ಕೆ ತಿಳಿದಿರಲಿಲ್ಲ. ಅಂತಹ ಕಲಬೆರಕೆಯ ಗುಂಪಿನಲ್ಲಿ, ಮೌಲ್ಯಗಳಲ್ಲಿನ ಭಿನ್ನತೆಯಿಂದಾಗಿ ಆಂತರಿಕ ಸ್ಫೋಟವನ್ನು ತಲುಪುವ ಹಂತದಲ್ಲಿದ್ದಾಗ, ಸಪ್ಪೆ ಮೋರೆಯ ಅಧಿಕಾರಿಯಾದ ಜನರಲ್ ತಿಯೊಫಿಲೊ ವಾರ್ಗಾಸ್ ಎಂಬುವನು ಎದ್ದು ಕಾಣುತ್ತಿದ್ದ. ಮೈತುಂಬಿಕೊಂಡ ಇಂಡಿಯನ್, ಉದ್ಧಟ, ಅನಕ್ಷರಸ್ಥ, ಕುಯುಕ್ತಿಗಳಿಂದ ಕೂಡಿದವ, ಜನರ ಉದ್ಧಾರಕ್ಕಾಗಿಯೇ ಅವತರಿಸಿದವ ಎಂಬ ಹುಚ್ಚು ನಂಬಿಕೆಯನ್ನು ತನ್ನವರಲ್ಲಿ ಮೂಡಿಸಿದವನಾಗಿದ್ದ. ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ರಾಜಕಾರಣಿಗಳ ಪಿತೂರಿಗಳ ವಿರುದ್ಧ ಕ್ರಾಂತಿಯನ್ನು ಒಗ್ಗೂಡಿಸುವ ಉದ್ದೇಶದಿಂದ ಸಭೆಯನ್ನು ಕರೆದಿದ್ದ. ಜನರಲ್ ತಿಯೊಫಿಲೊ ವಾರ್ಗಾಸ್ ಮುಂದೆ ಬಂದು ತನ್ನ ಅಭಿಪ್ರಾಯಗಳನ್ನು

ಮಂಡಿಸಿದ. ಕೆಲವೇ ಗಂಟೆಗಳಲ್ಲಿ ಉತ್ತಮ ಶಿಕ್ಷಣ, ಅರ್ಹತೆಗಳನ್ನು ಪಡೆದಿದ್ದ ಸೇನಾನಾಯಕರ ಒಗ್ಗಟ್ಟನ್ನು ಮುರಿದು ತಾನೇ ಪ್ರಧಾನ ಸೇನಾಧಿಪತಿಯಾಗಿ ಅಧಿಕಾರ ವಹಿಸಿಕೊಂಡ. "ಗಮನಿಸಲು ಯೋಗ್ಯನಾದ ಕ್ರೂರ ಮೃಗ" ಎಂದು ಅರೆಲಿಯಾನೊ ತನ್ನ ಆಫೀಸರುಗಳಿಗೆ ಹೇಳಿದ. ಅವನು ಯುದ್ಧ ಮಂತ್ರಿಗಿಂತಲೂ ಅಪಾಯಕಾರಿಯಾದ ಮನುಷ್ಯ ಆಗ ಹೆದರು ಪುಕ್ಕಲನೆಂದು ಹೆಸರಾಗಿದ್ದ ಯುವ ಕ್ಯಾಪ್ಟನ್ ಜಾಗರೂಕತೆಯ ಸೂಚನೆ ನೀಡಿದ.

"ಅದು ಬಹಳ ಸುಲಭ ಕರ್ನಲ್" ಅವನನ್ನು ಸಾಯಿಸಿಬಿಡಬೇಕು ಅಷ್ಟೆ ಎಂದು ಸಲಹೆ ನೀಡಿದ.

ಈ ಸಲಹೆಯಿಂದ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ದಿಗ್ಭ್ರಮೆಗೊಳ್ಳಲಿಲ್ಲ. ಕ್ಷಣಾರ್ಧದಲ್ಲಿ ತನ್ನ ಆಲೋಚನೆಗಳನ್ನೇ ಹೇಳುತ್ತಿದ್ದಾನೆನಿಸಿತು.

"ಆ ರೀತಿ ಮಾಡಬೇಕೆಂದು ನನ್ನಿಂದ ಆದೇಶಕ್ಕಾಗಿ ನಿರೀಕ್ಷಿಸಬೇಡಿ" ಎಂದ.

ಅವನು ಆದೇಶವನ್ನು ವಾಸ್ತವವಾಗಿ ಕೊಡಲಿಲ್ಲವಾದರೂ, ಎರಡು ವಾರಗಳ ನಂತರ ತಿಯೊಫಿಲೊ ವಾರ್ಗಾಸ್ ತುಂಡು ತುಂಡಾಗಿ ಕತ್ತರಿಸಿ ಎಸೆಯಲ್ಪಟ್ಟಿದ್ದ. ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಮುಖ್ಯ ಸೇನಾನಾಯಕತ್ವವನ್ನು ವಹಿಸಿಕೊಂಡ. ಅದೇ ದಿನ ರಾತ್ರಿ, ಎಲ್ಲ ಕ್ರಾಂತಿಯ ನಾಯಕರು ಅವನ ಅಧಿಕಾರವನ್ನು ಒಪ್ಪಿಕೊಂಡರು. ಗಾಭರಿಯಿಂದ ಎದ್ದು ಹೊದಿಕೆಯೊಂದನ್ನು ತರಹೇಳಿದ. ಒಳಗಿನ ಛಳಿ ಅಸಹನೀಯವಾಗಿದ್ದುದರಿಂದ ಮೂಳೆಗಳನ್ನು ಕೊರೆಯುತ್ತಿದ್ದುದರಿಂದ, ತಿಂಗಳುಗಟ್ಟಲೆ ನಿದ್ದೆಯನ್ನೇ ಅವನಿಗೆ ಮಾಡಲಾಗಲಿಲ್ಲ. ಅಸ್ವಸ್ಥತೆಯ ಅಲೆಗಳ ನಡುವೆ ಅಧಿಕಾರದ ಅಮಲು ಸೋರಿಹೋಯಿತು. ಈ ಛಳಿಗೆ ಪರಿಹಾರ ಹುಡುಕುತ್ತಿದ್ದಾಗ ತಿಯೊಫಿಲೊ ವಾರ್ಗಾಸ್‌ನನ್ನು ಗುಂಡಿಕ್ಕಿ ಕೊಲ್ಲಲು ಸೂಚಿಸಿದ ಯುವಕ ಜೊತೆಗಿದ್ದ. ಆದೇಶಗಳನ್ನು ತೊಡುವುದಕ್ಕೆ ಮೊದಲೇ ಆದೇಶಗಳನ್ನು ಪಾಲಿಸಲಾಗುತ್ತಿತ್ತು. ತಾನು ಯೋಚಿಸುವುದಕ್ಕೆ ಬಹಳ ಮೊದಲೇ, ಯೋಚನೆಗೂ ಮೀರಿ ಮುಂದಿರುತ್ತಿದ್ದರು. ಜಾರಿಗೊಳಿಸಲು ಧೈರ್ಯ ವಹಿಸುತ್ತಿದ್ದುದಕ್ಕಿಂತ ಅಧಿಕವಾಗಿತ್ತು ಮಿತಿಮೀರಿದ ಅಧಿಕಾರದ ಏಕಾಂತತೆಯಲ್ಲಿ ಕಳೆದುಹೋಗುತ್ತಿದ್ದವನು ದಿಕ್ಕು ತಪ್ಪಲು ಆರಂಭಿಸಿದ. ಅಕ್ಕಪಕ್ಕದ ಊರುಗಳಲ್ಲಿನ ಜನರ ಜಯಕಾರ ಅವನಿಗೆ ಹಿಂಸೆಯೆನಿಸುತ್ತಿತ್ತು. ಆ ಜಯಕಾರ ಶತ್ರುಗಳಿಗೆ ಕೊಟ್ಟ ಜಯಕಾರವೇ ಆಗಿತ್ತು. ಎಲ್ಲ ಕಡೆಯೂ ಪ್ರಾಯದವರು ತನ್ನ ಕಣ್ಣುಗಳಿಂದಲೇ ತನ್ನನ್ನು ನೋಡುತ್ತಿದ್ದರು. ತನ್ನ ದನಿಯೊಂದಿಗೇ ಮಾತಾಡುತ್ತಿದ್ದರು. ತಾನೆಷ್ಟು ಅಪನಂಬಿಕೆಯಿಂದ ಸ್ವಾಗತಿಸುತ್ತಿದ್ದನೊ ಅದೇ ಅಪನಂಬಿಕೆಯಿಂದ ಸ್ವಾಗತಿಸುತ್ತಿದ್ದರು. ಅಲ್ಲದೆ ಅವರು ತಮ್ಮನ್ನು ಅವನ ಮಕ್ಕಳೆಂದರು. ಅವನಿಗೆ ತಾನು ಚದುರಿಹೋದಂತೆ ಬಹುಭಾಗವಾದಂತೆ ಮತ್ತು ಎಂದಿಗಿಂತಲೂ ಒಂಟಿಯಾದಂತೆ ಭಾಸವಾಯಿತು. ಅವನ ಸ್ವಂತ ಆಫೀಸರುಗಳೇ ತನಗೆ ಸುಳ್ಳು ಹೇಳುತ್ತಿದ್ದಾರೆನಿಸಿತು. ಮಾರ್ಲಬರೋ ಡ್ಯೂಕ್‌ನೊಂದಿಗೆ ಜಗಳವಾಡಿದ್ದ ಆಗ ಅವನು "ತುಂಬ ಒಳ್ಳೆಯ ಸ್ನೇಹಿತನಾಗಿರುವವನೆಂದರೆ ಈಗಷ್ಟೇ ಸತ್ತ ಮನುಷ್ಯನಾಗಿದ್ದ" ಎಂದು

ಹೇಳಿದ. ಅನಿಶ್ಚಿತತೆಯಿಂದ ದಣಿದುಹೋಗಿದ್ದ. ನಿರಂತರ ಯುದ್ಧದ ವಿಷವೃತ್ತದಿಂದಾಗಿ ತನ್ನನ್ನು ತಾನಿರುತ್ತಿದ್ದ ಕಡೆಗೇ ಇರುವಂತಾಗುತ್ತಿದ್ದುದನ್ನು ಅರಿವಿಗೆ ತಂದುಕೊಂಡ. ಆದರೆ ಪ್ರತಿಸಲವೂ ಏಕೋ, ಹೇಗೋ, ಏನೋ, ಯಾವಾಗಲೋ ಒಂದೂ ಅರ್ಥವಾಗದೆ, ಮತ್ತಷ್ಟು ದಣಿದಂತೆ, ವಯಸ್ಸಾದಂತೆ ಅನುಭವಕ್ಕೆ ಬರುತ್ತಿತ್ತು. ಸುಣ್ಣದ ವೃತ್ತದ ಆಚೆ ಯಾವಾಗಲೂ ಯಾವನಾದರೂ ಒಬ್ಬ ಇರುತ್ತಿದ್ದ. ಒಬ್ಬನಿಗೆ ಹಣದ ಅಗತ್ಯ, ಒಬ್ಬನ ಮಗನಿಗೆ ಕೆಮ್ಮು, ಮತ್ತೊಬ್ಬ ಯುದ್ಧದ ಹೊಲಸಿನಿಂದ ಬೇಸತ್ತು ಹೋಗಿ ದೀರ್ಘ ನಿದ್ದೆಯಲ್ಲಿ ಮುಳುಗಬೇಕೆಂದಿದ್ದ. ಆದರೂ ಅವನು ಅಟೆನ್‌ಷನ್ ಸ್ಥಿತಿಯಲ್ಲಿ ನಿಂತು "ಕರ್ನಲ್ ಎಲ್ಲವೂ ಸಹಜ ಸ್ಥಿತಿಯಲ್ಲಿದೆ" ಎಂದೇ ಹೇಳುತ್ತಿದ್ದ. ಸಹಜಸ್ಥಿತಿ ಎನ್ನುವುದು ಕೊನೆಯಿಲ್ಲದ ಯುದ್ಧದ ಭಯಾನಕ ಭಾಗವಾಗಿರುತ್ತಿತ್ತು; ಆದರೆ ಹಾಗೆ ಏನು ಆಗಲಿಲ್ಲ. ಮುನ್ಸೂಚನೆಗಳಿಂದ ಜಾರಿ, ಸಾಯುವವರೆಗಿನ ಚಳಿಯ ಸಾಂಗತ್ಯದಿಂದ ದೂರವಾಗಿ, ಹಳೆಯ ನೆನಪುಗಳ ಬಿಸುಪಿನಲ್ಲಿ ಮಕೊಂಡೊದಲ್ಲಿ ಆಶ್ರಯ ಪಡೆದ. ಅವನ ಸೋಮಾರಿತನ ಎಷ್ಟಿತ್ತೆಂದರೆ, ಯುದ್ಧದ ಇತ್ಯರ್ಥದ ಬಗ್ಗೆ ಚರ್ಚಿಸಲು ಅವನ ಪಕ್ಷದಿಂದಲೇ ಕಮೀಷನ್ ಬರುತ್ತಿರುವ ಸುದ್ದಿ ತಿಳಿದರೂ ಚೆನ್ನಾಗಿ ಹೊದ್ದುಕೊಂಡು ಅರೆಬರೆ ನಿದ್ದೆಯಲ್ಲಿ ಬಿದ್ದುಕೊಂಡಿದ್ದ.

"ಅವರನ್ನು ಸೂಳೆಯರ ಹತ್ತಿರಕ್ಕೆ ಕರೆದುಕೊಂಡು ಹೋಗಿ" ಎಂದು ಹೇಳಿದ.

ಫ್ರಾಕ್ ಕೋಟು ಧರಿಸಿದ್ದ ಆರು ಮಂದಿ ವಕೀಲರು ನವೆಂಬರ್ ತಿಂಗಳಿನ ಬಿರುಬಿಸಿಲನ್ನು ಕಷ್ಟಪಟ್ಟು ಸಹಿಸಿದರು. ಉರ್ಸುಲಾ ಅವರನ್ನೆಲ್ಲ ತನ್ನ ಮನೆಯಲ್ಲಿ ಇರಿಸಿದಳು. ದಿನದ ಬಹು ಭಾಗವನ್ನು ಮುಚ್ಚಿದ ಬಾಗಿಲೊಳಗೆ ರಸತಂತ್ರಕಲೆಯ ಕುರಿತು ಮಾತುಕತೆ ನಡೆಸಿದರು. ಸಂಜೆಗೆ ಕೆಲವು ಆರ್ಕಾಡಿಯೋನ್ ನುಡಿಸುವವರ ಜೊತೆ ಹೋಗಿ ಕತಾವುರೆ ಸ್ಟೋರ್ಸ್ ಅನ್ನು ವಶಪಡಿಸಿಕೊಂಡರು. "ಅವರನ್ನು ಅವರ ಪಾಡಿಗೆ ಬಿಟ್ಟುಬಿಡಿ, ಅವರಿಗೆ ಏನು ಬೇಕಾಗಿದೆ ಅನ್ನೋದು ನನಗೆ ಗೊತ್ತು" ಎಂದು ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಹೇಳಿದ. ಡಿಸೆಂಬರ್ ತಿಂಗಳ ಮೊದಲಲ್ಲಿ ಬಹಳವಾಗಿ ಎದುರುನೋಡುತ್ತಿದ್ದ ಮತ್ತು ಅಷ್ಟು ಬೇಗ ಮುಗಿಯುವುದಿಲ್ಲವೆಂದು ಭಾವಿಸಿದ್ದ ಸಂದರ್ಶನ ಕೇವಲ ಒಂದು ಗಂಟೆಗೂ ಮೊದಲೇ ಮುಗಿಯಿತು.

ಬಿಸಿಲ ಬೇಗೆಯ ನಡು ಮನೆಯಲ್ಲಿ ಬಿಳಿಯ ಹೊದಿಕೆ ಹೊದಿಸಿದ್ದ ಪಿಯಾನೋ ಪಕ್ಕದಲ್ಲಿ ಅವನ ಸೇವಕರು ಹಾಕಿದ್ದ ಸೀಮೆಸುಣ್ಣದ ವೃತ್ತದ ಮಧ್ಯದಲ್ಲಿ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಕುಳಿತಿರಲಿಲ್ಲ. ಅವನು ರಾಜಕೀಯ ಸಲಹೆಗಾರರು ಮಧ್ಯೆ ಇದ್ದ ಕುರ್ಚಿಯಲ್ಲಿ ಕಂಬಳಿ ಸುತ್ತಿಕೊಂಡು ಕುಳಿತು ಮೌನವಾಗಿ ಬಂದವರು ಹೇಳುತ್ತಿದ್ದುದ್ದನ್ನೆಲ್ಲ, ಸಲಹೆಗಳು ಸೂಚನೆಗಳೂ ಸೇರಿದಂತೆ, ಕೇಳಿಸಿಕೊಳ್ಳುತ್ತಿದ್ದ. ಮೊದಲಿಗೆ ಅವರು ಲಿಬರಲ್ ಭೂಮಾಲಿಕರ ಬೆಂಬಲ ಪಡೆಯಲು ಭೂಮಿ ಒಡೆತನದ ಪತ್ರಗಳ ಪರಿಷ್ಕರಣವನ್ನು ನಿಲ್ಲಿಸಬೇಕೆಂದು ಕೇಳಿದರು. ಎರಡನೆಯದಾಗಿ ಕ್ಯಾಥೊಲಿಕ್ ಸಮುದಾಯದ ಬೆಂಬಲ ಪಡೆಯಲು ಪಾದ್ರಿಗಳ ಪ್ರಭಾವದ ವಿರುದ್ಧ ಮಾಡುತ್ತಿರುವ ಹೋರಾಟವನ್ನು ನಿಲ್ಲಿಸಬೇಕು. ಮೂರನೆಯದು ಅಂದರೆ ಕಡೆಯದಾಗಿ, ಅನೈತಿಕ

ಸಂಬಂಧದಿಂದ ಹುಟ್ಟಿದ ಮಕ್ಕಳನ್ನು ನ್ಯಾಯಸಮ್ಮತವಾಗಿ ಹುಟ್ಟಿದ ಮಕ್ಕಳ ಜೊತೆ ಸಮಾನವಾಗಿ ಪರಿಗಣಿಸಿ, ಕುಟುಂಬದ ಐಕ್ಯತೆಯನ್ನು ಕಾಪಾಡಬೇಕೆಂದು ಕೇಳಿಕೊಂಡರು.

"ಇದೆಲ್ಲದರ ಅರ್ಥ, ನಾವೆಲ್ಲ ಅಧಿಕಾರಕ್ಕಾಗಿ ಹೋರಾಟ ಮಾಡುತ್ತಿದ್ದೇವೆ ಎಂದಾಯಿತು" ಎಂದು ನಸುನಗುತ್ತಲೇ ಹೇಳಿದ.

"ಅವೆಲ್ಲ ಬಹಳ ಜಾಣತನದ ಬದಲಾವಣೆಗಳು" ಸದ್ಯಕ್ಕೆ ಅತ್ಯಂತ ಮುಖ್ಯವಾಗಿ ಮಾಡಬೇಕಾದ ಕೆಲಸವೆಂದರೆ "ಯುದ್ಧದ ಜನಪ್ರಿಯ ಬುನಾದಿಯನ್ನು ವಿಸ್ತರಿಸಬೇಕು. ಆಗ ನಮ್ಮ ದೃಷ್ಟಿಯೇ ಭಿನ್ನವಾಗುತ್ತದೆ" ಎಂದು ಬಂದಿದ್ದವರಲ್ಲಿ ಒಬ್ಬನು ಹೇಳಿದ.

ಕರ್ನಲ್ ಅರೆಲಿಯಾನೊ ಬ್ಯುಂಡಿಯಾನ ರಾಜಕೀಯ ಸಲಹೆಗಾರರಲ್ಲಿ ಒಬ್ಬ ಆತುರದಿಂದ, ಮಧ್ಯೆ ಪ್ರವೇಶಿಸಿದ.

"ಇದು ಪರಸ್ಪರ ವಿರುದ್ಧ" "ಈ ಬದಲಾವಣೆಗಳನ್ನು ಒಳ್ಳೆಯದು ಎನ್ನುವುದಾದರೆ ಕನ್‌ಸರ್ವೆಟೀವ್ ಆಡಳಿತ ಒಳ್ಳೆಯದೆಂದೇ ಆಯಿತು. ನೀವು ಹೇಳುವ ಹಾಗೆ ಯುದ್ಧದ ಜನಪ್ರಿಯ ಬುನಾದಿಯನ್ನು ವಿಸ್ತರಿಸುವುದಾದರೆ, ಆ ಆಡಳಿತಕ್ಕೆ ವಿಸ್ತೃತ ಜನಪ್ರಿಯ ಬುನಾದಿ ದೊರೆತಂತೆ ಆಯಿತು. ಅಂದರೆ, ಸಂಕ್ಷೇಪವಾಗಿ ಹೇಳುವುದಾದರೆ ಇಪ್ಪತ್ತು ವರ್ಷಗಳಿಂದ ನಾವು ರಾಷ್ಟ್ರದ ಭಾವನೆಗಳ ವಿರುದ್ಧ ಹೋರಾಡುತ್ತಿದ್ದೇವೆ ಎಂದಾಯಿತು" ಎಂದು ಹೇಳಿದ.

ಅವನು ಇನ್ನೂ ಮಾತನ್ನು ಮುಂದುವರೆಸುವ ಹವಣಿಕೆಯಲ್ಲಿದ್ದ. ಅಷ್ಟರಲ್ಲೇ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಸನ್ನೆಮಾಡಿ ನಿಲ್ಲಿಸುವಂತೆ ಹೇಳಿದ. "ನಿಮ್ಮ ಸಮಯ ಹಾಳು ಮಾಡಬೇಡಿ" "ಮುಖ್ಯವಾಗಿ ನಾವು ಇನ್ನು ಮುಂದೆ ಅಧಿಕಾರಕ್ಕಾಗಿಯೇ ಹೋರಾಡುತ್ತಿರುತ್ತೇವೆ" ಇನ್ನೂ ಮುಸಿ ಮುಸಿ ನಗುತ್ತಲೇ, ಬಂದಿರುವವರು ನೀಡಿದ ದಾಖಲೆ ಪತ್ರಗಳ ಮೇಲೆ ಸಹಿ ಹಾಕಲು ಅಣಿಯಾದ.

"ಅದು ಹಾಗೇ ಇರೋದಾದ್ರಿಂದ ಒಪ್ಪಿಕೊಳ್ಳಲು ನಮ್ಮದೇನೂ ಅಭ್ಯಂತರವಿಲ್ಲ" ಎಂದು ಮುಗಿಸಿದ.

ಅವನ ಕಡೆಯವರು ಒಬ್ಬರನ್ನೊಬ್ಬರು ಏನೋ ಸಂದೇಹಿಸುತ್ತಿರುವಂತೆ ನೋಡಿದರು.

"ಕ್ಷಮಿಸಿ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಇದು ದ್ರೋಹ" ಎಂದು ಮೆಲುದನಿಯಲ್ಲಿ ಹೇಳಿದ.

ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಪೆನ್ನನ್ನು ಎತ್ತಿ ಹಿಡಿದು ತನ್ನೆಲ್ಲ ಅಧಿಕಾರವನ್ನು ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್ ಮೇಲೆ ಹೇರಿದ.

"ನಿನ್ನ ಆಯುಧಗಳನ್ನು ವಶಕ್ಕೆ ಕೊಡು"

ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್ ತನ್ನ ಬಗಲಲ್ಲಿ ಇದ್ದ ಆಯುಧಗಳನ್ನು ಕಳಚಿ ಅವನ ಮುಂದೆ ಮೇಜಿನ ಮೇಲೆ ಇರಿಸಿದ.

"ಕ್ರಾಂತಿಕಾರಿಗಳ ಜಾಗಕ್ಕೆ ಹೋಗಿ, ಅವರ ನ್ಯಾಯಾಲಯಕ್ಕೆ ಒಪ್ಪಿಸಿಕೊಳ್ಳಿ" ಎಂದು ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಆದೇಶಿಸಿದ.

ನಂತರ ಹೇಳಿಕೆಗೆ ಸಹಿ ಹಾಕಿ, ಆ ಕಾಗದ ಪತ್ರಗಳನ್ನು ಬಂದವರ ಕೈಗಿತ್ತು ಹೇಳಿದ. "ತೆಗೆದುಕೊಳ್ಳಿ, ಇವುಗಳಿಂದ ನಿಮಗೆ ಲಾಭವಾಗಬಹುದೆಂದು ಭಾವಿಸುತ್ತೇನೆ" ಎಂದ.

ಎರಡು ದಿನಗಳ ನಂತರ ಭಯಂಕರ ದೇಶದ್ರೋಹದ ಆಪಾದನೆಗೆ ಒಳಗಾಗಿದ್ದ ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್‌ನನ್ನು ಮರಣದಂಡನೆಗೆ ಗುರಿಪಡಿಸಲಾಯಿತು. ಹಾಸಿಗೆಯಲ್ಲಿ ಬಿದ್ದುಕೊಂಡಿದ್ದ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಕ್ಷಮಾದಾನದ ಬೇಡಿಕೆಗೆ ಕಿವುಡನಾಗಿದ್ದ. ಮರಣದಂಡನೆಗೆ ಮುಂಚೆ ಯಾರೂ ಬಂದು ಆದೇಶವನ್ನು ಉಲ್ಲಂಘಿಸಿ ತೊಂದರೆ ಕೊಡಬಾರದೆಂದು ಹೇಳಿದ್ದರೂ ಉರ್ಸುಲಾ ಅದನ್ನು ಲಕ್ಷ್ಯಕ್ಕೆ ತೆಗೆದುಕೊಳ್ಳದೆ ಅವನ ಮಲಗುವ ಕೋಣೆಯಲ್ಲಿ ಅವನನ್ನು ಕಂಡಳು. ಕಪ್ಪುವಸ್ತ್ರ ಧರಿಸಿ, ಅಪರೂಪದ ಗಾಂಭೀರ್ಯದೊಂದಿಗೆ ಮೂರು ನಿಮಿಷಗಳ ಸಂದರ್ಶನ ಅವಧಿಯಲ್ಲಿ "ನನಗೆ ಗೊತ್ತಿದೆ, ನೀನು ಜೆರಿನೆಲ್ಡೊನನ್ನು ಗುಂಡಿಕ್ಕಿ ಕೊಲ್ಲುತ್ತೀ ಅದನ್ನು ತಡೆಯುವ ಶಕ್ತಿ ನನಗಿಲ್ಲ. ಆದರೂ ನಿನಗೊಂದು ಎಚ್ಚರಿಕೆಯ ಮಾತನ್ನು ಹೇಳುತ್ತೇನೆ" ಎಂದು ಶಾಂತವಾಗಿ ಹೇಳಿದಳು "ನನ್ನ ತಂದೆ ತಾಯಿ ಜೋಸ್ ಆರ್ಕಾಡಿಯೊ ಬ್ಯುಂಡಿಯಾನ ನೆನಪಿನಲ್ಲಿ, ದೇವರ ಮುಂದೆ ಪ್ರಮಾಣಮಾಡಿ ಹೇಳುತ್ತಿದ್ದೇನೆ, ನೀನು ಎಲ್ಲೇ ತಲೆಮರೆಸಿಕೊಂಡಿದ್ದರೂ ಎಳೆದುತಂದು ನಾನೇ ನನ್ನ ಈ ಎರಡು ಕೈಗಳಿಂದ ನಿನ್ನನ್ನು ಸಾಯಿಸದೆ ಬಿಡುವುದಿಲ್ಲ"

ಅವನ ಉತ್ತರಕ್ಕೂ ಕಾಯದೆ, ಅಲ್ಲಿಂದ ಹೋಗುವುದಕ್ಕೆ ಮೊದಲು "ನೀನು ಹಂದಿ ಬಾಲ ಇಟ್ಟುಕೊಂಡು ಹುಟ್ಟಿದ ಹಾಗೇನೇ" – ಎಂದಳು.

ಕೊನೆಯಿಲ್ಲದ ಆ ರಾತ್ರಿಯಲ್ಲಿ ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್ ಅಮರಾಂತಳ ಹೊಲಿಗೆ ಕೋಣೆಯಲ್ಲಿ ಕಳೆಯುತ್ತಿದ್ದ ನಿರ್ಜೀವ ಮಧ್ಯಾಹ್ನಗಳನ್ನು ಯೋಚಿಸುತ್ತಿದ್ದ. ಅದೇ ಸಮಯದಲ್ಲಿ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಭಯಂಕರ ಒಂಟಿತನವನ್ನು ನಿವಾರಿಸಿಕೊಳ್ಳುವುದಾದರೂ ಹೇಗೆಂದು ತಲೆಕೆಡಿಸಿಕೊಳ್ಳುತ್ತಿದ್ದ. ಅವನಿಗೆ ಲಭಿಸಿದ್ದ ಸಂತೋಷದ ಕ್ಷಣಗಳೆಂದರೆ ಒಂದು ತನ್ನ ತಂದೆ ತನ್ನನ್ನು ಪೆಸ್ ನೋಡಲು ಕರೆದೊಯ್ದಾಗ, ಮತ್ತೊಂದು ತನ್ನ ವರ್ಕ್‌ಷಾಪಿನಲ್ಲಿ ಪುಟ್ಟಪುಟ್ಟ ಚಿನ್ನದ ಮೀನುಗಳನ್ನು ಪೋಣಿಸುತ್ತಿದ್ದಾಗ 40 ವರ್ಷಗಳ ನಂತರ ಬದುಕಿನಲ್ಲಿ ಸರಳತೆಯ ಪ್ರಯೋಜನಗಳನ್ನು ಕಂಡುಕೊಳ್ಳಬೇಕಾದರೆ ಮೂವತ್ತೆರಡು ವರ್ಷಗಳು ಯುದ್ಧ ಮಾಡಬೇಕಾಯಿತು. ಸಾವಿನ ಜೊತೆಗಿನ ಸಂಧಾನಗಳನ್ನು ಅತಿಕ್ರಮಿಸಿ ಕೀರ್ತಿಯೆಂಬ ಕೊಚ್ಚೆಯಲ್ಲಿ ಹಂದಿಯ ರೀತಿ ಉರುಳಾಡಬೇಕಾಯಿತು.

ಯಾತನೆಯ ಕಣ್ಣಾವಲಿನಿಂದ ದಣಿದಿದ್ದ ಅವನು ದಂಡನೆ ಜಾರಿಗೊಳಿಸುವುದಕ್ಕೆ ಮುಂಚೆ ಸೆಲ್‌ಗೆ ಬಂದ. "ಪ್ರಹಸನ ಮುಗಿಯಿತು ಗೆಳೆಯ" ದಂಡನೆಗೆ ಮೊದಲೇ ಈ ಸೊಳ್ಳೆಗಳು ನಿನ್ನನ್ನು ದಂಡನೆಗೆ ಗುರಿಪಡಿಸಿವೆ ಬೇಗ ಹೊರಡೋಣ ಬಾ" ಎಂದು ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಮಾರ್ಕ್ವೆಜ್‌ಗೆ ಹೇಳಿದ. ಅವನ ಮಾತುಗಳು ಕೇಳಿ ಅವನಲ್ಲಿ, ಉಂಟಾದ ಜಿಗುಪ್ಸೆಯನ್ನು ಹತ್ತಿಕ್ಕಿಕೊಳ್ಳಲು ಅವನಿಂದ ಆಗಲಿಲ್ಲ.

"ಇಲ್ಲ ಅರೆಲಿಯಾನೊ, ನಿನ್ನನ್ನು ಭಯಂಕರ ರಕ್ತದಾಹಿಯಾಗಿ ನೋಡುವುದಕ್ಕಿಂತ ಸಾಯುವುದೇ ಒಳ್ಳೆಯದು" – ಎಂದು ಉತ್ತರಿಸಿದ.

"ನೀನೇನು ನನ್ನನ್ನು ನೋಡುವುದಿಲ್ಲ" "ಈ ನಿನ್ನ ಸಾವಿನೊಂದಿಗೆ, ಯುದ್ಧದ ಗಬ್ಬುನಾತದಿಂದ ಹೊರಗೆ ಬರಲು ಸಹಕರಿಸು. ಬೇಗ ಷೂಗಳನ್ನು ಹಾಕಿಕೊ" ಎಂದ.

ಇದನ್ನು ಹೇಳಿದಾಗ, ಯುದ್ಧವನ್ನು ಆರಂಭಿಸುವುದಕ್ಕಿಂತ, ಅಂತ್ಯಗೊಳಿಸುವುದು ಎಷ್ಟು ಕಷ್ಟವೆಂಬುದನ್ನು ಗಮನಿಸಿರಲಿಲ್ಲ. ಕ್ರಾಂತಿಕಾರರಿಗೆ ಅನುಕೂಲವಾಗುವಂತಹ ರೀತಿಯಲ್ಲಿ ಶಾಂತಿ ಸಂಧಾನಕ್ಕೆ ಷರತ್ತುಗಳನ್ನು ಸೂಚಿಸುವಂತೆ ಸರಕಾರವನ್ನು ಒಂದು ವರ್ಷಕಾಲ ಸಾಕಷ್ಟು ಪ್ರಯತ್ನಪಟ್ಟ ನಂತರ ಅವುಗಳನ್ನು ಒಪ್ಪಿಕೊಳ್ಳಲು ತನ್ನ ಪಾರ್ಟಿಯವರ ಮನವೊಲಿಸಲು ಮತ್ತೊಂದು ವರ್ಷ ತೆಗೆದುಕೊಂಡ. ಕ್ರಾಂತಿಯನ್ನು ಕೈಬಿಡುವಂತೆ ಮಾಡಲು ತನ್ನ ಅಧಿಕಾರಿಗಳ ಮೇಲೆ ಕ್ರೂರ ಕ್ರಮಗಳನ್ನು ಕೈಗೊಂಡ, ಕಡೆಗೆ ಅವರನ್ನು ಹತ್ತಿಕ್ಕಲು ಶತ್ರು ಸೈನ್ಯದ ನೆರವನ್ನು ಪಡೆಯಬೇಕಾಯಿತು.

ಆ ಸಮಯದಲ್ಲಿ ಇದ್ದಷ್ಟು ಉತ್ತಮ ಯೋಧನಾಗಿ ಮೊದಲೇ ಇರಲಿಲ್ಲ. ಕಡೆಗೆ ತಾನು ಹೋರಾಡುತ್ತಿರುವುದು ತನ್ನ ಸ್ವಂತ ವಿಮೋಚನೆಗೆ ಮಾತ್ರವಲ್ಲದೆ ಅಸಂಗತ ಆದರ್ಶಗಳಿಗಾಗಲಿ ಅಥವಾ ಪರಿಸ್ಥಿತಿಗೆ ಅನುಗುಣವಾಗಿ, ಘೋಷಣೆಗಳನ್ನು ಹೇಗೆ ಬೇಕೆಂದರೆ ಹಾಗೆ ತಿರುಚುವ ರಾಜಕಾರಣಿಗಾಗಲಿ ಅಲ್ಲ ಎಂಬ ಸತ್ಯ ಮನವರಿಕೆಯಾಗುತ್ತಿದ್ದಂತೆ, ಅವನ ಉತ್ಸಾಹ ಇಮ್ಮಡಿಸಿತು. ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್, ಹಿಂದೆ ಗೆಲುವಿಗಾಗಿ ಎಷ್ಟೊಂದು ಪ್ರಾಮಾಣಿಕತೆ ಮತ್ತು ಬದ್ಧತೆಗಳೊಂದಿಗೆ ಹೋರಾಡಿದನೊ ಹಾಗೆಯೇ ಈಗ ಸೋಲುವುದಕ್ಕಾಗಿ ಹೋರಾಡಿದ ಅವನ ವ್ಯರ್ಥವಾದ ದುಡುಕುತನಕ್ಕೆ ಗದರಿಸಿದ. "ಯೋಚನೆ ಮಾಡಬೇಡ ಸಾಯುವುದು ಕಲ್ಪಿಸಿಕೊಂಡಷ್ಟು ಸುಲಭವಲ್ಲ" ಎಂದು ಮುಗುಳು ನಗುತ್ತಾ ಅವನು ಹೇಳಿದ. ಅವನ ವಿಷಯದಲ್ಲಿ ಅದು ಸತ್ಯ. ದಿನವನ್ನು ಗೊತ್ತುಪಡಿಸಿದ್ದು ಖಚಿತವಾದಾಗ ಅದು ಅವನಿಗೆ ಒಂದು ನಿಗೂಢವಾದ ರಕ್ಷಣೆಯನ್ನು ಮತ್ತು ಒಂದು ನಿಶ್ಚಿತ ಅವಧಿಗೆ ಯುದ್ಧಗಳಿಂದ ಅಪಾಯಗಳಿಂದ ದೂರ ಉಳಿಯುವ ಅಮರತ್ವವನ್ನೂ ತಂದುಕೊಟ್ಟಿತು. ಅಲ್ಲದೆ ಗೆಲುವಿಗಿಂತ ಹೆಚ್ಚು ದುಬಾರಿಯೂ ರಕ್ತಸಿಕ್ತವೂ ಆದ ಸೋಲನ್ನು ಪಡೆಯಲು ಅವಕಾಶ ನೀಡಿತು.

ಸರಿಸುಮಾರು ಇಪ್ಪತ್ತು ವರ್ಷಗಳ ಯುದ್ಧದ ಅವಧಿಯಲ್ಲಿ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಹಲವು ಬಾರಿ ಮನೆಗೆ ಬಂದಿದ್ದನಾದರೂ, ಯಾವಾಗಲೂ ಆತುರದಲ್ಲಿ ಇರುತ್ತಿದ್ದ. ಜೊತೆಗೆ ಅವನೊಂದಿಗೆ ಒಂದಷ್ಟು ಮಂದಿ ಮಿಲಿಟರಿ ಸಿಬ್ಬಂದಿಯೂ ಇರುತ್ತಿತ್ತು. ಎಲ್ಲಿಗೆ ಹೋದರೂ ಅವರು ಅವನ ಜೊತೆ ಅಲ್ಲೆಲ್ಲ ಇರುತ್ತಿದ್ದರು. ಅವನು ಇದ್ದ ಕಡೆ ಅವನ ವರ್ಚಸ್ಸು ಏನೆಂಬುದು ಉರ್ಸುಲಾಗೆ ತಿಳಿದಿರುತ್ತಿತ್ತು. ಇಂಥ ರೀತಿಯಲ್ಲಿ ಬಂದು ಹೋಗುವವನು ಒಂದು ರೀತಿಯಲ್ಲಿ ಅಪರಿಚಿತನನ್ನಾಗಿಯೇ ಉಳಿಸಿತು. ಹಿಂದಿನ ಸಲ ಮಕೊಂಡೊದಲ್ಲಿದ್ದಾಗ, ತನ್ನ ಮೂವರು ಸೂಳೆಯರಿಗೆಂದು ಮನೆ ತೆಗೆದುಕೊಂಡಿದ್ದ. ಅವನಿಗೆ ಬಿಡುವಿದ್ದಾಗ ಊಟಕ್ಕೆಂದು ಆಹ್ವಾನಿಸಿದ್ದಾಗ ಕೇವಲ ಮೂರು ಸಲ ಮಾತ್ರವೇ ತನ್ನ ಮನೆಯಲ್ಲಿ ಕಾಣಿಸಿಕೊಂಡಿದ್ದ. ರೆಮೆಡಿಯೋಸ್ ದ ಬ್ಯೂಟಿ ಮತ್ತು ಅವಳ ಮಕ್ಕಳು

ಅವನು ಯುದ್ಧದಲ್ಲಿ ತೊಡಗಿದ್ದಾಗ ಹುಟ್ಟಿದವರಾದ್ದರಿಂದ ಅವನು ಯಾರೆಂಬುದನ್ನು ತಿಳಿದಿರಲಿಲ್ಲ. ಅಮರಾಂತಳಿಗೆ, ಪ್ರಾಯದಲ್ಲಿದ್ದಾಗ ಅವನು ಚಿನ್ನದ ಮೀನುಗಳನ್ನು ಮಾಡುತ್ತಿದ್ದುದನ್ನು, ಮನುಷ್ಯರನ್ನು ತನ್ನಿಂದ ಹತ್ತು ಅಡಿಗಳು ದೂರವಿರಿಸಿದ್ದ ದಂತಕಥೆಯಿಂದ ಯೋಧನಾಗಿ ಇದ್ದುದನ್ನು, ಮರೆಯಲು ಸಾಧ್ಯವಿರಲಿಲ್ಲ. ಆದರೆ ಕದನವಿರಾಮ ಹತ್ತಿರವಾಗುತ್ತಿದ್ದಂತೆ ಮೊದಲಿನಂತೆ ಮನುಷ್ಯನಾಗುತ್ತಾನೆ; ಎಲ್ಲ ಜನರ ಹೃದಯಗಳನ್ನು ಗೆಲ್ಲುತ್ತಾನೆ; ಅವನಲ್ಲಿ ಸುಪ್ತವಾಗಿರಬಹುದಾದ ಕುಟುಂಬದ ಬಗೆಗಿನ ಭಾವನೆಗಳು ಮತ್ತೆ ಚಿಗುರಿ ಮೊದಲಿಗಿಂತ ಗಟ್ಟಿಯಾಗುತ್ತದೆ ಎಂದೆಲ್ಲ ಅವರು ನಂಬಿದ್ದರು.

"ಕೊನೆಗಾದರೂ ಕುಟುಂಬದಲ್ಲಿ ಒಬ್ಬ ಗಂಡಸು ಅನ್ನೋನು ಇರೋದು ಸಾಧ್ಯವಾಗುತ್ತದೆ" ಎಂದು ಉರ್ಸುಲಾ ಹೇಳಿದಳು.

ಆದರೆ ಅಮರಾಂತಳಿಗೆ ಮಾತ್ರ ಅವನನ್ನು ಶಾಶ್ವತವಾಗಿ ಕಳೆದುಕೊಳ್ಳುತ್ತೇವೆ ಎಂಬ ಸಂದೇಹ ಇದ್ದೇ ಇತ್ತು. ಕದನ ವಿರಾಮ ಒಂದು ವಾರ ಇದೆ ಎನ್ನುವಾಗ, ಅವನು ಹಿಂಬಾಲಕರ ದಂಡು ಇಲ್ಲದೆ, ಕೇವಲ ಒಂದಿಬ್ಬರು ಸೇವಕರು ಮಾತ್ರವೇ ಇದ್ದು ಮನೆಯನ್ನು ಪ್ರವೇಶಿಸುತ್ತಿದ್ದಂತೆ, ಹೇಸರಗತ್ತೆಯ ಜೀನನ್ನು ಮತ್ತು ಅವನ ಗತಕಾಲದ ವೈಭವದ ವಸ್ತುಗಳಲ್ಲಿ ಒಂದಾದ ಕವಿತೆಗಳ ಕಟ್ಟನ್ನು ಅಂಗಳದಲ್ಲಿ ಇರಿಸಿ, ಹೊಲಿಗೆ ಕೋಣೆಯ ಕಡೆಗೆ ಹೊರಟ. ಅವಳು ಅವನನ್ನು ಕರೆದಳು. ಆದರೆ ಕರ್ನಲ್ ಅರೆಲಿಯಾನೊ ಬ್ಯುಂಡಿಯಾಗೆ ಅವಳನ್ನು ಗುರುತಿಸುವುದಕ್ಕೆ ಕಷ್ಟವಾಯಿತು.

"ನಾನು ಅಮರಾಂತ, ನೋಡು" ಎಂದು ಅವನು ಹಿಂತಿರುಗಿ ಬಂದದ್ದಕ್ಕೆ ಖುಷಿ ಪಡುತ್ತ ಹೇಳಿದಳು.

ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ತಾನು ಮರಣದಂಡನೆಗೆ ಗುರಿಯಾಗಿದ್ದಾಗ, ಒಂದು ಬೆಳಿಗ್ಗೆ ಮಕೊಂಡೋಗೆ ಬಂದಿದ್ದ. ಆಗ ಅವಳನ್ನು ಬ್ಯಾಂಡೇಜ್‌ನೊಂದಿಗೆ ಮೊದಲಬಾರಿ ನೋಡಿದಾಗ ಯಾವ ರೀತಿ ಮುಗುಳ್ನಕ್ಕನೋ ಅದೇ ರೀತಿಯಲ್ಲಿ ಈಗಲೂ, ಅದೇ ಬಗೆಯ ನಗು ಸೂಸಿದ.

"ಅಬ್ಬ, ದಿನಗಳು ಹೇಗೆ ಸಾಗಿಹೋಗುತ್ತವೆ" ಅವನು ಹೇಳಿದ.

ಎಂದಿನಂತೆ ಸೈನಿಕರು ಮನೆಯನ್ನು ರಕ್ಷಿಸಬೇಕಾಯಿತು. ಜನರ ಅವಹೇಳನ, ಬೈಗುಳ, ತನ್ನ ಲಾಭಕ್ಕಾಗಿ ಯುದ್ಧದ ತೀವ್ರತೆಯನ್ನು ಹೆಚ್ಚಿಸಿದನೆಂಬ ಆರೋಪಗಳ ನಡುವೆ ಅವನು ಆಗಮಿಸಿದ. ಜ್ವರದಿಂದ ಶೀತದಿಂದ ಕಂಪಿಸುತ್ತಿದ್ದ. ಕಂಕುಳಲ್ಲಿ ಮತ್ತೆ ಕುರುಗಳೆದ್ದು ಕಾಡುತ್ತಿದ್ದವು. ಕದನ ವಿರಾಮದ ಸುದ್ದಿ ಕೇಳುವುದಕ್ಕೆ ಆರು ತಿಂಗಳು ಮೊದಲೇ ಉರ್ಸುಲಾ ಮದುಮಗಳಿದ್ದ ಕೋಣೆಯನ್ನು ಗುಡಿಸಿ, ಮೂಲೆಯಲ್ಲಿದ್ದ ಸುವಾಸನೆಯ ಸಸ್ಯಗಳನ್ನು ಉರಿಸಿ ಪರಿಮಳವನ್ನು ಹರಡುವಂತೆ ಮಾಡಿ, ಅವನು ಬಂದಾಗ ರೆಮೆಡಿಯೋಸ್‌ಳ ಧೂಳು ತುಂಬಿದ ಗೊಂಬೆಗಳ ಜೊತೆಗೆ ಆಯುಸ್ಸನ್ನು ಕಳೆಯಲಿ ಎಂದು ಅಚ್ಚುಕಟ್ಟಾಗಿ ಇರಿಸಿದ್ದಳು. ಆದರೆ ವಾಸ್ತವವಾಗಿ ಎರಡು ವರ್ಷಗಳ ಹಿಂದೆಯೇ ವಯಸ್ಸಾಗಿ ತನ್ನ ಬದುಕಿನ ಕಡೆಯ ಸಾಲವನ್ನು ತೀರಿಸಿದ್ದ. ಉರ್ಸುಲಾ ಅವನಿಗಾಗಿ ಬಹಳ

ಆಸಕ್ತಿಯಿಂದ ಸಿಲ್ವರ್‌ಷಾಪನ್ನು ಸಿದ್ಧಗೊಳಿಸಿ ಇರಿಸಿದ್ದಳಾದರೂ ಅವನು ಅದನ್ನು ಹಾದುಹೋದರೂ ಆ ಕಡೆ ಕಣ್ಣು ಹಾಯಿಸಲಿಲ್ಲ; ಬೀಗದ ಜೊತೆಗೇ ಬೀಗದ ಕೀಲಿ ಇದ್ದುದನ್ನೂ ಗಮನಿಸಲಿಲ್ಲ. ಕಾಲದ ಪರಿಣಾಮದಿಂದ ಅಲ್ಲಲ್ಲಿ ಮನೆ ಹಾಳಾಗಿದ್ದುದನ್ನು ಗಮನಿಸಲಿಲ್ಲ. ನೆನಪುಗಳಿರುವ ಯಾರಿಗೇ ಆದರೂ ಆ ಮನೆಯ ಸ್ಥಿತಿ ಏನಾಗಿದೆಯೆಂಬುದು ಅರ್ಥವಾಗುತ್ತಿತ್ತು. ಗೋಡೆಗಳ ಮೇಲಿನ ಸುಣ್ಣಬಣ್ಣ ಹಾಳಾಗಿರುವುದನ್ನಾಗಲೀ ಮನೆ ಮೂಲೆ ಮತ್ತು ಇತರೆ ಎಡೆಗಳಲ್ಲಿರುವ ಜೇಡನ ಬಲೆಗಳು, ಬೂಜು ಇತ್ಯಾದಿಗಳನ್ನಾಗಲೀ, ಬೆಗೋನಿಯಾಗಳ ಮೇಲಿನ ಧೂಳನ್ನಾಗಲೀ ತೊಲೆಗಳು ಬಿರುಕು ಬಿಟ್ಟುಕೊಂಡಿರುವುದಾಗಲೀ, ಅಲ್ಲಲ್ಲಿ ತೂತುಗಳು ಬಿದ್ದಿರುವುದಾಗಲೀ ಅವನು ನೋಡಿ ಹಳೆಯ ನೆನಪುಗಳ ಮೂಲಕ ವೇದನೆ ಪಡುವಂತಾಗಲಿಲ್ಲ. ಬೂಟುಗಳನ್ನು ಇರಿಸಿಕೊಂಡೇ ಕಂಬಳಿ ಹೊದ್ದು ಅಂಗಳದಲ್ಲಿ ಕುಳಿತ. ಇಡೀ ರಾತ್ರಿ ಬೆಗೋನಿಯಾಗಳ ಮೇಲೆ ಮಳೆ ಹನಿಸುತ್ತಿದ್ದುದನ್ನು ನೋಡುತ್ತಿದ್ದ. ಬಹಳ ದಿನ ಮನೆಯಲ್ಲಿ ಅವನನ್ನು ಇರಿಸಿಕೊಳ್ಳುವುದು ಸಾಧ್ಯವಾಗುವುದಿಲ್ಲ ಎಂದುಕೊಂಡಳು ಉರ್ಸುಲಾ. "ಯುದ್ಧವಲ್ಲದಿದ್ದರೆ, ಸಾವು ಮಾತ್ರವೇ" ಎಂದು ಯೋಚಿಸಿದಳು. ಅವಳ ಊಹೆ ಎಷ್ಟು ಸಮರ್ಥನೀಯವಾಗಿತ್ತೆಂದರೆ ಅದು ಮುನ್ಸೂಚನೆಯೇ ಆಗಿತ್ತು.

ಆ ರಾತ್ರಿ, ಊಟದ ಸಮಯದಲ್ಲಿ, ಅರೆಲಿಯಾನೊ ಸೆಗುಂಡೋವೇ ಇರಬೇಕು, ಬಲಗೈಯಿಂದ ಬ್ರೆಡ್ಡನ್ನು ತುಂಡು ಮಾಡಿದ ಎಡಗೈಯಿಂದ 'ಸೂಪು' ಕುಡಿದ. ಅದೇ ಅವನ ಅವಳಿ ಸೋದರ ಬಹುಶಃ ಜೋಸ್ ಆರ್ಕಾಡಿಯೋ ಇರಬೇಕು. ಇದಕ್ಕೆ ತದ್ವಿರುದ್ಧವಾಗಿ ಎಡಗೈಯಿಂದ ಬ್ರೆಡ್ಡು ತುಂಡುಮಾಡಿ ಬಲಗೈಯಿಂದ ಸೂಪು ಕುಡಿದ. ಎಷ್ಟರಮಟ್ಟಿಗೆ ಅವರಿಬ್ಬರಲ್ಲಿ ಹೊಂದಾಣಿಕೆ ಇತ್ತೆಂದರೆ, ಅವರಿಬ್ಬರೂ ಸೋದರರಂತಲ್ಲದೆ ಕನ್ನಡಿಯಲ್ಲಿನ ಬಿಂಬಗಳಂತಿದ್ದರು. ತಾವಿಬ್ಬರೂ ಒಂದೇ ಸಮ ಎಂಬುದನ್ನು ಅರಿತಾಗ, ಬಂದವರ ಗೌರವಾರ್ಥ ಅವರು ಅದನ್ನು ಪ್ರಯೋಗಿಸಲು ಸಿದ್ಧವಾದರು. ಆದರೆ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಅದನ್ನು ಗಮನಿಸಲೇ ಇಲ್ಲ. ಅವನು ಎಷ್ಟು ಪರಕೀಯನಾಗಿ ಕಾಣಿಸಿದನೆಂದರೆ, ರೆಮೆಡಿಯೋಸ್‌ದ ಬ್ಯೂಟಿ ತನ್ನ ಕೋಣೆಗೆ ಬೆತ್ತಲೆಯಲ್ಲಿ ಹೋದದನ್ನೂ ಗಮನಿಸಲಿಲ್ಲ. ಉರ್ಸುಲಾ ಒಬ್ಬಳು ಮಾತ್ರವೇ ಅವನ ಅನ್ಯಮನಸ್ಕತೆಯನ್ನು ನಿವಾರಿಸುವ ಪ್ರಯತ್ನ ಮಾಡಿದಳು.

"ನೀನು ಮತ್ತೆ ಹೋಗಬೇಕೆಂದಿದ್ದರೆ ಈ ರಾತ್ರಿ ನಾವು ಹೇಗಿದ್ದೆವು ಎಂಬುದನ್ನಾದರೂ ನೆನಪಿನಲ್ಲಿ ಇರಿಸಿಕೊ" ಎಂದು ಊಟದ ಮಧ್ಯದಲ್ಲಿ ಹೇಳಿದಳು.

ಆಗ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಯಾವುದೇ ಅಚ್ಚರಿಯಿಲ್ಲದೆ, ತನ್ನ ಮನಸ್ಸಿನ ವೇದನೆಯನ್ನು ಅರ್ಥಮಾಡಿಕೊಳ್ಳ ಬಲ್ಲವಳೆಂದರೆ ಉರ್ಸುಲಾ ಒಬ್ಬಳೇ ಎಂಬುದನ್ನು ಗ್ರಹಿಸಿದ. ಎಷ್ಟೋ ವರ್ಷಗಳ ನಂತರ ಮೊದಲ ಬಾರಿಗೆ ಅವಳ ಕಣ್ಣಲ್ಲಿ ಕಣ್ಣಿಟ್ಟು ನೋಡಿದ. ಅವಳ ಚರ್ಮ ಚಕ್ಕಳದಂತಿತ್ತು. ಹಲ್ಲುಗಳು ಹಾಳಾಗಿದ್ದವು. ಕೂದಲು ಬೆಳ್ಳಗಾಗಿತ್ತು. ಅವಳ ನೋಟದಲ್ಲಿ ಭಯವಿತ್ತು. ತಾನು ಚಿಕ್ಕವನಿದ್ದಾಗ, ಕುದಿಯುತ್ತಿರುವ ಸೂಪಿನ ಪಾತ್ರೆ ಬಿದ್ದು ಹೋಗುವುದರ ಮುನ್ಸೂಚನೆ ಕೊಟ್ಟಂದಿನ ಒಂದು ಮಧ್ಯಾಹ್ನದಲ್ಲಿ

ಕಂಡಿದ್ದ ಮುಖದೊಂದಿಗೆ ಈಗಿನದನ್ನು ಹೋಲಿಸಿ ನೋಡಿದ. ಅರ್ಧಶತಮಾನದ ಸುದೀರ್ಘ ಬದುಕಿನ ಪರಿಣಾಮವಾಗಿ ಅವಳಲ್ಲಿ ಕಾಣಿಸಿಕೊಂಡಿದ್ದ ಗಾಯಗಳು, ಹುಣ್ಣುಗಳು, ಸುಕ್ಕುಗಳು, ಕಲೆಗಳು ಯಾವುವೂ ಅವನಲ್ಲಿ ಎಳ್ಳಿನಷ್ಟೂ ಅನುಕಂಪವನ್ನು ಹುಟ್ಟಿಸಲಿಲ್ಲ. ನ್ನ ಹೃದಯದಲ್ಲಿ, ಕೊಳೆತು ಹೋಗಿರುವ ಪ್ರೀತಿಯ ನಡುವೆ ಎಲ್ಲಿಯಾದರೂ ಕಿಂಚಿತ್ತು ಉಳಿದಿರಬಹುದೇ ಎಂದು ಹುಡುಕಾಡಿದ.

ಒಂದು ಸಂದರ್ಭದಲ್ಲಿ, ತನ್ನ ಚರ್ಮದಲ್ಲಿ ಉರ್ಸುಲಾಳ ವಾಸನೆ ಅರಿವಿಗೆ ಬಂದಾಗ, ಕಡೆಯ ಪಕ್ಷ ಒಂದಿಷ್ಟು ನಾಚಿಕೆಯನ್ನಾದರೂ ಅನುಭವಿಸಿದ. ಒಂದೆರಡು ಬಾರಿ ತನ್ನ ಆಲೋಚನೆಗಳಲ್ಲಿ ಅವಳ ಹಸ್ತಕ್ಷೇಪವಿದೆ ಎಂದು ಭಾವಿಸಿದ. ಆದರೆ ಅವೆಲ್ಲವೂ ಯುದ್ಧದಿಂದಾಗಿ ಸಂಪೂರ್ಣವಾಗಿ ಅಳಿಸಿಹೋಗಿದ್ದವು. ಅವನ ಹೆಂಡತಿಯಾಗಿದ್ದ ರೆಮೆಡಿಯೋಸ್‌ಳ ನೆನಪೂ ಕೂಡಾ ಅಸ್ಪಷ್ಟವಾಗಿದ್ದು, ತನ್ನ ಮಗಳಿರಬಹುದೇ ಎನಿಸಿತ್ತು. ಪ್ರೇಮದ ಹೆಸರಿನಲ್ಲಿ ಅವನಿಗಿದ್ದ ಅಸಂಖ್ಯಾತ ಹೆಣ್ಣುಗಳಿಂದ ಪಡೆದ ಸಂತಾನದ ಬಗ್ಗೆಯೂ ಒಂದಿಷ್ಟು ಭಾವನೆಗಳಿರಲಿಲ್ಲ. ಎಷ್ಟೋ ಮಂದಿ ಕತ್ತಲಲ್ಲಿ ಬಂದು ಅವನೊಂದಿಗೆ ಕೂಡುತ್ತಿದ್ದರು. ಬೆಳಗಾಗುವುದಕ್ಕೆ ಮೊದಲೇ ಹೊರಟು ಹೋಗುತ್ತಿದ್ದರು. ಕಡೆಗೆ ಅವನಲ್ಲಿ ಉಳಿಯುತ್ತಿದ್ದುದೆಂದರೆ ದಣಿವು ಆಯಾಸಗಳು ಮಾತ್ರವೇ. ಕಾಲ ಪ್ರವಾಹದ ನಡುವೆ ಅವನ ಮನಸ್ಸಿನಲ್ಲಿ, ನೆನಪಿನಲ್ಲಿ ಉಳಿದಿದ್ದುದೆಂದರೆ ಹುಡುಗರಾಗಿದ್ದಾಗಿನ ತನ್ನ ಮತ್ತು ಜೋಸ್ ಆರ್ಕಾಡಿಯೋನ ಪ್ರೀತಿ ಮಾತ್ರವೇ. ಆದರೆ ಅದು ನಿಜವಾದ ಪ್ರೀತಿ ಆಗಿರದೆ ಬೇರೆ ಬೇರೆ ಕೆಲಸಗಳಲ್ಲಿ ಭಾಗಿಯಾಗಿದ್ದುದರಿಂದ.

"ಕ್ಷಮೆಯಿರಲಿ! ಆದರೆ ಹಾಗೆಲ್ಲ ಆದದ್ದು ಯುದ್ಧದಿಂದಾಗಿ" ಎಂದು ನೆಪ ಹೇಳಿದ.

ಮುಂದಿನ ದಿನಗಳಲ್ಲಿ ತಾನು ಪ್ರಪಂಚದಲ್ಲಿ ಬದುಕಿದ್ದ ಅವಧಿಯ ಕುರುಹುಗಳನ್ನೆಲ್ಲ ನಾಶಮಾಡುವ ಕೆಲಸದಲ್ಲಿ ವ್ಯಸ್ತನಾದ. ಸಿಲ್ವರ್ ಷಾಪ್‌ನಲ್ಲಿದ್ದ ಎಲ್ಲ ಭೌತಿಕ ವಸ್ತುಗಳನ್ನೆಲ್ಲ ಛಿದ್ರಛಿದ್ರವಾಗಿ ಭಗ್ನಗೊಳಿಸಿದ. ತನ್ನ ಬಟ್ಟೆಗಳನ್ನೆಲ್ಲ ಸೇವಕರಿಗೆ ಕೊಟ್ಟ. ತನ್ನ ಆಯುಧಗಳನ್ನೆಲ್ಲ ಅಂಗಳದಲ್ಲಿ, ತನ್ನ ತಂದೆ ಫ್ರುಡೆನ್ಷಿಯೊ ಆಗ್ವಿಲಾರ್‌ನ ಸಾವಿಗೆ ಕಾರಣವಾದ ಭರ್ಜಿಯನ್ನು ಹೂತುಹಾಕಿದಷ್ಟೇ ಆತ್ಮಗ್ಲಾನಿಯೊಂದಿಗೆ ಹೂತಿಟ್ಟ. ಒಂದೇ ಒಂದು ಗುಂಡಿದ್ದ ಪಿಸ್ತೂಲನ್ನು ಮಾತ್ರವೇ ತನ್ನ ಬಳಿ ಇರಿಸಿಕೊಂಡ. ಉರ್ಸುಲಾ ಯಾವುದಕ್ಕೂ ಅಡ್ಡಿ ಬರಲಿಲ್ಲ. ಆದರೆ ರೆಮೆಡಿಯೋಸ್‌ಳ ಭಾವಚಿತ್ರವನ್ನು. ಅದರ ಮುಂದಿದ್ದ ನಂದಾದೀಪವೂ ಸೇರಿದಂತೆ ನಾಶಮಾಡಲು ಉದ್ಯುಕ್ತನಾದಾಗ ಮಾತ್ರವೇ ಅವನನ್ನು ತಡೆಯಲು ಮುಂದಾದಳು. " ಆ ಭಾವಚಿತ್ರದ ಜೊತೆಗಿನ ನಿನ್ನ ಸಂಬಂಧ ಯಾವಾಗಲೋ ಕಡಿದುಹೋಗಿದೆ, ಅದು ಕುಟುಂಬದ ಅವಶೇಷ" ಎಂದು ಅವನಿಗೆ ಹೇಳಿದಳು. ಕದನವಿರಾಮದ ಹಿಂದಿನ ದಿನದಷ್ಟು ಹೊತ್ತಿಗೆ ಮನೆಯಲ್ಲಿ ತನ್ನ ನೆನಪನ್ನು ತರುವ ಯಾವೊಂದು ವಸ್ತುವನ್ನೂ ಉಳಿಸಿರಲಿಲ್ಲ. ಉಳಿಸಿದ್ದ ಕವಿತೆಗಳ ಕಟ್ಟಿನ ಟ್ರಂಕನ್ನು, ಸಾಂತಾ ಸೋಫಿಯಾ ಒಲೆ ಉರಿಸಲು ತೊಡಗಿದ್ದಾಗ ಬೇಕರಿಯೊಳಕ್ಕೆ ತೆಗೆದುಕೊಂಡು ಹೋದ.

"ಒಲೆಯನ್ನು ಇದರಿಂದ ಹಚ್ಚು" "ಇವು ಹಳೆಯ ವಸ್ತುಗಳಾದ್ದರಿಂದ ಚೆನ್ನಾಗಿ ಉರಿಯುತ್ತವೆ" ಎಂದು ಹೇಳಿ ಹಳದಿ ಕಾಗದಗಳ ಸುರುಳಿಯೊಂದನ್ನು ನೀಡಿದ.

ಸಾಂತಾ ಸೋಫಿಯಾ ಯಾವಾಗಲೂ ಮೌನವಾಗಿ ಇರುತ್ತಿದ್ದವಳು ಎಲ್ಲವನ್ನೂ ಒಪ್ಪಿಕೊಳ್ಳುತ್ತಿದ್ದವಳು, ಯಾವುದನ್ನೂ ಯಾರನ್ನೂ ತನ್ನ ಮಕ್ಕಳೂ ಸೇರಿದಂತೆ ವಿರೋಧಿಸದೆ ಇರುತ್ತಿದ್ದವಳಿಗೂ ಈ ಕೆಲಸ ಮಾಡಬಾರದ ಕೆಲಸ ಎನ್ನಿಸಿತ್ತು.

"ಅವು ಬಹಳ ಮುಖ್ಯವಾದ ಕಾಗದಗಳು" ಎಂದಳು.

"ಅಂಥದ್ದೇನೂ ಅಲ್ಲ, ಅವೇನಿದ್ದರೂ ಒಬ್ಬ ಮನುಷ್ಯ ತನಗೆ ತಾನೇ ಬರೆದುಕೊಂಡಂಥವುಗಳು" ಎಂದ ಕರ್ನಲ್.

"ಹಾಗಿದ್ದ ಮೇಲೆ ನೀವೇ ಅದನ್ನು ಉರಿಸಿ ಕರ್ನಲ್" – ಎಂದಳು.

ಅವನು ಅವಳು ಹೇಳಿದಂತೆಯೇ ಮಾಡಿದ. ಆದರೆ ಟ್ರಂಕನ್ನು ಒಂದು ಸುತ್ತಿಗೆಯಿಂದ ಬಡಿಬಡಿದು ತುಂಡುತುಂಡುಮಾಡಿ ಅದನ್ನೂ ಬೆಂಕಿಗೆ ಹಾಕಿದ.

ಕೆಲ ಗಂಟೆಗಳ ಮುಂಚೆ ಪಿಲಾರ್ ತರ್ಸಿರಾ ಅವನನ್ನು ಕಾಣಲು ಬಂದಿದ್ದಳು. ಎಷ್ಟೋ ವರ್ಷಗಳಿಂದ ನೋಡದಿದ್ದ ಅವನಿಗೆ, ಎಷ್ಟು ಮುದುಕಿಯಾಗಿ ಬಿಟ್ಟಿರುವುದು ಮತ್ತು ಸ್ಥೂಲಶರೀರಿಯಾಗಿರುವುದು ಮತ್ತು ಅವಳ ನಗೆಯಲ್ಲಿ ಮೊದಲಿನ ಮೋಹಕತೆ ಕಾಣದಿದ್ದುದು – ಆದರೆ ಕಾರ್ಡುಗಳನ್ನು ಓದುವುದರಲ್ಲಿ ಅವಳು ಪಡೆದುಕೊಂಡಿದ್ದ ಅಗಾಧ ಸಾಮರ್ಥ್ಯ ಅವನನ್ನು ದಿಗ್ಭ್ರಮೆಗೊಳ್ಳುವಂತೆ ಮಾಡಿತ್ತು. 'ನಿನ್ನ ಬಾಯಿಯ ಬಗ್ಗೆ ಎಚ್ಚರ' ಎಂದು ಹೇಳಿದ್ದಳು. ಅದನ್ನು ಹೇಳಿದ್ದು ಅವನು ಕೀರ್ತಿಯ ಔನ್ನತ್ಯದಲ್ಲಿದ್ದಾಗ, ಬಹುಶಃ ಆಶ್ಚರ್ಯಕರವಾದ ವಿಧಿ ನಿಯಮಾಕದ ನಿರೀಕ್ಷೆಯಿಂದ ಹೇಳಿದ್ದಿರಬೇಕು. ಸ್ವಲ್ಪ ಸಮಯದ ನಂತರ ಡಾಕ್ಟರು ಅವನ ಹುಣ್ಣುಗಳನ್ನು ಒರೆಸುತ್ತಿದ್ದಾಗ, ಯಾವುದೇ ಆಸಕ್ತಿಯನ್ನು ತೋರಿಸಿಕೊಳ್ಳದೆ ಸಹಜವಾಗಿ, ತನ್ನ ಹೃದಯ ಎಲ್ಲಿದೆ ಎಂದು ಕೇಳಿದ. ಡಾಕ್ಟರು ಸ್ಟೆಥಸ್ಕೋಪಿನಿಂದ ಕೇಳಿಸಿಕೊಂಡು ಒಂದು ನಿಶ್ಚಿತ ಜಾಗದಲ್ಲಿ, ಹತ್ತಿಯಿಂದ ಅಯೋಡಿನ್‌ನಲ್ಲಿ ಅದ್ದಿ ಒಂದು ವೃತ್ತವನ್ನು ಬರೆದ.

ಕದನ ವಿರಾಮದ ಮಂಗಳವಾರ ಬೆಳಿಗ್ಗೆ, ಧಗೆಯೂ ಇತ್ತು. ಮಳೆಯೂ ಬಂದಿತು. ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಮಾಮೂಲಿನಂತೆ ಐದು ಗಂಟೆಗೂ ಮೊದಲೇ ಅಡಿಗೆ ಮನೆ ಒಳಗೆ ಬಂದು ಸಕ್ಕರೆಹಾಕದೆ ಬ್ಲಾಕ್ ಕಾಫಿಯನ್ನು ಸೇವಿಸಿದ. "ನೀನು ಇಂಥದೇ ದಿನದಂದು ಪ್ರಪಂಚಕ್ಕೆ ಬಂದೆ, ನಿನ್ನ ಬಿಟ್ಟ ಕಣ್ಣುಗಳನ್ನು ನೋಡಿ ಎಲ್ಲರೂ ಅಚ್ಚರಿಗೊಂಡಿದ್ದರು" ಎಂದು ತಿಳಿಸಿದಳು ಉರ್ಸುಲಾ. ಆದರೆ ಅವನು ಅವಳ ಮಾತಿನ ಕಡೆ ಗಮನ ಕೊಡಲಿಲ್ಲ. ಅವನ ಗಮನವೆಲ್ಲ, ಗುಂಪಾಗುತ್ತಿದ್ದ ಸೈನಿಕರ ಸದ್ದು, ಕಹಳೆಯ ಸದ್ದು, ಅಧಿಕಾರಿಗಳ ಆದೇಶದ ಸದ್ದು, ಇತ್ಯಾದಿಗಳಿಂದ ಬೆಳಗಿನ ಪ್ರಶಾಂತತೆ ಕದಡುತ್ತಿದ್ದುದರ ಕಡೆಗಿತ್ತು. ಎಷ್ಟೋ ವರ್ಷಗಳ ಯುದ್ಧದ ಅನುಭವದಲ್ಲಿ ಇವೆಲ್ಲ ಸಾಮಾನ್ಯವೇ ಆಗಿದ್ದರೂ ಈಗ ಮಾತ್ರ, ಹಿಂದೆ ಯಾವಾಗಲೋ ಪ್ರಾಯದಲ್ಲಿ ಬೆತ್ತಲೆ ಹೆಣ್ಣನ್ನು ನೋಡಿದಾಗ ಉಂಟಾಗಿದ್ದ ರೀತಿಯಲ್ಲಿ, ಮಂಡಿಯಲ್ಲಿ ಒಂದು ಬಗೆಯ ದುರ್ಬಲತೆ, ರೋಮಾಂಚನಗಳನ್ನು ಅನುಭವಿಸಿದ. ಅವನಿಗೆ ಗೊಂದಲವೆನಿಸಿತು. ಹಳೆಯ ನೆನಪುಗಳಲ್ಲಿ ಸಿಲುಕಿಕೊಂಡ, ಒಂದು ವೇಳೆ ಅವಳನ್ನು ಮದುವೆಯಾಗಿದ್ದರೆ, ಯುದ್ಧ,

ಕೀರ್ತಿ ಯಾವುದರ ಗೊಡವೆಯೂ ಇಲ್ಲದೆ ಅನಾಮಧೇಯನಾಗಿ ಸುಖಿ ಪ್ರಾಣಿಯಾಗಿ ಇರುತ್ತಿದ್ದೆ ಎಂದುಕೊಂಡ. ಮುಂದಾಲೋಚನೆಯಲ್ಲಿ ಕಾಣಿಸಿಕೊಳ್ಳದಿದ್ದ ಕಂಪನ, ಅವನ ಉಪಹಾರದ ರುಚಿಯನ್ನು ಕೆಡಿಸಿತ್ತು. ಬೆಳಿಗ್ಗೆ ಏಳುಗಂಟೆಗೆ ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್ ಅವನನ್ನು, ಕ್ರಾಂತಿಕಾರಿ ಆಫೀಸರುಗಳ ಜೊತೆಯಲ್ಲಿ ಕರೆದೊಯ್ಯಲು ಬಂದಾಗ ಅವನ್ನು ಎಂದಿಗಿಂತಲೂ ಮೌನಿಯಾಗಿ, ಚಿಂತಾಮಗ್ನನಾಗಿ, ಒಂಟಿತನದೊಂದಿಗೆ ಇದ್ದಂತೆ ಕಾಣಿಸುತ್ತಿದ್ದ. ಉರ್ಸುಲಾ ಅವನ ಭುಜದ ಮೇಲೆ ಬಟ್ಟೆ ಹೊದಿಸಲು ಪ್ರಯತ್ನಿಸಿದಳು. "ನಿನ್ನ ಅವತಾರ ನೋಡಿದರೆ, ಸರ್ಕಾರ ನಿನಗೆ ಒಂದು ಬಟ್ಟೆ ಕೊಳ್ಳುವುದಕ್ಕೂ ಗತಿಯಿಲ್ಲದ್ದಕ್ಕಾಗಿ ಶರಣಾಗಿದ್ದೀಯ ಎಂದುಕೊಳ್ಳುತ್ತದೆ" ಎಂದಳು. ಆದರೆ ಅವನು ಅವಳು ಕೊಟ್ಟದ್ದನ್ನು ಸ್ವೀಕರಿಸಲಿಲ್ಲ. ಅವನು ಬಾಗಿಲ ಬಳಿ ಇದ್ದಾಗ, ಅವಳು ಜೋಸ್ ಆರ್ಕಾಡಿಯೊ ಬ್ಯುಂಡಿಯಾ ಹಾಕಿಕೊಳ್ಳುತ್ತಿದ್ದ ಹ್ಯಾಟನ್ನು ತಲೆ ಮೇಲೆ ಇರಿಸಲು ಬಿಟ್ಟ.

"ಅರೆಲಿಯಾನೊ, ನಿನ್ನ ಕಷ್ಟದ ಕ್ಷಣಗಳಲ್ಲಿ ನಿನ್ನ ತಾಯಿಯನ್ನು ನೆನಪಿಸಿಕೊಳ್ಳುತ್ತೀ ಎಂದು ನನಗೆ ಮಾತು ಕೊಡು" ಅವನು ಕ್ಷೀಣ ನಗೆಯೊಂದನ್ನು ನಕ್ಕು ತೆರೆದು ಬೆರಳುಗಳ ಹಸ್ತವನ್ನು ಎತ್ತಿ ತೋರಿದ. ಆದರೆ ಒಂದು ಮಾತಿಲ್ಲ.

ಮನೆಯಿಂದ ಹೊರಟ ಜನರ ಕೂಗು, ಗದ್ದಲ ಅವಾಚ್ಯ ಶಬ್ದಗಳ ಸುರಿಮಳೆ – ಇವುಗಳನ್ನು ಸಹಿಸಿಕೊಳ್ಳುತ್ತ ಊರಿನ ಹೊರಗೆ ಹೊರಟ. ಉರ್ಸುಲಾ ಮನೆ ಬಾಗಿಲಿಗೆ ಚಿಲಕ ಹಾಕಿದಳು. ಜೀವನದಲ್ಲಿ ಇದನ್ನು ಎಂದೂ ಮನಸ್ಸಿಗೆ ತಂದುಕೊಳ್ಳುವುದಿಲ್ಲ ಎಂದು ನಿರ್ಧರಿಸಿದಳು. "ನಾವಿಲ್ಲಿಯೇ ಕೊಳೆಯೋಣ, ಗಂಡಸರಿಲ್ಲದೆ ಈ ಮನೆಯಲ್ಲಿ ಬೂದಿಯಾಗೋಣ. ಆದರೆ ಊರಿನ ಜನಕ್ಕೆ ನಾವು ದುಃಖದಿಂದ ಅಳುತ್ತಿರುವುದನ್ನು ತೋರಿಸಿಕೊಳ್ಳುವುದು ಮಾತ್ರ ಬೇಡ" ಎಂದುಕೊಂಡಳು. ಇಡೀ ದಿನವನ್ನು ನೆನಪಿನ ಮೂಲೆಮೂಲೆಯಲ್ಲಿ ಅಡಗಿರುವ ಮಗನಿಗಾಗಿ ಹುಡುಕಿದಳು. ಆದರೆ ಎಲ್ಲಿಯೂ ಕಾಣಲಿಲ್ಲ.

ಮಕೊಂಡೊದಿಂದ ಹದಿನೈದು ಮೈಲಿಗಳ ದೂರದಲ್ಲಿದ್ದ ದೈತ್ಯಾಕಾರದ 'ಸೀಬಾ' ಮರದ ನೆರಳಿನಲ್ಲಿ ಇಡೀ ಸಮಾರಂಭ ನಡೆಯಿತು. ಮುಂದೆ ಇದೇ ಮರದ ಸುತ್ತ ನೀರ್ಲಾಂಡ ಎಂಬ ಊರನ್ನು ಸ್ಥಾಪಿಸಲಾಯಿತು. ಸರ್ಕಾರದ ಪ್ರತಿನಿಧಿಗಳು ಪಾರ್ಟಿಯ ಮತ್ತು ಶಸ್ತ್ರ ಸಂನ್ಯಾಸ ಮಾಡಿದ ಕ್ರಾಂತಿಕಾರಿಗಳ ನಿಯೋಗದವ ಮುಂತಾದವರನ್ನು ಮಳೆಯಿಂದ ಬೆದರಿದ ಬಾತುಕೋಳಿಗಳಂತೆ ಕಾಣಿಸುತ್ತಿದ್ದ ಬಿಳಿಯುಡುಗೆಯ ಹೊಸಬರು ಗದ್ದಲದೊಂದಿಗೆ ಉಪಚರಿಸಿದರು. ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಕೊಳಕು ಹೇಸರಗತ್ತೆಯನ್ನೇರಿ ಬಂದ. ಕ್ಷೌರಮಾಡಿಕೊಂಡಿರಲಿಲ್ಲ. ಅವನಿಗೆ ತನ್ನ ಕನಸುಗಳು ಭಗ್ನವಾದುದಕ್ಕೆ, ತನ್ನೆಲ್ಲ ಭರವಸೆಗಳು ಮಣ್ಣುಪಾಲಾದದ್ದಕ್ಕೆ, ವೈಭವದ, ನೆನಪುಗಳು – ಇವೆಲ್ಲವುಗಳಿಂದ ಉಂಟಾಗಬಹುದಾಗಿದ್ದ ಹಿಂಸೆ ಭಯಾನಕವಾಗಿತ್ತು. ಅವನು ಬಯಸಿದ ರೀತಿಯ ವ್ಯವಸ್ಥೆಯಲ್ಲಿ, ಸಂಗೀತವಾಗಲೀ ಸಿಡಿಮದ್ದುಗಳಾಗಲೀ, ಗಂಟೆಗಳ ಸದ್ದಾಗಲಿ, ಜಯ ಜಯಕಾರವಾಗಲಿ ಅಥವಾ ಕದನವಿರಾಮದ ದುಃಖ ಸೂಚಕ ಪರಿಸರವನ್ನು ಬದಲಿಸುವ ರೀತಿಯ ಸಂಭ್ರಮವಾಗಲೀ ಇರಲಿಲ್ಲ. ಒಬ್ಬ ಫೋಟೋಗ್ರಾಫರ್ ಹೇಗೋ

ಫೋಟೋ ಒಂದನ್ನು ತೆಗೆದ. ಅದನ್ನು ಶಾಶ್ವತವಾಗಿ ಉಳಿಸಿಕೊಳ್ಳಬಹುದಾಗಿತ್ತಾದರೂ, ಅದನ್ನು ಹಾಳು ಮಾಡಲಾಯಿತು.

ದಾಖಲೆಗಳಿಗೆ ಸಹಿಮಾಡುವಷ್ಟು ಸಮಯದಲ್ಲಷ್ಟೇ ಸಮಾರಂಭ ನಡೆಯಿತು. ಸರ್ಕಸ್ ಟೆಂಟಿನ ಮಧ್ಯದಲ್ಲಿ ಯಾವುದೋ ಒಂದು ಹಳೆಕಾಲದ ಮೇಜಿನ ಸುತ್ತ ಕುಳಿತಿದ್ದ ಕಡೆಯ ಆಫೀಸರುಗಳು ಕರ್ನಲ್ ಅರೆಲಿಯಾನೊ ಬ್ಯುಂಡಿಯಾಗೆ ನಿಷ್ಠರಾಗಿದ್ದವರೇ ಆಗಿದ್ದರು. ಸಹಿಗಳನ್ನು ತೆಗೆದುಕೊಳ್ಳುವ ಮೊದಲು ಗಣತಂತ್ರದ ಅಧ್ಯಕ್ಷರ ಆಪ್ತ ಪ್ರತಿನಿಧಿ ಶರಣಾಗತಿಯ ವಿಧೇಯಕವನ್ನು ಗಟ್ಟಿಯಾಗಿ ಓದಲು ಮುಂದಾದ, ಆದರೆ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಅವನನ್ನು ತಡೆದು, ಇಂತಹ ಔಪಚಾರಿಕತೆಯಿಂದ ಸಮಯವನ್ನು ಹಾಳುಮಾಡುವುದು ಬೇಡ ಎಂದು ಹೇಳಿ, ಅವುಗಳನ್ನು ಓದದೆಯೇ ಸಹಿಮಾಡಲು ಅಣಿಯಾದ. ಅವನ ಆಫೀಸರುಗಳಲ್ಲಿ ಒಬ್ಬನು ಆ ಟೆಂಟಿನ ನಿಶ್ಶಬ್ದವನ್ನು ಕದಡಿ ಹೇಳಿದ.

"ಕರ್ನಲ್, ಸಹಿ ಮಾಡುವುದರಲ್ಲಿ ನೀನು ಮೊದಲಿಗನಾಗದಂತೆ ನಮಗೊಂದು ಉಪಕಾರ ಮಾಡು" ಎಂದು.

ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಒಪ್ಪಿದ. ಮೇಜಿನ ಸುತ್ತ ದಾಖಲೆಗಳು ಸಹಿಗಾಗಿ ಓಡಾಡಿದವು. ಎಂಥ ಮೌನ ಕವಿದಿತ್ತೆಂದರೆ, ಸಹಿ ಮಾಡುವಾಗ ಉಂಟಾಗುತ್ತಿದ್ದ ಲೇಖನಿಯ ಸದ್ದನ್ನೂ ಕೇಳಬಹುದಾಗಿತ್ತು. ಮೊದಲ ಸಾಲು ಖಾಲಿಯಾಗಿಯೇ ಇತ್ತು. ಅರೆಲಿಯಾನೊ ಅದನ್ನು ಭರ್ತಿಮಾಡಲು ಮುಂದಾದ ಕೂಡಲೇ ಮತ್ತೊಬ್ಬ ಆಫೀಸರ್ ಎದ್ದು ನಿಂತು,

"ಕರ್ನಲ್ ಎಲ್ಲ ಸರಿಹೋಗಲು ಇನ್ನೂ ಸಮಯವಿದೆ" ಎಂದು ಹೇಳಿದ.

ಮುಖಭಾವವನ್ನು ಬದಲಿಸದೆ ಕರ್ನಲ್ ಅರೆಲಿಯಾನೊ ಮೊದಲ ಪ್ರತಿಯಲ್ಲಿ ಸಹಿಮಾಡಿದ. ಕಡೆಯದನ್ನು ಸಹಿಮಾಡುವುದಿದ್ದಾಗ, ಕ್ರಾಂತಿಕಾರಿಯೊಬ್ಬನು ಹೇಸರಗತ್ತೆಯ ಮೇಲೆ ಎರಡು ಪೆಠಾರಿಗಳನ್ನು ಹೇರಿಸಿಕೊಂಡು ಬಾಗಿಲಲ್ಲಿ ಕಾಣಿಸಿಕೊಂಡ. ಇನ್ನೂ ಪ್ರಾಯದ ಉತ್ತುಂಗದಲ್ಲಿದ್ದರೂ ಮುಖ ಬಾಡಿದಂತಿತ್ತು. ಮತ್ತು ತಾಳ್ಮೆಯ ಭಾವವಿತ್ತು. ಅವನು ಮಕೊಂಡೊ ಪ್ರದೇಶದ ಕ್ರಾಂತಿಯ ಕೋಶಾಧಿಕಾರಿಯಾಗಿದ್ದ. ಆರು ದಿನಗಳ ಪ್ರಯಾಸಕರ ಪ್ರಯಾಣದಲ್ಲಿ ಹೇಸರಗತ್ತೆಯನ್ನು ಎಳೆಯುತ್ತಾ ಬಂದವನು ಹಸಿವಿನಿಂದ ಸಾಯುತ್ತಿದ್ದ. ಅವನಿಗೆ ಕದನವಿರಾಮದ ಸರಿಯಾದ ಸಮಯಕ್ಕೆ ತಲುಪಬೇಕೆಂಬ ಕಾರಣದಿಂದ ಇಷ್ಟೆಲ್ಲ ಅನುಭವಿಸಿದ. ತುಂಬ ಜಾಗರೂಕತೆಯಿಂದ ಪೆಠಾರಿಗಳನ್ನು ಇಳಿಸಿಕೊಂಡು ಮೇಜಿನ ಮೇಲೆ ಇಟ್ಟ. ಅದರ ಮುಚ್ಚಳ ತೆಗೆದು ಒಂದೊಂದಾಗಿ ಎಪ್ಪತ್ತೆರಡು ಚಿನ್ನದ ಇಟ್ಟಿಗೆಗಳನ್ನು ಮೇಜಿನ ಮೇಲಿರಿಸಿದ. ಇಷ್ಟೊಂದು ಸಂಪತ್ತು ಇದ್ದುದನ್ನು ಎಲ್ಲರೂ ಮರೆತುಬಿಟ್ಟಿದ್ದರು. ಹೋದ ವರುಷ ಉಂಟಾಗಿದ್ದ ಅವ್ಯವಸ್ಥೆ ಸಂದರ್ಭದಲ್ಲಿ ಕೇಂದ್ರದ ಹಿಡಿತ ತಪ್ಪಿ ಹೋಗಿ ಕ್ರಾಂತಿ ಎನ್ನುವುದು ಕ್ರಾಂತಿ ನಾಯಕರ ನಡುವಿನ ದ್ವೇಷ, ಶತ್ರುತ್ವ, ಸಾಧನೆ ಮಾತ್ರವಾಗಿ ಉಳಿಯಿತು. ಅಂಥ ಸಂದರ್ಭದಲ್ಲಿ ಯಾವುದೇ ಜವಾಬ್ದಾರಿಯನ್ನು ನಿರ್ವಹಿಸುವುದು ದುಸ್ತರವಾಯಿತು. ಕ್ರಾಂತಿಯ

ಸಮಯದಲ್ಲಿನ ಚಿನ್ನವನ್ನೆಲ್ಲ ಕರಗಿಸಿ ಗಟ್ಟಿಗಳನ್ನಾಗಿ ಮಾಡಿ ಅವುಗಳನ್ನು ಕಾಯಿಸಿದ ಜೇಡಿ ಮಣ್ಣಿನಿಂದ ಮರೆಮಾಚಿ ಇಡಲಾಗಿತ್ತು. ಅದು ಯಾರ ಸುಪರ್ದಿಗೂ ಸಿಗದಂತಿತ್ತು. ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಎಪ್ಪತ್ತೆರಡು ಚಿನ್ನದ ಇಟ್ಟಿಗೆಗಳನ್ನು ಗಟ್ಟಿಗಳನ್ನು ಒಪ್ಪಿಸಲಾಗುತ್ತಿದ್ದ ವಸ್ತುಗಳ ಜೊತೆಗೆ ಸೇರಿಸಿದ ಮತ್ತೆ ಯಾವುದೇ ಭಾಷಣಗಳಿಲ್ಲದೆ ಸಮಾರಂಭವನ್ನು ಮುಗಿಸಿದ. ಕೊಳಕಾಗಿದ್ದ ಆ ಯುವಕ ಅವನನ್ನು ದಿಟ್ಟಿಸುತ್ತಾ, ಮೌನವಾಗಿ ಅವನ ಎದುರು ನಿಂತಿದ್ದ.

“ಇನ್ನೂ ಏನಾದರೂ ಇದೆಯೇ” ಎಂದು ಆ ಯುವಕನನ್ನು ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಕೇಳಿದ.

ಆ ಯುವಕ ತುಟಿ ಬಿಗಿಹಿಡಿದು “ರಸೀದಿ” ಎಂದು ಕೇಳಿದ. ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಸ್ವತಃ ತನ್ನ ಕೈ ಬರಹದಲ್ಲಿಯೇ ಕೊಟ್ಟ. ನಂತರ ಆ ಹುಡುಗರು ಆಚೀಚೆ ಕಳಿಸುತ್ತಿದ್ದ ಬಿಸ್ಕತ್ತು ಮತ್ತು ಜ್ಯೂಸ್‌ಗಳಲ್ಲಿ, ಕರ್ನಲ್ ಬ್ಯುಂಡಿಯಾ ಒಂದೆರಡು ಬಿಸ್ಕತ್ತು ತಿಂದು ನಿಂಬೆ ಜ್ಯೂಸನ್ನು ಕುಡಿದ. ಅವನಿಗಾಗಿ ವಿಶ್ರಾಂತಿಗೆಂದು ಸಿದ್ಧ ಮಾಡಿದ್ದ ಟೆಂಟಿನೆಡೆಗೆ ನಡೆದ. ಅಲ್ಲಿ ಹೋದ ಮೇಲೆ ತನ್ನ ಷರ್ಟನ್ನು ಕಳಚಿ ಮಂಚದ ಅಂಚಿನಲ್ಲಿ ಕುಳಿತ. ಪಿಸ್ತೂಲನ್ನು ತೆಗೆದುಕೊಂಡು, ಡಾಕ್ಟರು ಅಯೋಡಿನ್‌ನಿಂದ ಗುರುತುಮಾಡಿದ್ದ ಜಾಗಕ್ಕೆ ಗುರಿಯಿಟ್ಟು ಮೂರು-ಹದಿನೈದಕ್ಕೆ ಸರಿಯಾಗಿ, ಗುಂಡುಹಾರಿಸಿಕೊಂಡ. ಆ ಕ್ಷಣದಲ್ಲಿ ಉರ್ಸುಲಾ ಮಕೊಂಡೊದಲ್ಲಿ ಹಾಲು ಕಾಯಿಸುತ್ತಿದ್ದವಳು, ಪಾತ್ರೆಯ ಮೇಲಿನ ಮುಚ್ಚಳ ತೆಗೆದು ಹಾಲು ಇಷ್ಟು ಹೊತ್ತಾದರೂ ಕಾದಿಲ್ಲವೇಕೆ ಎಂದು ಅಚ್ಚರಿಪಡುತ್ತಿದ್ದಳು. ನೋಡಿದರೆ ಆ ಹಾಲಿನ ತುಂಬ ಹುಳುಗಳಿದ್ದವು.

“ಅರೆಲಿಯೊನನ್ನು ಅವರು ಕೊಂದು ಬಿಟ್ಟಿದ್ದಾರೆ” ಎಂದು ಭಾವೋದ್ವೇಗದಿಂದ ಹೇಳಿದಳು. “ಯಾರಿಗೂ ಅವನ ಕಣ್ಣುಗಳನ್ನು ಮುಚ್ಚಬೇಕೆಂಬ ಔದಾರ್ಯವೂ ಇಲ್ಲವಾಯಿತೇ?” ಎಂದು ಮಾತು ಮುಂದುವರೆಸಿದಳು.

ಸಂಜೆಯ ಹೊತ್ತಿಗೆ ಕಂಬನಿ ದುಂಬಿದ ಕಣ್ಣುಗಳಿಂದ ಆಕಾಶದಲ್ಲಿ ಬೆಳಕಿನ ಚಕ್ರಗಳು ಹರಿದಾಡುತ್ತಿರುವುದನ್ನು ಕಂಡು, ಖಂಡಿತವಾಗಿಯೂ ಇದು ಸಾವಿನ ಸಂಕೇತ ಎಂದುಕೊಂಡಳು. ಕರ್ನಲ್ ಅರೆಲಿಯಾನೊ ಬ್ಯುಂಡಿಯಾನ ಶವವನ್ನು ಚಾದರವೊಂದರಲ್ಲಿ ಸುತ್ತಿ ತಂದಾಗ ಅವಳಿನ್ನೂ ಚೆಸ್ಟ್‌ನಟ್ ಮರದಡಿಯಲ್ಲಿ ಗಂಡನ ಮೊಣಕಾಲ ಬಳಿ ಕುಳಿತು ಬಿಕ್ಕಿಬಿಕ್ಕಿ ಅಳುತ್ತಿದ್ದಳು. ಶವಕ್ಕೆ ಹೊದಿಸಿದ್ದ ಚಾದರ ಒಣಗಿದ ರಕ್ತದಿಂದ ಪೆಡಸಾಗಿತ್ತು ಅವನ ಕಣ್ಣುಗಳು ರೋಷದಿಂದ ತುಂಬಿದ್ದಂತೆ ಕಾಣಿಸಿತು.

ಅಪಾಯದಿಂದ ಅವನು ಪಾರಾಗಿದ್ದ. ಗುಂಡು ಎಷ್ಟು ಸಲೀಸಾಗಿ ಎದೆಯಿಂದ ಬೆನ್ನಿನ ಹೊರಕ್ಕೆ ಪಯಣಿಸಿತ್ತೆಂದರೆ, ಡಾಕ್ಟರ್ ಅಯೋಡಿನ್‌ನಿಂದ ತೋಯಿಸಿದ ದಾರವನ್ನು ನೀಟಾಗಿ ಎದೆಯಿಂದ ಬೆನ್ನಿನ ಕಡೆಗೆ ಸಲೀಸಾಗಿ ಎಳೆದು ಹೊರತೆಗೆದಿದ್ದ. “ನನ್ನ ಅತ್ಯಂತ ಮಹತ್ವದ ಸಾಧನೆ” ಎಂದು ತೃಪ್ತಿಯಿಂದ ಹೇಳಿದ. ಈ ದಾರಿ ಮಾತ್ರವೇ ದೇಹದ ಯಾವುದೇ ಮುಖ್ಯ ಭಾಗಗಳಿಗೆ ಹಾನಿ ಮಾಡದೆ ಗುಂಡು ಹಾಯಲು ಸಾಧ್ಯವಾಯಿತು.

ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ತನ್ನ ಸುತ್ತ ತನ್ನ ಆತ್ಮ ಶಾಂತಿಗಾಗಿ ಪ್ರಾರ್ಥನೆ ಮಾಡುತ್ತಿದ್ದ ಹೊಸ ಮುಖಗಳನ್ನು ತನ್ನ ಸುತ್ತ ಇದ್ದುದನ್ನು ನೋಡಿದ. ತಾನು ಗುಂಡನ್ನು ಬಾಯಿಯ ಮೂಲಕ ಹಾರಿಸದೆ ಹೋದುದಕ್ಕೆ ಅವನಿಗೆ ದುಃಖವಾಯಿತು. ಹಾಗೆ ಮಾಡದೆ ಇದ್ದುದು ಪಿಲಾರ್ ತರ್ಸಿರಾಳ ಮುನ್ಸೂಚನೆಯನ್ನು ಸುಳ್ಳೆಂದು ನಿರೂಪಿಸಲು ಮಾತ್ರವೇ ಹಾಗೆ ಮಾಡಿದ್ದ.

"ನನಗಿನ್ನೂ ಅಧಿಕಾರ ಇದ್ದಿದ್ದರೆ, ನನ್ನ ಕೈಯಿಂದ ಷೂಟ್ ಮಾಡಿಸಿಬಿಡ್ತಿದ್ದೆ. ನನ್ನ ಪ್ರಾಣ ರಕ್ಷಿಸಿದ್ದಕ್ಕಲ್ಲ, ನನ್ನನ್ನು ಮೂರ್ಖನನ್ನಾಗಿ ಮಾಡಿದ್ದಕ್ಕೆ" ಎಂದು ಡಾಕ್ಟರ್‌ಗೆ ಹೇಳಿದ.

ಸಾವಿನಿಂದ ಉಳಿದು ಬಂದದ್ದು, ಅವನಿಗೆ ಕಳೆದುಕೊಂಡಿದ್ದ ಪ್ರತಿಷ್ಠೆಯನ್ನು ಮತ್ತೆ ಗಳಿಸಿಕೊಟ್ಟಿತ್ತು. ಅವನು ಯುದ್ಧವನ್ನು ಚಿನ್ನದ ಗಟ್ಟಿಗಳಿಂದಾದ ಗೋಡೆಗಳಿರುವ ಕೋಣೆಯನ್ನು ಮಾರಿಕೊಂಡಿದ್ದಾನೆ ಎಂಬ ವದಂತಿಯನ್ನು ಹಬ್ಬಿಸಿದವರೆ, ಇದು, ಪ್ರತಿಷ್ಠೆ, ಗೌರವಗಳನ್ನು ಉಳಿಸಿಕೊಳ್ಳುವುದಕ್ಕಾಗಿ ಮಾಡಿದ ಆತ್ಮಹತ್ಯಾ ಪ್ರಯತ್ನವೆಂದು ಹೇಳಿ ಅವನನ್ನೊಬ್ಬ ರಾಷ್ಟ್ರಕ್ಕಾಗಿ ಪ್ರಾಣಬಿಟ್ಟವನು ಎಂದು ಪ್ರಚಾರ ಮಾಡಿದರು. ಗಣತಂತ್ರದ ಅಧ್ಯಕ್ಷರು ಅವನ ತ್ಯಾಗವನ್ನು ಪರಿಗಣಿಸಿ 'ಆರ್ಡರ್ ಆಫ್ ಮೆರಿಟ್ ಅವಾರ್ಡ್' ಕೊಟ್ಟಾಗ ಅದನ್ನು ತಿರಸ್ಕರಿಸಿದ. ಆ ಸಮಯದಲ್ಲಿಯೂ ಅವನ ಆಗರ್ಭ ಶತ್ರುಗಳೂ ಅವನನ್ನು ಮುತ್ತಿ, 'ಕದನ ವಿರಾಮ' ದ ನಿಲುವನ್ನು ಕೈಬಿಟ್ಟು ಮತ್ತೆ ಯುದ್ಧವನ್ನು ಆರಂಭಿಸಲು ಕೇಳಿಕೊಂಡರು. ಅವನಿಗಾದ ಅನ್ಯಾಯಕ್ಕೆ ಪರಿಹಾರವಾಗಿ ಮತ್ತೆ ತುಂಬ ಉಡುಗೊರೆಗಳು ಬಂದು ತುಂಬಿದವು. ತನ್ನ ಹಿಂದಿನ ಸ್ನೇಹಿತರಿಂದ ಬಂದ ಸಹಕಾರವನ್ನು, ಪ್ರೋತ್ಸಾಹವನ್ನು ಕಂಡು ಸಂಪ್ರೀತನಾದ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಅವರನ್ನು ಸಂತೃಪ್ತಿ ಪಡಿಸಬೇಕಾದ ಸಾಧ್ಯತೆಯನ್ನು ತಳ್ಳಿ ಹಾಕಲಿಲ್ಲ. ಅದಕ್ಕೆ ಪ್ರತಿಯಾಗಿ ಒಂದು ಸಂದರ್ಭದಲ್ಲಿ ಹೊಸ ಯುದ್ಧದ ಕಲ್ಪನೆಯಿಂದ ಅವನೆಷ್ಟು ಉತ್ಸಾಹಗೊಂಡಿದ್ದನೆಂದರೆ, ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್‌ಗೆ, ಯುದ್ಧ ಘೋಷಣೆಗಾಗಿ ಇವನು ಕೇವಲ ನೆಪಕ್ಕಾಗಿ, ಕಾಯುತ್ತಿದ್ದಾನೆ ಎನಿಸಿತು. ಕಾದಿದ್ದ ನೆಪ ಸಿಕ್ಕಿಯೇ ಸಿಕ್ಕಿತು. ಗಣತಂತ್ರದ ಅಧ್ಯಕ್ಷ ಮಾಜಿ ಯೋಧರಿಗೆ, ಲಿಬರಲ್ ಆಗಿರಬಹುದು ಕನ್‌ಸರ್ವೆಟೀವ್ ಆಗಿರಬಹುದು. ಪ್ರತಿಯೊಬ್ಬರ ವಿಷಯವನ್ನು ವಿಶೇಷ ಆಯೋಗದ ಮೂಲಕ ಪರಿಶೀಲನೆಯಾಗದ ಹೊರತು ಮಿಲಿಟರಿ ನಿವೃತ್ತಿ ವೇತನವನ್ನು ನೀಡುವುದನ್ನು ತಿರಸ್ಕರಿಸಿತ್ತು. "ಇದು ಬಹಳ ಅನ್ಯಾಯ" ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಗುಡುಗಿದ. "ಅವರಿಗೆ ಸುದ್ದಿ ತಿಳಿಯುವಷ್ಟು ಹೊತ್ತಿಗೇನೇ ಮುಪ್ಪಿನಿಂದ ಸಾವನ್ನು ಸಮೀಪಿಸಿರುತ್ತಾರೆ" ಅವನಿಗೆ ಆರಾಮವಾಗಲೆಂದು ನೀಡಿದ್ದ ತೂಗಾಡುವ ಕುರ್ಚಿಯಿಂದ ಮೊದಲ ಬಾರಿಗೆ ಎದ್ದು ಮಲಗುವ ಕೋಣೆಯಲ್ಲಿ ಅಡ್ಡಾಡಿದ ಮತ್ತು ಗಣತಂತ್ರದ ಅಧ್ಯಕ್ಷನಿಗೆ ಸಂದೇಶವೊಂದನ್ನು ಬರೆಸಿದ. ತಂತಿ ಸಂದೇಶದ ಮೂಲಕ ಅವನು ಹೇಳಿದ್ದೇನೆಂದರೆ, ನೀರ್ಲಾಂಡ ಟ್ರೀಟಿ ಅಥವಾ ಒಪ್ಪಂದವನ್ನು ಮೀರಿದ್ದನ್ನು ತಪ್ಪೆಂದು ವಾದಿಸಿದ್ದ. ಎರಡನೆಯದಾಗಿ ಎರಡು ವಾರಗಳೊಳಗಾಗಿ 'ಪೆನ್‌ಷನ್ ಅನ್ನು ತೀರ್ಮಾನಿಸದಿದ್ದಲ್ಲಿ ಯುದ್ಧವನ್ನು ಘೋಷಿಸುವುದಾಗಿ ಬೆದರಿಕೆಹಾಕಿದ್ದ. ಅವನ ಧೋರಣೆಗಳು ಎಷ್ಟು ನ್ಯಾಯ ಸಮ್ಮತವಾಗಿತ್ತೆಂದರೆ ಹಿಂದಿನ ಕನ್‌ಸರ್ವೆಟೀವ್ ಹೋರಾಟಗಾರರೂ ಅವನ ಬೆಂಬಲಕ್ಕೆ ನಿಂತರು. ಸರಕಾರದಿಂದ ಬಂದ ಉತ್ತರವೆಂದರೆ,

ಅವನ ಬೆಂಗಾವಲಿಗೆಂದು ಮನೆಯಸುತ್ತ ಮಿಲಿಟರಿ ರಕ್ಷಕದಳವನ್ನು ನಿಯೋಜಿಸಿದ್ದು ಮತ್ತು ಅವನನ್ನು ಕಾಣಲು ಯಾರೇ ಬಂದರೂ ಅವರನ್ನು ನಿಷೇಧಿಸಿದ್ದು. ಇಡೀ ದೇಶದಲ್ಲಿ, ಬೇರೆ ನಾಯಕರೆಲ್ಲರಿಗೂ ಇದೇ ಬಗೆಯ ವ್ಯವಸ್ಥೆಯನ್ನು ಏರ್ಪಡಿಸಲಾಗಿತ್ತು. ಇದರ ಹಿಂದಿನ ಉದ್ದೇಶ ಎಲ್ಲರ ಮೇಲೂ ಕಣ್ಣಿಡುವುದಾಗಿತ್ತು. ಎಷ್ಟು ಸಮಯಾನುಕೂಲವಾಗಿಯೂ ಪರಿಣಾಮಕಾರಿಯಾಗಿಯೂ ಕಾರ್ಯಾಚರಣೆ ಜಾರಿಗೊಳಿಸಲಾಗಿತ್ತೆಂದರೆ ಕದನವಿರಾಮದ ನಂತರ, ಕರ್ನಲ್ ಅರೆಲಿಯಾನೋ ಬ್ಯುಂಡಿಯಾ ಸುಧಾರಿಸಿಕೊಂಡ ಮೇಲೆ ಅವನ ಅತ್ಯಂತ ಆಪ್ತ ಕ್ರಾಂತಿಕಾರಿಗಳು ಸಾವನ್ನಪ್ಪಿದ್ದರು. ಇಲ್ಲವೆ ದೇಶದಿಂದ ಹೊರಗೆ ಅಟ್ಟಿದ್ದರು; ಜೊತೆಗೆ ಎಂದೆಂದಿಗೂ ಹೊರಹೋಗದಂತಹ ರೀತಿಯಲ್ಲಿ ಸಾರ್ವಜನಿಕ ಆಡಳಿತದಲ್ಲಿ ಮಿಳಿತಗೊಳಿಸಿ ಕೊಂಡಿದ್ದರು.

ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಡಿಸೆಂಬರ್‌ನಲ್ಲಿ ತನ್ನ ಕೋಣೆಯಿಂದ ಹೊರಗೆ ಬಂದಿದ್ದ. ಯುದ್ಧದ ಬಗ್ಗೆ ಯೋಚನೆ ಮಾಡದಿರಲು ವರಾಂಡ ನೋಡುತ್ತಿರುವುದಷ್ಟೇ ಸಾಕಾಗಿತ್ತು. ಆ ವಯಸ್ಸಿನಲ್ಲಿ, ಚುರುಕಾಗಿ ಓಡಾಡುವುದು ಅಸಾಧ್ಯವಾಗಿದ್ದರೂ ಉರ್ಸುಲಾ ಮನೆಯಲ್ಲಿ ಮತ್ತೆ ಜೀವ ತುಂಬಿದಳು. ಮಗ ಬದುಕಿ ಉಳಿಯುತ್ತಾನೆಂಬುದು ಗೊತ್ತಾದಾಗ, "ನಾನೇನು ಎನ್ನುವುದನ್ನು ಈಗ ಅವರು ತಿಳಿಯುತ್ತಾರೆ"

"ಪ್ರಪಂಚದಲ್ಲಿ ಈ ಹುಚ್ಚರ ಮನೆಗಿಂತ ವಿಶಾಲವಾಗಿ ಚೆನ್ನಾಗಿ ಇರುವಂತಹ ಮನೆಯನ್ನು ಎಲ್ಲಿಯೂ ಕಾಣಲಾರರು" ಎಂದು ಹೇಳಿದಳು. ಮನೆಯನ್ನು ಚೆನ್ನಾಗಿ ತೊಳೆಸಿ, ಬಣ್ಣ ಬಳಿಸಿದಳು. ಪೀಠೋಪಕರಣಗಳನ್ನು ಬದಲಾಯಿಸಿದಳು, ತೋಟವನ್ನು ಮೊದಲಿನಂತೆ ಮಾಡಿದಳು. ಹೊಸ ಹೊಸ ಹೂಗಿಡಗಳನ್ನು ಬೆಳೆಸಿದಳು. ಬಾಗಿಲು ಕಿಟಕಿಗಳನ್ನು ತೆರೆದು ಗಾಳಿ, ಬೆಳಕು ಬರುವಂತೆ ಮಾಡಿದಳು. ಶೋಕಾಚರಣೆಗಳು ಇನ್ನು ಮುಂದೆ ನಡೆಯದಂತೆ ಎಚ್ಚರವಹಿಸಿದಳು. ಸ್ವತಃ ತನ್ನ ಹಳೆಯ ಆಕರ್ಷಕವಲ್ಲದ ಗೌನುಗಳನ್ನು ಬಿಟ್ಟು ಯುವ ಮಂದಿ ಹಾಕುವಂಥವನ್ನು ತರಿಸಿಕೊಂಡಳು. ಪಿಯಾನೋಲಿ ಸಂಗೀತ ಮನೆಯನ್ನು ಸಂತಸದಿಂದ ತುಂಬಿತು. ಅದನ್ನು ಕೇಳಿದಾಗ ಅಮರಾಂತಳಿಗೆ ಪೀತ್ರೋ ಕ್ರೆಸ್ಪಿ, ಸಂಜೆಯಲ್ಲಿನ ಉದ್ಯಾನಗಳು, ಲ್ಯಾವೆಂಡರ್ ಪರಿಮಳ ಎಲ್ಲ ನೆನಪಾದವು. ಅವಳ ಆಳವಾದ ಬಾಡಿದ ಹೃದಯದಲ್ಲಿ, ಮನೆಮಾಡಿದ್ದ ದ್ವೇಷ, ಕಾಲದೊಂದಿಗೆ ಪರಿಶುದ್ಧಗೊಂಡಿತ್ತು. ಒಂದು ಮಧ್ಯಾಹ್ನ ಹಜಾರವನ್ನು ಶುಭ್ರವಾಗಿಡಲು ಪ್ರಯತ್ನಿಸುತ್ತಿದ್ದಾಗ, ಮನೆಯ ಕಾವಲು ಕಾಯುತ್ತಿದ್ದವನೊಬ್ಬನನ್ನು ಸಹಾಯಮಾಡಲು ಕೇಳಿಕೊಂಡಳು. ಯುವ ಸೇನಾಧಿಕಾರಿ ಅದಕ್ಕೆ ಅನುಮತಿ ಕೊಟ್ಟ. ನಿಧಾನವಾಗಿ ಉರ್ಸುಲಾ ಒಂದೊಂದೇ ಕೆಲಸವನ್ನು ಅವನಿಗೆ ಹಚ್ಚತೊಡಗಿದಳು. ಅವರನ್ನು ಊಟಮಾಡಲು ಕರೆದಳು, ಬಟ್ಟೆಗಳನ್ನು, ಷೂಗಳನ್ನು ಕೊಟ್ಟಳು; ಓದು ಬರಹವನ್ನು ಕಲಿಸಿದಳು. ಸರ್ಕಾರ ಕಾವಲು ಸೈನಿಕರನ್ನು ಹಿಂತೆಗೆದುಕೊಂಡಾಗ ಒಬ್ಬ ಮಾತ್ರ ಅವರೊಂದಿಗೆ ಉಳಿದುಕೊಂಡ. ಅದೇ ಮನೆಯಲ್ಲಿ ಅವರ ಸೇವೆಯಲ್ಲಿ ಅವನು ಹಲವು ವರ್ಷಗಳನ್ನೇ ಕಳೆದ. ಹೊಸ ವರ್ಷದ ದಿನ ರೆಮೆಡಿಯೋಸ್ ದ ಬ್ಯೂಟಿಯಿಂದ ತಿರಸ್ಕೃತನಾಗಿ ಆ ಯುವ ಸೇನಾಧಿಕಾರಿ ಅವಳ ಕಿಟಕಿಯ ಪಕ್ಕದಲ್ಲಿ ಸತ್ತುಬಿದ್ದಿದ್ದ.

# 10

ವರ್ಷಗಳ ನಂತರ ಅರೆಲಿಯಾನೊ ಸೆಗುಂಡೊ, ಸಾವಿನ ಹಾಸಿಗೆಯಲ್ಲಿ ಮಲಗಿದ್ದಾಗ ಒಂದು ಮಳೆಗಾಲದ ಮಧ್ಯಾಹ್ನ, ಜೂನ್ ತಿಂಗಳಲ್ಲಿ ತನ್ನ ಮೊದಲ ಮಗನನ್ನು ಕಾಣಲೆಂದು ಅವನ ಕೋಣೆಗೆ ಹೋಗಿದ್ದುದನ್ನು ನೆನಪಿಸಿಕೊಂಡ. ಮಗು ನಿತ್ರಾಣವಾಗಿಯೂ ಅಳುಮೋರೆಯಿಂದಿದ್ದರೂ, ಬ್ಯುಂಡಿಯಾನ ಯಾವುದೇ ಕುರುಹು ಇಲ್ಲದಿದ್ದರೂ ಅವನಿಗೆ ಹೆಸರಿಡುವ ವಿಚಾರದಲ್ಲಿ ಎರಡನೆ ಸಲ ಯೋಚಿಸಬೇಕಾಗಲಿಲ್ಲ.

"ಅವನನ್ನು ಜೋಸ್ ಆರ್ಕಾಡಿಯೊ ಎಂದು ಕರೆಯೋಣ" – ಎಂದ.

ಹೋದ ವರ್ಷ ಅವನು ಮದುವೆಯಾಗಿದ್ದ ಚೆಲುವೆ ಫರ್ನಾಂಡಾ ದೆಲ್ ಕಾರ್ಪಿಯಾ ಕೂಡಾ ಇದಕ್ಕೆ ಸಮ್ಮತಿ ಇತ್ತಳು. ಉರ್ಸುಲಾಗೆ ಇದಕ್ಕೆ ವ್ಯತಿರಿಕ್ತವಾಗಿ, ಏನೋ ಒಂದು ಬಗೆಯ ಅನುಮಾನವಿದ್ದುದನ್ನು ಮರೆಮಾಚಲು ಸಾಧ್ಯವಾಗಲಿಲ್ಲ. ಕುಟುಂಬದ ದೀರ್ಘ ಇತಿಹಾಸದಲ್ಲಿ ಪದೇಪದೇ ಕಾಣಿಸಿಕೊಳ್ಳುತ್ತಿದ್ದ ಅದೇ ಅದೇ ಹೆಸರುಗಳಿಂದ ಕೆಲವು ತೀರ್ಮಾನಗಳಿಗೆ ತಲುಪಿದ್ದಳು. ಅವೆಲ್ಲವೂ ಅವಳಿಗೆ ಸತ್ಯವೆನಿಸಿತ್ತು. ಅರೆಲಿಯಾನೊ ಹೆಸರುಗಳಿದ್ದವರು ಒಂದು ಬಗೆಯಲ್ಲಿ ಅಂತರ್ಮುಖಿಗಳಾಗಿದ್ದರೆ, ಜೋಸ್ ಆರ್ಕಾಡಿಯೋಗಳು ಸಾಹಸ ಪ್ರವೃತ್ತಿಯುಳ್ಳವರೂ, ತತ್‌ಕ್ಷಣ

ಪ್ರತಿಕ್ರಿಯಾ ಪ್ರವೃತ್ತಿಯುಳ್ಳವರೂ ಆಗಿರುತ್ತಿದ್ದರು. ಆದರೆ ಅವರೆಲ್ಲ ದುರಂತದ ಲಕ್ಷಣಗಳನ್ನು ಹೊಂದಿರುತ್ತಿದ್ದರು. ಆದರೆ ಜೋಸ್ ಆರ್ಕಾಡಿಯೊ ಸೆಗುಂಡೊ ಅರೆಲಿಯಾನೊ ಸೆಗುಂಡೊಗಳು ಮಾತ್ರ ಯಾವ ಗುಂಪಿಗೂ ಸೇರಿಸಲಾಗದವರಾಗಿದ್ದರು. ಅವರಿಬ್ಬರಲ್ಲಿ ಎಷ್ಟು ಹೋಲಿಕೆಯಿತ್ತೆಂದರೆ, ಅವರನ್ನು ಸಾಂತಾ ಸೋಫಿಯಾ ದೆ ಲಾ ಪೀದಾದಳಿಗೂ ಗುರುತಿಸುವುದು ಅಸಾಧ್ಯವಾಗಿತ್ತು. ಅವರಿಗೆ ಹೆಸರಿಡುವ ದಿನ ಅಮರಾಂತ ಇಬ್ಬರ ಕೈಗೂ ಅವರವರ ಹೆಸರಿನ ಮೊದಲಕ್ಷರಗಳಿದ್ದ ಬ್ರೇಸ್‌ಲೆಟ್‌ಗಳನ್ನು ಹಾಕಿದ್ದಳು. ಅಲ್ಲದೆ ಇಬ್ಬರಿಗೂ ಬೇರೆ ಬೇರೆ ಬಣ್ಣದ ಬಟ್ಟೆಗಳನ್ನು ಅವರವರ ಹೆಸರಿನ ಮೊದಲಕ್ಷರಗಳನ್ನು ಹೊಲಿದು ಹಾಕಿದ್ದಳು. ಆದರೆ ಅವರು ಶಾಲೆಗೆ ಹೋಗುವುದನ್ನು ಮೊದಲು ಮಾಡಿದಾಗ, ಅವರಿಬ್ಬರು ಬಟ್ಟೆಗಳನ್ನು ಪರಸ್ಪರ ಬದಲಾಯಿಸಿಕೊಳ್ಳುವ ನಿರ್ಧಾರ ಮಾಡಿದರು. ಜೊತೆಗೆ ಬ್ರೇಸ್‌ಲೆಟ್‌ಗಳನ್ನೂ ಬದಲಾಯಿಸಿಕೊಂಡರು. ಅವರ ಟೀಚರ್, ಮೆಲ್‌ಕೋರ್ ಎಸ್ಕಲಾನ. ಜೋಸ್ ಆರ್ಕಾಡಿಯೊ ಸೆಗುಂಡೊನನ್ನು ಹಸಿರು ಬಣ್ಣದ ಅಂಗಿಯ ಮೂಲಕ ಗುರುತಿಸುತ್ತಿದ್ದ. ಅದನ್ನು ಅವನು ಮರೆತುಬಿಟ್ಟಿದ್ದ. ಅವನು ಅರೆಲಿಯಾನೋನ ಸೆಗುಂಡೊನ ಬ್ರೇಸ್‌ಲೆಟ್ ಹಾಕಿದ್ದನ್ನು ನೋಡಿ ಗೊಂದಲಕ್ಕೆ ಈಡಾದ. ಮತ್ತೊಬ್ಬ ಬಿಳಿಯ ಅಂಗಿ ಹಾಕಿದ್ದರೂ ಜೋಸ್ ಆರ್ಕಾಡಿಯೊ ಬ್ರೇಸ್‌ಲೆಟ್ ಹಾಕಿದ್ದರೂ ತನ್ನನ್ನು ಅರೆಲಿಯಾನೊ ಸೆಗುಂಡೊ ಎಂದು ತಿಳಿಸಿದ. ಅಂದಿನಿಂದ ಅವರಿಬ್ಬರಲ್ಲಿ ಯಾರು ಯಾರೆಂದು ಟೀಚರ್‌ಗೆ ಗುರುತಿಸುವುದೇ ಕಷ್ಟವಾಯಿತು. ಬೆಳೆದು ದೊಡ್ಡವರಾದ ಮೇಲೂ, ಬದುಕು ಅವರನ್ನು ಪ್ರತ್ಯೇಕವಾಗಿಸಿದರೂ ಒಮ್ಮೊಮ್ಮೆ ಉರ್ಸುಲಾಗೆ ಅವರಿಬ್ಬರಿಗೂ ಸ್ವತಃ ತಮ್ಮನ್ನು ಇಂತಹ ಗೊಂದಲದ ಪರಿಣಾಮವಾಗಿ ತಾವೇ ಗುರುತಿಸಿಕೊಳ್ಳುವುದು ಕಷ್ಟವಾಗಬಹುದೇನೊ ಎಂದು ಅಚ್ಚರಿಪಟ್ಟಳು. ಪ್ರಾಯಕ್ಕೆ ಬರುವವರೆಗೂ ಅವರಿಬ್ಬರೂ ಒಂದೇ ಯಂತ್ರದ ಪ್ರತಿರೂಪಗಳಾಗಿದ್ದರು. ಒಂದೇ ಸಮಯಕ್ಕೆ ಏಳುತ್ತಿದ್ದರು. ಒಂದೇ ಸಮಯದಲ್ಲಿ ಬಾತ್‌ರೂಮ್‌ಗೆ ಹೋಗಬೇಕೆಂದುಕೊಳ್ಳುತ್ತಿದ್ದು, ಒಂದೇ ರೀತಿಯಲ್ಲಿ ಒಂದೇ ಸಮಯದಲ್ಲಿ ಖಾಯಿಲೆ ಬೀಳುತ್ತಿದ್ದರು. ಎಲ್ಲಕ್ಕಿಂತ ಹೆಚ್ಚಾಗಿ ಒಂದೇ ಬಗೆಯ ಕನಸುಗಳನ್ನು ಕಾಣುತ್ತಿದ್ದರು. ಮನೆಯಲ್ಲಿ ಎಲ್ಲರೂ, ತಮ್ಮನ್ನು ಗೊಂದಲಕ್ಕೆ ಬೀಳಿಸಲು ಅವರಿಬ್ಬರೂ ಹುನ್ನಾರ ಮಾಡುತ್ತಿದ್ದಾರೆಂದು ಭಾವಿಸಿದ್ದರು. ನಿಜವಾಗಿಯೂ ಅವರಿಬ್ಬರ ನಡುವೆ ಏನು ನಡೆಯುತ್ತಿದೆ ಎನ್ನುವುದು ಯಾರಿಗೂ ಗೊತ್ತಾಗುತ್ತಿರಲಿಲ್ಲ. ಒಂದು ದಿನ ಸೋಫಿಯಾ ದ ಲಾ ಪೀದಾದ್ ಒಬ್ಬನಿಗೆ ಲೆಮೊನೇಡ್ ಕುಡಿಯಲು ಕೊಟ್ಟಳು. ಅವನು ಅದನ್ನು ಬಾಯಿಗಿಟ್ಟು ರುಚಿ ನೋಡುತ್ತಿದ್ದಂತೆ ಮತ್ತೊಬ್ಬ ಅದರಲ್ಲಿ ಸಕ್ಕರೆಯೇ ಇಲ್ಲವೆಂದ. ಸೋಫಿಯಾ ತಾನು, ಕೊಡುವಾಗ ಸಕ್ಕರೆ ಹಾಕುವುದನ್ನು ಮರೆತಿದ್ದ ವಿಷಯವನ್ನು ಉರ್ಸುಲಾಗೆ ತಿಳಿಸಿದಳು. ಉರ್ಸುಲಾ ಇದರಿಂದ ಆಶ್ಚರ್ಯ ಪಟ್ಟಳು. "ಅವರಿಬ್ಬರೂ, ಅದಕ್ಕೆ ಹುಟ್ಟಿದಾಗಿನಿಂದಲೂ ಹಾಗೆ!" ಎಂದಳು. ಕಾಲ ಕಳೆಯುತ್ತಿದ್ದಂತೆ ಎಲ್ಲ ವ್ಯವಸ್ಥಿತವಾಯಿತು. ಗೊಂದಲದಿಂದ ಹೊರಗೆ ಬಂದ ಅರೆಲಿಯಾನೊ ಸೆಗುಂಡೊ ಹೆಸರಿನವ ದೈತ್ಯಾಕಾರವಾಗಿ ಬೆಳೆದರೆ, ಜೋಸ್ ಆರ್ಕಾಡಿಯೊ ಸೆಗುಂಡೊ ಹೆಸರಿನವ ಕರ್ನಲ್‌ನಂತೆ ತೆಳ್ಳಗೆ, ಚಕ್ಕಳದ ಹಾಗಿದ್ದ. ಅವರಿಬ್ಬರಲ್ಲಿ ಈಗಿದ್ದ ಸಮಾನ ಅಂಶವೆಂದರೆ ಮನೆತನದ ಏಕಾಂತತೆ. ಬದಲಾಗುತ್ತಿದ್ದ ಅವರ ಎತ್ತರ ಗಾತ್ರ, ಹೆಸರು, ಸ್ವಭಾವಗಳು

ಬಹುಶಃ ಬಾಲ್ಯದಲ್ಲಿ ಕಾರ್ಡುಗಳ ಹಾಗೆ ಅದಲು ಬದಲಾಗುತ್ತಿದ್ದುವೇನೋ ಎಂಬ ಅನುಮಾನ ಉರ್ಸುಲಾಳದಾಗಿತ್ತು.

ಅವರಿಬ್ಬರ ನಡುವಿನ ನಿರ್ಣಾಯಕ ವ್ಯತ್ಯಾಸಗಳು ಯುದ್ಧದ ಮಧ್ಯದಲ್ಲಿ ಕಾಣಿಸಿಕೊಂಡವು. ಜೋಸ್ ಆರ್ಕಾಡಿಯೊ ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್‌ನನ್ನು ತನಗೆ ಮರಣದಂಡನೆಯ ಶಿಕ್ಷೆಯನ್ನು ನೋಡುವ ಅವಕಾಶಕ್ಕಾಗಿ ಕೇಳಿಕೊಂಡ. ಉರ್ಸುಲಾ ಬೇಡವೆಂದು ಹೇಳುತ್ತಿದ್ದರೂ ಅವನ ಆಸೆಯನ್ನು ಪೂರೈಸಲಾಯಿತು. ಅದೇ ಅರೆಲಿಯಾನೊ ಸೆಗುಂಡೊ ಮೃತ್ಯುದಂಡದ ಕಲ್ಪನೆಯಿಂದಲೇ ನಡುಗಿಹೋದ. ತಾನು ಮನೆಯಲ್ಲಿಯೇ ಉಳಿಯುವುದಾಗಿ ಹೇಳಿದ. ಹನ್ನೆರಡು ವರ್ಷದವನಾಗಿದ್ದಾಗ, ಉರ್ಸುಲಾಳನ್ನು, ಬೀಗ ಹಾಕಿದ ಕೋಣೆಯಲ್ಲಿ ಏನಿದೆ ಎಂದು ಕೇಳಿದ. "ಕಾಗದಗಳು" ಎಂದಳು. ಮುಂದುವರೆದು, "ಮೆಲ್‌ಕಿಯಾಡ್ಸ್‌ನ ಕೆಲವು ಪುಸ್ತಕಗಳು ಮತ್ತು ಏನೇನೋ ವಿಚಿತ್ರ ವಸ್ತುಗಳು" ಎಂದು ವಿವರಿಸಿ ಹೇಳಿದಳು. ಇದರಿಂದ ಅವನಿಗೆ ಸಮಾಧಾನ ಆಗುವುದಕ್ಕೆ ಬದಲಾಗಿ ಅವನ ಕುತೂಹಲವನ್ನು ಹೆಚ್ಚಿಸಿತು. ತಾನು ಯಾವ ವಸ್ತುವನ್ನೂ ಹಾಳು ಮಾಡುವುದಿಲ್ಲವೆಂದೂ ತನಗೆ ಅವುಗಳನ್ನು ನೋಡಬೇಕಿದೆಯೆಂದೂ ಹಠ ಮಾಡಿದ ಮೇಲೆ ಉರ್ಸುಲಾ ಅವನ ಕೈಗೆ ಬೀಗದ ಕೈ ಕೊಟ್ಟಳು. ಮೆಲ್‌ಕಿಯಾಡ್ಸ್‌ನ ದೇಹವನ್ನು ಹೊರತಂದ ನಂತರ ಯಾರೂ ಅಲ್ಲಿಗೆ ಹೋಗಿರಲಿಲ್ಲ. ಅದಕ್ಕೆ ಪ್ಯಾಡ್‌ಲಾಕ್ ಹಾಕಿದ್ದರು. ಅದಕ್ಕೆ ತುಕ್ಕುಹಿಡಿದಿತ್ತು. ಆದರೆ ಅರೆಲಿಯಾನೊ ಸೆಗುಂಡೊ ಬಾಗಿಲು ತೆಗೆದಾಗ ಆ ಕೋಣೆಯನ್ನು ಬೆಳಗುತ್ತಿದ್ದ ಮಾಮೂಲಿಯಾದ ಬೆಳಕು ಒಳನುಗ್ಗಿತ್ತು. ಅಲ್ಲಿ ಯಾವುದೇ ರೀತಿಯ ಧೂಳಾಗಲೀ, ಜೇಡಬಲೆಗಳಾಗಲೀ ಕಾಣಲಿಲ್ಲ. ಪ್ರತಿಯೊಂದೂ ಅಚ್ಚುಕಟ್ಟಾಗಿ ಜೋಡಿಸಿ ಇಡಲಾಗಿತ್ತು. ಗುಡಿಸಿ, ಶುಭ್ರವಾಗಿಸಿ ಎಂದಿಗಿಂತಲೂ ನೀಟಾಗಿ ಕಾಣಿಸುತ್ತಿತ್ತು. ಇಂಕ್ ಬಾಟಲಿಯಲ್ಲಿ ಇಂಕ್ ಒಣಗಿರಲಿಲ್ಲ. ಲೋಹಗಳ ಮೆರುಗು ಅಳಿಸಿರಲಿಲ್ಲ. ವಾಟರ್ ಪೈಪ್ ಕೆಳಗಿನ ಕೆಂಡಗಳು ತಣ್ಣಗಾಗಿರಲಿಲ್ಲ. ಷೆಲ್ಫ್‌ನಲ್ಲಿದ್ದ ಪುಸ್ತಕಗಳು ರಟ್ಟಿನ ಚರ್ಮದ ಕವಚದೊಂದಿಗೆ ಕಾಣಿಸಿಕೊಂಡವು. ಹಸ್ತಪ್ರತಿಗಳು ಒಂದಿಷ್ಟೂ ಹಾಳಾಗದೆ, ಎಷ್ಟೋ ವರ್ಷಗಳಿಂದ ಮುಚ್ಚಿದ ಬಾಗಿಲುಗಳ ಒಳಗಿದ್ದರು ಅಚ್ಚುಕಟ್ಟಾಗಿ ಉಳಿದಿದ್ದವು. ಮನೆಯಲ್ಲಿ ಬೇರೆ ಕಡೆ ಇದ್ದುದಕ್ಕಿಂತಲೂ ಗಾಳಿಯಲ್ಲಿ ತಾಜಾತನವಿತ್ತು. ಎಲ್ಲವೂ ಇತ್ತೀಚಿನದಾಗಿತ್ತು. ವಾರಗಳ ನಂತರ ಉರ್ಸುಲಾ ಅದನ್ನು ಗುಡಿಸಿ ಸಾರಿಸಿ ಶುಭ್ರವಾಗಿಸಲೆಂದು ನೀರು, ಬ್ರಶ್ಶು, ತೆಗೆದುಕೊಂಡು ಹೋದಾಗ, ಅವಳಿಗೆ ಮಾಡುವುದಕ್ಕೆ ಕೆಲಸವೇ ಇರಲಿಲ್ಲ. ಅರೆಲಿಯಾನೊ ಸೆಗುಂಡೋ ಯಾವುದೋ ಒಂದು ಪುಸ್ತಕ ಓದುವುದರಲ್ಲಿ ಮಗ್ನನಾಗಿದ್ದ. ಅದಕ್ಕೆ ಕವಚವಾಗಲೀ ಶೀರ್ಷಿಕೆಯಾಗಲಿ ಇರಲಿಲ್ಲವಾದರೂ ಹುಡುಗ ಕಥೆ ಓದುತ್ತ ಖುಷಿ ಪಡುತ್ತಿದ್ದ. ಒಂದು ಹೆಣ್ಣು ಮೇಜಿನ ಮುಂದೆ ಕುಳಿತು ಸೂಜಿಯಿಂದ ಅಕ್ಕಿಯ ಮೇಲಿನ ಹೊಟ್ಟನ್ನು ಮಾತ್ರವೇ ತಿನ್ನುತ್ತಿದ್ದ ಕಥೆ. ಒಬ್ಬ ಬೆಸ್ತ ತನ್ನ ಬಲೆಗೆ ಬೇಕಾಗಿದ್ದ 'ಭಾರ'ವೊಂದನ್ನು ಕೇಳಿ ಪಡೆದಿದ್ದ. ಬೆಲೆಗೆ ಬದಲಾಗಿ ಮೀನೊಂದನ್ನು ಕೊಟ್ಟಿದ್ದ. ಆ ಮೀನಿನಲ್ಲಿ ವಜ್ರವಿದ್ದ ಕಥೆ, ಮತ್ತೊಂದು ಮಂತ್ರದ ಲ್ಯಾಂಪ್, ಬೇಡಿದ್ದನ್ನು ನೀಡುತ್ತಿದ್ದ ಗುರುತ್ತಿದ್ದ ಮಂತ್ರದ ಕಾರ್ಪೆಟ್ ಕಥೆ. ಇವುಗಳನ್ನು ಓದು ಅಚ್ಚರಿಗೊಂಡಿದ್ದ ಹುಡುಗ, ಉರ್ಸುಲಾಳನ್ನು ಇವೆಲ್ಲವೂ ನಿಜವೇ ಎಂದು ಕೇಳಿದ.

ಉರ್ಸುಲಾ ನಿಜವೆಂದು ತಿಳಿಸಿ, ಬಹಳ ಹಿಂದೆ ಜಿಪ್ಸಿಗಳು ಮಕೊಂಡೊಗೆ ತಂದಿದ್ದ ಮ್ಯಾಜಿಕ್ ಲ್ಯಾಂಪ್ ಮತ್ತು ಹಾರುವ ಕಾರ್ಪೆಟ್ ಬಗ್ಗೆ ವಿವರಿಸಿದಳು.

"ಏನಾಗುತ್ತಿದೆ, ಪ್ರಪಂಚದ ಕತೆ ಮುಗಿಯುತ್ತಿದೆಯೆ ಹೇಗೆ? ಅವುಗಳು ಈಗ, ಇನ್ನು ಮುಂದೆ ಬರುವುದು ಸಾಧ್ಯವಿಲ್ಲ" – ಎಂದು ನಿಟ್ಟುಸಿರಿನೊಂದಿಗೆ ಹೇಳಿದಳು.

ಎಷ್ಟೋ ಕಥೆಗಳಿಗೆ, ಪುಟಗಳು ಹರಿದು ಹೋಗಿದ್ದುದರಿಂದ ಕೊನೆಯೇ ಇರಲಿಲ್ಲ. ಅರೆಲಿಯಾನೊ ಸೆಗುಂಡೊ ಹಸ್ತಪ್ರತಿಗಳನ್ನು ಓದಲು ಪ್ರಯತ್ನಿಸುತ್ತಿದ್ದ. ಆದರೆ ಅವು ಕಷ್ಟಸಾಧ್ಯವೆನಿಸಿತ್ತು. ಅಕ್ಷರಗಳು ಒಣಗಲು ಹಾಕಿದ ಬಟ್ಟೆಗಳಂತೆಯೂ ಸಂಗೀತದ ಸ್ವರ ಲಿಪಿಯಂತೆಯೂ ಕಾಣುತ್ತಿದ್ದುವಲ್ಲದೆ ಅಕ್ಷರ ಬರವಣಿಗೆಯಾಗಿರಲಿಲ್ಲ. ಒಂದು ಬೇಸಿಗೆಯ ಮಧ್ಯಾಹ್ನ, ಹಸ್ತಪ್ರತಿಯೊಂದನ್ನು ಗಂಭೀರವಾಗಿ ಓದಲು ಪ್ರಯತ್ನಿಸುತ್ತಿದ್ದಾಗ ಅವನಿಗೆ ಆ ಕೋಣೆಯಲ್ಲಿ ತಾನೊಬ್ಬನೇ ಇಲ್ಲವೆಂದೆನಿಸಿತು. ಕಿಟಕಿಯ ಬೆಳಕಿಗೆ ಮುಖಮಾಡಿ, ಮಂಡಿಗಳ ಮೇಲೆ ಕೈಯೂರಿ ಮೆಲ್‌ಕಿಯಾಡ್ಸ್ ಕುಳಿತಿದ್ದ. ಅವನು ನಲವತ್ತರ ವಯಸ್ಸಿನ ಆಸುಪಾಸಿದ್ದ. ಅದೇ ಹಳೆ ಮಾದರಿಯ ವೆಸ್ಟ್, ರೆಕ್ಕೆಗಳಿದ್ದ ಹ್ಯಾಟನ್ನು ಧರಿಸಿದ್ದ. ಬಿಳುಚಿಕೊಂಡಿದ್ದ ಅವನ ಮುಖದ ಎರಡೂ ಬದಿಗಳಲ್ಲಿ ಕೂದಲಿಂದ ಜೋಸ್ ಆರ್ಕಾಡಿಯೊ ಅರೆಲಿಯಾನೊ ಜೋಸ್ ಹುಡುಗರಾಗಿದ್ದಾಗ ನೋಡಿದಂತೆ, ಗ್ರೀಸ್ ಇಳಿಯುತ್ತಿತ್ತು. ಆ ಹುಡುಗ ತನಗೆ ವಂಶಪಾರಂಪರ್ಯವಾಗಿ ಬಂದ ನೆನಪಿನ ಶಕ್ತಿಯಿಂದ ಥಟ್ಟನೆ ಅವನನ್ನು ಗುರುತಿಸಿದ.

"ಹಲೋ" ಎಂದ ಸೆಗುಂಡೊ

"ಹಲೋ" ಎಂದ ಮೆಲ್‌ಕಿಯಾಡ್ಸ್

ಅಂದಿನಿಂದ ಎಷ್ಟೋ ವರ್ಷಗಳವರೆಗೆ ಪ್ರತಿದಿನ ಮಧ್ಯಾಹ್ನಗಳಲ್ಲಿ ಒಬ್ಬರನ್ನೊಬ್ಬರು ಭೇಟಿಯಾಗುತ್ತಲೇ ಇದ್ದರು. ಮೆಲ್‌ಕಿಯಾಡ್ಸ್ ಪ್ರಪಂಚದ ಬಗ್ಗೆ ಮಾತಾಡುತ್ತಿದ್ದ. ತನ್ನ ಪುರಾತನ ಜ್ಞಾನವನ್ನು ಅವನಲ್ಲಿ ತುಂಬುತ್ತಿದ್ದ. ಆದರೆ ಹಸ್ತಪ್ರತಿಗಳನ್ನು ಭಾಷಾಂತರಿಸಲು ಮಾತ್ರ ಒಪ್ಪಲಿಲ್ಲ. ತಾನು ನೂರು ವರ್ಷದ ವಯಸ್ಸಿನವನಾಗುವವರೆಗೆ ಯಾರೊಬ್ಬರೂ ಅದರ ಅರ್ಥವನ್ನು ತಿಳಿಯಬಾರದು ಎಂದು ವಿವರಿಸಿದ. ಅರೆಲಿಯಾನೊ ಈ ಭೇಟಿಗಳ ವಿಚಾರವನ್ನು ಎಂದೆಂದಿಗೂ ಗುಟ್ಟಾಗಿಯೇ ಇರಿಸಿದ್ದ. ಒಂದು ಸಂದರ್ಭದಲ್ಲಿ ಮೆಲ್‌ಕಿಯಾಡ್ಸ್ ಇದ್ದಾಗಲೇ ಉರ್ಸುಲಾ ಪ್ರವೇಶಿಸಿದ್ದರಿಂದ ಅವನ ಖಾಸಗಿ ಜಗತ್ತು ಬಯಲಾಯಿತೆಂದು ಹೆದರಿದ. ಆದರೆ ಉರ್ಸುಲಾ ಮೆಲ್‌ಕಿಯಾಡ್ಸ್‌ನನ್ನು ನೋಡಲಿಲ್ಲ.

"ಯಾರೊಂದಿಗೆ ಮಾತಾಡುತ್ತಿದ್ದೆ" ಉರ್ಸುಲಾ ಕೇಳಿದಳೂ.

"ಯಾರೂ ಇಲ್ಲ" ಅರೆಲಿಯಾನೊ ಸೆಗುಂಡೊ ಹೇಳಿದ.

"ನಿನ್ನ ಮುತ್ತಾತ ಕೂಡಾ ಹೀಗೆಯೇ! ತನ್ನೊಳಗೇ ತಾನು ಮಾತಾಡಿಕೊಳ್ಳುತ್ತಿದ್ದ" ಎಂದಳು ಉರ್ಸುಲಾ.

ಜೋಸ್ ಆರ್ಕಾಡಿಯೊ ಈ ಮಧ್ಯೆ, ಗುಂಡಿಡುವುದನ್ನು ನೋಡಬೇಕೆಂಬ ತನ್ನ ಆಸೆಯನ್ನು ಪೂರೈಸಿಕೊಂಡಿದ್ದ. ಒಂದಾದ ಮೇಲೊಂದು ಗುಂಡುಹಾರಿ ಗುಡ್ಡಗಳಿಗೆ ಡಿಕ್ಕಿ ಹೊಡೆದಾಗ ಉಂಟಾದ ಸದ್ದಿನ ಪ್ರತಿಧ್ವನಿ, ಗುಂಡಿಗೆ ಗುರಿಯಾದ ವ್ಯಕ್ತಿಯ ನಗೆ, ಕಣ್ಣುಗಳಲ್ಲಿನ ಗಲಿಬಿಲಿಗೊಂಡ ನೋಟ, ನೇರಾಗಿ ನಿಂತಿದ್ದ ಅವನ ಅಂಗಿ ರಕ್ತದಿಂದ ತೊಯ್ದದ್ದು – ಎಲ್ಲವನ್ನೂ ಜೀವನ ಪರ್ಯಂತ ನೆನಪಿನಲ್ಲಿ ಇರಿಸಿಕೊಂಡಿದ್ದ. ಅವನ ಕಟ್ಟುಗಳನ್ನು ಸುಣ್ಣ ತುಂಬಿದ್ದ ಪೆಟ್ಟಿಗೆಯಲ್ಲಿ ಇರಿಸುವಾಗಲೂ ಅವನು ಮುಗುಳ್ನಗುತ್ತಿದ್ದ. "ಅವನು ಬದುಕಿದ್ದಾನೆ ಬದುಕಿರುವವನನ್ನೇ ಸಮಾಧಿ ಮಾಡಲಿದ್ದಾರೆ" ಎಂದು ಯೋಚಿಸಿದ. ಈ ದೃಶ್ಯ ಅವನ ಮೇಲೆ ಎಷ್ಟು ಪ್ರಭಾವ ಬೀರಿತೆಂದರೆ ಅಂದಿನಿಂದ ಮಿಲಿಟರಿ ಯುದ್ಧವನ್ನೇ ದ್ವೇಷಿಸತೊಡಗಿದ. ಮರಣದಂಡನೆಯ ಅನುಷ್ಠಾನಕ್ಕಿಂತ ಹೆಚ್ಚಾಗಿ ಜೀವಂತ ಸಮಾಧಿ ಮಾಡುವ ಕ್ರಮ ಅವನಿಗೆ ಭಯಾನಕವೆನಿಸಿತು. ಚರ್ಚ್ ಗೋಪುರದ ಗಂಟೆ ಬಾರಿಸುವ ಫಾದರ್ ಆಂಟೊನಿಯೊ ಇಸಾಬೆಲ್‌ರಿಗೆ ಸಹಾಯ ಮಾಡುವ, ಚರ್ಚಿನ ಅಂಗಳದಲ್ಲಿ ಹುಂಜ ಕಾಳಗವನ್ನು ನೋಡಿಕೊಳ್ಳುವ ಕೆಲಸಗಳನ್ನು ಮಾಡುತ್ತಿದ್ದುದು ಯಾರಿಗೂ ತಿಳಿದಿರಲಿಲ್ಲ. ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್‌ಗೆ ಇದೆಲ್ಲವೂ ತಿಳಿದ ಮೇಲೆ, ಲಿಬರಲ್‌ಗಳು ದ್ವೇಷಿಸುವ ಇಂಥ ಕೆಲಸಗಳನ್ನು ಮಾಡುವುದನ್ನು ಕಟುವಾಗಿ ಖಂಡಿಸಿದ. ಅದಕ್ಕೆ ಅವನು "ನಾನು ನಿಜ ಹೇಳಬೇಕೆಂದರೆ ಕನ್‌ಸರ್ವೆಟೀವ್ ಆಗಿ ಬದಲಾಗಿದ್ದೇನೆ" ಎಂದು ಹೇಳಿದ. ಬಹುಶಃ ಇದು ವಿಧಿಯ ನಿರ್ಧಾರವೇ ಆಗಿರಬೇಕೆಂದು ನಂಬಿದ. ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್ ಉರ್ಸುಲಾಗೆ ಇದನ್ನೆಲ್ಲ ಹೇಳಿದ.

"ಅದು ಒಳ್ಳೆಯದೇ ಆಯಿತು, ಅದರಿಂದ ಅವನು ಪಾದ್ರಿಯಾಗುವುದರಿಂದ, ಮತ್ತೆ ದೇವರು ಈ ಮನೆಯೊಳಗೆ ಖಂಡಿತ ಬರಲು ಸಾಧ್ಯವಾಗುತ್ತದೆ" ಎಂದು ಹೇಳಿ ತನ್ನ ಒಪ್ಪಿಗೆಯನ್ನು ಸೂಚಿಸುವಂತೆ ಹೇಳಿದಳು ಉರ್ಸುಲಾ.

ಫಾದರ್ ಆ್ಯಂಟೋನಿಯೊ ಇಸಾಬೆಲ್ ಅವನನ್ನು ಮೊದಲ ಸಂಸರ್ಗಕ್ಕೆ ತಯಾರು ಮಾಡುತ್ತಿದ್ದಾನೆಂಬ ವಿಷಯ ಕೂಡಲೇ ತಿಳಿದುಬಂತು. ಕೋಳಿಗಳ ಕತ್ತನ್ನು ಷೇವ್ ಮಾಡುತ್ತಿದ್ದಾಗ ಅವನಿಗೆ ಪ್ರಶ್ನೋತ್ತರ ಪಾಠವನ್ನು ಹೇಳಿಕೊಡುತ್ತಿದ್ದ. ಕಾವು ಕೊಡುತ್ತಿದ್ದ ಕೋಳಿಗಳನ್ನು ಗೂಡಿನಲ್ಲಿ ಇಡುತ್ತಿದ್ದಾಗ, ಸರಳ ಉದಾಹರಣೆಗಳೊಂದಿಗೆ, ದೇವರಿಗೆ ಸೃಷ್ಟಿಯ ಎರಡನೆ ದಿನ, ಕೋಳಿಗಳು ಮೊಟ್ಟೆಗಳಿಂದ ಸೃಷ್ಟಿಯಾಯಿತೆಂಬ ಅಂಶ ಹೊಳೆದದ್ದನ್ನು ಅವನಿಗೆ ವಿವರಿಸಿದ. ಆ ಸಮಯದಿಂದ ಅವನು ಅರಳು ಮರಳಿನಂತೆ ಕಾಣಿಸಿಕೊಂಡ. ಕೆಲ ವರ್ಷಗಳ ನಂತರ, ದೇವರ ವಿರುದ್ಧ ದೆವ್ವ ತಾನು ಗೆಲ್ಲುವಂತೆ ಮಾಡಿದೆ ಎಂದೂ, ಸ್ವರ್ಗದ ಸಿಂಹಾಸನದ ಮೇಲೆ ತನ್ನನ್ನು ಕೂರಿಸಿದೆಯೆಂದೂ, ತನ್ನ ಗುರುತನ್ನು ಬಿಟ್ಟು ಕೊಡದೆ ಜನರನ್ನು ಬಲೆಗೆ ಬೀಳಿಸಿಕೊಳ್ಳುವುದಕ್ಕಾಗಿ, ಹೇಳುತ್ತಿದ್ದ ತನ್ನ ಗುರುವಿನ ಒತ್ತಾಯದಿಂದ, ಕೆಲವೇ ತಿಂಗಳಲ್ಲಿ ಜೋಸ್ ಆರ್ಕಾಡಿಯೊ ಹುಂಜಗಳ ಕಾಳಗದಲ್ಲಿ ಎಷ್ಟು ನುರಿತವನಾದನೋ ಅದಕ್ಕಿಂತ ಹೆಚ್ಚಾಗಿ ದೆವ್ವಗಳಿಗೆ ಗೊಂದಲ ಉಂಟುಮಾಡುವ ಸೂತ್ರಗಳಲ್ಲಿಯೂ ಬಹು ನಿಷ್ಣಾತನಾದ. ಅಮರಾಂತ ಅವನಿಗೆ, ಕಾಲರ್ ಇರುವ ಲಿನನ್ ಸೂಟನ್ನು, ಒಂದು ಜೊತೆ ಬಿಳಿ ಷೂಗಳನ್ನು ತಂದುಕೊಟ್ಟಳು. ಮಿರಮಿರ

ಮಿಂಚುವ ಕ್ಯಾಂಡಲ್‌ನ ರಿಬ್ಬನ್ ಮೇಲೆ ಅವನ ಹೆಸರನ್ನು ಮೂಡಿಸಿದಳು. ಕಮ್ಯೂನಿಯನ್‌ಗೆ ಮೊದಲಿನ ಎರಡು ರಾತ್ರಿಗಳು ಆ್ಯಂಟೋನಿಯೊ ಇಸಾಬೆಲ್ ಅವನನ್ನೂ ಕೂಡಿಕೊಂಡು ಕೋಣೆಯೊಂದರಲ್ಲಿ, ಪಾಪಗಳ ನಿಘಂಟಿನ ಸಹಾಯದಿಂದ, ಅವನಿಂದ ತಪ್ಪೊಪ್ಪಿಗೆಗಳನ್ನು ಕೇಳಿಸಿಕೊಂಡ. ತಪ್ಪುಗಳ ಪಟ್ಟಿ ಎಷ್ಟು ಉದ್ದವಾಗಿತ್ತೆಂದರೆ, ಆರು ಗಂಟೆಗೇ ನಿದ್ದೆಮಾಡುವ ಅಭ್ಯಾಸವಿದ್ದ ಪಾದ್ರಿ, ಕೇಳಿಸಿಕೊಳ್ಳುತ್ತಲೇ ನಿದ್ದೆ ಹೋಗಿಬಿಟ್ಟ. ಪ್ರಶ್ನಾವಳಿ ಜೋಸ್ ಆರ್ಕಾಡಿಯೊ ಸೆಗೆಂಡೋಗೆ ಒಂದು ರೀತಿ ಜ್ಞಾನೋದಯವನ್ನು ಉಂಟುಮಾಡಲು ಕಾರಣವಾಯಿತು. ಪಾದ್ರಿ ಅವನನ್ನು ಹೆಂಗಸರ ಸಂಗ ಪಾಪ ಮಾಡಿರುವೆಯೇನು ಎಂದು ಕೇಳಿದಾಗ ಅವನಿಗೆ ಆಶ್ಚರ್ಯವೇನೂ ಆಗಲಿಲ್ಲವಾದರೂ ಪ್ರಾಣಿಗಳೊಂದಿಗೆ ಪಾಪ ಮಾಡಿರುವೆಯೇನು ಎಂದು ಪ್ರಶ್ನಿಸಿದಾಗ ಮಾತ್ರ ಅವನಿಗೆ ಬೇಸರವಾಯಿತು. ಕುತೂಹಲದ ಹಿಂಸೆಯೊಂದಿಗೆ, ಮೇ ತಿಂಗಳ ಮೊದಲ ಶುಕ್ರವಾರ ಅವನಿಗೆ ಕಮ್ಯೂನಿಯನ್ ನೀಡಲಾಯಿತು. ನಂತರ ಚರ್ಚ್‌ನ ಕಾಗದ ಪತ್ರಗಳನ್ನು ನೋಡುತ್ತಾ, ಬೆಲ್ ಫ್ರೈನಲ್ಲಿ ವಾಸಮಾಡುತ್ತ, ಕೆಲವರು ಹೇಳುತ್ತಿದ್ದಂತೆ, ಬಾವಲಿಗಳನ್ನು ಭುಂಜಿಸುತ್ತಾ ಇದ್ದ ಪೆಟ್ರೋನಿಯೋನನ್ನು ಇದರ ಬಗ್ಗೆ ಕೇಳಿದ. "ಕೆಲ ಭ್ರಷ್ಟ ಕ್ರಿಶ್ಚಿಯನ್ನರು ಇದ್ದಾರೆ. ಅವರು ಕತ್ತೆಗಳ ಜೊತೆ ಈ ರೀತಿಯ ಸಂಪರ್ಕ ಹೊಂದಿರುತ್ತಾರೆ" ಎಂದು ಹೇಳಿದ. ಜೋಸ್ ಆರ್ಕಾಡಿಯೊ ಸೆಗುಂಡೋನ ಕುತೂಹಲ ಎಷ್ಟಿತ್ತೆಂದರೆ ಅವನು ಕೇಳುವ ಪ್ರಶ್ನೆಗಳಿಂದ ಪೆಟ್ರೋನಿಯೊ ತನ್ನ ತಾಳ್ಮೆಯನ್ನೇ ಕಳೆದುಕೊಂಡ.

"ಮಂಗಳವಾರದ ರಾತ್ರಿಗಳಲ್ಲಿ ನಾನು ಹೋಗುತ್ತೇನೆ. ಆಸಕ್ತಿಯಿದ್ದರೆ ನನ್ನೊಂದಿಗೆ ಬಾ. ಆದರೆ ಯಾರಿಗೂ ಹೇಳಬೇಡ. ಮುಂದಿನ ಮಂಗಳವಾರ ನಿನ್ನನ್ನು ಕರೆದುಕೊಂಡು ಹೋಗುತ್ತೇನೆ" ಎಂದ.

ಹೇಳಿದಂತೆ ಮುಂದಿನ ಮಂಗಳವಾರ ಪೆಟ್ರೋನಿಯಾ ಗೋಪುರವಿಳುದು ಬಂದ. ಜೊತೆಗೊಂದು ಮರದ ಸ್ಟೂಲನ್ನು ಹೊತ್ತು ತಂದ. ಅಲ್ಲಿವರೆಗೆ ಅದರ ಪ್ರಯೋಜನ ಏನೆಂದು ಯಾರಿಗೂ ಗೊತ್ತಿರಲಿಲ್ಲ. ಜೋಸ್ ಆರ್ಕಾಡಿಯೊ ಸೆಗುಂಡೊನನ್ನು ಹತ್ತಿರದ ಹುಲ್ಲುಗಾವಲಿಗೆ ಕರೆದೊಯ್ದು. ಅಲ್ಲಿನ ರಾತ್ರಿಯ ಚಟುವಟಿಕೆಗಳಿಂದ ಎಷ್ಟು ಪ್ರಭಾವಿತನಾದನೆಂದರೆ, ಸ್ವಲ್ಪ ದಿನಗಳಲ್ಲಿಯೇ ಅವನು ಕತಾರಿನೊ ಬಳಿ ಕಾಣಿಸಿಕೊಂಡ. ಹುಂಜಕಾಳಗದ ಮನುಷ್ಯನಾಗಿಬಿಟ್ಟ. ಕಾಳಗದ ಹುಂಜಗಳೊಂದಿಗೆ ಮೊದಲ ಬಾರಿಗೆ ಮನೆಯಲ್ಲಿ ಕಾಣಿಸಿಕೊಂಡಾಗ, ಉರ್ಸುಲಾ "ಆ ಪ್ರಾಣಿಗಳನ್ನೂ ಬೇರೆಲ್ಲಾದರೂ ತೆಗೆದುಕೊಂಡು ಹೋಗು" ಎಂದು ಆದೇಶಿಸಿದಳು. "ಈ ಹುಂಜಗಳಿಂದ ಮನೆಯಲ್ಲಿ ಸಾಕಷ್ಟು ಅನುಭವಿಸಿದ್ದೇವೆ. ನೀನು ಮತ್ತಷ್ಟು ತೊಂದರೆ ತರಬೇಡ" ಎಂದಳು. ಜೋಸ್ ಆರ್ಕಾಡಿಯೊ ಸೆಗುಂಡೊ ಮರುಮಾತಿಲ್ಲದೆ ಅವುಗಳನ್ನು ತೆಗೆದುಕೊಂಡು ಹೋದ. ಆದರೆ ಅವುಗಳ ಸಾಕಣೆಯನ್ನು ಪಿಲಾರ್ ತರ್ನಿರಾ ಮನೆಯಲ್ಲಿ ಮುಂದುವರೆಸಿದ. ಅವನು ತನ್ನ ಮನೆಯಲ್ಲಿ ಇದ್ದುದಕ್ಕಾಗಿ ಅವನಿಗೆ ಬೇಕಾದ್ದೆಲ್ಲವನ್ನೂ ನೀಡಿದಳು. ಫಾದರ್ ಆ್ಯಂಟೊನಿಯೊ ನೀಡಿದ ಪಾಠಗಳಿಂದ ಹುಂಜ ಕಾಳಗದಲ್ಲಿ ಬಹಳಷ್ಟು ಮುಂದುವರೆದ. ಸಾಕಷ್ಟು ಹಣದೊಂದಿಗೆ ಹುಂಜಗಳನ್ನು ಅಭಿವೃದ್ಧಿಪಡಿಸುವುದರ ಜೊತೆಗೆ ಪುರುಷನ

ಅಗತ್ಯಗಳೆಲ್ಲವನ್ನೂ ತಣಿಸಿಕೊಳ್ಳತೊಡಗಿದ. ಉರ್ಸುಲಾ ಅವನನ್ನು ಅವನ ಅವಳಿ ಸೋದರನೊಂದಿಗೆ ಹೋಲಿಸಿ, ಬಾಲ್ಯದಲ್ಲಿ ಅವರಲ್ಲಿ ಸಮಾನ ಗುಣಸ್ವಭಾವಗಳು ಇದ್ದುದು ಈಗ ಯಾಕೆ ಇಷ್ಟೊಂದು ಬೇರೆಯಾಗಿದೆ ಎಂದು ಯೋಚಿಸುತ್ತಿದ್ದಳು. ಅವಳಿಗಿದ್ದ ಅನುಮಾನ ಬಹಳ ಕಾಲ ಉಳಿಯಲಿಲ್ಲ. ಅರೆಲಿಯಾನೊ ಸೆಗುಂಡೊ ಆಗಲೇ ಸೋಮಾರಿತನದ ಲಕ್ಷಣಗಳನ್ನು ತೋರಿಸಲು ತೊಡಗಿದ. ಮೆಲ್‌ಕಿಯಾಡ್ಸ್‌ನ ಕೋಣೆಯಲ್ಲಿದ್ದಾಗ ಅವನು ಅವನಲ್ಲಿಯೇ ಮುಳುಗಿ ಬಿಡುತ್ತಿದ್ದ. ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಯುವಕನಾಗಿದ್ದಾಗ ಹೇಗಿರುತ್ತಿದ್ದನೊ ಹಾಗೆಯೇ ಇವನು ಕಾಣಿಸಿಕೊಳ್ಳುತ್ತಿದ್ದ. ನಿರ್ಲಾಂಡಾ ಟ್ರೀಟಿಯಾದ ಸ್ವಲ್ಪ ಸಮಯದ ನಂತರ ಏನೋ ಒಂದು ಸಣ್ಣ ಅವಕಾಶದಿಂದಾಗಿ ಅವನನ್ನು ಅಂತರ್ಮುಖತೆಯಿಂದ ಪ್ರಪಂಚದೆಡೆಗೆ ಮುಖ ಮಾಡುವಂತಾಯಿತು. ಆರ್ಕಾರ್ಡಿಯೋನ್ ಗೆಲ್ಲುವುದಕ್ಕೆ ಲಾಟರಿ ಟಿಕೇಟುಗಳನ್ನು ಮಾರುತ್ತಿದ್ದ ಹುಡುಗಿಯೊಬ್ಬಳು ಅವನನ್ನು ಹತ್ತಿರದ ಪರಿಚಯವಿರುವವರಂತೆ ಕರೆದು ಮಾತನಾಡಿಸಿದಳು. ಅವನಿಗೆ ಅದರಿಂದ ಆಶ್ಚರ್ಯವಾಗಲಿಲ್ಲ. ತನ್ನನ್ನು ತನ್ನ ಸಹೋದರನೆಂಬ ಗೊಂದಲದಿಂದ ಹೀಗಾಗುತ್ತಿದ್ದುದು ಸಾಮಾನ್ಯವಾಗಿತ್ತು. ಆದರೆ ಅವನು ಆಗಿರುವ ತಪ್ಪನ್ನು ಸರಿಪಡಿಸಲು ಪ್ರಯತ್ನಿಸಲಿಲ್ಲ. ಅವಳು ಅವನೊಂದಿಗೆ ತನ್ನ ಕಷ್ಟ ಹೇಳಿಕೊಂಡು ಅಳುತ್ತ ಅವನ ಮನಸ್ಸನ್ನು ಮೃದುಗೊಳಿಸಲು ಪ್ರಯತ್ನಿಸಿದಾಗಲೂ ಸುಮ್ಮನಿದ್ದ. ಅವಳು ಅವನನ್ನು ತನ್ನ ಕೋಣೆಗೆ ಕರೆದುಕೊಂಡು ಹೋದಳು. ಮೊದಲ ಭೇಟಿಯಲ್ಲಿಯೇ ಅವನನ್ನು ಇಷ್ಟಪಟ್ಟಳು. ಅಲ್ಲದೆ ಅವನಿಗಾಗಿ ಆರ್ಕಾಡಿಯೋನ್ ಗೆಲ್ಲಲು ಸಹಾಯ ಮಾಡುತ್ತಿದ್ದಳು. ಎರಡು ವಾರಗಳ ನಂತರ ಅರೆಲಿಯಾನೊ ಸೆಗುಂಡೊಗೆ ಅವಳು ತನ್ನ ಮತ್ತು ತನ್ನ ಸೋದರನ ಜೊತೆ, ತಾವಿಬ್ಬರೂ ಒಂದೇ ಎಂಬ ಭಾವನೆಯಿಂದ ಹಾಸಿಗೆ ಹಂಚಿಕೊಳ್ಳುತ್ತಿದ್ದಾಳೆಂಬುದನ್ನು ಅರಿತುಕೊಂಡ. ಈ ವಿಷಯವನ್ನು ಸ್ಪಷ್ಟಪಡಿಸುವುದಕ್ಕೆ ಬದಲಾಗಿ ಈಗಿದ್ದ ಸ್ಥಿತಿಯನ್ನೇ ಮುಂದುವರೆಸಿದ. ಮೆಲ್‌ಕಿಯಾಡ್ಸ್ ಕೋಣೆಗೆ ಹಿಂತಿರುಗಲಿಲ್ಲ. ತನ್ನ ಮಧ್ಯಾಹ್ನಗಳನ್ನು, ಉರ್ಸುಲಾ ಬೇಡವೆಂದ ಹೇಳುತ್ತಿದ್ದರೂ, ಕಿವಿಯಿಂದ ಕೇಳಿಸಿಕೊಂಡು ಆರ್ಕಾಡಿಯೋನ್ ನುಡಿಸುವುದನ್ನು ಕಲಿಯುತ್ತಿದ್ದ. ಸೂತಕದ ಮನೆಯಲ್ಲಿ ಸಂಗೀತ ನಿಷಿದ್ಧ ಎನ್ನುವುದು ಒಂದು ಕಾರಣವಾದರೆ ಈ ವಾದ್ಯ ಫ್ರಾನ್ಸಿಸ್ಕೋ ಸಂತತಿಯ ಅಲೆಮಾರಿಗಳಿಗಲ್ಲದೆ ತಮ್ಮಂಥವರಿಗಲ್ಲವೆಂದು ಅದನ್ನು ಅಸಹ್ಯದಿಂದ ನೋಡುತ್ತಿದ್ದಳು. ಆದರೂ ಅರೆಲಿಯಾನೊ ಸೆಗುಂಡೊ ಅದರಲ್ಲಿ ಪರಿಣಿತಿಯನ್ನು ಗಳಿಸಿದ್ದೇ ಅಲ್ಲದೆ ಮದುವೆ, ಮಕ್ಕಳು ಆದ ಮೇಲೂ ಮುಂದುವರೆಸಿದ. ಮಕೊಂಡೊದಲ್ಲಿ ಗೌರವಕ್ಕೆ ಪಾತ್ರರಾದವರಲ್ಲಿ ಇವನೂ ಒಬ್ಬನಾಗಿದ್ದು ಹೆಚ್ಚಿನ ಆದರಕ್ಕೆ ಒಳಗಾಗಿದ್ದ.

ಎರಡು ತಿಂಗಳು ಆ ಹೆಣ್ಣನ್ನು ಸೋದರನ ಜೊತೆ ಹಂಚಿಕೊಂಡ. ಅವನನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದ. ತನ್ನ ಉಪಾಯಗಳನ್ನು ಯೋಚಿಸುತ್ತಿದ್ದ. ತನ್ನ ಸೋದರ ಜೋಸ್ ಆರ್ಕಾಡಿಯೊ ಸೆಗುಂಡೊ ತಮ್ಮಿಬ್ಬರಿಗೂ ಸೇರಿದ ಹೆಣ್ಣಿನ ಬಳಿ ಹೋಗುತ್ತಿಲ್ಲವೆಂದು ತಿಳಿದ ರಾತ್ರಿಗಳಲ್ಲಿ ಹೋಗಿ ಅವಳೊಂದಿಗೆ ಮಲಗುತ್ತಿದ್ದ. ಎರಡು ದಿನಗಳ ನಂತರ ಅವನ ಸೋದರ ಬಚ್ಚಲು ಮನೆಯ ತೊಲೆಯಿಂದ ಕಂಬನಿಸುರಿಸುತ್ತ

ನೇತಾಡುತ್ತಿದ್ದುದನ್ನು ನೋಡಿದಾಗ ಅರ್ಥಮಾಡಿಕೊಂಡ. ಅವನ ಸೋದರ ಅವನಿಗೆ ಮಾರಕ ರೋಗವಿರುವುದನ್ನು ತಿಳಿದು ತನ್ನನ್ನು ಹೊರಗೆ ಹಾಕಿದಳೆಂದೂ ಪಿಲಾರ್ ತರ್ನಿರಾ ಅದನ್ನು ವಾಸಿ ಮಾಡುವ ಪ್ರಯತ್ನ ಮಾಡಿದಳೆಂದೂ ತಿಳಿಸಿದ. ಅರೆಲಿಯಾನೊ ಸೆಗುಂಡೊ ರಹಸ್ಯವಾಗಿ, ಮೂರು ತಿಂಗಳು ಗುಟ್ಟಾಗಿ ಕಾಯಿಲೆಯಿಂದ ನರಳಿದ ಬಳಿಕ, ಪೊಟಾಷಿಯಂ ಪರಮಾಂಗ್ನೇಟ್ ಮತ್ತು ಮೂತ್ರ ಮಿಶ್ರ ನೀರಿನಲ್ಲಿ ಸ್ನಾನಮಾಡಿದ ಮೇಲೆ ತಾನು ಮತ್ತು ತನ್ನ ಸೋದರ ಪ್ರತ್ಯೇಕವಾಗಿ, ವಾಸಿಮಾಡಿಕೊಂಡರು. ಜೋಸ್ ಆರ್ಕಾಡಿಯೊ ಮತ್ತೆ ಆ ಹೆಂಗಸಿನ ಕಡೆ ಹೋಗಲಿಲ್ಲ. ಅರೆಲಿಯಾನೊ ಸೆಗುಂಡೊ ಅವಳಿಂದ ಕ್ಷಮೆ ಪಡೆದು ಸಾಯುವವರೆಗೂ ಜೊತೆಗಿದ್ದ.

ಅವಳ ಹೆಸರು ಪೆಟ್ರಾ ಕೋಟ್ಸ್. ಅವಳು ಯುದ್ಧದ ಸಮಯದ ಮಧ್ಯದಲ್ಲಿ ಮಕೊಂಡೊಗೆ ಬಂದು ನೆಲಸಿದ್ದಳು. ಆಕಸ್ಮಿಕವಾಗಿ ಭೇಟಿಯಾದ ಲಾಟರಿ ಮನುಷ್ಯನ ಜೊತೆ ಮದುವೆಯಾದಳು. ಅವನ ಸಾವಿನ ನಂತರ ರ್‍ಯಾಫೆಲ್(ಲಾಟರಿ) ಮಾರಾಟ ಅಥವಾ ವ್ಯಾಪಾರವನ್ನು ತಾನೇ ನಡೆಸಿಕೊಂಡು ಬಂದಳು. ಅವಳು ಐರೋಪ್ಯ ಮತ್ತು ನೀಗ್ರೋದ ಮಿಶ್ರ ಸಂತಾನವಾಗಿದ್ದ ಯುವತಿಯಾಗಿದ್ದಳು. ಬಾದಾಮಿ ಆಕಾರದ ಕಣ್ಣುಗಳಲ್ಲಿನ ನೋಟ ಚಿರತೆಯದಾಗಿತ್ತು. ಆದರೆ ಹೃದಯದಿಂದ ಮೆದು, ಉದಾರಿ ಮತ್ತು ಅಪಾರವಾಗಿ ಪ್ರೀತಿಸುವ ಗುಣ ಹೊಂದಿದ್ದಳು. ಜೋಸ್ ಆರ್ಕಾಡಿಯೊ ಸೆಗುಂಡೊ ಹುಂಜಕಾಳಗದ ಮನುಷ್ಯನಾಗಿರುವುದನ್ನು ಮತ್ತು ಅರೆಲಿಯಾನೊ ಸೆಗುಂಡೊ ತನ್ನ ಸೂಳೆಯರ ಗದ್ದಲದ ಪಾರ್ಟಿಗಳಲ್ಲಿ ಆರ್ಕಾಡಿಯೋನ್ ನುಡಿಸುವುದನ್ನು ಅರಿತಾಗ, ಉರ್ಸುಲಾ ಈ ಎರಡೂ ಸೇರಿದರೆ ತನ್ನ ತಲೆ ಕೆಟ್ಟು ಹೋಗುತ್ತದೆಂದು ಯೋಚಿಸಿದಳು. ವಂಶದ ದೌರ್ಬಲ್ಯಗಳು ಮಾತ್ರವೇ ಮುಂದುವರೆದು ಗುಣಗಳು ಮಾತ್ರ ಸಾಧ್ಯವಾಗಲಿಲ್ಲವೆಂಬಂತೆ ಕಾಣುತ್ತಿತ್ತು. ಅದಕ್ಕಾಗಿಯೇ ಇನ್ನು ಮುಂದೆ ಯಾರಿಗೂ ಅರೆಲಿಯಾನೊ ಹೆಸರಾಗಲಿ, ಜೋಸ್ ಆರ್ಕಾಡಿಯೊ ಹೆಸರಾಗಲಿ ಇಡಬಾರದೆಂದು ತೀರ್ಮಾನಿಸಿದಳು. ಆದರೂ ಅರೆಲಿಯಾನೊ ಸೆಗುಂಡೋನ ಮೊದಲ ಮಗುವಿಗೆ ಆ ಹೆಸರು ಇಟ್ಟಾಗ, ಅವನ ಇಚ್ಛೆಗೆ ವಿರುದ್ಧವಾಗಿ ಹೋಗುವ ಧೈರ್ಯ ಮಾಡಲಿಲ್ಲ.

"ಆಯ್ತು, ಆದರೆ ಒಂದು ಷರತ್ತಿನ ಮೇಲೆ, ಅವನನ್ನು ನಾನು ಬೆಳೆಸುತ್ತೇನೆ" ಎಂದಳು.

ಈಗಾಗಲೇ ಅವಳಿಗೆ ನೂರುವರ್ಷ ವಯಸ್ಸಾಗಿದ್ದರೂ ಪೊರೆಯಿಂದ ಕಣ್ಣು ಕುರುಡಾಗುವ ಸಾಧ್ಯತೆಯಿದ್ದರೂ ದೈಹಿಕ ಚಟುವಟಿಕೆಗಳ, ವ್ಯಕ್ತಿತ್ವದ ಸಮಗ್ರತೆಯಲ್ಲಿ ಮಾನಸಿಕ ಸಮತೋಲನದಲ್ಲಿ ಯಾವುದೇ ಕೊರತೆ ಇರಲಿಲ್ಲ. ಎಲ್ಲವೂ ಸಮರ್ಪಕವಾಗಿತ್ತು. ಒಬ್ಬ ಗುಣವಂತ ಮನುಷ್ಯನನ್ನಾಗಿ ರೂಪಿಸುವುದರಲ್ಲಿ ಅವಳನ್ನು ಬಿಟ್ಟರೆ ಬೇರೆ ಯಾರಿಗೂ ಸಾಧ್ಯವಿರಲಿಲ್ಲ. ವಂಶ ಗೌರವವನ್ನು ಉಳಿಸುವ, ಯುದ್ಧದ ಬಗ್ಗೆ ಮಾತನಾಡದ ಹುಂಜ ಕಾಳಗ, ಹೆಣ್ಣುಗಳ ಹುಚ್ಚಿಗೆ ಬೀಳದ ಉದ್ಧಟ ಸಾಹಸಗಳಿಗೆ ನುಗ್ಗದ – ಇತ್ಯಾದಿ ನಾಲ್ಕು ದೌರ್ಬಲ್ಯಗಳೇ ವಂಶದ ಅವನತಿಗೆ ಕಾರಣವೆಂದು ತಿಳಿದಿದ್ದರಿಂದ, ಅವುಗಳಿಂದ ದೂರವಿರುವಂತೆ ತನ್ನ ಮಾರ್ಗದರ್ಶನದಲ್ಲಿ ಮಗು ಬೆಳೆಯಬೇಕೆಂದು ಬಯಸಿದಳು. "ಇವನು ಪಾದ್ರಿಯಾಗುತ್ತಾನೆ, ದೇವರ ಅನುಗ್ರಹವಿದ್ದಲ್ಲಿ ಒಂದಲ್ಲ ಒಂದು ದಿನ ಪೋಪ್

ಆಗುವುದನ್ನೂ ನೋಡುತ್ತೇನೆ" ಎಂದು ಪ್ರಾಮಾಣಿಕತೆಯಿಂದ ಹೇಳಿದಳು. ಅವಳ ಮಾತುಗಳನ್ನು ಕೇಳಿದಾಗ ಅವರೆಲ್ಲ ನಕ್ಕರು. ಕೇವಲ ಮಲಗುವ ಕೋಣೆಗಳಲ್ಲಿ ಮಾತ್ರವಲ್ಲ, ಮನೆಯ ತುಂಬೆಲ್ಲ, ಅದು ಅರೆಲಿಯಾನೊ ಸೆಗುಂಡೋನ ದುಷ್ಟ ಸ್ನೇಹಿತರೆಲ್ಲ ಸೇರಿರುವಾಗ, ಬಹಳವಾಗಿ ನಕ್ಕರು. ಕೆಟ್ಟ ಆಲೋಚನೆಗಳ ವರ್ಗಕ್ಕೆ ಸೇರಿದ ಯುದ್ಧದ ಪ್ರಸ್ತಾಪದಿಂದ ಹಳೆಯ ನೆನಪುಗಳನ್ನು ಒಂದು ಕ್ಷಣ ಹುಟ್ಟು ಹಾಕಿದಾಗ ಷಾಂಪೇನ್ ಬಾಟಲಿಗಳ ಮುಚ್ಚಳಗಳನ್ನು ಚಿಮ್ಮಿಸಿದರು.

"ಪೋಪ್‌ನ ಆರೋಗ್ಯಕ್ಕಾಗಿ" ಎಂದು ಅರಲಿಯಾನೊ ಸೆಗುಂಡೊ ಗ್ಲಾಸ್ ಎತ್ತಿದ. ಅತಿಥಿಗಳೂ ಒಟ್ಟಿಗೇ ಅವನ ಜೊತೆ ಸೇರಿದರು. ಮನೆಯ ವ್ಯಕ್ತಿ ಆರ್ಕಾಡಿಯೋನ್ ನುಡಿಸಿದ. ಪಟಾಕಿಗಳನ್ನು ಹಚ್ಚಲಾಯಿತು. ಇಡೀ ಊರಿನ ತುಂಬ ಡೋಲಿನ ಸದ್ದುಗಳ ಮೂಲಕ ಸಂಭ್ರಮಿಸಲಾಯಿತು. ಬೆಳಿಗ್ಗೆ ಅತಿಥಿಗಳು ಪಾಂಪೇನ್‌ನಿಂದ ತೊಯ್ದ ಆರು ಹಸುಗಳನ್ನು ಬಲಿಗೊಟ್ಟು ಬೀದಿಗೆ ಎಸೆದರು. ಆದರೆ ಯಾರ ಬಗ್ಗೆಯೂ ಬೇಸರ ಬರಲಿಲ್ಲ. ಅರೆಲಿಯಾನೊ ಸೆಗುಂಡೊ ಮನೆಯ ಜವಾಬ್ದಾರಿ ವಹಿಸಿಕೊಂಡಿದ್ದರಿಂದ ಪೋಪ್ ಹುಟ್ಟಿದ್ದಾನೆಂಬ ನಿಜವಾದ ಕಾರಣವಿಲ್ಲದಿದ್ದರೂ ಈ ಬಗೆಯ ಸಂಭ್ರಮಾಚಾರಣೆಗಳು ಸಾಮಾನ್ಯವಾಗಿದ್ದುವು. ಕೆಲವು ವರ್ಷಗಳಲ್ಲಿ, ಯಾವುದೇ ಶ್ರಮವಿಲ್ಲದೆ ಅನಾಯಾಸವಾಗಿ ಅದೃಷ್ಟದ ಪರಿಣಾಮವಾಗಿ ಮತ್ತು ಅಲೌಕಿಕ ಪ್ರಾಣಿಗಳ ಸಂತಾನಾಭಿವೃದ್ಧಿಯಿಂದಾಗಿ ಜೌಗುಪ್ರದೇಶದಲ್ಲಿ ಅವನಿಗೆ ಅಪಾರ ಆಸ್ತಿಯನ್ನು ಸಂಗ್ರಹಿಸುವಂತಾಯಿತು. ಅವನ ಹೆಣ್ಣು ಕುದುರೆಗಳು ಒಟ್ಟಿಗೆ ಮೂರಕ್ಕೆ ಜನ್ಮ ಕೊಡುತ್ತಿದ್ದವು. ಕೋಳಿಗಳು ದಿನಕ್ಕೆ ಎರಡು ಬಾರಿ ಮೊಟ್ಟೆಯಿಡುತ್ತಿದ್ದವು. ಅವನ ಹಂದಿಗಳು ಯಾವ ಪ್ರಮಾಣದಲ್ಲಿ ಕೊಬ್ಬಿದವೆಂದರೆ ಮಾಯ ಮಾಟ ಮಂತ್ರದಿಂದ ಮಾತ್ರವೇ ಸಾಧ್ಯವಾಗಬಹುದಾದಷ್ಟು ಗಾತ್ರಕ್ಕೆ ಉಬ್ಬಿದವು. ತನ್ನ ಒರಟು ಮರಿ ಮಗನಿಗೆ "ಈಗಲಾದರೂ ಸ್ವಲ್ಪ ಉಳಿತಾಯ ಮಾಡು" "ಅದೃಷ್ಟ ಯಾವಾಗಲೂ ಜೀವನದಲ್ಲಿ ಒಂದೇ ಥರ ಇರುವುದಿಲ್ಲ" ಎಂದಳು. ಆದರೆ ಅರೆಲಿಯಾನೊ ಸೆಗುಂಡೊ ಅದರ ಕಡೆ ಗಮನಕೊಡಲಿಲ್ಲ. ಅವನು ಷಾಂಪೇನನ್ನು ಹೆಚ್ಚು ಹೆಚ್ಚು ಸುರಿದು ಸ್ನೇಹಿತರನ್ನು ಮೀಯಿಸಿದಷ್ಟೂ ಅವನ ಪ್ರಾಣಿಗಳು ಕಂಡಾಬಟ್ಟೆ ಮರಿಗಳಿಗೆ ಜನ್ಮಕೊಡುತ್ತಿದ್ದವು. ಇದರಿಂದ ಅವನಿಗೆ ತನ್ನ ಅದೃಷ್ಟ ತನ್ನ ನಡತೆಯನ್ನು ಅವಲಂಬಿಸದೆ, ಧಾರಾಳವಾಗಿ ಪ್ರೀತಿಯನ್ನು ಸುರಿಯುತ್ತಿದ್ದ, ಒಳ್ಳೆಯ ಸ್ವಭಾವದ ತನ್ನ ಪ್ರೇಯಸಿ ಪೆಟ್ರಾ ಕೋಟ್ಸ್‌ಳ ಪ್ರಭಾವವೇ ಕಾರಣವಾಗಿತ್ತು. ಅವಳೇ ತನ್ನ ಈ ಅಪಾರ ಶ್ರೀಮಂತಿಕೆಗೆ ಕಾರಣವೆಂದು ಪೂರ್ತಿಯಾಗಿ ನಂಬಿದ್ದರಿಂದ ಅವಳನ್ನೆಂದೂ ಸಂತಾನಾಭಿವೃದ್ಧಿ ಪ್ರದೇಶದಿಂದ ದೂರ ಮಾಡಲಿಲ್ಲ. ಅವನು ಮದುವೆಯಾಗಿ ಮಕ್ಕಳಾಗಿದ್ದರೂ ಫರ್ನಾಂಡಾಳ ಅನುಮತಿ ಮೇರೆಗೆ ಪೆಟ್ರಾಳೊಂದಿಗೆ ಇರುತ್ತಿದ್ದ. ಅಜ್ಜಂದಿರ ಹಾಗೆ ಭಾರಿ ಮೈಕಟ್ಟು. ಆದರೆ ಅವರಿಗೆ ಇರದಿದ್ದ ಹಾಸ್ಯ ಪ್ರವೃತ್ತಿಯೊಂದಿಗೆ ಅರೆಲಿಯಾನೊ ಸೆಗುಂಡೊಗೆ ಪ್ರಾಣಿಗಳನ್ನು ನೋಡಿಕೊಳ್ಳಲಾಗಲಿಲ್ಲ. ಸಮಯವೇ ಇರುತ್ತಿರಲಿಲ್ಲ. ಅವನು ಮಾಡುತ್ತಿದ್ದುದೇನೆಂದರೆ ಪೆಟ್ರಾಕೋಟ್ಸ್‌ಳನ್ನು ಸಂತಾನೋತ್ಪತ್ತಿ ಜಾಗಕ್ಕೆ ಕರೆದುಕೊಂಡು ಹೋಗಿ ತಡೆಯಲಾಗದ ಅತಿ ಸಂತಾನೋತ್ಪತ್ತಿಗಾಗಿ ಪ್ರತಿಯೊಂದು ಪ್ರಾಣಿಯ ಮೇಲೆ ಗುರುತುಮಾಡಿಸುವ ಕೆಲಸವನ್ನು ಒಪ್ಪಿಸುವುದಷ್ಟೇ ಆಗಿತ್ತು.

ಅವನ ದೀರ್ಘ ಬದುಕಿನಲ್ಲಿ ಆದ ಒಳ್ಳೆಯದೆಲ್ಲವೂ ಸಂಭವಿಸಿದ್ದು ಭಯಂಕರ ಅದೃಷ್ಟದಿಂದ ದೊರಕಿದ ಅವಕಾಶದಿಂದ. ಯುದ್ಧಗಳು ಮುಕ್ತಾಯವಾಗುವ ತನಕ ಪೆಟ್ರಾ ಕೋಟ್ಸ್ ಲಾಟರಿ ವ್ಯಾಪಾರದಿಂದ ಗಳಿಸಿದ ಹಣದಿಂದ ತಾನು ಬದುಕುತ್ತಿದ್ದಳು. ಅರೆಲಿಯಾನೊ ಸೆಗುಂಡೊ ಆಗಾಗ ಉರ್ಸುಲಾಳ ಉಳಿತಾಯದ ಹಣವನ್ನು ಎಗರಿಸುತ್ತಿದ್ದ. ಅವರು ಯಾವುದೇ ಜವಾಬ್ದಾರಿಯಿಲ್ಲದ ಕಷ್ಟಗಳಿಲ್ಲದ ಸಾಮಾನ್ಯ ದಂಪತಿಗಳು. ಹಾಸಿಗೆಗೆ ನಿಷಿದ್ಧ ದಿನಗಳಿಗೆ ಸೇರಿದಂತೆ, ಹೋಗಿ ಅನುಭವಿಸುವುದರ ಹೊರತು ಬೇರೆ ಕೆಲಸವೇ ಇರುತ್ತಿರಲಿಲ್ಲ. ನಿದ್ದೆಗಣ್ಣಿನಲ್ಲಿ ನಡೆಯುತ್ತಾ ಬರುತ್ತಿದ್ದ ಅವನನ್ನು ನೋಡಿದಾಗಲೆಲ್ಲ "ನಿನ್ನ ವಿನಾಶಕ್ಕೆ ಆ ಹೆಣ್ಣೇ ಕಾರಣ" ಎಂದು ಹೇಳುತ್ತಿದ್ದಳು. "ಹೀಗೇ ಇದ್ದರೆ ಒಂದಲ್ಲ ಒಂದು ದಿನ ನಿನ್ನ ಹೊಟ್ಟೆಯೊಳಗೆ ಕಾಡುಗಪ್ಪೆ ಸೇರಿ ನೋವಿನಿಂದ ನುಲಿಯುವಂತಾಗುತ್ತದೆ. ಅವಳು ನಿನಗೇನೋ ಮಾಡಿಸಿರಬೇಕು" ಎಂದು ಮಾತನ್ನು ಮುಂದುವೆಸಿದಳು. ಜೋಸ್ ಆರ್ಕಾಡಿಯೊ ಸೆಗುಂಡೊಗೆ ಬಹಳ ದಿನಗಳ ನಂತರ, ತನ್ನ ಸೋದರ ಅವಳ ಮೇಲೆ ಇರಿಸಿದ ಮೋಹ ಎಂಥಾದ್ದೆಂದು ಕಂಡುಕೊಳ್ಳಲು ಸಾಧ್ಯವಾಗಲಿಲ್ಲ. ಅವಳು ಬಹಳ ಸಾಮಾನ್ಯ ಹೆಂಗಸು. ಅಂಥ ಸುಖವನ್ನೂ ನೀಡಲೂ ಸೋಮಾರಿ. ಪ್ರೀತಿಮಾಡುವ ಪಟ್ಟುಗಳೂ ತಿಳಿದವಳಲ್ಲ. ಉರ್ಸುಲಾಳ ಮಾತಿಗೂ ಸೋದರನ ಕೀಟಲೆಗೂ ಕಿವುಡನಾಗಿದ್ದ. ಅವನಿಗೆ ಆ ಸಮಯದಲ್ಲಿ ಇದ್ದ ಆಲೋಚನೆಯೆಂದರೆ, ಯಾವ ವ್ಯಾಪಾರ ಮಾಡಿದರೆ ಅವಳಿಗಾಗಿ ಒಂದು ಮನೆಯನ್ನು ಮಾಡಿ ಅವಳೊಂದಿಗೆ ಹಗಲೂ ರಾತ್ರಿ ಹಲವು ರೀತಿಯಲ್ಲಿ ಸುಖ ಅನುಭವಿಸಿ ಸಾಯಲು ಸಾಧ್ಯವಾಗುತ್ತದೆ ಎಂಬುದಾಗಿತ್ತು. ಕಡೆಗೆ ಅವನಿಗೆ ಮುದಿತನದಲ್ಲಿ ಪ್ರಶಾಂತವಾಗಿ ಜೀವನ ಕಳೆಯಲು ಇರುವ ದಾರಿಯೆಂದರೆ ಮತ್ತೆ ವರ್ಕ್‌ಷಾಪನ್ನು ಆರಂಭಿಸಿ ಪುಟ್ಟ ಪುಟ್ಟ ಚಿನ್ನದ ಮೀನುಗಳನ್ನು ತಯಾರಿಸಿ ಮಾರಾಟ ಮಾಡುವುದಾಗಿತ್ತು. ಬಿಸಿಲಿನ ದಗೆಯಿದ್ದ ಆ ಕೋಣೆಯಲ್ಲಿ ಹಲವು ಗಂಟೆಗಳನ್ನು ಕಳೆದ. ಲೋಹದ ಹಾಳೆ ಬಹಳ ಗಡುಸಾಗಿತ್ತು. ಆದರೆ ಕರ್ನಲ್ ಅರೆಲಿಯಾನೊ ಊಹೆಗೂ ನಿಲುಕದ ತಾಳ್ಮೆಯೊಂದಿಗೆ ಮಾಡುತ್ತಿದ್ದ. ಲೋಹದ ಹಾಳೆಗಳು, ಚಿನ್ನದ ಪದರಗಳಾಗಿ ಎಷ್ಟೋ ಕಷ್ಟಪಟ್ಟ ನಂತರ ತಯಾರಾಗುತ್ತಿದ್ದವು. ಆ ಕೆಲಸ ಅವನಿಗೆ ಬಹಳ ಕಷ್ಟಕರವೆನಿಸಿತು. ಪೆಟ್ರಾಕೋಟ್ಸ್‌ಳ ನಿರಂತರ ನೆನಪಿನ ಒತ್ತಡದಿಂದ ಮೂರು ವಾರಗಳ ನಂತರ ವರ್ಕ್‌ಷಾಪಿನಿಂದ ಮಾಯವಾದ, ಅದೇ ಸಮಯದಲ್ಲಿ ಪೆಟ್ರಾ ಕೋಟ್ಸ್‌ಗೆ, ಮೊಲಗಳ ಲಾಟರಿ ಬಗ್ಗೆ ಯೋಚನೆ ಬಂತು. ಹೇಗಿದ್ದರೂ ಅವಳ ಮೊದಲಿನ ಲಾಟರಿ ವ್ಯಾಪಾರ ಮಾಡಲು ಸಮಯ ಸಿಗುತ್ತಿರಲಿಲ್ಲವಾಗಿ ಮತ್ತು ಮೊಲಗಳ ಸಂತಾನಾಭಿವೃದ್ಧಿ ದಿಗ್ಭ್ರಮೆಗೊಳಿಸುವಷ್ಟು ಇದ್ದುದರಿಂದ ಈ ಆಲೋಚನೆ ಬಂತು. ಮೊದಲಿಗೆ ಅರೆಲಿಯಾನೊ ಸೆಗುಂಡೋಗೆ ಮೊಲಗಳ ಸಂತಾನಾಭಿವೃದ್ಧಿ ಈ ಪ್ರಮಾಣದಲ್ಲಿ ಇದೆ ಎಂಬುದು ತಿಳಿದಿರಲಿಲ್ಲ. ಆದರೆ ಒಂದು ರಾತ್ರಿ, ಯಾರಿಗೂ ಮೊಲದ ಲಾಟರಿ ಬಗ್ಗೆ ಕೇಳುವ ಆಸಕ್ತಿ ಇರಲಿಲ್ಲವಾಗಿ, ಅಂಗಳದ ಕಡೆಯಿಂದ ಸದ್ದು ಕೇಳಿಸಿತು. "ಏನೂ ಚಿಂತೆ ಬೇಡ, ಮೊಲಗಳು ಮಾಡುತ್ತಿರುವ ಗದ್ದಲ ಅಷ್ಟೆ" ಎಂದಳು. ಪೆಟ್ರಾ ಕೋಟ್ಸ್ ಪ್ರಾಣಿಗಳ ಸದ್ದಿನಿಂದ ಅವರಿಗೆ ನಿದ್ದೆ ಮಾಡುವುದು ದುಸ್ತರವೆನಿಸಿತು. ಬೆಳಿಗ್ಗೆ ಅರೆಲಿಯಾನೊ ಸೆಗುಂಡೊ ನೋಡಿದರೆ, ಅಂಗಳವೆಲ್ಲ

ಮೊಲಗಳಿಂದ ತುಂಬಿ ಬಿಟ್ಟಿದೆ. ಪೆಟ್ರಾ ಕೋಟ್ಸ್ ಬಿದ್ದು ಬಿದ್ದು ನಗುತ್ತಾ, ಅವನನ್ನು ಕೀಟಲೆ ಮಾಡಲೇಬೇಕೆನಿಸಿ,

"ಹೋದ ರಾತ್ರಿ ಹುಟ್ಟಿದವುಗಳೇ ಅವು" ಎಂದಳು.

"ಓ ದೇವರೇ! ಹಸುಗಳನ್ನೂ ಯಾಕೆ ಲಾಟರಿ ಹಾಕೊಲ್ಲ?" ಎಂದ.

ಕೆಲ ದಿನಗಳ ನಂತರ ಪೆಟ್ರಾ ಕೋಟ್ಸ್ ಅಂಗಳವನ್ನು ಶುಭ್ರಗೊಳಿಸುತ್ತಿದ್ದಾಗ, ಮೊಲಗಳನ್ನು ಹಸುವಿಗೆ ವಿನಿಮಯ ಮಾಡಿಕೊಂಡಳು. ಹೀಗೆ ಮೊಲಗಳ ಬದಲಿಗೆ ಬಂದಿದ್ದ ಹಸು ಎರಡು ತಿಂಗಳ ನಂತರ ತ್ರಿವಳಿಗೆ ಜನ್ಮಕೊಟ್ಟಿತು. ಹೀಗೆ ಶುರುವಾಯಿತು ಅವನ ದಿನಗಳು. ರಾತ್ರೋರಾತ್ರಿ ಅವನು ಭೂಮಿ ಒಡೆಯನಾದ. ಅಪಾರ ಪಶುಸಂಪತ್ತು ಅವನ ಸ್ವಂತವಾಯಿತು. ಉಗ್ರಾಣಗಳನ್ನು ದೊಡ್ಡದಾಗಿ ನಿರ್ಮಿಸಲು, ಕೂಡಾ ಅವನಿಗೆ ಬಿಡುವಿರಲಿಲ್ಲ. ತನ್ನ ಎಣೆಯಿಲ್ಲದ ಅಪಾರಸಂಪತ್ತನ್ನು ನೋಡಿ ತನಗೇ ನಗುವಂತಾಯಿತು. ತನ್ನ ಹಾಸ್ಯ ಪ್ರವೃತ್ತಿಯನ್ನು ಹೊರಚೆಲ್ಲಲು ಹುಚ್ಚಾಟಗಳನ್ನು ಮಾಡುವುದು ಸಾಧ್ಯವಿರಲಿಲ್ಲ. ಹಸುಗಳಿನ್ನು ಸಾಕು, ಬದುಕು ಕ್ಷಣಿಕ ಎಂದು ಕೂಗಿದ. ಉರ್ಸುಲಾ ಅವನು ಯಾವ ತೊಡಕುಗಳಲ್ಲಿ ಸಿಕ್ಕಿಕೊಂಡಿರಬಹುದು, ಕಳ್ಳತನ ಮಾಡುತ್ತಿರುವನೊ ಹೇಗೆ, ಪ್ರತಿಸಲವೂ ಅವನು ಷಾಂಪೇನ್ ಬಾಟಲಿನ ಮುಚ್ಚಳ ತೆಗೆದು ನೊರೆಯನ್ನು ತಲೆಯಮೇಲೆ ಸುರುವಿಕೊಳ್ಳುವುದನ್ನು ಕಂಡಾಗಲೆಲ್ಲ ಉರ್ಸುಲಾ ಸಿಟ್ಟಾಗುತ್ತಿದ್ದಳು. ಮತ್ತು ಅದನ್ನು ವ್ಯರ್ಥ ಮಾಡುತ್ತಿದ್ದುದಕ್ಕಾಗಿ ಬೈಯ್ಯುತ್ತಿದ್ದಳು. ಅವನಿಗೆ ಇದರಿಂದ ಗೆಲುವಿನಿಂದ ಎದ್ದು ಪೆಟ್ಟಿ ತುಂಬ ಹಣದೊಂದಿಗೆ ಕಾಣಿಸಿಕೊಂಡ. ಜೊತೆಗೆ ಪೇಸ್ಟ್‌ನ ಡಬ್ಬಿ, ಮತ್ತು ಬ್ರಷ್ಷನ್ನೂ ತಂದಿದ್ದ. ಗಂಟಲು ಒಡೆದು ಹೋಗುವ ಹಾಗೆ ಎತ್ತರದ ದನಿಯಲ್ಲಿ ಫ್ರಾನ್ಸಿಸ್ಕೋ ಹಳೆಯ ಹಾಡುಗಳನ್ನು ಹಾಡುತ್ತಾ, ಒಂದು ಪೆಸೋ ನೋಟುಗಳನ್ನು ಮನೆಯ ಒಳಗೆ ಹೊರಗೆ ಗೋಡೆಗಳ ಮೇಲೆಲ್ಲ ಅಂಟಿಸಿದ. ಹಳೆಯದಾದ ಆ ಮನೆ, ಪಿಯಾನೋಲ ತಂದ ದಿನದಿಂದ ಬಿಳಿಬಣ್ಣದೊಂದಿಗಿದ್ದದ್ದು ಮಸೀದಿಯಂತೆ ವಿಚಿತ್ರವಾಗಿ ಕಾಣುತ್ತಿತ್ತು. ಮನೆಯವರ ಉತ್ಸಾಹ, ಉರ್ಸುಲಾಳಿಗೆ ಅವಮಾನ, ದುಂದುಗಾರಿಕೆಯ ಪರಾಕಾಷ್ಠೆಯನ್ನು ನೋಡಲು ಬೀದಿಯಲ್ಲಿ ನೂಕುನುಗ್ಗಲಿನೊಂದಿಗೆ ಕಾಣಿಸಿಕೊಳ್ಳುತ್ತಿದ್ದ ಜನರ ಮಧ್ಯದಲ್ಲಿಯೇ ಅರೆಲಿಯಾನೊ ಸೆಗುಂಡೊ, ಮನೆಯ ಹಿಂದೆಮುಂದೆ, ಅಡಿಗೆಮನೆ, ಬಚ್ಚಲು ಮನೆ, ಮಲಗುವ ಕೋಣೆಗಳು ಎಲ್ಲವನ್ನೂ ನೋಟುಗಳಿಂದ ಅಂಟಿಸಿದ. ಉಳಿದ ನೋಟುಗಳನ್ನು ಅಂಗಳದಲ್ಲಿ ಎಸೆದ.

"ಈಗ ಇನ್ನು ಮುಂದೆ ಯಾರೂ ಈ ಮನೆಯಲ್ಲಿ ನನ್ನ ಹತ್ತಿರ ಹಣದ ವಿಚಾರವಾಗಿ ಮಾತಾಡಬಾರದು" – ಎಂದು ಕಡೆಯ ಆದೇಶದಂತೆ ಹೇಳಿದ.

ಆದದ್ದು ಹೀಗೆ, ಉರ್ಸುಲಾ ನಿಧಾನವಾಗಿ ಮೆತ್ತಿಕೊಂಡಿದ್ದ ನೋಟುಗಳನ್ನೆಲ್ಲ ತೆಗೆದು ಮತ್ತೆ ಬಿಳಿ ಬಣ್ಣವನ್ನು ಬಳಿಸಿದಳು. "ಓ ದೇವರೆ, ಮಕೊಂಡೊ ಸ್ಥಾಪಿಸಿದ ದಿನಗಳಲ್ಲಿ ಇದ್ದ ಹಾಗೆ ಬಡತನವನ್ನು ಕೊಡು. ಇದರಿಂದ ಈ ರೀತಿ ಹಣ ಪೋಲು ಮಾಡಿದ್ದಕ್ಕಾಗಿ ಮುಂದಿನ ಜನ್ಮದಲ್ಲಿ ದಂಡ ತೆರಬೇಕಾಗುವುದಿಲ್ಲ" ಎಂದು ಪ್ರಾರ್ಥಿಸಿದಳು. ಆದರೆ ಅವಳ

ಪ್ರಾರ್ಥನೆಗೆ ವಿರುದ್ಧವಾದ ಪ್ರತಿಫಲ ದೊರೆಯಿತು. ಕೆಲಸ ಮಾಡುತ್ತಿದ್ದವನೊಬ್ಬನಿಗೆ ಅಂಟಿಸಿದ ನೋಟುಗಳನ್ನು ತೆಗೆಯುವಾಗ ಪ್ಲಾಸ್ಟರ್‌ನ ಸಂತ ಜೋಸಫನ ಮೂರ್ತಿ ಸಿಕ್ಕಿತು. ಅದನ್ನು ಯಾರೋ ಯುದ್ಧದ ಕಡೆಯ ವರ್ಷಗಳಲ್ಲಿ ಅಲ್ಲಿ ಬಿಟ್ಟಿದ್ದರು. ಮೂರ್ತಿ ಟೊಳ್ಳಾಗಿದ್ದುದು ಕೆಳಗೆ ಬಿದ್ದು ಚೂರು ಚೂರಾಯಿತು. ಅದರಲ್ಲಿ ಚಿನ್ನದ ನಾಣ್ಯಗಳನ್ನು ಇರಿಸಿದ್ದರು. ಮಾನವ ಗಾತ್ರದ ಆ ಮೂರ್ತಿಯನ್ನು ಯಾರು ತಂದಿದ್ದರೆಂಬುದು ಯಾರಿಗೂ ನೆನಪಿರಲಿಲ್ಲ. "ಯಾರೋ ಮೂರು ಜನ ತಂದಿದ್ದರು, ಅವರು ಮಳೆ ಕಳೆಯುವವರೆಗೂ ಇಟ್ಟುಕೊಂಡಿರಲು ಕೇಳಿದರು. ನಾನು ಅದನ್ನು ಆ ಮೂಲೆಯಲ್ಲಿ ಇಡಲು ಹೇಳಿದೆ. ಯಾಕೆಂದರೆ ಆ ಕಡೆ ಯಾರೂ ಓಡಾಡುವುದಿಲ್ಲವಾದ್ದರಿಂದ ಅಲ್ಲಿರಿಸಲು ಹೇಳಿದೆ. ಅವರು ಅದರಂತೆ ಜಾಗರೂಕತೆಯಿಂದ ಅಲ್ಲಿರಿಸಿದರು. ಅಂದಿನಿಂದ ಅದು ಅಲ್ಲಿಯೇ ಇದೆ. ಯಾರೂ ಅದನ್ನು ತೆಗೆದುಕೊಂಡು ಹೋಗಲು ಬಂದೇ ಇಲ್ಲ" ಎಂದು ಹೇಳಿದಳು. ಆಮೇಲೆ ಉರ್ಸುಲಾ ಅದರ ಮುಂದೆ ಕ್ಯಾಂಡಲ್ ಹಚ್ಚಿ ನಮಸ್ಕರಿಸುತ್ತಿದ್ದಳು. ಅದರೊಳಗೆ ನಾಲ್ಕು ನೂರು ಪೌಂಡ್‌ಗಳಷ್ಟು ಚಿನ್ನವಿರಬೇಕೆಂಬ ಕಲ್ಪನೆಯೇ ಅವಳಿಗೆ ಇರಲಿಲ್ಲ. ನಿಜವಾದ ದೇವರನ್ನು ಪೂಜಿಸಲಿಲ್ಲವೆನ್ನುವುದಕ್ಕೆ ಸಾಕ್ಷಿಯಾಗಿ ಹೀಗೆ ಆದದ್ದು ಅವಳ ಮನಸ್ಸನ್ನು ಮತ್ತಷ್ಟು ಕದಡಿತು. ನಾಣ್ಯಗಳ ರಾಶಿಯನ್ನು ಥೂಕರಿಸಿ, ಮೂರು ಕ್ಯಾನ್‌ವಾಸ್ ಚೀಲಗಳಲ್ಲಿ ಅದನ್ನು ತುಂಬಿ ಯಾರಿಗೂ ಗೊತ್ತಾಗದ ಜಾಗದಲ್ಲಿ ಅಡಗಿಸಿಟ್ಟಳು. ಅವುಗಳನ್ನು ಇಟ್ಟ ಮೂರು ಮಂದಿ ಇಂದಲ್ಲ ನಾಳೆ ಬಂದಾರೆಂಬ ಭರವಸೆಯಲ್ಲಿ ಹಾಗೆ ಮಾಡಿದಳು. ಬಹಳ ಬಹಳ ದಿನಗಳಾದ ಮೇಲೆ, ಅವಳು ಬಹಳ ಜೀರ್ಣದೇಹಿಯಾಗಿರುವ ಅವಧಿಯಲ್ಲಿ, ಆ ಮನೆಯ ಕಡೆಯಿಂದ ಹೋಗಿಬರುವ ಪ್ರಯಾಣಿಕರ ಮಾತುಗಳನ್ನು ಕೇಳಿಸಿಕೊಳ್ಳುತ್ತಿರುವಾಗ, ಮಧ್ಯಪ್ರವೇಶಿಸಿ ಅವರಲ್ಲಿ ಕೆಲವರು ಪ್ಲಾಸ್ಟರನ ಸಂತ ಜೋಸಫನ ಮೂರ್ತಿಯನ್ನು, ಯುದ್ಧದ ಸಮಯದಲ್ಲಿ ಮಳೆಗಾಲ ತೀರುವವರೆಗೂ ಇರಿಸಿಕೊಂಡಿರಲು ಕೊಟ್ಟಿದ್ದುದನ್ನು ಯಾರಾದರೂ ನೋಡಿರಬಹುದೇ ಎಂದು ಕೇಳುತ್ತಿದ್ದಳು.

ಉರ್ಸುಲಾಗೆ ಗಾಭರಿ ಹುಟ್ಟಿಸುವ ಆ ಥರದ ಸಂಗತಿಗಳು ಆ ದಿನಗಳಲ್ಲಿ ಸಾಮಾನ್ಯವಾಗಿತ್ತು. ಮಕೊಂಡೊ ಊಹೆಗೂ ನಿಲುಕದ ಅಭಿವೃದ್ಧಿ ಹೊಂದಿತ್ತು. ಸಂಪದ್ಭರಿತವಾಗಿತ್ತು. ಸಂಸ್ಥಾಪಕರು ಕಟ್ಟಿಕೊಂಡಿದ್ದ ಮನೆಗಳಿಗೆ ಬದಲಾಗಿ, ಇಟ್ಟಿಗೆಗಳಿಂದ ಕಟ್ಟಿಕೊಂಡ ಮನೆಗಳು ಎದ್ದಿದ್ದವು. ಸಿಮೆಂಟು ನೆಲ, ಮರದ ಬಾಗಿಲುಗಳು ಹೊಂದಿದ್ದ ಆ ಮನೆಗಳಲ್ಲಿ ಬಿಸಿಲಿನ ತಾಪ ಸಾಕಷ್ಟು ಕಡಿಮೆಯಾಗಿತ್ತು. ಜೋಸ್ ಆರ್ಕಾಡಿಯೋನ ಕಾಲದ ಏನಾದರೂ ಉಳಿದಿದೆಯೆಂದರೆ ಧೂಳಿನ ಬಾದಾಮಿ ಮರಗಳು. ಎಂತಹ ಭಯಾನಕ ಉತ್ಪಾತಗಳನ್ನೂ ಸಹಿಸಿಕೊಳ್ಳುವಷ್ಟು ಸಾಮರ್ಥ್ಯ ಹೊಂದಿದ್ದವು. ಮತ್ತೊಂದೆಂದರೆ, ದೋಣಿ ಮಾರ್ಗವನ್ನು ಏರ್ಪಡಿಸಲು ಜೋಸ್ ಆರ್ಕಾಡಿಯೊ ಸೆಗುಂಡೊ ಪ್ರಯತ್ನಿಸುತ್ತಿದ್ದಾಗ, ಇತಿಹಾಸಪೂರ್ವ ಕಲ್ಲುಗಳಿದ್ದ ತಿಳಿನೀರಿನ ನದಿಯೊಂದು. ಈ ಸಾಹಸ ಮುತ್ತಜ್ಜನ ಕನಸುಗಳಿಗಿಂತಲೂ ಹುಚ್ಚು ಸಾಹಸವೆನಿಸಿತ್ತು. ಬಂಡೆಗಳ ಸೆಳೆವುಗಳಿಂದ ಕೂಡಿದ್ದುದರಿಂದ ಮಕೊಂಡೊವನ್ನು ಸಮುದ್ರಕ್ಕೆ ಜೋಡಿಸುವುದು ಒಂದು ಸವಾಲಾಗಿತ್ತು ಮತ್ತು ಅಸಾಧ್ಯವೂ ಆಗಿತ್ತು. ಆದರೆ ಜೋಸ್ ಆರ್ಕಾಡಿಯೊ ಸೆಗುಂಡೊ ಹುಚ್ಚು ಸಾಹಸ

ಮತ್ತು ಹಠಮಾರಿತನದಿಂದ ತನ್ನ ಯೋಜನೆಯನ್ನು ಮುಂದುವರೆಸಿದ. ಅಲ್ಲಿಯವರೆಗೆ ಅವನಲ್ಲಿ ಕಲ್ಪನಾಶಕ್ತಿಯಿದೆಯೆಂಬುದೇ ಕಾಣಿಸುತ್ತಿರಲಿಲ್ಲ. ಪೆಟ್ರಾ ಕೋಟ್ಸ್ ಜೊತೆಗಿನ ಸಾಹಸ ಬಿಟ್ಟರೆ ಅವನಿಗೆ ಬೇರೆ ಹೆಣ್ಣಿನ ಪರಿಚಯ ಇರಲಿಲ್ಲ. ಮನೆತನದ ಇತಿಹಾಸದಲ್ಲಿಯೇ ಅವನಷ್ಟು ಸೌಮ್ಯ ಸ್ವಭಾವದವನು, ಕಾಳಗದ ಹುಂಜಗಳನ್ನು ಕೈಯ್ಯಲ್ಲಿ ಹಿಡಿಯಲೂ ಹೆದರುವವನನ್ನು ಉರ್ಸುಲಾ ನೋಡಿಯೇ ಇರಲಿಲ್ಲವೆಂದು ಭಾವಿಸಿದ್ದಳು. ಕರ್ನಲ್ ಅರೆಲಿಯಾನೊ ಬ್ಯುಂಡಿಯಾ, ಸಮುದ್ರದಿಂದ ಎಂಟು ಮೈಲಿಗಳ ದೂರದಲ್ಲಿ ಸ್ಪೇನಿನ ದೊಡ್ಡ ಹಡಗನ್ನು, ಯುದ್ಧದಲ್ಲಿ ತಾನು ಇದ್ದಲ್ಲಿನ ಚೌಕಟ್ಟನ್ನು ನೋಡಿದ್ದಾಗಿ ಹೇಳಿದಾಗ, ಅನೇಕರಿಗೆ ಆ ಕಥೆ ಅಚ್ಚರಿ ಮೂಡಿಸಿದರೆ, ಜೋಸದ ಆರ್ಕಾಡಿಯೊ ಸೆಗುಂಡೊಗೆ ಅರಿವು ಮೂಡಿಸಿತು. ತನ್ನ ಕೋಳಿಗಳನ್ನು ಅತಿ ಹೆಚ್ಚಿನ ಬೆಲೆಕೊಟ್ಟವರಿಗೆ ಮಾರಿದ. ಕೆಲಸಗಾರರನ್ನು ನೇಮಿಸಿಕೊಂಡ. ಬೇಕಾದ ಉಪಕರಣಗಳನ್ನು ಕೊಂಡ, ಕಷ್ಟಕರವಾದ ಕಲ್ಲು ಒಡೆಯುವ ಕೆಲಸಕ್ಕೆ ಹೊರಟು ಕಾಲುವೆಗಳನ್ನು ಅಗೆದ ಜಲಪಾತಗಳನ್ನು ಅಂಕೆಗೆ ಒಳಪಡಿಸುವ – ಎಲ್ಲ ಬಗೆಯ ಕೆಲಸಗಳಲ್ಲಿ ತೊಡಗಿದ. "ಇದೆಲ್ಲ ನನಗೆ ಬಾಯಿ ಪಾಠವಾಗಿದೆ. ಸರಿದು ಹೋದ ಸಮಯ ಮತ್ತೆ ಮರುಕಳಿಸಿದೆ ಎನಿಸುತ್ತಿದೆ ನನಗೆ" ಎಂದಳು ಉರ್ಸುಲಾ. ನದಿ ಪ್ರಯಾಣಕ್ಕೆ ಅನುಕೂಲವಾಗಿದೆ ಎನಿಸಿದಾಗ ಜೋಸ್ ಆರ್ಕಾಡಿಯೊ ಸೆಗುಂಡೊ ತನ್ನ ಸೋದರನಿಗೆ ಹೇಳಿದಾಗ, ಅವನು ಯೋಜನೆಯನ್ನು ಪೂರ್ಣಗೊಳಿಸಲು ಸಹಾಯವಾಗುವಂತೆ ಹಣವನ್ನು ನೀಡಿದ. ಅದನ್ನು ತೆಗೆದುಕೊಂಡು ಬಹಳ ದಿನ ಕಾಣಿಸಿಕೊಳ್ಳಲೇ ಇಲ್ಲ. ದೋಣಿಯನ್ನು ಕೊಂಡುಕೊಳ್ಳಬೇಕೆಂದು ಹೇಳಿದ್ದು, ಸೋದರನಿಂದ ಹಣ ಕೀಳಲು ಹೂಡಿದ ಉಪಾಯವೆಂದೇ ತಿಳಿಯಲಾಗಿತ್ತು. ಆದರೆ ವಿಚಿತ್ರವಾದ ದೋಣಿಯೊಂದು ಊರನ್ನು ಸಮೀಪಿಸುತ್ತಿದೆ ಎಂಬ ಸುದ್ದಿ ಬರುತ್ತಿದ್ದಂತೆ ಮಕೊಂಡೊ ಜನ, ಜೋಸ್ ಆರ್ಕಾಡಿಯೊ ಬ್ಯುಂಡಿಯಾನ ಬೃಹತ್ ಯೋಜನೆಗಳನ್ನು ಮರೆತಿದ್ದವರು, ಕುತೂಹಲದಿಂದ ನದಿ ದಂಡೆ ಕಡೆ ಓಡಿದರು. ಬಿಟ್ಟ ಕಣ್ಣುಗಳಿಂದ, ನಂಬಲಾಗದ ಬೆರಗಿನಿಂದ, ಮೊದಲ ಮತ್ತು ಕಡೆಯದಾದ ದೋಣಿ ಬಂದು ನಿಂತುದನ್ನು ನೋಡಿದರು. ಅದೊಂದು ಬಹು ದೊಡ್ಡ ಗಾತ್ರದ ಮರದ ದಿಮ್ಮಿಯಾಗಿದ್ದು, ಅದನ್ನು ಇಪ್ಪತ್ತು ಮಂದಿ ಹಗ್ಗಗಳಿಂದ ಕಟ್ಟಿ ಎಳೆಯುತ್ತಿದ್ದರು. ಕಣ್ಣುಗಳಲ್ಲಿ ಹೊಳಪನ್ನು ತುಂಬಿಕೊಂಡಿದ್ದ ಜೋಸ್ ಆರ್ಕಾಡಿಯೊ ಸೆಗುಂಡೊ ಅಲ್ಲಿನವರಿಗೆ ಅದನ್ನು ಹೇಗೆ ನಡೆಸಬೇಕೆಂಬುದನ್ನು ನಿರ್ದೇಶಿಸುತ್ತಿದ್ದ. ಅವನೊಂದಿಗೆ ಬಂದಿದ್ದ ಒಂದು ಗುಂಪು ಹೆಂಗಸರು ಬಿಸಿಲಿನಿಂದ ರಕ್ಷಣೆ ಪಡೆಯಲು ಬಣ್ಣದ ಛತ್ರಿಗಳನ್ನು ಹಿಡಿದಿದ್ದರು, ಭುಜಗಳ ಮೇಲೆ ನುಣುಪಾದ ಕರವಸ್ತ್ರಗಳನ್ನು ಕಟ್ಟಿಕೊಂಡಿದ್ದರು. ಮುಖಕ್ಕೆ ಬಣ್ಣದ ಕ್ರೀಮ್ ಹಚ್ಚಿದ್ದರು. ಕೂದಲಲ್ಲಿ ನಿಜವಾದ ಹೂಗಳನ್ನು ಇರಿಸಿಕೊಂಡಿದ್ದರು. ಹಲ್ಲುಗಳಿಗೆ ವಜ್ರಲೇಪ, ತೋಳುಗಳಲ್ಲಿ ಚಿನ್ನದ ಹಾವುಗಳನ್ನು ಇರಿಸಿಕೊಂಡಿದ್ದರು. ಜೋಸ್ ಆರ್ಕಾಡಿಯೋಗೆ ಆ ಮರದ ದಿಮ್ಮಿಯೊಂದನ್ನು ಮಾತ್ರವೇ ಮಕೊಂಡೊಗೆ ತರಲು ಸಾಧ್ಯವಾಗಿತ್ತು. ಅದು ಒಂದೇ ಒಂದು ಬಾರಿ ಮಾತ್ರ. ಆದರೂ ಅವನು ತನ್ನ ಸೋಲನ್ನು ಸೋಲೆಂದು ಪರಿಗಣಿಸಿರಲೇ ಇಲ್ಲ. ಬದಲಾಗಿ, ತನ್ನ ಇಚ್ಛಾಶಕ್ತಿಗೆ ದೊರೆತ ಗೆಲುವೆಂದು ಬೀಗಿದ. ತನ್ನ ಸೋದರನಿಗೆ ಸುಳ್ಳು ಲೆಕ್ಕಗಳನ್ನು ಕೊಟ್ಟು, ಕೂಡಲೇ ಮತ್ತೆ ತನ್ನ ಮಾಮೂಲಿ ವೃತ್ತಿಯಾದ

ಹುಂಜಕಾಳಗದಲ್ಲಿ ಮುಳುಗಿದ. ದುರಾದೃಷ್ಟಕರವಾದ ಆ ಸಾಹಸದಿಂದ ಆದ ಒಂದೇ ಒಂದು ಪ್ರಯೋಜನವೆಂದರೆ ಊರಿನಲ್ಲಿ ಹೊಸಗಾಳಿ ಬೀಸಿತು. ಫ್ರಾನ್ಸಿನಿಂದ ಬಂದ ಆ ಹೆಂಗಸರು, ತಮ್ಮ ಅದ್ಭುತವಾದ ಕಲೆಯಿಂದ, ಸಾಂಪ್ರದಾಯಿಕ ಪ್ರೀತಿಯ ಶೈಲಿಯನ್ನು ಪರಿವರ್ತಿಸಿತು. ಅವರ ಸಾಮಾಜಿಕ ಕಾಳಜಿ ಕತಾವುರೆಯ ಹಳೆಯ ಮಾದರಿಯ ಅಂಗಡಿಯನ್ನು ಮುಚ್ಚುವಂತೆ ಮಾಡಿತು. ಅಲ್ಲಿನ ಬೀದಿಗಳನ್ನು ಜಪಾನಿ ಲ್ಯಾಂಟರ್ನ್‌ಗಳಾಗಿ ಮತ್ತು ಮೈಮರೆಸುವ ವಾದ್ಯಗಳ ಬಜಾರನ್ನಾಗಿ ರೂಪಾಂತರಗೊಳಿಸಿತು. ಇಡೀ ಮಕೊಂಡೊ ಭಾವೋನ್ಮಾದದಲ್ಲಿ ಮುಳುಗುವಂತಹ ರೀತಿಯಲ್ಲಿ ಕಾರ್ನಿವಾಲನ್ನು ಆಯೋಜಿಸಿದ್ದು ಕೂಡಾ ಅವರೆ. ಮೂರು ದಿನಗಳ ಈ ಉನ್ಮಾದದ ಪರಿಸರದಲ್ಲಿ ಅರಲಿಯಾನೊ ಸೆಗುಂಡೋಗೆ ಫರ್ನಾಂಡ ದೆಲ್ ಕಾರ್ಪಿಯೋಳನ್ನು ಭೇಟಿಯಾಗುವ ಅವಕಾಶ ದೊರೆಯಿತು.

ರೆಮೆಡಿಯೋಸ್ ದ ಬ್ಯೂಟಿಯನ್ನು ಸೌಂದರ್ಯ ರಾಣಿಯೆಂದು ಘೋಷಿಸಲಾಯಿತು. ಉರ್ಸುಲಾಗೆ ಅವಳ ಮರಿಮಗಳು ಮೂಕ ವಿಸ್ಮಿತರನ್ನಾಗಿಸುವ ಸೌಂದರ್ಯದಿಂದ ಹೆದರಿಕೆ ಆಯಿತಾದರೂ ಆಯ್ಕೆಯನ್ನು ತಡೆಯುವುದಾಗಲಿಲ್ಲ. ಅಲ್ಲಿವರೆಗೆ ಅವಳನ್ನು ಎಲ್ಲಿಯೂ ಹೊರಗೆ ಬಿಡುತ್ತಿರಲಿಲ್ಲ. ಹೋಗಲೇಬೇಕಾದಾಗ ಮುಖವನ್ನು ಮುಚ್ಚಿಕೊಂಡು ಅಮರಾಂತಳ ಜೊತೆ ಹೋಗುತ್ತಿದ್ದಳು. ಕಪ್ಪು ಶಾಲಿನಿಂದ ಅಮರಾಂತ ಅವಳ ಮುಖವನ್ನು ಮರೆಮಾಡುತ್ತಿದ್ದಳು. ಕೆಲವರು ಕೆಟ್ಟ ಗಂಡಸರು ಪಾದ್ರಿಗಳ ವೇಷದಲ್ಲಿ, ಅವಳ ಒಂದು ಕ್ಷಣದ ದರ್ಶನವಾದರೂ ಸಿಗಲೆಂಬ ಕಾರಣಕ್ಕೆ ಚರ್ಚಿಗೆ ಹೋಗುತ್ತಿದ್ದರು. ದಂತಕಥೆಯಂತಿದ್ದ ಅವಳ ಸೌಂದರ್ಯದ ಬಗ್ಗೆ ಇಡೀ ಆ ಜೌಗುಪ್ರದೇಶದಲ್ಲಿ ಚರ್ಚೆಯಾಗುತ್ತಿತ್ತು. ಅವರು ಹಾಗೆ ಮಾಡಲು ಬಹಳ ಕಾಲ ಕಾಯಬೇಕಾಯಿತು. ಆದರೆ ಅವರು ಅವಳನ್ನು ಕಾಣದಿದ್ದರೆ ಒಳ್ಳೆಯದಾಗುತ್ತಿತ್ತೆಂದು, ನಿದ್ದೆಬಾರದೆ ನರಳಿದಾಗ ಅಂದುಕೊಳ್ಳುತ್ತಿದ್ದರು. ನೆಮ್ಮದಿಯ ನಿದ್ದೆಯನ್ನೇ ಕಳೆದುಕೊಂಡರು. ಅಂಥವರಲ್ಲಿ ಒಬ್ಬ ವಿದೇಶಿ ಅವಳನ್ನು ನೋಡಿದ್ದೆ ಮೈಮನಗಳ ಸ್ತಿಮಿತವನ್ನೇ ಕಳೆದುಕೊಂಡ. ವರ್ಷಗಳಾದ ಮೇಲೆ, ರೈಲಿನ ಹಳಿಗಳ ಮೇಲೆ ಮಲಗಿ ತುಂಡು ತುಂಡಾಗಿ ಬಿದ್ದಿದ್ದ. ಮೊದಲ ಬಾರಿ ಅವನನ್ನು ಚರ್ಚಿನಲ್ಲಿ ಹಸಿರು ವೆಲ್ವೆಟ್ ಸೂಟು ಮತ್ತು ಎಂಬ್ರಾಯಿಡರಿ ಮಾಡಿದ ವೆಸ್ಟ್‌ನೊಂದಿಗೆ ನೋಡಿದ ಜನಕ್ಕೆ ಅವನು ಪರದೇಶದವನೆಂಬುದಾಗಲಿ, ಬಹಳ ದೂರದಿಂದ ಬಂದಿದ್ದಾನೆಂಬುದಾಗಲಿ ಯಾರಿಗೂ ಗೊತ್ತಿರಲಿಲ್ಲ. ಇವನು ರೆಮೆಡಿಯೋಸ್ ದ ಬ್ಯೂಟಿಯ ಸೌಂದರ್ಯಕ್ಕೆ ಮರುಳಾಗಿ ಹೋಗಿದ್ದ. ಬಹಳ ಸುಂದರವಾಗಿದ್ದ, ನೋಡಲು ಆಕರ್ಷಕವಾಗಿದ್ದ. ತುಂಬಾ ಗಂಭೀರ ನಿಲುವು. ಇದೆಲ್ಲದರೊಂದಿಗೆ ನೋಡಿದಾಗ ಇವನ ಮುಂದೆ ಪೀತ್ರೋ ಕ್ರೆಸ್ಪಿ ಏನೇನೂ ಆಗಿರಲಿಲ್ಲ. ಎಷ್ಟೋ ಹೆಂಗಸರು ತಮ್ಮತಮ್ಮ ನಡುವೆ ಪಿಸುಮಾತಿನಲ್ಲಿ ಅವನನ್ನು ಹೊಗಳುತ್ತ ಮುಸಿಮುಸಿ ನಗುತ್ತಿದ್ದರು. ಅಲ್ಲದೆ ನಿಜವಾಗಿಯೂ ಶಾಲುವನ್ನು ಅವನಿಗೇ ಹೊದಿಸಬೇಕಿತ್ತು ಎಂದುಕೊಂಡರು. ಮಕೊಂಡೊದಲ್ಲಿ ಅವನು ಯಾರೊಂದಿಗೂ ಮಾತನಾಡುತ್ತಿರಲಿಲ್ಲ. ಭಾನುವಾರಗಳಲ್ಲಿ ಬೆಳಿಗ್ಗೆ, ಫೇರಿಟೇಲ್ ಕಥೆಗಳಲ್ಲಿನ ರಾಜಕುಮಾರನಂತೆ, ಬೆಳ್ಳಿ ಜೀನು ಹಾಕಿದ ಕುದುರೆಯೇರಿ, ಪ್ರಾರ್ಥನೆ ಮುಗಿಸಿ ಊರಿನಿಂದ ಹೊರಗೆ ಹೋಗುತ್ತಿದ್ದ.

ಚರ್ಚ್‌ನಲ್ಲಿ ಕಾಣಿಸಿಕೊಂಡ ದಿನದಿಂದ ಜನರಿಗೆ ಅವನ ಮತ್ತು ರೆಮೆಡಿಯೋಸ್ ದ ಬ್ಯೂಟಿ ನಡುವೆ ಮೌನ, ರಹಸ್ಯ ಪ್ರೀತಿಯ ಸಂಬಂಧಗಳು ಗಟ್ಟಿಗೊಳ್ಳುತ್ತಾ, ಪ್ರೀತಿಯ ಪರಾಕಾಷ್ಠಯಲ್ಲಿ ಮುಗಿಯುತ್ತದೆ ಇಲ್ಲವೆ ಸಾವಿನಲ್ಲಿ ಕೊನೆಯಾಗುತ್ತದೆ ಎಂದು ಆಗಲೇ ತೀರ್ಮಾನವನ್ನು ತಲುಪಿದ್ದರು. ಆರನೆ ಭಾನುವಾರ ಅವನು ಹಳದಿ ಗುಲಾಬಿಯೊಂದಿಗೆ ಕಾಣಿಸಿಕೊಂಡ, ಪ್ರಾರ್ಥನೆಯನ್ನು ಮಾಮೂಲಿನಂತೆ ನಿಂತು ಕೇಳಿಸಿಕೊಂಡ. ನಂತರ ರೆಮೆಡಿಯೋಸ್ ದ ಬ್ಯೂಟಿಯ ಮುಂದೆ ನಿಂತುಕೊಂಡು ಹಳದಿ ಗುಲಾಬಿಯೊಂದನ್ನು ನೀಡಿದ. ಅವಳು ಅದನ್ನು ಸ್ವೀಕರಿಸಲು ಸಿದ್ಧವಾಗಿ ನಿಂತಂತೆ, ಸಹಜವಾಗಿಯೇ ಸ್ವೀಕರಿಸಿದಳು. ಮುಖದ ಮೇಲಿನ ಮುಸುಕನ್ನು ಸರಿಸಿ ಮುಗುಳು ನಗೆಯೊಂದಿಗೆ ಧನ್ಯವಾದ ಹೇಳಿದಳು. ಅವಳು ಮಾಡಿದ್ದು ಅಷ್ಟೆ. ಕೇವಲ ಈತನಿಗೆ ಮಾತ್ರವೇ ಅಲ್ಲ, ಅವಳನ್ನು ನೋಡುವ ಅವಕಾಶ ಪಡೆದ ದುರಾದೃಷ್ಟ ಗಂಡಸರೊಂದಿಗೂ ಹೀಗೇ ನಡೆದುಕೊಳ್ಳುತ್ತಿದ್ದಳು. ಅಂದಿನಿಂದ ಆ ವ್ಯಕ್ತಿ, ರೆಮೆಡಿಯೋಸ್ ದ ಬ್ಯೂಟಿಯ ಕೋಣೆಯ ಕಿಟಕಿಯ ಸಮೀಪದಲ್ಲಿ ವಾದ್ಯಗೋಷ್ಠಿಯನ್ನು ವ್ಯವಸ್ಥೆ ಮಾಡಿದ್ದ ಕೆಲವೊಮ್ಮೆ ಈ ವಾದ್ಯಗೋಷ್ಠಿ ಬೆಳಗಿನತನಕ ಮುಂದುವರೆಯುತ್ತಿತ್ತು. ಅರೆಲಿಯಾನೊ ಸೆಗುಂಡೊ ಮಾತ್ರವೇ ಅವನ ಬಗ್ಗೆ ಮರುಕ ವ್ಯಕ್ತಪಡಿಸಿದ್ದ, ಹಾಗೂ ಅವಳ ಹಿಂದೆ ಬಿದ್ದ ಅವನ ಪಟ್ಟನ್ನು ಬಿಡಿಸಲು ಪ್ರಯತ್ನಿಸಿದ. "ನಿನ್ನ ಸಮಯವನ್ನು ಇನ್ನೂ ಹಾಳು ಮಾಡಿಕೊಳ್ಳಬೇಡ, ಈ ಮನೆಯಲ್ಲಿನ ಹೆಂಗಸರು ಹೇಸರಗತ್ತೆಗಳಿಗಿಂತಲೂ ಕಡೆ" ಎಂದು ಒಂದು ದಿನ ರಾತ್ರಿ ಹೇಳಿದ. ಅವನೆಡೆಗೆ ಸ್ನೇಹ ಹಸ್ತವನ್ನು ಚಾಚಿದ. ಷಾಂಪೇನ್ ಪಾರ್ಟಿಗೆಂದು ಆಹ್ವಾನಿಸಿದ, ತನ್ನ ಕುಟುಂಬ ಹೆಂಗಸರ ನಿಷ್ಠುರ ಸ್ವಭಾವದ ಬಗ್ಗೆ ತಿಳಿಸಿ ಹೇಳಿದ. ಆದರೆ ಅವನ ಹಠವನ್ನು ಮುರಿಯಲು ಸಾಧ್ಯವಾಗಲಿಲ್ಲ. ರಾತ್ರಿಯ ವಾದ್ಯಗೋಷ್ಠಿಗಳಿಂದ ಬೇಸತ್ತ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಅವನ ಈ ಪ್ರೀತಿಯ ಹುಚ್ಚನ್ನು ಒಂದೆರಡು ಪಿಸ್ತೂಲಿನ ಗುಂಡುಗಳಿಂದ ಸರಿಪಡಿಸುತ್ತೇನೆ ಎಂದುಕೊಂಡ. ಕರುಣಾಜನಕ ನೈತಿಕ ಭ್ರಷ್ಟತೆ ಹೊರತು, ಅವನನ್ನು ಯಾವುದೇ ರೀತಿಯಲ್ಲೂ ಅದರಿಂದ ದೂರವಿರಿಸಲು, ಅವನಿಂದ ಆಗಲಿಲ್ಲ. ಅಚ್ಚುಕಟ್ಟಾಗಿ ಬಟ್ಟೆ ತೊಡುತ್ತಿದ್ದವನು ಕೊಳಕು ಚಿಂದಿ ಬಟ್ಟೆಗಳಲ್ಲಿ ಕಾಣಿಸುತ್ತಿದ್ದ, ಅವನು ಯಾವ ದೇಶದಿಂದ ಬಂದಿದ್ದಾನೆಂಬುದು ಯಾರಿಗೂ ತಿಳಿದಿರಲಿಲ್ಲವಾದರೂ, ಸ್ವಂತ ಊರಿನಲ್ಲಿದ್ದ ಆಸ್ತಿಪಾಸ್ತಿ ಅಧಿಕಾರವನ್ನೆಲ್ಲ ತ್ಯಜಿಸಿ ಬಿಟ್ಟಿದ್ದಾನೆಂಬ ವದಂತಿಗಳು ಹರಡಿದ್ದವು. ವಿನಾಕಾರಣ ವಾದ ಮಾಡುತ್ತ, ಜಗಳವಾಡುತ್ತ, ಕತಾರಿನೊ ಅಂಗಡಿಯಲ್ಲಿ ತನ್ನ ಕೊಳಕಲ್ಲಿ ತಾನೇ ಹೊರಳಾಡುತ್ತಿದ್ದ. ಆದರೆ ದುರಂತವೆಂದರೆ, ರೆಮೆಡಿಯೋಸ್ ಈ ಪ್ರಹಸನವನ್ನೂ ನೋಡಲಿಲ್ಲ ಮತ್ತು ರಾಜಕುಮಾರನಂತೆ ಬಟ್ಟೆ ತೊಟ್ಟು ಚರ್ಚಿಗೆ ಬಂದಾಗಲೂ ನೋಡಲಿಲ್ಲ. ಗುಲಾಬಿಯನ್ನು ಯಾವುದೇ ಕೆಡಕಿನ ಮನಸ್ಸಿಲ್ಲದೆ ಸ್ವೀಕರಿಸಿದ್ದಳು. ಅಲ್ಲದೆ ಇವನ ಅತಿರೇಕದ ನಡವಳಿಕೆ ಅವಳಿಗೆ ತಮಾಶೆಯಾಗಿ ಕಾಣಿಸಿತು. ಮುಖದ ಮೇಲಿನ ಶಾಲನ್ನೂ ಸರಿಸಿದ್ದು ಅವನನ್ನು ಸರಿಯಾಗಿ ನೋಡಲೆಂದಷ್ಟೆ ಹೊರತು ಅವಳ ಮುಖವನ್ನು ಕಾಣಿಸಲಿಲ್ಲ.

ವಾಸ್ತವವಾಗಿ ರೆಮೆಡಿಯೋಸ್ ದ ಬ್ಯೂಟಿ ಈ ಪ್ರಪಂಚಕ್ಕೆ ಸೇರಿದವಳಾಗಿರಲಿಲ್ಲ. ವಯಸ್ಸಿಗೆ ಬರುವವರೆಗೂ, ಬಂದ ಮೇಲೂ ಸಾಂತಾ ಸೋಫಿಯಾ ದ ಲಾ ಪೀದಾದಳೇ

ಅವಳಿಗೆ ಸ್ನಾನಮಾಡಿಸುತ್ತಿದ್ದಳು. ಬಟ್ಟೆ ಹಾಕುತ್ತಿದ್ದಳು. ಅವಳು ತನ್ನ ಬಗ್ಗೆ ತಾನೇ ನೋಡಿಕೊಳ್ಳಲು ಸಾಧ್ಯವಾಗುತ್ತಿದ್ದಾಗಲೂ ಅವಳ ಮೇಲೆ ಕಣ್ಣಿಡಬೇಕಾಗುತ್ತಿತ್ತು. ಯಾಕೆಂದರೆ ತಾನು ವಿಸರ್ಜಿಸಿದ ಅಮೇಧ್ಯದಿಂದ ಗೋಡೆಗಳ ಮೇಲೆಲ್ಲ ಪುಟ್ಟಪುಟ್ಟ ಪ್ರಾಣಿಗಳ ಚಿತ್ರಗಳನ್ನು ಬಿಡಿಸುತ್ತಿದ್ದಳು. ಇಪ್ಪತ್ತರ ವಯಸ್ಸಾದರೂ ಓದುಬರಹ ಕಲಿತಿರಲಿಲ್ಲ. ಊಟದ ಮೇಜಿನ ಬಳಿ ಬೆಳ್ಳಿಯ ವಸ್ತುಗಳನ್ನು ಬಳಸುವುದನ್ನು ತಿಳಿದಿರಲಿಲ್ಲ. ಸಾಂಪ್ರದಾಯಿಕ ರೀತಿ ನೀತಿಗಳನ್ನೆಲ್ಲ ಬಿಸಾಡಿ, ಮನೆತುಂಬ ಬೆತ್ತಲೆಯಾಗಿ ಓಡಾಡುತ್ತಿದ್ದಳು. ಯುವ ಸೇನಾಧಿಕಾರಿ ಅವಳಲ್ಲಿ ತನ್ನ ಪ್ರೀತಿಯನ್ನು ಹೇಳಿಕೊಂಡಾಗ, ಅವನ ಅವಿವೇಕಕ್ಕೆ ಹೆದರಿ ಅವನನ್ನು ನಿರಾಕರಿಸಿದಳು. "ನೋಡು ಅವನು ಎಷ್ಟು ಪೆದ್ದನಾಗಿದ್ದಾನೆ" ಎಂದು ಅಮರಾಂತಳಲ್ಲಿ ಹೇಳಿಕೊಂಡಳು. ಮುಂದುವರೆದು, "ನನ್ನಿಂದಾಗಿ ಅವನು ಸಾಯುತ್ತಾನೆಂದು ಹೇಳುತ್ತಾನೆ. ನಾನೇನೋ ಅವನಿಗೆ ಹೊಟ್ಟೆ ಶೂಲೆ ಉಂಟುಮಾಡಿದ್ದೇನೆ ಅನ್ನೋ ಹಾಗೆ" ಎಂದು ವಿವರಿಸಿದಳು. ನಿಜವಾಗಿಯೂ ಅವನು ಮರುದಿನ ಅವಳ ಕಿಟಕಿಯ ಬಳಿ ಸತ್ತುಬಿದ್ದಿದ್ದ. ರೆಮೆಡಿಯೋಸ್ ದ ಬ್ಯೂಟಿ ತನಗೆ ಅವನ ಮೇಲೆ ಮೊದಲಿದ್ದ ಅಭಿಪ್ರಾಯವನ್ನು ಸ್ಥಿರಪಡಿಸಿದಳು.

"ನೋಡು, ನಿಜವಾಗಿಯೂ ಅವನೊಬ್ಬ ಪೆದ್ದ" ಎಂದು ಹೇಳಿದಳು.

ಅವಳಿಗೆ ಏನೋ ಹೊಳಹಿನ ಸಾಕ್ಷಾತ್ಕಾರವಾದಂತೆ. ಅವಳು ಕಾಣುವುದರ ಆಚೆಗಿನ ವಾಸ್ತವತೆಗಳನ್ನು ಕಾಣಲು ಸಮರ್ಥಳಾದಳು. ಕಡೆ ಪಕ್ಷ ಕರ್ನಲ್ ಅರೆಲಿಯಾನೊ ಬ್ಯುಂಡಿಯಾಗೆ ಅವಳು ಎಲ್ಲರೂ ಭಾವಿಸಿದಂತೆ ಬುದ್ಧಿಮಾಂದ್ಯಳಾಗಿರದೆ ಅದಕ್ಕೆ ವಿರುದ್ಧವಾಗಿದ್ದಳು. "ಅವಳು ಹೇಗೆಂದರೆ, ಇಪ್ಪತ್ತು ವರ್ಷಗಳ ಯುದ್ಧದ ನಂತರ ಹಿಂತಿರುಗಿದ್ದಾಳೆ ಎನಿಸುತ್ತದೆ" ಎಂದು ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಹೇಳುತ್ತಿದ್ದ. ಮನೆತನದಲ್ಲಿ ಅತ್ಯಂತ ಪವಿತ್ರಳಾದ ಒಬ್ಬಳನ್ನು ಕರುಣಿಸಿದ್ದಕ್ಕಾಗಿ ಉರ್ಸುಲಾ ದೇವರಿಗೆ ಕೃತಜ್ಞತೆ ಸಲ್ಲಿಸಿದಳಾದರೂ ಅವಳ ಅಲೌಕಿಕ ಸೌಂದರ್ಯದಿಂದ ಅಸ್ವಸ್ಥಳಾಗಿದ್ದಳು. ಅದು ಅವಳಿಗೆ ಬೇಡದ ಗುಣವಾಗಿತ್ತು. ಅವಳ ಮುಗ್ಧತೆಯ ಮಧ್ಯೆ ಅದೊಂದು ಭಯಾನಕ ಬಲೆಯಾಗಿತ್ತು. ಆ ಕಾರಣಕ್ಕಾಗಿಯೇ ಅವಳನ್ನು ಹೊರ ಪ್ರಪಂಚದಿಂದ, ಯಾವುದೇ ಪ್ರಲೋಭನೆಗಳಿಗೆ ಗುರಿಯಾಗದಂತೆ, ಕಾಪಾಡಿಕೊಂಡು ಬಂದಿದ್ದಳು. ಈಗಷ್ಟೇ ಅಲ್ಲ, ಅವಳು ಗರ್ಭದಲ್ಲಿ ಇರುವಾಗಿನಿಂದ ಯಾವುದೇ ಬಗೆಯ ಸೋಂಕಿಗೆ ಒಳಗಾಗಿರಲಿಲ್ಲ. ಕಾರ್ನಿವಾಲ್ ಸಂಭ್ರಮಾಚರಣೆಯಲ್ಲಿ ಅವಳನ್ನು ಸೌಂದರ್ಯ ರಾಣಿಯೆಂದು ಆಯ್ಕೆ ಮಾಡುತ್ತಾರೆಂಬ ಕಲ್ಪನೆಯೂ ಅವಳಿಗೆ ಇರಲಿಲ್ಲ. ಆದರೆ ಅರೆಲಿಯಾನೊ ಸೆಗುಂಡೊ ಹುಲಿವೇಷದಿಂದ ಉತ್ಸಾಹಗೊಂಡಿದ್ದವನು ಫಾದರ್ ಆ್ಯಂಟೋನಿಯೊ ಇಸಾಬೆಲ್‌ರನ್ನು ಮನೆಗೆ ಕರೆತಂದು, ಕಾರ್ನಿವಾಲ್ ಪೈಶಾಚಿಕ ಹಬ್ಬವಲ್ಲ ಅದೂ ಕೂಡ ಕ್ಯಾಥೊಲಿಕ ಸಂಪ್ರದಾಯದ್ದೆಂದು ಉರ್ಸುಲಾಳನ್ನು ಸಮಾಧಾನ ಮಾಡಿದ್ದ. ಕಡೆಗೆ ಅವಳು ಸಮಾಧಾನಗೊಂಡಿದ್ದರೂ ಒಲ್ಲದ ಮನಸ್ಸಿನಿಂದ ರಾಣಿ ಪಟ್ಟಕ್ಕೆ ಒಪ್ಪಿಗೆ ನೀಡಿದಳು.

ರೆಮೆಡಿಯೋಸ್ ದ ಬ್ಯೂಟಿ ಈ ಹಬ್ಬದ ಚಕ್ರವರ್ತಿನಿಯಾಗುತ್ತಾಳೆಂಬ ಸುದ್ದಿ ಜೌಗುಪ್ರದೇಶದ ಗಡಿಗಳನ್ನೂ ದಾಟಿ, ಅವಳ ಸೌಂದರ್ಯದ ಬಗ್ಗೆ ತಿಳಿದಿರದ ದೂರ

ದೂರ ಪ್ರದೇಶಗಳಿಗೂ ವ್ಯಾಪಿಸಿತು. ಜನರಲ್ಲಿ ಅತ್ಯಂತ ಕುತೂಹಲವನ್ನು ಆತಂಕವನ್ನೂ ಮೂಡಿಸಿತು. ಅವಳ ಕಡೆಯ ಹೆಸರನ್ನು ಕೆಲವರು ವ್ಯವಸ್ಥೆಯನ್ನು ಬುಡಮೇಲಾಗಿಸುವ ಸಂಕೇತವೆಂದು ಭಾವಿಸಿದರು. ಆದರೆ ಆ ಬಗೆಯ ಆತಂಕಕ್ಕೆ ಯಾವುದೇ ಕಾರಣವಿರಲಿಲ್ಲ. ಆ ಸಮಯದಲ್ಲಿ ಅಪಾಯ ಆತಂಕಗಳಿಗೆ ಒಳಗಾಗದಿದ್ದ ಒಬ್ಬನೇ ವ್ಯಕ್ತಿಯೆಂದರೆ ವಯಸ್ಸಾಗಿದ್ದ ಮತ್ತು ಭ್ರಮನಿರಸನಗಳಿಂದ, ಜಗತ್ತಿನೊಂದಿಗಿನ ಎಲ್ಲ ಸಂಬಂಧಗಳಿಂದ ದೂರವಿರುತ್ತಿದ್ದ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ! ಅವನ ಸಂಬಂಧ ಇದ್ದುದು ಈಗ ಕೇವಲ ವರ್ಕ್‌ಷಾಪ್ ಮತ್ತು ಚಿನ್ನದ ಮೀನುಗಳ ವ್ಯಾಪಾರದೊಂದಿಗೆ ಮಾತ್ರ. ಶಾಂತಿಯ ಪ್ರಾರಂಭದ ದಿನಗಳಲ್ಲಿ ಮನೆಯ ಕಾವಲಿಗಿದ್ದವರಲ್ಲಿ ಒಬ್ಬ ಸೈನಿಕ ತಯಾರಾದ ಮೀನುಗಳನ್ನು ಜೌಗುಪ್ರದೇಶದ ಹಳ್ಳಿಗಳಲ್ಲಿ ಮಾರಿ, ಗಳಿಸಿದ ನಾಣ್ಯಗಳ ಮೂಟೆಯನ್ನು ಮತ್ತು ಸುದ್ದಿಯನ್ನು ಹೊತ್ತು ತರುತ್ತಿದ್ದ. ಕನ್ಸರ್ವೆಟೀವ್ ಸರಕಾರ, ಲಿಬರಲ್‌ಗಳ ಒತ್ತಾಸೆಯೊಂದಿಗೆ, ಪ್ರತಿಯೊಬ್ಬ ಅಧ್ಯಕ್ಷನಿಗೂ ನೂರು ವರ್ಷಗಳ ಅವಧಿ ಸಿಗುವಂತಾಗಲು ಕ್ಯಾಲೆಂಡರ್‌ನಲ್ಲಿ ತಿದ್ದುಪಡಿ ಮಾಡುತ್ತಿದ್ದಾರೆ ಎಂದು ಹೇಳುತ್ತಿದ್ದ. ಪೋಪ್ ಗುರು ಮತ್ತು ಪ್ರಭುತ್ವಗಳ ನಡುವಿನ ಕರಾರು ಪತ್ರಕ್ಕೆ ಕೊನೆಗೂ ಸಹಿ ಬಿತ್ತು. ಚರ್ಚಿನ ಪ್ರಧಾನಾಧಿಕಾರಿ ರೋಮ್‌ನಿಂದ ವಜ್ರ ಕಿರೀಟಿಯಾಗಿ, ಶುದ್ಧ ಚಿನ್ನದ ಸಿಂಹಾಸನದೊಂದಿಗೆ ಆಗಮಿಸಿದ. ಲಿಬರಲ್ ಪಕ್ಷದ ಮಂತ್ರಿಗಳು ಮೊಣಕಾಲೂರಿ ಆತನ ಉಂಗುರವನ್ನು ಚುಂಬಿಸುತ್ತಿರುವ ಭಾವಚಿತ್ರವನ್ನು ತೆಗೆಸಿಕೊಂಡರು. ಸ್ಪ್ಯಾನಿಷ್ ಕಂಪೆನಿಯ ಪ್ರಮುಖ ಹೆಂಗಸೊಬ್ಬಳು ರಾಜಧಾನಿಯಲ್ಲಿ ಹೋಗುತ್ತಿದ್ದಾಗ ಯಾರೋ ಅವಳನ್ನು, ಮುಸುಕು ಮನುಷ್ಯ ಅಪಹರಿಸಿದ್ದಾರೆ, ಮರು ಭಾನುವಾರ ಗಣತಂತ್ರದ ಅಧ್ಯಕ್ಷರ ಮುಂದೆ ಸಮ್ಮರ್ ಹೌಸ್‌ನಲ್ಲಿ ಬೆತ್ತಲೆಯಾಗಿ ನರ್ತಿಸಿದಳು. – ಇತ್ಯಾದಿ ಇತ್ಯಾದಿ ಸುದ್ದಿಗಳನ್ನೆಲ್ಲ ಆ ಸೈನಿಕ ತಂದು ವರದಿ ಒಪ್ಪಿಸುತ್ತಿದ್ದ. "ರಾಜಕೀಯದ ಬಗ್ಗೆ ನನ್ನ ಹತ್ತಿರ ಮಾತಾಡಬೇಡ.. ನಮ್ಮ ಕೆಲಸವೇನಿದ್ದರೂ ಪುಟ್ಟ ಮೀನುಗಳನ್ನು ಮಾರಿ ಬರುವುದು ಅಷ್ಟೆ!" ಎಂದು ಕರ್ನಲ್ ಅವನಿಗೆ ಹೇಳುತ್ತಿದ್ದ. ಈಗ ಅವನು ಬಹಳ ಶ್ರೀಮಂತನಾಗುತ್ತಿರುವುದರಿಂದ ಅವನಿಗೆ ದೇಶದ ವಿಚಾರಗಳನ್ನು ಕೇಳಿಸಿಕೊಳ್ಳುವುದು ಬೇಡವಾಗಿದೆ ಎನ್ನುವ ವದಂತಿಗಳು ಉರ್ಸುಲಾ ಕಿವಿಗೆ ಬಿದ್ದಾಗ ಅವಳಿಗೆ ನಗು ಬಂತು. ಹಾಗೆ ನೋಡಿದರೆ ಕರ್ನಲ್‌ನ ವ್ಯಾಪಾರದ ರೀತಿ ಏನೆಂಬುದೇ ಅವಳ ವ್ಯಾವಹಾರಿಕ ಬುದ್ಧಿಗೆ ಹೊಳೆಯಲಿಲ್ಲ. ಚಿನ್ನದ ಮೀನುಗಳನ್ನು ಮಾರಿ ಚಿನ್ನದ ನಾಣ್ಯಗಳನ್ನು ತರುವುದು, ಮತ್ತೆ ಆ ನಾಣ್ಯಗಳನ್ನು ಚಿನ್ನದ ಮೀನುಗಳಾಗಿ ತಯಾರಿಸುವುದು. ಇದು ಬಹಳ ಕಷ್ಟದ ಕೆಲಸ. ಆದರೂ ಅವನು ಹೀಗೆ ಮಾಡುತ್ತಿರುವುದು ತನ್ನನ್ನು ಕೆರಳಿಸುತ್ತಿರುವ ವಿಷವರ್ತುಲದ ಮಂದಿಯನ್ನು ಸಂತೃಪ್ತಿಪಡಿಸಲು ಇರಬಹುದೆ ಎನಿಸಿತು. ವಾಸ್ತವವಾಗಿ ಅವನಿಗೆ ವ್ಯಾಪಾರ ಬೇಕಿರಲಿಲ್ಲ. ಮಾಡಲು ಕೆಲಸವಷ್ಟೇ ಬೇಕಿತ್ತು. ಪೊರೆಗಳನ್ನು ಜೋಡಿಸಲು, ಅತ್ಯಂತ ಸೂಕ್ಷ್ಮವಾದ ಮಾಣಿಕ್ಯಗಳನ್ನು ಕಣ್ಣುಗಳಲ್ಲಿ ಹುದುಗಲು, ********ಗಳಿಗೆ ಮೆರುಗುಕೊಡಲು, ಈಜು ರೆಕ್ಕೆಗಳನ್ನು ಜೋಡಿಸಲು ಬಹಳಷ್ಟು ಏಕಾಗ್ರತೆ ಬೇಕಾಗುತ್ತಿತ್ತು. ಇಂಥದ್ದರಲ್ಲಿ, ಯುದ್ಧದ ಭ್ರಮನಿರಸನತೆಯನ್ನು ತುಂಬಿಕೊಳ್ಳಲು ಸೂಜಿಮೊನೆಯಷ್ಟೂ ಖಾಲಿ ಜಾಗ ಇರಲಿಲ್ಲ. ಅತ್ಯಂತ ಸೂಕ್ಷ್ಮವಾದ ಕಲಾವಂತಿಕೆಯನ್ನು ನಿರೀಕ್ಷಿಸುವ ಕೆಲಸಕ್ಕೆ ಎಲ್ಲಿಲ್ಲದ ಮಗ್ನತೆಯ ಅವಶ್ಯಕತೆಯಿತ್ತು.

ಇದರಿಂದಾಗಿ ಯುದ್ಧಗಳ ಅವಧಿಯಲ್ಲಿ ಇದ್ದುದಕ್ಕಿಂತ ಹೆಚ್ಚು ವಯಸ್ಸಾದವನಂತೆ ಕಾಣುತ್ತಿದ್ದ. ಅವನು ಕೆಲಸ ಮಾಡುವಾಗಿನ ಭಂಗಿಯಿಂದ ಬೆನ್ನುಮೂಳೆ ತಿರುಚಿತ್ತು. ಒಂದೇ ಸಮನೆ ಕಣ್ಣಲ್ಲಿ ಕಣ್ಣಿಟ್ಟು ಮಾಡುತ್ತಿದ್ದ ಕೆಲಸದಿಂದಾಗಿ ದೃಷ್ಟಿಗೂ ತೊಂದರೆಯಾಯಿತು. ಹೋದ ಸಲ ಅವನು ಯುದ್ಧ ಸಂಬಂಧವಾದ ಯಾವುದೋ ಒಂದು ವಿಚಾರದಲ್ಲಿ ಆಸಕ್ತಿ ತೋರಿಸಿದ್ದು, ಎರಡೂ ರಾಜಕೀಯ ಪಕ್ಷಗಳ ವರಿಷ್ಠರು, ನಿವೃತ್ತಿ ವೇತನವನ್ನು ಜೀವನ ಪರ್ಯಂತ ನೀಡಬೇಕೆಂಬ ಅರ್ಜಿಗೆ ಸಮ್ಮತಿ ಪಡೆಯಲು ಅವನ ಬೆಂಬಲ ಬಯಸಿ ಬಂದಿದ್ದರು. ಯಾವಾಗಲೂ ಭರವಸೆ ನೀಡಲಾಗುತ್ತಿತ್ತು. ಮತ್ತು ಜಾರಿಗೊಳಿಸಲಾಗುವುದೆಂದು ಹೇಳುತ್ತಲೇ ಇದ್ದರು. "ಅದನ್ನು ಮರೆತುಬಿಡಿ.... ನೀವೇ ನೋಡಿ, ನಾನು ಸಾಯುವವರೆಗೆ ಅದನ್ನು ನಿರೀಕ್ಷಿಸುತ್ತಾ ಹಿಂಸೆ ಪಡುವುದಕ್ಕಿಂತ ನಿವೃತ್ತಿ ವೇತನವನ್ನೇ ಧಿಕ್ಕರಿಸಿದೆ" ಎಂದು ಹೇಳಿದ. ಪ್ರಾರಂಭದಲ್ಲಿ ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್ ಸಂಜೆ ಹೊತ್ತಲ್ಲಿ ಅವನನ್ನು ಬಂದು ಭೇಟಿಯಾಗುತ್ತಿದ್ದ. ಮನೆಯ ಪ್ರವೇಶ ದ್ವಾರದಲ್ಲಿ ಕುಳಿತು ಹಿಂದಿನ ದಿನಗಳ ಬಗ್ಗೆ ಮಾತಾಡುತ್ತಿದ್ದರು. ಆದರೆ ಅಮರಾಂತಳಿಗೆ, ಅವನ ಬೋಳುತಲೆ ವಯಸ್ಸಿಗಿಂತ ಮೊದಲೇ ವಯಸ್ಸಾದವನಂತೆ ಕಾಣುತ್ತಿದ್ದ ನೋಟವನ್ನು ನೋಡಿದಾಗಲೆಲ್ಲ ಹಳೆಯ ನೆನಪುಗಳು ಮರುಕಳಿಸಿ ಹಿಂಸೆಯಾಗುತ್ತಿತ್ತು. ಅವನನ್ನು ಚುಚ್ಚು ಮಾತುಗಳಿಂದ ವ್ಯಂಗ್ಯೋಕ್ತಿಗಳಿಂದ ಹಿಂಸಿಸುತ್ತ, ವಿಶೇಷ ದಿನಗಳ ಹೊರತು ಬೇರೆ ದಿನಗಳಲ್ಲಿ ಬಾರದಂತೆ ಮಾಡಿದಳು. ಕೊನೆಗೆ ಅವನು ಪಾರ್ಶ್ವವಾಯುವಿನಿಂದಾಗಿ ಕಾಣಿಸಿಕೊಳ್ಳಲೇ ಇಲ್ಲ. ಮಿತಭಾಷಿ, ಮೌನಿ, ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಮನೆಯಲ್ಲಿ ಬೀಸುತ್ತಿದ್ದ ಹೊಸ ಜೀವಂತಿಕೆಯ ಗಾಳಿ ಸಂಚಲನ ಉಂಟುಮಾಡುತ್ತಿದ್ದರೂ ಸಂವೇದನಾರಹಿತವಾಗಿಯೇ ಉಳಿದಿದ್ದು, ವೃದ್ಧಾಪ್ಯವನ್ನು ಒಳ್ಳೆಯ ರೀತಿಯಲ್ಲಿ ಕಳೆಯಬೇಕಾದರೆ, ಏಕಾಂತತೆಯೊಂದಿಗೆ ಗೌರವಪೂರ್ಣ ಒಪ್ಪಂದವನ್ನು ಮಾಡಿಕೊಳ್ಳಬೇಕೆಂದು ಅರ್ಥಮಾಡಿಕೊಂಡಿದ್ದ. ಬೆಳಿಗ್ಗೆ ಐದುಗಂಟೆಗೇ ಎದ್ದು, ತನ್ನದಾದ ಕಾಫಿ ಮಗ್‌ನಲ್ಲಿ, ಅಡಿಗೆ ಮನೆಯಿಂದ ಕಾಫಿ ಸುರಿದುಕೊಂಡು ಕುಡಿದ ನಂತರ ವರ್ಕ್‌ಷಾಪ್ ಒಳ ಹೊಕ್ಕರೆ ಇಡೀ ದಿನ ಅಲ್ಲಿಯೇ ಇದ್ದು ಮಧ್ಯಾಹ್ನ ನಾಲ್ಕು ಗಂಟೆಗೆ ಸ್ಟೂಲನ್ನು ಎಳೆದುಕೊಂಡು ಅಂಗಳದ ಮೂಲಕವಾಗಿ, ಗುಲಾಬಿಗಳನ್ನಾಗಲೀ, ಮರಗಿಡಪೊದೆಗಳನ್ನಾಗಲೀ, ಕುದಿಯುವ ಪಾತ್ರೆಯಂತೆ ಸದ್ದುಮಾಡುವ ಅವಳ ವಿಷಾದ, ಅವಳ ಹಠ ಯಾವುದನ್ನೂ ಗಮನಿಸದೆ, ಬೀದಿಯ ಕಡೆಗಿದ್ದ ಬಾಗಿಲಿನಲ್ಲಿ ಸೊಳ್ಳೆಗಳ ಕಾಟ ಆರಂಭವಾಗುವವರೆಗೆ ಕುಳಿತಿರುತ್ತಿದ್ದ. ಒಮ್ಮೆ ಯಾರೋ ಒಬ್ಬರು ಅವನ ಏಕಾಂತತೆಯನ್ನು ಭಂಗ ಮಾಡುವ ಸಾಹಸಕ್ಕೆ ಹೊರಟರು.

"ಹೇಗಿದ್ದೀರಿ ಕರ್ನಲ್" ಎಂದು ವಿಚಾರಿಸಿದ.

"ಇಲ್ಲೇ, ನನ್ನ ಶವಯಾತ್ರೆಗಾಗಿ ಎದುರುನೋಡುತ್ತಿದ್ದೇನೆ" – ಎಂದ.

ಇದರಿಂದ ರೆಮೆಡಿಯೋಸ್‌ಳ ಕಿರೀಟಧಾರಣೆಯಿಂದ ಮನೆತನದ ಹೆಸರು ಮತ್ತೆ ಕಾಣಿಸಿಕೊಂಡದ್ದರಿಂದ ಉಂಟಾದ ಆತಂಕಕ್ಕೆ ಕಾರಣವಿರಲಿಲ್ಲ. ಬಹಳ ಜನ ಆ ರೀತಿ ಯೋಚನೆ ಮಾಡಿರಲಿಲ್ಲ. ದುರಂತದ ಭೀತಿಯ ಅರಿವಿಲ್ಲದ ಊರಿನ ಜನ ಸಂತೋಷ

ಸಂಭ್ರಮದಲ್ಲಿ ಪಾಲುಗೊಳ್ಳಲು ಪ್ರಧಾನ ಚೌಕದ ಬಳಿ ಬಂದು ಸೇರಿದರು. ಕಾರ್ನಿವಾಲ್ ಸಂಭ್ರಮದ ಹುಚ್ಚಿನ ಉತ್ತುಂಗದಲ್ಲಿತ್ತು. ಅರೆಲಿಯಾನೊ ಸೆಗುಂಡೊ ಅಂತಿಮವಾಗಿ ಹುಲಿವೇಷದ ಕನಸನ್ನು ಪೂರೈಸಿಕೊಂಡಿದ್ದ. ಹುಲಿಯಂತೆ ಜಿಗಿಯುತ್ತ, ಗುರುಗುಟ್ಟುತ್ತಾ, ಅಬ್ಬರಿಸುತ್ತ ಮೆರವಣಿಗೆಯಲ್ಲಿ ಓಡಾಡುತ್ತಿದ್ದಾಗ ಕೆಲವು ವ್ಯಕ್ತಿಗಳು, ಕಲ್ಪನೆಗೂ ಮೀರಿದ ಆಕರ್ಷಕ ಸೌಂದರ್ಯದಿಂದ ಕೂಡಿದ ಹೆಣ್ಣನ್ನು ಹೊತ್ತು ತರುತ್ತಿದ್ದರು. ಒಂದು ಕ್ಷಣ ಅಲ್ಲಿನ ನಿವಾಸಿಗಳು, ಪಚ್ಚೆ ಕಿರೀಟ, ಚರ್ಮದ ಪಟ್ಟಿ ಧರಿಸಿದ್ದ ಕಣ್ಣು ಕುಕ್ಕುವ ಆಕೆಯ ಸೌಂದರ್ಯವನ್ನು ದರ್ಶಿಸಲು ತಾವು ಧರಿಸಿದ್ದ ಮುಖವಾಡಗಳನ್ನು ಕಳಚಿದರು. ಅಧಿಕಾರಾರೂಢೆಯಾಗಿ ಕಾಣುತ್ತಿದ್ದ ಅವಳು ಕೇವಲ ಬಳೆಗಳಾಗಿರಲಿಲ್ಲ. ಕ್ರೇಪ್ ಪೇಪರ್ ಆಗಿರಲಿಲ್ಲ. ತುಂಬ ಜನಕ್ಕೆ ಇದೆಲ್ಲ ಉದ್ರೇಕಕ್ಕೆ, ಚಿತಾವಣೆಗೆ ಒಳಗಾಗಿಸುವ ಪ್ರಶ್ನೆ ಎನಿಸಿತ್ತು. ಆದರೆ ಅರೆಲಿಯಾನೊ ಸೆಗುಂಡೊ ತನ್ನ ಗೊಂದಲದ ಮನಃಸ್ಥಿತಿಯಿಂದ ಹೊರಗೆ ಬಂದು, ಹೊಸದಾಗಿ ಗೌರವ ಅತಿಥಿಗಳೊಂದಷ್ಟು ಮಂದಿ ಬರುತ್ತಿರುವುದನ್ನು ಘೋಷಿಸಿದ. ಸಾಲೊಮನ್‌ನ ಜಾಣತನದೊಂದಿಗೆ ಅದೇ ವೇದಿಕೆಯ ಮೇಲೆ ಆಗಮಿಸಿದ್ದ ರಾಣಿಯ ಜೊತೆಗೆ ರೆಮೆಡಿಯೋಸ್ ದ ಬ್ಯೂಟಿಯನ್ನೂ ಕೂಡಿಸಿದ. ಮಧ್ಯರಾತ್ರಿಯವರೆಗೆ ಬಂದವರು ವೇಷಾಂತರದೊಂದಿಗೆ ಸಂಭ್ರಮೋತ್ಸಾಹದಲ್ಲಿ ಪಾಲುಗೊಂಡರು. ಪಟಾಕಿಗಳ ಸಿಡಿತ, ದೊಂಬರಾಟದ ಪಟ್ಟುಗಳು ನೋಡಿದಾಗ ಯಾರಿಗಾದರೂ ಜಿಪ್ಸಿಗಳ ನೆನಪನ್ನು ತರುತ್ತಿತ್ತು.

“ಲಿಬರಲ್ ಪಾರ್ಟಿ ಚಿರಾಯುವಾಗಲಿ! ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಚಿರಾಯುವಾಗಲಿ!” ಎಂಬ ಘೋಷಣೆಗಳಿಂದ ಉತ್ತುಂಗದಲ್ಲಿದ್ದ ಸಮಾರಂಭ ಅಸ್ತವ್ಯಸ್ತಗೊಂಡಿತು.

ಬಂದೂಕಿನಿಂದ ಹೊರಟ ಗುಂಡುಗಳು ಪಟಾಕಿಗಳ ಸಿಡಿಸದ್ದನ್ನೂ ಮುಳುಗಿಸಿತು. ಭಯದ ಕೂಗುಗಳು ಸಂಗೀತವನ್ನು ನುಂಗಿತು. ಸಂತೋಷ ಗಾಭರಿಯಾಗಿ ಮಾರ್ಪಟ್ಟಿತು. ಹಲವು ವರ್ಷಗಳ ನಂತರವೂ ಕೆಲವರ ಪ್ರಕಾರ, ರಾಣಿಯ ರಾಜ ರಕ್ಷಣಾ ದಳದವರು ಸರ್ಕಾರ ಕೊಟ್ಟ ಬಂದೂಕುಗಳನ್ನು ಇನ್ನೂ ತಮ್ಮ ಮೂರಿಷ್ ಉಡುಪಿನಲ್ಲಿ ಅಡಗಿಸಿಟ್ಟುಕೊಂಡ. ಮಾಮೂಲಿ ಸೈನಿಕ ದಳಕ್ಕೆ ಸೇರಿದವರೇ ಆಗಿದ್ದರು. ಸರ್ಕಾರ ಈ ಆರೋಪವನ್ನು ನಿರಾಧಾರವೆಂದು ವಿಶೇಷ ಹೇಳಿಕೆಯೊಂದನ್ನು ನೀಡಿದ್ದಲ್ಲದೆ ಸಂಭವಿಸಿದ ಘೋರ ಘಟನೆಯ ಬಗ್ಗೆ ತನಿಖೆ ನಡೆಸುವುದಾಗಿಯೂ ಭರವಸೆ ನೀಡಿತು. ಸತ್ಯ ಹೊರಗೆ ಬರಲೇ ಇಲ್ಲ. ಆದರೆ ರಾಜ ರಕ್ಷಕದಳ ಯಾವುದೇ ಪ್ರಚೋದನೆಯಿಲ್ಲದೆಯೂ ತಮ್ಮ ಸೇನಾನಾಯಕ ನೀಡಿದ ಸೂಚನೆ ಮೇರೆಗೆ ಯುದ್ಧ ಸನ್ನದ್ಧ ಸ್ಥಿತಿಯಲ್ಲಿ ನಿಂತು ನಿರ್ದಾಕ್ಷಿಣ್ಯವಾಗಿ ಗುಂಪಿನ ಮೇಲೆ ಗುಂಡಿನ ಮಳೆಗರೆಯಿತು ಎನ್ನುವುದು ಎಲ್ಲರಲ್ಲೂ ಇದ್ದ ಅಭಿಪ್ರಾಯ ಹಾಗೆಯೇ ಮುಂದುವರೆಯಿತು. ಎಲ್ಲವೂ ತಣ್ಣಗಾದ ಮೇಲೆ ಅರಬ್ಬಿ ವೇಷಧಾರಿಗಳಾಗಿದ್ದ ಒಬ್ಬರೂ ಊರಲ್ಲಿ ಉಳಿಯಲಿಲ್ಲ. ಎಷ್ಟೋ ಮಂದಿ ಸಾವನ್ನಪ್ಪಿದ್ದರು, ಕೆಲವರು ಗಾಯಗೊಂಡಿದ್ದರು. ಒಂಭತ್ತು ಮಂದಿ ವಿದೂಷಕರು, ನಾಲ್ವರು, ಸ್ಥಳೀಯರು, ಹದಿನೇಳು ಪ್ಲೇಯಿರಿಗ್ ಕಾರ್ಡ್ ರಾಜರು, ಒಬ್ಬ ಭೂತವೇಷಧಾರಿ, ಮೂವರು

ಸಹಾಯಕರು, ಇಬ್ಬರು ಫ್ರಾನ್ಸಿನ ಶ್ರೀಮಂತರು ಮೂವರು ಜಪಾನಿ ರಾಜಕುಮಾರಿಯರು – ಹೀಗೆ ಎಷ್ಟೋ ಮಂದಿ ಇದ್ದರು. ಈ ಗಾಭರಿ, ಗೊಂದಲಗಳ ಮಧ್ಯೆ ಜೋಸ್ ಆರ್ಕಾಡಿಯೊ ಸೆಗುಂಡೊ ರೆಮೆಡಿಯೋಸ್ ದ ಬ್ಯೂಟಿಯನ್ನು ರಕ್ಷಿಸಿದ ಮತ್ತು ಅರೆಲಿಯಾನೊ ಸೆಗುಂಡೊ ಅತಿಥಿ ರಾಣಿಯನ್ನು ತನ್ನ ತೋಳುಗಳಲ್ಲಿ ಇರಿಸಿಕೊಂಡು ಮನೆಗೆ ತಂದ. ಅವಳ ಬಟ್ಟೆ ಹರಿದಿತ್ತು. ಜುಬ್ಬಕ್ಕೆ ರಕ್ತದ ಕಲೆ ಅಂಟಿತ್ತು. ಅವಳ ಹೆಸರು ಫರ್ನಾಂಡಾ ದೆಲ್ ಕಾರ್ಪಿಯೊ ಅವಳನ್ನು ಅವಳ ದೇಶದಲ್ಲಿ ಐದು ಸಾವಿರ ಸುಂದರಿಯರಲ್ಲಿ ಅತ್ಯಂತ ಸುಂದರಿಯೆಂದು ಆಯ್ಕೆ ಆಗಿದ್ದವಳನ್ನು ಮಕಾಂಡೊಗೆ ಮಡಗಾಸ್ಕರ್‌ನ ರಾಣಿ ಎಂದು ಘೋಷಿಸುವ ಭರವಸೆಯೊಂದಿಗೆ ಕರೆತಂದಿದ್ದರು. ಉರ್ಸುಲಾ ಅವಳನ್ನು ಸ್ವಂತ ಮಗಳಂತೆ ನೋಡಿಕೊಂಡಳು. ಊರಿನಲ್ಲಿ ಅವಳ ಮುಗ್ಧತೆಯನ್ನು ಅನುಮಾನಿಸುವುದಕ್ಕೆ ಬದಲಾಗಿ ಅವಳ ಸ್ಥಿತಿಗೆ ಮರುಗಿದರು. ಸಾಮೂಹಿಕ ಹತ್ಯೆಯಾದ ಆರು ತಿಂಗಳ ನಂತರ, ಗಾಯಗೊಂಡವರೆಲ್ಲ ಸುಧಾರಿಸಿಕೊಂಡ ಮೇಲೆ, ಸಾಮೂಹಿಕ ಸಮಾಧಿಯ ಮೇಲಿನ ಹೂಗಳೆಲ್ಲ ಬಾಡಿದ ಮೇಲೆ ಅರೆಲಿಯಾನೊ ಸೆಗುಂಡೂ ಅವಳನ್ನು ದೂರದ ಊರಿನಲ್ಲಿ ತಂದೆಯ ಜೊತೆಗಿದ್ದವಳನ್ನು ಕರೆದುಕೊಂಡು ಬಂದು, ಮಕೊಂಡೊದಲ್ಲಿ ಇಪ್ಪತ್ತು ದಿನ ಅದ್ದೂರಿಯಾಗಿ ನಡೆಸಿದ ಮದುವೆಯಲ್ಲಿ ಹೆಂಡತಿಯಾಗಿ ಸ್ವೀಕರಿಸಿದ.

# 11

ಎರಡು ತಿಂಗಳ ನಂತರ ಮದುವೆ ಮುರಿದು ಬೀಳುವ ಪರಿಸ್ಥಿತಿ ತಲುಪಿತ್ತು. ಪೆಟ್ರಾ ಕೋಟ್ಸ್‌ಳನ್ನು ಸಮಾಧಾನ ಪಡಿಸುವುದಕ್ಕಾಗಿ ಮಡಗಾಸ್ಕರ್‌ನ ರಾಣಿಯ ಹಾಗೆ ಉಡುಪು ಹಾಕಿಸಿ, ಭಾವಚಿತ್ರವನ್ನು, ಅರೆಲಿಯಾನೊ ಸೆಗುಂಡೊ ತೆಗೆದಿರಿಸಿಕೊಂಡಿದ್ದ. ಅದು ಗೊತ್ತಾದದ್ದೇ ಫರ್ನಾಂಡಾ ವಧುವಿನ ಉಡುಪುಗಳನ್ನೆಲ್ಲ ಟ್ರಂಕಿನಲ್ಲಿ ಇರಿಸಿಕೊಂಡು ಗುಡ್ ಬೈ ಕೂಡಾ ಹೇಳದೆ ಮಕೊಂಡೊದಿಂದ ಹೊರಟುಬಿಟ್ಟಳು. ಅರೆಲಿಯಾನೊ ಸೆಗುಂಡೊ ಹೇಗೂ ಅವಳನ್ನು ಹಿಂಬಾಲಿಸಿ ಹೋಗಿ ಸಮಾಧಾನಪಡಿಸಿ, ತಾನು ಮುಂದೆ ಹಾಗೆ ಮಾಡುವುದಿಲ್ಲವೆಂದು ಮಾತುಕೊಟ್ಟು ಹಿಂದಕ್ಕೆ ಕರೆತಂದ. ತಾನಿಟ್ಟುಕೊಂಡವಳನ್ನು ಬಿಟ್ಟುಬಿಟ್ಟ.

ಪೆಟ್ರಾ ಕೋಟ್ಸ್ ಗಟ್ಟಿ ಹೆಣ್ಣು. ತನ್ನ ಶಕ್ತಿ ಏನೆಂಬುದರ ಅರಿವಿತ್ತು. ಯಾವುದೇ ರೀತಿಯ ಚಿಂತೆಯ ಲಕ್ಷಣ ತೋರಿಸಿಕೊಳ್ಳಲಿಲ್ಲ. ಅವನನ್ನು ಒಬ್ಬ ಮನುಷ್ಯನನ್ನಾಗಿ ಮಾಡಿದ್ದು ಅವಳೆ. ಅವನಿನ್ನೂ ಹುಡುಗನಾಗಿದ್ದಾಗ ಮೆಲ್‌ಕಿಯಾಡ್ಸ್‌ನ ಕೋಣೆಯಿಂದ ಹೊರಗೆ ಎಳೆದು ತಂದದ್ದು, ತಲೆ ತುಂಬ ವಿಚಿತ್ರ ಕಲ್ಪನೆಗಳನ್ನು ತುಂಬಿಕೊಂಡು ವಾಸ್ತವದೊಂದಿಗೆ ಸಂಪರ್ಕವೇ ಇಲ್ಲದಿದ್ದಾಗ ಪ್ರಪಂಚದಲ್ಲಿ ಅವನಿಗೊಂದು ಸ್ಥಾನವನ್ನು ಗಳಿಸಿಕೊಟ್ಟದ್ದೂ ಅವಳೆ. ಸ್ವಾಭಾವಿಕವಾಗಿ ಅವನು

ಅಂತರ್ಮುಖಿ. ಏಕಾಂಗಿ, ಸದಾ ಧ್ಯಾನಸ್ಥ ಭಂಗಿಯಿಂದ ಕೂಡಿರುತ್ತಿದ್ದ ಅವನನ್ನು ಅವೆಲ್ಲಕ್ಕೆ ವಿರುದ್ಧವಾದ ವ್ಯಕ್ತಿತ್ವವನ್ನು ಅವನಲ್ಲಿ ರೂಪಿಸಿದ್ದು ಅವಳೆ. ಜೀವಂತಿಕೆ ಬಹಿರ್ಮುಖತೆಗಳಲ್ಲದೆ, ಬದುಕುವುದನ್ನು ಸಂಭ್ರಮಿಸುವುದನ್ನು, ಸಂತೋಷಕ್ಕಾಗಿ, ಸಂತಸದ ಆಚರಣೆಗಾಗಿ ಖರ್ಚು ಮಾಡುವುದನ್ನು ಕಲಿಸುವುದರ ಮೂಲಕ ಅವನನ್ನು ಒಳ-ಹೊರಗಿನಿಂದ ತಾನು ಕನಸು ಕಾಣುತ್ತಿದ್ದ ವ್ಯಕ್ತಿಯನ್ನಾಗಿ, ಅವನ ಪ್ರಾಯದ ದಿನಗಳಿಂದಲೂ, ರೂಪಿಸುತ್ತಾ ಬಂದಿದ್ದಳು. ನಂತರ ಅವನು ಮದುವೆಯಾದ, ಎಲ್ಲ ಗಂಡುಮಕ್ಕಳೂ ಮದುವೆಯಾಗುವಂತೆ! ಆದರೆ ಈ ವಿಷಯವನ್ನು ಅವಳಿಗೆ ಹೇಳುವ ಧೈರ್ಯ ಮಾಡಲಿಲ್ಲ. ಅವನು ತನ್ನನ್ನು ಒಂದು ರೀತಿಯಲ್ಲಿ ಬದಲಾಯಿಸಿಕೊಂಡ. ಅದು ತೀರಾ ಬಾಲಿಶವಾಗಿತ್ತು. ಮಾತುಮಾತಿಗೆ ಸಿಡುಕುವುದು ಮತ್ತು ಇನ್ನೂ ಏನೇನೋ ಬೇಸರವಾಗುವ ರೀತಿಯಲ್ಲಿ ನಡೆದುಕೊಳ್ಳುವುದು ಇತ್ಯಾದಿ. ನಡವಳಿಕೆಯಿಂದ ಅವಳು ಬಿಟ್ಟು ಹೋಗುತ್ತಾಳೆ ಎನ್ನುವ ಉದ್ದೇಶದಿಂದ ಹೀಗೆ ಮಾಡಿದ. ಒಂದು ದಿನ ವಿನಾಕಾರಣ ಅರೆಲಿಯಾನೊ ಸೆಗುಂಡೊ ಅವಳ ಮೇಲೆ ಸಿಕ್ಕಾಪಟ್ಟೆ ರೇಗಾಡಿದ. ಅವನ ತಂತ್ರ ಅರ್ಥವಾಗಿ, ಅವನನ್ನು ಎಲ್ಲಿ ಇರಿಸಬೇಕೊ ಅಲ್ಲಿ ಇರಿಸಿದಳು.

"ಇದೆಲ್ಲದರ ಅರ್ಥ ಏನು"... "ರಾಣಿಯನ್ನು ಮದುವೆಯಾಗಬೇಕೂಂತ ತಾನೆ" – ಎಂದು ಪ್ರಶ್ನಿಸಿದಳು.

ಅರೆಲಿಯಾನೋಗೆ ನಾಚಿಕೆಯೆನಿಸಿದರೂ ಅದನ್ನು ತೋರಿಸಿಕೊಳ್ಳಲು ಮತ್ತಷ್ಟು ಸಿಟ್ಟಿನಿಂದ ಅವನನ್ನು ತಪ್ಪು ಅರ್ಥ ಮಾಡಿಕೊಂಡಿದ್ದಾಳೆಂದ. ಅವಮಾನ ಮಾಡಿದಳೆಂದೂ ಅವಳನ್ನೇ ದೂರಿದ ಮತ್ತು ಅವಳನ್ನು ಅಲ್ಲಿಂದ ಮುಂದೆ ಎಂದಿಗೂ ಭೇಟಿಯಾಗಲಿಲ್ಲ. ಪೆಟ್ರಾ ಕೋಟ್ಸ್ ಕೇವಲ ಒಂದು ಘಟನೆಯಿಂದ ಕ್ರೂರ ಪ್ರಾಣಿಯೊಂದು ವಿಶ್ರಾಂತಿ ಸಮಯದಲ್ಲಿ ಹೇಗೆ ತನ್ನ ಸಮಚಿತ್ತವನ್ನು ಕಳೆದುಕೊಳ್ಳುವುದಿಲ್ಲವೋ ಅಂತೆಯೇ ನಿರುಮ್ಮಳದೊಂದಿಗೆ ಮದುವೆಯ ಸಂಭ್ರಮ ಭಾಗವಾದ ಸಂಗೀತ, ಪಟಾಕಿಸದ್ದು, ಆಚರಣೆಯ ಅಬ್ಬರಗಳನ್ನು ಅರೆಲಿಯಾನೊ ಬೇಕೆಂದೇ ಮಾಡುತ್ತಿರುವ ತುಂಟತನದ ಪ್ರತೀಕವೆಂದುಕೊಂಡಳು. ಅವಳ ಬಗ್ಗೆ ಮರುಕ ತೋರಿದ ಮಂದಿಗೆ "ಯೋಚನೆ ಬೇಡ ರಾಣಿಯರೂ ನನ್ನ ಕೆಲಸಗಳನ್ನು ಮಾಡ್ತಾರೆ" ಎಂದು ಮುಗುಳುನಕ್ಕು ಹೇಳಿದಳು. ನೆರೆಮನೆಯಾಕೆ ಒಂದು ಜೊತೆ ಕ್ಯಾಂಡಲ್ ತಂದು, ಕಳೆದುಹೋದ ಗಂಡನ ಭಾವಚಿತ್ರದ ಮೂಲಕ ಹಚ್ಚಲೆಂದು ಕೇಳಿಕೊಂಡಳು ಅವಳು.

"ಅವನು ಬರುವಂತೆ ಮಾಡುವ ಕ್ಯಾಂಡಲ್ ಒಂದು ಈಗಾಗಲೇ ಹಚ್ಚಿಡಲಾಗಿದೆ" ಎಂದು ಒಗಟಿನಂತೆ ಹೇಳಿದಳು.

ಅವಳು ಮೊದಲೇ ನಿರೀಕ್ಷಿಸಿದ ಹಾಗೆ ಅರೆಲಿಯಾನೊ ಸೆಗುಂಡೊ ಅವಳ ಬಳಿಗೆ ಬಂದೇ ಬಂದ. ರಾಣಿಯ ಜೊತೆ ಮಧುಚಂದ್ರ ಮುಗಿಸುತ್ತಿದ್ದಂತೆ. ಅವನು ತನ್ನ ಹಳೆಯ ಸ್ನೇಹಿತರನ್ನು ಕೂಡಿಕೊಂಡು ಪ್ರವಾಸಿ ಭಾವಚಿತ್ರಕಾರನನ್ನು ಜೊತೆಗೆ ಕರೆತಂದ. ಕಾರ್ನಿವಾಲ್ ಸಮಯದಲ್ಲಿ ರಾಣಿ ಧರಿಸಿದ್ದ ಗೌನು, ರಕ್ತದಕಲೆಗಳಿದ್ದ ಚರ್ಮದ

ಪಟ್ಟಿಯನ್ನೂ ತೆಗೆದುಕೊಂಡು ಬಂದಿದ್ದ. ಆ ಸಂತೋಷ ಸಂಭ್ರಮದ ದಟ್ಟ ಪರಿಸರದಲ್ಲಿ, ಸಂಜೆಯಲ್ಲಿ ಪೆಟ್ರಾ ಕೋಟ್ಸ್‌ಳನ್ನು ರಾಣಿಯಂತೆ ಸಿಂಗರಿಸಿ, ಮಡಗಾಸ್ಕರ್‌ನ ರಾಣಿಯೆಂದು ಕಿರೀಟ ಧಾರಣೆ ಮಾಡಿ ಭಾವಚಿತ್ರ ತೆಗೆಸಿ ಅವುಗಳನ್ನೆಲ್ಲ ತನ್ನ ಗೆಳೆಯರಿಗೆ ಹಂಚಿದ. ಅವನ ಆ ಆಟದಲ್ಲಿ ಭಾಗವಹಿಸಿದ್ದೇ ಅಲ್ಲದೆ ಅವನಿಗಾಗಿ ಅವಳು ಒಳಗೇ ಮರುಕಪಟ್ಟಳು. ಬಹುಶಃ ಇಷ್ಟು ಅದ್ಭುತವಾದ ರೀತಿಯಲ್ಲಿ ಸಮಾಧಾನಪಡಿಸಲು ಅವನಿಗೆ ಹೆದರಿಕೆಯಾಗಿರಬೇಕು ಎಂದುಕೊಂಡಳು. ರಾತ್ರಿ ಏಳು ಗಂಟೆ ಸಮಯದಲ್ಲೂ ಇನ್ನೂ ರಾಣಿ ವೇಷದಲ್ಲಿಯೇ ಇದ್ದುಕೊಂಡು ಅವನನ್ನು ಹಾಸಿಗೆಗೆ ಬರಮಾಡಿಕೊಂಡಳು. ಮದುವೆಯಾಗಿ ಎರಡು ತಿಂಗಳು ಕೂಡಾ ಆಗಿಲ್ಲ. ಬಹುಶಃ ಅವರ ಮಧುರರಾತ್ರಿಯಲ್ಲಿ ಯಾವುದೂ ಸರಿಯಾಗಿ ಆಗಿಲ್ಲದಿರಬಹುದು ಎಂದು ಆಲೋಚಿಸಿ, ಈಗ ಸೇಡು ತೀರಿಸಿಕೊಳ್ಳುತ್ತಿರುವ ತೃಪ್ತಿ ದೊರೆಯಿತು. ಎರಡು ದಿನಗಳ ನಂತರ ಮತ್ತೆ ಬರುವ ಸಾಹಸ ಮಾಡಲಿಲ್ಲ. ಬದಲಾಗಿ ಮಧ್ಯವರ್ತಿಯನ್ನು ಕಳಿಸಿ ಬೇರೆಬೇರೆಯಾಗಲು ಷರತ್ತುಗಳೇನೆಂಬುದನ್ನು ತಿಳಿದುಬರಲು ಹೇಳಿದ. ಅವಳಿಗೆ ತಾನು ಇನ್ನಷ್ಟು ತಾಳ್ಮೆಯಿಂದ ಇರಬೇಕೆನಿಸಿತು. ತೋರಿಕೆಗಾಗಿ ಅವನು ತನ್ನನ್ನು ತ್ಯಾಗ ಮಾಡುತ್ತಿದ್ದಾನೆ ಎಂದುಕೊಂಡಳು. ಅವಳು ಅದರಿಂದ ಬೇಸರಗೊಳ್ಳಲಿಲ್ಲ. ಮತ್ತೊಮ್ಮೆ ತಾನೇ ಸೋತು ಪರಿಸ್ಥಿತಿಯನ್ನು ಸಹಜವಾಗಿಸಿಕೊಂಡಳು. ಬಡಪಾಯಿ ಹೆಂಗಸು ಎನ್ನುವ ಸಾಮಾನ್ಯ ಅಭಿಪ್ರಾಯವನ್ನು ದೃಢಪಡಿಸಿದಳು. ಅವನ ನೆನಪಿಗಾಗಿ ಅವಳು ಉಳಿಸಿಕೊಂಡಿದ್ದೆಂದರೆ ಪೇಟೆಂಟ್ ಬೂಟುಗಳು ಅವನು ಅವುಗಳನ್ನು ತಾನು ಶವ ಪೆಟ್ಟಿಗೆಯಲ್ಲಿರುವಾಗ ಧರಿಸಿಕೊಂಡಿರಬೇಕೆಂದು ಬಯಸಿದ್ದ. ಅವುಗಳನ್ನು ಬಟ್ಟೆಯೊಂದರಲ್ಲಿ ಸುತ್ತಿ ಟ್ರಂಕಿನ ಅಡಿಯಲ್ಲಿ ಇರಿಸಿಕೊಂಡಿದ್ದಳು. ಅವನ ನೆನಪುಗಳಲ್ಲೇ, ಯಾವುದೇ ನೋವಿಲ್ಲದೆ ಬದುಕಬೇಕೆಂದು ತೀರ್ಮಾನಿಸಿದ್ದಳು.

"ಅವನು ಇವತ್ತಲ್ಲ ನಾಳೆಯಾದರೂ ಬರಲೇಬೇಕು. ಯಾವುದಕ್ಕಲ್ಲದಿದ್ದರೂ ಬೂಟುಗಳನ್ನು ಹಾಕಿಕೊಳ್ಳುವುದಕ್ಕಾದರೂ ಬರಬೇಕು" ಎಂದು ತನ್ನಲ್ಲಿ ತಾನೇ ಹೇಳಿಕೊಂಡಳು.

ತಾನು ಅಂದುಕೊಂಡಷ್ಟು ದೀರ್ಘಕಾಲವೂ ಕಾಯಬೇಕಾಗಲಿಲ್ಲ. ವಾಸ್ತವವಾಗಿ ಅರೆಲಿಯಾನೊ ಸೆಗುಂಡೊ ವಿವಾಹದ ರಾತ್ರಿಯಂದೇ. ತಾನು ಆ ಬೂಟುಗಳನ್ನು ಹಾಕಿಕೊಳ್ಳಲು ಹೋಗುವುದಕ್ಕೆ ಮೊದಲೇ, ಅವಳಲ್ಲಿಗೆ ಹೋಗಬೇಕಾಗಿ ಬರುವುದೆಂದು ಅರ್ಥಮಾಡಿಕೊಂಡಿದ್ದ. ಫರ್ನಾಂಡ ಪ್ರಪಂಚದಲ್ಲಿ ಕಳೆದುಹೋದ ಹೆಂಗಸಾಗಿದ್ದಳು. ಆರುನೂರು ಮೈಲಿಗಳಾಚೆ ಮಂಕು ಕವಿದ ಆ ಪಟ್ಟಣದಲ್ಲಿ ಭಯಾನಕ ರಾತ್ರಿಗಳಲ್ಲಿ ಈಗಲೂ ವೈಸ್‌ರಾಯಗಳ ಗಾಡಿಗಳು ಗಡಗಡ ಸದ್ದು ಮಾಡುತ್ತ ಬೀದಿಗಳಲ್ಲಿ ಚಲಿಸುತ್ತಿದ್ದವು. ಮಧ್ಯಾಹ್ನ ಆರುಗಂಟೆ ಸಮಯದಲ್ಲಿ ಮೂವತ್ತೆರಡು ಘಂಟಾಗೋಪುರಗಳು ಮೊಳಗಿದವು. ಜಾಗಿರುದಾರನ ಮನೆಯಲ್ಲಿ ಸೂರ್ಯನ ಬೆಳಕನ್ನೆಂದೂ ಕಾಣುತ್ತಿರಲಿಲ್ಲ. ಸೈಪ್ರೆಸ್ ಮರಗಳಿದ್ದ ಅಂಗಳದಲ್ಲಾಗಲಿ, ಮಲಗುವ ಕೋಣೆಗಳಲ್ಲಾಗಲಿ, ತೊಟ್ಟಿಕ್ಕುವ ಕಮಾನುಗಳಿದ್ದ ಕೈತೋಟಗಳಲ್ಲಾಗಲಿ ಗಾಳಿಯ ಮಾತೇ

ಇರಲಿಲ್ಲ. ವಯಸ್ಸಿಗೆ ಬರುವವರೆಗೂ ಪ್ರಪಂಚದ ಬಗ್ಗೆ ಯಾವ ಸುದ್ದಿಯೂ ಇರಲಿಲ್ಲ. ಅಲ್ಲಿವರೆಗೆ ಅವಳಿಗೆ ಗೊತ್ತಿದ್ದುದು, ಮಧ್ಯಾಹ್ನದ ನಿದ್ದೆಗಳನ್ನು ಮಾಡುವುದಿಲ್ಲವೆಂದೇ ಪ್ರತಿಜ್ಞೆ ಮಾಡಿದ್ದ ಪಿಯಾನೊ ಟೀಚರ್ ಪಕ್ಕದ ಮನೆಯಲ್ಲಿ ಹೇಳಿಕೊಡುತ್ತಿದ್ದ ವಿಷಾದ ಸ್ವರಗಳ ಪಿಯಾನೊ ಪಾಠಗಳಷ್ಟೆ! ಖಾಯಿಲೆ ಬಿದ್ದ ಅಮ್ಮನ ಕೋಣೆಯಲ್ಲಿ ಕಿಟಕಿಗಾಜುಗಳಿಂದ ಹೊಮ್ಮುವ ಹಸಿರು ಮತ್ತು ಹಳದಿ ಬೆಳಕಿನಲ್ಲಿ ಕ್ರಮಬದ್ಧ, ಆದರೆ ಭಾವರಹಿತ ಸಂಗೀತ ಹೊಸ ಪ್ರಪಂಚದಿಂದ ಕೇಳಿ ಬರುತ್ತಿದ್ದರೆ ಅವಳು ಮಾತ್ರ ಒಳಗಡೆ ಶವದ ಮೇಲೆ ಹಾಕುವ ಹೂಹಾರಗಳನ್ನು ಹೆಣೆಯುವಲ್ಲಿ ತೊಡಗಿಸಿಕೊಂಡಿದ್ದಳು. ಅವಳ ತಾಯಿ ಜ್ವರದಿಂದ ಬೆವರುತ್ತ ತನ್ನ ಹಿಂದಿನ ವೈಭವವನ್ನು ಅವಳಿಗೆ ವಿವರಿಸಿದಳು. ಅವಳು ಚಿಕ್ಕ ಹುಡುಗಿಯಾಗಿದ್ದಾಗ ಒಂದು ಬೆಳ್ದಿಂಗಳ ರಾತ್ರಿಯಲ್ಲಿ ಫರ್ನಾಡ ಬಿಳಿ ಉಡುಪಿನಲ್ಲಿದ್ದ ಚೆಲುವೆ ಹೆಂಗಸೊಬ್ಬಳು ಕೈ ತೋಟದ ಕಡೆಯಿಂದ ಪ್ರಾರ್ಥನಾ ಮಂದಿರದ ಕಡೆಗೆ ಹೋಗುತ್ತಿದ್ದುದನ್ನು ನೋಡಿದಳು. ಹಾದು ಹೋದ ಆ ದೃಶ್ಯ ಅವಳನ್ನು ಕಾಡಿದ್ದೇಕೆಂದರೆ, ಆ ಹೆಂಗಸು ತನ್ನಂತೆಯೇ ಇದ್ದಳು, ಇಪ್ಪತ್ತು ವರ್ಷಗಳ ನಂತರ ತಾನು ಹೇಗಿರಬಹುದೋ ಅದನ್ನು ಮೊದಲೇ ಕಂಡಂತಾಗಿತ್ತು. "ಅವಳು ನಿನ್ನ ಮುತ್ತಜ್ಜಿ ರಾಣಿ ಬಲ್ಬುಗಳ ಸರವನ್ನು ಕತ್ತರಿಸುವಾಗ ಹೊರಬಂದ ವಿಷಪೂರಿತ ಆವಿಯಿಂದ ತೀರಿಕೊಂಡಳು". ಎಂದು ತನ್ನ ಕೆಮ್ಮಿನ ಮಧ್ಯೆ ದೊರೆತ ಬಿಡುವಿನ ಸಮಯದಲ್ಲಿ ಹೇಳಿದಳು. ಹಲವು ವರ್ಷಗಳ ನಂತರ, ತಾನು ತನ್ನ ಮುತ್ತಜ್ಜಿಗೆ ಸರಿಸಮಾನವೆಂಬ ಭಾವನೆ ಬರತೊಡಗಿದಾಗ, ತನ್ನ ಬಾಲ್ಯದಲ್ಲಿ ಕಂಡ ದೃಶ್ಯವನ್ನು ಅನುಮಾನಿಸಿದಳು. ಆದರೆ ಅವಳ ತಾಯಿ ಆಕೆಯ ಅನುಮಾನವನ್ನು ಖಂಡಿಸಿದಳು.

"ನಾವು ಅಪಾರ ಆಸ್ತಿವಂತರು ಮತ್ತು ಶಕ್ತಿವಂತರು, ಒಂದು ದಿನ ನೀನು ರಾಣಿ ಆಗುವವಳು" ಎಂದು ತಾಯಿ ಹೇಳಿದಳು.

ಅವರಿಬ್ಬರೂ ಉದ್ದನೆಯ ಮೇಜಿನ ತುದಿಗಳಲ್ಲಿ ಕುಳಿತಿದ್ದರು. ಟೇಬಲ್ ಮೇಲೆ ನುಣುಪಾದ ಟೇಬಲ್ ಕ್ಲಾತ್ ಹಾಸಿದ್ದರು. ಬೆಳ್ಳಿ ತಟ್ಟೆಯಲ್ಲಿ ಬನ್ ಮತ್ತು ಲೋಟದಲ್ಲಿ ಕರಗಿದ ಸಿಹಿ ಚಾಕಲೇಟ್ ಇಟ್ಟಿದ್ದರು. ತಾಯಿಯ ಮಾತುಗಳನ್ನು ನಂಬಿದಳು. ಅವಳ ತಂದೆ ಮದುವಣಗಿತ್ತಿಗೆ ಕೊಳ್ಳಬೇಕಾಗಿದ್ದ ವಸ್ತ್ರಾಭರಣಗಳ ಖರ್ಚಿಗೆಂದು ಮನೆಯನ್ನೇ ಅಡ ಇಡಬೇಕಾಗಿದ್ದರೂ, ತನ್ನ ಮದುವೆಯ ದಿನದವರೆಗೂ ತನ್ನದೊಂದು ಸಾಮ್ರಾಜ್ಯದ ಕನಸನ್ನು ಕಂಡಿದ್ದಳು. ಅದು ಮುಗ್ಧತೆಯಾಗಲಿ ವೈಭವದ ಮೋಹವಾಗಲಿ ಆಗಿರಲಿಲ್ಲ. ಅವಳನ್ನು ಹಾಗೆ ಬೆಳೆಸಲಾಗಿತ್ತು. ಮನೆತನದ ಲಾಂಛನವಿದ್ದ ಚಿನ್ನದ ಪಾತ್ರೆಯಲ್ಲಿ, ತನ್ನ ಕರ್ತವ್ಯವನ್ನು ನೆರವೇರಿಸಿದ್ದರ ನೆನಪು ಉಳಿಸಿಕೊಳ್ಳಲು ಕಾರಣವಿತ್ತು. ಅವಳು ಹನ್ನೆರಡು ವರ್ಷದವಳಾಗಿದ್ದಾಗ ಕುದುರೆ ಗಾಡಿಯಲ್ಲಿ ಒಂದೆರಡು ಹರಿದಾರಿಯಷ್ಟು ದೂರ ಕಾನ್ವೆಂಟಿಗೆ ಹೋಗಬೇಕಾಗಿ ಬಂದಾಗಷ್ಟೇ ಮೊದಲ ಬಾರಿಗೆ ಹೊರಗೆ ಹೊರಡುವಂತಾದದ್ದು. ಅವಳ ಸಹಪಾಠಿಗಳಿಗೆ ಅವಳು ತಮ್ಮಿಂದ ದೂರ ಪ್ರತ್ಯೇಕವಾಗಿ ಕುಳಿತಿದ್ದಲ್ಲದೆ, ಯಾರೊಂದಿಗೂ ಬೆರೆಯದೆ ಇದ್ದುದು ಅಚ್ಚರಿಯನ್ನುಂಟು ಮಾಡಿತ್ತು. "ಅವಳೊಂಥರಾ.... ಅವಳು ರಾಣಿಯಾಗುವವಳು" ಎಂದು ಕ್ರಿಸ್ತ ಸನ್ಯಾಸಿನಿಯರು

ವಿವರಿಸುತ್ತಿದ್ದರು. ಅವಳ ಸಹಪಾಠಿಗಳೂ ಅದನ್ನು ನಂಬಿದರು. ಕಾರಣ ಅವಳು ಎಲ್ಲರಿಗಿಂತಲೂ ಸುಂದರವಾಗಿದ್ದಳು; ವಿಶಿಷ್ಟವಾಗಿದ್ದಳು ಮತ್ತು ವಿವೇಕವಂತಳಾಗಿದ್ದಳು. ಎಂಟು ವರ್ಷಗಳ ನಂತರ ಲ್ಯಾಟಿನ್‌ನಲ್ಲಿ ಕವಿತೆ ಬರೆಯುವುದನ್ನು ಕ್ಲಾವಿಕಾರ್ಡ್ ನುಡಿಸುವುದನ್ನು ಗಣ್ಯರೊಂದಿಗೆ ಡೇನೆ ಸಾಕಣೆ ಕುರಿತು ಚರ್ಚಿಸುವುದನ್ನು ಆರ್ಚ್ ಬಿಷಪ್ ಜೊತೆ ಪಶ್ಚಾತ್ತಾಪ ಸೂಚಕ ವಿವರಗಳನ್ನು ವಿದೇಶಿ ರಾಜಕಾರಣಿಗಳೊಂದಿಗೆ ರಾಜ್ಯಾಡಳಿತ ಸಂಬಂಧಿ ವಿಷಯಗಳನ್ನು ಚರ್ಚಿಸುವುದನ್ನು, ಪೋಪ್ ಜೊತೆ ದೇವರ ಸಂಬಂಧವಾದ ತಾತ್ವಿಕ ವಿಚಾರಗಳ ಚರ್ಚೆ ಮಾಡುವುದನ್ನು ಕಲಿತು ಮನೆಗೆ ಹಿಂತಿರುಗಿ ಶವಗಳಿಗೆ ಇರಿಸುವ ವೃತ್ತಾಕಾರದ ಹೂಹಾರಗಳನ್ನು ಹೆಣೆಯುವ ಕೆಲಸದಲ್ಲಿ ನಿರತಳಾದಳು. ಅವಳಿಗೆ ಅದು ಹಿಡಿಸಲಿಲ್ಲ. ಮನೆಯ ಕೇವಲ ಪೀಠೋಪಕರಣಗಳು ಮಾತ್ರವೇ ಉಳಿದಿದ್ದವು. ಬೆಳ್ಳಿ ದೀಪದ ಕಂಬ, ಟೇಬಲ್ ಮೇಲಿನ ವಸ್ತುಗಳು, ಪ್ರತಿನಿತ್ಯದ ಅಗತ್ಯದ ಪಾತ್ರೆ ಪಡಗ ಇತ್ಯಾದಿಗಳನ್ನು ಅವಳ ಓದಿನ ಖರ್ಚು ತೂಗಿಸಲು ಒಂದೊಂದಾಗಿ ಮಾರಲಾಯಿತು. ಅವಳ ತಾಯಿ ಮತ್ತೆ ಜ್ವರಕ್ಕೆ ತುತ್ತಾದಳು. ಅವಳ ತಂದೆ ಡಾನ್ ಫರ್ನಾಂಡೊ ಬಿಗಿಕಾಲರಿನ ಕಪ್ಪು ಉಡುಪು ಧರಿಸಿ, ಚಿನ್ನದ ವಾಚು ತೊಟ್ಟು, ಸೋಮವಾರಗಳಂದು ಮನೆ ಖರ್ಚಿಗೆಂದು ಒಂದು ಬೆಳ್ಳಿ ನಾಣ್ಯ ಕೊಡುತ್ತಿದ್ದ. ವಾರದ ಹಿಂದೆ ತಯಾರಿಸಿದ್ದ ಶವಸಂಸ್ಕಾರದ ಹೂವಿನ ಹಾರಗಳನ್ನು ತೆಗೆದುಕೊಂಡು ಹೋಗುತ್ತಿದ್ದ. ಅವನು ಹೆಚ್ಚಿನ ಸಮಯವನ್ನು ತನ್ನ ಸ್ಟಡಿ ರೂಮಿನಲ್ಲಿ ಕಳೆಯುತ್ತಿದ್ದ. ಕೆಲವು ಸಲ ಹೊರಗೆ ಹೋಗಿ ಬಂದು ಅವಳೊಂದಿಗೆ ಪ್ರಾರ್ಥನೆ ಹೇಳುತ್ತಿದ್ದ. ಯಾರೊಂದಿಗೂ ಅವಳು ಆತ್ಮೀಯ ಸ್ನೇಹವನ್ನು ಇರಿಸಿಕೊಂಡಿರಲಿಲ್ಲ. ರಕ್ತ ಹರಿಸುವ ಯುದ್ಧಗಳ ಬಗ್ಗೆ ಪ್ರಸ್ತಾಪಿಸುವುದನ್ನು ಎಂದೂ ಕೇಳಿರಲಿಲ್ಲ. ಮಧ್ಯಾಹ್ನ ಮೂರುಗಂಟೆ ಸಮಯಕ್ಕೆ ತನ್ನ ಪಿಯಾನೊ ಪಾಠಗಳನ್ನು ಅಭ್ಯಾಸ ಮಾಡುತ್ತಿದ್ದಳು. ತಾನು ರಾಣಿಯಾಗುವ ಭ್ರಮೆಯನ್ನು ಕಳೆದುಕೊಳ್ಳುತ್ತಿರುವ ಸಮಯದಲ್ಲಿ ಬಾಗಿಲು ತಟ್ಟಿದ ಸದ್ದಾಯಿತು. ಅವಳೆದ್ದು ಹೋಗಿ ಬಾಗಿಲು ತೆಗೆದಾಗ ತುಂಬ ಶಿಷ್ಟನಂತೆ ಕಾಣುತ್ತಿದ್ದ ಮಿಲಿಟರಿ ಆಫೀಸರ್, ಕೆನ್ನೆಯ ಮೇಲೊಂದು ಕಲೆ, ಕತ್ತಿನಲ್ಲಿ ಚಿನ್ನದ ಪದಕದೊಂದಿಗೆ ಕಾಣಿಸಿಕೊಂಡ. ಆತ ತಂದೆಯ ಸ್ಟಡಿರೂಮಿನಲ್ಲಿ ಸೇರಿಕೊಂಡ.

ಎರಡು ಗಂಟೆಗಳ ನಂತರ ತಂದೆ ಅವಳನ್ನು ಕರೆದೊಯ್ಯಲು ಹೊಲಿಗೆ ಕೋಣೆಯೊಳಗೆ ಬಂದ. "ನಿನ್ನ ವಸ್ತುಗಳನ್ನು ತೆಗೆದುಕೊ.... ಬಹಳ ದೂರ ಹೋಗಬೇಕಾಗಿದೆ" ಎಂದು ಹೇಳಿದ. ಹಾಗಾಗಿ ಅವರು ಅವಳನ್ನು ಮಕೊಂಡೊಗೆ ಕರೆತಂದರು. ಕೇವಲ ಒಂದೇ ಒಂದು ದಿನದಲ್ಲಿ, ವರ್ಷಗಳಿಂದ ಮರೆಮಾಚಿದ್ದ ಕಟುವಾಸ್ತವತೆಯ ಹೊರೆ ಅವಳ ತಲೆ ಮೇಲೆ ಬಿತ್ತು. ಅವಳು ಹಿಂತಿರುಗಿದಾಗ, ತನ್ನನ್ನು ಒಂದು ಕೋಣೆಯಲ್ಲಿ ಬಂಧಿಸಿಕೊಂಡು, ಅಳತೊಡಗಿದಳು. ತಾನುಂಟು ಮಾಡಿದ ಕಹಿ ಗುರುತುಗಳನ್ನು ಅಳಿಸಿಹಾಕಲು ಅವನು ಎಷ್ಟೇ ಕೇಳಿಕೊಂಡರೂ, ವಿವರಿಸಿ ತಿಳಿಸಲು ಪ್ರಯತ್ನಿಸಿದರೂ ಅವಳು ಕೇಳಿಸಿಕೊಳ್ಳಲಿಲ್ಲ. ಸೆಗುಂಡೊ ಅವಳನ್ನು ಕರೆದೊಯ್ಯಲು ಬಂದಾಗ, ಸಾಯುವವರೆಗೂ ಮಲಗುವ ಕೋಣೆಯಿಂದ ಹೊರಗೆ ಬರುವುದಿಲ್ಲವೆಂದು ಪ್ರತಿಜ್ಞೆ ಮಾಡಿದ್ದಳು. ಅದೊಂದು ಅಸಾಧ್ಯವಾದ ವಿಧಿಯಾಟವಾಗಿತ್ತು. ಅವಳು ತನಗಾದ

ಅನ್ಯಾಯದ ಸಿಟ್ಟಿನಲ್ಲಿ, ಅವಮಾನದ ಆಕ್ರೋಶದಲ್ಲಿ, ತನ್ನ ನಿಜಸ್ಥಿತಿ ಅವನಿಗೆ ತಿಳಿಯಬಾರದೆಂದು ಸುಳ್ಳು ಹೇಳಿದ್ದಳು. ಅವನಿಗೆ ಸಿಕ್ಕ ಸೂಚನೆಯೆಂದರೆ, ಅವಳನ್ನು ಹುಡುಕಲು ಹೊರಟಾಗ ಅವಳ ಮಾತಿನ ವಿಶಿಷ್ಟ ಶೈಲಿ ಮತ್ತು ಅವಳು ಮಾಡುತ್ತಿದ್ದ ಶವಸಂಸ್ಕಾರದ ಹೂಹಾರಗಳ ವ್ಯಾಪಾರಗಳ ಬಗ್ಗೆ ಮಾತ್ರ ತಿಳಿದು ಬಂತು. ಅವಳಿಗಾಗಿ ಒಂದೇ ಸಮನೆ ಹುಡುಕಿದ. ಜೋಸ್ ಆರ್ಕಾಡಿಯೊ ಪರ್ವತಗಳನ್ನು ದಾಟಿ ಮಕೊಂಡೊ ಸ್ಥಾಪಿಸುವಲ್ಲಿ ಪಟ್ಟಂಥ ಕಷ್ಟದೊಂದಿಗೆ, ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ವ್ಯರ್ಥವಾಗಿ ಯುದ್ಧಗಳನ್ನು ಮಾಡಿದಂತೆ, ವಂಶದ ಎಳೆಯನ್ನು ಮುಂದುವರೆಸಬೇಕೆಂದು ಉರ್ಸುಲಾ ತೆಗೆದುಕೊಂಡಿದ್ದ ಎಚ್ಚರದಂತೆ, ಒಂದು ಕ್ಷಣದ ವಿಶ್ರಾಂತಿಯೂ ಇಲ್ಲದೆ ಫನಾಂಡಾಳಿಗಾಗಿ ಹುಡುಕಾಡಿದ. ಶವಸಂಸ್ಕಾರದ ಹೂಹಾರಗಳನ್ನು ಮಾಡುವವರ ಮನೆಗಳ ಬಗ್ಗೆ ವಿಚಾರಿಸಿ ಒಂದೊಂದು ಮನೆಗೂ ಭೇಟಿಕೊಟ್ಟು ತುಂಬ ಶ್ರೇಷ್ಠವಾದುದನ್ನು ಆರಿಸಿಕೊಳ್ಳಬಹುದೆಂದು ಯೋಚಿಸಿದ. ಪ್ರಪಂಚದಲ್ಲಿ ಅತ್ಯಂತ ಸುಂದರಿಯಾದ ಹೆಂಗಸಿನ ಬಗ್ಗೆ ವಿಚಾರಿಸಿದಾಗ ಎಲ್ಲರೂ ತಮ್ಮ ತಮ್ಮ ಹೆಣ್ಣು ಮಕ್ಕಳನ್ನು ತೋರಿಸಿದರು. ಆದರೆ ಅವನು ಎಲ್ಲೆಲ್ಲೂ ಕಳೆದುಹೋದ. ಮಂಜು ಮುಸುಕಿದ ಹಾದಿಗಳಲ್ಲಿ, ವಿಸ್ಮೃತಿಯ ಕತ್ತಲಲ್ಲಿ, ನಿರಾಶೆಯ ಚಕ್ರ ಸುಳಿಯಲ್ಲಿ ತಪ್ಪಿಹೋದ. ಪ್ರತಿಧ್ವನಿನಿತವಾಗುವ ಆಲೋಚನೆಗಳ ಹಳದಿ ಪ್ರದೇಶಗಳನ್ನು, ಆತಂಕ ಸೃಷ್ಟಿಸಿದ ಬಿಸಿಲುಗುದುರೆಗಳನ್ನು ದಾಟಿಬಂದ. ನಿಷ್ಪ್ರಯೋಜಕವಾದ ವಾರಗಳನ್ನು ಕಳೆದು ಶೋಕಗೀತೆಯನ್ನು ಧ್ವನಿಸುತ್ತಿದ್ದ ಗಂಟೆಗಳಿದ್ದ ಅಪರಿಚಿತ ಊರಿಗೆ ಬಂದ. ಅವನು ಅವುಗಳನ್ನೆಂದೂ ನೋಡಿರಲಿಲ್ಲ. ಯಾರೂ ಅವುಗಳ ಬಗ್ಗೆ ಹೇಳಿರಲಿಲ್ಲ. ಮಾಸಲು ಗೋಡೆಗಳನ್ನು ಮುರಿದು ಬಿದ್ದಿರುವ ಮರದ ಬಾಲ್ಕನಿಗಳನ್ನು ಅವುಗಳಿಗೆ ಹಿಡಿದಿದ್ದ ಬೂಜಿನೊಂದಿಗೆ ಗುರುತಿಸಿದ. ಮಳೆಯಿಂದ ಅಳಿಸಿಹೋಗಿ ಅಸ್ಪಷ್ಟವಾಗಿ ಕಾಣಿಸುತ್ತಿದ್ದ ಹೊರಬಾಗಿಲಿನ ಮೇಲಿದ್ದ "ಶವಸಂಸ್ಕಾರದ ಹಾರಗಳು ಮಾರಾಟಕ್ಕಿವೆ" ಎಂಬ ರಟ್ಟಿನ ಸೂಚನಾ ಫಲಕವನ್ನು ಗಮನಿಸಿದ. ಆ ಕ್ಷಣದಿಂದ ಕೊರೆವ ಬೆಳಗಿನ ಮದರ್ ಸುಪೀರಿಯರ್ ಜೊತೆ ಹೊರಡುವವರೆಗೆ ಕ್ರೈಸ್ತ ಸನ್ಯಾಸಿನಿಯರಿಗೆ ಮದುವಣಗಿತ್ತಿಯ ವಸ್ತ್ರಗಳನ್ನು ಹೊಲಿಯುವುದಕ್ಕೂ ವೇಳೆಯಿರಲಿಲ್ಲ. ಆರು ಟ್ರಂಕುಗಳಲ್ಲಿ, ಕಂದೀಲುಗಳು, ಬೆಳ್ಳಿ ಉಪಕರಣಗಳು, ಬಂಗಾರದ ಪಾತ್ರೆಗಳು, ಮತ್ತು ಲೆಕ್ಕವಿಲ್ಲದಷ್ಟು ಉಪಯೋಗಕ್ಕೆ ಬಾರದ ಎರಡು ಶತಮಾನದ ಕುಟುಂಬದ ಅವಘಡದ ಪರಿಣಾಮವಾಗಿ ಉಳಿದಿದ್ದನ್ನು ತುಂಬಿದರು. ಡಾನ್ ಫರ್ನಾಂಡೊ ಜೊತೆಗೆ ಬರುವಂತೆ ನೀಡಿದ ಆಹ್ವಾನವನ್ನು ತಿರಸ್ಕರಿಸಿದ. ಆದರೆ ತನ್ನ ಕೆಲಸಗಳನ್ನೆಲ್ಲ ಮುಗಿಸಿದ ಮೇಲೆ ಬರುವುದಾಗಿ ಹೇಳಿದ. ಮಗಳಿಗೆ ಆಶೀರ್ವಾದ ಮಾಡಿದ ಕ್ಷಣದಿಂದ ಅವನು ಮತ್ತೆ ತನ್ನ ಸ್ಟಡಿರೂಮಿನಲ್ಲಿ ಸೇರಿಕೊಂಡು ದುಃಖಸೂಚಕ ಚಿತ್ರಗಳ ಮೂಲಕ ತನ್ನ ಭಾವನೆಗಳನ್ನು ವ್ಯಕ್ತಪಡಿಸಿದ. ಮನೆತನದ ಬಿರುದಾವಳಿಗಳ ಲಾಂಛನಗಳನ್ನೂ ಬರೆಯಲು ತೊಡಗಿದ. ಇದಷ್ಟೆ ಫರ್ನಾಂಡ ಮತ್ತು ಅವಳ ತಂದೆಯ ನಡುವೆ ಜೀವನದಲ್ಲಿ ಉಂಟಾಗಬಹುದಾಗಿದ್ದ ಸಂಪರ್ಕ, ಸಂವಹನ, ಅದೇ ಅವಳು ಹುಟ್ಟಿದ ದಿನಾಂಕ ಅರೆಲಿಯಾನೊ ಸೆಗುಂಡೊಗೆ ಅದೇ ಅವನ ಸಂತೋಷದ ಮೊದಲು ಮತ್ತು ಕೊನೆ.

ಫರ್ನಾಂಡ ತನ್ನ ಜೊತೆಗೆ ಸಣ್ಣ ಸಣ್ಣ ಬೀಗದ ಕೈ ಗೊಂಚಲಿದ್ದ ಕ್ಯಾಲೆಂಡರನ್ನು ತಂದಿದ್ದಳು. ಅದರ ಮೇಲೆ ಅವಳ ಆಧ್ಯಾತ್ಮಿಕ, ಗುರು ನೇರಳೆ ಬಣ್ಣದ ಇಂಕಿನಿಂದ ಯಾವ ಯಾವ ದಿನ ಸಂಭೋಗಕ್ಕೆ ಸೂಕ್ತವೆಂಬುದನ್ನು ಗುರುತಿಸಿದ್ದ. ಪವಿತ್ರ ವಾರ ಭಾನುವಾರಗಳು ನಿರ್ಬಂಧಿತ ಪವಿತ್ರ ದಿನಗಳು ಮೊದಲ ಶುಕ್ರವಾರಗಳು ನಿಸ್ಸಂಗತ್ವದ ದಿನಗಳು ಬಲಿದಾನದ ದಿನಗಳು, ಪದೇ ಪದೇ ಬರುವ ಅಡಚಣೆಗಳು – ಇವೆಲ್ಲ ದಿನಗಳನ್ನು ಲೆಕ್ಕ ಹಾಕಿದರೆ ಅವಳಿಗೆ ಉಳಿಯುತ್ತಿದುದು ಕೇವಲ ನಲವತ್ತೆರಡು ದಿನಗಳು. ಅವುಗಳನ್ನು ಅವಳು ಹಂಚಿಕೊಳ್ಳಬೇಕಿತ್ತು. ಅರೆಲಿಯಾನೊ ಸೆಗುಂಡೊ ದಿನಗಳ ಇಂಥ ನಿರ್ಬಂಧವನ್ನು ಸಡಿಲಗೊಳಿಸುವುದಕ್ಕಾಗಿ ಮದುವೆಯ ಸಂಭ್ರಮಾಚರಣೆಯನ್ನು ನಿರೀಕ್ಷೆಗೂ ಮೀರಿ ವಿಸ್ತರಿಸಿದ. ಷ್ಯಾಂಪೇನ್ ಬಾಟಲಿಗಳನ್ನು ಸುರಿಸುರಿದು ಜನ ಒಂದೇ ಕಡೆ ಗುಂಪುಕಟ್ಟದಿರಲೆಂದು, ಹೊಸ ದಂಪತಿಗಳು ಬೇರೆ ಬೇರೆ ಕಡೆ ಮಲಗಬೇಕಾಗಿ ಬಂದದ್ದು ದನಗಳ ಬಲಿ, ಪಟಾಕಿಗಳ ಸಿಡಿತ, ಸಂಗೀತ ಮುಂದುವರೆಯುತ್ತಿದ್ದುದು ಅವನಿಗೆ ಬೇಸರವನ್ನೇ ತಂದಿತು. ಉರ್ಸುಲಾಗೆ ಇದೆಲ್ಲ ವಿಚಿತ್ರವೆನಿಸಿತು. ಹೀಗೇ ಮುಂದುವರೆದರೆ ಫರ್ನಾಂಡಾ ಶೀಲ ರಕ್ಷಣೆಗೆ ಬೆಲ್ಟ್ ಧರಿಸಿದ್ದಾಳೆಯೋ ಹೇಗೆ ಎಂದು ಯೋಚಿಸಿದಳು. ಅವಳಿಗೆ ಅವಳ ಸ್ವಂತ ಅನುಭವದ ನೆನಪಾಯಿತು. ಅಲ್ಲದೆ ಈ ಬಗೆಯ ಶೀಲ ರಕ್ಷಣೆ ಇವತ್ತಲ್ಲ ನಾಳೆ ಊರಿನಲ್ಲಿ ನಗೆಪಾಟಲಿಗೆ ಗುರಿಯಾಗಿ ಕಡೆಗೆ ದುರಂತವನ್ನು ಕಾಣಬೇಕಾಗುತ್ತದೆ ಎಂದುಕೊಂಡಳು. ಫರ್ನಾಮಡ ಕ್ಷಮೆಯಾಚಿಸಿ, ಗಂಡನ ಸಂಪರ್ಕಕ್ಕೆ ಒಂದೆರಡು ವಾರಗಳು ಕಳೆಯಲೆಂದು ಕೇಳಿಕೊಂಡಳು. ಅಂತೂ ಇಂತೂ ಗಡುವು ಕಳೆದ ಮೇಲೆ ಪ್ರಾಯಶ್ಚಿತ್ತಕ್ಕೆ ಸಿಕ್ಕವಳಂತೆ ತನ್ನ ಬೆಡ್‌ರೂಮಿನ ಬಾಗಿಲನ್ನು ತೆರೆದಳು. ಅರೆಲಿಯಾನೊ ಸೆಗುಂಡೊ ಭೂಮಿಯ ಮೇಲಿನ ಅದ್ಭುತ ಸುಂದರಿಯನ್ನು ನೋಡಿದ. ಹೆದರಿದ ಪ್ರಾಣಿಯ ನೋಟದೊಂದಿಗಿನ ಕಣ್ಣುಗಳನ್ನು, ದಿಂಬಿನ ಮೇಲೆ ಹರಡಿಕೊಂಡಿದ್ದ. ಕೆಂಚು ಕೂದಲಿನೊಂದಿಗೆ ಅವಳನ್ನು ನೋಡಿದ. ಅವನು ಅವಳನ್ನು ಎಷ್ಟು ದಿಗ್ಭ್ರಾಂತನಾಗಿ ನೋಡುತ್ತಿದ್ದನೆಂದರೆ ಫರ್ನಾಂಡಾ ಧರಿಸಿದ್ದ ಬಿಳಿಯ ಗೌನನ್ನು ಗಮನಿಸಲೇ ಇಲ್ಲ. ಬಿಳಿಯ ನೈಟ್ ಗೌನು ಹಿಮ್ಮಡಿವರೆಗೂ ಇತ್ತು. ಉದ್ದನೆಯ ತೋಳುಗಳು, ದುಂಡಗಿನ ಗುಂಡಿಗಳು, ತುಂಬ ನಾಜೂಕಾಗಿ ಹೊಲಿದು, ಕೆಳಹೊಟ್ಟೆಯತನಕ ಚಾಚುವಂತಿತ್ತು. ಅರೆಲಿಯಾನೊ ಸೆಗುಂಡೊಗೆ ನಗು ತಡೆಯಲಾಗಲಿಲ್ಲ.

"ನನ್ನ ಜೀವನದಲ್ಲಿ ಮೊದಲ ಬಾರಿಗೆ ಇಂತಹ ಅಸಹ್ಯ ವೇಷವನ್ನು ನೋಡುತ್ತಿದ್ದೇನೆ" ಎಂದು ಮನೆತುಂಬ ಧ್ವನಿಸುವಂತೆ ನಗುತ್ತಲೇ ಜೋರಾಗಿ ಹೇಳಿದ. "ಬಹುಶಃ ನಾನೊಬ್ಬ ಸಂನ್ಯಾಸಿನಿಯನ್ನು ಮದುವೆಯಾಗಿರಬೇಕು" ಎಂದು ಮುಂದುವರೆದು ಹೇಳಿದ.

ಒಂದು ತಿಂಗಳ ನಂತರ, ಅವಳಿಂದ ನೈಟ್ ಗೌನನ್ನು ತೆಗೆಸುವುದು ಅಸಾಧ್ಯವೆನಿಸಿದಾಗ, ಪೆಟ್ರಾಕೋಟ್ಸ್‌ಳನ್ನು ರಾಣಿಯಾಗಿ ಅಲಂಕರಿಸಿ ಭಾವಚಿತ್ರ ತೆಗೆದಿದ್ದ. ನಂತರ ಅವಳು ಮನೆಗೆ ಹಿಂತಿರುಗಿದ ಮೇಲೆ, ಫರ್ನಾಂಡಾ ತಾನು ಮಾಡಿದ್ದ ತಪ್ಪನ್ನು ಸರಿಪಡಿಸುವಂತೆ ಅವನ ಆಸೆಗಳಿಗೆ ತನ್ನನ್ನು ಒಪ್ಪಿಸಿಕೊಂಡಳು. ಆದರೆ ಅವನಿಗೆ ಅವಳಿಂದ ಕಂಡಿದ್ದ ಕನಸನ್ನು, ಮೂವತ್ತೆರಡು ಗಂಟಾಗೋಪುರಗಳಿದ್ದ ಊರಿನಿಂದ ಅವಳನ್ನು ತರಲು

ಹೋದಾಗ, ಪೂರೈಸಿಕೊಳ್ಳಲು ಸಾಧ್ಯವಾಗಲಿಲ್ಲ. ಅರೆಲಿಯಾನೊ ಸೆಗುಂಡೊಗೆ ತಾನು ಅವಳಿಂದ ಪರಿತ್ಯಕ್ತನೆಂಬ ಭಾವನೆ ಬಂತು. ಒಂದು ದಿನ ರಾತ್ರಿ, ಮೊದಲ ಮಗು ಹುಟ್ಟುವುದಕ್ಕೆ ಸ್ವಲ್ಪ ಮುಂಚೆ ಫರ್ನಾಂಡಾಗೆ ತನ್ನ ಗಂಡ ರಹಸ್ಯವಾಗಿ ಪೆಟ್ರೋಕೋಟ್ಸ್ ಬಳಿಗೆ ಹೋಗುತ್ತಿದ್ದಾನೆಂಬುದು ತಿಳಿಯಿತು.

"ಹೌದು ಆದದ್ದು ಅಷ್ಟೇ!" "ಸಂತಾನ ಮುಂದುವರೆಸಲು ಹಾಗೆ ಮಾಡಲೇ ಬೇಕಿತ್ತು" ಎಂದು ನಿರ್ಲಿಪ್ತತೆಯೊಂದಿಗೆ ಹೇಳಿದ.

ಅವಳನ್ನು ಈ ವಿಷಯದಲ್ಲಿ ಸಮಾಧಾನ ಮಾಡಲು ಸ್ವಲ್ಪ ಸಮಯಬೇಕಾಯಿತು. ಕಡೆಯಲ್ಲಿ ಸಮರ್ಥನೀಯವಾದ ಪುರಾವೆಗಳನ್ನು ತೋರಿಸಿದಾಗ ಫರ್ನಾಂಡಾ ಅವನಿಂದ ಅವನು ಇಟ್ಟುಕೊಂಡವಳು ಹಾಸಿಗೆಯಲ್ಲಿ ಸಾವನ್ನಪ್ಪಿದರೆ ಅಚ್ಚರಿ ಪಡುವುದಿಲ್ಲವೆಂದು ಮಾತು ತೆಗೆದುಕೊಂಡಳು. ಈ ರೀತಿಯಲ್ಲಿ ಮೂವರೂ ಒಬ್ಬರಿಂದೊಬ್ಬರಿಗೆ ತೊಂದರೆಯಾಗದಂತೆ ಇದ್ದರು. ಅರೆಲಿಯಾನೊ ಸೆಗುಂಡೊ ಇಬ್ಬರೊಂದಿಗೂ ಸೌಹಾರ್ದದಿಂದ ನಡೆದುಕೊಳ್ಳುತ್ತಿದ್ದರೆ, ಪೆಟ್ರಾಕೋಟ್ಸ್ ರಾಜಿಯಾಗಿ ಬಂದದ್ದಕ್ಕೆ ಬೀಗುತ್ತಿದ್ದರೆ, ಫರ್ನಾಂಡಾ ಸತ್ಯ ತಿಳಿಯದವಳಂತೆ ನಡೆದುಕೊಳ್ಳುತ್ತಿದ್ದಳು.

ಈ ಒಪ್ಪಂದ ಫರ್ನಾಂಡಾಳನ್ನು ಮನೆಯಲ್ಲಿ ಸೇರಿಸಿಕೊಳ್ಳುವ ವಿಚಾರದಿಂದಾಗಿ ಯಶಸ್ವಿಯಾಗಲಿಲ್ಲ. ಉರ್ಸುಲಾ, ಫರ್ನಾಂಡಾ ರಾತ್ರಿಯ ಪ್ರೇಮದಾಟದಿಂದ ಎದ್ದುಬಂದಾಗ ಧರಿಸಿಟ್ಟುಕೊಳ್ಳುತ್ತಿದ್ದ ವುಲ್ಲನ್ ಮಫ್ಲರನ್ನು ತೆಗೆದು ಬರಬೇಕೆಂದು ಮಾಡಿದ ಒತ್ತಾಯಕ್ಕೆ ಮಣಿಯಲಿಲ್ಲ. ಜನ ಅದೂ ಇದೂ ಮಾತಾಡಿಕೊಳ್ಳುತ್ತಿದ್ದರು. ಅವಳನ್ನು ಬಚ್ಚಲು ಮನೆಯನ್ನಾಗಲಿ ಅಥವಾ ಲ್ಯಾವೇಟರಿಯನ್ನಾಗಲಿ ರಾತ್ರಿಯ ಹೊತ್ತು ಬಳಸುವಂತೆ, ಒಪ್ಪಿಸಲು ಸೋತಳು. ಹಾಗೆಯೇ ಚಿನ್ನದ ಪಾತ್ರೆಯನ್ನು ಅರೆಲಿಯಾನೊ ಚಿನ್ನದ ಮೀನುಗಳನ್ನು ಮಾಡಲು ಉಪಯೋಗಕ್ಕೆ ಬರುವುದರಿಂದ ಅವನಿಗೆ ಮಾರಲು ಹೇಳಿದ್ದನ್ನೂ ಕೇಳಿಸಿಕೊಳ್ಳಲಿಲ್ಲ. ಅಮರಾಂತಳಿಗೆ ಅವಳ ತಪ್ಪು ತಪ್ಪು ಶಬ್ದಗಳ ಬಳಕೆ, ಮಾತೆತ್ತಿದ್ದರೆ, ಹೇಳಬೇಕಾದ್ದನ್ನು ಹೇಳಲು ಅಸ್ಪಷ್ಟಪದಗಳನ್ನು ಬಳಸುವುದು, ಗೊಜಗೊಜ ಮಾತಾಡುವುದು – ಇದೆಲ್ಲದರಿಂದ ಅವಳನ್ನು ಸಹಿಸಿಕೊಳ್ಳುವುದೇ ದುಸ್ಸಾಧ್ಯವಾಗಿತ್ತು.

ಒಂದು ದಿನ, ಅಪಹಾಸ್ಯ ಮಾಡಿದ್ದಕ್ಕಾಗಿ ಫರ್ನಾಂಡಾ, ಅಮರಾಂತಳನ್ನು ಮಾತಾಡುತ್ತಿರುವುದರ ಅರ್ಥವೇನೆಂದು ಕೇಳಿದಳು. ಅಮರಾಂತ ಅವಳಿಗೆ ಉತ್ತರ ಹೇಳಲು ಅಸ್ಪಷ್ಟ ಭಾಷೆಯನ್ನು ಬಳಸಲಿಲ್ಲ.

"ನಾನು ಏನು ಹೇಳ್ತಾ ಇದ್ದೇಂದ್ರೆ, ನೀನು, ಕುಡಿ ಮತ್ತು ಕುಂಡಿ ಅನ್ನುವುದನ್ನು ಒಟ್ಟಿಗೆ ಸೇರಿಸಿ ಮಾತಾಡುವವರಲ್ಲಿ ಒಬ್ಬಳು ಎಂದೆ" ಎಂದಳು.

ಅಂದಿನಿಂದ ಅವರಿಬ್ಬರೂ ಒಬ್ಬರಿಗೊಬ್ಬರು ಮಾತಾಡುತ್ತಲೇ ಇರಲಿಲ್ಲ. ಮಾತಾಡಲೇ ಬೇಕಾದ ಪರಿಸ್ಥಿತಿ ಬಂದರೆ ಚೀಟಿಗಳನ್ನು ಬರೆದು ಕಳಿಸುತ್ತಿದ್ದರು. ಕಾಣುವ ಹಾಗೆ ಒಬ್ಬರ ಬಗ್ಗೆ ಒಬ್ಬರಿಗೆ ದ್ವೇಷವಿದ್ದರೂ ಫರ್ನಾಂಡಾ ತನ್ನ ಪೂರ್ವಜರ ಪದ್ಧತಿಗಳನ್ನು ಬಿಟ್ಟು

ಕೊಡುವುದಕ್ಕೆ ಸಿದ್ಧವಾಗಿರಲಿಲ್ಲ. ಅಡಿಗೆ ಮನೆಯಲ್ಲಿ ತಿನ್ನುವ ಪದ್ಧತಿಯನ್ನು ಬಿಡಿಸಿದಳು. ಯಾರಿಗಾದರೂ ಹಸಿವಾದರೆ, ಸರಿಯಾದ ಸಮಯಕ್ಕೆ, ಸರಿಯಾದ ಜಾಗದಲ್ಲಿ ಊಟದ ಮೇಜಿನ ಮೇಲೆ, ಅದೂ ಬಟ್ಟೆ ಹೊದಿಸಿ ಬೆಳ್ಳಿ ದೀಪಸ್ತಂಭದೊಂದಿಗೆ, ಕುಳಿತು ಊಟ ಮಾಡಬೇಕೆಂಬ ನಿಯಮ ಹೇರಿದಳು. ದಿನನಿತ್ಯದ ಜೀವನದಲ್ಲಿ ಸಾಮಾನ್ಯ ಸಂಗತಿಗಳೆಂದು ಪರಿಗಣಿಸಲಾಗಿದ್ದ ಎಲ್ಲದರಲ್ಲಿಯೂ ಈ ಬಿಗು ವಾತಾವರಣವನ್ನೇ ಹಾಳುಮಾಡಿತು. ಇದರ ವಿರುದ್ಧವಾಗಿ ಮೊದಲಿಗೆ ಬಂಡೆದ್ದವನೆಂದರೆ ಜೋಸ್ ಆರ್ಕಾಡಿಯೊ ಸೆಗುಂಡೊ, ಆದರೆ ನಿಯಮವನ್ನು ಹೇರಿಸಿಯೇ ಹೇರಿಸಲಾಯಿತು. ಊಟಕ್ಕೆ ಮೊದಲು ಪ್ರಾರ್ಥನೆ ಮಾಡಬೇಕೆಂಬ ನಿಷ್ಠುರ ನಿಯಮದಂತಿತ್ತು ಅದು. ಈ ವಿಷಯ ಊರಿಗೆಲ್ಲ ತಿಳಿಯಿತು. ಬ್ಯುಂಡಿಯಾಗಳು ಎಲ್ಲರೂ ಮಾಡುವಂತೆ ಊಟ ಮಾಡದೆ ಅದನ್ನೊಂದು ಪ್ರಾರ್ಥನೆಯಂತೆ ಪರಿಪಾಲಿಸಲಾಗುತ್ತಿದೆ ಎಂಬ ವದಂತಿಗಳು ಹಬ್ಬಿದವು. ಉರ್ಸುಲಾಳ, ಸಮಯ ಸ್ಫೂರ್ತಿಯಿಂದ ಹೊಮ್ಮುತ್ತಿದ್ದ ಅಂಧ ವಿಶ್ವಾಸಗಳು ಫರ್ನಾಂಡಾಳ ವಿಶ್ವಾಸಗಳೊಂದಿಗೆ ಸಂಘರ್ಷಕ್ಕೆ ಗುರಿಯಾಗುತ್ತಿದ್ದವು. ಫರ್ನಾಂಡಾಳ ನಂಬಿಕೆ, ವಿಶ್ವಾಸಗಳು ಪರಂಪರೆಯಿಂದೆ ಬಂದವುಗಳಾಗಿದ್ದವು. ಅವುಗಳನ್ನು ತಂದೆತಾಯಿಯರಿಂದ ಪಡೆದು ಜೋಪಾನವಾಗಿ ಮುಂದುವರೆಸಿಕೊಂಡು ಬಂದಿದ್ದಳು. ಯಾವ ಯಾವ ಸಂದರ್ಭಕ್ಕೆ ಯಾವ ಯಾವುದನ್ನು ಹೇಗೆ ಮಾಡಬೇಕೆಂಬುದನ್ನು ಪಟ್ಟಿ ಮಾಡಿದ್ದಳು. ಉರ್ಸುಲಾಳ ಇಂದ್ರಿಯಗಳು ದೇಹದಶಕ್ತಿ ಚೆನ್ನಾಗಿ ಇರುವವರೆಗೂ ಕೆಲವು ಪದ್ಧತಿಗಳು ಉಳಿದುಕೊಂಡಿದ್ದವು ಮತ್ತು ಬಲವಂತದಿಂದಲಾದರೂ ಮನೆಯಲ್ಲಿ ಒಂದು ರೀತಿಯ ಶಿಸ್ತು, ಇತ್ತು. ಆದರೆ ಅವಳ ದೃಷ್ಟಿ ಕಡಿಮೆಯಾಗಿ ದೇಹಶಕ್ತಿಯೂ ಉಡುಗಿದಾಗ ಅವಳನ್ನು ಮೂಲೆಗೆ ಒತ್ತರಿಸಲಾಯಿತು. ಫರ್ನಾಂಡಾಳಿಂದ ಆರಂಭವಾದ ನಿಷ್ಠುರ ನಿಯಮದ ಸಂಕೋಲೆ ಸಂಪೂರ್ಣವಾಗಿ ಅವಳ ಆಗಮನದಿಂದ ಬಿಗಿಯಾಯಿತು. ಕುಟುಂಬದ ಹಣೆಬರಹವನ್ನು ನಿರ್ಧರಿಸುವವಳು ಈಗ ಅವಳೇ ಆಗಿದ್ದಳು. ಸಾಂತಾ ಸೋಫಿಯಾ ದ ಲಾ ಪೀದಾದ್ ಉರ್ಸುಲಾಳ ಆಸೆಯಂತೆ ಪೇಸ್ಟ್ರಿ ಮತ್ತು ಅನಿಮಲ್ ಕ್ಯಾಂಡಿ ವ್ಯಾಪಾರವನ್ನು ಮುಂದುವರೆಸಿಕೊಂಡು ಬಂದಿದ್ದಳು. ಆದರೆ ಫರ್ನಾಂಡಾಗೆ ಅದು ಕೆಲಸಕ್ಕೆ ಬಾರದ ಕೆಲಸವಾಗಿತ್ತು. ಆದ್ದರಿಂದ ಅದನ್ನು ನಿಲ್ಲಿಸಲು ಅವಳಿಗೆ ಹೆಚ್ಚು ಸಮಯ ಬೇಕಾಗಲಿಲ್ಲ. ಬೆಳಗಿನಿಂದ ರಾತ್ರಿ ಮಲಗುವವರೆಗೂ ತೆಗೆದಿರುತ್ತಿದ್ದ ಬಾಗಿಲುಗಳನ್ನು ಮಧ್ಯಾಹ್ನದ ವಿಶ್ರಾಂತಿ ಸಮಯದಲ್ಲಿ, ಸೂರ್ಯನ ಬಿಸಿಲು ಹೆಚ್ಚಾಗುತ್ತದೆ ಎನ್ನುವ ನೆಪದಲ್ಲಿ, ಮುಚ್ಚಿಸಿಯೇ ಬಿಟ್ಟಳು. ಮಕೊಂಡೊ ಊರು ಸ್ಥಾಪನೆಯಾದಾಗಿನಿಂದ ಬಾಗಿಲಿಗೆ ತೂಗು ಹಾಕಿದ್ದ ಆಲೂಮರದ ರೆಂಬೆ, ಮತ್ತು ಬ್ರೆಡ್ಡಿನ ಚೂರನ್ನು ತೆಗೆದುಹಾಕಿ ಅದರ ಜಾಗದಲ್ಲಿ ಸೇಕ್ರೆಡ್ ಹಾರ್ಟ್ ಆಫ್ ಜೀಸಸ್ ಪ್ರತಿಮೆಯನ್ನು ಇರಿಸಿದಳು. ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಆಗುತ್ತಿರುವ ಬದಲಾವಣೆಗಳಿಂದ ಮುಂದಾಗುವುದನ್ನು ಕಾಣುತ್ತಿದ್ದ. "ನಾವು ಬಹಳ ಉನ್ನತ ದರ್ಜೆಯವರಾಗುತ್ತಿದ್ದೀವಿ... ಬಹುಶಃ ಮತ್ತೊಮ್ಮೆ ಕನ್‌ಸರ್ವೆಟೀವ್ ಗಳ ವಿರುದ್ಧ ಯುದ್ಧ ಮಾಡಬೇಕಾಗುವುದೊ ಏನೋ" ಆದರೆ ಈ ಬಾರಿ ರಾಜನನ್ನು ಸ್ಥಾಪಿಸಲು ಬೇಕಾಗುತ್ತದೆ ಎಂದು ವಿರೋಧಿಸಿದ. ಫರ್ನಾಂಡಾ ಜಾಣತನದಿಂದ, ಅವನನ್ನು ವಿರೋಧಿಸಲು ಹೋಗಲಿಲ್ಲ. ಆದರೆ ತನ್ನೊಳಗೇ ಅವನ ಸ್ವಂತಂತ್ರ ನಿಲುವನ್ನು ಮತ್ತು ಎಲ್ಲ

ಬಗೆಯ ಸಾಮಾಜಿಕ ನಿಷ್ಠುರ ನಿಯಮಗಳ ವಿರೋಧವನ್ನು ಕುರಿತು ಚಿಂತಿಸಿದಳು. ಅವನ ಬೆಳಗಿನ ಐದು ಗಂಟೆ ಸಮಯದಲ್ಲಿ ಕಾಫಿ ಕುಡಿಯುವ ಅಭ್ಯಾಸ, ವರ್ಕ್‌ಶಾಪಿನ ಅಸ್ತವ್ಯಸ್ತ ಸ್ಥಿತಿ, ಕೊಳಕಾದ ಬ್ಲಾಂಕೆಟ್ ಸಂಜೆ ಸಮಯದಲ್ಲಿ ಮುಂಬಾಗಿಲಲ್ಲಿ ಕುಳಿತು ಕೊಳ್ಳುವ ಅಭ್ಯಾಸ ಇವುಗಳಿಂದಾಗಿ ಅವಳ ಅಸಹನೆ ಹೆಚ್ಚುತ್ತಿತ್ತು.

ಆದರೆ ಕುಟುಂಬ ಯಂತ್ರದ ಒಂದು ಬಿಡಿ ಭಾಗದಂತಿದ್ದ ಅವನನ್ನು ಅವಳಿಗೆ ಸಹಿಸಿಕೊಳ್ಳಲೇ ಬೇಕಾಯಿತು. ಅವಳಿಗೆ ಗೊತ್ತಿತ್ತು. ಈ ಮುದಿ ಕರ್ನಲ್ ಕಾಲದ ಪ್ರಭಾವದಿಂದ, ನಿರಾಶೆಗಳಿಂದ ಸ್ವಲ್ಪ ಸಾಧುವಾಗಿರಬಹುದಾದರೂ ನಿರರ್ಥಕ ದಂದೆಯಿಂದ ಕುಟುಂಬದ ಅಡಿಪಾಯವನ್ನೇ ಅಲ್ಲಾಡಿಸುವಷ್ಟು ಶಕ್ತಿವಂತ ಪ್ರಾಣಿ ಎಂದು ಅವಳ ಗಂಡ ಅವರಿಗೆ ಹುಟ್ಟಿದ ಮೊದಲ ಮಗುವಿಗೆ ಮುತ್ತಜ್ಜನ ಹೆಸರಿಡಬೇಕೆಂದಾಗ ಅವಳು ಅದನ್ನು ವಿರೋಧಿಸಲಿಲ್ಲ. ಏಕೆಂದರೆ ಅಲ್ಲಿ ಇದ್ದದ್ದು ಕೇವಲ ಒಂದು ವರ್ಷವಷ್ಟೇ ಆಗಿತ್ತು. ಆದರೆ ಮೊದಲ ಹೆಣ್ಣುಮಗು ಆದಾಗ ಮಾತ್ರ ರೆನಾಟ ಎಂದು ತನ್ನ ತಾಯಿಯ ಹೆಸರನ್ನೇ ಇಡಲು ನಿರ್ಧರಿಸಿದಳು. ಉರ್ಸುಲಾ ರೆಮೆಡಿಯೋಸ್ ಎಂಬ ಹೆಸರನ್ನೇ ಇಡಬೇಕೆಂದು ನಿರ್ಧರಿಸಿದಳು. ಇಬ್ಬರ ನಡುವೆ ವಾಗ್ವಾದವಾಯಿತು. ಯಾವ ತೀರ್ಮಾನಕ್ಕೂ ಬರದೆ ಹೋದಾಗ ಅರೆಲಿಯಾನೊ ಸೆಗುಂಡೊ ನಗು ನಗುತ್ತಲೇ ಮಧ್ಯಸ್ಥಿಕೆ ವಹಿಸಿ ರೆನಾಟ ರೆಮೆಡಿಯೋಸ್ ಎಂದು ಹೆಸರು ಇಡಿಸಿ ರಾಜಿ ಮಾಡಿಸಿದ. ಆದರೆ ಫರ್ನಾಂಡಾ ಮಾತ್ರಾ ಅವಳನ್ನು ಕೇವಲ ರೆನಾಟಾ ಎಂದೇ ಕರೆಯುತ್ತಿದ್ದಳು. ಅವಳ ಗಂಡನ ಮನೆಯವರು ರೆಮೆಡಿಯೋಸ್‌ಳ ಸಂಕ್ಷಿಪ್ತ ಹೆಸರಾಗಿದ್ದ ಮೆಮೆ ಎಂದೇ ಕರೆಯುತ್ತಿದ್ದರು.

ಮೊದಲಿಗೆ ಫರ್ನಾಂಡಾ ತನ್ನ ಕುಟುಂಬದ ಬಗ್ಗೆ ಮಾತಾಡುತ್ತಲೇ ಇರಲಿಲ್ಲ. ನಂತರದಲ್ಲಿ ತಂದೆಯ ಬಗ್ಗೆ ದೊಡ್ಡದಾಗಿ ಹೇಳಿಕೊಳ್ಳುತ್ತಿದ್ದಳು. ಟೇಬಲ್ ಮುಂದೆ ಕುಳಿತಾಗ ಎಲ್ಲ ರೀತಿಯ ಔಪಚಾರಿಕತೆಗಳನ್ನು ತೊರೆದ ವಿಶಿಷ್ಟ ವ್ಯಕ್ತಿಯಾಗಿದ್ದುದೇ ಅಲ್ಲದೆ ಸಂತಾನಾಗುವ ಸಿದ್ಧತೆಯಲ್ಲಿದ್ದ ಎಂದು ಬಣ್ಣಿಸಿ ಹೇಳಿದಳು. ಅರೆಲಿಯಾನೊ ಸೆಗುಂಡೊ ತನ್ನ ಮಾವನ ಮಿತಿಯಿಲ್ಲದ ವೈಭವೀಕರಣದಿಂದ ದಿಗ್ಭ್ರಾಂತನಾಗಿ ಹೆಂಡತಿಗೆ ತಿಳಿಯದಂತೆ ಜೋಕುಗಳನ್ನು ಮಾಡುತ್ತಿದ್ದ. ಉಳಿದವರೂ ಕೂಡಾ ಅವನನ್ನೇ ಅನುಸರಿಸಿದರು. ಕುಟುಂಬದ ಸಾಮರಸ್ಯವನ್ನು ಕಾಪಾಡುವಲ್ಲಿ ತುಂಬ ಎಚ್ಚರಿಕೆ ವಹಿಸುತ್ತಿದ್ದ ಉರ್ಸುಲಾ ಕೂಡಾ ಒಮ್ಮೆ, ತಮಾಶೆಯಾಗಿ, ತನ್ನ ಮರಿಮಗ ಸಂತನ ಮೊಮ್ಮಗ, ರಾಣಿ ಮತ್ತು ರಸ್ಲರ್ ದಂಪತಿ ಮಗನಿಗೆ ಮುಂದೆ ಬಿಷಪ್ ಆಗುವ ಭವ್ಯ ಭವಿಷ್ಯವಿದೆ ಎಂದು ಭರವಸೆಯಿಂದ ಹೇಳಿದಳು. ಗುಟ್ಟು ಗುಟ್ಟಾದ ನಗುವಿನ ನಡುವೆಯೂ ಮಕ್ಕಳು ಮಾತ್ರ ತಮ್ಮ ತಾತನ ಬಗ್ಗೆ ತುಂಬ ಹೆಮ್ಮೆಯಿಂದಲೇ ಇದ್ದರು. ತಾತ ಅವರಿಗೆ ಪತ್ರಗಳಲ್ಲಿ ಪವಿತ್ರ ಪ್ರಾರ್ಥನಾ ಶ್ಲೋಕಗಳನ್ನು ಬರೆದು ಕಳಿಸುತ್ತಿದ್ದ. ಪ್ರತಿ ಕ್ರಿಸ್‌ಮಸ್‌ಗೂ ಮೊಮ್ಮಕ್ಕಳಿಗೆ ಬಾಗಿಲೊಳಗಿಂದ ತೂರಿಸುವುದೂ ಕಷ್ಟವಾಗುವಷ್ಟು ದೊಡ್ಡ ಪೆಟ್ಟಿಗೆಯ ತುಂಬಾ ಉಡುಗೊರೆಗಳನ್ನು ಕಳಿಸುತ್ತಿದ್ದ. ವಾಸ್ತವವಾಗಿ ಅವೆಲ್ಲ ರಾಜವೈಭವದ ಕಡೆಯ ಕುರುಹುಗಳಾಗಿದ್ದವು. ಅವೆಲ್ಲವನ್ನು ಮಕ್ಕಳ ಬೆಡ್‌ರೂಮಿನಲ್ಲಿ ಮನುಷ್ಯ ಗಾತ್ರದ ಸಂತರ ಪವಿತ್ರ ವೇದಿಕೆಯನ್ನಾಗಿ ನಿರ್ಮಿಸಲು ಬಳಸಿದರು. ಗಾಜಿನ ಕಣ್ಣುಗಳನ್ನು ಹುದುಗಿದ ಮೂರ್ತಿಗಳು ನೋಡಲು

ನಿಜವಾದ ಮನುಷ್ಯರಂತೆ ಕಾಣುತ್ತಿದ್ದವು. ಅವುಗಳಲ್ಲಿ ಬಿಡಿಸಿದ ಎಂಬ್ರಾಯಿಡರಿ ಬಟ್ಟೆಗಳು ಮಕೊಂಡೊದ ಜನರು ಉಡುತ್ತಿದ್ದುದಕ್ಕಿಂತಲೂ ಚೆನ್ನಾಗಿತ್ತು. ಕ್ರಮೇಣ ಶೋಕ, ಸಂತಾಪಗಳ ವಾತಾವರಣದಿಂದ ವೈಭವೋಪೇತ ಕಳೆಯಿಂದ ಬ್ಯುಂಡಿಯಾಗಳ ಮನೆ ಕಂಗೊಳಿಸಿತು. "ಅವರು ಇಡೀ ಕುಟುಂಬ ಬೇಕಾದ ಸ್ಮಶಾನವನ್ನು ನಿರ್ಮಿಸಿ ಕಳಿಸಿಕೊಟ್ಟಿದ್ದಾರೆ. ಈಗ ಬೇಕಾಗಿರುವುದು ಸಮಾಧಿ ಕಲ್ಲು ಮಾತ್ರ" ಎಂದು ಒಂದು ದಿನ ಅರೆಲಿಯಾನೊ ಸೆಗುಂಡೊ ಟೀಕಿಸಿದ. ವಾಸ್ತವವಾಗಿ ಪೆಟ್ಟಿಗೆಗಳಲ್ಲಿ ಬರುತ್ತಿದ್ದ ವಸ್ತುಗಳು ಯಾವುವೂ ಮಕ್ಕಳ ಆಟಕ್ಕೆ ಬರುತ್ತಿರಲಿಲ್ಲ. ಡಿಸೆಂಬರ್ ತಿಂಗಳ ಬರವಿಗಾಗಿ ಅವರು ಕಾಯುತ್ತಿದ್ದರು. ಆದರೆ ಒಂದು ವಿಚಾರವೆಂದರೆ ಬಂದ ವಸ್ತುಗಳು ಪುರಾತನವೇ ಆಗಿದ್ದರೂ ಆ ಮನೆಗೆ ಅವು ಹೊಸದಾಗಿದ್ದವು. ಹತ್ತನೇ ಕ್ರಿಸ್‌ಮಸ್‌ಗೆ, ಪುಟ್ಟ ಜೋಸ್ ಆರ್ಕಾಡಿಯೊ ಕ್ರೈಸ್ತ ಮಠ ಅಥವಾ ಪಾಠಶಾಲೆಗೆ ಹೊರಡಲು ಸಿದ್ಧವಾಗುತ್ತಿದ್ದಾಗ ಬೃಹತ್ ಗಾತ್ರದ ಪೆಟ್ಟಿಗೆಯೊಂದು ಅವನ ಅಜ್ಜನ ಕಡೆಯಿಂದ ಬಂದಿತ್ತು. ಮಾಮೂಲಾಗಿ ಬರುತ್ತಿದ್ದ ವೇಳೆಗಿಂತ ಮುಂಚಿತವಾಗಿಯೇ ಈ ಬಾರಿ ಬಂದಿತು. ಚೆನ್ನಾಗಿ ಮೊಳೆಗಳಿಂದ ಹೊಡೆದು ತುಂಬಾ ಭದ್ರವಾಗಿ ಪ್ಯಾಕ್ ಮಾಡಲಾಗಿತ್ತು. ಅದರ ಮೇಲೆ ಗೌರವಪೂರ್ವಕ ಸಂಬೋಧನೆಯೊಂದಿಗೆ, 'ಲೇಡಿ ಡೋನಾ ಫರ್ನಾಂಡಾ ಡೆಲ್ ಕಾರ್ಪಿಯೊ ದ ಬ್ಯುಂಡಿಯಾ' ಎಂದು ದೊಡ್ಡ ಅಕ್ಷರಗಳಲ್ಲಿ ಬರೆದಿತ್ತು. ಅವಳು ಬರೆದಿದ್ದ ಪತ್ರಗಳನ್ನು ರೂಮಿನಲ್ಲಿ ಓದುತ್ತಿದ್ದರೆ ಮಕ್ಕಳಿಗೆ ಪೆಟ್ಟಿಗೆ ತೆರೆದು ನೋಡುವ ಕುತೂಹಲ. ಅರೆಲಿಯಾನೊ ಸೆಗುಂಡೊ ಸಹಾಯದಿಂದ ಸೀಲುಗಳನ್ನೆಲ್ಲ ತೆಗೆದು ನಂತರ ಮುಚ್ಚಳವನ್ನು ತೆರೆದಾಗ, ಮರದ ಪುಡಿಯಿಂದ ರಕ್ಷಿಸಲ್ಪಟ್ಟ ಒಂದು ಸೀಸದ ಪೆಠಾರಿಯಿದ್ದು ಅದನ್ನು ತಾಮ್ರದ ಬೋಲ್ಟ್‌ಗಳಿಂದ ಬಿಗಿಮಾಡಲಾಗಿತ್ತು. ಮಕ್ಕಳು ತಾಳ್ಮೆಯಿಲ್ಲದೆ ನೋಡುತ್ತಿರುವಾಗ ಅರೆಲಿಯಾನೊ ಸೆಗುಂಡೊ ಎಂಟು ಬೋಲ್ಟ್‌ಗಳನ್ನು ಬಿಚ್ಚಿದ. ಕೂಗಲು ಕೂಡಾ ಸಮಯವಿಲ್ಲದಿರಲು ಮಕ್ಕಳನ್ನು ಬದಿಗೆ ಮಾಡಿದ. ಸೀಸದ ಮುಚ್ಚಳವನ್ನು ತೆಗೆದು ನೋಡಿದರೆ ಡಾನ್ ಫರ್ನಾಂಡಾ ಕಪ್ಪು ಉಡುಪಿನಲ್ಲಿದ್ದ. ಎದೆಯ ಮೇಲೆ ಕ್ರಿಸ್ತನ ಚಿಹ್ನೆಯಿತ್ತು. ಚರ್ಮ ಸುಲಿದುಹೋಗಿತ್ತು. ನಿಜವಾದ ಮುತ್ತುಗಳಂತೆ ಕಾಣುವ ಗುಳ್ಳೆಗಳೊಂದಿಗೆ ನೊರೆ ನೊರೆಯಾಗಿ ಕುದಿಯುತ್ತಿರುವ ದ್ರವದಲ್ಲಿ ಬೇಯುತ್ತಿದ್ದ.

ಅವರ ಮಗಳು ಹುಟ್ಟಿದ ಸ್ವಲ್ಪ ಸಮಯದ ನಂತರ ಕರ್ನಲ್ ಅರೆಲಿಯಾನೊ ಬ್ಯುಂಡಿಯಾಗೆ ಅನಿರೀಕ್ಷಿತವಾದ ಸಂಭ್ರಮವೆಂದರೆ, ಸರಕಾರ ನೀರ್ಲಾಂಡ ಟ್ರೀಟಿಯಾದ ಮತ್ತೊಂದು ಉತ್ಸವವನ್ನು ಆಚರಿಸಬೇಕೆಂಬ ಘೋಷಣೆ ಹೊರಡಿಸಿದ್ದಾಗಿತ್ತು. ಆದರೆ ಅದು ಅಧಿಕೃತ ಪಾಲಿಸಿಗೆ ವಿರುದ್ಧವಾಗಿ ಇದ್ದುದರಿಂದ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ವ್ಯಗ್ರನಾಗಿ ಗೌರವಾರ್ಪಣೆಯನ್ನು ನಿರಾಕರಿಸಿದ. "ಉತ್ಸವ, ಇಂಥಾದ್ದನ್ನು ನಾನೆಂದೂ ಕೇಳಿಯೇ ಇಲ್ಲ. ಇದೂ ಕೂಡಾ ಒಂದು ತಂತ್ರವೇ ಇರಬೇಕು" ಎಂದು ಹೇಳಿದ. ಸ್ವರ್ಣಕಾರನ ಪುಟ್ಟ ವರ್ಕ್‌ಷಾಪ್ ರಾಜ ದೂತರಿಂದ ತುಂಬಿಹೋಯಿತು. ಅವನಿಗಿಂತ ಹಿರಿಯರು ಗೌರವಾನ್ವಿತರೂ, ಒಂದು ಕಾಲದಲ್ಲಿ ಅವನನ್ನು ಕಾಗೆಗಳ ಥರ ಸುತ್ತುವರೆದಿದ್ದವರೂ ಆಗಿದ್ದ ಲಾಯರುಗಳು ತಮ್ಮ ಕಪ್ಪು ಸೂಟುಗಳಲ್ಲಿ, ಮತ್ತೆ

ಹಿಂತಿರುಗಿದ್ದರು. ಹಿಂದಿನ ಸಲ ಅವರನ್ನು ನೋಡಿದಂತೆ, ಯುದ್ಧವನ್ನು ನಿಲ್ಲಿಸುವುದಕ್ಕೆಂದು ಬಂದಿದ್ದಂತೆ ಈಗಲೂ ಬಂದು ನಿಂತುದನ್ನು ನೋಡಿದಾಗ, ಅವರ ಹೊಗಳಿಕೆಯಲ್ಲಿನ ವ್ಯಂಗ್ಯವನ್ನು ಅವನಿಗೆ ಸಹಿಸಲಾಗಲಿಲ್ಲ. ತಾನು ನೆಮ್ಮದಿಯಾಗಿರಲು ಬಿಡುವಂತೆ ಕೇಳಿಕೊಂಡ. ತಾನೇನೂ ರಾಷ್ಟ್ರವನ್ನು ರಕ್ಷಿಸಿದ ದೊಡ್ಡ ಹೀರೋ ಅಲ್ಲ. ತಾನೊಬ್ಬ ಚಿನ್ನದ ಮೀನುಗಳನ್ನು ಮಾಡುವ ಕುಶಲಕರ್ಮಿ. ತನ್ನ ಕನಸೇನಿದ್ದರೂ ದುಡಿದು ದಣಿದು ಪುಟ್ಟ ಮೀನುಗಳ ದುಃಖದಲ್ಲಿ ಮುಳುಗಿ ಸಾಯಬೇಕಷ್ಟೆ ಆಗಿರುವುದರಿಂದ ತನ್ನನ್ನು ಬಿಟ್ಟು ಹೊರಡಬೇಕೆಂದು ಕೇಳಿಕೊಂಡ. ಅವನು ಅಷ್ಟು ಉದ್ಧಟನಾಗಿರುವುದಕ್ಕೆ ಕಾರಣ ರಿಪಬ್ಲಿಕ್‌ನ ಪ್ರೆಸಿಡೆಂಟ್ ಮಕೊಂಡೊದಲ್ಲಿನ ಆಚರಣೆಯಲ್ಲಿ ತಾನೇ ಸ್ವತಃ ಆಗಮಿಸಿ 'ಆರ್ಡರ್ ಆಫ್ ಮೆರಿಟ್' ಪ್ರಶಸ್ತಿಯಿಂದ ಅಲಂಕರಿಸುವುದಾಗಿ ಹೇಳಿದ. ಅವನು ಹೇಳಿದ್ದಕ್ಕೆ ಸರಿಯಾಗಿ ಇವನೂ ಹೇಳಿದ್ದ. ತಾನೂ ಕೂಡ, ಅವನಿಗೊಮ್ಮೆ ಗುಂಡಿಡಲು ಅವಕಾಶಕ್ಕಾಗಿ ಕಾಯುತ್ತಿದ್ದೇನೆಂದು ತಿಳಿಸಿದ್ದ. ಅವನು ಮಾಡಿದ ಹುಚ್ಚಾಟಗಳಿಗಾಗಲಿ, ಕಾಲ ವಿರೋಧಿ ನಡವಳಿಕೆಗಾಗಿ ನೀಡುತ್ತಿರುವ ಸಂಭಾವನೆಯಾಗಿ ಅಲ್ಲಿ ಬದಲಾಗಿ ಯಾವುದೇ ಅನ್ಯಾಯವನ್ನಾಗಲೀ, ತೊಂದರೆಯನ್ನಾಗಲೀ ಮಾಡದ ಮುದುಕನ ಬಗ್ಗೆ ತೋರುತ್ತಿರುವ ಅಗೌರವಕ್ಕೆ ಶಾಸ್ತಿಯಾಗಿ ಗುಂಡಿಡಬೇಕಾಗಿದೆ ಎಂದ. ಅವನ ಬೆದರಿಕೆ ಎಷ್ಟು ಪ್ರಬಲವಾಗಿತ್ತೆಂದರೆ, ರಿಪಬ್ಲಿಕ್‌ನ ಪ್ರೆಸಿಡೆಂಟ್ ತನ್ನ ಪ್ರಯಾಣವನ್ನು ರದ್ದುಗೊಳಿಸಿ, ಪ್ರಶಸ್ತಿಯನ್ನು ಪ್ರತಿನಿಧಿಯೊಬ್ಬನ ಕೈಲಿ ಕಳಿಸಿದ. ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್ ಎಲ್ಲ ಬಗೆಯ ಒತ್ತಡಗಳ ನಡುವೆಯೂ ಪಾರ್ಶ್ವವಾಯುವಿನಿಂದ ನರಳುತ್ತಿದ್ದರೂ ಹಾಸಿಗೆ ಬಿಟ್ಟು ಎದ್ದು ತನ್ನ ಹಳೆಯ ಸ್ನೇಹಿತನನ್ನು ಮನವೊಲಿಸಲು ಹೊರಟ. ಯುದ್ಧಗಳಲ್ಲಿ ಸೋಲು ಗೆಲುವುಗಳಲ್ಲಿ ಸಹಭಾಗಿಯಾಗಿದ್ದ ತನ್ನ ಗೆಳೆಯನನ್ನು ನಾಲ್ಕು ಮಂದಿ ರಾಕಿಂಗ್ ಕುರ್ಚಿಯಲ್ಲಿ ಕೂರಿಸಿಕೊಂಡು ಹೊತ್ತು ತರುತ್ತಿದ್ದುದನ್ನು ನೋಡಿದ. ತನ್ನ ಜೊತೆಗೂಡಿ ಒಗ್ಗಟ್ಟನ್ನು ತೋರಿಸುತ್ತಿದ್ದಾನೆಂಬುದರಲ್ಲಿ ಅವನಿಗೊಂದಿಷ್ಟೂ ಸಂಶಯವಿರಲಿಲ್ಲ. ಆದರೆ ಬಂದ ಮೇಲೆ ಅವನ ನಿಜವಾದ ಉದ್ದೇಶ ಏನೆಂದು ತಿಳಿದಾಗ ಅವನನ್ನು ವರ್ಕ್‌ಷಾಪಿನಿಂದ ಹೊರಗೆತ್ತಿಕೊಂಡು ಹೋಗಲು ಆದೇಶಿಸಿದ.

"ಈಗ ನನಗೆ ಬಹಳ ತಡವಾಗಿ ಅರ್ಥವಾಗಿದೆ.... ನಿನ್ನನ್ನು ಆಗಲೇ ಕೊಲ್ಲುವಂತೆ ಮಾಡಿದ್ದರೆ, ನಿನಗೆ ದೊಡ್ಡ ಉಪಕಾರ ನನ್ನಿಂದ ಆದಂತೆ ಆಗುತ್ತಿತ್ತು" ಎಂದು ಅವನಿಗೆ ಹೇಳಿದ.

ಅಂತೂ ಉತ್ಸವವನ್ನು ಮನೆಯವರು ಯಾರೂ ಪಾಲ್ಗೊಳ್ಳದೆ ಆಚರಿಸಲಾಯಿತು. ಅದೃಷ್ಟಕ್ಕೆ ಅದು ಕಾರ್ನ್‌ವಾಲ್ ಸಪ್ತಾಹದ ಜೊತೆಗೇ ಹೊಂದಿಕೊಂಡಿತು. ಆದರೆ ಅದು ಕ್ರೌರ್ಯದ ಪರಿಹಾಸವನ್ನು ಹೆಚ್ಚಿಸಲೆಂದೇ ಸರಕಾರ ಈ ರೀತಿ ಎರಡನ್ನೂ ಕಾಕತಾಳೀಯವೆಂಬಂತೆ ಹೊಂದಿಸಿಕೊಂಡಿದೆ ಎಂಬ ವಿಚಾರ ಕರ್ನಲ್ ಅರೆಲಿಯಾನೊ ಬ್ಯುಂಡಿಯಾನ ತಲೆಯಿಂದ ಹೊರಗೆ ಹಾಕಲು ಸಾಧ್ಯವಾಗಲಿಲ್ಲ. ತನ್ನ ವರ್ಕ್‌ಷಾಪಿನಿಂದಲೇ ಸಮರ ಸಂಗೀತ, ಗುಂಡಿನ ಗೌರವ, ಮತ್ತು ಮನೆ ಎದುರಿನ ಆ ರಸ್ತೆಗೆ ಅವನ ಹೆಸರಿಡುವಾಗ ಮಾಡಿದ ಭಾಷಣದ ತುಣುಕುಗಳು ಎಲ್ಲವನ್ನೂ ಕೇಳಿಸಿಕೊಳ್ಳುತ್ತಿದ್ದ. ಅವನ

ಕಣ್ಣುಗಳು ರೋಷ, ಆವೇಶಗಳಿಂದ, ಅಸಮರ್ಥತೆಯ ನೋವಿನಿಂದ ಒದ್ದೆಯಾದವು. ಮೊಟ್ಟ ಮೊದಲ ಬಾರಿಗೆ ವಯಸ್ಸಿನಲ್ಲಿ ಇದ್ದಾಗಿನ ಶಕ್ತಿ ಇಲ್ಲದುದಕ್ಕೆ ಚಿಂತಿಸಿದ. ಇದ್ದಿದ್ದರೆ ಮತ್ತೊಮ್ಮೆ ಕನ್‌ಸರ್ವೆಟೀವ್‌ಗಳ ವಿರುದ್ಧ ಯುದ್ಧ ಆರಂಭಿಸಿ, ಹೇಳ ಹೆಸರಿಲ್ಲದಂತೆ ಅಳಿಸಿಬಿಡಬಹುದಾಗಿತ್ತು ಎಂದು ದುಃಖಿಸಿದ. ಗೌರವಾರ್ಪಣೆಯ ಪ್ರತಿಧ್ವನಿಗಳು, ಉರ್ಸುಲಾ ವರ್ಕ್‌ಷಾಪಿನೆಡೆಗೆ ಬಂದು ಬಾಗಿಲಲ್ಲಿ ನಿಂತಾಗಲೂ ನಿಂತಿರಲಿಲ್ಲ.

"ತೊಂದರೆ ಕೊಡಬೇಡ, ನನಗೆ ಕೆಲಸವಿದೆ" ಎಂದು ಹೇಳಿದ.

"ಬಾಗಿಲು ತೆಗಿ. ಉತ್ಸವಕ್ಕೂ ಇದಕ್ಕೂ ಸಂಬಂಧವಿಲ್ಲ" – ಎಂದು ಸಹಜವಾಗಿಯೇ ಹೇಳಿದಳು.

ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಬಾಗಿಲು ತೆಗೆದ. ಬಾಗಿಲಲ್ಲಿ ಎಲ್ಲ ಬಣ್ಣಗಳಲ್ಲಿ, ಎಲ್ಲ ಆಕಾರಗಳಲ್ಲಿ ಇದ್ದ ಹದಿನೇಳು ಮಂದಿಯನ್ನು ನೋಡಿದ. ಪ್ರಪಂಚದಲ್ಲಿ ಎಲ್ಲಿ ಬೇಕಾದರೂ ಕಾಣಬಹುದಾಗಿದ್ದ ಏಕಾಕಿತನ ಮಾತ್ರ ಎಲ್ಲರಲ್ಲೂ ಒಂದೇ ಆಗಿತ್ತು. ಅವರೆಲ್ಲ ಅವನ ಮಕ್ಕಳಾಗಿದ್ದರು. ಪೂರ್ವಭಾವಿ ಪರಿಚಯವಿಲ್ಲದೆ ಒಬ್ಬರನ್ನೊಬ್ಬರು ತಿಳಿಯದೆ ಉತ್ಸವದ ಬಗ್ಗೆ ಕೇಳಿ ದೂರ ದೂರ ಭಾಗಗಳಿಂದ ಬಂದಿದ್ದರು. ಅವರೆಲ್ಲರಿಗೂ ಅರೆಲಿಯಾನೊ ಎಂಬ ಹೆಸರಿತ್ತು ಜೊತೆಗೆ ಹೆಸರಿನ ಕೊನೆಯಲ್ಲಿ ತಾಯಂದಿರ ಹೆಸರಿತ್ತು. ಮೂರು ದಿನ ಅವರೆಲ್ಲ ಉರ್ಸುಲಾ ತೃಪ್ತಿಗಾಗಿ ಮನೆಯಲ್ಲಿ ಉಳಿದಿದ್ದರು. ಫರ್ನಾಂಡಾಳ ಬಗೆಗಿನ ಗುಲ್ಲುಗಳು, ಯುದ್ಧದ ಪರಿಸರದಂತಿತ್ತು. ಅಮರಾಂತ ಹಳೆಯ ಕಾಗದಗಳನ್ನೆಲ್ಲ ಹುಡುಕಿ ಉರ್ಸುಲಾ ಅವರಿಗೆ ಹೆಸರಿಡುವ ಸಂದರ್ಭದಲ್ಲಿ ಪ್ರತಿಯೊಂದು ಮಗುವಿನ ಹುಟ್ಟಿದ ದಿನ, ಹೆಸರು, ತಾಯಂದಿರ ಹೆಸರು ಎಲ್ಲವನ್ನು ದಾಖಲು ಮಾಡಿದ್ದಳು. ಅದನ್ನು ತೆಗೆದು ಅವರವರ ಹೆಸರಿನ ಪಕ್ಕದಲ್ಲಿ ಅವರ ಈಗಿನ ವಿಳಾಸಗಳನ್ನೂ ನಮೂದಿಸಿದಳು. ಆ ಪಟ್ಟಿ, ಇಪ್ಪತ್ತು ವರ್ಷಗಳು ನಡೆದ ಯುದ್ಧದ ವಿವರಗಳನ್ನು ಮೆಲುಕು ಹಾಕಲು ತುಂಬ ಉಪಯುಕ್ತವಾಯಿತು. ಅದರಿಂದ ಕರ್ನಲ್ ಅರೆಲಿಯಾನೊನ ಸಾಹಸ ಕಥನ ತಿಳಿಯಲು ಅನುಕೂಲಕರವಾಗಿತ್ತು. ಒಂದು ಬೆಳಿಗ್ಗೆ ತನ್ನ ಇಪ್ಪತ್ತೊಂದು ಮಂದಿ ಸಹಚರರೊಂದಿಗೆ ಕ್ರಾಂತಿಮಾಡಲು ಹೊರಟಂದಿನಿಂದ ಕಡೆಯದಾಗಿ ಒಂದು ರಗ್ಗನ್ನು ಸುತ್ತಿಕೊಂಡು ಹಿಂತಿರುಗಿ ಬರುವವರೆಗಿನ ಸಂಗತಿಗಳನ್ನೆಲ್ಲ ಪುನಃ ಸೃಷ್ಟಿಮಾಡಬಹುದಾಗಿತ್ತು. ಅರೆಲಿಯಾನೊ ಸೆಗುಂಡೊ ತನ್ನ ದಾಯಾದಿ ಸೋದರರನ್ನು ಷಾಂಪೇನ್ ಮತ್ತು ಸಂಗೀತಗಳಿಂದ ಸತ್ಕರಿಸುವ ಅವಕಾಶವನ್ನು ಬಿಟ್ಟು ಕೊಡಲಿಲ್ಲ. ಕಾರ್ನಿವಾಲ್‌ನ ಖರ್ಚಿನೊಂದಿಗೆ ಇದನ್ನು ಹೊಂದಿಸಲಾಗಿದೆ ಎಂದು ವ್ಯಾಖ್ಯಾನಿಸಲಾಯಿತು. ವದಂತಿಗಳು ಅಡ್ಡಾಡಿದವು. ಅರ್ಧದಷ್ಟು ತಿನ್ನುವ ಪದಾರ್ಥಗಳನ್ನೆಲ್ಲ ಬಿಸಾಡಿದರು. ಗುಲಾಬಿ ಪೊದೆಗಳನ್ನು ಹಾಳು ಮಾಡಿದರು.

ಇದೆಲ್ಲಾ ಆದದ್ದು ಗೂಳಿಯನ್ನು ಅಟ್ಟಿಸಿಕೊಂಡು ಹೋಗುವಾಗ, ಕೋಳಿಗಳನ್ನೂ ಆ ಸಮಯದಲ್ಲಿ ಕೊಂದರು. ಅಮರಾಂತಳನ್ನು ಪೀಟ್ರೋ ಕ್ರೆಸ್ಪಿ ಹೆಸರಿನಲ್ಲಿ ಶೋಕ ನೃತ್ಯವನ್ನು ಮಾಡುವಂತೆ ಮತ್ತು ರೆಮೆಡಿಯೋಸ್ ದ ಬ್ಯೂಟಿಯನ್ನು ಗಂಡು ಹುಡುಗರ ಪ್ಯಾಂಟು

ಹಾಕಿಕೊಳ್ಳುವಂತೆ ಮತ್ತು ಗ್ರೀಸ್ ಹಚ್ಚಿದ ಕಂಬ ಹತ್ತುವಂತೆ ಮಾಡಿದರು. ಊಟದ ಮನೆಯಲ್ಲಿ ಉಪ್ಪನ್ನು ಸವರಿದ ಹಂದಿ ಮಾಂಸದ ತುಂಡುಗಳನ್ನು ಎಡ್ಡಾದಿಡ್ಡಿ ಎಸೆದಾಡಿದರು. ಇದರಿಂದ ಫರ್ನಾಂಡಾ ಮುಗ್ಗರಿಸಿ ಬಿದ್ದಳು. ಆದರೆ ಅದರ ಬಗ್ಗೆ ಯಾರೂ ಅಯ್ಯೋ ಎನ್ನಲಿಲ್ಲ. ಯಾಕೆಂದರೆ ಮನೆಯಲ್ಲಿ ಸಂತೋಷದ ಭೂಕಂಪ ಸಂಭವಿಸಿತ್ತು. ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಮೊದಲಿಗೆ ಅವರಲ್ಲಿ ಕೆಲವರ ಹುಟ್ಟಿನ ಬಗ್ಗೆ ನಂಬಲಿಲ್ಲವಾದರೂ ನಂತರ ಅವರ ಹುಚ್ಚಾಟ, ಉತ್ಸಾಹಗಳಿಂದ ಖುಷಿಪಟ್ಟ. ಅವರು ಬೀಳ್ಕೊಡುವ ಮುನ್ನ ಒಬ್ಬೊಬ್ಬರಿಗೆ ಒಂದೊಂದು ಚಿನ್ನದ ಮೀನನ್ನು ಕೊಟ್ಟ. ಒಂಥರಾ ಪ್ರತ್ಯೇಕವಾಗಿ ಇರುತ್ತಿದ್ದ ಜೋಸ್ ಆರ್ಕಾಡಿಯೊ ಸೆಗುಂಡೊ ಕೂಡಾ ಒಂದು ಮಧ್ಯಾಹ್ನ ಹುಂಜದ ಕಾಳಗವನ್ನು ಅವರಿಗಾಗಿ ಏರ್ಪಡಿಸಿದ. ಈ ಕಾಳಗ ದುರಂತದಲ್ಲಿ ಕೊನೆಯಾಗುವ ಸಂಭವವಿತ್ತು. ಎಷ್ಟೊಂದು ಅರೆಲಿಯಾನೊಗಳು ಹುಂಜಕಾಳಗದಲ್ಲಿ ಪರಿಣಿತರಾಗಿದ್ದರೆಂದರೆ, ತಕ್ಷಣವೇ ಅವರಿಗೆ ಫಾದರ್ ಆ್ಯಂಟೋನಿಯೊ ಇಸಾಬೆಲ್‌ನ ತಂತ್ರಗಳನ್ನು ಬಳಸಿದ್ದು ಪತ್ತೆಯಾಯಿತು. ಅರೆಲಿಯಾನೊ ಸೆಗುಂಡೊಗೆ, ಅವರೊಂದಿಗೆ ಅದ್ಭುತವಾದ ಮಿತಿಯಿಲ್ಲದ ಅಭಿವೃದ್ಧಿಯ ಸಾಧ್ಯತೆಗಳನ್ನು ಕಂಡದ್ದರಿಂದ ಅವರೆಲ್ಲರೂ ತನ್ನ ಜೊತೆ ಕೆಲಸ ಮಾಡಬೇಕೆಂದು ನಿರ್ಧರಿಸಿದ. ಆದರೆ ಅವನ ಜೊತೆ ಇದ್ದು ಕೆಲಸ ಮಾಡಲು ಒಪ್ಪಿದ್ದು ಮಾತ್ರ ಅರೆಲಿಯಾನೊ ಟ್ರಿಸ್ಟೆ. ಮಿಶ್ರಥಳಿಯ ಆ ಹುಡುಗನಲ್ಲಿ ತಾತನ ಹಾಗೆ ಸಾಹಸ ಪ್ರವೃತ್ತಿ ಇತ್ತು. ಈಗಾಗಲೇ ಪ್ರಪಂಚದಲ್ಲಿ ಅರ್ಧವನ್ನು ಸುತ್ತಿ ತನ್ನ ಅದೃಷ್ಟವನ್ನು ಕಂಡುಕೊಂಡಿದ್ದ. ಆದ್ದರಿಂದ ಅವನಿಗೆ ಎಲ್ಲಿದ್ದರೂ ಒಂದೆ ಎನಿಸಿತು. ಬೇರೆಯವರು, ಇನ್ನೂ ವಿವಾಹವಾಗಿಲ್ಲದಿದ್ದರೂ ತಮ್ಮ ಗುರಿಗಳು ನಿರ್ದಿಷ್ಟವಾಗಿವೆ ಎಂದು ಭಾವಿಸಿದರು. ಅವರೆಲ್ಲರೂ ಕುಶಲಕರ್ಮಿಗಳು, ತಮ್ಮ ಮನೆಗಳ ಯಜಮಾನರು, ಶಾಂತಿ ಪ್ರಿಯರು ಆಗಿದ್ದರು. ಬೂದಿಬುಧವಾರ, ಅವರೆಲ್ಲರೂ ಹಿಂತಿರುಗುವುದಕ್ಕೆ ಮೊದಲು ಅಮರಾಂತ ಅವರೆಲ್ಲ ಭಾನುವಾರದ ಉಡುಪನ್ನು ಧರಿಸಿ ತನ್ನೊಡನೆ ಚರ್ಚ್‌ಗೆ ಬರಬೇಕೆಂದು ಅವರನ್ನು ಸಿದ್ಧಗೊಳಿಸಿದಳು. ಶ್ರದ್ಧೆಗಿಂತ ಅವರಿಗಿದೊಂದು ವಿನೋದವೆನಿಸಿತ್ತು. ಎಲ್ಲರೂ ಪವಿತ್ರ ವೇದಿಕೆಗೆ ಬಂದು ಫಾದರ್ ಆ್ಯಂಟೋನಿಯೊ ಇಸಾಬೆಲ್ ರಿಂದ ಬೂದಿಯಿಂದ ತಮ್ಮ ಮೇಲೆ ಶಿಲುಬೆಯ ಚಿಹ್ನೆಯನ್ನು ಬರೆಸಿಕೊಂಡರು. ಮನೆಗೆ ಹಿಂತಿರುಗಿದ ಮೇಲೆ ಎಲ್ಲರಿಗಿಂತ ಕಿರಿಯನಾದವನು ಹಣೆಯನ್ನು ಸ್ವಚ್ಛಗೊಳಿಸಿಕೊಳ್ಳಬೇಕೆಂದು ಪ್ರಯತ್ನಿಸಿದಾಗ ಶಿಲುಬೆಯ ಚಿಹ್ನೆ ಅಳಿಸಿಹೋಗಲೇ ಇಲ್ಲ. ಅವನ ಸೋದರರಿಗೂ ಅದೇ ರೀತಿ ಆದುದನ್ನು ಕಂಡ. ನೀರು, ಸಾಬೂನುಗಳಿಂದ ಪ್ರಯತ್ನಿಸಿದರು. ನಂತರ ಮಣ್ಣು ಬ್ರಷ್ಷುಗಳಿಂದ, ಕಡೆಗೆ ಕಲ್ಲಿನಿಂದ ಹೀಗೆ ಏನೆಲ್ಲ ಪ್ರಯತ್ನ ಮಾಡಿದರೂ ಶಿಲುಬೆಗಳನ್ನು ತೆಗೆಯಲು ಸಾಧ್ಯವಾಗಲೇ ಇಲ್ಲ. ಮತ್ತೊಂದು ಕಡೆ ಅಮರಾಂತ ಮತ್ತು ಇತರರು ಸುಲಭವಾಗಿ ಆ ಚಿಹ್ನೆಯನ್ನು ಕಷ್ಟವೇ ಇಲ್ಲದಂತೆ ಒರೆಸಿಹಾಕಿದರು. "ಹಾಗಿರೋದೇ ಒಳ್ಳೆಯದಾಯಿತು" ಎಂದು ಉರ್ಸುಲಾ ಅವರು ಹೊರಡುವಾಗ ಹೇಳಿದಳು. "ಇಂದಿನಿಂದ ನೀವು ಯಾರೆಂಬುದು ಪ್ರತಿಯೊಬ್ಬರಿಗೂ ತಿಳಿಯುತ್ತದೆ". – ಎಂದು ಮಾತು ಮುಂದುವರೆಸಿದಳು. ಅವರು ಸೈನಿಕರಂತೆ ಕೂಡಿ ಸಂಗೀತಗಾರರ ಗುಂಪಿನೊಂದಿಗೆ, ಪಟಾಕಿಗಳ ಸದ್ದಿನೊಂದಿಗೆ ಹೊರಟರು. ಅವರು ಹೊರಟಾಗ ಬ್ಯುಂಡಿಯಾ ಸಂತತಿಯ ಬೀಜ ಅನೇಕ

ಶತಮಾನಗಳವರೆಗೂ ಸಾಕಕ್ಷಿದೆ ಎನ್ನುವ ಅಭಿಪ್ರಾಯವನ್ನು ಊರಿನಲ್ಲಿ ಹುಟ್ಟುಹಾಕಿದರು. ಅರೆಲಿಯಾನೊ ಟ್ರಿಸ್ಟೆ, ಬೂದಿಯ ಶಿಲುಬೆ ಚಿಹ್ನೆಯನ್ನು ಹಣೆ ಮೇಲೆ ಇರಿಸಿಕೊಂಡು ಜೋಸ್ ಆರ್ಕಾಡಿಯೊ ಬ್ಯುಂಡಿಯಾ ಆವಿಷ್ಕಾರಗಳ ವಿಭ್ರಾಂತಿ ಸ್ಥಿತಿಯಲ್ಲಿನ ಕನಸಾಗಿದ್ದ ಐಸ್ ಫ್ಯಾಕ್ಟರಿಯನ್ನು ಊರಿನ ಅಂಚಿನಲ್ಲಿ ಸ್ಥಾಪಿಸಿದ. ಅವನು ಬಂದ ಕೆಲ ತಿಂಗಳ ನಂತರ, ಎಲ್ಲರಿಗೂ ಪ್ರಿಯನಾಗಿದ್ದ, ಪರಿಚಿತನಾಗಿದ್ದ ಅರೆಲಿಯಾನೊ ಟ್ರಿಸ್ಟಿ ತನ್ನ ತಾಯಿ ಮತ್ತು ಅವಿವಾಹಿತ ತಂಗಿ(ಕರ್ನಲ್‌ಗೆ ಹುಟ್ಟಿದವಳಾಗದ) ಯನ್ನು ಕರೆಸಿಕೊಳ್ಳುವ ವಿಚಾರದಿಂದ ಮನೆಗಾಗಿ ಹುಡುಕಾಡಿದ. ಚೌಕದ ಮೂಲೆಯಲ್ಲಿ ಯಾರೊ ಬಿಟ್ಟಿದ್ದ ದೊಡ್ಡ ಮನೆಯಲ್ಲಿ ಆಸಕ್ತಿ ಉಂಟಾಗಿ, ಅದನ್ನು ಯಾರದ್ದೆಂದು ವಿಚಾರಿಸಿದ. ಬಹಳ ಹಿಂದೆ ಒಬ್ಬ ವಿಧವೆ ಈ ಮನೆ ಮಾಲಿಕಳಾಗಿದ್ದಳೆಂದೂ ಗೋಡೆ ಸುಣ್ಣ ಮತ್ತು ಮಣ್ಣು ತಿನ್ನುತ್ತಲೇ ಬದುಕಿದ್ದಳೆಂದೂ ಅವಳ ಕಡೆಗಾಲದಲ್ಲಿ ಒಂದೆರಡು ಬಾರಿ ಮಾತ್ರ ಬೀದಿಯಲ್ಲಿ ಕೃತಕ ಹೂಗಳಿನ ಹ್ಯಾಟು ಬೆಳ್ಳಿ ಬಣ್ಣದ ಶೂ ಧರಿಸಿ ಓಡಾಡಿದ್ದನ್ನು ಮತ್ತು ಚೌಕ ದಾಟಿ ಬಿಷಪ್ ಅವರಿಗೆ ಪತ್ರವನ್ನು ಕಳಿಸಲು ಪೋಸ್ಟ್ ಆಫೀಸಿಗೆ ಹೋದದ್ದನ್ನೂ ವಿವರಿಸಿದ. ಅವಳ ಜೊತೆಗಿದ್ದ ಒಬ್ಬಳೇ ಒಬ್ಬ ಸೇವಕಿ ಬಹಳ ಕ್ರೂರಿಯಾಗಿದ್ದು, ಮನೆ ಒಳಗೆ ಬರುವ ನಾಯಿ ಬೆಕ್ಕು ಅಥವಾ ಬೇರೆ ಯಾವುದೇ ಪ್ರಾಣಿಯಿರಲಿ ಅವುಗಳನ್ನು ಕೊಂದು ಬೀದಿಗೆ, ಜನಕ್ಕೆ ತೊಂದರೆ ಕೊಡುವ ಉದ್ದೇಶದಿಂದ ಎಸೆಯುತ್ತಿದ್ದ ವಿಷಯವನ್ನೂ ತಿಳಿಸಿದರು. ಕಡೆಯದಾಗಿ ಎಸೆದಿದ್ದ ಪ್ರಾಣಿ ಎಷ್ಟೋ ದಿನಗಳಿಂದಿದ್ದು ಸೂರ್ಯನ ಶಾಖದಿಂದಾಗಿ ಅದರ ಚರ್ಮ ಚೆನ್ನಾಗಿ ಬೆಂದು ಮುದುಡಿ ಹೋಗಿತ್ತು. ನೋಡಿದ ಜನ ಯುದ್ಧ ಮುಗಿಯುವುದಕ್ಕೆ ಬಹಳ ಮೊದಲೇ ಆ ಮನೆಯ ಯಜಮಾನಿ ಮತ್ತು ಸೇವಕಿ ಸತ್ತು ಹೋಗಿರಬೇಕೆಂದು ಭಾವಿಸತೊಡಗಿದ್ದರು. ಇನ್ನೂ ಆ ಮನೆ ಉಳಿದಿರುವುದೂ ಕೂಡಾ ಇತ್ತೀಚಿನ ದಿನಗಳಲ್ಲಿ ಬಿರುಗಾಳಿ, ಭಾರಿ ಮಳೆಯಂಥ ಉತ್ಪಾತಗಳು ಉಂಟಾಗಿಲ್ಲವಾದ್ದರಿಂದ, ತುಕ್ಕು ಹಿಡಿದುಕೊಂಡಿಗಳು ಕಳಚಿವೆ. ಬಾಗಿಲುಗಳು ನಿಂತಿರುವುದೂ ಕೂಡಾ ರಾಶಿ ರಾಶಿ ಜೇಡನ ಬಲೆಗಳಿಂದ. ಕಿಟಕಿಗಳು ತೇವದಿಂದ ಮೆತ್ತಿ ಮುಚ್ಚಿಕೊಂಡಿವೆ. ನೆಲದ ಬಿರುಕುಗಳಲ್ಲಿ ಹುಲ್ಲು ಗಿಡಗಳು ಕಾಡು ಹೂಗಿಡಗಳು ಬೆಳೆದಿವೆ. ಅಲ್ಲದೆ ಹಲ್ಲಿಗಳು, ಹುಳುಹುಪ್ಪಟೆಗಳು ತುಂಬಿಕೊಂಡಿರುವುದನ್ನು ನೋಡಿದರೆ ಯಾರಿಗಾದರೂ ಒಂದು ಅರ್ಧ ಶತಮಾನದಷ್ಟು ಕಾಲದಿಂದ ಮನುಷ್ಯ ಜೀವಿಯೊಂದೂ ಅಲ್ಲಿ ವಾಸವಾಗಿಲ್ಲ ಎನಿಸುತ್ತದೆ. ಹೋಗಲೇಬೇಕೆಂದು ಮನಸ್ಸು ಮಾಡಿದ್ದ ಟ್ರಿಸ್ಟೆಗೆ ಇಷ್ಟೆಲ್ಲಾ ಪ್ರಮಾಣಗಳು ಅಲ್ಲಿ ಹೋಗಲು ಬೇಕಿರಲಿಲ್ಲ. ಅವನು ಒಳಗೆ ಹೋಗಲು ಬಾಗಿಲನ್ನು ತಳ್ಳಿದ್ದೇ, ಬಾಗಿಲೇ ಹುಳು ತಿಂದಿದ್ದ ಫ್ರೇಮಿನೊಂದಿಗೆ ಧೂಳಿನ ರಾಶಿಯನ್ನು ಹೊಮ್ಮಿಸುತ್ತ ಬಿದ್ದು ಹೋಯಿತು. ನಂತರ ನೋಡಿದಾಗ ಕೋಣೆಯ ಮಧ್ಯದಲ್ಲಿ ಜೀರ್ಣಶೀರ್ಣ ಹೆಂಗಸೊಬ್ಬಳು ಹಳೆಕಾಲದ ಉಡುಗೆಯೊಂದಿಗೆ, ಉದುರಿದ ಕೂದಲ ತಲೆ ಮೇಲೆ ಒಂದೆರಡು ಹಳದಿ ದಾರಗಳಿದ್ದು, ಅಗಲವಾದ ಕಣ್ಣುಗಳೊಂದಿಗೆ ಇನ್ನೂ ಸುಂದರಿಯಾಗಿ ಕಾಣುತ್ತ, ಬತ್ತಿದ ಭರವಸೆಯಲ್ಲಿ, ಏಕಾಕಿತನದ ನೀರಸ ಬದುಕಿನ ಪರಿಣಾಮವಾಗಿ ಸುಕ್ಕುಸುಕ್ಕಾದ ಮುಖದ ಚರ್ಮದೊಂದಿಗೆ ಇದ್ದುದನ್ನು ನೋಡಿದಾಗ ಬೇರೆ ಯಾವುದೋ ಲೋಕದ ದೃಶ್ಯವೆನಿಸಿತು. ಆಕೆ ಕೈಯಲ್ಲಿ ಪಿಸ್ತೂಲು ಹಿಡಿದಿದ್ದನ್ನು ಅವನು ಅಷ್ಟಾಗಿ ಗಮನಿಸಿಯೇ ಇರಲಿಲ್ಲ.

"ದಯವಿಟ್ಟು ಕ್ಷಮೆಯಿರಲಿ" ಎಂದು ಮೆಲ್ಲಗೆ ಹೇಳಿದ. ನಾಜೂಕಾದ ಪೀಠೋಪಕರಣಗಳಿಂದ ತುಂಬಿದ್ದ ಕೋಣೆಯ ಮಧ್ಯದಲ್ಲಿ ಕುಳಿತಿದ್ದ ಅವಳು ಆ ಆಜಾನುಬಾಹುವನ್ನು, ಹಣೆ ಮೇಲೆ ಬೂದಿಯ ಚಿತ್ತಾರದೊಂದಿಗಿದ್ದುದನ್ನು ಧೂಳಿನ ಮುಸುಕಿನಲ್ಲಿ ಬೇರೆ ಯಾವುದೋ ಕಾಲದವನಂತೆ ಮಸುಕು ಮಸುಕಾಗಿ ಕಾಣುತ್ತಿದ್ದ. ಅವನನ್ನು ಅಂಗುಲಂಗುಲವಾಗಿ ಪರೀಕ್ಷಿಸುವ ರೀತಿಯಲ್ಲಿ ನೋಡಿದಳು. ಭುಜದ ಮೇಲೆ ಬಂದೂಕನ್ನು ಇರಿಸಿಕೊಂಡಿದ್ದ. ಕೈಯಲ್ಲಿ ಮೊಲಗಳ ಸರವನ್ನು ಹಿಡಿದಿದ್ದ.

"ದೇವರೆ!.... ಹಳೆಯ ನೆನಪುಗಳನ್ನು ಹೊತ್ತು ಅವರು ಈಗ ಬರುವುದು ಬೇಡ" ಎಂದು ಮೆಲುದನಿಯಲ್ಲಿ ಹೇಳಿದಳು.

"ನನಗೆ ಬಾಡಿಗೆಗೆ ಮನೆ ಬೇಕಿತ್ತು" ಅರೆಲಿಯಾನೊ ಟ್ರಿಸ್ಟೆ ಹೇಳಿದ. ಹೆಂಗಸು ಪಿಸ್ತೂಲನ್ನು ಎತ್ತಿ ಹಣೆ ಮೇಲಿದ್ದ ಬೂದಿಯ ಶಿಲುಬೆಗೆ ಗುರಿಯಿಟ್ಟು, ಕೊಲ್ಲಲೇಬೇಕೆಂಬ ನಿರ್ಧಾರವಿದ್ದಂತೆ ಟ್ರಿಗ್ಗರನ್ನು ಹಿಡಿದಿದ್ದಳು.

"ಹೊರಡಾಚೆ" ಎಂದು ಗಟ್ಟಿಯಾಗಿ ಆದೇಶಿಸಿದಳು. ಆ ರಾತ್ರಿ ಟ್ರಿಸ್ಟೆ ಮನೆಯವರಿಗೆ ಈ ಘಟನೆಯನ್ನು ವಿವರಿಸಿದ. ಉರ್ಸುಲಾ ಉಮ್ಮಳದಿಂದ ಕಣ್ಣೀರು ಸುರಿಸಿದಳು. "ಓ ದೇವರೆ! ಅವಳಿನ್ನೂ ಬದುಕಿದ್ದಾಳೆಯೇ" ಎಂದು ದುಃಖ ಅಚ್ಚರಿಗಳೊಂದಿಗೆ ತಲೆಯನ್ನು ಎರಡೂ ಕೈಗಳಿಂದ ಒತ್ತಿಹಿಡಿದುಕೊಂಡಳು. ಕಾಲ, ಯುದ್ಧ, ಲೆಕ್ಕವಿಲ್ಲದ ಪ್ರತಿದಿನದ ತಾಪತ್ರಯಗಳ ನಡುವೆ ರೆಬೆಕಾಳನ್ನು ಅವಳು ಮರೆತೇ ಬಿಟ್ಟಿದ್ದಳು. ಕೊಳೆಯುತ್ತಿರುವ ಮನೆಯ ಬಿಲದಲ್ಲಿ ಅವಳಿನ್ನೂ ಬದುಕಿದ್ದಾಳೆಂಬ ವಿಚಾರ, ನಿಷ್ಠುರ ಪ್ರವೃತ್ತಿಯ ಮತ್ತು ವಯಸ್ಸಾಗುತ್ತಿದ್ದ ಅಮರಾಂತಳೂ ಕ್ಷಣಕ್ಷಣವೂ ನೆನಪಿನಲ್ಲಿ ಉಳಿದಿತ್ತು. ಒಂಟಿಯಾಗಿ ಮಲಗಿದ್ದ ಹಾಸಿಗೆಯಿಂದ ಮಂಜುಗಟ್ಟಿದ್ದ ಮನಸ್ಸು ಜಾಗ್ರತವಾದಾಗ, ಸ್ನಾನ ಮಾಡುವಾಗ ಬಾಡಿದ ಮೊಲೆಗಳನ್ನು ಸೋಪಿನಿಂದ ತೊಳೆಯುವಾಗ ತೆಳ್ಳಗಾದ ಹೊಟ್ಟೆ ಉಜ್ಜಿಕೊಳ್ಳುವಾಗ, ಗರಿಗರಿಯಾದ ಪೆಟ್ಟಿಕೋಟು ಹಾಕಿಕೊಳ್ಳುವಾಗ, ವಯಸ್ಸಾದ ತಾನು ಒಳಕುಪ್ಪಸ ಹಾಕಿಕೊಳ್ಳುವಾಗ ಕಪ್ಪು ಬ್ಯಾಂಡೇಜನ್ನು ಬದಲಿಸುವಾಗ – ಹೀಗೆ ಒಂದೊಂದು ಕ್ಷಣವೂ ಯಾವ ಕೆಲಸದಲ್ಲಿಯೇ ಇರಲಿ ಅವಳನ್ನು ನೆನಪಿಸಿಕೊಳ್ಳುತ್ತಿದ್ದಳು. ಮಲಗಿರಲಿ, ಎದ್ದಿರಲಿ, ಎಂಥ ಸುಖವಿರಲಿ ಕಷ್ಟವಿರಲಿ ಅಮರಾಂತಳಿಗೆ ರೆಬೆಕಾಳ ನೆನಪು ಮಾಸಿರಲಿಲ್ಲ. ಅವಳ ಏಕಾಕಿತನದಲ್ಲಿ ನೆನಪಿಗೆ ಉಳಿಸಿಕೊಂಡದ್ದು ಅವಳನ್ನೇ. ಅವಳ ಹೃದಯದಲ್ಲಿ ಮಡುಗಟ್ಟಿದ್ದ ಹಳೆಯ ನೆನಪುಗಳು ಈಗ ಸುಟ್ಟು ಅವು ಪವಿತ್ರಗೊಂಡಿದ್ದವು. ತನ್ನ ಶತೃಗಳನ್ನೂ ಕಹಿಭಾವನೆಗಳು ಇರಿಸಿಕೊಂಡಿದ್ದವರನ್ನೂ ವಿಶಾಲ ಮನಸ್ಸಿನೊಂದಿಗೆ ಸ್ವೀಕರಿಸಿದ್ದಳು. ರೆಬೆಕಾ ಬದುಕಿರುವ ವಿಷಯ ಅಮರಾಂತಳಿಂದ ರೆಮೆಡಿಯೋಸ್ ದ ಬ್ಯೂಟಿ ತಿಳಿದುಕೊಂಡಿದ್ದಳು. ಪಾಳು ಬಿದ್ದಂತಿರುವ ಆ ಮನೆಯನ್ನು ಹಾದು ಹೋಗುವಾಗಲೆಲ್ಲ ಯಾವುದಾದರೊಂದು ಕಹಿ ಘಟನೆಯನ್ನು ಅವಳಿಗೆ ಹೇಳುತ್ತಿದ್ದಳು. ತಮ್ಮ ದ್ವೇಷದ ಬಗ್ಗೆ, ಬಹಳ ಕಾಲದವರೆಗೆ ಇರಿಸಿಕೊಂಡಿದ್ದ ಅಸೂಯೆ ಬಗ್ಗೆ, ಅವಳು ಸತ್ತ ನಂತರ ಅದನ್ನು ಮುಂದುವರೆಸುವುದಕ್ಕೆ ಪ್ರಯತ್ನಿಸಿದ್ದು – ಹೀಗೆ ಎಲ್ಲವನ್ನೂ ಹೇಳುತ್ತಿದ್ದಳು. ಸಾವಿನಾಚೆಗೂ ಸಾಧಿಸುತ್ತಿದ್ದದ್ದು, ಅವಳ ಯೋಜನೆ ನಿಷ್ಫಲವಾದದ್ದು.

ಇದಕ್ಕೆ ಕಾರಣವಾಗಿ ರೆಮೆಡಿಯೋಸ್ ಯಾವುದೇ ಭಾವನೆಗಳಿಗೆ ಸ್ಪಂದಿಸದೆ ಇರುತ್ತಿದ್ದುದು – ಹೀಗೆ ನೂರೆಂಟು ವಿಚಾರಗಳನ್ನು ಹೇಳುತ್ತಿದ್ದಳು. ಉರ್ಸುಲಾ, ಅಮರಾಂತಾಳಿಗಿಂತ ಭಿನ್ನವಾದ ಸನ್ನಿವೇಶಗಳಿಂದ ಕಷ್ಟಪಟ್ಟದ್ದರಿಂದ ರೆಬೆಕಾಳನ್ನು ಪರಿಶುದ್ಧ ಮನಸ್ಸಿನಿಂದ, ಅತ್ಯಂತ ದೈನ್ಯ ಸ್ಥಿತಿಯಲ್ಲಿ, ತಂದೆತಾಯಿಯರನ್ನು ಕಳೆದುಕೊಂಡು, ಅವರ ಅಸ್ಥಿಗಳ ಚೀಲವನ್ನು ಹೆಗಲಿಗೇರಿಸಿಕೊಂಡು ಅನಾಥವಾಗಿ ಮನೆಗೆ ಬಂದದ್ದನ್ನು ನೆನಪಿಸಿಕೊಳ್ಳುತ್ತಿದ್ದಳು. ಅವಳು ತನ್ನ ಜೊತೆ ತಂದಿದ್ದ ಅಸ್ಥಿಗಳಿಂದಾಗಿ ತಮ್ಮ ವಂಶವೃಕ್ಷಕ್ಕೆ ಸೇರಲಾಗದ್ದನ್ನು ನೆನಪಿಸಿಕೊಳ್ಳುತ್ತಿದ್ದಳು. ಅರೆಲಿಯಾನೊ ಸೆಗುಂಡೊ ಅವಳನ್ನು ಮನೆಗೆ ಕರೆತಂದು ಅವಳನ್ನು ನೋಡಿಕೊಳ್ಳಬೇಕೆಂದು ನಿರ್ಧರಿಸಿದ. ಆದರೆ ಅವನ ಒಳ್ಳೆ ಉದ್ದೇಶವನ್ನು ಅರ್ಥಮಾಡಿಕೊಳ್ಳದ ರೆಬೆಕಾ ಅವನ ಆಸೆಗೆ ತಣ್ಣೀರು ಎರಚಿದಳು. ಅವಳಿಗೆ ಎಷ್ಟೋ ವರ್ಷಗಳಿಂದ ಅನುಭವಿಸಿದ ನೋವು ದುಃಖ ಮರೆಯಲು ಏಕಾಂತದ ಅಗತ್ಯತೆ ಇತ್ತು. ಅದನ್ನು ಮುಪ್ಪಿನ ಕಾರಣದಿಂದ ತನ್ನ ಬಗ್ಗೆ ತೋರಿಸಲಾಗುತ್ತಿರುವ ತೋರಿಕೆಯ ಕಳಕಳಿಯ ಜೊತೆ ವಿನಿಮಯ ಮಾಡಿಕೊಳ್ಳಲು ಸಿದ್ಧಳಿರಲಿಲ್ಲ.

ಫೆಬ್ರವರಿಯಲ್ಲಿ ಕರ್ನಲ್ ಅರೆಲಿಯಾನೊ ಬ್ಯುಂಡಿಯಾನ ಉಳಿದ ಹದಿನಾರು ಮಕ್ಕಳು ಬೂದಿಯ ಶಿಲುಬೆಯ ಗುರುತನ್ನು ಇನ್ನೂ ಹಣೆ ಮೇಲೆ ಇರಿಸಿಕೊಂಡೇ ಹಿಂತಿರುಗಿದಾಗ ಟ್ರಿಸ್ಟೆ ಅವರಿಗೆ ರೆಬೆಕಾಳ ಬಗ್ಗೆ ತಿಳಿಸಿದ. ಉತ್ಸವದ ಸಂಭ್ರಮದ ನಡುವೆಯೇ ಅರ್ಧ ದಿನದೊಳಗೆ ರೆಬೆಕಾಳ ಮನೆಯ ಸ್ವರೂಪವನ್ನೇ ಬದಲಾಯಿಸಿಬಿಟ್ಟರು. ಬಾಗಿಲುಗಳನ್ನು ಕಿಟಕಿಗಳನ್ನು ಬದಲಾಯಿಸಿದರು. ಕಣ್ಣಿಗೆ ಎದ್ದುಕಾಣುವ ರೀತಿಯಲ್ಲಿ ಬಣ್ಣ ಬಳಸಿದರು. ಗೋಡೆ ಮತ್ತು ನೆಲಕ್ಕೆ ಹೊಸದಾಗಿ ಸಿಮೆಂಟು ಹಾಕಿಸಿದರು. ಆದರೆ ಒಳಗಿನ ಕೆಲಸಗಳನ್ನು ಮಾಡಲು ಅವರಿಗೆ ಅಧಿಕಾರವಿರಲಿಲ್ಲ. ರೆಬೆಕಾ ಬಾಗಿಲ ಬಳಿಗೂ ಸುಳಿಯಲಿಲ್ಲ. ಹೊರಗಿನ ಕೆಲಸಗಳನ್ನೆಲ್ಲ ಮುಗಿಸಲು ಬಿಟ್ಟಳು. ನಂತರ ಅದಕ್ಕೆಲ್ಲ ಎಷ್ಟು ಖರ್ಚಾಗಿರಬಹುದೆಂದು ಲೆಕ್ಕ ಹಾಕಿದಳು. ಮತ್ತು ತನ್ನ ಜೊತೆಗೆ ಇದ್ದ ಸೇವಕಿಯ ಕೈಯಲ್ಲಿ, ಒಂದಷ್ಟು ನಾಣ್ಯಗಳನ್ನು ಅವರಿಗೆ ಕಳಿಸಿಕೊಟ್ಟಳು. ಆದರೆ ಆ ನಾಣ್ಯಗಳು ಕಡೆಯ ಯುದ್ಧ ಮುಗಿಯುತ್ತಿದ್ದಂತೆ ಚಲಾವಣೆಯಿಂದ ಹಿಂದಕ್ಕೆ ತೆಗೆದುಕೊಂಡಿದ್ದರು. ಆದರೆ ರೆಬೆಕಾಗೆ ಅದು ತಿಳಿದಿರಲಿಲ್ಲವಾಗಿ, ಇನ್ನೂ ಅವುಗಳಿಗೆ ಬೆಲೆ ಇದೆ ಎಂದುಕೊಂಡಿದ್ದಳು. ಪ್ರಪಂಚದಿಂದ ಪ್ರತ್ಯೇಕಿಸಿಕೊಂಡ ಅವಳ ರೀತಿ ಅವರಿಗೆ ಅಚ್ಚರಿಯೆನಿಸಿತು. ಅವಳ ಹಠ ಮೊಂಡುತನಗಳಿಂದ ಅವಳನ್ನು ರಕ್ಷಿಸಿ ಉಸಿರುಕಟ್ಟುವ ಆ ಗುಹೆಯಿಂದ ತಾಜಾ ಗಾಳಿಗೆ ಒಡ್ಡಬೇಕೆನ್ನುವ ಅವರ ವಿಚಾರ ಸಾಧ್ಯವಾಗುವಂಥಾದ್ದಲ್ಲ ಎಂಬುದನ್ನು ಅರ್ಥಮಾಡಿಕೊಂಡರು.

ಎರಡನೆ ಬಾರಿಗೆ ಬಂದಾಗ ಕರ್ನಲ್ ಅರೆಲಿಯಾನೊ ಬ್ಯುಂಡಿಯಾನ ಮತ್ತೊಬ್ಬ ಮಗ ಟ್ರಿಸ್ಟೆಯ ಜೊತೆ ಕೆಲಸ ಮಾಡಬೇಕೆಂದು ಹಿಂದಕ್ಕೆ ಉಳಿದ. ಅವನ ಮಕ್ಕಳಲ್ಲಿ ಮೊಟ್ಟಮೊದಲ ನಾಮಕರಣ ಸಂಸ್ಕಾರಕ್ಕೆಂದು ಬಂದವನು ಇವನೆ. ಅಮರಾಂತಾ ಉರ್ಸುಲಾ ಅವನನ್ನು ಅವನ ತುಂಟತನಕ್ಕಾಗಿ ಚೆನ್ನಾಗಿ ನೆನಪಿಟ್ಟುಕೊಂಡಿದ್ದಾರೆ. ಮುರಿಯಬಹುದಾದ ಯಾವುದೇ ಸಾಮಾನು ಸಿಕ್ಕಿದರೂ ಅದನ್ನು ಮುರಿಯುತ್ತಲೇ

ಇದ್ದುದನ್ನು ಮರೆಯಲು ಅವರಿಗೆ ಸಾಧ್ಯವಿರಲಿಲ್ಲ. ಕಾಲವೇ ಅವನ ಈ ತುಂಟತನವನ್ನು ಮೆತ್ತಗೆ ಮಾಡಿತ್ತು. ಸಾಧಾರಣ ಎತ್ತರ, ಸಿಡುಬಿನ ಕಲೆಗಳಿದ್ದವು. ಆದರೆ ಎಂಥ ಗಟ್ಟಿ ವಸ್ತುಗಳೇ ಇರಲಿ ಅವನು ಧ್ವಂಸ ಮಾಡುವಷ್ಟು ಖಂಡ ಬಲವನ್ನು ಹೊಂದಿದ್ದ. ಈಗಲೂ ಅದು ಹಾಗೇ ಇದೆ. ಎಷ್ಟೊಂದು ತಟ್ಟೆಗಳನ್ನು ಮುರಿದು ಹಾಕಿದ್ದನ್ನು ನೋಡಿ, ಫರ್ನಾಂಡಾ ಗಟ್ಟಿಯಾದ ಮಿಶ್ರಲೋಹದ ಸಲಕರಣೆಗಳನ್ನು ತಂದು ಕೊಡಲು ನಿರ್ಧರಿಸಿದಳು. ಅಮೂಲ್ಯವಾದ ತನ್ನ ಚೈನಾ ಪಾತ್ರೆ ಪರಡಿ ನಾಶಮಾಡುವುದಕ್ಕೆ ಮೊದಲೇ ಮುನ್ನೆಚ್ಚರಿಕೆ ವಹಿಸಿದಳು. ಕಡೆಗೆ ಯಾವುದಕ್ಕೂ ಜಗ್ಗದಿದ್ದ ಲೋಹದ ತಟ್ಟೆಗಳೂ ಕೂಡಾ ಅವನ ಕೈಗೆ ಬಿದ್ದರೆ ಕಚ್ಚು ಬೀಳುತ್ತಿತ್ತು ಇಲ್ಲವೆ ತಿರುಚಿ ಹೋಗುತ್ತಿತ್ತು. ಆದರೆ ಈ ಅಖಂಡ ಬಲಕ್ಕೆ ಪರಿಹಾರವಾಗಿ ಅವನಿಗೆ ಒಳ್ಳೆಯ ಮನಸ್ಸಿತ್ತು. ಯಾರೊಂದಿಗಾದರೂ ತುಂಬ ಬೇಗನೆ ವಿಶ್ವಾಸವನ್ನು ಗಳಿಸಿಬಿಡುತ್ತಿದ್ದ. ಅವನ ದೈಹಿಕ ಚಟುವಟಿಕೆಗಳಿಗೆ, ಕೆಲಸಕ್ಕೆ ಅವನಲ್ಲಿದ್ದ ಸಾಮರ್ಥ್ಯ ಎಲ್ಲರ ಮೆಚ್ಚುಗೆಯನ್ನು ಗಳಿಸಿತ್ತು. ಅಲ್ಪ ಸಮಯದಲ್ಲಿಯೆ ಪಿಸ್ ಉತ್ಪಾದನೆ ಎಷ್ಟು ಹೆಚ್ಚಾಯಿತೆಂದರೆ, ಸ್ಥಳೀಯ ಮಾರುಕಟ್ಟೆಗೆ ಮಿತಿಮೀರಿದಂತಾಗಿದ್ದುದರಿಂದ ಜೌಗುಪ್ರದೇಶದ ಇತರೆಡೆಗಳಿಗೆ ಮಂಜಿನ ಮಾರುಕಟ್ಟೆಯನ್ನು ವಿಸ್ತರಿಸಬೇಕಾಯಿತು. ಇದೇ ಸಮಯದಲ್ಲಿ, ತನ್ನ ವ್ಯಾಪಾರವನ್ನು ಆಧುನಿಕೀಕರಣಕ್ಕೆ ಒಳಗಾಗಿಸುವ ಒಳ್ಳೆಯ ನಿರ್ಧಾರದ ಜೊತೆಗೆ ವ್ಯಾಪಾರವನ್ನು ಪ್ರಪಂಚದ ಬೇರೆ ಬೇರೆ ಕಡೆಗೆ ಜೋಡಿಸಬೇಕೆಂದೂ ತೀರ್ಮಾನಿಸಿದರು.

"ನಾವು ರೈಲು ರಸ್ತೆ ಹಾಕಬೇಕು" ಅವನು ಹೇಳಿದ. ಆ ಶಬ್ದವನ್ನು ಮಕೊಂಡೊದಲ್ಲಿ ಮೊಟ್ಟ ಮೊದಲ ಬಾರಿಗೆ ಕೇಳಿದಂತಾಗಿತ್ತು. ಅರೆಲಿಯಾನೊ ಟ್ರಿಸ್ಟೆ ಮೇಜಿನ ಮೇಲೆ ಹರಡಿ ತೋರಿಸುತ್ತಿದ್ದ ನಕ್ಷೆ, ಜೋಸ್ ಆರ್ಕಾಡಿಯೊ ಬ್ಯುಂಡಿಯಾ 'ಸೋಲಾರ್ ವಾರ್ ಫೇರ್' ಕುರಿತು ಯೋಜನೆಯನ್ನು ಚಿಂತಿಸಿ ತಯಾರಿಸಿದ ನಕ್ಷೆಯಂತೆಯೇ ಇತ್ತು. ಅದನ್ನು ಗಮನಿಸಿದ ಉರ್ಸುಲಾಗೆ ಕಾಲ ಚಕ್ರಾಕಾರದಲ್ಲಿದೆ ಎನ್ನುವುದು ದೃಢವಾಯಿತು. ಆದರೆ ಅವನಂತೆ ಟ್ರಿಸ್ಟ್ ನಿದ್ದೆಗೆಡಿಸಿಕೊಂಡಿರಲಿಲ್ಲ; ಊಟ ಬೇಡವೆಂದು ತಿರಸ್ಕರಿಸಿರಲಿಲ್ಲ. ಮತ್ತು ಸಿಡಿಮಿಡಿಗೊಳ್ಳುತ್ತಾ ಯಾರನ್ನೂ ಹಿಂಸಿಸಲಿಲ್ಲ. ಈ ಯೋಜನೆ ಆತುರಾತುರವಾಗಿ ಮಾಡುವಂಥದ್ದಲ್ಲವೆಂದು ಯೋಚಿಸಿ ಅದರ ಪೂರೈಕೆಗೆ ಅನಿವಾರ್ಯವಾದ ಹಣಕಾಸು, ಮಾಡುವ ಸಮಯ ಎಲ್ಲವನ್ನೂ ಗಮನಿಸಿ, ಯಾವುದೇ ತೊಂದರೆಯಿಲ್ಲದೆ ಆರಂಭಿಸಿದ. ಅರೆಲಿಯಾನೊ ಸೆಗುಂಡೊ ಅಜ್ಜನ ಅಂಶ ಸ್ವಲ್ಪ ಇರಿಸಿಕೊಂಡಿದ್ದರೆ, ಕರ್ನಲ್ ಅರೆಲಿಯಾನೊ ಇರಿಸಿಕೊಂಡಿದ್ದು ಸ್ವಲ್ಪ ಕಡಿಮೆಯಿತ್ತು. ಇದೊಂದು ರೀತಿಯಲ್ಲಿ ವಿಪರೀತ ವ್ಯಂಗ್ಯವೆಂದು ತೋರುತ್ತಿತ್ತು. ಅವನು ತನ್ನ ತಮ್ಮ ನೌಕಾಯಾನ ಯೋಜನೆಗೆಂದು ಎಂಥ ಮನಸ್ಸಿನಿಂದ ಕೊಟ್ಟನೋ ಅದೇ ಮನಸ್ಸಿನಿಂದ ರೈಲು ರಸ್ತೆಗಾಗಿ ಹಣವನ್ನು ಕೊಟ್ಟ, ಅರೆಲಿಯಾನೊ ಟ್ರಿಸ್ಟೆ, ಕ್ಯಾಲೆಂಡರ್ ನೋಡಿ ಮುಂದಿನ ಬುಧವಾರ, ಮಳೆಗಾಲ ಮುಗಿಯುತ್ತಿದ್ದಂತೆಯೇ ಹಿಂತಿರುಗಲು ಯೋಚಿಸಿ ಹೊರಟ. ಅವನ ಬಗ್ಗೆ ಯಾವುದೇ ಸುದ್ದಿ ಇರಲಿಲ್ಲ. ಅರೆಲಿಯಾನೊ ಸೆಂಟೆನೊ ಫ್ಯಾಕ್ಟರಿಯ ಅಭಿವೃದ್ಧಿಯಿಂದ ಅತಿ ಉತ್ಸಾಹಿತನಾಗಿ ಹಣ್ಣಿನ ರಸಗಳಿಂದ ಪಿಸ್ ತಯಾರಿಕೆಯ ಪ್ರಯೋಗಕ್ಕೆ ಮುಂದಾದ. ಯಾವುದೇ ಮೂಲಭೂತ ಸಿದ್ಧಾಂತಗಳಾಗಲೀ ಪೂರ್ವಾನುಭವವಾಗಲಿ, ಕಲ್ಪನೆಯಾಗಲಿ

ಇಲ್ಲದೆ ಷರಬತ್ ತಯಾರಿಸಲು ಮುಂದಾದ. ತನ್ನದೇ ಸ್ವಂತ ಅನುಭವದ ಮೂಲಕ ಉತ್ಪಾದನೆಯನ್ನು ವೈವಿಧ್ಯಮಯವಾಗಿಸಲು ಆಲೋಚಿಸಿದ. ತನ್ನ ಸೋದರ ಮಳೆಗಾಲ ಮುಗಿಯುತ್ತಿದ್ದಂತೆ ಬರುತ್ತೇನೆಂದವನು ಬೇಸಿಗೆ, ಚಳಿಗಾಲ ಹೀಗೆ ಮುಂದುವರೆದರೂ ಬರಲಿಲ್ಲವಾಗಿ ಅವನಿಗೆ ಈ ಬಗೆಯ ಪ್ರಯೋಗಗಳು ಅನಿವಾರ್ಯವಾಯಿತು. ಮತ್ತೊಂದು ಚಳಿಗಾಲ ಆರಂಭವಾಗುತ್ತಿದ್ದಂತೆ, ಒಬ್ಬ ಹೆಂಗಸು ಸುಡು ಬಿಸಿಲಿನ ಸಮಯದಲ್ಲಿ ಬಟ್ಟೆ ಒಗೆಯುತ್ತಿದ್ದಾಗ, ಗಾಭರಿಯಿಂದ ಗಟ್ಟಿಯಾಗಿ "ಅದು ಬರುತ್ತಿದೆ" ಎಂದು ಕಿರುಚುತ್ತ ಓಡಿಬಂದಳು. ನಂತರ, "ನೋಡೋಕೆ ಹೆದರಿಕೆಯಾಗುವಂತೆ ಅಡಿಗೆ ಮನೆ ಇಡೀ ಊರನ್ನೇ ಎಳೆದುಕೊಂಡು ಬರುತ್ತಿದೆ" ಎಂದು ವಿವರಿಸಿದಳು.

ಆ ಗಳಿಗೆಯಲ್ಲಿ ಭಯಾನಕ ಪ್ರತಿಧ್ವನಿಯೊಂದಿಗೆ ಹೊರಟ ಸೀಟಿ ಸದ್ದು ಮತ್ತು ಏದುಸಿರಿನಿಂದಾಗಿ ಊರೇ ಅಲ್ಲಾಡಿತು. ಹಿಂದಿನ ವಾರಗಳಲ್ಲಿ ಒಂದಷ್ಟು ಜನ ಹಳಿಗಳನ್ನು ಜೋಡಿಸುತ್ತಿದ್ದುದನ್ನು ನೋಡಿದ್ದರಾದರೂ ಇದೂ ಕೂಡಾ ಜಿಪ್ಸಿಗಳ ಮತ್ತೊಂದು ತಂತ್ರವಿರಬೇಕೆಂದು ಆಕಡೆ ಲಕ್ಷ್ಯವನ್ನೇ ಕೊಟ್ಟಿರಲಿಲ್ಲ. ಅವರೇ ಮತ್ತೆ ಬಂದಿರಬೇಕು ಎಂದುಕೊಂಡರು. ಜೆರುಸಲೇಂನ ಹಾದಿಹೋಕರು, ಶಿಳ್ಳೆಗಳು, ಹಳೇ ಹಾಡು ಕುಣಿತಗಳೊಂದಿಗೆ ಬಂದಿರಬೇಕು ಎಂದು ಭಾವಿಸಿದರು. ನಂತರ ಶಿಳ್ಳು, ಸದ್ದುಗಳು ತಣ್ಣಗಾದ ಮೇಲೆ ಊರಿನ ಜನ ರಸ್ತೆ ಕಡೆ ಓಡಿದರು ಮತ್ತು ಅರೆಲಿಯಾನೊ ಟ್ರಿಸ್ಟೆಯನ್ನು ರೈಲುಗಾಡಿಯೊಳಗಿಂದ ಕೈಬೀಸುತ್ತಿರುವುದನ್ನು ನೋಡಿದರು. ಯಾವುದೋ ಮೋಡಿಗೆ ಒಳಗಾದಂತೆ, ಹೂಗಳಿಂದ ಅಲಂಕೃತವಾಗಿದ್ದ ರೈಲುಗಾಡಿ ಎಂಟು ತಿಂಗಳು ತಡವಾಗಿ ಮೊದಲ ಬಾರಿಗೆ ಬಂದು ತಲುಪುತ್ತಿರುವುದನ್ನು ನೋಡುತ್ತಿದ್ದರು. ಏನೂ ಅರಿಯದ ಆ ರೈಲುಗಾಡಿ ಏನೆಲ್ಲ ಅಸ್ಪಷ್ಟತೆಗಳನ್ನು, ಖಚಿತತೆಗಳನ್ನು, ಸಂತಸವನ್ನು, ದುಃಖದ ಕ್ಷಣಗಳನ್ನು, ಎಷ್ಟೋ ಬದಲಾವಣೆಗಳನ್ನು ಅವಘಡಗಳನ್ನು, ಮಕೊಂಡೊದ ಮಧುರ ನೆನಪುಗಳನ್ನು ಹೊತ್ತು ತರಬೇಕಾಗಿದೆ.

○

12

ಇಂಥ ಅದ್ಭುತ ಬದಲಾವಣೆಗಳು ಆವಿಷ್ಕಾರಗಳು ಮೊದಲಾದವುಗಳಿಂದ ದಿಗ್ಭ್ರಾಂತರಾಗಿದ್ದ ಮಕೊಂಡೊ ಮಂದಿಗೆ ತಮ್ಮ ಅಚ್ಚರಿ ಎಲ್ಲಿಂದ ಪ್ರಾರಂಭವಾಯಿತೆಂಬುದನ್ನು ತಿಳಿಯದವರಾಗಿದ್ದರು. ಇಡೀ ರಾತ್ರಿ, ಟ್ರಿಸ್ಟೆ ತಂದಿದ್ದ ವಿದ್ಯುತ್ ಸ್ಥಾವರದಿಂದ ಉರಿಯುತ್ತಿದ್ದ ಮಂಕಾದ ದೀಪಗಳನ್ನು ನೋಡುತ್ತಾ ಕಳೆದರು. ಆ ಪರಿಸರಕ್ಕೆ ಹೊಂದಿಕೊಳ್ಳಲು ಅವರಿಗೆ ಸ್ವಲ್ಪ ಸಮಯ ಮತ್ತು ಪ್ರಯತ್ನ ಬೇಕಾಯಿತು. ಶ್ರೀಮಂತ ವ್ಯಾಪಾರಿ ಬ್ರೂನೊ ಕ್ರೆಸ್ಪಿ, ಥಿಯೇಟರ್‌ನಲ್ಲಿ ಸಿಂಹದ ತಲೆಗಳಿದ್ದ ಟಿಕೆಟ್ ಕೌಂಟರ್‌ಗಳಲ್ಲಿ, ಸಜೀವ ಚಿತ್ರಗಳನ್ನು ತೋರಿಸಿದಾಗ ಸಿಟ್ಟಿಗೆದ್ದಿದ್ದರು. ಒಂದು ಚಿತ್ರದಲ್ಲಿ ಒಂದು ಪಾತ್ರ ಸತ್ತು ಸಮಾಧಿಯಾದವನು, ಅವನ ದುರಂತಕ್ಕಾಗಿ ಕಂಬನಿ ಸುರಿಸುವಂತಾದುದನ್ನು, ನೆನಪಿನಲ್ಲಿಟ್ಟುಕೊಂಡು ಅದೇ ಪಾತ್ರ ಮತ್ತೊಂದು ಚಿತ್ರದಲ್ಲಿ ಅರಬನ ಪಾತ್ರದಲ್ಲಿ ಜೀವಂತವಾಗಿ ಕಾಣಿಸಿಕೊಳ್ಳುತ್ತಿದ್ದ, ಪ್ರೇಕ್ಷಕರು ಕಲಾವಿದರ ಕಷ್ಟಗಳನ್ನು ಹಂಚಿಕೊಳ್ಳಲು ಎರಡು ಸೆಂಟುಗಳನ್ನು ನೀಡಿದ್ದರು. ಅಂಥಾದ್ದರಲ್ಲಿ ಮತ್ತೊಮ್ಮೆ ಕಾಣಿಸಿಕೊಂಡಾಗ ಮೋಸ ಮಾಡಿದ್ದಾನೆನಿಸಿ ದಂಗೆಯೆದ್ದು ಸೀಟುಗಳನ್ನೆಲ್ಲ ಹರಿದು ಚಿಂದಿ ಮಾಡಿದರು. ಕಡೆಗೆ ಬ್ರೂನೊ ಮೇಯರ್‌ನನ್ನು ಪ್ರಾರ್ಥಿಸಿಕೊಂಡಾಗ ಜನರಿಗೆ ಸಿನೆಮಾ

ಕೇವಲ ಒಂದು ಭ್ರಮಾ ಪ್ರಪಂಚ. ಆದ್ದರಿಂದ ಅಷ್ಟೊಂದು ಭಾವೋದ್ವೇಗದ ಅವಶ್ಯಕತೆಯಿಲ್ಲ ಎಂದು ತಿಳಿಸಿ ಹೇಳಲು ಪ್ರಯತ್ನಿಸಿದ. ಅವನ ಅನುತ್ತೇಜಕ ವಿವರಣೆಯಿಂದ ತಾವೆಲ್ಲ ಮೋಸ ಹೋಗಿದ್ದೇವೆ ಎನಿಸಿ ಇನ್ನು ಮುಂದೆ ಮೂವಿಗಳನ್ನು ನೋಡಲು ಹೋಗಬಾರದೆಂದು ನಿರ್ಧರಿಸಿದರು. ಅಲ್ಲದೆ ನಿಜ ಜೀವನದಲ್ಲಿಯೇ ತಾವು ಸಾಕಷ್ಟು ಸಂಕಷ್ಟಗಳನ್ನು ಅನುಭವಿಸುತ್ತಿರುವಾಗ, ಕಾಲ್ಪನಿಕ ವ್ಯಕ್ತಿಗಳ ದುರಾದೃಷ್ಟ, ಕಷ್ಟನಷ್ಟಗಳನ್ನು ಅಭಿನಯಿಸುವುದನ್ನು ನೋಡಲು ಹೋಗಬೇಕೇಕೆ ಎಂದುಕೊಂಡರು. ಮತ್ತೊಂದು, ಇದೇ ರೀತಿಯಲ್ಲಿ ಆದದ್ದೆಂದರೆ ಹಳೆಯ ವಾದ್ಯಗಳಿಗೆ ಬದಲಾಗಿ ಫ್ರಾನ್ಸಿನಿಂದ ಬಂದ ****** ಹೆಂಗಸರು ಫೋನೋಗ್ರಾಫ್ ತಂದಾಗಲೂ, ವಾದ್ಯಗೋಷ್ಠಿಯವರ ಬದುಕಿನ ಮೇಲೆ ಸಾಕಷ್ಟು ಪರಿಣಾಮ ಉಂಟಾಯಿತು. ಮೊದಮೊದಲಿಗೆ ಕುತೂಹಲ ಹೆಚ್ಚಿತು. ಮರ್ಯಾದಸ್ಥ ಹೆಂಗಸರೂ ಕೆಲಸದವರ ವೇಷದಲ್ಲಿ ಫೋನೋಗ್ರಾಫ್‌ನಲ್ಲಿನ ಹೊಸತನವನ್ನು ಪತ್ತೆಹಚ್ಚಲು ಮತ್ತು ನೇರ ಮಾಹಿತಿ ಪಡೆಯಲು ಪ್ರಯತ್ನಿಸಿದರು. ಆದರೆ ಸ್ವಲ್ಪ ಸಮಯದಲ್ಲಿಯೇ ತಮ್ಮ ಸೂಕ್ಷ್ಮ ಅವಗಾಹನೆಯಿಂದ, ಅದರಲ್ಲೇನೂ ಫ್ರಾನ್ಸಿನಿಂದ ಬಂದ ಹೆಂಗಸರು ಹೇಳುವಂತೆ ಎಲ್ಲರೂ ಭಾವಿಸಿದಂತೆ ಹೊಸತನವಿರಲಿಲ್ಲ. ಅದೊಂದು ಯಾಂತ್ರಿಕ ತಂತ್ರವಾಗಿತ್ತೇ ಹೊರತು ಮೋಹಕ ವಸ್ತುವಾಗಿರಲಿಲ್ಲ. ನೈಜ ವಾದ್ಯಗೋಷ್ಠಿಯಲ್ಲಿ ಕಾಣುವ ದಿನನಿತ್ಯದ ಸತ್ಯವಾಗಲೀ ಮಾನವೀಯ ಸ್ಪರ್ಶವಾಗಲಿ ಹೃದಯ ಸ್ಪರ್ಶತ್ವವಾಗಲಿ ಇರಲಿಲ್ಲ ಎಂಬುದನ್ನು ಕಂಡುಕೊಂಡರು. ಫೋನೋಗ್ರಾಫ್ ಎಂದಿಗೂ ಅದಕ್ಕೆ ಹೋಲಿಕೆಯಾಗಲಾರದು ಎಂದೇ ನಂಬಿದರಾದರೂ ಒಂದು ನಿರಾಶೆ ಎದುರಾಯಿತು. ಜನರ ಭಾವನೆ ನಿರೀಕ್ಷೆಗಳಿಗೆ ವಿರುದ್ಧವಾಗಿ ಪ್ರತಿಯೊಂದು ಮನೆಯಲ್ಲಿಯೂ ಒಂದು ಫೋನೋಗ್ರಾಫ್ ಇದ್ದು ಎಷ್ಟು ಜನಪ್ರಿಯವಾಯಿತೆಂದರೆ, ಅದನ್ನು ವಯಸ್ಸಾದವರ ರಂಜನೆಗೆ ಅಲ್ಲದೆ ಮಕ್ಕಳ ರಂಜನೆಗೆ ಉಪಯುಕ್ತವಾದ ಸಾಧನವೆಂದು ಪರಿಗಣಿಸಲಾಯಿತು. ಇದಕ್ಕೆ ಪ್ರತಿಯಾಗಿ ಊರಿನವರಿಗೆ, ರೈಲು ರಸ್ತೆಯಲ್ಲಿ ಹಾಕಿರುವ ಟೆಲಿಫೋನಿನ ವಾಸ್ತವತೆಯನ್ನು ಪರೀಕ್ಷಿಸುವ ಅವಕಾಶ ಸಿಕ್ಕಾಗ, ಧ್ವನಿ ವ್ಯವಸ್ಥೆಯಿಂದಾಗಿ, ಫೋನೋಗ್ರಾಫ್‌ನ ಪ್ರಾಥಮಿಕ ಹಂತವೇ ಅದೆಂಬ ಭಾವನೆ ಬಂದಾಗ, ಅದನ್ನು ನಂಬದವರೂ ಕೂಡ ಬೇಸರಗೊಂಡಿದ್ದರು. ದೇವರು ಬಹುಶಃ ಮಕೊಂಡೊ ಜನರ ಅಚ್ಚರಿಗೊಳ್ಳುವ ಸಾಮರ್ಥ್ಯವನ್ನು ಪರೀಕ್ಷಿಸಲೆಂದೇ ಹೀಗೆ ಸಂತಸದ ಉದ್ರೇಕ, ನಿರಾಶೆ, ಸಂದೇಹ – ಜ್ಞಾನೋದಯ ಇತ್ಯಾದಿ ದ್ವಂದ್ವಗಳಲ್ಲಿ ತೂಗುಯ್ಯಾಲೆಯಾಡಿಸುತ್ತ, ವಾಸ್ತವ ಸತ್ಯ ಎಲ್ಲಿದೆ ಎಂಬುದನ್ನು ಯಾರೂ ತಿಳಿಯಲಾಗದಂತೆ ನಿರಂತರ ಬದಲಾವಣೆಗಳಿಗೆ ಒಳಗಾಗಿಸುತ್ತಿದ್ದಾನೆ. ಇದು ವಾಸ್ತವವಾಗಿ ಸತ್ಯ ಮತ್ತು ಭ್ರಮೆಗಳ ಸಂಕೀರ್ಣ ಸ್ಥಿತಿಯಾಗಿದ್ದು, ಜೋಸ್ ಆರ್ಕಾಡಿಯೊ ಬ್ಯುಂಡಿಯಾನ ಪ್ರೇತ ಅಸಹನೆಯಿಂದ ಚೆಸ್ಟ್‌ನಟ್ ಮರದ ಕೆಳಗಿದ್ದುದು ಬೆಳ್ಳಂಬೆಳಗಿನಲ್ಲಿ ಮನೆಯಲ್ಲೆಲ್ಲ ಓಡಾಡುವಂತೆ ಮಾಡಿತು. ರೈಲು ಸಂಚಾರ ಅಧಿಕೃತವಾಗಿ ಉದ್ಘಾಟನೆಯಾಗಿ, ಪ್ರತಿ ಬುಧವಾರ ತಪ್ಪದೆ ಹನ್ನೊಂದು ಘಂಟೆಗೆ ಬಂದು ತಲುಪುತ್ತಿತ್ತು. ಅಲ್ಲಿಯೇ ಹಳೆಯ ಮರದ ಸ್ಟೇಷನ್‌ನಲ್ಲಿ ಡೆಸ್ಕ್, ಟೆಲಿಫೋನು, ಟಿಕೀಟು ಕೌಂಟರ್ ಇತ್ಯಾದಿಗಳ ವ್ಯವಸ್ಥೆಯಾಯಿತು. ಮಕೊಂಡೊದ ಗಂಡಸರು, ಹೆಂಗಸರು ಮಾಮೂಲಿನ ಪದ್ಧತಿ, ನಡವಳಿಕೆಯೊಂದಿಗೆ ಪ್ರತಿದಿನ ರಸ್ತೆಗಳಲ್ಲಿ

ಓಡಾಡುತ್ತಿದ್ದರೂ, ಅವರು ಯಾವುದೊ ಸರ್ಕಸ್ಸಿನಿಂದ ಈಗ ತಾನೆ ಹೊರಬಂದವರಂತೆ ಕಾಣುತ್ತಿದ್ದರು. ಜಿಪ್ಸಿಗಳ ತಂತ್ರದ ಆಘಾತಕ್ಕೆ ಸಿಲುಕಿ ತತ್ತರಿಸಿದ್ದ ಆ ಊರಿನಲ್ಲಿ ಸಂಚರಿಸುವ ವ್ಯಾಪಾರಿ ದೊಂಬರಾಟಕ್ಕೆ ಭವಿಷ್ಯವಿರಲಿಲ್ಲ. ಅವರು ಅದೇ ಧೂರ್ತತೆಯೊಂದಿಗೆ ಶಿಳ್ಳೆ ಹೊಡೆಯುವ ಕೆಟಲ್ ಮತ್ತು ಏಳು ದಿನಗಳಲ್ಲಿಯೇ ಆತ್ಮೋದ್ಧಾರದ ಭರವಸೆ ನೀಡುವುದರೊಂದಿಗೆ ವ್ಯಾಪಾರ ಮುಂದುವರೆಸಿದರು. ಆದರೆ ಕಡೆಗೆ ಸಾಕಷ್ಟು ದಣಿದು ಬೇಸತ್ತು ಹೋದುದರಿಂದ ಒಪ್ಪಿಕೊಂಡವರು ಮತ್ತು ಅಷ್ಟಾಗಿ ತಲೆಕೆಡಿಸಿಕೊಳ್ಳದವರು ಸಾಕಷ್ಟು ಲಾಭವನ್ನು ಪಡೆದರು. ಮಕೊಂಡೊಗೆ ಬಂದ ನಾಟಕದವರಲ್ಲಿ ಸವಾರಿ ಮಾಡುವಾಗ ಹಾಕಿಕೊಳ್ಳುವ ಬ್ರೀಚಸ್ಸ್, ಲೆಗ್ಗಿಂಗ್ಸ್ ಮತ್ತು ಬೆಂಡಿನ ಹೆಲ್ಮೆಟ್ ಹಾಕಿಕೊಂಡು ಸ್ಟೀಲ್ ರಿಮ್ ಇದ್ದ ಕನ್ನಡಕ ಹಾಕಿಕೊಂಡು, ನೀಲಿ ಕಣ್ಣಿನೊಂದಿಗೆ, ಕೋಳಿ ಚರ್ಮದಂತಹ ಚರ್ಮವಿದ್ದ ಒಬ್ಬ ಗುಂಡು ಗುಂಡಗೆ ನಗುಮೊಗದ ಮಿಸ್ಟರ್ ಹರ್ಬರ್ಟ್, ಬ್ಯುಂಡಿಯಾ ಮನೆಯಲ್ಲಿ ಊಟ ಮಾಡುತ್ತಿದ್ದ.

ಬಾಳೆ ಹಣ್ಣಿನ ಮೊದಲ ಗೊಂಚಲನ್ನು ತಿಂದು ಮುಗಿಸುವವರೆಗೆ ಅವನನ್ನು ಯಾರೂ ಟೇಬಲ್ ಮುಂದೆ ಇದ್ದುದನ್ನು ಗಮನಿಸಿರಲಿಲ್ಲ. ಅರೆಲಿಯಾನೊ ಸೆಗುಂಡೊ ಅವನನ್ನು ಆಕಸ್ಮಿಕವಾಗಿ, ಜೌಕೋಬ್ ಹೋಟೆಲಿನಲ್ಲಿ ಅವನಿಗೆ ರೂಮು ದೊರೆಯದ್ದಕ್ಕಾಗಿ ಗಲಾಟೆ ಮಾಡುತ್ತಿದ್ದುದನ್ನು ನೋಡಿದ. ಅವನು ಅಪರಿಚಿತರಿಗೆ ಆಗಾಗ್ಗೆ ಮಾಡುತ್ತಿದ್ದ ಹಾಗೆ ಆ ಮನುಷ್ಯನನ್ನು ಮನೆಗೆ ಕರೆತಂದ. ಅವನು ಹಾರಾಡುವ ಬಲೂನಿನ ವ್ಯಾಪಾರಿಯಾಗಿದ್ದ. ಅರ್ಧ ಪ್ರಪಂಚವನ್ನು ಸುತ್ತಿಬಂದು ಸಾಕಷ್ಟು ಹಣ ಮಾಡಿದ್ದ. ಆದರೆ ಮಕೊಂಡೊದಲ್ಲಿ ಯಾರೊಬ್ಬರನ್ನೂ ಹಾರಲು ಒಪ್ಪಿಸುವಲ್ಲಿ ಸೋತಿದ್ದ. ಅವರಿಗೆ ಜಿಪ್ಸಿಗಳ ಹಾರುವ ಕಾರ್ಪೆಟ್‌ನ ಅನುಭವ ಇದ್ದುದರಿಂದ ಇದೇನೂ ವಿಸ್ಮಯವೆನಿಸಲಿಲ್ಲ. ಅವನು ಮುಂದಿನ ಟ್ರೈನಿಗೆ ಹೋಗುವವನಿದ್ದ. ಅವರು ಊಟದ ಸಮಯದಲ್ಲಿ ಬಾಳೆಹಣ್ಣಿನ ಗೊಂಚಲನ್ನು ತೂಗುಹಾಕುವ ಮಾಮೂಲಿ ಅಭ್ಯಾಸದಂತೆ ಅಂದೂ ಅದನ್ನು ತಂದು ತೂಗುಹಾಕಿದರು. ಒಂದು ಹಣ್ಣನ್ನು ಅದರಿಂದ ಕಿತ್ತು ಯಾವುದೇ ಉತ್ಸಾಹ ತೋರಿಸದೆ ತಿಂದ. ಆದರೆ ಮಾತಾಡುತ್ತಲೇ ತಿನ್ನುವುದನ್ನು ಮುಂದುವರೆಸಿದ್ದ. ಅಗೆಯುತ್ತ, ಚಪ್ಪರಿಸಿ ರುಚಿ ನೋಡುತ್ತಾ ತಿನ್ನುತ್ತಿದ್ದುದು, ಒಬ್ಬ ಆಸೆಯಿಂದ ತಿನ್ನುವಂತೆ ತಿನ್ನುವುದಕ್ಕಿಂತ ಪರೀಕ್ಷಕನಾಗಿ ತಿನ್ನುತ್ತಿದ್ದ. ಅದು ಮುಗಿದಂತೆ ಮತ್ತೊಂದನ್ನು ತರಲು ಹೋದ. ಒಂದು ಸಣ್ಣ ಪೆಟ್ಟಿಗೆಯನ್ನು ಹೊರತೆಗೆದ. ಅದರೊಳಗಿಂದ ವಜ್ರ ಪರೀಕ್ಷಕ ಬಳಸುವ ಉಪಕರಣಗಳನ್ನು ಬಳಸಿ ಸಂಶಯಾತ್ಮಕವಾಗಿ ಬಾಳೆಹಣ್ಣನ್ನು ಪರೀಕ್ಷಿಸಿದ. ಸ್ಪೆಷಲ್ಲಾದ ಸ್ಕಾಲ್‌ಪೆಲ್‌ನಿಂದ ಹಣ್ಣನ್ನು ಸೀಳಿ, ತುಂಡುಗಳನ್ನು, ತೂಗಿ, ಅದರ ಅಳತೆ ಗಾತ್ರಗಳನ್ನು ಪರೀಕ್ಷಿಸಿದ. ಮತ್ತೆ ಬೇರೆಲ್ಲೊ ಉಪಕರಣಗಳನ್ನು ಹೊರತೆಗೆದು ಅದರ ಉಷ್ಣಾಂಶವನ್ನು ಅಳೆದ. ವಾತಾವರಣದಲ್ಲಿನ ಆರ್ದ್ರತೆಯನ್ನು ಪರೀಕ್ಷಿಸಿದ. ಬೆಳಕಿನ ಸಾಂದ್ರತೆ ಹೀಗೆ ಏನೇನೋ ಪರೀಕ್ಷೆ ಮಾಡಿದ. ಅವನು ಮಾಡುತ್ತಿದ್ದ ಕೆಲಸಗಳು ಎಷ್ಟು ಕುತೂಹಲಕರವಾಗಿತ್ತೆಂದರೆ ಯಾರಿಗೂ ನೆಮ್ಮದಿಯಿಂದ ಊಟಮಾಡಲು ಆಗಲಿಲ್ಲ. ಎಲ್ಲರೂ ಮಿಸ್ಟರ್ ಹರ್ಬರ್ಟ್ ಅಂತಿಮವಾಗಿ ಅರಿವು ಮೂಡಿಸುವ ಹೊಸ ವಿಚಾರವನ್ನು ಹೇಳಲು ಹೊರಟಿರಬಹುದೆಂದು ಕಾದರು. ಆದರೆ ಅವನು ಏನನ್ನೂ ಹೇಳಲಿಲ್ಲ. ಮತ್ತು ತನ್ನ ಉದ್ದೇಶಗಳನ್ನು ಗ್ರಹಿಸುವುದಕ್ಕೂ ಅವಕಾಶ ಕೊಡಲಿಲ್ಲ.

ನಂತರದ ದಿನಗಳಲ್ಲಿ ಅವನು ಬುಟ್ಟಿ ಮತ್ತು ಬಲೆಯೊಂದಿಗೆ ಚಿಟ್ಟೆಗಳನ್ನು ಹಿಡಿಯುತ್ತಿರುವುದನ್ನು ಊರಿನ ಹೊರವಲಯದಲ್ಲಿ ಕಂಡರು. ಬುಧವಾರ ಇಂಜನೀಯರುಗಳು, ಕೃಷಿತಜ್ಞರು, ಜಲ ವಿಜ್ಞಾನಿಗಳು, ಸ್ಥಳನಕ್ಷೆ ಬರೆಯುವವರು, ಸರ್ವೆ ಮಾಡುವವರು ಮೊದಲಾಗಿ ಇದ್ದ ಗುಂಪೊಂದು ಆಗಮಿಸಿ ವಾರಗಟ್ಟಲೆ ಆ ಪ್ರದೇಶದ ಶೋಧವನ್ನು ಮಾಡಿದರೆ ಹರ್ಬರ್ಟ್ ಚಿಟ್ಟೆ ಹಿಡಿಯುವುದರಲ್ಲಿ ಮಗ್ನನಾಗಿದ್ದ. ನಂತರ ಮಿಸ್ಟರ್ ಜಾಕ್ ಟ್ರೌನ್ ಹಳದಿ ರೈಲುಗಾಡಿಗೆ ಜೋಡಿಸಿದ ಬೆಳ್ಳಿ ಬಣ್ಣ ಬಳಿದಿದ್ದ, ವೆಲ್‌ವೆಟ್ ಸೀಟುಗಳಿದ್ದ ನೀಲಿ ಗಾಜಿನ ಛಾವಣಿಯಿದ್ದ ವಿಶೇಷ ಬೋಗಿಯಲ್ಲಿ ಬಂದಿಳಿದ. ಅವನ ಜೊತೆಗೆ ಆ ವಿಶೇಷ ಬೋಗಿಯಲ್ಲಿಯೇ ಬಂದಿದ್ದ. ಮೊದಲಿಗೆ ಕರ್ನಲ್ ಅರೆಲಿಯಾನೊ ಜೊತೆಗಿದ್ದವರೇ ಆಗಿದ್ದ. ಶ್ರೇಷ್ಠ ಲಾಯರುಗಳು ಮಿಸ್ಟರ್ ಟ್ರೌನ್‌ರ ಜೊತೆ ಅಲ್ಲಲ್ಲಿ ಅಡ್ಡಾಡುತ್ತಿದ್ದರು. ಅಲ್ಲದೆ ಕೃಷಿ ತಜ್ಞರು, ಸರ್ವೆ ಮಾಡುವವರು, ನಕ್ಷೆ ಬರೆಯುವವರು, ಜಲಧರ್ಮ ವಿಜ್ಞಾನಿಗಳು ಮತ್ತು ಇತರರು ಬಂದಿರುವುದನ್ನು ನೋಡಿದಾಗ ಜನಕ್ಕೆ ಮತ್ತೆ ಏನಾದರೂ ಯುದ್ಧ ಸಾಧ್ಯತೆ ಇರಬಹುದೇನೊ ಎನಿಸಿತು. ಹರ್ಬರ್ಟ್‌ನ ಚಿಟ್ಟೆಗಳು, ಹಾರುವ ಬಲೂನುಗಳು. ಟ್ರೌನ್‌ನ ಭಯಾನಕ ನಾಯಿಗಳು ಇವೆಲ್ಲ ಯುದ್ಧ ಸಂಬಂಧಿಯಾದವುಗಳೆಂಬ ಭಾವನೆಗೆ ದಾರಿಯಾದುದು ಅವರಿಗೆ ಯೋಚಿಸಲು ಬಹಳ ಸಮಯವಿರಲಿಲ್ಲ. ಸಂದೇಹದಿಂದ ಗಮನಿಸುತ್ತಿದ್ದ ಊರಿನ ಜನ ಏನಾಗುತ್ತಿದೆ ಎಂದು ತಿಳಿದು ಅಚ್ಚರಿಪಡುವುದಕ್ಕೆ ಮೊದಲೆ ಊರಿನ ಸ್ವರೂಪ ಬದಲಾಯಿಸಿಬಿಟ್ಟಿತ್ತು. ಜಿಂಕ್‌ಶೀಟಿನ ಛಾವಣಿಯಿದ್ದ ಮರದ ಮನೆಗಳು, ಅರ್ಧ ಪ್ರಪಂಚದ ಮೂಲೆ ಮೂಲೆಯಿಂದ ಬಂದ ವಿದೇಶೀಯರು ಆ ಮನೆಗಳಲ್ಲಿ ವಾಸಮಾಡತೊಡಗಿದರು. ದಿನನಿತ್ಯ ರೈಲಿನಲ್ಲಿ ಸೀಟುಗಳಲ್ಲಿ ಪ್ಲಾಟ್‌ಫಾರಮುಗಳಲ್ಲಿ, ರೈಲಿನ ಛಾವಣಿ ಮೇಲೆಲ್ಲ ತುಂಬಿ ತುಳುಕುವ ಜನ ಕಂಡು ಬರುತ್ತಿದ್ದರು. ನಂತರ ಅವರು ಮಸ್ಲಿನ್ ಉಡುಪು ಧರಿಸಿ, ಮುಖ ಮುಚ್ಚುತ್ತಿದ್ದ ದೊಡ್ಡ ಹ್ಯಾಟ್‌ಗಳನ್ನು ಧರಿಸಿದ ಕಳಾಹೀನ ಹೆಂಡತಿಯರನ್ನು ಕರೆತಂದು ರೈಲು ರಸ್ತೆಯ ಪಕ್ಕದಲ್ಲಿಯೇ ಪ್ರತ್ಯೇಕವಾಗಿ ಬಂದು ಊರನ್ನು ಕಟ್ಟಿದರು. ರಸ್ತೆಗಳಲ್ಲಿ ತಾಳೆಮರಗಳನ್ನು ಬೆಳೆಸಿದರು. ಮನೆಗಳಲ್ಲಿ ಕಿಟಕಿಗಳಿಗೆ ಪರದೆಗಳನ್ನು ಇಳಿಬಿಟ್ಟರು. ತಾರಸಿಯ ಮೇಲೆ ಚಿಕ್ಕ ಬಿಳಿ ಮೇಜುಗಳನ್ನು ಇರಿಸಿದರು. ಫ್ಯಾನುಗಳನ್ನು ಹಾಕಿಸಿದರು. ನವಿಲು ಮತ್ತು ಲಾವಕ್ಕಿಗಳ ಚಿತ್ತಾರವಿರುವ ವಿಶಾಲವಾದ ಹುಲ್ಲಿನ ಹಾಸುಗಳನ್ನು ನಿರ್ಮಿಸಿದರು. ಆ ಭಾಗದ ಸುತ್ತಲೂ ವಿದ್ಯುತ್ ಹರಿವ ಬೇಲಿಯನ್ನು ಹಾಕಿಸಿದರು. ಇದರಿಂದ ಬೇಸಿಗೆಯ ತಂಪು ಬೆಳಗಿನಲ್ಲಿ ಅದು ಕಪ್ಪಾಗಿ ಕಾಣುತ್ತಿತ್ತು. ಅವರು ಏನು ಮಾಡಲಿದ್ದಾರೆ ಎಂಬುದು ಯಾರಿಗೂ ಗೊತ್ತಾಗಲಿಲ್ಲ. ಅವರೇನಾದರೂ ಜನೋಪಕಾರಿಗಳಾಗಿರಬಹುದೆ ಎಂದು ಯೋಚಿಸಿದರು. ಈಗಾಗಲೆ ಅವರು ಸಾಕಷ್ಟು ಏರುಪೇರು ಮಾಡಿದ್ದಾರಾದರೂ ಜಿಪ್ಸಿಗಳಿಗಿಂತ ವಾಸಿ ಎಂದುಕೊಂಡರು. ಹಿಂದಿನ ಕಾಲದಲ್ಲಿ ಮಳೆ ದೇವರ ಅನುಗ್ರಹವೆಂದು ಭಾವಿಸಲಾಗಿದ್ದುದು, ಈಗ ಮಳೆಗಾಲ ಋತುಚಕ್ರವನ್ನೇ ಬದಲಾಯಿಸಿದ್ದರು. ಸುಗ್ಗಿ ಬೆಳೆಯನ್ನು ತೀವ್ರಗೊಳಿಸಿದ್ದರು. ನದಿಯ ಮೂಲ ಹರಿವಿನ ದಿಕ್ಕನ್ನು ಬದಲಾಯಿಸಿ ಊರಿನ ಇನ್ನೊಂದು ದಿಕ್ಕಿನೆಡೆಗೆ (ಸ್ಮಶಾನದ ಹಿಂಭಾಗದಲ್ಲಿ) ಹರಿಯುವಂತೆ ಮಾಡಿದ್ದರು. ಅದೇ ಅವಧಿಯಲ್ಲಿ, ಜೋಸ್

ಆರ್ಕಾಂಡಿಯೋನ ಮಾಸಿದ ಸಮಾಧಿಯ ಮೇಲೆ ಒಂದು ದೊಡ್ಡ ಮತ್ತು ಬಲಿಷ್ಠವಾದ ಕೋಟೆಯೊಂದನ್ನು ನಿರ್ಮಿಸಿದರು. ಇದರಿಂದ ಹೆಣದ ವಾಸನೆಯಿಂದ ನೀರು ಕಲುಷಿತಗೊಳ್ಳುವುದನ್ನು ತಪ್ಪಿಸಿದರು. ಪ್ರೇಮಿಗಳಿಲ್ಲದ ವಿದೇಶೀಯರಿಗಾಗಿ ಫ್ರಾನ್ಸ್‌ನಿಂದ ಬಂದ ಪ್ರೇಮಿ ಹೆಂಗಸರಿಗಾಗಿದ್ದ ರಸ್ತೆಯನ್ನು ಅತ್ಯಂತ ದುಬಾರಿ ಗ್ರಾಮವನ್ನಾಗಿ ಪರಿವರ್ತಿಸಿದರು. ಒಂದು ಒಳ್ಳೆ ಬುಧವಾರದ ದಿನ, ರೈಲು ಭರ್ತಿ ವಿಚಿತ್ರ ಸೂಳೆಯರನ್ನು ಕರೆತಂದರು. ನೀತಿಗೆಟ್ಟ ಆ ಹೆಂಗಸರು ಕಾಮಕೇಳಿಯಲ್ಲಿ, ಕಾಮದ ಪಟ್ಟುಗಳಲ್ಲಿ ನಿಷ್ಣಾತರಾಗಿದ್ದರು, ಎಂಥವರನ್ನೂ ಪ್ರಚೋದಿಸುವ, ಅಥವಾ ಉದ್ರೇಕಿಸುವ, ಹೇಡಿಗಳಲ್ಲಿ ಹಿಂಜರಿವವರಲ್ಲಿ ಧೈರ್ಯತುಂಬುವ, ಸಜ್ಜನ ವ್ಯಕ್ತಿಗಳಲ್ಲಿ ಕಾಮೋತ್ಸಾಹ ತುಂಬುವ, ಅನುಭವವಿದ್ದವರಿಗೆ ಹಿಂದಿನ ಪಾಠಗಳನ್ನು ಪುನರಾವರ್ತನೆ ಮಾಡುವ, ವ್ಯಕ್ತಿಗಳನ್ನು ತಿದ್ದುವ – ಎಲ್ಲ ರೀತಿಯ ಕೌಶಲ್ಯಗಳನ್ನು ಒಳಗೊಂಡವರಾಗಿದ್ದರು. ಟರ್ಕ್ ಸ್ಟ್ರೀಟ್‌ನಲ್ಲಿ ಹಳೆ ಬಜಾರುಗಳ ಜಾಗದಲ್ಲಿ ವಿದ್ಯುದ್ದೀಪಗಳಿಂದ ಝುಗಝುಗಿಸುವ, ವಿದೇಶಿ ವಸ್ತುಗಳಿಂದ ತುಂಬಿರುವ ವರ್ಣರಂಜಿತವಾಗಿ ಕಾಣುವ ಅಂಗಡಿಗಳು ಕಂಗೊಳಿಸಿದವು. ಶನಿವಾರ ರಾತ್ರಿಗಳಲ್ಲಿ ಗಿಜಗುಡುತ್ತಿದ್ದವು. ಸಾಹಸಿಗಳು, ಜೂಜುಕೋರರು, ಕುಡುಕರು ಓಡಾಡುವಾಗ ಒಬ್ಬರಿಗೊಬ್ಬರು ತಾಕುತ್ತಿದ್ದರು. ಆ ಬೀದಿಗಳಲ್ಲಿ ಕನಸುಗಳನ್ನು ವ್ಯಾಖ್ಯಾನಿಸಲಾಗುತ್ತಿತ್ತು. ಮೇಜುಗಳು ಕರಿದ ಪದಾರ್ಥಗಳಿಂದ, ಪೇಯಗಳಿಂದ ಕಿಕ್ಕಿರಿದು ತುಂಬಿ ಇರುತ್ತಿದ್ದವು. ಭಾನುವಾರ ಬೆಳಿಗ್ಗೆ ಎಲ್ಲೆಲ್ಲಿ ನೋಡಿದರೂ ರಾತ್ರಿ ಕುಡಿದು ಬಿದ್ದ ದೇಹಗಳು, ಮತ್ತು ನೋಡುವವರಿಗೆ ಬಿದ್ದ ಗುಂಡಿನೇಟಿನಿಂದ, ಗುದ್ದಾಟದಿಂದ, ಚಾಕು ಚೂರಿ ಇರಿತದಿಂದ, ಕುಡಿತದ ಸಮಯದಲ್ಲಿ ಜಗಳ ಹತ್ತಿ ಬಾಟಲಿಗಳೊಂದಿಗೆ ನಡೆದ ಜಗಳದಿಂದಾಗಿ ಬಿದ್ದ ದೇಹಗಳೂ ಸೇರಿರುತ್ತಿದ್ದವು. ಮೊದಲ ದಿನಗಳಲ್ಲಿ ಸದ್ದಿನ ಅವಾಂತರ ಎಷ್ಟು ಇರುತ್ತಿತ್ತೆಂದರೆ ಆ ದಾರಿಯಲ್ಲಿ ನಡೆಯುವುದೇ ಪರಮಸಾಹಸವಾಗಿತ್ತು.

ಅಲ್ಲಲ್ಲೇ ಬಿದ್ದಿದ್ದ ಪೀಠೋಪಕರಣಗಳು, ಟ್ರಂಕುಗಳು, ಕಾರ್ಪೆಂಟರಿ ಕೆಲಸದ ಸದ್ದು, ಯಾವುದೇ ಖಾಲಿ ಜಾಗ ಕಾಣಿಸಿದರೂ ಯಾರ ಅನುಮತಿಯೂ ಇಲ್ಲದೆ ಮನೆಗಳು ಏಳುತ್ತಿದ್ದವು. ದಂಪತಿಗಳ ಹೇಯ ವರ್ತನೆ, ಅಸಾಧ್ಯವೆನಿಸಿತ್ತು. ಬಾದಾಮಿ ಮರಗಳ ನಡುವೆ ಕಟ್ಟಿದ ಬಲೆಯ ಹಾಸಿಗೆ ಉಯ್ಯಾಲೆಯಲ್ಲಿ ಬೆಳಂಬೆಳಿಗ್ಗೆ ನಾಚಿಕೆಯಿಲ್ಲದೆ ಪ್ರಣಯಕಲಾಪ ನಡೆಸುತ್ತಿದ್ದರು. ಹೋಗಿ ಬರುವವರು ಧಾರಾಳವಾಗಿ ನೋಡಬಹುದಾಗಿತ್ತು. ಎಲ್ಲಾದರೂ ಒಂದು ಪ್ರಶಾಂತವಾದ ಸ್ಥಳವಿದ್ದರೆ, ಅದು ವೆಸ್ಟ್ ಇಂಡಿಯನ್ ನೀಗ್ರೋಗಳು ಸಾಧಾರಣವಾಗಿ ಕಟ್ಟಿಕೊಂಡಿದ್ದ ಮರದ ಮನೆಗಳ ಎಡೆಯಲ್ಲಿ ಬಾಗಿಲಲ್ಲಿ ಕುಳಿತು ಅರ್ಥವಾಗದ ಅವರದೇ ಭಾಷೆಯಲ್ಲಿ ದುಃಖಪೂರಿತ ಹಾಡುಗಳನ್ನು ಹಾಡಿಕೊಳ್ಳುತ್ತಿದ್ದರು. ಇಷ್ಟು ಅಲ್ಪಾವಧಿಯಲ್ಲಿ ಎಷ್ಟೊಂದು ಬದಲಾವಣೆಗಳಾದುವೆಂದರೆ ಆ ಊರಿಗೆ ಹಳಬರಾಗಿದ್ದ ಊರಿನವರೇ ಮಿಸ್ಟರ್ ಹರ್ಬರ್ಟ್ ಬಂದು ಹೋದ ಎಂಟು ತಿಂಗಳ ನಂತರ ಅದನ್ನು ಗುರುತಿಸುವಲ್ಲಿ ಸೋತರು.

“ನೋಡು ಏನೆಲ್ಲ ಅವ್ಯವಸ್ಥೆಗೆ ನಾವು ಒಳಗಾಗಿದ್ದೇವೆ. ಆ ನೀಗ್ರೋನನ್ನು ಬಾಳೆಹಣ್ಣು ತಿನ್ನಲು ಕರೆದದ್ದೇ ತಪ್ಪಾಯಿತು” ಎಂದು ಅರೆಲಿಯಾನೊ ಸೆಗುಂಡೊ ಆಗ ಹೇಳಿದ.

ಇನ್ನೊಂದು ಕಡೆ ಅರೆಲಿಯಾನೊ ಸೆಗುಂಡೊಗೆ ವಿದೇಶದಿಂದ ಬಂದ ಜನರ ಮಹಾಪ್ರವಾಹದಿಂದ ಉಂಟಾದ ಸಂತೋಷವನ್ನು ತಡೆದುಕೊಳ್ಳಲು ಆಗಲಿಲ್ಲ. ಮನೆತುಂಬ ಅಪರಿಚಿತರ ಆಗಮನಕ್ಕೆ ಕೊನೆಯೇ ಇರಲಿಲ್ಲ. ಮಿತಿಮೀರಿ ಕುಡಿಯುವವರಿಂದ ತುಂಬಿ ಹೋಗಿತ್ತು. ಬರುತ್ತಿದ್ದವರಿಗೆ ಮಲಗುವ ವ್ಯವಸ್ಥೆ ಸಾಕಾಗಲಿಲ್ಲವಾಗಿ ಅಂಗಳದ ಮತ್ತೊಂದು ಬದಿಗೆ ಇನ್ನಷ್ಟು ಮಲಗುವ ಕೋಣೆಗಳನ್ನು ನಿರ್ಮಿಸಿದರು. ಊಟದ ಮನೆಯನ್ನು ವಿಸ್ತರಿಸಿದರು. ಹದಿನಾರು ಮಂದಿಗೆ ಮಾತ್ರ ಸಾಗಾಗುತ್ತಿದ್ದ ಊಟದ ಮೇಜನ್ನು ಹೊಸ ಮೇಜಿಗೆ ಬದಲಾಯಿಸಿಕೊಂಡರು. ಚೈನಾ ಮತ್ತು ಬೆಳ್ಳಿಯ ಸಲಕರಣೆಗಳನ್ನು ತಂದರು. ಆದರೂ ಸಾಕಾಗದೆ ಊಟವನ್ನು ಸರದಿಯಂತೆ ಮಾಡಬೇಕಾಯಿತು. ಫರ್ನಾಂಡಾ ಅಸಮಾಧಾನವನ್ನು ನುಂಗಿಕೊಂಡು ಬಂದವರನ್ನು ರಾಜೋಪಚಾರ ನೀಡಿ ನೋಡಿಕೊಳ್ಳಬೇಕಿತ್ತು. ಅದೂ ಎಂಥ ಅತಿಥಿಗಳನ್ನು! ಒಳಗೆ ಬರುವಾಗ ನಡುಮನೆಯನ್ನೆಲ್ಲ ಬೂಟು ಹಾಕಿಕೊಂಡು ಬಂದು ಮಣ್ಣು ಮಾಡುತ್ತಿದ್ದರು. ಗಾರ್ಡನ್‌ನಲ್ಲಿಯೇ ಮೂತ್ರ ವಿಸರ್ಜನೆ ಮಾಡುತ್ತಿದ್ದರು. ಮಧ್ಯಾಹ್ನದ ವಿಶ್ರಾಂತಿಗೆ ಎಲ್ಲೆಂದರಲ್ಲಿ ಹಾಸಿಕೊಂಡು ಮಲಗಿಬಿಡುತ್ತಿದ್ದರು. ಹೆಂಗಸರು ಅನ್ನೋ ಪರಿಜ್ಞಾನವಿಲ್ಲದೆ ಅವರೊಂದಿಗೆ ಅಸಭ್ಯವಾಗಿ ಮಾತಾಡುತ್ತಿದ್ದರು. ಅಮರಾಂತಳಿಗೆ ಎಷ್ಟು ಹೇಸಿಗೆಯಾಗಿತ್ತೆಂದರೆ ಊಟ ಮಾಡುವುದನ್ನು ಮೊದಲಿನಂತೆ ಅಡಿಗೆ ಮನೆಯಲ್ಲಿಯೇ ಮುಗಿಸುತ್ತಿದ್ದಳು. ಕರ್ನಲ್ ಅರೆಲಿಯಾನೊ ಬ್ಯುಂಡಿಯಾಗೆ ತನ್ನನ್ನು ನೋಡಿ ಮಾತನಾಡಿಸಲು ವರ್ಕ್‌ಷಾಪಿಗೆ ಬರುತ್ತಿದ್ದವರು ಯಾವುದೋ ಪುರಾತನ ಐತಿಹಾಸಿಕ ಅವಶೇಷವನ್ನೋ, ಪಳಿಯುಳಿಕೆಯನ್ನೋ ನೋಡುವ ಕುತೂಹಲಕ್ಕಾಗಿ ಬರುವವರಂತೆ ಬರುತ್ತಿದ್ದರೆ ಹೊರತು ತನ್ನ ಮೇಲಿನ ಗೌರವ ಅಭಿಮಾನದಿಂದ ಅಲ್ಲ ಎನ್ನುವುದನ್ನು ಖಚಿತವಾಗಿ ಅರ್ಥ ಮಾಡಿಕೊಂಡ. ಅದಕ್ಕಾಗಿಯೇ ಅವನು ಹೊರಗೆ ಬರುತ್ತಿದ್ದುದೇ ಅಪರೂಪವಾಗಿತ್ತು. ಯಾವಾಗಲಾದರೂ ಬಂದು ಬೀದಿ ಬಾಗಿಲಲ್ಲಿ ಕುಳಿತುಕೊಳ್ಳುವ ಸಂದರ್ಭ ಬಿಟ್ಟರೆ ಬೇರೆ ಸಮಯದಲ್ಲಿ ಕಾಣಿಸುತ್ತಿರಲಿಲ್ಲ. ತನ್ನ ವರ್ಕ್‌ಶಾಪಿನಲ್ಲಿ ಬಾಗಿಲು ಮುಚ್ಚಿಕೊಂಡು ಒಳಗಿರುತ್ತಿದ್ದ. ಆದರೆ ಇದಕ್ಕೆ ವಿರುದ್ಧವಾಗಿ ಉರ್ಸುಲಾ. ನಡೆಯುವುದಕ್ಕೂ ಆಗದೆ ಗೋಡೆ ಹಿಡಿದುಕೊಂಡು ಓಡಾಡುತ್ತಿದ್ದವಳಿಗೆ ಟ್ರೈನ್ ಬಂತೆಂದರೆ ಎಲ್ಲಿಲ್ಲದ ಖುಷಿಯೊ ಖುಷಿ! "ನಾವು ಮಾಂಸ ಮತ್ತು ಮೀನಿನ ಅಡುಗೆ ಮಾಡಬೇಕು" ಎಂದು ನಾಲ್ಕು ಜನ ಅಡಿಗೆಯವರಿಗೆ ಆದೇಶಿಸುತ್ತಿದ್ದಳು. ಅಡಿಗೆಯವರು ಆತುರಾತುರವಾಗಿ ಸಾಂತಾ ಸೋಫಿಯಾ ದ ಲಾ ಪೀದಾದಳ ಮಾರ್ಗದರ್ಶನದಲ್ಲಿ ಅಡಿಗೆಯನ್ನು ಸಿದ್ಧಮಾಡಿ ಇಡುತ್ತಿದ್ದರು. "ಎಲ್ಲವನ್ನೂ ಸಿದ್ಧಮಾಡಿ ಇಡಬೇಕು. ಈ ಅಪರಿಚಿತರು ಏನನ್ನು ತಿನ್ನಲು ಇಷ್ಟಪಡುತ್ತಾರೋ ಅನ್ನೋದು ನಮಗೆ ಗೊತ್ತಿರುವುದಿಲ್ಲ" ಎಂದು ಹೇಳುತ್ತಿದ್ದಳು. ಬಿರುಬಿಸಿಲಿನ ಹೊತ್ತಿಗೆ ಟ್ರೈನ್ ಬಂತು. ಊಟದ ಹೊತ್ತಿಗೆ ಮನೆ ಸಂತೆಯಾಯಿತು. ಬೆವರು ಸುರಿಸುತ್ತಾ ಬರುತ್ತಿದ್ದಂತೆ ತಮ್ಮ ಆತಿಥೇಯರು ಯಾರು ಎಂಬುದನ್ನೂ ತಿಳಿಯದೆ, ಊಟಕ್ಕೆ ಒಳ್ಳೊಳ್ಳೆ ಜಾಗಗಳನ್ನು ಅರಿಸಿಕೊಳ್ಳುತ್ತಾ ಮೇಜಿನ ಬಳಿಗೆ ಬಂದರು. ಅಡಿಗೆಯವರು ಒಬ್ಬರಿಗೊಬ್ಬರು ಡಿಕ್ಕಿ ಹೊಡೆಯುತ್ತ ಸೂಪು, ಮಾಂಸ, ತರಕಾರಿ ಅನ್ನದ ಪಾತ್ರೆಗಳನ್ನು ಎಲ್ಲ ಕಡೆ ತೆಗೆದುಕೊಂಡು ಹೋದರು. ಬ್ಯಾರೆಲ್ ಗಟ್ಟಲೆ ಲೆಮೊನೇಡನ್ನು ಅಸಂಖ್ಯಾತ ಸೌಟುಗಳೊಂದಿಗೆ ಎಲ್ಲರೆಡೆಗೆ ಕಳುಹಿಸಿಕೊಟ್ಟರು.

ಎಷ್ಟೊಂದು ಗದ್ದಲ, ಗೊಂದಲ ಇತ್ತೆಂದರೆ, ಹಲವರು ಎರಡನೆ ಸಲ ಕೇಳಿ ಬಡಿಸಿಸಿಕೊಳ್ಳುತ್ತಿದ್ದರು. ಮತ್ತೊಂದು ಸಂದರ್ಭದಲ್ಲಿ, ಮೇಜಿನ ಮುಂದಿದ್ದ ಒಬ್ಬ ಗೊಂದಲದಲ್ಲಿ ಫರ್ನಾಂಡಾಳನ್ನು ಚೆಕ್ ಕೇಳಿದ್ದಕ್ಕೆ ತರಕಾರಿ ಮಾಡುವವನ ಹಾಗೆ ಜೋರಾಗಿ ರೇಗಿದಳು. ಹರ್ಬರ್ಟ್ ಬಂದು ಒಂದು ವರ್ಷವಾಗಿದ್ದರೂ ಅವನ ಬಗ್ಗೆ, ಗ್ರಿಂಗೋಗಳು ಆ ಪ್ರದೇಶದಲ್ಲಿ ಬಾಳೆ ತೋಟವನ್ನು ಮಾಡುತ್ತಾರೆಂದೂ ಕರ್ನಲ್ ಅರೆಲಿಯಾನೊ ಬ್ಯುಂಡಿಯಾನ ಜನ ಹೊಸ ಆವಿಷ್ಕಾರಗಳಿಗಾಗಿ ದೂರ ಪ್ರದೇಶಗಳಿಗೆ ಹೋಗಿದ್ದಾರೆಂದೂ ತಿಳಿದು ಬಂತಲ್ಲದೆ ಮತ್ತೇನೂ ತಿಳಿಯಲಿಲ್ಲ. ಕರ್ನಲ್ ಅರೆಲಿಯಾನೊ ಬ್ಯುಂಡಿಯಾಗೆ ಇನ್ನಿಬ್ಬರು ಬೂದಿಯ ಶಿಲುಬೆ ಗುರುತನ್ನು ಹಣೆ ಮೇಲೆ ಇರಿಸಿಕೊಂಡು ತೇಗಿದ ದೊಡ್ಡ ಸದ್ದಿನೊಂದಿಗೆ ಆಗಮಿಸಿದರು. ಅಲ್ಲಿಗೆ ಬರುವ ನಿರ್ಧಾರವನ್ನು, ಎಲ್ಲರ ಕಾರಣಗಳನ್ನೂ ವಿವರಿಸುವಂತೆ, “ಎಲ್ಲರೂ ಬರುತ್ತಿರುವುದರಿಂದ ನಾವೂ ಬಂದಿದ್ದೇವೆ” ಎಂದರು. ಬನಾನಾ ತಲೆನೋವಿನಿಂದ ನಿರ್ಲಿಪ್ತಳಾಗಿದ್ದವಳೆಂದರೆ ರೆಮೆಡಿಯೋಸ್ ದ ಬ್ಯೂಟಿ, ಅದ್ಭುತವಾದ ಪ್ರಶಾಂತತೆ, ಔಪಚಾರಿಕತೆಗಳಿಂದ ದೂರ, ಕೇಡು ಸಂದೇಹ ಪ್ರವೃತ್ತಿಗಳ ಕಡೆ ನಿರ್ಲಕ್ಷ್ಯ. ತನ್ನದೇ ಆದ ವಾಸ್ತವಗಳ ಜಗತ್ತಿನಲ್ಲಿ ಸಂತೋಷ – ಇತ್ಯಾದಿಗಳಿಂದ ಕೂಡಿ ಇರುತ್ತಿದ್ದಳು. ಹೆಂಗಸರೇಕೆ ಒಳ ಉಡುಪುಗಳನ್ನು ಹಾಕಿಕೊಂಡು ತೊಂದರೆ ಪಡುತ್ತಾರೆ, ಎನಿಸಿ ಅವಳು ತನಗಾಗಿ ಒಂದು ಒರಟಾದ ನಿಲುವಂಗಿಯನ್ನು ಹೊಲಿದುಕೊಂಡು ಸಮಸ್ಯೆಯನ್ನು ಪರಿಹರಿಸಿಕೊಂಡಳು. ಇದರಿಂದಾಗಿ ತಾನು ನಗ್ನಳಾಗಿದ್ದೇನೆ ಎನ್ನುವ ಭಾವನೆಯನ್ನು ಹೋಗಲಾಡಿಸಿಕೊಳ್ಳಬೇಕಾದ ಅವಶ್ಯಕತೆ ಬರುತ್ತಿರಲಿಲ್ಲ. ಮನೆಯಲ್ಲಿ ನಿರಾಳವಾಗಿ ಓಡಾಡಲು ಯಾವ ಆತಂಕವೂ ಇರುತ್ತಿರಲಿಲ್ಲ. ಮೊಣಕಾಲಿನ ಉದ್ದ ಬೆಳೆದ ಕೂದಲನ್ನು ಬಾಚಿ ಕಟ್ಟುವ ಕೆಲಸ ತ್ರಾಸದಾಯಕವೆನಿಸಿ, ತಲೆಯನ್ನು ಸಂಪೂರ್ಣವಾಗಿ ಬೋಳಿಸಿಕೊಂಡುಬಿಟ್ಟಳು. ಆ ಕೂದಲಿನಿಂದ ಸಂತರಿಗೆ ವಿಗ್‌ಗಳನ್ನು ಮಾಡಲು ಬಳಕೆಯಾಯಿತು. ಒಂದು ವಿಚಿತ್ರ ಸಂಗತಿಯೆಂದರೆ ಬದುಕನ್ನು ಸರಳ ಮಾಡಿಕೊಳ್ಳುವ ಪ್ರಯತ್ನದಲ್ಲಿ ಫ್ಯಾಷನ್ನು ಗೀಷನ್ನುಗಳನ್ನು ಬಿಟ್ಟದಲ್ಲದೆ, ಹೀಗೆ ಇರಬೇಕೆಂಬ ನಿಯಮಗಳನ್ನು ದಾಟಿ ಅವಳಿಗನಿಸಿದ್ದನ್ನು, ಅನುಕೂಲವೆನಿಸಿದ್ದನ್ನು ಮಾಡಿದ್ದು, ಮೊದಲಿಗಿಂತ ಅವಳ ಸೌಂದರ್ಯ ಬೆಚ್ಚಿಬೀಳುವಂತಾಯಿತು. ಅವಳ ಅನನ್ಯ ಸೌಂದರ್ಯ ಗಂಡಸರನ್ನು ಹುಚ್ಚರನ್ನಾಗಿಸುತ್ತಿತ್ತು. ಕರ್ನಲ್ ಅರೆಲಿಯಾನೊ ಬ್ಯುಂಡಿಯಾನ ಮಕ್ಕಳು ಮೊದಲ ಬಾರಿಗೆ ಮಕೊಂಡೊಗೆ ಬಂದಾಗ ಉರ್ಸುಲಾ ಅವರ ರಕ್ತದಲ್ಲೂ ತನ್ನ ಮರಿಮಗಳ ರಕ್ತವೇ ಹರಿಯುತ್ತಿರಬೇಕೆಂಬ ನೆನಪು ಕಾಡಿದಾಗ ಕಂಪಿಸಿದಳೂ. “ಎಚ್ಚರಿಕೆಯಿಂದಿರು” ಎಂದು ಅವಳಿಗೆ ಬುದ್ಧಿ ಹೇಳಿದ್ದಳು. ಅಲ್ಲದೆ, “ಅವರಿಂದ ನಿನಗೆ ಮಗು ಹುಟ್ಟಿದರೆ ಹಂದಿಬಾಲವಿರುತ್ತದೆ” ಎಂದು ಸ್ವಲ್ಪ ಹೆದರಿಸಿಯೂ ಇದ್ದಳು. ಆ ಹುಡುಗಿ ಇದನ್ನೆಲ್ಲ ತಲೆಗೆ ಹಾಕಿಕೊಳ್ಳಲೇ ಇಲ್ಲ. ಗಂಡಸಿನ ಹಾಗೆ ಬಟ್ಟೆ ತೊಟ್ಟು ಮರಳಿನಲ್ಲಿ ಹೊರಳಾಡಿದಳು. ಗ್ರೀಸ್ ಹಚ್ಚಿದ ಕಂಬವನ್ನು ಏರಬೇಕೆಂದು ಹೀಗೆ ಮಾಡಿದ್ದಳು. ಆ ಕ್ಷಣದಲ್ಲಿ ಹದಿನೇಳು ಮಂದಿ ದಾಯಾದಿ ಸೋದರರು ಆ ಅದ್ಭುತ ದೃಶ್ಯವನ್ನು ನೋಡುತ್ತಾ ಹುಚ್ಚರಾಗಿದ್ದಾಗ ಒಂದು ದುರಂತ ಸಂಭವಿಸುವುದರಲ್ಲಿತ್ತು. ಅದಕ್ಕಾಗಿಯೇ ಯಾರೂ ಮನೆ ಒಳಗೆ ಮಲಗಲಿಲ್ಲ. ಉರ್ಸುಲಾಳ ಒತ್ತಾಯದ ಮೇರೆಗೆ

ಬಾಡಿಗೆ ಕೋಣೆಗಳಲ್ಲಿ ವಾಸಿಸುತ್ತಿದ್ದರು. ಇಷ್ಟೊಂದು ಎಚ್ಚರಿಕೆಯ ಕಾರಣ ಗೊತ್ತಾಗಿದ್ದರೆ, ಬಹುಶಃ ರೆಮೆಡಿಯೋಸ್ ದ ಬ್ಯೂಟಿ ನಕ್ಕುಬಿಡುತ್ತಿದ್ದಳು. ಭೂಮಿಯ ಮೇಲೆ ಅವಳ ಕಡೆಯ ದಿನಗಳು ಸಮೀಪಿಸುವವರೆಗೂ, ತನ್ನ ಸೌಂದರ್ಯ ದಿನನಿತ್ಯದ ದುರಂತಗಳಿಗೆ ಕಾರಣವಾಗುತ್ತಿತ್ತೆಂಬುದನ್ನೇ ತಿಳಿದಿರಲಿಲ್ಲ. ಉರ್ಸುಲಾ ಆದೇಶವನ್ನೂ ಮೀರಿ ಪ್ರತಿಸಲವೂ ಅವಳು ಊಟದ ಮನೆಗೆ ಬಂದಾಗ, ಹೊರಗಿನಿಂದ ಬಂದವರಿಗೆ ಎದೆಬಡಿತ ಶುರುವಾಗುತ್ತಿತ್ತು. ಅವಳು ಧರಿಸಿರುವ ಒರಟು ಗೌನಿನ ಒಳಗೆ ಪೂರ್ತಿಯಾಗಿ ಬೆತ್ತಲಿದ್ದಾಳೆಂಬುದು ಎಲ್ಲರಿಗೂ ತಿಳಿಯುತ್ತಿದ್ದ ವಿಷಯವೇ ಆಗಿತ್ತು. ಪೂರ್ತಿ ಬೋಳಿಸಿಕೊಂಡ ತಲೆ ಯಾವ ಸವಾಲಿಗೂ ಅಲ್ಲವೆಂಬುದು ಮಾತ್ರ ಅರ್ಥವಾಗುವಂತಿರಲಿಲ್ಲ. ಧೈರ್ಯದಿಂದ ತನ್ನ ತೊಡೆಗಳನ್ನು ತಂಪು ಮಾಡಿಕೊಳ್ಳಲು ಗೌನನ್ನು ಮೇಲಕ್ಕೆ ಎತ್ತುತ್ತಿದ್ದುದು ಯಾರನ್ನೂ ಪ್ರಚೋದಿಸುವುದಕ್ಕಾಗಿರಲಿಲ್ಲ. ಮನೆಯವರ್‍ಯಾರಿಗೂ ಗೊತ್ತಾಗದಿದ್ದ ಒಂದೇ ಒಂದು ಸಂಗತಿಯೆಂದರೆ ರೆಮೆಡಿಯೋಸ್ ದ ಬ್ಯೂಟಿ ಬಿಟ್ಟ ಉಸಿರಿನ ಗಂಧ ಅಪರಿಚಿತ ಹೊಸಬರನ್ನು ಎಷ್ಟು ಕಂಗೆಡಿಸುತ್ತಿತ್ತೆಂದರೆ ಅವಳು ಹೋದಮೇಲೂ ಎಷ್ಟೋ ಗಂಟೆಗಳ ಕಾಲ ಅದರ ಪರಿಮಳಕ್ಕಾಗಿ ಸಾಯುತ್ತಿದ್ದರು. ಅವಳು ಹಾದುಹೋದ ಮೇಲೂ ಆ ಜಾಗಗಳಲ್ಲಿ ಅವಳ ಉಸಿರಿನ ಗಂಧ ವ್ಯಾಪಿಸಿರುತ್ತಿತ್ತು. ಪ್ರೀತಿಯ ಅವಾಂತರಗಳ ಬಗ್ಗೆ ಅನುಭವವಿದ್ದ ಗಂಡಸರು, ಪ್ರಪಂಚದೆಲ್ಲೆಡೆಯ ಅನುಭವಗಳನ್ನು ಹೊಂದಿದ್ದವರೂ ಕೂಡಾ, ರೆಮೆಡಿಯೋಸ್ ದ ಬ್ಯೂಟಿ ಪಸರಿಸುವ ಉಸಿರಿನ ಸ್ವಾಭಾವಿಕ ಗಂಧವನ್ನು ಬೇರೆಲ್ಲೂ, ಎಂದೂ ಅನುಭವಿಸಿರಲಿಲ್ಲವೆಂದು ಹೇಳುತ್ತಿದ್ದರು. ಅವಳು ಹಾದು ಹೋದ ಜಾಗಗಳಲ್ಲಿ ಆ ಉಸಿರಿನ ಗಂಧದಿಂದಲೇ ಎಷ್ಟು ಹೊತ್ತಲ್ಲಿ, ಯಾವ ಜಾಗದಲ್ಲಿ, ಅಂಗಳದಲ್ಲಿಯೊ, ಬೆಗೋನಿಯಾಗಳಿದ್ದೆಡೆಯಲ್ಲಯೊ ಎನ್ನುವುದನ್ನು ಸುಲಭವಾಗಿ ಗುರುತಿಸಬಹುದಾಗಿತ್ತು. ಮನೆಯಲ್ಲಿದ್ದವರಿಗೆ, ದಿನನಿತ್ಯದ ಪರಿಸರದ ಭಾಗವಾಗಿ ಹೋಗಿದ್ದರಿಂದ ಗುರುತಿಸುವುದು ಸಾಧ್ಯವಿರಲಿಲ್ಲವಾದರೂ ಹೊರಗಿನಿಂದ ಬಂದವರು ಮಾತ್ರ ತತ್‌ಕ್ಷಣ ಅವಳಿದ್ದುದನ್ನು ಅವಳುಸಿರಿನ ಗಂಧದಿಂದ ಥಟ್ಟನೆ ಹೇಳಿಬಿಡುತ್ತಿದ್ದರು. ಯಾಕೆಂದರೆ ಅದು ಮಾಮೂಲಿಗಿಂತ ಭಿನ್ನವಾಗಿ ಇರುತ್ತಿತ್ತು. ಅಂಥವರು ಮಾತ್ರವೇ, ಯುವ ಸೇನಾಧಿಪತಿ ಸಾಯಲು ಮತ್ತು ಎಲ್ಲೋ ದೂರದ ವಿದೇಶದಿಂದ ಬಂದವನು ಭಯಂಕರ ನಿರಾಶೆಯಿಂದ ಅಸುನೀಗಲು ಕಾರಣಗಳನ್ನು ಅರ್ಥಮಾಡಿಕೊಳ್ಳಬಲ್ಲವರಾಗಿದ್ದರು. ತಾನು ಅಸ್ವಸ್ಥರ ಪರಿವಲಯದಲ್ಲಿ ಓಡಾಡುತ್ತಿದ್ದರೂ, ತಾನು ಸಮೀಪಿಸಿದಾಗ ಎಂತಹ ಅವಘಡ ಸೃಷ್ಟಿಯಾಗುತ್ತಿದ್ದರೂ ಅದು ಅವಳ ಅರಿವಿಗೆ ಬರುತ್ತಿರಲಿಲ್ಲ. ಗಂಡಸರ ಬಗ್ಗೆ ಅವಳಿಗೆ ಯಾವುದೇ ಕೀಳುಭಾವನೆ ಇರಲಿಲ್ಲ. ಚೆನ್ನಾಗಿಯೇ ಅವರೊಂದಿಗೆ ನಡೆದುಕೊಳ್ಳುತ್ತಿದ್ದಳು. ಕಡೆಯಲ್ಲಿ ಮುಗ್ಧತೆಯ ವಿನಯದೊಂದಿಗೆ ಅವರನ್ನು ತಡಬಡಿಸುವಂತೆ ಮಾಡುತ್ತಿದ್ದಳು. ಉರ್ಸುಲಾ ಇನ್ನು ಮುಂದೆ ಅಮರಾಂತಳ ಜೊತೆ ಅಡಿಗೆ ಮನೆಯಲ್ಲಿಯೇ ಊಟ ಮಾಡುವಂತೆ ಆದೇಶಿಸಿದ್ದು, ಅದು ಅವಳಿಗೆ ಅನುಕೂಲವೇ ಆಯಿತು. ಶಿಸ್ತಿನ ಪಾಲನೆ ಬೇಕಾಗುತ್ತಿರಲಿಲ್ಲ. ಅಲ್ಲದೆ ಯಾವಾಗ ಹಸಿವಾಗುತ್ತೋ ಆಗ ಹೋಗಿ ತಿನ್ನಬಹುದಾಗಿತ್ತು. ಅಲ್ಲದೆ ತಿನ್ನುವುದಕ್ಕೆ ಎಲ್ಲಾದರೆ ಏನು, ಹೋಗಿ ತಿಂದು ಬಂದರೆ ಆಯಿತು ಎಂಬ ಭಾವನೆ ಬೇರೆ. ಒಮ್ಮೊಮ್ಮೆ ಬೆಳಗಿನ ಜಾವ

ಮೂರು ಗಂಟೆಗೇ ಎದ್ದು ಊಟಮಾಡಿ ಇಡೀ ದಿನ ಮಲಗಿಬಿಡುತ್ತಿದ್ದಳು. ಹಲವು ತಿಂಗಳು, ಸಾಮಾನ್ಯ ಘಟನೆಯೊಂದು ಸಂಭವಿಸಿ ಅವಳನ್ನು ಸೆಳೆಯದಿದ್ದರೆ, ಚೆಲ್ಲಾಪಿಲ್ಲಿಯಾಗಿರಿಸಿಕೊಂಡ ವೇಳಾಪಟ್ಟಿಯೊಂದಿಗೆ ಸಮಯ ಕಳೆಯುತ್ತಿದ್ದಳು. ಆಮೇಲೆ ಎಲ್ಲವೂ ಸರಿಹೋದ ಮೇಲೆ, ಬೆಳಿಗ್ಗೆ ಹನ್ನೊಂದು ಗಂಟೆಗೆ ಎದ್ದು ಬಾತ್ ರೂಮು ಸೇರಿಕೊಂಡು ಚೇಳುಗಳನ್ನು ಕೊಲ್ಲುತ್ತಾ ಎರಡು ಗಂಟೆಕಾಲ ಬೆತ್ತಲೆಯಾಗಿ ಇರುತ್ತಿದ್ದಳು. ನಂತರ ಚೊಂಬಿನಿಂದ ಮೈ ಮೇಲೆ ನೀರು ಸುರಿದುಕೊಳ್ಳುತ್ತಿದ್ದಳು. ಎಷ್ಟರಮಟ್ಟಿಗೆ, ಎಷ್ಟು ಹೊತ್ತು ತನ್ನ ದೇಹದ ಬಗ್ಗೆ ಕಾಳಜಿ ವಹಿಸುತ್ತಿದ್ದಳೆಂದರೆ ಯಾರಿಗಾದರೂ ಅವಳು ತನ್ನ ದೇಹವನ್ನು ಆರಾಧಿಸುತ್ತಿದ್ದಾಳೆ ಎನ್ನುವ ಭಾವನೆ ಬರುವುದು ಸಾಧ್ಯವಿತ್ತು. ಆದರೆ ಅದು ಅವಳಿಗೆ ಸಂವೇದನೆಗಳನ್ನು ಉಂಟುಮಾಡುವ ಕ್ರಿಯೆಯಾಗಿರದೆ, ಹಸಿವಾಗುವವರೆಗೆ ಹೊತ್ತು ಕಳೆಯಲು ನೆಪವಾಗಿತ್ತು. ಒಂದು ದಿನ ಅವಳು ಸ್ನಾನ ಮಾಡುತ್ತಿದ್ದಾಗ ಯಾವನೊ ಒಬ್ಬ ಛಾವಣಿ ಮೇಲಿನ ಹೆಂಚು ತೆಗೆದು ಅವಳ ಬೆತ್ತಲೆ ದೇಹ ನೋಡುತ್ತಿದ್ದಂತೆ ಸ್ತಂಭಿತನಾದ. ಹೆಂಚುಗಳ ನಡುವಿನ ರಂಧ್ರದಿಂದ ಅವನ ಕಂಗೆಟ್ಟ ಕಣ್ಣುಗಳನ್ನು ಗಮನಿಸಿದಳಾದರು ಅವಳಲ್ಲಿ ಯಾವುದೇ ಬಗೆಯ ಸಂವೇದನೆ ಉಂಟಾಗಲಿಲ್ಲವಾದ ಸ್ವಲ್ಪ ಭಯವಿತ್ತು.

"ಎಚ್ಚರಿಕೆ, ಬಿದ್ದೀಯೆ" ಎಂದು ಕೂಗಿದಳು.

"ಸುಮ್ಮನೆ ನಿನ್ನನ್ನು ನೋಡಬೇಕೆನಿಸಿತು" ವಿದೇಶೀಯ ಉತ್ತರಿಸಿದ.

"ಹಾಗಾದರೆ ಬಿಡು! ಆದರೆ, ಆ ಹೆಂಚುಗಳು ಹಳೇದಾಗಿವೆ ಎಚ್ಚರಿಕೆ" ಎಂದಳು.

ಅಪರಿಚಿತ ವಿದೇಶೀಯನ ಮುಖದಲ್ಲಿ ವೇದನೆ ಕಾಣಿಸಿಕೊಂಡಿತು. ಮೂಲ ಚಿತ್ತವೃತ್ತಿಗಳೊಂದಿಗೆ ಸಂಘರ್ಷಕ್ಕೆ ಇಳಿದಿದ್ದಂತೆ ಕಾಣಿಸುತ್ತಿದ್ದ. ರೆಮೆಡಿಯೋಸ್ ದ ಬ್ಯೂಟಿಗೆ ಅವನು ತಾನು ಬೀಳಬಹುದೆಂಬ ಹೆದರಿಕೆಯಲ್ಲಿ ಇದ್ದಾನೆನೆಸಿ, ಮಾಮೂಲು ಸಮಯಕ್ಕಿಂತ ಬೇಗಬೇಗನೆ ಸ್ನಾನ ಮುಗಿಸಿ ಅವನನ್ನು ಅಪಾಯದಿಂದ ತಪ್ಪಿಸಬಹುದೆಂದುಕೊಂಡಳು. ಮೈಗೆ ನೀರನ್ನು ಸುರಿದುಕೊಳ್ಳುತ್ತಲೇ, ಛಾವಣಿ ಆ ರೀತಿ ಇರಲು ಕಾರಣ ಬಿದ್ದ ಎಲೆಗಳೆಲ್ಲ ಮಳೆಯಿಂದ ಕೊಳೆತು ಅವು ಬಾತ್‌ರೂಮಿನ ತುಂಬ ಇರುವುದರಿಂದ, ಚೇಳುಗಳು ಸೇರಿಕೊಂಡಿವೆ ಎಂದು ವಿವರಿಸಿ ಹೇಳುತ್ತಿದ್ದಳು. ಈ ಸಂಕ್ಷಿಪ್ತ ಸಂಭಾಷಣೆ, ಅವಳಿಗಾದ ಸಂತೋಷವನ್ನು ಮರೆಮಾಚುವುದಕ್ಕಾಗಿ ಎಂದು ಭಾವಿಸಿದ. ಆದ್ದರಿಂದ ಅವಳು ಮೈಗೆ ಸೋಪು ಹಚ್ಚಿಕೊಳ್ಳುವಾಗ, ಅವನು ಸ್ವಲ್ಪ ಪ್ರಚೋದಿತನಾಗಿ ಒಂದು ಹೆಜ್ಜೆ ಮುಂದೆ ಹೋದ.

"ನಾನೇ ನಿನಗೆ ಸೋಪು ಹಚ್ಚುತ್ತೇನೆ" ಮೆಲ್ಲಗೆ ಹೇಳಿದ.

"ನಿನ್ನ ಒಳ್ಳೆ ಉದ್ದೇಶಕ್ಕೆ ಧನ್ಯವಾದಗಳು. ಆದರೆ ನನ್ನ ಎರಡು ಕೈಗಳೇ ಸಾಕಾಗುತ್ತವೆ" ಎಂದಳು.

"ಬರಿ ನಿನ್ನ ಬೆನ್ನಷ್ಟೆ ಆದರೆ" ವಿದೇಶಿ ಬೇಡಿಕೊಂಡ.

"ಅದೊಂದು ಹುಚ್ಚುತನ, ಬೆನ್ನಿಗೆ ಯಾರೂ ಸೋಪು ಹಚ್ಚಿಕೊಳ್ಳುವುದಿಲ್ಲ" ಎಂದು ಹೇಳಿದಳು.

ಆಮೇಲೆ ಅವಳು ಮೈ ಒರೆಸಿಕೊಳ್ಳುತ್ತಿದ್ದಾಗ, ಅಪರಿಚಿತ ವ್ಯಕ್ತಿ ಕಣ್ಣಲ್ಲಿ ನೀರು ತುಂಬಿಕೊಂಡು ತನ್ನನ್ನು ಮದುವೆಯಾಗಲು ಅಂಗಲಾಚಿದ. ಅದಕ್ಕೆ ಅವಳು ಪ್ರಾಮಾಣಿಕವಾಗಿ ತಾನು, ಕೇವಲ ಒಂದು ಹೆಣ್ಣಿನ ದೇಹವನ್ನು ಸ್ನಾನಮಾಡುತ್ತಿರುವಾಗ, ಊಟವನ್ನೂ ಬಿಟ್ಟು ಒಂದು ಗಂಟೆ ವ್ಯರ್ಥಮಾಡುವ ಸಾಮಾನ್ಯ ಮನುಷ್ಯನನ್ನು ಎಂದಿಗೂ ಮದುವೆಯಾಗುವುದಿಲ್ಲ ಎಂದು ಹೇಳಿಬಿಟ್ಟಳು. ಅವಳು ಗೌನನ್ನು ಹಾಕಿಕೊಂಡಾಗ, ಒಳಗೆ ಬೆತ್ತಲಾಗಿಯೇ ಇದ್ದಾಳೆಂಬುದಕ್ಕೆ ಯಾವ ಸಮರ್ಥನೆಯೂ ಬೇಕಾಗಲಿಲ್ಲ. ರಹಸ್ಯ ತಿಳಿದುಬರುತ್ತಿದ್ದಂತೆ ಕಾದಕಬ್ಬಿಣದ ಬರೆ ಬಿದ್ದಂತಾಯಿತು.

ಆಗ ಅವನು ಇನ್ನೆರಡು ಹೆಂಚುಗಳನ್ನು ತೆಗೆದು ನೇರವಾಗಿ ಬಚ್ಚಲು ಮನೆಯಲ್ಲಿ ಇಳಿಯಲು ಅನುವುಮಾಡಿಕೊಂಡ.

"ಬಹಳ ಎತ್ತರ ಇದೆ. ನೀನಾಗಿ ಸಾಯುತ್ತೀಯೆ" ಎಂದಳು.

ಪಾಚಿಗಟ್ಟಿದ ಹೆಂಚುಗಳು ದೊಡ್ಡ ಸದ್ದಿನೊಂದಿಗೆ ಮುರಿದು ಕೆಳಗೆ ಬೀಳುತ್ತಿದ್ದಂತೆ. ಆ ವ್ಯಕ್ತಿಯೂ ಕೂಗಿಕೊಳ್ಳುವಷ್ಟೂ ಸಮಯವಿಲ್ಲದೆ ಮೇಲಿಂದ ಸಿಮೆಂಟ್ ನೆಲದ ಮೇಲೆ ಬಿದ್ದು ತಲೆಯೊಡೆದುಕೊಂಡು ಪ್ರಾಣ ಬಿಟ್ಟ. ವಿದೇಶೀಯರು ಪಕ್ಕದ ಊಟದ ಮನೆಯಲ್ಲಿ ಇದ್ದವರು ಭಯಂಕರ ಸದ್ದನ್ನು ಕೇಳಿ, ದೇಹವನ್ನು ಹೊರತರಲು ಅಲ್ಲಿಗೆ ಹೋದರು. ಕೂಡಲೇ ಆ ದೇಹದಿಂದ ರೆಮೆಡಿಯೋಸ್ ದ ಬ್ಯೂಟಿಯ ಉಸಿರಿನ ಗಂಧ ಹೊಮ್ಮುತ್ತಿದ್ದುದು ಅರಿವಿಗೆ ಬಂತು. ಅದು ದೇಹದಲ್ಲಿ ಎಷ್ಟು ಆಳವಾಗಿ ಇಳಿದಿತ್ತೆಂದರೆ ಬುರುಡೆಯಲ್ಲಿ ಸೀಳುಗಳು, ರಕ್ತಹರಿಯುವುದು ಯಾವುದೂ ಇಲ್ಲದೆ, ಒಂದು ಬಗೆಯ ದ್ರವ ಹೊರಬರುತ್ತಿತ್ತು. ಅದರೊಳಗಿಂದ ಒಂದು ಬಗೆಯ ಪರಿಮಳ ಹೊಮ್ಮುತ್ತಿದ್ದು, ಅದು ಅವರಿಗೆ ಕೂಡಲೇ ರೆಮೆಡಿಯೋಸ್ ದ ಬ್ಯೂಟಿಯದೆಂದು ಕೂಡಲೇ ತಿಳಿಯಿತು. ಅವಳ ಸೌಂದರ್ಯ ಸಾವಿನಾಚೆಗೂ ಹಿಂಸಿಸುತ್ತಿತ್ತು. ಕಡೆಗೆ ಅಸ್ಥಿಗಳ ತನಕವೂ ಆ ಹಿಂಸೆ ಇಳಿದಿತ್ತು. ಸದ್ಯಕ್ಕೆ ಏನಾದರಾಗಲಿ, ಈ ಭಯಂಕರ ಅಪಘಾತಕ್ಕೆ, ಹಿಂದಿನ ಇಬ್ಬರ ಸಾವಿಗೆ ರೆಮೆಡಿಯೋಸ್ ದ ಬ್ಯೂಟಿಯೇ ಕಾರಣವೆಂಬಂತೆ, ಅದೇ ಕಾರಣವೆಂದು ಭಾವಿಸಲಿಲ್ಲ. ಒಟ್ಟಿನಲ್ಲಿ ಹೊರಗಿನವರಿಗೆ ಮತ್ತು ಮಕೊಂಡೊ ಊರಿನ ಮಂದಿಗೆ, ರೆಮೆಡಿಯೋಸ್ ದ ಬ್ಯೂಟಿಯ ಉಸಿರು ಪ್ರೀತಿಗೆ ಕಾರಣವಲ್ಲ, ಸಾವಿಗೆ ಕಾರಣ ಎಂಬುದನ್ನೂ ಸ್ಥಾಪಿಸಲು ಮತ್ತೊಂದು ಬಲಿಪಶು ಬೇಕಾಗಿತ್ತು. ಸಾಕ್ಷಿ ಒದಗಿಸುವ ಒಂದು ಅವಕಾಶ ಕೆಲ ತಿಂಗಳನಂತರ ಬಂತು. ಒಂದು ಮಧ್ಯಾಹ್ನ ರೆಮೆಡಿಯೋಸ್ ದ ಬ್ಯೂಟಿ, ಹೊಸದಾಗಿ ನೆಟ್ಟ ಸಸಿಗಳನ್ನು ನೋಡಲು ಗೆಳತಿಯರ ಗುಂಪಿನೊಂದಿಗೆ ಹೋದಳು. ಮಕೊಂಡೊನ ಹುಡುಗಿಯರಿಗೆ ಆ ಹೊಸ ಆಟ ನಗುವುದಕ್ಕೆ, ಅಚ್ಚರಿ ಪಡಿಸುವುದಕ್ಕೆ, ಹೆದರಿಸುವುದಕ್ಕೆ, ತಮಾಷೆ ಮಾಡುವುದಕ್ಕೆ ಕಾರಣವಾಗುತ್ತಿತ್ತು. ಮತ್ತು ರಾತ್ರಿ ಅವರ ವಿಹಾರದ ಬಗ್ಗೆ, ಯಾವುದೋ ಕನಸಿನಲ್ಲಿ ಆದ ಅನುಭವವನ್ನು ವಿವರಿಸುತ್ತಿರುವಂತೆ ಮಾತಾಡುತ್ತಿದ್ದರು. ಆ

ಮೌನದ ಘನತೆಯನ್ನು ಅರಿತಿದ್ದ ಉರ್ಸುಲಾಗೆ, ರೆಮೆಡಿಯೋಸ್ ದ ಬ್ಯೂಟಿಯಿಂದ ಅದರಿಂದಾಗುವ ಸಂತೋಷವನ್ನೂ ಕಿತ್ತುಕೊಳ್ಳಲು ಮನಸ್ಸು ಬರಲಿಲ್ಲ. ಆದ್ದರಿಂದ ಒಂದು ಮಧ್ಯಾಹ್ನ, ಲಕ್ಷಣವಾದ ಬಟ್ಟೆ, ಹ್ಯಾಟ್ ಹಾಕಿಕೊಂಡರೆ ಮಾತ್ರ ಅವಳಿಗೆ ಹೋಗಲು ಅನುಮತಿ ನೀಡಿದಳು. ಹುಡುಗಿಯರ ಗುಂಪು ಗಿಡಗಳಿರುವ ಸ್ಥಳಕ್ಕೆ ಹೋಗುತ್ತಿದ್ದಂತೆ, ಗಾಳಿಗೆ ಮಾರಕ ಪರಿಮಳದ ಸ್ಪರ್ಶವುಂಟಾಯಿತು. ಗಿಡಗಳ ಸಾಲುಗಳ ಮಧ್ಯೆ ಕೆಲಸಮಾಡುತ್ತಿದ್ದ ಕೆಲಸಗಾರರಿಗೆ ಯಾವುದೋ ಮೋಹಿನಿಯ ಹಿಡಿತಕ್ಕೆ ಸಿಕ್ಕಿಕೊಂಡಂತೆನಿಸಿತು. ಅನಿರೀಕ್ಷಿತವಾದ ಅಪಾಯ ಒದಗಲಿದೆ ಎನಿಸಿತು. ಎಷ್ಟೋ ಜನಕ್ಕೆ ಅಳಬೇಕೆನಿಸಿತು. ರೆಮೆಡಿಯೋಸ್ ದ ಬ್ಯೂಟಿ ಮತ್ತು ಅವಳ ಗೆಳತಿಯರು, ಇನ್ನೇನು ಕೆಲವು ಭಯಂಕರ ಗಂಡಸರು ಅವರ ಮೇಲೆ ಆಕ್ರಮಣ ಮಾಡಲು ಅಣಿಯಾಗುತ್ತಿದ್ದಂತೆ, ಓಡಿ ಹತ್ತಿರದ ಮನೆಯೊಂದರಲ್ಲಿ ರಕ್ಷಣೆ ಪಡೆದರು. ಸ್ವಲ್ಪ ಹೊತ್ತಿನ ನಂತರ ಪವಿತ್ರತೆಯ ಸಂಕೇತವೆಂಬಂತೆ ಬೂದಿ ಶಿಲುಬೆ ಸಂಕೇತ ಧರಿಸಿದ್ದ ನಾಲ್ಕು ಮಂದಿ ಅರೆಲಿಯಾನೊಗಳು ಅವರನ್ನು ರಕ್ಷಿಸಿದರು. ರೆಮೆಡಿಯೋಸ್ ದ ಬ್ಯೂಟಿ, ಗೊಂದಲದ ಅವಕಾಶವನ್ನು ಬಳಸಿಕೊಂಡು ಅವರಲ್ಲಿನ ಒಬ್ಬ ವ್ಯಕ್ತಿ ಪರಿಜನ ಕೈಯಿಂದ ಅವಳ ಹೊಟ್ಟೆಯನ್ನು ಗಟ್ಟಿಯಾಗಿ ರಣಹದ್ದೊಂದು ಶಿಖರದ ತುದಿಯನ್ನು ತನ್ನ ಪಂಜದಿಂದ ಹಿಡಿದುಕೊಂಡು ಇರುವಂತೆ, ಕಿವುಚಿ ಹಿಡಿದುಕೊಂಡಿದ್ದುದನ್ನು ಯಾರಿಗೂ ಹೇಳಲಿಲ್ಲ. ಸಮಯ ಸ್ಫೂರ್ತಿಯಿಂದ ಅದನ್ನು ಹೇಗೋ ನಿಭಾಯಿಸಿದಳು. ಅವನ ಕಣ್ಣುಗಳಲ್ಲಿ ಕಂಡ ಅಸಮಾಧಾನ ಅವಳ ಹೃದಯದಲ್ಲಿ ಕೆಂಡದ ಕರುಣೆಯಂತೆ ಅಚ್ಚೊತ್ತಿತ್ತು. ಆ ರಾತ್ರಿ ಆ ಮನುಷ್ಯ ಹೆಮ್ಮೆಯಿಂದ ತನ್ನ ಸಾಹಸವನ್ನು, ತನ್ನ ಅದೃಷ್ಟವನ್ನು ಟರ್ಕಿಗಳ ಬೀದಿಯಲ್ಲಿ ಹೇಳಿಕೊಂಡು ಬೀಗುತ್ತಿದ್ದ. ಕುದುರೆಯ ಒಂದು ಒದೆತ ಬೀಳುವ ಕೆಲ ಕ್ಷಣಗಳ ಮೊದಲೇ ಅವನು ಕುದುರೆಯ ಕಾಲ ತುಳಿತಕ್ಕೆ ಸಿಕ್ಕು ಜನ ನೋಡುತ್ತಿದ್ದಂತೆಯೇ ಪ್ರಾಣ ಬಿಟ್ಟ. ಬೀದಿಯ ಮಧ್ಯದಲ್ಲಿ ಅವನೇ ಕಕ್ಕಿದ ರಕ್ತದ ಮಡುವಿನಲ್ಲಿ ಬಿದ್ದಿದ್ದ. ಅಂತೂ ಇಂತೂ ರೆಮೆಡಿಯೋಸ್ ದ ಬ್ಯೂಟಿ ಸಾಯಿಸುವ ಶಕ್ತಿ ಹೊಂದಿದ್ದಾಳೆಂಬುದಕ್ಕೆ ನಾಲ್ಕು ನಿದರ್ಶನಗಳು ಸಾಕಾಯಿತು. ಇದನ್ನು ಅಷ್ಟಾಗಿ ಪರಿಗಣಿಸದ ಕೆಲವರು, ಅಂಥವಳ ಜೊತೆ ಒಂದು ರಾತ್ರಿ ಕಳೆದರೂ ಸಾಕು. ಜೀವನವನ್ನು ತ್ಯಾಗಮಾಡಬಹುದು ಎಂದು ಹೇಳಿದರೇ ಹೊರತಾಗಿ ಯಾರೂ ಧೈರ್ಯ ಮಾಡಲಿಲ್ಲ. ಅವಳನ್ನು ಪಡೆಯುವುದಷ್ಟೇ ಅಲ್ಲ, ಅವಳ ಬಗ್ಗೆ ಇದ್ದ ನಂಬಿಕೆಗಳು ಹಳೆ ಕಾಲದವು ಎನ್ನುವ ಭಾವನೆ ಮತ್ತು ಸರಳ ಪ್ರೀತಿ – ಇಷ್ಟಿದ್ದರೆ ಸಾಕಾಗಿತ್ತಾದರೂ, ಯಾರಿಗೂ ಆ ಥರದ ವಿಚಾರಗಳು ಬರಲಿಲ್ಲ. ಅವಳ ಬಗ್ಗೆ ಉರ್ಸುಲಾ ಅಷ್ಟಾಗಿ ಚಿಂತೆ ಮಾಡಲಿಲ್ಲ. ಮತ್ತೊಂದು ಸಂದರ್ಭದಲ್ಲಿ, ಪ್ರಪಂಚದ ದೃಷ್ಟಿಯಿಂದ ಅವಳನ್ನು ತಪ್ಪಿಸಬೇಕೆಂಬ ವಿಚಾರ ಇನ್ನೂ ಇದ್ದಾಗ, ಮನೆ ಕೆಲಸಗಳಲ್ಲಿ ತೊಡಗುವ ಆಸಕ್ತಿಯನ್ನು ಮೂಡಿಸಬೇಕೆಂದುಕೊಂಡಳು. "ಗಂಡಸರು ನಾವು ಯೋಚಿಸುವುದಕ್ಕಿಂತ ಹೆಚ್ಚಾಗಿ ನಿರೀಕ್ಷಿಸುತ್ತಾರೆ.... ಅಡಿಗೆ ಮಾಡೋಕೆ, ಗುಡಿಸೋಕೆ, ಅನುಭವಿಸೋಕೆ, ಸಣ್ಣ ವಿಷಯಗಳ ಬಗ್ಗೆ ಆಲೋಚನೆ ಮಾಡೋಕೆ, ನಾವು ಅಂದುಕೊಂಡದ್ದಕ್ಕಿಂತ ಹೆಚ್ಚಿಗೆ ಬೇಕಾಗುತ್ತದೆ" – ಎಂದು ತಿಳಿಸಹೇಳುವಂತೆ ಹೇಳಿದಳು. ಮನೆಕೆಲಸಗಳಿಗೆ ಅವಳನ್ನು ತಯಾರುಮಾಡಲು ಪ್ರಯತ್ನಿಸುವಾಗ ತನ್ನನ್ನೇ ತಾನು ಮೋಸ ಮಾಡಿಕೊಳ್ಳುತ್ತಿದ್ದಳು.

ಅವಳಿಗೆ ಗೊತ್ತಿತ್ತು, ಒಮ್ಮೆ ಗಂಡಸಿಗೆ ಬಯಸಿದ್ದು ಸಿಕ್ಕಿ ತೃಪ್ತಿಯಾದಾಗ, ಪ್ರಪಂಚದಲ್ಲಿ ಏನೇ ಆದರೂ ಹೆಣ್ಣಿನ ಕಡೆಯಿಂದ ಒಂದು ಕ್ಷಣದ ನಿರ್ಲಕ್ಷ್ಯವನ್ನೂ ಸಹಿಸಿಕೊಳ್ಳಲಾರ. ಅವಳನ್ನು ಅರ್ಥಮಾಡಿಕೊಳ್ಳಲಾರ. ಕಡೆಯಲ್ಲಿ ಕಡೆಯವನಾದ ಜೋಸ್ ಆರ್ಕಾಡಿಯೋನ ಹುಟ್ಟು, ಅವನನ್ನು ಪೋಪ್ ಆಗುವಂತೆ ಬೆಳೆಸಬೇಕೆಂಬ ದೃಢ ನಿರ್ಧಾರ, ಕಡೆಗೆ ಮರಿಮಗಳ ಬಗ್ಗೆ ಯೋಚಿಸುವುದನ್ನೇ ಬಿಡುವಂತೆ ಮಾಡಿತು. ಅವಳನ್ನು ಅವಳ ಪಾಡಿಗೆ ಬಿಟ್ಟುಬಿಟ್ಟಳು. ಯಾಕೆಂದರೆ ಅವಳಿಗೆ ಒಂದು ನಂಬಿಕೆಯಿತ್ತು, ಇವತ್ತಲ್ಲ ನಾಳೆ ಒಂದು ಪವಾಡ ನಡೆದು ಈ ಪ್ರಪಂಚದಲ್ಲಿ ಇಷ್ಟೆಲ್ಲ ಇರುವಾಗ, ಅವಳನ್ನು ಸರಿಮಾಡುವ ಅಥವಾ ಅವಳಿಗೆ ಹೊಂದಿಕೊಳ್ಳುವ ಒಬ್ಬ ಗಂಡಸು ಇದ್ದೇ ಇರುತ್ತಾನೆ ಎಂದು. ಅಮರಾಂತಾ ಕೂಡ ಅವಳನ್ನು ಪ್ರಯೋಜಕ ಹೆಣ್ಣನ್ನಾಗಿ ಮಾಡುವ ಪ್ರಯತ್ನದಲ್ಲಿ ಈಗಾಗಲೇ ಸೋತಿದ್ದಳು. ಮರೆತು ಹೋದ ಅಂದಿನ ಮಧ್ಯಾಹ್ನಗಳಲ್ಲಿ, ಹೊಲಿಗೆ ಯಂತ್ರದ ಹಿಡಿಕೆ ತಿರುಗಿಸುವಾಗಲೂ ಆಸಕ್ತಿ ಇಲ್ಲದ್ದನ್ನು ಗಮನಿಸಿ ಆಗಲೇ ಅವಳಿಗೆ ಇವಳಿಂದ ಏನೂ ಆಗುವುದಿಲ್ಲವೆಂದು ನಿರ್ಧರಿಸಿದ್ದಳು. ಗಂಡಸರು ಹೇಳುವುದನ್ನೂ ಮನಸ್ಸಿಗೆ ತಂದುಕೊಳ್ಳದಿದ್ದಾಗ ಬೇಸರಗೊಂಡು "ನಿನ್ನನ್ನು ನೋಡ್ತಿರು ಹರಾಜುಹಾಕಿಬಿಡ್ತೇವೆ" ಎಂದು ಅವಳಿಗೆ ಹೇಳುತ್ತಿದ್ದಳು. ನಂತರ ಉರ್ಸುಲಾ ಅವಳನ್ನು ಪ್ರಾರ್ಥನೆಗಾಗಿ ಶಾಲುವಿನಿಂದ ಮುಖಕ್ಕೆ ಮುಸುಕು ಹಾಕಿಸಿ ಚರ್ಚಿಗೆ ಕರೆದುಕೊಂಡು ಹೋಗಲು ಅಮರಾಂತಳಿಗೆ ಹೇಳಿದಾಗ, ಈ ರೀತಿಯಲ್ಲಿ ಮುಸುಕು ಹಾಕಿಕೊಂಡು ಹೋಗುವಾಗ ಗಂಡಸರಿಗೆ ಇನ್ನಷ್ಟು ಕುತೂಹಲ ಹೆಚ್ಚಿ ಅವಳ ಮನಸ್ಸನ್ನು ಗೆಲ್ಲಲು ನಿಧಾನವಾಗಿ ಅವಳಲ್ಲಿನ ದೌರ್ಬಲ್ಯವೇನೆಂದು ಪತ್ತೆ ಹಚ್ಚುತ್ತಾನೆ ಎಂದು ಯೋಚಿಸಿದಳು. ಆದರೆ ರಾಜಕುಮಾರನಿಗಿಂತ ಯೋಗ್ಯನಾದವನೊಬ್ಬ ಮುಂದೆ ಬಂದಾಗ ಮೂರ್ಖಳಂತೆ ಅವನನ್ನು ತಿರಸ್ಕರಿಸಿದಾಗ ಎಲ್ಲ ಭರವಸೆಗಳನ್ನೂ ಬಿಟ್ಟುಬಿಟ್ಟಳು. ಫರ್ನಾಂಡಾ ಅವಳನ್ನು ಅರ್ಥಮಾಡಿಕೊಳ್ಳುವ ಪ್ರಯತ್ನವನ್ನೂ ಮಾಡಲಿಲ್ಲ. ರಕ್ತಸಿಕ್ತ ಜಾತ್ರೆಯ ಸಂದರ್ಭದಲ್ಲಿ ರೆಮೆಡಿಯೋಸ್ ದ ಬ್ಯೂಟಿ ರಾಣಿಯಂತೆ ಅಲಂಕರಿಸಿಕೊಂಡದ್ದನ್ನು ನೋಡಿದಾಗ ಅವಳೊಬ್ಬ ವಿಶೇಷ ವ್ಯಕ್ತಿ ಎಂದುಕೊಂಡಿದ್ದಳು. ಅವಳು ಕೈಯಿಂದ ಊಟಮಾಡುತ್ತಿದ್ದಾಗ, ಒಂದೇ ಒಂದು ಸರಳ ಪ್ರಶ್ನೆಗೆ, ಅದೇನೂ ಪವಾಡ ನಿರೀಕ್ಷಿಸುವಂಥಾದ್ದು ಅಲ್ಲದ್ದಕ್ಕೂ ಉತ್ತರವನ್ನೂ ಕೊಡಲಾಗಲಿಲ್ಲ. ಅದನ್ನೆಲ್ಲ ನೋಡಿದಾಗ, ಈ ಕುಟುಂಬದಲ್ಲಿ ಮೂರ್ಖರು ಬಹಳ ಕಾಲ ಜೀವಿಸಿರುತ್ತಾರೆ ಎಂದು ಚಿಂತಿಸಿದಳು. ಇಷ್ಟೆಲ್ಲದರ ನಡುವೆಯೂ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ದೃಷ್ಟಿಯಲ್ಲಿ ರೆಮೆಡಿಯೋಸ್ ದ ಬ್ಯೂಟಿ, ತನಗೆ ತಿಳಿದ ಹಾಗೆ ಬಹಳ ಸಾಮರ್ಥ್ಯವುಳ್ಳ ಮತ್ತು ಯಾರನ್ನಾದರೂ ಪ್ರಭಾವಿಸಬಲ್ಲವಳಾಗಿರುವುದರಿಂದ, ಅವಳನ್ನು ಅವಳ ಪಾಡಿಗೆ ಬಿಡಬೇಕೆಂದು ಅವರಿಗೆ ಹೇಳಿದ. ರೆಮೆಡಿಯೋಸ್ ದ ಬ್ಯೂಟಿ, ಒಂಟಿತನದ ಮರುಳುಗಾಡಿನಲ್ಲಿ ವಿಹರಿಸುತ್ತ, ಬೆನ್ನಲ್ಲಿ ಯಾವುದೇ ಗುರುತಿಲ್ಲದ, ಕನಸುಗಳ ಮೂಲಕ ಪ್ರಬುದ್ಧಳಾಗುತ್ತ, ಮುಗಿಯದ ಸ್ನಾನಗಳಲ್ಲಿ, ಅನಿಯಮಿತ ಊಟಗಳಲ್ಲಿ, ಮಾರ್ಚ್ ತಿಂಗಳ ಒಂದು ಮಧ್ಯಾಹ್ನ ಫರ್ನಾಂಡಾ ಕೈತೋಟದಲ್ಲಿ ಅವಳ ತಾಳೆಮರದ ಹಾಳೆಗಳನ್ನು ಮಡಚುವ ಕೆಲಸ ಮಾಡುತ್ತಿದ್ದಳು. ಅಲ್ಲಿನ ಹೆಂಗಸರನ್ನು ಸಹಾಯಕ್ಕೆ ಕರೆದಳು. ಅಲ್ಲಿವರೆಗೆ ಅವಳು

ನೆನಪುಗಳೇ ಇಲ್ಲದೆ ಮೌನವಾಗಿ ಇದ್ದಳು. ಅವಳು ಆಗ ತಾನೇ ಶುರುಮಾಡಿದ್ದಾಗ ರೆಮೆಡಿಯೋಸ್ ದ ಬ್ಯೂಟಿ ತುಂಬಾ ಸಪ್ಪೆಯಾಗಿ ಇರುವುದನ್ನು ಗಮನಿಸಿ, "ಯಾಕೆ ಹುಷಾರಿಲ್ಲವೇ?" ಎಂದು ಕೇಳಿದಳು. ರೆಮೆಡಿಯೋಸ್ ದ ಬ್ಯೂಟಿ ಮಡಚುವಾಗ ಶೀಟಿನ ಒಂದು ತುದಿ ಹಿಡಿದುಕೊಂಡು "ಅದಕ್ಕಿಂತ ವಿರುದ್ಧ ನಾನೆಂದೂ ಇಷ್ಟು ಆರಾಮವಾಗಿ ಇರಲಿಲ್ಲ" ಎಂದು ಒಂದು ರೀತಿಯ ನಗೆಯೊಂದಿಗೆ ಹೇಳಿದಳು. ಅದನ್ನು ಹೇಳಿ ಮುಗಿಸುತ್ತಿರುವಷ್ಟರಲ್ಲಿ, ಫರ್ನಾಂಡಾಳ ಕೈಯಿಂದ ಸೂಕ್ಷ್ಮ ಬೆಳಕಿನ ಸೆಳೆತಕ್ಕೆ ಎಳೆದಂತಾಯಿತು, ಮತ್ತು ಅದು ಅಗಲವಾಗಿ ಹರಡಿಕೊಂಡಿತು. ಅಮರಾಂತಾಳಿಗೆ ಏನೋ ಒಂದು ಥರ ಕಂಪನವಾಯಿತು. ಒಳ ಲಂಗದ ಲೇಸು ನಿಗೂಢವಾಗಿ ನಲುಗಿದಂತಾಯಿತು. ರೆಮೆಡಿಯೋಸ್ ದ ಬ್ಯೂಟಿ ಏಳುವಾಗ ಶೀಟು ಬೀಳುತ್ತೇನೋ ಎಂಬ ಭಯಕ್ಕೆ ಗಟ್ಟಿಯಾಗಿ ಹಿಡಿದುಕೊಂಡಳು. ಆ ಸಮಯಕ್ಕೆ ಪೂರ್ತಿ ಕುರುಡಾಗಿದ್ದ ಉರ್ಸುಲಾ ಸಮಾಧಾನದಿಂದ, ಬೆಳಕಿನ ಗಾಳಿಯೇನೆಂಬುದನ್ನು ಅರ್ಥಮಾಡಿಕೊಂಡು ಶೀಟುಗಳನ್ನು ಬೆಳಕಿನಲ್ಲಿಯೇ ಬಿಟ್ಟಳು. ರೆಮೆಡಿಯೋಸ್ ದ ಬ್ಯೂಟಿ ಫಡ ಫಡಿಸುತ್ತಿರುವ ಶೀಟುಗಳ ಮಧ್ಯದಿಂದ ಎದ್ದು, ಜೀರುಂಡೆಗಳನ್ನು, ಡೇಹಲಿಯಾಗಳನ್ನು ಬಿಟ್ಟು, ನಾಲ್ಕು ಗಂಟೆಯ ಸಮಯ ಕಳೆಯುತ್ತಿದ್ದಂತೆ ಗಾಳಿಯಲ್ಲಿ, ಯಾವ ನೆನಪಿನ ಹಕ್ಕಿಗಳಿಗೂ ಅಷ್ಟು ಎತ್ತರ ಹಾರಲು ಸಾಧ್ಯವಿಲ್ಲವೆನ್ನುವಂತೆ, ಹಾರಿ ಹೋಗಿ ಮರೆಯಾದಳು.

ಹೊರಗಿನವರು, ಸಹಜವಾಗಿ ರೆಮೆಡಿಯೋಸ್ ದ ಬ್ಯೂಟಿ ಕಡೆಗೂ ಹಿಂತಿರುಗಿ ಬರಲಾಗದ ರಾಣಿ ದುಂಬಿಯ ಹಣೆಬರಹಕ್ಕೆ ಒಳಗಾದಳೆಂದೂ, ಅವಳ ಕುಟುಂಬ, ಕುಟುಂಬ ಗೌರವವನ್ನು ಕಾಪಾಡುವುದಕ್ಕಾಗಿ, ಈ ರೀತಿ ಮೇಲೆ ಹಾರಿಹೋದ ಕತೆ ಕಟ್ಟಿ ಹೇಳುತ್ತಿದ್ದಾರೆಂದೂ ಭಾವಿಸಿದರು. ಅಸೂಯೆಯಿಂದ ಕೂಡಿದ್ದ ಫರ್ನಾಂಡಾ ಕಡೆಗೆ ಆ ಪವಾಡವನ್ನು ಒಪ್ಪಿಕೊಂಡಳು. ತನ್ನ ಶೀಟುಗಳನ್ನು ಹಿಂದಕ್ಕೆ ಕಳುಹಿಸುವಂತೆ ಎಷ್ಟೋ ಕಾಲ ದೇವರನ್ನು ಪ್ರಾರ್ಥಿಸಿಕೊಳ್ಳುತ್ತಿದ್ದಳು. ತುಂಬಾ ಜನ ಈ ಪವಾಡವನ್ನು ಒಪ್ಪಿಕೊಂಡರು. ಅಲ್ಲದೆ ಕ್ಯಾಂಡಲ್‌ಗಳನ್ನೂ ಹಚ್ಚಿದರು. ಅರೆಲಿಯಾನೋಗಳ ಭಯಂಕರ ದುರಂತ ಸಂಭವಿಸದಿದ್ದರೆ, ಬಹಳ ಕಾಲದವರೆಗೆ ಭಯ ಮತ್ತು ಆಶ್ಚರ್ಯದಿಂದ, ರೆಮೆಡಿಯೋಸ್‌ಳ ಕತೆಯೊಂದೆ ಚಲಾವಣೆಯಲ್ಲಿ ಇರುತ್ತಿತ್ತು.

ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಅದನ್ನು ಅಪಶಕುನವೆಂದು ಭಾವಿಸದಿದ್ದರೂ, ಅವನಿಗೆ ತನ್ನ ಮಕ್ಕಳ ದುರಂತವನ್ನು ಒಂದು ರೀತಿಯಲ್ಲಿ ಊಹಿಸಿದ್ದ. ಅರೆಲಿಯಾನೊ ಸೆರಾಡೋರ್ ಮತ್ತು ಅರೆಲಿಯಾನೊ ಆರ್ಕಾಯಾ, ಇಂತಹ ಉತ್ಪಾತದ ಸಮಯದಲ್ಲಿ, ಬಂದವರು ಮಕೊಂಡೊದಲ್ಲಿಯೇ ಉಳಿಯುವ ಆಸೆಯನ್ನು ವ್ಯಕ್ತಪಡಿಸಿದರು. ಆದರೆ ಅವನು ಬೇಡವೆಂದು ಅವರಿಗೆ ಹೇಳಿದರೂ ಒಪ್ಪದಿದ್ದಾಗ, ಮಕೊಂಡೊದಂಥ ಅಪಾಯಕಾರಿ ಊರಿನಲ್ಲಿ, ಅದೂ ರಾತ್ರೋರಾತ್ರಿ ಸಂಭವಿಸಿದ ಘಟನೆಗಳಿಂದ, ಇವರು ಇಲ್ಲಿದ್ದು ಏನು ಮಾಡುತ್ತಾರೆಂದು ಯೋಚಿಸಿದ. ಆದರೆ ಅರೆಲಿಯಾನೊ ಸೆಗುಂಡೊ ಮತ್ತು ಅರೆಲಿಯಾನೊ ಟ್ರಿಸ್ಟೆ ಅವರಿಬ್ಬರಿಗೂ ತಮ್ಮ ವ್ಯಾಪಾರದಲ್ಲಿ ಕೆಲಸ ಕೊಟ್ಟರು. ಕರ್ನಲ್ ಅರೆಲಿಯಾನೊಗೆ ಅವರ ನಿರ್ಧಾರದ ವಿರುದ್ಧವಾಗಿರಲು ಇನ್ನೂ ಗೊಂದಲವಾಗಿ

ಕಾಣಿಸುತ್ತಿದ್ದ ಕೆಲವು ಕಾರಣಗಳು ಇದ್ದವು. ಮಿಸ್ಟರ್ ಬ್ರೌನ್ ಮೊದಲ ವಾಹನದಲ್ಲಿ ಬಂದಾಗ, ಹಾರ್ನ್ ಶಬ್ದದಿಂದ ನಾಯಿಗಳು ಹೆದರಿ ಬೊಗಳುವುದನ್ನು ನಿಲ್ಲಿಸಿದಾಗ, ಮತ್ತು ಜನರ ಹುಚ್ಚೆದ್ದ ಉತ್ಸಾಹ ನೋಡಿದಾಗ ಯೋಧನಿಗೆ ಸಿಟ್ಟು ಬಂತು. ಹಿಂದೆ ಗಂಡಸರು ಹೆಗಲಿಗೆ ಬಂದೂಕು ಏರಿಸಿಕೊಂಡು ಹೆಂಡತಿ ಮಕ್ಕಳನ್ನು ಬಿಟ್ಟು ಯುದ್ಧಕ್ಕೆ ಹೋಗುತ್ತಿದ್ದರು. ಆದರೆ ಈಗ ಗಂಡಸರ ರೀತಿಯಲ್ಲಿಯೇ ಬದಲಾವಣೆಯಾಗಿದೆ. ನೀರ್ಲಾಂಡಾದ ಕದನವಿರಾಮದ ಒಪ್ಪಂದದ ನಂತರ ಸ್ಥಳೀಯ ಅಧಿಕಾರಿಗಳಾಗಿದ್ದವರೆಂದರೆ ಪ್ರಮಾಣವಚನ ಸ್ವೀಕಾರವಿಲ್ಲದ ಮೇಯರುಗಳು. ಮಕೊಂಡೊದ ಶಾಂತ, ಸೌಮ್ಯ ದಣಿದ ಕನ್ಸರ್ವೇಟೀವ್‌ಗಳಲ್ಲಿ ಆಯ್ದ ಅಲಂಕಾರಕ್ಕಷ್ಟೆ ಇರುವ ನ್ಯಾಯಾಧೀಶರುಗಳು. "ಇದು ದುಷ್ಟರ ಸರಕಾರ" ಎಂದು, ಮರದ ದೊಣ್ಣೆ ಕೈಲಿ ಹಿಡಿದು ಬರಿಗಾಲಲ್ಲಿ ಹೋಗುತ್ತಿದ್ದ ಪೊಲೀಸನ್ನು ನೋಡಿದಾಗ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಟೀಕಿಸಿದ. "ನಾವು ಅಷ್ಟೆಲ್ಲ ಯುದ್ಧಗಳನ್ನು ಮಾಡಿದ್ದು, ಮನೆಗಳಿಗೆ ನೀಲಿ ಬಣ್ಣ ಹಾಕುವಂತಾಗದಿರಲಿ ಎಂದೇ!" ಎಂದು ಗೊಣಗಿಕೊಂಡ. ಬನಾನಾ ಕಂಪನಿ ಅಸ್ತಿತ್ವಕ್ಕೆ ಬಂದಾಗ ಸ್ಥಳೀಯ ಅಧಿಕಾರಿಗಳನ್ನು ಮನೆಗೆ ಕಳಿಸಿ, ತನ್ನ ಜೊತೆಗೆ ಕರೆತಂದಿದ್ದ ಅಧಿಕಾರಶಾಹಿ ಧೋರಣೆಯುಳ್ಳ ವಿದೇಶಿಯರನ್ನು ನೇಮಿಸಿದ, ಅವರಿಗೆ ಬೇಕಾದ ಎಲ್ಲ ಅನುಕೂಲಗಳನ್ನು ಭದ್ರತೆಯನ್ನು ಒದಗಿಸಿಕೊಟ್ಟ. ವಿದ್ಯುತ್ ಬೇಲಿಯ ಭದ್ರಕೋಟೆಯೊಳಗೆ ಬಿಸಿಲು, ಸೊಳ್ಳೆಗಳ ಕಾಟವಿಲ್ಲದೆ ಮತ್ತು ಊರಿನಲ್ಲಿನ ಅಸಂಖ್ಯಾತ ಅನಾನುಕೂಲಗಳಿಗೆ ಒಳಗಾಗದೆ, ಎಲ್ಲ ಸುಖ ಸೌಲಭ್ಯಗಳೊಂದಿಗೆ ತಮ್ಮ ಪ್ರೈವೆಸಿಯನ್ನೂ ಉಳಿಸಿಕೊಳ್ಳಬಹುದಾದ ರೀತಿಯಲ್ಲಿ ಅವರೆಲ್ಲರಿಗೆ ವಾಸದ ಏರ್ಪಾಟುಗಳನ್ನು ಮಾಡಿದ್ದ. ಹಳೆಯ ಪೊಲೀಸರ ಜಾಗದಲ್ಲಿ ಮಾರಕಾಸ್ತ್ರಗಳನ್ನು ಹಿಡಿದಿರುವ ಬಾಡಿಗೆ ಕೊಲೆಗಡುಕರನ್ನು ನೇಮಿಸಿದ. ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಪ್ರಶಾಂತ ಏಕಾಂತತೆಯಲ್ಲಿ ಜೀವಿಸುತ್ತಿದ್ದವನಿಗೆ, ಆಗುತ್ತಿರುವ ಬದಲಾವಣೆಗಳನ್ನು ಗಮನಿಸಿದಾಗ, ಉಂಟಾದ ನೋವಿನಿಂದ, ಯುದ್ಧವನ್ನು ಅದರ ಅಂತಿಮ ಪರಿಣಾಮದವರೆಗೆ ಮುಂದುವರೆಸದೆ ಬಹಳ ದೊಡ್ಡ ತಪ್ಪು ಮಾಡಿದೆನೆಂಬ ಖಚಿತ ಅಭಿಪ್ರಾಯವನ್ನು ತಲುಪಿದ. ಆ ಸಮಯದಲ್ಲಿ ಕರ್ನಲ್ ಮ್ಯಾಗ್ನಿಫಿಕೊ ವಿಸ್ಕಾಟ್‌ನ ಸೋದರ ತನ್ನ ಏಳು ವರ್ಷದ ಮೊಮ್ಮಗನನ್ನು ತಳ್ಳುಗಾಡಿಯೊಂದರಲ್ಲಿ ಮಾರುತ್ತಿದ್ದ ಜ್ಯೂಸನ್ನು ಕೊಡಿಸಲು ಕರೆತಂದ. ಆ ಸಮಯದಲ್ಲಿ ಎದುರಾಗಿ ಬಂದ ಪೊಲೀಸಿಗೆ ಡಿಕ್ಕಿ ಹೊಡೆದುದರ ಪರಿಣಾಮವಾಗಿ ಪೊಲೀಸನ ಬಟ್ಟೆಯ ಮೇಲೆ ಒಂದಿಷ್ಟು ಜ್ಯೂಸ್ ಬಿದ್ದದ್ದೇ ತನ್ನ ಕೈಲಿದ್ದ ಮಾರಕಾಸ್ತ್ರದಿಂದ ಒಂದೆ ಏಟಿಗೆ ಎರಡು ತುಂಡು ಮಾಡಿದ. ಅವನನ್ನು ತಡೆಯಲು ಹೋದ ತಾತನ ತಲೆಯನ್ನೂ ಒಂದೇ ಏಟಿಗೆ ಕತ್ತರಿಸಿ ಎಸೆದ. ರುಂಡದಿಂದ ಬೇರೆಯಾದ ದೇಹವನ್ನು ಒಂದು ಗುಂಪು ಜನರು ಅವನ ಮನೆಗೆ ಎತ್ತಿಕೊಂಡು ಹೋದರೆ, ತಲೆಯನ್ನು ಹೆಂಗಸೊಬ್ಬಳ ಕೂದಲನ್ನು ಹಿಡಿದು ಎಳೆದುಕೊಂಡು ಹೋಗುತ್ತಿದ್ದಳು. ಮಗುವಿನ ತುಂಡುಗಳನ್ನು ಗೋಣಿಚೀಲದಲ್ಲಿರಿಸಿ ಕೊಂಡೊಯ್ದರು.

ಕರ್ನಲ್ ಅರೆಲಿಯಾನೊ ಬ್ಯುಂಡಿಯಾಗೆ ಇದು ಅತಿರೇಕದ ಪರಮಾವಧಿ ಎನಿಸಿ, ತಾನು ವಯಸ್ಸಿನಲ್ಲಿದ್ದಾಗ, ಹುಚ್ಚುನಾಯಿ ಕಡಿದದ್ದಕ್ಕಾಗಿ ಅವಳನ್ನು ಅಲ್ಲಿಯೇ ಚಚ್ಚಿ ಚಚ್ಚಿ

ಸಾಯಿಸಿದ್ದನ್ನು ನೋಡಿದಾಗ ಎಂಥ ರೋಷ ಬಂದಿತ್ತೋ ಅಂಥದೇ ರೋಷಕ್ಕೆ ಗುರಿಯಾದ. ಮನೆಮುಂದೆ ನಿಂತಿದ್ದ ಜನರ ಗುಂಪನ್ನು ನೋಡಿ, ತನಗುಂಟಾದ ಸಿಟ್ಟು ಹೇಸಿಗೆಗಳಿಂದ, ಹಿಂಪಡೆದುಕೊಂಡ ಗಟ್ಟಿ ಧ್ವನಿಯಲ್ಲಿ ತನಗಿನ್ನು ಸಹಿಸಲಸಾಧ್ಯವಾದ ರೋಷ ಆಕ್ರೋಶಗಳನ್ನು ಕಾರಿಕೊಂಡ.

"ಒಂದಲ್ಲ ಒಂದು ದಿನ ನಾನು ನನ್ನ ಮಕ್ಕಳಿಗೆ, ಈ ಗ್ರಿಂಗೋಗಳಿಗೆ ಪಾಠ ಕಲಿಸುವಂತೆ ಮಾಡುತ್ತೇನೆ" – ಎಂದು ಅಬ್ಬರಿಸಿದ.

ಅದೇ ವಾರದೊಳಗೆ ಬೇರೆ ಬೇರೆ ಜಾಗಗಳಲ್ಲಿ ಕರ್ನಲ್ ಅರೆಲಿಯಾನೊ ಬ್ಯುಂಡಿಯಾನ ಹದಿನೇಳು ಹುಡುಗರನ್ನು ಅವರ ಹಣೆಮೇಲಿನ ಶಿಲುಬೆಗೆ ಗುರಿಯಿಟ್ಟು ಅನಾಮಧೇಯರ ಕೈಯಿಂದ ಕೊಲೆಮಾಡಿಸಲಾಯಿತು. ಅರೆಲಿಯಾನೊ ಟ್ರಿಸ್ಟೆ ಸಂಜೆ ಏಳುಗಂಟೆ ಸಮಯದಲ್ಲಿ ತಾಯಿಯನ್ನು ಕರೆದುಕೊಂಡು ಮನೆಯಿಂದ ಹೊರಡುತ್ತಿದ್ದಾಗಲೇ, ಕತ್ತಲೆಯೊಳಗಿಂದ ಒಂದು ಗುಂಡು ಹೊರಟು ನೇರವಾಗಿ ಅವನ ಹಣೆಗೆ ಬಡಿದು ತೂತುಮಾಡಿತು. ಅರೆಲಿಯಾನೊ ಸೆರ್‍ಡೋರ್ ತನ್ನ ಗರ್ಲ್ ಫ್ರೆಂಡ್ ಜೊತೆ, ಸಿನಿಮಾ ನೋಡಿಕೊಂಡು ಅವಳನ್ನು ಅವಳ ತಾಯಿ ಮನೆಗೆ ಬಿಟ್ಟು ಹಿಂತಿರುಗುತ್ತಿದ್ದಾಗ, ಅದೂ ಚೆನ್ನಾಗಿಯೇ ಬೆಳಕಿದ್ದ ಟರ್ಕ್ ಸ್ಟ್ರೀಟ್‌ನಲ್ಲಿ, ಒಂದು ಗುಂಪಿನ ನಡುವಿನಿಂದ ಗುರುತಿಸಲಾಗದ ವ್ಯಕ್ತಿಯೊಬ್ಬ ರಿವಾಲ್ವರ್‌ನಿಂದ ಗುಂಡುಹಾರಿಸಿದಾಗ ಕುದಿಯುತ್ತಿದ್ದ ಹಂದಿಮಾಂಸದ ಸಾರಿನಲ್ಲಿ ಬಿದ್ದ. ಕೆಲ ನಿಮಿಷಗಳ ನಂತರ ಯಾರೋ ಒಬ್ಬರು, ಹುಡುಗಿಯೊಂದಿಗೆ ಇದ್ದ ಅರೆಲಿಯಾನೊ ಆರ್ಕಾಯಾನ ಕೋಣೆಯ ಬಾಗಿಲನ್ನು ಜೋರಾಗಿ ಬಡಿದು "ಬೇಗ ಹೊರಡು, ಅವರು ನಿನ್ನ ಸೋದರರನ್ನು ಕೊಲ್ಲುತ್ತಿದ್ದಾರೆ" ಎಂದು ಜೋರಾಗಿ ಕೂಗಿ ಹೇಳಿದರು. ಅವನ ಜೊತೆಗಿದ್ದ ಹೆಂಗಸು ನಂತರ ಹೇಳಿದ್ದೇನೆಂದರೆ, ಅರೆಲಿಯಾನೊ ಆರ್ಕಾಯಾ ಹಾಸಿಗೆಯಿಂದ ಜಿಗಿದೆದ್ದು ಬಾಗಿಲು ತೆಗೆಯುತ್ತಿದ್ದಂತೆಯೇ ಬಂದೂಕಿನಿಂದ ಬಂದ ಗುಂಡು ಅವನನ್ನು ಸ್ವಾಗತಿಸಿ ಎರಡು ಹೋಳಾಗಿಸಿತು ಎಂದು. ಸಾವಿನ ಆ ರಾತ್ರಿ ನಾಲ್ಕು ಜನರ ಸಾವಿಗಾಗಿ ಜಾಗರಣೆಯ ಸಿದ್ಧತೆ ಮಾಡಿಕೊಳ್ಳುತ್ತಿದ್ದಾಗ ಫರ್ನಾಂಡಾ ಹುಚ್ಚಿಯಂತೆ ಹೊರಗೋಡಿ ಅರೆಲಿಯಾನೊ ಸೆಗುಂಡೊಗಾಗಿ ಹುಡುಕಾಡಿದಳು. ಪೆಟ್ರಾಕೋಟ್ಸ್ ಅವನನ್ನು ಅರೆಲಿಯಾನೊ ಹೆಸರಿನವರನ್ನೆಲ್ಲ ಕೊಲ್ಲುತ್ತಾರೆಂದು ತಿಳಿದು ಕೋಣೆಯೊಂದರಲ್ಲಿ ಅಡಗಿಸಿಟ್ಟಿದ್ದಳು. ನಾಲ್ಕು ದಿನ ಅವನನ್ನು ಹೊರಗೆ ಬಿಡಲಿಲ್ಲ. ನಾಲ್ಕನೆ ದಿನ ಬೇರೆ ಬೇರೆ ಕಡೆಗಳಿಂದ ಬಂದ ಟೆಲಿಗ್ರಾಫಿನಿಂದ ಅವಳಿಗೆ ಗೊತ್ತಾದದ್ದು, ಅದೃಶ್ಯ ಶತೃಗಳು, ಹಣೆ ಮೇಲೆ ಬೂದಿ ಗುರುತಿರಿಸಿಕೊಂಡಿರುವ ಸೋದರರನ್ನು ಮಾತ್ರವೇ ಕೊಲ್ಲುವ ಉದ್ದೇಶ ಹೊಂದಿದ್ದಾರೆ ಎಂಬುದು. ಅಮರಾಂತಾ ಲೆಡ್ಜರ್ ತಂದು ಅದರಲ್ಲಿ ಬರೆದಿದ್ದ ವಿವರಗಳನ್ನು ಪರಿಶೀಲಿಸಿದಳು. ಪ್ರತಿಯೊಂದು ಹೆಸರಿನ ಕೆಳಗೆ ಗೆರೆ ಎಳೆಯುತ್ತಾ ಹೋದಾಗ ಅರೆಲಿಯಾನೊ ಅಮಾಡೋರ್ ಉಳಿದ. ಅವನು ತನ್ನ ಕಪ್ಪು ಬಣ್ಣ ಹಸಿರು ಕಣ್ಣುಗಳಿಂದ ಬೇರೆಯಾಗಿ ಕಾಣುತ್ತಿದ್ದ, ಮರಗೆಲಸ ಮಾಡುತ್ತಾ, ಎಲ್ಲೋ ಒಂದು ಸಣ್ಣ ಹಳ್ಳಿಯಲ್ಲಿ ವಾಸವಾಗಿದ್ದ ಅವನ ಸಾವಿನ ಸುದ್ದಿಗಾಗಿ ಎರಡುವಾರ ಎದುರು ನೋಡಿದ ಮೇಲೆ

ಅರೆಲಿಯಾನೊ ಸೆಗುಂಡೊ ಒಬ್ಬ ಸಂದೇಶವಾಹಕನ ಮೂಲಕ, ಅವನಿಗೆ ಸಾವಿನ ಬೆದರಿಕೆ ಇರುವ ವಿಷಯವನ್ನು ತಿಳಿಸಲಾಯಿತು. ಸಂದೇಶವಾಹಕ ಹಿಂತಿರುಗಿ ಅರೆಲಿಯಾನೊ ಅಮಾಡೋರ್ ಸುರಕ್ಷಿತವಾಗಿರುವುದನ್ನು ತಿಳಿಸಿದ. ಸಾಯಿಸಲು ನಿರ್ಧರಿಸಿ ರಾತ್ರಿ ಇಬ್ಬರು ವ್ಯಕ್ತಿಗಳು ಅವನ ಮನೆಗೆ ಹೋಗಿ ಅವನಿಗೆ ಗುಂಡಿನ ಗುರಿಯಿಟ್ಟರು. ಆದರೆ ಬೂದಿ ಶಿಲುಬೆ ಗುರುತು ಗುರಿ ತಪ್ಪಿತು. ಅರೆಲಿಯಾನೊ ಅಮಾಡೋರ್ ಹೇಗೋ ಅಂಗಳದ ಗೋಡೆಯನ್ನು ದಾಟಿ ಪರ್ವತ ಶ್ರೇಣಿಗಳಲ್ಲಿ ಎಲ್ಲೋ ಮರೆಯಾಗಿಬಿಟ್ಟ. ಅವನಿಗೆ ಅದೆಲ್ಲ ಬಹಳ ಚೆನ್ನಾಗಿ ಗೊತ್ತಿತ್ತು. ಯಾಕೆಂದರೆ ಅವನು ಅಲ್ಲಿ ಇಂಡಿಯನ್ನರ ಜೊತೆ ಸ್ನೇಹಮಾಡಿದ್ದ. ದೇವರೇ ಕಾಪಾಡಿದ. ನಂತರ ಅವನ ಬಗ್ಗೆ ಏನೂ ತಿಳಿದುಬರಲಿಲ್ಲ.

ಕರ್ನಲ್ ಅರೆಲಿಯಾನೊ ಬ್ಯುಂಡಿಯಾಗೆ ಅವೆಲ್ಲ ಕರಾಳ ದಿನಗಳಾಗಿದ್ದವು. ರಿಪಬ್ಲಿಕ್‌ನ ಅಧ್ಯಕ್ಷ ಸಂತಾಪಸೂಚಕ ಪತ್ರವನ್ನು ಕಳಿಸಿದ. ಅವನ ಮಕ್ಕಳ ಸಾವಿಗೆ ಕಾರಣರಾದವರ ಬಗ್ಗೆ ಗಂಭೀರ ತನಿಖೆ ನಡೆಸುವುದಾಗಿ ಭರವಸೆ ನೀಡಿದ. ಅವನ ಆದೇಶದ ಮೇರೆಗೆ ಸ್ಥಳೀಯ ಮೇಯರ್, ಸತ್ತವರ ಶವಗಳ ಮೇಲೆ ಇರಿಸಲು ವರ್ತುಲ ಹೂಗುಚ್ಛಗಳನ್ನು ತಂದು ಶವಗಳ ಮೇಲೆ ಇರಿಸಲು ಪ್ರಯತ್ನಿಸಿದಾಗ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಅವನನ್ನು ಹೊರಗೆ ಹೋಗಲು ದಾರಿ ತೋರಿಸಿದ. ಸಮಾಧಿ ಮಾಡುವ ಕಾರ್ಯ ಮುಗಿದ ಮೇಲೆ ರಿಪಬ್ಲಿಕ್‌ನ ಅಧ್ಯಕ್ಷರಿಗೆ ತಾನೇ ವೈಯಕ್ತಿಕವಾಗಿ ಘಾಟಾದ ಉತ್ತರವನ್ನು ಸಿದ್ಧಪಡಿಸಿದ. ಆದರೆ ಟೆಲಿಗ್ರಾಫರ್ ಅದನ್ನು ಟೆಲಿಗ್ರಾಂ ಕಳಿಸಲು ನಿರಾಕರಿಸಿದ. ಆಗ ಅದನ್ನು ಏಕವಚನದಲ್ಲಿ ಸಂಬೋಧಿಸಿ ಮತ್ತಷ್ಟು ಖಾರವಾಗಿ ಬರೆದು ಅಂಚೆಯ ಮೂಲಕ ಕಳಿಸಿದ. ಹೆಂಡತಿ ಸತ್ತಾಗ, ಯುದ್ಧದ ಸಮಯದಲ್ಲಿ ಅವನ ಅನೇಕ ಆಪ್ತ ಮಿತ್ರರು ಸತ್ತಾಗ ಆದಂತೆ, ಈಗಲೂ ಅವನಿಗೆ ದುಃಖವೇನೂ ಆಗಲಿಲ್ಲ. ಆದರೆ ದಿಕ್ಕುತೋಚದ ಸಿಟ್ಟು, ನಿರ್ವೀರ್ಯತೆಗಳು ಮಾತ್ರ ಕಾಡಿದವು. ಅವರು ಸಾಯಲು ಕಾರಣವಾದ ಬೂದಿ ಶಿಲುಬೆ ಗುರುತುಗಳನ್ನು ಮಾಡಿದ ಸಂತ ಆ್ಯಂಟೋನಿಯೊ ಇಸಾಬೆಲ್ ಮೇಲೆ ಇನ್ನಿಲ್ಲದ ಆಕ್ರೋಶವುಂಟಾಯಿತು. ಆ ಗುರುತುಗಳು ಇಲ್ಲದಿದ್ದರೆ, ಶತ್ರುಗಳಿಗೆ ಅವರನ್ನು ಕಂಡುಹಿಡಿಯಲು ಸಾಧ್ಯವಾಗುತ್ತಿರಲಿಲ್ಲ. ಜರ್ಝರಿತನಾಗಿದ್ದ ಪಾದ್ರಿ ತನ್ನ ವಿಚಾರಗಳನ್ನು ಕ್ರಮಬದ್ಧವಾಗಿ, ವೇದಿಕೆ ಮೇಲೆ ನಿಂತು, ಆಡಳಿತವರ್ಗದವರಿಗೆ ಸರಿಯಾಗಿ ವ್ಯಾಖ್ಯಾನಿಸಿ ಹೇಳಲು ಆಗದೆ ಅವರನ್ನೆಲ್ಲ ದಿಗ್ಭ್ರಮೆಗೊಳಿಸುತ್ತಿದ್ದವನು ಒಂದು ದಿನ ಮಧ್ಯಾಹ್ನ, ಮನೆಗೆ ಬಂದು ತಾನು ತಂದಿದ್ದ ಬೂದಿಯ ಭರಣಿಯನ್ನು ತೋರಿಸಿ, ಮನೆಮಂದಿಗೆಲ್ಲ ಹಚ್ಚಿ, ನೀರಿನಿಂದ ಅದನ್ನು ತೊಳೆಯಬಹುದಾದ್ದನ್ನು ಸಾಬೀತು ಮಾಡಲು ಪ್ರಯತ್ನಿಸಿದ. ಆದರೆ ದುರಾದೃಷ್ಟದ ಭಯಾನಕತೆಗೆ ಹೆದರಿದ್ದ ಕುಟುಂಬದವರು ಯಾರೂ, ಫರ್ನಾಂಡಾ ಕೂಡಾ ಸೇರಿದಂತೆ, ಬೂದಿ ಹಚ್ಚಿಸಿಕೊಳ್ಳುವುದಕ್ಕೆ ಸಾಹಸ ಮಾಡಲಿಲ್ಲ. ಅಲ್ಲಿಂದ ಮುಂದೆ ಯಾವೊಬ್ಬ ಬ್ಯುಂಡಿಯಾನೂ ಬೂದಿ ಬುಧವಾರ ಪೀಠದ ಮುಂದೆ ಮೊಣಕಾಲೂರಿದ್ದನ್ನು ಕಾಣಲಿಲ್ಲ.

ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಬಹಳ ಸಮಯದವರೆಗೆ ತನ್ನ ಶಾಂತ ಸ್ಥಿತಿಯನ್ನು ಮರಳಿ ಪಡೆಯಲಿಲ್ಲ. ಪುಟ್ಟ ಮೀನುಗಳ ತಯಾರಿಕೆಯನ್ನು ಬಿಟ್ಟ, ಕಷ್ಟಪಟ್ಟು

ಒಂದಿಷ್ಟು ತಿನ್ನುತ್ತಿದ್ದ. ನಿದ್ದೆಯಲ್ಲಿ ನಡೆಯುವವನಂತೆ ಮನೆಯಲ್ಲೆಲ್ಲ ಸುಮ್ಮನೆ ಓಡಾಡುತ್ತಿದ್ದ. ಬ್ಲಾಂಕೆಟ್ಟನ್ನು ಎಳೆದುಕೊಳ್ಳುತ್ತಾ ತನ್ನ ಸಿಟ್ಟನ್ನು ತಾನೇ ನುಂಗಿಕೊಳ್ಳುತ್ತಿದ್ದ. ಮೂರು ತಿಂಗಳ ನಂತರ ಕೂದಲು ಬೂದಿ ಬಣ್ಣಕ್ಕೆ ತಿರುಗಿತು. ಮೇಣ ಬಳಿದಿದ್ದ ಮೀಸೆ ಬಣ್ಣಗೆಟ್ಟ ತುಂಟಿಗಳ ಬದಿಗಳಲ್ಲಿ ಇಳಿದಿತ್ತು. ಆದರೆ ಅವನ ಕಣ್ಣುಗಳು ಮಾತ್ರ ಬೆಂಕಿ ಕೆಂಡಗಳಂತೆ, ನೋಡಿದವರನ್ನು ಮೊದಲು ಹಿಂದಿನ ದಿನಗಳಲ್ಲಿ ಅದೂ ಅವನ ಹುಟ್ಟಿದಾಗ ಹೇಗೆ ಬೆಚ್ಚುವಂತೆ ಮಾಡುತ್ತಿದ್ದವೊ ಹಾಗಿದ್ದವು. ಮತ್ತು ನೋಡಿದ ಕೂಡಲೇ ಅವನ ನೋಟಕ್ಕೆ ಕುರ್ಚಿಗಳು ಕದಲುತ್ತಿದ್ದವು. ಯಾತನೆಯ ರೋಷದಲ್ಲಿ, ತಾನು ಯುವಕನಾಗಿದ್ದಾಗ ನಿರ್ಜನವಾದ ಪಾಳು ಪ್ರದೇಶದಲ್ಲಿ, ಮಾರ್ಗದರ್ಶನ ನೀಡಿ ಗೆಲುವಿನ ಕಡೆಗೆ ಕೊಂಡೊಯ್ದ. ಶಕುನಗಳನ್ನು ಉದ್ದೀಪಿಸುವ ವ್ಯರ್ಥ ಪ್ರಯತ್ನ ಮಾಡಿದ. ಅವನು ಪೂರ್ತಿಯಾಗಿ ಕಳೆದುಹೋದ. ಆ ಮನೆಯಲ್ಲಿ ಯಾರೊಬ್ಬರೂ ಅವನಲ್ಲಿ ಅತ್ಯಲ್ಪ ಪ್ರೀತಿಯನ್ನೂ ತೋರಲಿಲ್ಲ. ಒಂದು ದಿನ ಮೆಲ್‌ಕಿಯಾಡ್ಸ್‌ನ ಕೋಣೆಯಲ್ಲಿ ಏನಾದರೂ ಸಿಗಬಹುದೆಂದು ಹೋಗಿ ನೋಡಿದ. ಯುದ್ಧದ ಮುಂಚಿನ ದಿನಗಳಿಂದ ಇಲ್ಲಿವರೆಗೆ ಗತಕ್ಕೆ ಸಂಬಂಧಿಸಿದ್ದನ್ನು ಹುಡುಕುತ್ತಿದ್ದನಾದರೂ ಅವನಿಗೆ ಕಂಡದ್ದು ಬರಿ ಕಸ, ಕೊಳೆ, ರಾಶಿ ರಾಶಿ ಚರ್ಮದ ಕಾಗದಗಳು ಅದೂ ತೇವದಿಂದ ಹಾಳಾಗಿ ಹೋಗಿದ್ದವು. ವರ್ಷಾನುಗಟ್ಟಲೆ ಎಲ್ಲವನ್ನೂ ಬಿಸಾಡಿದ್ದರು. ಪುಸ್ತಕಗಳ ಕವಚಗಳ ಮಧ್ಯೆ ಇದ್ದ ಯಾರಿಗೂ ಓದಲಾಗದ ಚರ್ಮಕಾಗದಗಳ ಮಧ್ಯೆ ನೀಲಿ ಹೂವೊಂದು ಅರಳಿತ್ತು. ಆ ಮನೆಯಲ್ಲಿನ ಶುದ್ಧ ತಾಜಾ ಗಾಳಿಯಲ್ಲಿ, ಬೆಳಕಿನಲ್ಲಿ ಅಸಹನೀಯವಾದ ಕೊಳೆತ ನೆನಪುಗಳ ವಾಸನೆ ತೇಲುತ್ತಿತ್ತು. ಒಂದು ದಿನ ಬೆಳಿಗ್ಗೆ ಉರ್ಸುಲಾ ಅದೇ ಚೆಸ್ಟ್‌ನಟ್ ಮರದ ಕೆಳಗೆ ಸತ್ತ ಗಂಡನ ಮೊಣಕಾಲ ಬಳಿ ಕುಳಿತು ಅಳುತ್ತಿದ್ದಳು. ಅರ್ಧಶತಮಾನದ ಕೆಳಗೆ, ಬಲಿಷ್ಠನಾದ ಮುದುಕನೊಬ್ಬ ಹೊಡೆತ ಬಡಿತಕ್ಕೆ ಒಳಗಾಗಿದ್ದನ್ನು ನೋಡದೆ ಇರುವವನು ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಒಬ್ಬನೆ. "ನಿನ್ನ ತಂದೆಗೆ ಹಲೊ ಹೇಳು" ಎಂದು ಅವನಿಗೆ ಹೇಳಿದಳು. ಆ ಮರದ ಮುಂದೆ ನಿಂತನಾದರೂ ಯಾರೂ ಇರಲಿಲ್ಲವಾಗಿ ಅವನಲ್ಲಿ ಪ್ರೀತಿ ಮೂಡಲು ಸಾಧ್ಯವಾಗಲಿಲ್ಲ.

"ಅವನು ಏನು ಹೇಳುತ್ತಿದ್ದಾನೆ" ಅವನು ಕೇಳಿದ.

"ಅವನು ದುಃಖಿಸುತ್ತಿದ್ದಾನೆ... ಯಾಕೆಂದರೆ ನೀನು ಸಾಯುತ್ತೀ ಎಂದು ತಿಳಿದಿದ್ದಾನೆ" ಎಂದಳು.

"ಅವನಿಗೆ ಹೇಳು, ಮನುಷ್ಯ ಸಾಯಬೇಕಾದಾಗ ಸಾಯುವುದಿಲ್ಲ, ಆದರೆ ಅವನು ಸಾಯಬೇಕೆಂದುಕೊಂಡಾಗ ಸಾಯುತ್ತಾನೆ" ಎಂದು ಕರ್ನಲ್ ನಗುತ್ತಾ ಹೇಳಿದ. ಸತ್ತ ಅಪ್ಪ ಹೇಳಿದ ಭವಿಷ್ಯ ಅವನಲ್ಲಿ ಅಲ್ಪಸ್ವಲ್ಪ ಉಳಿದಿದ್ದ ಅಭಿಮಾನವನ್ನು ಕೆರಳಿಸಿತು. ಅದನ್ನವನು ಆಕಸ್ಮಿಕವಾಗಿ ಸಂಚಯವಾಗುತ್ತಿರುವ ಶಕ್ತಿಯೆಂದು ಭಾವಿಸಿದ. ಅದಕ್ಕಾಗಿಯೇ ಅವನು ಉರ್ಸುಲಾಳನ್ನು, ಸಂತ ಜೋಸಫನ ಮೂರ್ತಿಯಲ್ಲಿ ಸಿಕ್ಕ ಚಿನ್ನದ ನಾಣ್ಯಗಳನ್ನು ಅಂಗಳದಲ್ಲಿ ಎಲ್ಲಿ ಹೂತಿಟ್ಟಿದ್ದಾಳೆಂದು ಪೀಡಿಸಿದ. ಹಿಂದಿನ ಕಲಿತ ಪಾಠದಿಂದ ಅವಳು "ನಿನಗೆಲ್ಲಿದೆಯೆಂದು ಎಂದೂ ಗೊತ್ತಾಗುವುದಿಲ್ಲ" ಎಂದು ದೃಢವಾಗಿ ಹೇಳಿದಳು.

"ಒಂದಲ್ಲ ಒಂದು ದಿನ ಯಾರು ಅದರ ಹಕ್ಕುದಾರನೊ ಅವನು ಬಂದು ತೆಗೆದುಕೊಳ್ಳುತ್ತಾನೆ. ಅವನು ಅದನ್ನು ಎಲ್ಲಿದೆಯೆಂದು ಅಗೆದು ನೋಡುತ್ತಾನೆ" ಎಂದಷ್ಟೇ ಹೇಳಿದಳು. ಎಷ್ಟೊಂದು ಉದಾರಿಯಾಗಿದ್ದ ಮನುಷ್ಯನಿಗೆ ಈಗೇಕೆ ಹಣದ ಬಗ್ಗೆ ಅಷ್ಟೊಂದು ಮೋಹ. ಅದೂ ಅಷ್ಟು ದೊಡ್ಡ ಮೊತ್ತ ಯಾತಕ್ಕಾಗಿ ಎಂಬುದು ಯಾರಿಗೂ ಗೊತ್ತಾಗಲಿಲ್ಲ. ಅರೆಲಿಯಾನೊ ಸೆಗೊಂಡೊ ಆ ಮೊತ್ತವನ್ನು ಕೇಳಿದಾಗ ದಿಗ್ಭ್ರಾಂತನಾದ. ಅವನ ಹಳೆಯ ಪಾರ್ಟಿ ಸ್ನೇಹಿತರು, ಸಹಾಯ ಕೇಳಿ ಬಂದವನಿಂದ ತಲೆಮರಿಸಿಕೊಂಡು ಅವನನ್ನು ಬರಮಾಡಿಕೊಳ್ಳಲೇ ಇಲ್ಲ. ಅದೇ ಸಮಯದಲ್ಲಿ "ಲಿಬರಲ್ಸ್ ಮತ್ತು ಕನ್‌ಸರ್ವೆಟೀವ್‌ಗಳ ನಡುವೆ ಇರುವ ಒಂದೇ ಒಂದು ವ್ಯತ್ಯಾಸವೆಂದರೆ, ಲಿಬರಲ್ಸ್ ಚರ್ಚಿಗೆ ಐದು ಗಂಟೆಗೆ ಹೋದರೆ, ಕನ್‌ಸರ್ವೆಟೀವ್ಸ್ ಎಂಟು ಗಂಟೆಗೆ ಹೋಗುತ್ತಾರೆ" ಎಂದು ಮಾತಾಡಿಕೊಳ್ಳುತ್ತಿದ್ದುದನ್ನು ಕೇಳಿಸಿಕೊಂಡ. ಆದರೂ ಅವನು ಹಠಬಿಡದೆ, ಬೇಡಿಕಾಡಿ ತನ್ನ ಅಭಿಮಾನ, ಘನತೆಯನ್ನೂ ಬಿಟ್ಟು ಅಲ್ಲೊಂದಿಷ್ಟು ಇಲ್ಲೊಂದಿಷ್ಟು ಅಂತ ಎಲ್ಲ ಕಡೆ ಓಡಾಡಿ, ಎಲ್ಲರಿಂದಲೂ ಸುಮಾರು ಎಂಟು ತಿಂಗಳಲ್ಲಿ ಉರ್ಸುಲಾ ಹೂತಿಟ್ಟ ಹಣಕ್ಕಿಂತ ಹೆಚ್ಚಿನ ಹಣವನ್ನು ಸಂಗ್ರಹಿಸಿದ. ನಂತರ ಖಾಯಿಲೆ ಬಿದ್ದಿದ್ದ ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್‌ನನ್ನು ಮತ್ತೆ ಸಂಪೂರ್ಣ ಯುದ್ಧವನ್ನು ಮಾಡಲು ಸಹಾಯ ಕೇಳಲು ಹೋಗಿ ನೋಡಿದ.

ಒಂದು ನಿರ್ದಿಷ್ಟ ಕಾಲದಲ್ಲಿ ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್ ಒಬ್ಬನಿಗೆ ಮಾತ್ರ ತನಗೆ ಪಾರ್ಶ್ವವಾಯುವಿದ್ದಾಗಲೂ, ಕ್ರಾಂತಿಯ ಎಳೆಗಳನ್ನು ಒಗ್ಗೂಡಿಸಲು ಸಾಧ್ಯವಿತ್ತು. ನೀರ್ಲಾಂಡದ ಕದನ ವಿರಾಮ ಒಪ್ಪಂದದ ನಂತರ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಚಿನ್ನದ ಮೀನುಗಳಲ್ಲಿ ತನ್ನನ್ನು ತೊಡಗಿಸಿಕೊಂಡುಬಿಟ್ಟ, ಆದರೆ ಮಾರ್ಕ್ವೆಜ್ ಮಾತ್ರ ಕ್ರಾಂತಿಕಾರಿ ಅಧಿಕಾರಿಗಳ ಜೊತೆ, ಅವರಿರಿಸಿದ ವಿಶ್ವಾಸದಿಂದಾಗಿ ಸೋಲಿನವರೆಗೆ ಸಂಬಂಧವಿರಿಸಿಕೊಂಡಿದ್ದ. ಆದರೆ ಅವರೇ ಅವನನ್ನು ಗೋಳಾಡಿಸುತ್ತಿದ್ದರು. ಎಷ್ಟೇ ಅಹವಾಲುಗಳನ್ನು ತೆಗೆದುಕೊಂಡು ಹೋದರೂ, ನಾಳೆ ಬಾ, ಇವತ್ತಿನಿಂದ ಎಂದಾದರೂ ಬಾ ನಿನ್ನ ಕೇಸನ್ನು ಪರಿಶೀಲಿಸುತ್ತಿದ್ದೇವೆ ಎಂದೆಲ್ಲಾ ಸಬೂಬುಗಳನ್ನು ಹೇಳುತ್ತಾ, ಸುಮ್ಮನೆ ಹುಸಿ ಭರವಸೆಗಳನ್ನು ನೀಡುತ್ತಿದ್ದರು. 'ನಿಮ್ಮ ಅತ್ಯಂತ ವಿಶ್ವಾಸಿ' ಎಂಬೆಲ್ಲಾ ಸಂಬೋಧನೆಗಳೂ ಕೆಲಸ ಮಾಡಲಿಲ್ಲ. ಜೀವನ ಪರ್ಯಂತದ ನಿವೃತ್ತಿವೇತನದ ಆದೇಶಕ್ಕೆ ಯಾರು ಯಾರು ಸಹಿ ಮಾಡಬೇಕಿತ್ತೊ ಅವರು ಯಾರೂ ಸಹಿಮಾಡಲಿಲ್ಲ. ಇಪ್ಪತ್ತು ವರ್ಷಗಳ ಆ ಘೋರ ಯುದ್ಧಕ್ಕಿಂತ ಹೆಚ್ಚಿನ ನಷ್ಟ ಆದದ್ದು, ಶಾಶ್ವತವಾಗಿ ಮುಂದು ಮುಂದಕ್ಕೆ ಹೋದ ಈ ಯುದ್ಧದಿಂದ, ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್ ಯುದ್ಧದಿಂದ ಸಂಭವಿಸಿದ ಆಘಾತಗಳನ್ನು, ಪ್ರಾಣಾಂತಕ ಅಪಾಯಗಳನ್ನು, ದಾಟಿಕೊಂಡು, ಸುರಕ್ಷಿತವಾಗಿ ಹೊರಬಂದವನು ನಿವೃತ್ತಿವೇತನ ಹೋರಾಟದಲ್ಲಿ, ನಿರಂತರ ಮುಂದೂಡಿಕೆಯ ಆಘಾತಗಳಲ್ಲಿ ಸಿಲುಕಿ ನಲುಗಿಹೋದ. ಮುಪ್ಪಿನಲ್ಲಿ ದಯನೀಯ ಸ್ಥಿತಿಯಲ್ಲಿ ಬಾಡಿಗೆ ಮನೆಯಲ್ಲಿ ಬೆಳಕಿನ ತುಣುಕುಗಳಲ್ಲಿ ಅಮರಾಂತಾಳನ್ನು ನೆನಪಿಸಿಕೊಳ್ಳುತ್ತಾ ಕಾಲ ಕಳೆಯುತ್ತಿದ್ದ. ತನ್ನ ಜೊತೆಗೆ ಸಂಪರ್ಕವಿರಿಸಿಕೊಂಡಿದ್ದ ಮಹಾನ್ ಯೋಧರು, ರಿಪಬ್ಲಿಕ್‌ನ ಅನಾಮಧೇಯ ಅಧ್ಯಕ್ಷನೊಬ್ಬನು ಕೊಟ್ಟ ಗೌರವದ ಲಾಂಛನಗಳನ್ನು ತಮ್ಮೆದೆಯ ಮೇಲೆ ಸಿಕ್ಕಿಸಿಕೊಂಡು, ಅವನ ಪಕ್ಕದಲ್ಲಿ ನಾಚಿಕೆಯಿಲ್ಲದೆ

ನಿಂತಿದ್ದ ಭಾವಚಿತ್ರವೊಂದು ಪತ್ರಿಕೆಯಲ್ಲಿ ಬಂದಿತ್ತು. ಅವನು ಅವರಿಗೆ ಮಣ್ಣಾದ ರಕ್ತಸಿಕ್ತವಾದ ಧ್ವಜವನ್ನು, ಸಿಡಿಮದ್ದಿನ ಗುಂಡುಗಳನ್ನು ಹಿಂತಿರುಗಿಸಿದ್ದ. ಬಹುಶಃ ಅವು ಅವರ ಶವಪೆಟ್ಟಿಗೆಯಲ್ಲಿ ಇಟ್ಟುಕೊಳ್ಳಬಹುದೆಂಬ ಉದ್ದೇಶದಿಂದ. ಉಳಿದವರು, ಮತ್ತೂ ಗೌರವಾನ್ವಿತರು, ಬರುವ ಪತ್ರಕ್ಕಾಗಿ, ಸಾರ್ವಜನಿಕ ಸಹಾಯದ ನೆರಳಲ್ಲಿ, ಹಸಿವಿನಿಂದ ಸಾಯುತ್ತಾ, ವಯಸ್ಸಿನಿಂದ ಕುಗ್ಗಿಹೋಗುತ್ತಾ, ಸಿಟ್ಟು ಆ ವೇದನೆಗಳೊಂದಿಗೆ ಕಾಯುತ್ತಲೇ ಇದ್ದರು. ಕರ್ನಲ್ ಅರೆಲಿಯಾನೊ ಅದೇ ಕಾರಣಕ್ಕಾಗಿ, ಭ್ರಷ್ಟ ಆಡಳಿತದ ಗುರುತುಗಳೂ ಇಲ್ಲದಂತೆ ಅಳಿಸಿಹಾಕುವ ಮತ್ತು ವಿದೇಶೀಯರ ಬೆಂಬಲದಿಂದ ಹುಟ್ಟಿಕೊಂಡಿರುವ ಹಗರಣಗಳನ್ನು ಹತ್ತಿಕ್ಕುವುದಕ್ಕಾಗಿ ಯುದ್ಧ ಮಾಡುವುದಕ್ಕಾಗಿ ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್‌ನನ್ನು ಕರೆದ. ಇದರಿಂದ ಮಾರ್ಕ್ವೆಜ್‌ಗೆ ತನ್ನಲ್ಲಿ ಮೂಡಿದ ಮರುಕದ ಕಂಪನವನ್ನು ಹತ್ತಿಕ್ಕಿಕೊಳ್ಳಲು ಸಾಧ್ಯವಾಗಲಿಲ್ಲ.

"ಅರೆ ಅರೆಲಿಯಾನೊ.... ನಿನಗೆ ವಯಸ್ಸಾಗಿದೆ ಅನ್ನುವುದು ಗೊತ್ತಿತ್ತು. ಆದರೆ ಈಗ ನೀನು ಕಾಣಿಸಿಕೊಂಡದ್ದಕ್ಕಿಂತಲೂ ಹೆಚ್ಚಿನ ವಯಸ್ಸಾಗಿದೆ ಎನಿಸುತ್ತಿದೆ" ಎಂದು ನಿಟ್ಟುಸಿರಿನೊಂದಿಗೆ ಹೇಳಿದ.

○

13

ಉರ್ಸುಲಾಗೆ ತನ್ನ ಕಡೆಯ ವರ್ಷಗಳಲ್ಲಿ ದಿಕ್ಕುತೋಚುತ್ತಿರಲಿಲ್ಲವಾಗಿ, ಜೋಸ್ ಆರ್ಕಾಡಿಯೋಗೆ ಪೋಪ್ ಆಗಲು ಬೇಕಾದ ಶಿಕ್ಷಣವನ್ನು ಕೊಡುವುದಕ್ಕೆ ವ್ಯವಧಾನವೇ ಇರುತ್ತಿರಲಿಲ್ಲ. ಹಾಗೂ ಹೀಗೂ ಅವನನ್ನು ಶಾಲೆಗೆ ಕಳುಹಿಸುವ ಸಮಯ ಬಂದೇ ಬಂತು. ಅವನ ಸೋದರಿ ಮೆಮೆ ಫರ್ನಾಂಡಾಳ ಅತಿ ಶಿಸ್ತು ಅಮರಾಂತಾಳ ಸಿಡುಕುಗಳ ನಡುವೆ ಅದೇ ಸಮಯದಲ್ಲಿ ಕ್ರಿಸ್ತ ಸನ್ಯಾಸಿನಿಯರ ಶಾಲೆಗೆ ಕಳುಹಿಸುವ ವಯಸ್ಸನ್ನು ತಲುಪಿದಳು. ಅಲ್ಲಿ ವಾದ್ಯ ನುಡಿಸುವುದರಲ್ಲಿ ತರಬೇತಿ ನೀಡುವುದಾಗಿತ್ತು. ಪೋಪ್‌ನನ್ನಾಗಿ ತಯಾರಿಸಬೇಕೆಂಬ ಪ್ರಯತ್ನದಲ್ಲಿ ತಾನು ಅನುಸರಿಸಿದ ವಿಧಾನಗಳು ಪರಿಣಾಮಕಾರಿಯಾಗಿವೆಯೇ ಎಂಬ ಸಂದೇಹ ಅವಳನ್ನು ಕಾಡುತ್ತಿತ್ತು. ಆದರೆ ಅವಳು (ಉರ್ಸುಲಾ) ಅದಕ್ಕೆ ಕಾರಣ ತನಗೆ ವಯಸ್ಸಾಗಿರುವುದು ಎಂಬುದಾಗಲೀ, ಮನೆಯ ಮೇಲೆ ಎರಗಿದ ದುರಾದೃಷ್ಟದ ಕಾರ್ಮೋಡಗಳಾಗಲಿ ಕಾರಣವೆಂದು ದೂರಲಿಲ್ಲ. ಆದರೆ ನಿಜವಾದ ಕಾರಣ ಏನೆಂಬುದನ್ನು ತನಗೂ ಅರ್ಥಮಾಡಿಕೊಳ್ಳಲು ಸಾಧ್ಯವಿರಲಿಲ್ಲ. ಕಾಲದ ವಿಪರ್ಯಾಸ ಇದಕ್ಕೆ ಕಾರಣವಾಗಿರಬಹುದೇಎಂಬುದನ್ನು ಗೊಂದಲದೊಂದಿಗೆ ಅಭಿಪ್ರಾಯ ಪಟ್ಟಳು. “ಈಗಿನ ವರ್ಷಗಳು ಹಿಂದಿನಂತಿಲ್ಲ” ಎಂದು ಪ್ರತಿದಿನವೂ ಕಾಲ ತನ್ನ ಕೈಯಿಂದ ಜಾರಿ

ಹೋಗುತ್ತಿದೆ ಎನ್ನುವ ಭಾವನೆಯಿಂದ ಹೇಳಿದಳು. ಹಿಂದಿನ ಕಾಲದಲ್ಲಿ ಮಕ್ಕಳು ಬೆಳೆಯಲು ಹೆಚ್ಚು ಕಾಲ ತೆಗೆದುಕೊಳ್ಳುತ್ತಿದ್ದರು. ಹಿರಿಯ ಮಗ ಜೋಸ್ ಆರ್ಕಾಡಿಯೊ ಜಿಪ್ಸಿಗಳ ಜೊತೆ ಹೊರಟು ಹೋದವನು, ಹಾವಿನ ಹಾಗೆ ಮೈಗೆಲ್ಲ ಬಣ್ಣ ಹಚ್ಚಿಕೊಂಡು, ಖಗೋಳ ಶಾಸ್ತ್ರಜ್ಞನಂತೆ ಮಾತಾಡುತ್ತ ಮನೆಗೆ ಬರುವಷ್ಟು ಹೊತ್ತಿಗೆ ಅಮರಾಂತಾ, ಆರ್ಕಾಡಿಯೊ ಇಂಡಿಯನ್ನರ ಭಾಷೆಯನ್ನು ಮರೆತು ಸ್ಪ್ಯಾನಿಷ್ ಭಾಷೆಯನ್ನು ಕಲಿತಿದ್ದರು. ನಡೆದದ್ದಷ್ಟನ್ನೂ ನೆನಪಿರಿಸಿಕೊಳ್ಳಬೇಕ್ಕಷ್ಟೆ. ಬಡಪಾಯಿ ಜೋಸ್ ಆರ್ಕಾಡಿಯೊ ಆ ಮರದ ಕೆಳಗೆ ಕುಳಿತಿದ್ದು ಮಳೆ ಬಿಸಿಲನ್ನು ಎಷ್ಟೆಲ್ಲ ಸಹಿಸಿಕೊಂಡ. ತನ್ನ ಸಾವಿಗಾಗಿ ರೋದಿಸುತ್ತಿದ್ದವನು ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಎಷ್ಟೊಂದು ಯುದ್ಧಗಳಲ್ಲಿ ಭಾಗವಹಿಸಿ, ಎಷ್ಟೆಲ್ಲ ಕಷ್ಟ ಅನುಭವಿಸಿ ಇನ್ನೂ ಸರಿಯಾಗಿ ಐವತ್ತು ವರ್ಷವೂ ಆಗದಿರುವಾಗ ಶವವಾಗಿ ಅವನನ್ನು ತಂದರು. ಹಿಂದೆ ಮಾಂಸದ ಕ್ಯಾಂಡಿಗಳನ್ನು ಮಾಡುತ್ತಾ ಬ್ಯುಸಿಯಾಗಿದ್ದಾಗಲೂ ಮಕ್ಕಳ ಕಡೆ ಗಮನ ಕೊಡಲು ಸಾಧ್ಯವಾಗುತ್ತಿತ್ತು. ಅವರ ಕಣ್ಣುಗಳನ್ನು ನೋಡಿಯೇ ಅರಳೆಣ್ಣೆ ಅಗತ್ಯವಿದೆಯೆಂದು ಗಮನಕ್ಕೆ ಬರುತ್ತಿತ್ತು. ಆದರೆ ಈಗ ಜೋಸ್ ಆರ್ಕಾಡಿಯೋನನ್ನು ಸೊಂಟಕ್ಕೇರಿಸಿಕೊಂಡು ತಿರುಗಾಡುವುದನ್ನು ಬಿಟ್ಟರೆ ಬೇರೇನೂ ಕೆಲಸ ಮಾಡುವುದಕ್ಕೇ ಸಾಧ್ಯವಾಗುತ್ತಿರಲಿಲ್ಲ. ಸತ್ಯ ಏನೂಂದ್ರೆ, ಉರ್ಸುಲಾಗೆ ತನ್ನ ವಯಸ್ಸೆಷ್ಟು ಎಂಬುದೇ ಮರೆತು ಹೋಗಿರುವ ಸಮಯದಲ್ಲಿ ಎಲ್ಲರಿಗೂ ತಲೆನೋವಾಗಿದ್ದಳು. ಮಾಡುವ ಕೆಲಸಗಳಲ್ಲಿ ಮಧ್ಯೆ ಪ್ರವೇಶಿಸುತ್ತಿದ್ದಳು, ಮನೆಗೆ ಯಾರಾದರೂ ಹೊಸಬರು ಬಂದರೆ ಅವರನ್ನು ಪ್ರಶ್ನೆ ಕೇಳುತ್ತಾ ವಿಚಾರಿಸುತ್ತ ಅವರಿಗೆ ಬೇಸರ ತರುತ್ತಿದ್ದಳು. ಅವಳು ಕೇಳುವ ಪ್ರಶ್ನೆಗಳಾದರೂ ಏನು, ಸಂತ ಜೋಸೆಫನ ಮೂರ್ತಿಯನ್ನು ಮಳೆಗಾಲದವರೆಗೆ ಇರಿಸಿಕೊಳ್ಳಲು ಯುದ್ಧದ ದಿನಗಳಲ್ಲಿ ಯಾರಾದರೂ ಕೇಳಿಕೊಂಡಿದ್ದರೆ? ಇತ್ಯಾದಿ ಇತ್ಯಾದಿ ಅವಳ ಕಣ್ಣದೃಷ್ಟಿ ಯಾವಾಗ ಹೋಯಿತೆಂಬುದು ಯಾರಿಗೂ ಗೊತ್ತಿರಲಿಲ್ಲ. ನಂತರದ ವರ್ಷಗಳಲ್ಲಿ, ಅದೂ ಪೂರ್ತಿ ಶಕ್ತಿ ಉಡುಗಿ ಹಾಸಿಗೆಯಿಂದ ಏಳಲೂ ಸಾಧ್ಯವಿಲ್ಲದಿರುವಾಗಲೂ ಕಣ್ಣು ಕಾಣುವುದಿಲ್ಲವೆಂಬ ಸತ್ಯ ಗೊತ್ತಿರಲಿಲ್ಲ: ಜೋಸ್ ಆರ್ಕಾಡಿಯೊ ಹುಟ್ಟುವುದಕ್ಕೆ ಮೊದಲೇ ತನ್ನ ಕಣ್ಣದೃಷ್ಟಿ ಕ್ಷೀಣಿಸುತ್ತಿದೆ ಎನ್ನುವುದನ್ನು ಕಂಡುಕೊಂಡಿದ್ದಳು. ಮೊದಲಿಗೆ ಅವಳು ಅದು ತಾತ್ಕಾಲಿಕ ದೃಷ್ಟಿದೋಷವೆಂದು ಭಾವಿಸಿ, ಯಾರಿಗೂ ಗೊತ್ತಿಲ್ಲದೆ ಮಜ್ಜೆಯ ಸಿರಪ್ ತೆಗೆದುಕೊಳ್ಳುತ್ತಿದ್ದಳು. ಕಣ್ಣಿಗೆ ಜೇನುತುಪ್ಪ ಬಿಟ್ಟುಕೊಳ್ಳುತ್ತಿದ್ದಳು. ಆದರೆ ಸ್ವಲ್ಪ ಸಮಯದಲ್ಲಿಯೇ, ಪರಿಹಾರವೇ ಸಿಗದಂತಹ ಶಾಶ್ವತವಾದ ಕತ್ತಲಲ್ಲಿ ಇಳಿಯುತ್ತಿದ್ದೇನೆಂಬುದನ್ನು ಗ್ರಹಿಸಿದಳು. ಎಷ್ಟರಮಟ್ಟಿಗೆ ದೃಷ್ಟಿಮಾಂದ್ಯವಾಯಿತೆಂದರೆ, ವಿದ್ಯುತ್ ದೀಪಗಳು ಹತ್ತಿ ಉರಿದಾಗ ಅವಳಿಗೆ ಏನೊ ಒಂದು ಬೆಳಕಿನ ಫ್ಲಾಶ್ ಕಂಡಂತೆನಿಸಿತು ಅಷ್ಟೆ! ಜನರ ದೃಷ್ಟಿಯಲ್ಲಿ ತಾನು ನಿಷ್ಪ್ರಯೋಜಕಳೆಂಬ ಭಾವನೆ ಬರುವುದೆಂಬ ಕಾರಣಕ್ಕೆ ಯಾರಿಗೂ ತಿಳಿಸಲಿಲ್ಲ. ಮೌನವಾಗಿ ಕೇವಲ ಧ್ವನಿಗಳಿಂದಲೇ ವಸ್ತುಗಳನ್ನು ಮತ್ತು ಮನುಷ್ಯರನ್ನು ಗುರುತಿಸುವುದು ಹೇಗೆಂಬುದನ್ನು ಅಭ್ಯಾಸ ಮಾಡುತ್ತಿದ್ದಳು. ಇದರಿಂದಾಗಿ ಕ್ಯಾಟರ್ಯಾಕ್ಸ್ ಸಮಸ್ಯೆಯಿಂದ ಕಾಣಲಾಗದ್ದನ್ನು ನೆನಪುಗಳ ಮೂಲಕ ಗುರುತಿಗೆ ತಂದುಕೊಳ್ಳಬಹುದೆಂದು ಯೋಚಿಸಿದ್ದಳು. ನಂತರ ವಾಸನೆಗಳಿಂದ,

ವಸ್ತುಗಳ ಗಾತ್ರ ಬಣ್ಣಗಳನ್ನು ನೋಡಿ ತಿಳಿಯುವುದಕ್ಕಿಂತ ಖಚಿತವಾಗಿ ತಿಳಿಯಲು ಸಾಧ್ಯವೆಂಬುದನ್ನು ಅರಿತಳು. ಇದರಿಂದಾಗಿ ಅವಳಿಗೆ ನಾಚಿಕೆಪಡುವ ಸಂದರ್ಭವೇ ಬರುತ್ತಿರಲಿಲ್ಲ. ಕೋಣೆಯ ಕತ್ತಲಲ್ಲಿ ಸೂಜಿಗೆ ದಾರ ಹಾಕುತ್ತಿದ್ದಳು, ಮತ್ತು ಗುಂಡಿ ಹೊಲಿಯುತ್ತಿದ್ದಳು. ಹಾಲು ಯಾವಾಗ ಕುದಿಗೆ ಬರುತ್ತದೆಂಬುದನ್ನೂ ತಿಳಿದಿದ್ದಳು. ಈಗ ಯಾವ ವಸ್ತು ಎಲ್ಲಿದೆ ಎಂಬುದನ್ನು, ಖಚಿತವಾಗಿ ಹೇಳಬಲ್ಲವಳಾಗಿದ್ದಳು. ಆದರೆ ಇದಕ್ಕೆ ಮೊದಲು ಅವಳಿಟ್ಟ ವಸ್ತುವನ್ನೇ ಎಲ್ಲಿರಿಸಿದ್ದೇನೆಂಬುದನ್ನು ಮರೆಯುತ್ತಿದ್ದಳು. ಒಮ್ಮೆ ಫರ್ನಾಂಡಾ ತನ್ನ ಮದುವೆಯ ಉಂಗುರಕ್ಕಾಗಿ ಹುಡುಕಾಡುತ್ತಿದ್ದಳು. ಅದು ಸಿಗದೆ ತುಂಬ ಬೇಸರಗೊಂಡಿದ್ದಳು. ಆದರೆ ಉರ್ಸುಲಾ ಮಕ್ಕಳ ಕೋಣೆಯಲ್ಲಿ ಷೆಲ್ಫ್ ಮೇಲೆ ಇದ್ದುದನ್ನು ತೆಗೆದುಕೊಟ್ಟಳು. ಯಾವಾಗ ಉರ್ಸುಲಾಳ ಈ ಸಾಮರ್ಥ್ಯ ಗೊತ್ತಾಯಿತೊ ಮನೆಯಲ್ಲಿದ್ದ ಪ್ರತಿಯೊಬ್ಬರೂ ತಮ್ಮ ತಮ್ಮ ವಸ್ತುಗಳನ್ನು ಅಜಾಗರೂಕತೆಯಿಂದ ಮರೆಯುತ್ತಿದ್ದರು. ದೃಷ್ಟಿಯೊಂದರ ಹೊರತು ಉಳಿದ ನಾಲ್ಕು ಇಂದ್ರಿಯಗಳು ಸೂಕ್ಷ್ಮವಾಗಿ ಇದ್ದುದರಿಂದ ಎಲ್ಲವನ್ನೂ ಎಲ್ಲರದನ್ನೂ ತಿಳಿದಿರುತ್ತಿದ್ದಳು. ಅವರ ಅಜಾಗರೂಕತೆಯೂ ಹೆಚ್ಚಿತು. ಮತ್ತೆ ಮತ್ತೆ ಇದೇ ರೀತಿ ಮರೆಯುತ್ತಿದ್ದರು. ಉರ್ಸುಲಾ ಅವರದನ್ನೆಲ್ಲ, ಮಾಡಿಕೊಡುತ್ತಿದ್ದುದು ಸಾಮಾನ್ಯವೇ ಆಗಿದ್ದರಿಂದ ಅವರು ಮರೆಯುವುದು ಜಾಸ್ತಿಯಾಯಿತು. ಪ್ರತಿಯೊಬ್ಬರದೂ ಒಂದೇ ಸಮಯದಲ್ಲಿ, ಒಂದೇ ಮಾತು, ಒಂದೇ ಕೆಲಸ, ಸರಿಯಾಗಿ ಮಾಡುತ್ತಿದ್ದ ಕೆಲಸಗಳಿಂದ ದೂರವಾದಾಗ, ವ್ಯತ್ಯಾಸ ಬಂದಾಗ, ಕಳೆದುಕೊಳ್ಳುವ ಕ್ರಿಯೆಯೂ ಹೆಚ್ಚಾಯಿತು. ಯಾವಾಗ ಫರ್ನಾಂಡಾ ಉಂಗುರ ಕಳೆದುಕೊಂಡು ಬೇಜಾರುಗೊಂಡಿದ್ದಳೋ ಆಗ ಉರ್ಸುಲಾಗೆ ನೆನಪಾಯಿತು. ಫರ್ನಾಂಡಾ ಮಾಡಿದ್ದು ಒಂದೇ ಒಂದು ತಪ್ಪೆಂದರೆ, ಮೆಮೆ ಹಾಸಿಗೆಯಲ್ಲಿ ಹಿಂದಿನ ರಾತ್ರಿ ಒಂದು ತಿಗಣೆ ಸೇರಿಕೊಂಡಿದ್ದರಿಂದ ಹಾಸಿಗೆಯನ್ನು ಬಿಸಿಲಲ್ಲಿ ಹಾಕಿದ್ದಳು. ಹೊಗೆ ಹಾಕುವ ಸಮಯದಲ್ಲಿ ಮಕ್ಕಳ ಕೈಗೆ ಎಟುಕದಂತೆ ಉಂಗುರವನ್ನು ಇರಿಸುವ ಜಾಗ ಷೆಲ್ಫ್ ಆಗಿತ್ತು. ಆದ್ದರಿಂದ ಅವಳು ಅದನ್ನು ಭದ್ರವಾಗಿ ಇರಿಸಿದ್ದಳು. ಆದರೆ ಅದನ್ನು ಮರೆತು ತಾನು ದಿನ ಓಡಾಡುತ್ತಿದ್ದ ಜಾಗಗಳಲ್ಲಿ ಹುಡುಕಿದಳು. ಈ ಅಭ್ಯಾಸದಿಂದಾಗಿಯೇ ಹುಡುಕುವುದೇ ಕಷ್ಟವಾಗಿದೆ ಎಂದುಕೊಂಡಳು. ಜೋಸ್ ಆರ್ಕಾಡಿಯೊನನ್ನು ಕಷ್ಟಪಟ್ಟು ಬೆಳೆಸುವ ಜವಾಬ್ದಾರಿಯಿಂದಾಗಿ ಅವಳಿಗೆ, ಮನೆಯಲ್ಲಿ ಆಗುವ ಸಣ್ಣಸಣ್ಣ ಬದಲಾವಣೆಗಳೂ ತಿಳಿದುಕೊಳ್ಳುವ ಅವಕಾಶ ಒದಗಿತ್ತು. ಅಮರಾಂತಾ ಮಲಗುವ ಕೋಣೆಯಲ್ಲಿ ಸಂತರ ಪ್ರತಿಮೆಗಳಿಗೆ ಬಟ್ಟೆ ಬದಲಾಯಿಸುತ್ತಿರುವಾಗ ಅವನಿಗೆ ಬಣ್ಣಗಳಲ್ಲಿನ ವ್ಯತ್ಯಾಸವನ್ನು ತಿಳಿಸುತ್ತಿದ್ದಂತೆ ತೋರಿಸಿಕೊಂಡಳು.

"ಈಗ ನೋಡೋಣ, ಹೇಳು ಆರ್ಚ್‌ಏಂಜಲ್ ರ್‍ಯಾಫೆಲ್ ಯಾವ ಬಣ್ಣದ ಬಟ್ಟೆ ಹಾಕಿದ್ದಾನೆ" ಎಂದು ಅವನನ್ನು ಕೇಳಿದಳು.

ಆ ರೀತಿಯಲ್ಲಿ ಮಗು, ಅವಳಿಗೆ ಕಣ್ಣುಗಳಿಂದ ಗೊತ್ತಾಗದ ಬಣ್ಣಗಳನ್ನು ಅವನಿಂದ ತಿಳಿಯುತ್ತಿದ್ದಳು. ಅವನು ಶಾಲೆಗೆ ಹೋಗುವುದಕ್ಕೆ ಎಷ್ಟೋ ಮೊದಲೇ, ಉರ್ಸುಲಾ ಬಟ್ಟೆಗಳ ಬಣ್ಣವನ್ನು ಅವುಗಳನ್ನು ಮುಟ್ಟಿನೋಡಿ ಹೇಳುತ್ತಿದ್ದಳು. ಕೆಲವು ಸಲ ಅನಿರೀಕ್ಷಿತ

ಆಕಸ್ಮಿಕಗಳು ಸಂಭವಿಸಿದ್ದೂ ಉಂಟು. ಒಂದು ದಿನ ಮಧ್ಯಾಹ್ನ ಅಮರಾಂತ ವರಾಂಡದಲ್ಲಿ ಕುಳಿತು ಎಂಬ್ರಾಯಿಡರಿ ಮಾಡುತ್ತಿದ್ದಾಗ ಉರ್ಸುಲಾ ಎಡವಿ ಅವಳ ಮೇಲೆ ಬಿದ್ದಳು.

"ನಿನಗೆ ಪುಣ್ಯ ಇರುತ್ತೆ, ನೀನು ಎಲ್ಲಿಗೆ ಹೋಗುತ್ತಿದ್ದೀ ಅನ್ನೋದರ ಕಡೆ ಗಮನವಿರಲಿ" – ಅಮರಾಂತಾ ಗಟ್ಟಿಯಾಗಿ ಹೇಳಿದಳು.

"ಅದು ನಿನ್ನ ತಪ್ಪು. ನೀನು ಮಾಮೂಲಾಗಿ ಎಲ್ಲಿ ಕುಳಿತುಕೊಳ್ಳುತ್ತಿದ್ದೆಯೊ ಅಲ್ಲಿ ಕುಳಿತಿಲ್ಲ" ಎಂದಳು.

ಅವಳಿಗೆ ಖಚಿತವಾಗಿ ಅದು ಗೊತ್ತಿತ್ತು. ಆದರೆ ಆ ದಿನ ಉರ್ಸುಲಾಗೆ ತನ್ನ ದೃಷ್ಟಿ ಬಗ್ಗೆ ಯಾರಿಗೂ ಏನೂ ಗೊತ್ತಿಲ್ಲ ಅನ್ನುವುದು ಅರ್ಥವಾಯಿತು. ಕಾಲದ ಹರಿವಿನೊಂದಿಗೆ ಋತುಮಾನದ ವ್ಯತ್ಯಾಸದಿಂದ ಸೂರ್ಯನ ಕ್ರಮಣವೂ ಬದಲಾಗುತ್ತ ಒಂದೊಂದು ದಿನ ಒಂದೊಂದು ಸ್ಥಳದಲ್ಲಿ ಇರುತ್ತಿದ್ದುದರಿಂದ, ವರಾಂಡಾದಲ್ಲಿ ಕುಳಿತುಕೊಳ್ಳುತ್ತಿದ್ದವರೂ ಸ್ಥಳ ಬದಲಾವಣೆ ಮಾಡಬೇಕಾಯಿತು. ಅದಕ್ಕಾಗಿ ಕೇವಲ ದಿನಾಂಕದ ನೆನಪಿನಿಂದ ಉರ್ಸುಲಾ ಎಲ್ಲಿ ಕುಳಿತಿದ್ದಾಳೆ ಎನ್ನುವುದನ್ನು ಸರಿಯಾಗಿ ಖಚಿತಪಡಿಸಿಕೊಳ್ಳಬೇಕಿತ್ತು. ಅವಳ ಕೈಗಳು ನಡುಗುತ್ತಿದ್ದರೂ ಯಾರಿಗೂ ಕಾಣಿಸುತ್ತಿರಲಿಲ್ಲ. ದೇಹದ ಭಾರ ಕಾಲಿನ ಮೇಲೆ ಅತಿ ಹೆಚ್ಚೆನಿಸಿತು. ಅವಳು ಪುಟ್ಟ ದೇಹ ಅಥವಾ ಆಕೃತಿ ಎಲ್ಲ ಕಡೆ ಒಂದೇ ಸಮಯದಲ್ಲಿ ಕಾಣಲು ಸಾಧ್ಯವಿರಲಿಲ್ಲ. ಇಡೀ ಮನೆಯ ಜವಾಬ್ದಾರಿಯನ್ನು ಹೆಗಲಮೇಲೆ ಹೊತ್ತಾಗ ಇದ್ದಷ್ಟೆ ಕಾರ್ಯತತ್ಪರತೆ ಇತ್ತು. ಆದರೆ ಮುಪ್ಪಿನ ಏಕಾಕಿತನದಲ್ಲಿ, ಮೊಟ್ಟಮೊದಲಬಾರಿಗೆ, ತಾನು ಗೃಹಕೃತ್ಯಗಳಲ್ಲಿ ಮುಳುಗಿದ್ದಾಗ ನಡೆಯುತ್ತಿದ್ದ ಸಣ್ಣಪುಟ್ಟ ಸಂಗತಿಗಳನ್ನು ಘಟನೆಗಳನ್ನು ನೋಡಲಾಗುತ್ತಿರಲಿಲ್ಲವಾದ್ದದ್ದು. ಈಗ ಸ್ಪಷ್ಟವಾಗಿ ನೋಡಬಲ್ಲವಳಾಗಿದ್ದಳು. ಜೋಸ್ ಆರ್ಕಾಡಿಯೊನನ್ನು ಶಾಲೆಗೆ ಕಳುಹಿಸುವ ಸಿದ್ಧತೆಗಳು ನಡೆಯುತ್ತಿದ್ದಾಗ, ಮಕೊಂಡೊ ಸ್ಥಾಪನೆಯಾದಾಗಿನಿಂದ ಈ ಮನೆಯ ಬದುಕಿನ ಎಲ್ಲ ನೆನಪುಗಳನ್ನು ಸಂಚಯಿಸಿಕೊಂಡಿದ್ದಳು. ತನ್ನ ಮುಂದಿನ ಪೀಳಿಗೆಯವರ ಬಗ್ಗೆ ಇರಿಸಿಕೊಂಡಿದ್ದ ಅಭಿಪ್ರಾಯಗಳು ಅವಳಲ್ಲಿ ಈಗ ಪೂರ್ತಿಯಾಗಿ ಬದಲಾಗಿತ್ತು. ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಕುಟುಂಬಕ್ಕಾಗಿ ಪ್ರೀತಿಯನ್ನು ಕಳೆದುಕೊಳ್ಳಲಿಲ್ಲ. ಯುದ್ಧಗಳಿಂದ ನಿಷ್ಠುರನಾಗಿದ್ದ. ಅವನು ಯಾರನ್ನು ಪ್ರೀತಿಸಲಿಲ್ಲ, ಹೆಂಡತಿ, ರಾತ್ರಿ ಸುಖಕೊಡುವ ಹೆಂಗಸರು, ಕಡೆಗೆ ಸ್ವಂತ ಮಕ್ಕಳನ್ನೂ ಕೂಡಾ! ಎಂಬುದು ಅವಳಿಗೆ ಹಿಂದಿಗಿಂತ ಈಗ ಹೆಚ್ಚು ತಿಳಿಯಿತು. ಎಲ್ಲರೂ ತಿಳಿದುಕೊಂಡಿರುವಂತೆ ಆದರ್ಶಗಳಿಗಾಗಿ, ಸಿದ್ಧಾಂತಗಳಿಗಾಗಿ ಯುದ್ಧ ಮಾಡಲಿಲ್ಲ. ಎಲ್ಲರೂ ಭಾವಿಸಿದಂತೆ ಕೆಲಸಲ ಗೆಲುವನ್ನು ಪರಿತ್ಯಜಿಸಿದ್ದು ದಣಿವಿಗಾಗಿರಲಿಲ್ಲ. ಅವನ ಸೋಲು ಗೆಲುವುಗಳು ಪಾಪಪೂರಿತ ಅಹಂಕಾರದಿಂದ ಉಂಟಾದದ್ದು. ಕಡೆಗೆ, ಯಾವ ಮಗನಿಗಾಗಿ ತನ್ನ ಪ್ರಾಣ ತ್ಯಾಗಕ್ಕೂ ಸಿದ್ಧವಾಗಿದ್ದಳೋ ಅವನು ಯಾರನ್ನೂ ಪ್ರೀತಿಸುವ ಸಾಮರ್ಥ್ಯ ಹೊಂದಿರಲಿಲ್ಲ. ಒಂದು ದಿನ ರಾತ್ರಿ ಅವನಿನ್ನೂ ಹೊಟ್ಟೆಯಲ್ಲಿರುವಾಗ, ಅವಳಿಗೆ ಮಗು ಅಳುವುದು ಕೇಳಿಸಿತು. ಆ ಅಳು ಎಷ್ಟು ನಿಜವಾಗಿತ್ತೆಂದರೆ ಜೋಸ್ ಆರ್ಕಾಡಿಯೊ ಬ್ಯುಂಡಿಯಾ ಅವಳ ಪಕ್ಕ ಮಲಗಿದ್ದವನು ಎದ್ದು ಕುಳಿತ. ನೋಡಿ, ತನ್ನ ಮಗ ಧ್ವನಿಗಾರುಡಿಗನಾಗುತ್ತಾನೆಂದು ಖುಷಿಪಟ್ಟ. ಬೇರೆಯವರು

ಅವನು ಪ್ರವಾದಿಯಾಗುತ್ತಾನೆಂದು ಭವಿಷ್ಯ ನುಡಿದರು. ಆದರೆ ಅವಳಿಗೆ ಮಾತ್ರ, ಅದು ಖಚಿತವಾಗಿಯೂ ಭಯಾನಕವಾದ ಭವಿಷ್ಯವಾಗಿತ್ತು. ಹಂದಿಬಾಲದೊಂದಿಗೆ ಹುಟ್ಟುತ್ತಾನೆಂಬ ನಂಬಿಕೆಯಿಂದ ದೇವರನ್ನು ತನ್ನ ಮಗುವನ್ನು ಹೊಟ್ಟೆಯಲ್ಲಿ ಇರುವಾಗಲೇ ಸಾಯಿಸು ಎಂದು ಪ್ರಾರ್ಥಿಸಿದಳು. ವಯಸ್ಸಿನ ಅನುಭವದಿಂದ, ಬಸಿರಲ್ಲಿ ಇರುವ ಮಗುವಿನ ಅಳುವು ಧ್ವನಿಗಾರುಡಿಗನಾಗುತ್ತಾನೆ, ಇಲ್ಲವೆ ಭವಿಷ್ಯದ ಹರಿಕಾರನಾಗುತ್ತಾನೆ ಎನ್ನುವುದೆಲ್ಲವೂ ಸುಳ್ಳು. ಆದರೆ ಪ್ರೀತಿಸಲು ಅಸಮರ್ಥನಾಗಿರುತ್ತಾನೆ ಎಂಬುದೇ ನಿಜ ಎಂಬ ನಿಲುವಿಗೆ ಬಂದಳು. ಮಗನ ಬಗ್ಗೆ ಇಷ್ಟು ಕನಿಷ್ಟವಾಗಿ ಮಾತನಾಡುವುದರ ಮೂಲಕ ಅವನ ಬಗೆಗಿದ್ದ ಅಂತಃಕರಣವೆಲ್ಲ ಹೊಮ್ಮಿಚಿಮ್ಮಿತು. ಅದೇ ಅಮರಾಂತಾಳ ಬಗ್ಗೆ ಯೋಚಿಸುವಾಗ ಅವಳ ಹೃದಯ ಕಾಠಿನ್ಯ ಭಯತರಿಸುತ್ತಿತ್ತು. ಹೆಪ್ಪುಗಟ್ಟಿದ್ದ ಕಹಿ ಮತ್ತಷ್ಟು ಕಠೋರವಾಗುವಂತೆ ಮಾಡಿತು. ಆದರೆ ಕಡೆಕಡೆಯಲ್ಲಿ ಅವಳ ವಿಶ್ಲೇಷಣೆಗೆ ತೊಡಗಿದಾಗ ಅವಳಷ್ಟು ಮೃದುಮನದ ಹೆಂಗಸು ಎಂದಿಗೂ ಇರಲು ಸಾಧ್ಯವಿಲ್ಲ ಎನ್ನುವ ತೀರ್ಮಾನಕ್ಕೆ ಬಂದಳು. ಎಲ್ಲರೂ ತಿಳಿದಂತೆ ಪೀತ್ರೋ ಕ್ರೆಸ್ಪಿಯನ್ನು ಸೇಡಿನಿಂದ ಅನ್ಯಾಯವಾಗಿ ಚಿತ್ರಹಿಂಸೆಗೆ ಗುರಿಪಡಿಸಲಿಲ್ಲ. ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜನನ್ನು ನಿರಾಶೆಗೊಳಿಸಿ, ಬದುಕು ಅಸಹನೀಯಮಾಡಿ ಹುತಾತ್ಮನಾಗುವ ಸ್ಥಿತಿವರೆಗೆ ಮಾಡಿದ್ದು, ಅವನ ಮೇಲಿನ ಜಿಗುಪ್ಸೆಯಿಂದಲ್ಲ. ಆ ಇಬ್ಬರ ವಿಚಾರದಲ್ಲಿ ನಡೆದುಕೊಂಡ ರೀತಿ ಅಪಾರವಾದ ಪ್ರೀತಿ ಮತ್ತು ಹೆದರಿಕೆಗಳ ನಡುವಿನ ಸಂಘರ್ಷವಾಗಿತ್ತು. ಅವಳ ಹಿಂಸೆಗೆ ಒಳಗಾಗಿದ್ದ ಹೃದಯದಲ್ಲಿ ಮನೆಮಾಡಿದ ಕಾರಣವಿಲ್ಲದ ಹೆದರಿಕೆ. ಕಡೆಯಲ್ಲಿ ಜಯಗಳಿಸಿತು. ಆ ಸಮಯದಲ್ಲಿಯೇ, ಉರ್ಸುಲಾಗೆ ರೆಬೆಕಾಳ ಹೆಸರನ್ನು ಪ್ರಸ್ತಾಪ ಮಾಡಿದಾಗ, ಅವಳ ಬಗೆಗಿದ್ದ ಪ್ರೀತಿ ಪಶ್ಚಾತ್ತಾಪದೊಂದಿಗೆ ಮತ್ತಷ್ಟು ಹೆಚ್ಚಿತು. ಜೊತೆಗೆ ದಿಢೀರ್ ಮೆಚ್ಚುಗೆ ಉಂಟಾಯಿತು. ಪಾಪದ ಹುಡುಗಿ ಹಾಲಿನಿಂದಲ್ಲದೆ ಮಣ್ಣು, ಗೋಡೆಯ ಸುಣ್ಣದಿಂದ ಬೆಳೆದಳು. ಅವಳ ರಕ್ತದಲ್ಲಿ ಅಪರಿಚಿತ ರಕ್ತವೇ ಹರಿಯುತ್ತಿದೆ. ಅವರ ಅಸ್ಥಿಗಳು ಅವರ ಸಮಾಧಿಯಲ್ಲಿ ಇನ್ನೂ ಸದ್ದುಮಾಡುತ್ತಿವೆ. ಹೃದಯದಲ್ಲಿ ಅಶಾಂತತೆ, ಹೊಟ್ಟೆಕಿಚ್ಚು ಇರಿಸಿಕೊಂಡಿರುವ ಇವಳೊಬ್ಬಳಲ್ಲಿ ಮಾತ್ರವೇ ಎಣೆಯಿಲ್ಲದ ಧೈರ್ಯವಿದೆ.

ಗೋಡೆಗಳನ್ನು ಸ್ಪರ್ಶಿಸುತ್ತ "ರೆಬೆಕಾ ನಿನಗೆ ನಾವೆಷ್ಟು ಅನ್ಯಾಯ ಮಾಡಿದ್ದೇವೆ" ಎಂದು ಹೇಳುತ್ತಿದ್ದಳು.

ಮನೆಯಲ್ಲಿ ಎಲ್ಲರಿಗೂ ಅವಳ ಮನಸ್ಸು ಎಲ್ಲೆಲ್ಲೋ ಅಲೆದಾಡುತ್ತಿದೆ ಎನಿಸುತ್ತಿತ್ತು, ಅದೂ ಅವಳು ತನ್ನ ಬಲಗೈಯನ್ನು ಆರ್ಚ್‌ಏಂಜಲ್ ಗೇಬ್ರಿಯಲ್‌ನಂತೆ ತನ್ನೊಳಗೆ ಮಾತಾಡಿಕೊಳ್ಳುತ್ತಾ ನಡೆದಾಡುವಾಗ! ಫರ್ನಾಂಡಾಗೆ ಆ ರೀತಿ ಉರ್ಸುಲಾ ನಡೆದಾಡುವಲ್ಲಿ, ಅತೀಂದ್ರಿಯ ದೃಷ್ಟಿಯಿದೆಯೆಂದು ಸ್ಪಷ್ಟವಾಗಿ ಅರ್ಥಮಾಡಿಕೊಂಡಿದ್ದಳು. ಯಾಕೆಂದರೆ ಹಿಂದಿನವರು, ಮನೆಗೆ ಎಷ್ಟು ಖರ್ಚಾಯಿತೆಂಬುದನ್ನು ನಿಖರವಾಗಿ ಹೇಳುತ್ತಿದ್ದಳು. ಅಮರಾಂತಾಳಿಗೂ ಇದು ಸತ್ಯವೆಂದೇ ತೋರಿತು. ಒಮ್ಮೆ ಉರ್ಸುಲಾ ಅಡಿಗೆ ಮನೆಯಲ್ಲಿ ಸಾರನ್ನು ಕಲೆಸುತ್ತಿರುವಾಗ, ಅವರು ಕೇಳಿಸಿಕೊಳ್ಳುತ್ತಿದ್ದಾರೆಂಬ ಅರಿವಿಲ್ಲದೆ, ಮೊದಲ ಜಿಪ್ಸಿಗಳಿಂದ ಕೊಂಡುಕೊಂಡಿದ್ದ ಬೀಸುವ ಕಲ್ಲು, ಜೋಸ್

ಆರ್ಕಾಡಿಯೊ ಪ್ರಪಂಚವನ್ನು ಅರವತ್ತೈದು ಸಲ ಸುತ್ತಿ ಬರುವುದಕ್ಕೆ ಮೊದಲು ಕಳೆದುಹೋದದ್ದು ಇನ್ನೂ ಪಿಲಾರ್ ತರ್ನಿರಾ ಮನೆಯಲ್ಲಿ ಇದೆಯೆಂದು ಹೇಳಿದಳು. ನೂರುವರ್ಷ ಸಮೀಪಿಸುತ್ತಿದ್ದರೂ ಚುರುಕಾಗಿದ್ದು ತನ್ನ ಅತಿಯಾದ ಸ್ಥೂಲಶರೀರದಿಂದ ಹಿಂದೆ ಬಾತುಕೋಳಿಗಳನ್ನು ಹೆದರಿಸುತ್ತಿದ್ದಂತೆ, ಮಕ್ಕಳನ್ನು ಹೆದರಿಸುತ್ತಿದ್ದ ಪಿಲಾರ್ ತರ್ನಿರಾಗೆ ಆಶ್ಚರ್ಯವೇನೂ ಆಗಲಿಲ್ಲ. ಅವಳಿಗೆ ತನ್ನ ಕಾರ್ಡುಗಳಿಗಿಂತಲೂ, ಎಚ್ಚೆತ್ತಿರುವ ಮುಪ್ಪು ಹೆಚ್ಚು ಪರಿಣಾಮಕಾರಿ ಎನಿಸಿತ್ತು.

ಜೋಸ್ ಆರ್ಕಾಡಿಯೊನನ್ನು ನೋಡಿಕೊಳ್ಳಲು ತನಗೆ ಸಾಕಷ್ಟು ಸಮಯ ಸಿಗಲಿಲ್ಲವೆಂದು ಬೇಸರಪಟ್ಟಳು. ಭೌತಿಕ ಕಣ್ಣುಗಳಿಂದ ನೋಡಲು ಪ್ರಯತ್ನಿಸಿದಾಗಲೆಲ್ಲ ಮಾಡುತ್ತಿದ್ದ ತಪ್ಪುಗಳು, ಒಳಗಣ್ಣಿನಿಂದ ನೋಡಿದಾಗ ಸರಿಯಾಗಿರುತ್ತಿತ್ತು. ಒಮ್ಮೆ ಗುಲಾಬಿ ನೀರೆಂದು ತಿಳಿದು ಇಂಕ್ ಬಾಟಲನ್ನು ಹುಡುಗನ ತಲೆಮೇಲೆ ಸುರಿದುಬಿಟ್ಟಳು. ಪ್ರತಿಯೊಂದು ಕೆಲಸದಲ್ಲಿಯೂ ತಾನು ಪ್ರವೇಶಿಸಲು ಹಠ ಮಾಡುತ್ತಿದ್ದು, ನಗೆಪಾಟಲಿಗೆ ಗುರಿಯಾದಾಗ ತನ್ನ ಮೇಲೆ ತಾನೇ ಸಿಟ್ಟಾಗುತ್ತಿದ್ದಳು. ಈ ಬಗೆಯ ವಿಪರೀತಗಳು, ಮುಪ್ಪು ಮತ್ತು ಕತ್ತಲೆಯು ಸಾಧಿಸಿದ ಗೆಲುವಲ್ಲ. ಕಾಲದ ಪರಿಣಾಮ ಎಂದುಕೊಂಡಳು. ಟರ್ಕಿಗಳು ತಿಂಗಳು ವರ್ಷಗಳನ್ನು ಗ್ರಹಿಸಲು ಬಳಸುತ್ತಿದ್ದುದು ದೇವರು ಬಳಸುತ್ತಿದ್ದುದಕ್ಕಿಂತ ಭಿನ್ನವಾದ ಮಾನದಂಡವಾಗಿತ್ತು. ಈಗ ಮಕ್ಕಳು ಬಹಳ ಬೇಗ ಬೆಳೆಯುತ್ತಿರುವುದಲ್ಲದೆ ಅವರ ಭಾವನೆಗಳೂ ಭಿನ್ನವಾಗಿವೆ. ರೆಮೆಡಿಯೋಸ್ ದ ಬ್ಯೂಟಿ ದೇಹ ಮತ್ತು ಆತ್ಮದೊಂದಿಗೆ ಆಕಾಶಕ್ಕೇರಿ ಮರೆಯಾದ ಮೇಲೆ, ಫರ್ನಾಂಡಾ ತನ್ನ ಶೀಟುಗಳೂ ಅವಳೊಂದಿಗೆ ಹೋದುದಕ್ಕಾಗಿ ತನ್ನೊಳಗೆ ತಾನೇ ಗೊಣಗಾಡಲು ಶುರುಮಾಡಿದ್ದಳು. ಅರೆಲಿಯಾನೊಗಳ ದೇಹಗಳು ಸಮಾಧಿಗಳಲ್ಲಿ ತಣ್ಣಗಾಗುತ್ತಿದ್ದಂತೆ ಅರೆಲಿಯಾನೊ ಸೆಗುಂಡೊ ಮತ್ತೆ ಮನೆಯಲ್ಲಿ ಕುಡಿತ, ಸಂಗೀತಗಳ ಸಂಭ್ರಮಾಚರಣೆಯನ್ನು ಮುಂದುವರೆಸಿದ. ಕುಡುಕರು ಷಾಂಪೇನಿನಲ್ಲಿ ತೊಯ್ದು ಹೋಗುತ್ತಿದ್ದರು. ಸತ್ತವರು ಕ್ರಿಶ್ಚಿಯನರಲ್ಲ ನಾಯಿಗಳು ಎಂಬಂತೆ ಯಾವ ಭಾವನೆಯೂ ಇಲ್ಲದೆ ನಡೆದುಕೊಳ್ಳುತ್ತಿದ್ದ ರೀತಿ ಹುಚ್ಚರ ಮನೆಯೆಂಬಂತೆ ಅವಳಿಗೆ ತಲೆನೋವನ್ನು ತರಿಸಿತು. ಮಾಂಸದ ಕ್ಯಾಂಡಿಗಳು ಕಸದ ಕುಪ್ಪೆಯಂತಾದವು. ಜೋಸ್ ಆರ್ಕಾಡಿಯೊನ ಟ್ರಂಕನ್ನು ಸಿದ್ಧಮಾಡುತ್ತಿದ್ದಾಗ, ಎಲ್ಲವನ್ನೂ ನೆನಪಿಸಿಕೊಳ್ಳುತ್ತಿದ್ದಂತೆ ಅವಳಿಗೆ ತಾನೇಕೆ ಸಾಯಬಾರದು. ಸತ್ತು ಸಮಾಧಿಯಾಗಿ ಎಲ್ಲರ ಕೈಯಿಂದಲೂ ಒಂದಿಷ್ಟು ಮಣ್ಣು ಹಾಕಿಸಿಕೊಳ್ಳಬಾರದೇಕೆ ಎಂದು ಯೋಚಿಸಿದಳು. ಇಷ್ಟೊಂದೆಲ್ಲ ಕಷ್ಟನಷ್ಟಗಳನ್ನು ಸಹಿಸಿಕೊಂಡು ಬದುಕಲು, ನಿಜವಾಗಿಯೂ ಮನುಷ್ಯ ಉಕ್ಕಿನಿಂದಾಗಿರುವನೇ ಎಂದು ದೇವರನ್ನು ಪ್ರಶ್ನಿಸಿದಳು. ಮತ್ತೆ ಮತ್ತೆ ಇಂಥದ್ದನ್ನೆಲ್ಲ ಕೇಳಿಕೊಳ್ಳುತ್ತಾ, ತನ್ನೊಳಗೆ ತಾನೇ ಗೊಂದಲವನ್ನು ಸೃಷ್ಟಿಸಿಕೊಳ್ಳುತ್ತಿದ್ದಳು. ತಾನೂ ಏಕೆ ಪರದೇಶಿಯಂತೆ ಓಡಿಹೋಗಬಾರದು, ಒಂದು ಕ್ಷಣ ಬಂಡೇಳಬಾರದೇಕೆ ಎಂಬ ಆಕಾಂಕ್ಷೆಗೆ ಒಳಗಾದಳು. ಆದರೆ ಈ ಬಗೆಯ ಬಯಕೆಗಳು ಮೂಡುತ್ತ ಮರೆಯಾಗುತ್ತಾ ಮುಂದುಮುಂದಕ್ಕೆ ಹೋಗುತ್ತಿದ್ದಂತೆ ಹತ್ತಿಕ್ಕಿಕೊಂಡಿದ್ದ ಕೆಟ್ಟ ಮಾತುಗಳನ್ನೆಲ್ಲ ಹೊರಗೆ ಕಕ್ಕಿಬಿಡಬೇಕೆಂದೂ ಅನಿಸುತ್ತಿತ್ತು.

"ಥತ್" – ಎಂದು ಕೂಗಿದಳು.

ಅಮರಾಂತಾ ಬಟ್ಟೆಗಳನ್ನು ಟ್ರಂಕಿನಲ್ಲಿ ಜೋಡಿಸಿಡುತ್ತಿದ್ದವಳು ಅದನ್ನು ಕೇಳಿಸಿಕೊಂಡು ಬಹುಶಃ ಚೇಳೇನಾದರೂ ಅವಳನ್ನು ಕಚ್ಚಿರಬೇಕೆಂದುಕೊಂಡಳು.

"ಎಲ್ಲಿದೆ ಅದು" ಎಂದು ಗಾಭರಿಯಿಂದ ಕೇಳಿದಳು.

"ಏನು"

"ತಿಗಣೆ" ಅಮರಾಂತಾ ಹೇಳಿದಳು.

ಉರ್ಸುಲಾ ಅವಳ ಬೆರಳನ್ನು ಎದೆಯ ಮೇಲಿಟ್ಟು ತೋರಿದಳು.

"ಇಲ್ಲಿ" ಎಂದಳು.

ಗುರುವಾರ ಮಧ್ಯಾಹ್ನ ಎರಡುಗಂಟೆಗೆ, ಜೋಸ್ ಆರ್ಕಾಡಿಯೊ ಶಾಲೆಗೆ ಹೊರಟು ನಿಂತ. ಅವನಿಗೆ ಗುಡ್ ಬೈ ಹೇಳುತ್ತಾ, ಸದಾ ಅವನನ್ನು ನೆನಪಿನಲ್ಲಿ ಇರಿಸಿಕೊಂಡಿರುತ್ತಾಳೆ. ಒಂದು ಕಂಬನಿ ಹನಿಯಿಲ್ಲದೆ, ಮೌನವಾಗಿ ಗಂಭೀರವಾಗಿ, ಅವನಿಗೂ ಬೆವರುವ ಬಿಸಿಲಲ್ಲಿ, ಗಂಜಿಹಾಕಿದ ಬಟ್ಟೆ ಟೈ ಕಟ್ಟಿಕೊಂಡು ತಾಮ್ರದ ಗುಂಡಿಗಳಿದ್ದ ಸೂಟ್ ಧರಿಸಿ ನಿಂತಿದ್ದಾಗ ಹೇಳಿಕೊಡುತ್ತಿದ್ದ ವಿದಾಯದ ರೀತಿಯಲ್ಲಿ ಉರ್ಸುಲಾ ವಿದಾಯ ಹೇಳಿದಳು. ಅವನು ಉರ್ಸುಲಾ ಓಡಾಡುವ ಜಾಗಗಳು ತಿಳಿಯಲೆಂದು ತನ್ನ ತಲೆ ಮೇಲೆ ಚೆಲ್ಲಿದ್ದ ಗುಲಾಬಿ ಪರಿಮಳದ ತುಂಬಿದ್ದ, ಊಟದ ಮನೆಯಿಂದ ಹೊರಟ.

ಬೀಳ್ಕೊಡುಗೆಯ ಊಟ ಮಾಡುತ್ತಿರುವಾಗ, ಕುಟುಂಬದವರು ತಮ್ಮೊಳಗಿನ ಆತಂಕವನ್ನು ತೋರ್ಪಡಿಸಿಕೊಳ್ಳದೆ ಹಬ್ಬದ ಗೆಲುವಿನೊಂದಿಗೆ, ಫಾದರ್ ಆ್ಯಂಟೊನಿಯೊ ಇಸಾಬೆಲ್ ಹೇಳಿದ್ದನ್ನು ಸಂಭ್ರಮಿಸಿ ಆಚರಿಸಿದರು. ಆದರೆ ವೆಲ್ವೆಟ್‌ನಿಂದ ಸುತ್ತಿದ ಟ್ರಂಕನ್ನು ಹೊರಗೆ ಎತ್ತಿಕೊಂಡು ಹೋದಾಗ ಶವಪೆಟ್ಟಿಗೆಯನ್ನು ಮನೆಯಿಂದ ಹೊರಗೆ ಒಯ್ಯುತ್ತಿರುವಂತೆ ಭಾವಿಸಿದರು. ಬೀಳ್ಕೊಡುಗೆಯ ಸಮಾರಂಭದಲ್ಲಿ ಪಾಲ್ಗೊಳ್ಳದ ಏಕೈಕ ವ್ಯಕ್ತಿಯೆಂದರೆ ಕರ್ನಲ್ ಆರ್ಕಾಡಿಯೊ ಬ್ಯುಂಡಿಯಾ.

"ನಮಗೆ ಬೇಕಾಗಿರುವುದೆಲ್ಲ ಒಬ್ಬ ಪೋಪ್ ಅಷ್ಟೆ" ಎಂದು ಮಣ ಮಣಗುಟ್ಟಿದ.

ಮೂರು ತಿಂಗಳ ನಂತರ ಅರೆಲಿಯಾನೊ ಸೆಗುಂಡೊ ಮತ್ತು ಫರ್ನಾಂಡಾ ಮೆಮೆಳನ್ನು ಶಾಲೆಗೆ ಕರೆದುಕೊಂಡು ಹೋದರು. ಬರುವಾಗ ಪಿಯಾನೋಲಾಗೆ ಬದಲಾಗಿ 'ಕ್ಲ್ಯಾವಿಕಾರ್ಡ್'ನ್ನು ತಂದರು. ಅದೇ ಹೊತ್ತಿನಲ್ಲಿ ಅಮರಾಂತಾ ತನ್ನ ಹೊದಿಕೆಯನ್ನು ತಾನೇ ಹೊಲಿದುಕೊಂಡಳು. ಬನಾನಾ ಭರಾಟೆ ಕಡಿಮೆಯಾಗಿತ್ತು. ಮಕೊಂಡೊದ ಹಳೆಯ ನಿವಾಸಿಗಳು ಹೊಸಬರಿಂದ ಸುತ್ತುವರೆಯಲ್ಪಟ್ಟಿದ್ದರು. ಅವರೆಲ್ಲ ಕಷ್ಟಪಟ್ಟು ದುಡಿಯುತ್ತಾ ಬಹಳ ಕಾಲದಿಂದ ನಡೆದುಬಂದ ಆದಾಯ ಮೂಲಗಳಿಗೇ ಅಂಟಿಕೊಂಡಿದ್ದರು. ಅವರಿಗಿದ್ದ ಒಂದೇ ಒಂದು ಸಮಾಧಾನವೆಂದರೆ, ಆಘಾತಗಳಿಂದ

ಬಚಾವಾದದ್ದು. ಮನೆಯಲ್ಲಿ ಇನ್ನೂ ಅತಿಥಿಗಳಿಗೆ ಸ್ವಾಗತವಿತ್ತು. ಬನಾನಾ ಕಂಪನಿ, ನಂತರದ ದಿನಗಳಲ್ಲಿ ಆ ಜಾಗ ಬಿಟ್ಟು ಹೋಗುವವರೆಗೆ ಹಳೆಯ ದಿನಚರಿ ಮತ್ತೆ ಸ್ಥಾಪನೆಯಾಗಿರಲಿಲ್ಲ. ಪರಂಪರಾಗತವಾದ ಅತಿಥಿ ಸತ್ಕಾರದ ರೀತಿಯಲ್ಲಿ, ಫರ್ನಾಂಡಾಳ ಹೊಸ ನಿಯಮಗಳ ಹೇರಿಕೆಯಿಂದ ಸಾಕಷ್ಟು ಬದಲಾವಣೆಗಳಾಗಿದ್ದವು. ಉರ್ಸುಲಾಳನ್ನು ಹಿಂದಕ್ಕೆ ಇರಿಸಲಾಗಿತ್ತು. ಅಮರಾಂತಾ ತನ್ನ ಹಳೆಯ ಹೊಲಿಗೆ ಕೆಲಸದಲ್ಲಿ ಮಗ್ನಳಾಗಿ ಇರುತ್ತಿದ್ದಳು. ಇದರಿಂದ ಫರ್ನಾಂಡಾಗೆ ಸಂಪೂರ್ಣವಾಗಿ ಸ್ವಾತಂತ್ರ್ಯ ಸಿಕ್ಕಿತ್ತು. ಯಾವ ಅತಿಥಿಗಳನ್ನು ಬರಮಾಡಿಕೊಳ್ಳಬೇಕು, ಯಾರ ಮೇಲೆ ಯಾವ ಶಿಸ್ತಿನ ನಿಯಮವನ್ನು ಹೇರಬೇಕು ಎನ್ನುವ ಪಾಠಗಳನ್ನು ತಂದೆತಾಯಿಗಳಿಂದ ಕಲಿತದ್ದನ್ನು ಈಗ ಜಾರಿಗೆ ತರುವುದನ್ನು ಪ್ರಾರಂಭಿಸಿದಳು. ಸುಲಭವಾಗಿ ಸಿಗುತ್ತಿದ್ದ ಐಷೋರಾಮದ ಸವಲತ್ತುಗಳಿಗೆ ಕತ್ತರಿಬಿದ್ದಾಗ ಹೊರಗಿನವರಿಗೆ ಸಂಪ್ರದಾಯಬದ್ಧ ಕುಟುಂಬವೆನಿಸಿತು. ಬನಾನಾ ಕಂಪನಿಗೆ ಹೊರತಾದವರು ಹೆಚ್ಚಿನ ಪ್ರಶ್ನೆ ಕೇಳುತ್ತಿರಲಿಲ್ಲವಾಗಿ ಅವರು ಅವಳಿಗೆ ಸ್ವಲ್ಪ ಆಪ್ಯಾಯಮಾನವಾಗಿ ಕಂಡರು. ಅವಳ ಭಾವ ಜೋಸ್ ಆರ್ಕಾಡಿಯೊ ಸೆಗುಂಡೊ ಮೊದಲು ತೊಡಗಿಸಿಕೊಂಡಿದ್ದ ಹುಂಜದ ಕಾಳಗದ ಕೆಲಸ ಬಿಟ್ಟು ಬನಾನಾ ಕಂಪನಿಯಲ್ಲಿ ಫೋರಮನ್ ಆಗಿ ಕೆಲಸಕ್ಕೆ ಸೇರಿದ್ದರಿಂದ ಅವಳ ಮತ್ಸರಕ್ಕೆ ಗುರಿಯಾಗಿದ್ದ.

"ವಿದೇಶಿಯರ ಸಹವಾಸದಲ್ಲಿ ಇರುವವರೆಗೆ ಈ ಮನೆಯಲ್ಲಿ ಅವನಿಗೆ ಪ್ರವೇಶವಿಲ್ಲ" ಎಂದು ಹೇಳಿಬಿಟ್ಟಳು.

ಈ ಬಗೆಯ ನಿರ್ಬಂಧಗಳಿಂದಾಗಿ ಅರೆಲಿಯಾನೊ ಸೆಗುಂಡೊ ಪೆಟ್ರಾಕೋಟ್ಸ್ ಮನೆಯಲ್ಲಿಯೇ ನೆಮ್ಮದಿಯಿಂದ ಇರಬಹುದು ಎಂದುಕೊಂಡ. ಪಾರ್ಟಿಗಳ ಕೆಲಸದ ಹೊರೆ ಕಡಿಮೆ ಮಾಡುವ ನೆಪದಲ್ಲಿ ಮೊದಮೊದಲಿಗೆ ಅವಳ ಮನೆಯಲ್ಲಿಯೇ ವ್ಯವಸ್ಥೆ ಮಾಡಲು ತೊಡಗಿದ. ನಂತರ ಪ್ರಾಣಿಗಳ ಸಂತಾನಾಭಿವೃದ್ಧಿ ಸಾಮರ್ಥ್ಯ ಕಡಿಮೆಯಾಗಿದೆ ಎನ್ನುವ ನೆಪದಲ್ಲಿ ಕಣಜ ಮತ್ತು ಕುದುರೆಗಳನ್ನು ಅಲ್ಲಿಗೆ ರವಾನಿಸಿದ. ಕಡೆಯಲ್ಲಿ, ತನ್ನ ವ್ಯವಹಾರಕ್ಕಾಗಿ ಇದ್ದ ಆಫೀಸನ್ನು ಅವಳ ಮನೆಗೆ, ಅಲ್ಲಿ ತಂಪಾಗಿರುತ್ತದೆ ಎನ್ನುವ ನೆಪವೊಡ್ಡಿ ಸ್ಥಳಾಂತರಿಸಿದ. ಇದನ್ನೆಲ್ಲ ನೋಡಿದ ಫರ್ನಾಂಡಾಳಿಗೆ, ಗಂಡನಿದ್ದೂ ತಾನು ವಿಧವೆ ಎಂದು ಅರ್ಥಮಾಡಿಕೊಂಡಳೂ. ಪರಿಸ್ಥಿತಿ ಮೊದಲಿನಂತಾಗುವುದಕ್ಕೆ ಸಾಧ್ಯವೇ ಇಲ್ಲದಷ್ಟು ಮುಂದುವರೆದಿತ್ತು. ಅರೆಲಿಯಾನೊ ಸೆಗುಂಡೊ ಮನೆಯಲ್ಲಿ ಊಟಕ್ಕೆ ಬರುತ್ತಿದ್ದುದೇ ಅಪರೂಪ. ಬಂದರೂ ರಾತ್ರಿಹೊತ್ತು ಹೆಂಡತಿ ಜೊತೆ ಮಲಗುವುದಕ್ಕಷ್ಟೆ. ಇದಿಷ್ಟೆ ಎಲ್ಲರಿಗೂ ಸಮಾಧಾನ ತರುವುದಕ್ಕೆ ಸಾಕಾಗಲಿಲ್ಲ. ಒಂದು ದಿನ ರಾತ್ರಿ ಅಚಾತುರ್ಯದಿಂದ, ಪೆಟ್ರೊಕೋಟ್ಸ್ ಮನೆಯಲ್ಲಿಯೇ ಬೆಳಗಿನತನಕ ಮಲಗಿಬಿಟ್ಟ. ಇದರಿಂದ ಫರ್ನಾಂಡಾ ಎಲ್ಲರೂ ನಿರೀಕ್ಷಿಸಿದಂತೆ ಕೂಗಾಡಲಿಲ್ಲ. ಸಿಟ್ಟಾಗಲಿಲ್ಲ. ಪಶ್ಚಾತ್ತಾಪ ಪಡಲಿಲ್ಲ. ಬದಲಾಗಿ ಅವನ ಬಟ್ಟೆಗಳನ್ನೆಲ್ಲ ಎರಡು ಟ್ರಂಕುಗಳಲ್ಲಿ ತುಂಬಿ, ಅವನನ್ನು ಇಟ್ಟುಕೊಂಡವಳ ಮನೆಗೆ ಕಳಿಸಿಬಿಟ್ಟಳು. ಟ್ರಂಕುಗಳನ್ನು ಹೊತ್ತು ಒಯ್ಯುವವರಿಗೆ, ಬೆಳ್ಳಂಬೆಳಕಿನಲ್ಲಿ ಊರಿನ ಜನಕ್ಕೆ ಕಾಣುವಂತೆ ತೆಗೆದುಕೊಂಡು ಹೋಗುವಂತೆ ಸೂಚನೆ ಕೊಟ್ಟಳು. ಇದರಿಂದಾಗಿ ದಾರಿತಪ್ಪಿದ ಗಂಡ ನಾಚಿಕೆ ಅವಮಾನಗಳಿಂದ ತಲೆತಗ್ಗಿಸಿಕೊಂಡು ಮನೆಗೆ ಬಂದಾನೆಂಬ

ಆಲೋಚನೆ ಅವಳದಾಗಿತ್ತು. ಆದರೆ ಬಡಪಾಯಿ ಫರ್ನಾಂಡಾ ತಾನು ಬಹಳ ದೊಡ್ಡ ಸಾಹಸ ಮಾಡಿದ್ದೇನೆಂಬ ಹೆಮ್ಮೆ ಕರಗಿಹೋಯಿತು. ಅವಳಿಗೆ ತನ್ನ ಗಂಡನ ಸ್ವಭಾವ, ಯೋಗ್ಯತೆಗಳನ್ನು ಸರಿಯಾಗಿ ತಿಳಿದಿಲ್ಲವೆಂಬ ಮರುಕ ಅವಳ ಬಗ್ಗೆ ಉಂಟಾಯಿತು. ನೋಡಿದ ಜನಕ್ಕೆ ಇದೆಲ್ಲ ಸ್ವಾಭಾವಿಕ ಅನಿಸಿತು. ಯಾಕೆಂದರೆ ಪೆಟ್ರಾ ಮತ್ತು ಸೆಗುಂಡೊ ನಡುವಿನ ಸಂಬಂಧಗಳು ಮೊದಲಿನಿಂದ ಗೊತ್ತಿದ್ದ ವಿಷಯವಾಗಿತ್ತು. ಆದ್ದರಿಂದ ಅವರಿಗೆ ಅವಳಿಂದ ಮತ್ತು ಅವಳ ತಂದೆತಾಯಿಯರಿಂದ ಏನೂ ಆಗಬೇಕಾದ್ದು ಇರಲಿಲ್ಲ. ಅರೆಲಿಯಾನೊ ಸೆಗುಂಡೊ ಪೂರ್ಣ ಸ್ವಾತಂತ್ರ್ಯದ ಸಂಭ್ರಮವನ್ನು ಆಚರಿಸಿದ. ಅವನು ಗೆಳೆಯರನ್ನು ಆಹ್ವಾನಿಸಿ ಮೂರು ದಿನಗಳ ಕಾಲ ಪಾರ್ಟಿ ಮುಂದುವರೆಸಿದ. ಇದರಿಂದ, ಆಕರ್ಷಕ ಬಣ್ಣಗಳಿಂದಿರದ ಅವಳ ಗೌನು, ಹಳೆಯ ಮೆಡಲುಗಳು, ಅರ್ಥವಿಲ್ಲದ ಅವಳ ಅಭಿಮಾನ – ಇತ್ಯಾದಿಗಳಿಂದ ದುಃಖದ ಕಾರ್ಮೋಡಗಳಿಂದ ಕವಿದ ಕಳಾಹೀನ ಸ್ಥಿತಿ ತಲುಪುತ್ತಿದ್ದರೆ, ಅವನ ಪ್ರೇಯಸಿ ಕಣ್ ಕುಕ್ಕುವ ಬಣ್ಣಬಣ್ಣದ ಬಟ್ಟೆ ತೊಟ್ಟು, ಮರುಪ್ರಾಯದ ಹುಕಿಯಲ್ಲಿ ಅತ್ಯಂತ ಗೆಲುವಾಗಿರುವುದರ ಜೊತೆಗೆ, ಅವಳ ಕಣ್ಣಲ್ಲಿ, ಗೆದ್ದ ಗೆಲುವಿನ ಅಹಂಕಾರವಿತ್ತು. ಅರೆಲಿಯಾನೊ ಸೆಗುಂಡೊ ಪ್ರಾಯದ ದಿನಗಳಲ್ಲಿನ ರಭಸದೊಂದಿಗೆ ಅವಳಿಗೆ ಒಪ್ಪಿಸಿಕೊಂಡ. ಪೆಟ್ರಾಕೋಟ್ಸ್ ಮೊದಲೂ ಕೂಡಾ ಅವನನ್ನು ಅವನಿಗಾಗಿ ಪ್ರೀತಿಸಲಿಲ್ಲ. ಅವನನ್ನು ಅವನ ಅವಳಿ ಸೋದರನೊಂದಿಗೆ ಹಂಚಿಕೊಂಡು ಸುಖಿಸಿದ್ದಳು. ಒಂದೇ ಸಮಯದಲ್ಲಿ ಇಬ್ಬರೊಂದಿಗೂ ಮಲಗುತ್ತಿದ್ದೇನೆಂಬ ಭಾವನೆ ಬರುವ ಹಾಗೆ ಒಬ್ಬನೇ ಮನುಷ್ಯನನ್ನು ಕೊಟ್ಟಿದ್ದಕ್ಕಾಗಿ ದೇವರಿಗೆ ಕೃತಜ್ಞತೆ ಹೇಳಿದಳು. ಅದುಮಿಟ್ಟುಕೊಂಡಿದ್ದ ಭಾವೋದ್ವೇಗ ಎಷ್ಟು ತೀವ್ರವಾಗಿತ್ತೆಂದರೆ, ಊಟಕ್ಕೆ ಕುಳಿತಿದ್ದಾಗ ಇಬ್ಬರೂ ಒಬ್ಬರ ಕಣ್ಣಲ್ಲಿ ಇನ್ನೊಬ್ಬರು ಕಣ್ಣಿಟ್ಟು ನೋಡುತ್ತಾ ತಿನ್ನಲು ಆರಂಭಿಸುವ ಹೊತ್ತಿಗೆ, ಪ್ರೀತಿಯ ಹಸಿವು ಅಧಿಕವಾಗಿ, ಊಟದ ತಟ್ಟೆಗಳನ್ನು ಮುಚ್ಚಿಟ್ಟು ಮಲಗುವ ಕೋಣೆಯ ಕಡೆ ಧಾವಿಸುತ್ತಿದ್ದರು. ಅವನು ಭೇಟಿಕೊಡುತ್ತಿದ್ದ ಫ್ರೆಂಚ್ ಹೆಂಗಸರಿಂದ ಸ್ಫೂರ್ತಿ ಪಡೆದು, ಅರೆಲಿಯಾನೊ ಸೆಗುಂಡೊ ಪೆಟ್ರಾಕೋಟ್ಸ್‌ಗಾಗಿ ಆರ್ಚ್‌ಬಿಷಪ್ ಬಳಸುತ್ತಿದ್ದಂತಹ ಹಾಸಿಗೆಯನ್ನು ತಂದ. ಕಿಟಕಿಗಳಿಗೆ ವೆಲ್ವೆಟ್ ಪರದೆಗಳನ್ನು, ಮಲಗುವ ಕೋಣೆಯ ಛಾವಣಿಗೆ ಮತ್ತು ಗೋಡೆಗಳಿಗೆ ಕನ್ನಡಿಗಳನ್ನು ಹಾಕಿಸಿದ. ಇದೆಲ್ಲಕ್ಕಾಗಿ ಮೊದಲಿಗಿಂತ ಸಾಕಷ್ಟು ದುಂದುವೆಚ್ಚಮಾಡಿದ. ಪ್ರತಿದಿನ ಬರುತ್ತಿದ್ದ ಟ್ರೈನಿಂದ ಷಾಂಪೇನ್ ಬ್ರಾಂದಿ ಬಾಟಲಿಗಳಿಂದ ತುಂಬಿದ ಕೇಸುಗಳು, ಸರಿಸುಮಾರು ಹನ್ನೊಂದು ಗಂಟೆ ಸುಮಾರಿಗೆ ಇವನನ್ನು ತಲುಪುತ್ತಿದ್ದವು. ಸ್ಟೇಷನ್‌ನಿಂದ ಟ್ರೈನ್ ಮತ್ತೆ ಹೊರಡುವಾಗ, ಜನರಿಗೆ ಕಾಣಿಸುವಂತೆ ಸ್ಥಳೀಯರೂ ಹೊರಗಿನವರೂ, ಪರಿಚಯದವರೂ, ಅಪರಿಚಿತರೂ ಯಾವುದೇ ಭೇದವಿಲ್ಲದೆ ತೂರಾಡುವ ಸ್ಥಿತಿಯಲ್ಲಿದ್ದವರನ್ನೆಲ್ಲ ಎಳೆದುಕೊಂಡು ಹೋಗುತ್ತಿದ್ದ. ಮಿಸ್ಟರ್ ಬ್ರೌನ್, ವಿಚಿತ್ರ ಭಾಷೆಯಲ್ಲಿ ಮಾತ್ರವೇ ಮಾತಾಡುತ್ತಿದ್ದವನು ಕೂಡಾ ಅರೆಲಿಯಾನೊ ಸೆಗುಂಡೊನ ಪ್ರಚೋದನೆಯ ಸೆಳೆತಕ್ಕೆ ಒಳಗಾಗಿ, ಪೆಟ್ರಾಕೋಟ್ಸ್ ಮನೆಯಲ್ಲಿ ಚೆನ್ನಾಗಿ ಕುಡಿದು ಬಿಡುತ್ತಿದ್ದುದೇ ಅಲ್ಲದೆ, ಭಯಂಕರ ಜರ್ಮನ್ ಷೆಫರ್ಡ್ ನಾಯಿಗಳನ್ನೂ ಕೂಡಾ, ತಾನು ಅಮಲಿನಲ್ಲಿ ಗುನುಗುಟ್ಟುತ್ತಿದ್ದ ಟೆಕ್ಸಾಸ್ ಹಾಡುಗಳ ತಾಳಕ್ಕೆ ಆರ್ಕಾಡಿಯೋನ್ ವಾದ್ಯ ಹಿನ್ನೆಲೆಗೆ, ತಾನೂ ಸೇರಿ ಕುಣಿಯುವಂತೆ ಮಾಡುತ್ತಿದ್ದ.

"ಕುಡೀರಿ ಕುಡೀರಿ, ಕುಡಿದು ಖಾಲಿಮಾಡಿ, ಜೀವನ ಕ್ಷಣಿಕ" ಎಂದು ಪಾರ್ಟಿ ಉತ್ತುಂಗದಲ್ಲಿ ಇದ್ದಾಗ, ಜೋರಾಗಿ ಹೇಳಿದ.

ಎಂದೂ ಅವನು ಚೆನ್ನಾಗಿ ಕಾಣುತ್ತಿರಲಿಲ್ಲ. ಪ್ರೀತಿಸಲ್ಪಡಲಿಲ್ಲ. ಅವನ ಪ್ರಾಣಿಗಳು ಹೆಚ್ಚಿಗೆ ಸಂತಾನೋತ್ಪತ್ತಿ ಮಾಡಲಿಲ್ಲ. ಕೊನೆಯಿಲ್ಲದ ಪಾರ್ಟಿಗಳಿಗಾಗಿ ಎಷ್ಟೊಂದು ಹಸುಗಳು, ಹಂದಿಗಳು, ಕೋಳಿಗಳು ಬಲಿಯಾದವು. ಅಂಗಳ ರಕ್ತದ ಹೊನಲುಗಳಿಂದ, ಕಪ್ಪಾಗಿ, ಮಣ್ಣುಮಣ್ಣಾಗಿ ಹೋಯಿತು. ಅದೊಂದು ಶಾಶ್ವತವಾದ ಬಲಿಪೀಠವಾಯಿತು. ಅಳಿದುಳಿದುದನ್ನು ಮತ್ತು ಮತ್ತು ಮೂಳೆಗಳನ್ನು ಹಾಕುವ ತಿಪ್ಪೆಯಾಯಿತು. ರಣಹದ್ದುಗಳು ಅತಿಥಿಗಳ ಮೇಲೆರಗಿ ಕಣ್ಣು ಕುಕ್ಕದಿರುವಂತೆ ಮಾಡಲು ಆಗಾಗ ಡೈನಾಮೈಟನ್ನು ಸಿಡಿಸುತ್ತಿದ್ದರು. ಜೋಸ್ ಆರ್ಕಾಡಿಯೊ ಪ್ರಪಂಚ ಪರ್ಯಟನೆ ಮಾಡಿಬಂದಾಗ ಹೇಗಿದ್ದನೊ ಹಾಗೆ ಅರೆಲಿಯಾನೊ ಸೆಗುಂಡೊ ಚೆನ್ನಾಗಿ ತಿಂದೂ ತಿಂದೂ ಕೊಬ್ಬಿದ್ದ ಸ್ಥೂಲದೇಹ, ಕೆಂಪುಬಣ್ಣ, ಆಮೆ ಆಕಾರದ ವ್ಯಕ್ತಿಯಾಗಿ ಕಾಣಿಸಿಕೊಂಡ. ಅವನ ಅತಿಥಿ ಸತ್ಕಾರದ ಕೀರ್ತಿ, ಎಲ್ಲೆಮೀರಿದ ದುಂದುವೆಚ್ಚದ ಸಾಮರ್ಥ್ಯ – ಇವುಗಳ ಕೀರ್ತಿ ಜೌಗುಪ್ರದೇಶ ದಾಟಿ ತೀರಪ್ರದೇಶಗಳವರೆಗೂ ತಲುಪಿ ಪ್ರಪಂಚದ ಮಹಾ ಮಹಾ ಹೆಸರಾಂತ ಹೊಟ್ಟೆಬಾಕರೆಲ್ಲರನ್ನೂ ಸೆಳೆಯುತ್ತಿತ್ತು. ಪೆಟ್ರಾಕೋಟ್ಸ್ ಮನೆಯಲ್ಲಿ ನಡೆಯುತ್ತಿದ್ದ ತಿನ್ನುವ ಟೂರ್ನಿಗಳಲ್ಲಿ, ಮಿತಿಮೀರಿ ತಿನ್ನುವಲ್ಲಿ ಪರಿಣತರಾಗಿದ್ದವರೆಲ್ಲರೂ ಎಲ್ಲಾ ಕಡೆಗಳಿಂದ ಬರಲು ಆರಂಭಿಸಿದರು. ಅದರಲ್ಲಿ ಅರೆಲಿಯಾನೊ ಸೆಗುಂಡೊ ಸೋಲದ ಸರದಾರನಾಗಿ ಹೊರಬರುತ್ತಿದ್ದ. ಆದರೆ ದುರಾದೃಷ್ಟದ ಒಂದು ಶನಿವಾರ, ಆನೆ ಎಂದು ಹೆಸರು ಪಡೆದಿದ್ದ ಕಮೀಲಾ ಸೆಗಾಸ್ತುಮೆ ಎನ್ನುವ ಹೆಂಗಸಿನ ಆಗಮನವಾಯಿತು. ಇಬ್ಬರ ನಡುವೆ ತಿನ್ನುವ ಪೈಪೋಟಿ ಮಂಗಳವಾರ ಬೆಳಗಿನವರೆಗೆ ಮುಂದುವರೆಯಿತು. ಮೊದಲ ಇಪ್ಪತ್ನಾಲ್ಕು ಗಂಟೆ ಕರುವಿನ ಮಾಂಸದ ಊಟ. ಮರಗೆಣಸು, ಹುರಿದ ಬಾಳೆ ಜೊತೆಗೆ ಸಾಲದ್ದಕ್ಕೆ ಒಂದು ಒಂದುವರೆ ಕೇಸಿನ ತುಂಬ ಷಾಂಪೇನು ಅರೆಲಿಯಾನೊ ತಾನು ಗೆಲ್ಲುತ್ತೇನೆಂದು ಖಚಿತವಾಗಿ ನಂಬಿದ್ದ. ತನ್ನ ಎದುರಾಳಿಗಿಂತ ಉತ್ಸಾಹ, ಜೀವಂತಿಕೆ, ಲವಲವಿಕೆಗಳಿಂದ ಕೂಡಿದ್ದ. ಒಂದು ರೀತಿಯಲ್ಲಿ ಅವನದು ವೃತ್ತಿಪರ ಶೈಲಿಯಾಗಿತ್ತು. ನೋಡುವ ಜನರ ಗುಂಪಿಗೆ ಅವನು ನಿರ್ಭಾವುಕನಾಗಿ ಕಾಣಿಸಿಕೊಳ್ಳುತ್ತಿದ್ದ. ಅರೆಲಿಯಾನೊ ಸೆಗುಂಡೊ, ತಾನು ಗೆಲ್ಲುತ್ತೇನೆಂಬ ಅತಿಯಾದ ವಿಶ್ವಾಸದಿಂದ ದೊಡ್ಡದೊಡ್ಡ ತುಂಡುಗಳನ್ನಾಗಿ ಮಾಡಿ ಆತುರಾತುರವಾಗಿ ತಿನ್ನುತ್ತಿದ್ದರೆ, ಆನೆ ತನ್ನ ಮಾಂಸವನ್ನು ಬಹಳ ನಾಜೂಕಾಗಿ ಒಬ್ಬ ಸರ್ಜನ್‌ನಂತೆ ಚಿಕ್ಕ ಚಿಕ್ಕ ತುಂಡುಗಳನ್ನು ಮಾಡಿ ನಿಧಾನವಾಗಿ ಒಂದೊಂದನ್ನೂ ಚಪ್ಪರಿಸುತ್ತಾ ನಿರಾಳವಾಗಿ ತಿನ್ನುತ್ತಿದ್ದಳು. ಬಲಿಷ್ಠವಾಗಿ, ದೈತ್ಯಾಕಾರವಾಗಿ ಇದ್ದರೂ ಸ್ತ್ರೀಸಹಜವಾದ ಕೋಮಲತೆಯನ್ನು ಕಳೆದುಕೊಂಡಿರಲಿಲ್ಲ. ನೋಡಲು ಬಹಳ ಚೆಲುವೆಯಾಗಿದ್ದಳು. ಕೈಗಳೂ ನುಣುಪಾಗಿದ್ದವು. ಅವಳ ಮೋಹಕತೆ ಎಷ್ಟು ಅದಮ್ಯವಾಗಿ ಇತ್ತೆಂದರೆ, ಸೆಗುಂಡೊ ಅವಳು ಮನೆಯೊಳಗೆ ಪ್ರವೇಶಿಸುತ್ತಿದ್ದಂತೆ ಮೆಲುದನಿಯಲ್ಲಿ, ಇವಳ ಜೊತೆ ತಿನ್ನುವ ಟೂರ್ನಿಗಿಂತ ಹಾಸಿಗೆಯ ಟೂರ್ನಿ ಇದ್ದಿದ್ದರೆ ಚೆನ್ನಾಗಿತ್ತು ಎಂದುಕೊಂಡ. ನಂತರ ಅವಳು ಮಾಂಸದ ಒಂದು ಭಾಗವನ್ನು ಮುರಿಯದೆ ಹಾಗೆಯೇ ಯಾವುದೇ ಊಟದ ನಿಯಮಗಳನ್ನು ಮುರಿಯದೆ ಅಚ್ಚುಕಟ್ಟಾಗಿ, ಗಂಭೀರವಾಗಿ, ಕಣ್ಮನ

ಸೆಳೆಯುವಂತೆ, ಅತೃಪ್ತ ಆನೆಯಂತೆ ತಿನ್ನುತ್ತಿದ್ದುದನ್ನು ನೋಡಿದ ಸೆಗುಂಡೊಗೆ ಅವಳೇ ನಿಜವಾದ ಆದರ್ಶ ಹೆಣ್ಣು ಅನಿಸಿತು. ಅವನ ಆಲೋಚನೆ ತಪ್ಪಾಗಿ ಇರಲಿಲ್ಲ. ಈ ಆನೆಗೆ ಎಲುಬುಗಳನ್ನು ನುಚ್ಚುನೂರು ಮಾಡುವಾಕೆ ಎಂದು ಹಿಂದೆ ಇದ್ದ ಹೆಸರಿಗೆ ಯಾವ ಆಧಾರವೂ ಇರಲಿಲ್ಲ. ಎಲ್ಲರೂ ತಿಳಿದಿದ್ದಂತೆ ಅವಳು ದನದ ಮಾಂಸ ತಿನ್ನುವವಳೂ ಆಗಿರಲಿಲ್ಲ. ಗ್ರೀಕ್ ಸರ್ಕಸ್ಸಿನ ಗಡ್ಡದ ಹೆಣ್ಣು ಆಗಿರಲಿಲ್ಲ ಅವಳು ಹಾಡಿನ ಶಾಲೆಯ ನಿರ್ದೇಶಕಿಯಾಗಿದ್ದಳು. ಒಂದು ಕುಟುಂಬದ ಗೌರವಯುತ ತಾಯಿಯಾಗಿದ್ದಾಗ ತಿನ್ನುವುದನ್ನು ಕಲಿತಳು. ಮಕ್ಕಳು ಯಾವುದೇ ಔಷಧಿಗಳ ಅಥವಾ ಕೃತಕ ವಿಧಾನಗಳಿಂದ, ಹಸಿವು ಹೆಚ್ಚಿಸಿಕೊಂಡು ತಿನ್ನುವುದಕ್ಕಿಂತ, ತಮ್ಮ ಮನಸ್ಸುಗಳನ್ನು ಪ್ರಶಾಂತವಾಗಿ ಇರಿಸಿಕೊಂಡು ತಿನ್ನಬೇಕೆಂದು ಕಲಿಸಿದಳು. ತನ್ನ ಸಿದ್ಧಾಂತವನ್ನು ಪ್ರಯೋಗದ ಮೂಲಕ ತೋರಿಸಿಕೊಟ್ಟಳು. ಒಬ್ಬ ಮನುಷ್ಯ ಎಲ್ಲ ವಿಚಾರ ಸಂಬಂಧ ಪ್ರಜ್ಞೆಯನ್ನು ಪರಿಪೂರ್ಣ ಸ್ಥಿತಿಯಲ್ಲಿ ಇರಿಸಿಕೊಂಡಿದ್ದರೆ, ದಣಿವಾಗುವವರೆಗೂ ತಿನ್ನುವ ಸಾಮರ್ಥ್ಯವನ್ನು ಪಡೆದಿರುತ್ತಾನೆ ಎನ್ನುವ ಅರಿವಿನ ಆಧಾರದ ಮೇಲೆ ಸಿದ್ಧಾಂತವನ್ನು ರೂಪಿಸಿದ್ದಳು. ಈಗ ಅವಳು ಕೆಲವು ನೈತಿಕ ಕಾರಣಗಳಿಂದಾಗಿ ಮತ್ತು ಸ್ಪರ್ಧೆಯಲ್ಲಿನ ಆಸಕ್ತಿಯಿಂದಾಗಿ ಮತ್ತು ನೀತಿ ನಿಯಮ ಶಿಸ್ತುಗಳಿಲ್ಲದೆ ಸಿಕ್ಕಾಪಟ್ಟೆ ತಿನ್ನುವ ಒಬ್ಬ ವ್ಯಕ್ತಿಯಿದ್ದಾನೆ ಎನ್ನುವ ಸುದ್ದಿ ದೇಶಾದ್ಯಂತ ಹಬ್ಬಿದ್ದನ್ನು ಕೇಳಿ, ಅವನೊಡನೆ ಸ್ಪರ್ಧಿಸಲು ಆ ಮನೆಗೆ ಬಂದಿದ್ದಳು. ಅವಳು ಬಂದ ಕ್ಷಣದಿಂದ ಅವನನ್ನು ನೋಡಿದಾಗ ಅವಳಿಗೆ ಅರೆಲಿಯಾನೊ ಸೆಗುಂಡೊ ಹೊಟ್ಟೆಯಿಂದ ಸೋಲುವುದಿಲ್ಲವಾದರೂ ಚಾರಿತ್ರ್ಯದಿಂದ ಸೋಲುತ್ತಾನೆ ಎಂಬುದನ್ನು ಅರಿತಳು. ಮೊದಲ ರಾತ್ರಿಯ ನಂತರ ಆನೆ ಧೈರ್ಯವಾಗಿ ಹೋಗುತ್ತಿದ್ದಾಗ ಅರೆಲಿಯಾನೊ ಸೆಗುಂಡೊ ಮಾತುಗಳಿಂದ ನಗುವಿನಿಂದ ದಣಿದು ಹೋಗುತ್ತಿದ್ದ. ಅವರು ನಾಲ್ಕು ಗಂಟೆ ನಿದ್ದೆ ಮಾಡಿದರು. ಎದ್ದ ಮೇಲೆ ಇಬ್ಬರೂ, ಒಬ್ಬೊಬ್ಬರು ನಲ್ವತ್ತು ಕಿತ್ತಲೆಹಣ್ಣಿನ ರಸ, ಎಂಟು ಕ್ವಾರ್ಟರ್ ಕಾಫಿ, ಮೂವತ್ತು ಹಸಿ ಮೊಟ್ಟೆಗಳನ್ನು ಮುಗಿಸಿದರು. ಎರಡನೆ ದಿನ ಬೆಳಿಗ್ಗೆ, ರಾತ್ರಿ ಎಷ್ಟೋ ಹೊತ್ತು ನಿದ್ದೆಯಿಲ್ಲದ ಮೇಲೆ, ಎರಡು ಹಂದಿಗಳು, ಒಂದು ಗೊನೆ ಬಾಳೆಹಣ್ಣು, ನಾಲ್ಕು ಕೇಸು ಷಾಂಪೇನ್ ಮುಗಿಸಿದ್ದರು. ಆನೆಗೆ, ಅರೆಲಿಯಾನೊ ಸೆಗುಂಡೊ ಅರಿವಿಲ್ಲದೆಯೇ ತನ್ನ ವಿಧಾನಗಳನ್ನು ತಿಳಿದುಕೊಂಡಿದ್ದಾನೆ ಎನ್ನುವ ಅನುಮಾನ ಬಂತು. ಆದರೆ ಅದು ಬೇಜವಾಬ್ದಾರಿಯ ಅಸಂಗತ ಹಾದಿಯ ಮೂಲಕವೆಂದೂ ತಿಳಿದಳು. ಇದರಿಂದಾಗಿ ಅವನು ತಾನು ಭಾವಿಸಿದ್ದಕ್ಕಿಂತ ಹೆಚ್ಚು ಅಪಾಯಕಾರಿ ಎಂದು ಅರಿತಳು. ಅಷ್ಟಾದರೂ, ಪೆಟ್ರಾಕೋಟ್ಸ್ ಸುಟ್ಟ ಎರಡು ಟರ್ಕಿ ಕೋಳಿಗಳನ್ನು ತಂದು ತಿನ್ನುವ ಮೇಜಿನ ಮೇಲೆ ಇರಿಸಿದಾಗ, ಅರೆಲಿಯಾನೊ ಸೆಗುಂಡೊ ಸ್ವಲ್ಪ ಕಷ್ಟಪಡುತ್ತಿದ್ದ.

"ನಿಮಗೆ ಆಗೊಲ್ಲಾಂದ್ರೆ, ತಿನ್ನೋಕೆ ಹೋಗಬೇಡಿ.... ಇಬ್ಬರೂ ಸಮ ಎಂದು ತೀರ್ಮಾನಿಸಿ ಬಿಡೋಣ" – ಎಂದಳು ಆನೆ.

ಆ ಮಾತನ್ನು ಹೃದಯ ಪೂರ್ವಕವಾಗಿಯೇ ಹೇಳಿದ್ದಳು. ತನಗೂ ಸಹ ಇನ್ನೊಂದು ತುತ್ತೂ ಕಷ್ಟವಾಗುತ್ತಿತ್ತಲ್ಲದೆ, ಅನ್ಯಾಯವಾಗಿ ತನ್ನ ಪ್ರತಿಸ್ಪರ್ಧಿಯನ್ನು ಸಾವಿಗೆ

ದೂಡಬೇಕಾಗುತ್ತದಲ್ಲ ಎನ್ನುವ ಪಶ್ಚಾತ್ತಾಪವೂ ಇತ್ತು. ಆದರೆ ಸೆಗುಂಡೊ ಅದನ್ನು ಸವಾಲಾಗಿ ಸ್ವೀಕರಿಸಿ, ತನ್ನ ಸಾಮರ್ಥ್ಯಕ್ಕೂ ಮೀರಿ ಆ ಟರ್ಕಿ ಕೋಳಿಯನ್ನು ತಿಂದು ಹೊಟ್ಟೆ ತುಂಬಿಸಿಕೊಂಡ. ಕೂಡಲೇ ಪ್ರಜ್ಞೆ ತಪ್ಪಿಬಿದ್ದ. ಕೆಳಮುಖವಾಗಿ ಎಲುಬುಗಳು ತುಂಬಿದ್ದ ಪ್ಲೇಟಿನ ಮೇಲೆ ಬಿದ್ದ. ಬಾಯಲ್ಲಿ ನೊರೆ ಬಂತು. ನೋವಿನಿಂದ ಸಂಕಟ ಪಡುತ್ತಿದ್ದ. ಕಣ್ಣು ಕತ್ತಲು ತುಂಬಿ ತನ್ನನ್ನು ಯಾರೋ ಮೇಲಿನಿಂದ ತಳವಿಲ್ಲದ ಗುಂಡಿಯೊಳಗೆ ಎಸೆಯುತ್ತಿದ್ದಾರೆ ಎಂದು ಭಾವಿಸಿದ. ಒಂದರಗಳಿಗೆಯ ಎಚ್ಚರ ಬಂದಾಗ, ತಾನು ಕೊನೆಯಿಲ್ಲದ ಕೊನೆ ತಲುಪುತ್ತಿದ್ದೇನೆ, ಸಾವು ತನಗಾಗಿ ಕಾಯುತ್ತಿದೆ ಎನಿಸಿತು.

"ಫರ್ನಾಂಡಾಳ ಬಳಿಗೆ ಕರೆದೊಯ್ಯಿರಿ" ಎಂದ.

ಸ್ನೇಹಿತರು ಅವನನ್ನು, ತಾನು ಸಾಯುವುದಾದರೆ, ಇಟ್ಟುಕೊಂಡವಳ ಮನೆಯಲ್ಲಿ ಖಂಡಿತ ಸಾಯುವುದಿಲ್ಲ ಎಂದು ಹೆಂಡತಿಗೆ ಕೊಟ್ಟ ಮಾತನ್ನು ಉಳಿಸಿಕೊಳ್ಳಲು ಸಹಾಯ ಮಾಡಿದಂತೆ ಆಗುವುದೆಂದು ಭಾವಿಸಿ ಅವಳ ಮನೆಗೆ ಕೊಂಡೊಯ್ದರು. ಅವರು ಬರುವಷ್ಟರಲ್ಲಿ ಪೆಟ್ರಾಕೋಟ್ಸ್, ತಾನು ಸಾಯುವಾಗ ತನ್ನ ಶವದ ಕಾಲುಗಳಿಗೆ ಆ ಬೂಟುಗಳನ್ನು ಹಾಕಿರಲೇಬೇಕೆಂಬ ಆಸೆಯಂತೆ ಅವುಗಳನ್ನು ಪಾಲಿಷ್ ಮಾಡಿ ಯಾರ ಕೈಲಾದರೂ ಕಳಿಸಬೇಕೆಂದು ಯೋಚಿಸುತ್ತಿರುವಷ್ಟರಲ್ಲಿ ಅರೆಲಿಯಾನೊ ಸೆಗುಂಡೊ ಕಡೆಯವರು ಬಂದು, ಸೆಗುಂಡೊ ಅಪಾಯದಿಂದ ಪಾರಾಗಿದ್ದಾನೆ ಎಂಬ ಸುದ್ದಿ ಹೊತ್ತು ತಂದರು. ಒಂದು ವಾರದೊಳಗಾಗಿ ಸೆಗುಂಡೊ ಪೂರ್ತಿಯಾಗಿ ಸುಧಾರಿಸಿದ. ಸತ್ತು ಹುಟ್ಟಿಬಂದ ಸಂತೋಷದ ಸಮಾರಂಭವನ್ನು ಹಿಂದೆಂದೂ ಕಾಣದ ರೀತಿಯಲ್ಲಿ ಆಚರಿಸಿದ. ಪೆಟ್ರಾಕೋಟ್ಸ್‌ಳ ಮನೆಯಲ್ಲಿಯೇ ಇರುತ್ತಿದ್ದರೂ ಮಧ್ಯೆಮಧ್ಯ ಮನೆಗೆ ಬಂದಾಗ ಕುಟುಂಬದವರೊಂದಿಗೆ ಊಟಮಾಡುತ್ತಿದ್ದ. ವಿಧಿವಿಪರ್ಯಾಸವೋ ಎಂಬಂತೆ ಹೆಂಡತಿ ಪ್ರೇಯಸಿಯಂತೆ ಇದ್ದರೆ, ಪ್ರೇಯಸಿ ಹೆಂಡತಿಯಂತೆ ಇದ್ದಳು.

ಫರ್ನಾಂಡಾಗೆ ಅದೊಂದು ಬಿಡುಗಡೆ, ವಿಶ್ರಾಮ, ತನಗೆ ಬೇಸರವಾದಾಗಲೆಲ್ಲ ಮಧ್ಯಾಹ್ನ ನಿದ್ದೆ ಸಮಯದಲ್ಲಿ ಅವಳ ಜೊತೆಗೆ ಇದ್ದದ್ದು, ಕ್ಲ್ಯಾವಿಕಾರ್ಡ್ ಪಾಠಗಳು ಮತ್ತು ಮಕ್ಕಳ ಪತ್ರಗಳು. ಮಕ್ಕಳಿಗೆ ಪ್ರತಿ ಎರಡು ವಾರಕ್ಕೊಮ್ಮೆ ಬರೆಯುತ್ತಿದ್ದ ಸುದೀರ್ಘವಾದ ಪತ್ರಗಳಲ್ಲಿ ಒಂದು ಸಾಲಾದರೂ ಸತ್ಯಾಂಶವಿರುತ್ತಿರಲಿಲ್ಲ. ತನ್ನ ಸಂಕಷ್ಟಗಳನ್ನೆಲ್ಲ ಅವರಿಂದ ಮರೆಸಿ ಇಟ್ಟಿದ್ದಳು. ಬೆಗೋನಿಯಾಗಳ ಮೇಲೆ ಬೆಳಕು ಬೀಳುತ್ತಿದ್ದರೂ ಮಧ್ಯಾಹ್ನ ಎರಡರ ಸಮಯದಲ್ಲಿ ಭಾರವೆನಿಸಿದರೂ, ಬೀದಿಯೊಳಗಿಂದ ಹರಿದು ಬರುತ್ತಿದ್ದ ಹಬ್ಬದ ಅಲೆಗಳಿದ್ದರೂ ಮನೆ ತನ್ನ ತಂದೆಯ ಬಂಗಲೆಯ ವಿಷಾದಪೂರ್ಣ ಕಥೆಯಂತಿದ್ದರೂ ಅದೆಲ್ಲವನ್ನೂ ಅವರಿಂದ ಮರೆಮಾಚಿಟ್ಟಳು. ಫರ್ನಾಂಡಾ ಮೂರು ಜೀವಂತ ಭೂತಗಳು ಮತ್ತು ಜೋಸ್ ಆರ್ಕಾಡಿಯೊ ಬ್ಯುಂಡಿಯಾನ ಜೊತೆ ಒಬ್ಬಳೇ ಅಲೆದಾಡುತ್ತಿದ್ದಳು. ಜೋಸ್ ಆರ್ಕಾಡಿಯೊ ಬ್ಯುಂಡಿಯಾ ಯಾವಾಗಲಾದರೂ ಒಮ್ಮೊಮ್ಮೆ ನಡುಮನೆಯ ನಸುಬೆಳಕಿನಲ್ಲಿ ಬಂದು ಕುಳಿತು ಕ್ಲ್ಯಾವಿಕಾರ್ಡನ್ನು ಏಕಾಗ್ರತೆಯೊಂದಿಗೆ ಕೇಳಿಸಿಕೊಳ್ಳುತ್ತಿದ್ದ. ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಕೇವಲ ನೆರಳಾಗಿದ್ದ. ಹಿಂದಿನ ಸಲ ಅವನು ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್ ಜೊತೆ, ಭವಿಷ್ಯವೇ ಇಲ್ಲದ ಯುದ್ಧದ ಬಗ್ಗೆ ಚರ್ಚಿಸಲು

ಹೋದದ್ದು ಬಿಟ್ಟರೆ ಮತ್ತೆ ಕಾಣಿಸುತ್ತಲೇ ಇರಲಿಲ್ಲ. ವರ್ಕ್‌ಷಾಪನ್ನು ತೊರೆದು ಅವನು ಕಾಣಿಸುತ್ತಿದ್ದದ್ದೆಂದರೆ ಚೆಸ್ಟ್‌ನಟ್ ಮರದಬಳಿ ಮೂತ್ರ ವಿಸರ್ಜನೆ ಮಾಡಲು ಬಂದಾಗಷ್ಟೆ. ಮೂರು ವಾರಗಳಿಗೊಮ್ಮೆ ಬರುವ ಕ್ಷೌರಿಕನ ಹೊರತು ಬೇರೆ ಯಾರೂ ಅವನನ್ನು ಕಾಣಲು ಬರುತ್ತಿರಲಿಲ್ಲ. ದಿನಕ್ಕೊಮ್ಮೆ ಉರ್ಸುಲಾ ತಂದುಕೊಡುತ್ತಿದ್ದ ಊಟ ಮಾಡುತ್ತಿದ್ದ. ಮೊದಲಿನಷ್ಟೇ ಆಸಕ್ತಿಯಿಂದ ಚಿನ್ನದ ಮೀನುಗಳನ್ನು ತಯಾರಿಸುತ್ತಿದ್ದರೂ, ಜನ ಅವುಗಳನ್ನು ಒಡವೆಗಳಂತೆ ಧರಿಸದೆ ಯಾವುದೋ ಒಂದು ಐತಿಹಾಸಿಕ ಅವಶೇಷವೆಂಬಂತೆ ಇರಿಸಿಕೊಳ್ಳುತ್ತಿದ್ದಾರೆಂದು ತಿಳಿದಮೇಲೆ, ಅವುಗಳ ಮಾರಾಟ ಮಾಡುತ್ತಿರಲಿಲ್ಲ. ಮದುವೆಯಾದಾಗಿನಿಂದ ತಮ್ಮ ಮಲಗುವ ಕೋಣೆಯನ್ನು ಅಲಂಕರಿಸಿದ್ದ ರೆಮೆಡಿಯೋಸ್‌ಳ ಬೊಂಬೆಗಳನ್ನೆಲ್ಲ ಒಟ್ಟುಗೂಡಿಸಿ ಅಂಗಳದಲ್ಲಿ ಬೆಂಕಿಹಚ್ಚಿದ. ಎಲ್ಲವನ್ನು ಗಮನಿಸುತ್ತಿದ್ದ ಉರ್ಸುಲಾ, ಮಗನನ್ನು ತಡೆಯಲಾಗದಿದ್ದರೂ "ನಿನ್ನದು ಕಲ್ಲು ಹೃದಯ" ಎಂದು ದೂರಿದಳು. "ಇದು ಹೃದಯದ ಪ್ರಶ್ನೆ ಅಲ್ಲ, ಕೋಣೆ ತುಂಬ ನುಸಿ ತುಂಬಿಕೊಂಡಿದೆ" ಎಂದು ಸಮಾಧಾನ ಹೇಳಿದ.

ಅಮರಾಂತಾ ಶವವಸ್ತ್ರವನ್ನು ಹೆಣೆಯುತ್ತಿದ್ದಳು. ಫರ್ನಾಂಡಾಗೆ, ಅಮರಾಂತಾ ಆಗಾಗ ಮೆಮೆಗೆ ಪತ್ರಬರೆಯುತ್ತಿರುವುದು, ಉಡುಗೊರೆ ಕಳಿಸಿಕೊಡುವುದು – ಇದೆಲ್ಲಾ ಯಾಕೆ ಮಾಡುತ್ತಿದ್ದಾಳೆಂದು ಅರ್ಥಮಾಡಿಕೊಳ್ಳಲಾಗಲಿಲ್ಲ. ಅದೇ ಸಮಯದಲ್ಲಿ ಜೋಸ್ ಆರ್ಕಾಡಿಯೊನ ಹೆಸರನ್ನೂ ಕೇಳಿಸಿಕೊಳ್ಳಲು ಇಷ್ಟಪಡುತ್ತಿರಲಿಲ್ಲ. "ಅವರು ಯಾಕೆಂದು ಕಾರಣ ತಿಳಿಯದೆ ಸಾಯುತ್ತಾರೆ" ಎಂಬ ಉತ್ತರವನ್ನು ಉರ್ಸುಲಾ ಮೂಲಕ ತಿಳಿಯಲು ಪ್ರಯತ್ನಿಸಿದ. ಫರ್ನಾಂಡಾಳಿಗೆ ನೀಡಿದಳು. ಈ ಉತ್ತರ, ಫರ್ನಾಂಡಾಳ ಹೃದಯದಲ್ಲಿ ಎಂದಿಗೂ ಸ್ಪಷ್ಟವಾಗದ ಒಗಟಿನಂತೆ ನೆಲೆಯೂರಿತು. ಎತ್ತರವಾಗಿ, ವಿಶಾಲ ಭುಜಗಳುಳ್ಳ ಹೆಮ್ಮೆಯ ಮತ್ತು ಯಾವಾಗಲೂ ಲೇಸಿನ ಹಲವು ಒಳಲಂಗಗಳನ್ನು ಧರಿಸಿ, ಎಷ್ಟೋ ವರ್ಷಗಳಿಂದಲೂ ಕೆಟ್ಟ ನೆನಪುಗಳನ್ನು ಸಹಿಸಿಕೊಂಡು, ಕನ್ಯತ್ವದ ಸಂಕೇತವಾಗಿ ಬೂದಿಯ ಕ್ರಾಸನ್ನು ಹಣೆ ಮೇಲಿರಿಸಿಕೊಂಡಿದ್ದ ಅಮರಾಂತಾ, ತನ್ನ ಕೈ ಮೇಲಿದ್ದ ಕಪ್ಪು ಬ್ಯಾಂಡೇಜನ್ನು ಮಲಗುವಾಗಲೂ ತೆಗೆಯುತ್ತಿರಲಿಲ್ಲ. ತೆಗೆದಾಗ ಅದನ್ನು ತಾನೇ ಒಗೆದು ಇಸ್ತ್ರಿಮಾಡಿ ಇಟ್ಟುಕೊಳ್ಳುತ್ತಿದ್ದಳು. ಅವಳ ಸಮಯವೆಲ್ಲ ಶವವಸ್ತ್ರವನ್ನು ಹೆಣೆಯುವುದರಲ್ಲೇ ಕಳೆಯುತ್ತಿತ್ತು. ನಿಜ ಹೇಳಬೇಕೆಂದರೆ, ದಿನವೆಲ್ಲ ಹೆಣೆದದ್ದನ್ನು ರಾತ್ರಿ ಬಿಚ್ಚುತ್ತಿದ್ದಳು. ಮತ್ತೆ ಬೆಳಿಗ್ಗೆ ಹೆಣೆಯುತ್ತಿದ್ದಳು. ಹೀಗವಳು ತನ್ನ ಏಕಾಕಿತನವನ್ನು ಮರೆಯಲಿಕ್ಕಾಗಿ ಮಾಡದೆ ಅದನ್ನು ಮತ್ತಷ್ಟು ಪೋಷಿಸುವುದಕ್ಕಾಗಿ ಮಾಡುತ್ತಿದ್ದಳು.

ತಿರಸ್ಕಾರಕ್ಕೆ ಒಳಗಾಗಿದ್ದ ವರ್ಷಗಳಲ್ಲಿ ಫರ್ನಾಂಡಾಳಿಗೆ ಉಂಟಾದ ಒಂದೇ ಒಂದು ಚಿಂತೆಯೆಂದರೆ, ತನ್ನ ಮೊದಲ ರಜೆ ದಿನಗಳನ್ನು ಕಳೆಯಲು ಮೆಮೆ ಮನೆಗೆ ಬಂದಾಗ ಅರೆಲಿಯಾನೊ ಸೆಗುಂಡೊ ಮನೆಯಲ್ಲಿ ಇರುವುದಿಲ್ಲ ಎನ್ನುವುದಾಗಿತ್ತು. ಅವನ ಬಿಡುವಿಲ್ಲದ ಚಟುವಟಿಕೆ ಭಯವನ್ನು ಸ್ವಲ್ಪಮಟ್ಟಿಗೆ ದೂರಮಾಡಿತು. ಗಂಡಹೆಂಡಿರು ಒಂದು ಒಪ್ಪಂದಕ್ಕೆ ಬಂದರು. ಅವಳು ಇರುವಷ್ಟೂ ದಿನ ಅರೆಲಿಯಾನೊ ಸೆಗುಂಡೊ ಮನೆಯೊಂದಿಗೆ ಇಲ್ಲವೆಂಬ ಭಾವನೆಗಾಗಲೀ, ಮನೆಯಲ್ಲಿ ಕಷ್ಟಗಳಿವೆ ಎನ್ನುವ ಸೂಕ್ಷ್ಮ

ಅರಿವಿಗಾಗಲಿ ಅವಕಾಶವಿಲ್ಲದಂತೆ ನಡೆದುಕೊಳ್ಳಬೇಕೆಂದು ನಿರ್ಧರಿಸಿದರು. ಪ್ರತಿವರ್ಷ ಎರಡು ತಿಂಗಳು ಅರೆಲಿಯಾನೊ ಸೆಗುಂಡೊ ಆದರ್ಶಪತಿಯ ಪಾತ್ರವನ್ನು ಅಚ್ಚುಕಟ್ಟಾಗಿ ನಿರ್ವಹಿಸಿದ. ಐಸ್‌ಕ್ರೀಮ್ ಬಿಸ್ಕತ್ತು ಇತ್ಯಾದಿ ಇತ್ಯಾದಿಗಳಿಂದ ಪಾರ್ಟಿಗಳನ್ನು ಕೊಟ್ಟ. ಶಾಲೆಯ ಹುಡುಗಿಯರ ಸಂತೋಷವನ್ನು ತನ್ನ ಕ್ಲ್ಯಾವಿಕಾರ್ಡ್ ಸಂಗೀತದ ಮೂಲಕ ಮತ್ತಷ್ಟು ಹೆಚ್ಚಿಸಿದಳು. ಇದೆಲ್ಲದರಿಂದ ಹುಡುಗಿಗೆ ತಾಯಿಯ ಸ್ವಭಾವ ಬಂದಿಲ್ಲವೆಂಬುದು ಸ್ಪಷ್ಟವಾಯಿತು. ಅವಳು ಅಮರಾಂತಾಳ ಪ್ರತಿರೂಪವಾಗಿದ್ದಳು. ಪೀತ್ರೋ ಕ್ರೆಸ್ಪಿಯ ಬಗ್ಗೆ ಇದ್ದ ಗಾಢ ಪ್ರೀತಿಯು ಅವಳ ಹೃದಯದ ದಿಕ್ಕನ್ನು ಬದಲಿಸುವವರೆಗೆ, ಹನ್ನೆರಡು ಹದಿನಾಲ್ಕನೆ ವಯಸ್ಸಿನಲ್ಲೆ ಹೀಗೆಯೇ ಹಾಡುತ್ತಾ ಕುಣಿಯುತ್ತಾ ತಣಿಸುತ್ತಿದ್ದಳು. ಇವಳಲ್ಲಿ ಅಮರಾಂತಾಳಲ್ಲಿದ್ದ ಅಸಮಾಧಾನ ಇರಲಿಲ್ಲ ಅಷ್ಟೆ ವ್ಯತ್ಯಾಸ. ಮೆಮೆ ಅಮರಾಂತಾಳಂತಾಗಲೀ ಉಳಿದವರಂತಾಗಲಿ ಇರದೆ, ಮನೆಯ ಹಣೆಬರಹವನ್ನು ತೋರ್ಪಡಿಸಿಕೊಳ್ಳದೆ ಸಂಪೂರ್ಣವಾಗಿ ಪ್ರಪಂಚದ ಸಾಂಗತ್ಯದಲ್ಲಿ ಇದ್ದಳು. ಮಧ್ಯಾಹ್ನ ಎರಡುಗಂಟೆಯಲ್ಲಿ ಅದ್ಭುತವಾದ ಶಿಸ್ತಿನೊಂದಿಗೆ ಕ್ಲ್ಯಾವಿಕಾರ್ಡ್ ಪಾಠಗಳನ್ನು ಅಭ್ಯಾಸ ಮಾಡುತ್ತಿದ್ದಳು. ಅವಳಿಗೆ ಮನೆಯ ವಾತಾವರಣ ತುಂಬ ಹಿಡಿಸಿತು. ತಾನು ಬಂದಾಗ ತನ್ನಂಥ ಪ್ರಾಯದವರ ಉತ್ಸಾಹ ಹೇಗಿರಬಹುದೆಂಬ ಕನಸು ಕಂಡಳು. ತನ್ನ ತಂದೆಯ ಅತಿಯಾದ ಆರೈಕೆ, ರಜೆಯ ಸಂಭ್ರಮದ ಸೃಷ್ಟಿಯನ್ನು ಮೆಚ್ಚಿಕೊಂಡಳು. ನಿಜವಾದ ಆಘಾತ ಪರಂಪರೆಯ ನಾಂದಿಯ ಸೂಚನೆ ದೊರೆತದ್ದು, ಮೆಮೆ ತಮ್ಮ ಮನೆಯಲ್ಲಿ ಒಂದು ವಾರದ ರಜೆ ಕಳೆಯಲು ನಾಲ್ಕು ಜನ ಸನ್ಯಾಸಿನಿಯರನ್ನು (ನನ್ಸ್) ಮತ್ತು ಅರವತ್ತೆಂಟು ಮಂದಿ ಸಹಪಾಠಿಗಳನ್ನು, ಯಾವುದೇ ಪೂರ್ವ ಸೂಚನೆಯಿಲ್ಲದೆ ತನ್ನ ಸ್ವಂತ ಇರಾದೆಯಿಂದ ಆಹ್ವಾನಿಸಿದ್ದಳು.

"ಭಯಂಕರ ! ಇವಳೂ ಕೂಡಾ ಇವಳ ಅಪ್ಪನಷ್ಟೇ ಒರಟು" ಎಂದು ಹೇಳುತ್ತಾ ತಲೆಚಚ್ಚಿಕೊಂಡಳು.

ಇಷ್ಟು ಜನರ ಅಗತ್ಯ ಪೂರೈಸಲು, ಅಕ್ಕಪಕ್ಕದವರಿಂದ ಹಾಸಿಗೆ ಮಂಚಗಳನ್ನು ಎರವಲು ತಂದರು. ಸರದಿಯಂತೆ ಒಂಭತ್ತು ಸಲ ಊಟದ ವ್ಯವಸ್ಥೆ ಮಾಡಲಾಯಿತು. ಸ್ನಾನಕ್ಕೆ ಸಮಯದ ನಿಗದಿ ಮಾಡಬೇಕಾಯಿತು. ಗಂಡಸರ ಗುಂಡಿಗಳೊಂದಿಗೆ ಇದ್ದ ನೀಲಿ ಸಮವಸ್ತ್ರದ ಹುಡುಗಿಯರು ಅಲ್ಲಿಂದಲ್ಲಿಗೆ ಇಲ್ಲಿಂದಲ್ಲಿಗೆ ಇಡೀ ದಿನ ಓಡಾಡಲು ಸಾಧ್ಯವಾಗುವುದಿಲ್ಲವೆನಿಸಿ ನಲ್ವತ್ತು ಸ್ಟೂಲುಗಳನ್ನು ಎರವಲು ತರಬೇಕಾಗಿ ಬಂತು. ಹೀಗೆಲ್ಲ ವ್ಯವಸ್ಥೆಗಳನ್ನು ಮಾಡಬೇಕಾಯಿತಾದರೂ ಅವರ ಆಗಮನ ಯಶಸ್ವಿಯಾಗಲಿಲ್ಲ. ತಿಂಡಿ, ಊಟ ಮಾಡುವಾಗಲೆಲ್ಲ ಮಾತು ಗದ್ದಲಗಳಿಂದಾಗಿ ಬೇಗ ಬೇಗ ಮುಗಿಸದೆ ಮುಂದಿನವರಿಗೆ ತಡವಾಗುತ್ತಿತ್ತು. ಇವರ ಈ ನಿಧಾನದ ಚಟುವಟಿಕೆಗಳಿಂದ ಬನಾನಾ ಪ್ಲಾಂಟೇಷನ್‌ಗೆ ಭೇಟಿ ಕೊಡುವುದು ಒಮ್ಮೆ ಮಾತ್ರ ಸಾಧ್ಯವಾಯಿತು. ರಾತ್ರಿಯಾಗುವಷ್ಟು ಹೊತ್ತಿಗೆ, ದಣಿವಿಲ್ಲದೆ ಅಂಗಳದಲ್ಲಿ ಕುಳಿತು ಬೇರಾಗ ಸುರಾಗಗಳಲ್ಲಿ ಎತ್ತರದ ದನಿಯಲ್ಲಿ ಹಾಡುತ್ತಾ ಮೈಮರೆತು ಇರುತ್ತಿದ್ದ ಈ ಹುಡುಗಿಯರನ್ನು ಅಲ್ಲಿಂದ ಹೊರಡಿಸುವಷ್ಟರಲ್ಲಿ ಕ್ರೈಸ್ತ ಸನ್ಯಾಸಿನಿಯರಿಗೆ ಸಾಕುಸಾಕಾಗಿ ಹೋಗುತ್ತಿತ್ತು. ಅವರ ದಾರಿಗೆ ಅಡ್ಡಬಾರದ

ರೀತಿಯಲ್ಲಿ ಆದಷ್ಟೂ ಎಚ್ಚರವಹಿಸಿ ಕೂತಿದ್ದರೂ ಒಂದು ದಿನ ಅವಳನ್ನು ತುಳಿದು ಹಾಕುವ ಹಂತಕ್ಕೆ ಬಂದಿದ್ದರು. ಮತ್ತೊಂದು ದಿನ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಹುಡುಗಿಯರು ಇರುವುದನ್ನೂ ಗಮನಿಸದೆ ಚೆಸ್ಟ್‌ನಟ್ ಮರದ ಬಳಿ ಮೂತ್ರ ವಿಸರ್ಜನೆ ಮಾಡಿದ್ದಕ್ಕೆ ಮುಜುಗರ ಪಟ್ಟಿದ್ದರು. ಅಮರಾಂತಾ ಸೂಪಿಗೆ ಒಂದು ಹಿಡಿ ಉಪ್ಪು ಹಾಕುವುದರಲ್ಲಿದ್ದಾಗ ಒಬ್ಬ ಸನ್ಯಾಸಿನಿ ಪ್ರವೇಶಿಸಿ ಅದೇನೆಂದು ಕೇಳಿದಾಗ, ಅವರಿಗೆ ಗಾಭರಿಯಾಗುವಂತೆ "ವಿಷ" – ಎಂದು ಉತ್ತರಿಸಿದಳು.

ಅವರು ಇಲ್ಲಿಗೆ ಬಂದ ರಾತ್ರಿ, ಹುಡುಗಿಯರೆಲ್ಲ ಒಂದು ನಿಯಮ ಮಾಡಿಕೊಂಡಿದ್ದರು. ಮಲಗುವುದಕ್ಕೆ ಮೊದಲು ಒಬ್ಬೊಬ್ಬರೂ ಬಾತ್‌ರೂಮಿಗೆ ಹೋಗಿಬರಬೇಕೆಂದು. ಒಬ್ಬರಾದ ಮೇಲೆ ಒಬ್ಬರ ಸರದಿಯಂತೆ ಮುಂದುವರೆದಿದ್ದ ಈ ಕ್ರಮ ಕೊನೆಗೆ ಬೆಳಗಿನ ಜಾವ ಒಂದು ಗಂಟೆಯಲ್ಲೂ ಇನ್ನೂ ಕೆಲವರು ಕಡೆಗೆ ಉಳಿದಿದ್ದರು. ಈ ಸಮಸ್ಯೆಗೆ ಪರಿಹಾರವಾಗಿ ಫರ್ನಾಂಡಾ ಪ್ರತಿಯೊಬ್ಬರಿಗೂ ಅವರವರ ರಾತ್ರಿ ಉಪಯೋಗಕ್ಕೆಂದು ಎಪ್ಪತ್ತೆರಡು ಪಾತ್ರೆಗಳನ್ನು ತಂದು ನೀಡಿದಳು. ಇದರಿಂದ ರಾತ್ರಿಯ ಸಮಸ್ಯೆ ಬೆಳಿಗ್ಗೆ ಸಮಯಕ್ಕೆ ಅಂಟಿಕೊಂಡಿತು. ಹುಡುಗಿಯರು ಮೂತ್ರ ಪಾತ್ರೆಗಳನ್ನು ತೊಳೆಯಲು ಈಗ ಸಾಲುಗಟ್ಟಬೇಕಾಯಿತು. ಕೆಲವರಿಗೆ ಜ್ವರ ಬಂತು, ಮತ್ತೆ ಕೆಲವರಿಗೆ ಸೊಳ್ಳೆ ಕಡೀತು, ಬಹಳಷ್ಟು ಮಂದಿ ಸಾಕಷ್ಟು ನಿರೋಧಶಕ್ತಿಯನ್ನು ಪ್ರದರ್ಶಿಸಿದರು. ವಿಪರೀತ ಬಿಸಿಲು, ಸೆಕೆ ಇದ್ದಾಗ, ತೋಟದಲ್ಲಿ ಓಡಾಡಿ ನಿವಾರಿಸಿಕೊಳ್ಳುತ್ತಿದ್ದರು. ಅವರೆಲ್ಲ ಹೋದಮೇಲೆ, ಉಳಿದದ್ದು ಅನಾಹುತಗಳು. ಹೂಗಳು ಹೊಸಕಿ ಹೋಗಿದ್ದವು, ಪೀಠೋಪಕರಣಗಳು ಮುರಿದಿದ್ದವು. ಗೋಡೆಗಳೆಲ್ಲ ಚಿತ್ರಗಳಿಂದ ಬರಹಗಳಿಂದ ತುಂಬಿಹೋಗಿದ್ದವು. ಇದೆಲ್ಲವನ್ನು, ಸದ್ಯ ಅವರು ಹೋದರಲ್ಲ ಎನ್ನುವ ಸಂತೋಷಕ್ಕಾಗಿ, ಅವರನ್ನು ಫರ್ನಾಂಡಾ ಕ್ಷಮಿಸಿಬಿಟ್ಟಳು. ಎರವಲು ತಂದಿದ್ದ ಹಾಸಿಗೆಗಳನ್ನು, ಸ್ಟೂಲುಗಳನ್ನು ಹಿಂತಿರುಗಿಸಿದಳು. ಮೂತ್ರ ವಿಸರ್ಜನೆಗಾಗಿದ್ದ ಪಾತ್ರೆಗಳನ್ನು ಮೆಲ್‌ಕಿಯಾಡ್ಸ್‌ನ ಕೋಣೆಯಲ್ಲಿ ಇರಿಸಿದಳು. ಬೀಗದೊಂದಿಗಿದ್ದ ಆ ಕೋಣೆ ಮೊದಲಿನಿಂದಲೂ ಆ ಮನೆಯ ಆಧ್ಯಾತ್ಮಿಕ ಶಕ್ತಿಯೊಂದರ ಕೇಂದ್ರವಾಗಿದ್ದದ್ದು, ಅಂದಿನಿಂದಲೂ ಅದನ್ನು ಮೂತ್ರ ಪಾತ್ರೆಯ ಕೋಣೆ ಎಂದು ಗುರುತಿಸಲಾಗಿತ್ತು. ಕರ್ನಲ್ ಅರೆಲಿಯಾನೊ ಬ್ಯುಂಡಿಯಾಗೆ ಅದು ಅನ್ವರ್ಥನಾಮವೆನಿಸಿತು. ಮೊದಲಿನಿಂದಲೂ ಮನೆಯವರು ಮೆಲ್‌ಕಿಯಾಡ್ಸ್‌ನ ಕೋಣೆ ಧೂಳು, ವಿನಾಶ ****** ಹೊರತಾಗಿ ಉಳಿದಿರುತ್ತೆ ಎಂದು ನಂಬಿದ್ದರೂ ಅದು ಈಗ ಸಗಣಿಗುಪ್ಪೆಯಾಗಿದೆ. ಅವನಿಗೆ ಯಾರು ಸರಿ ಯಾರು ತಪ್ಪು ಎನ್ನುವುದರ ಬಗ್ಗೆ ತಲೆಕೆಡಿಸಿಕೊಳ್ಳಲಿಲ್ಲವಾದರೂ ಫರ್ನಾಂಡಾ ಮೂತ್ರ ಪಾತ್ರೆಗಳನ್ನು ಅದರಲ್ಲಿ ಎಸೆಯಲು ಬಂದು ಹೋಗುವಾಗಲೆಲ್ಲ ಅವನ ಕೆಲಸಕ್ಕೆ ಸ್ವಲ್ಪ ತೊಂದರೆ ಆಗುತ್ತಿತ್ತು.

ಆ ದಿನಗಳಲ್ಲಿ ಜೋಸ್ ಆರ್ಕಾಡಿಯೊ ಸೆಗುಂಡೊ ಮನೆಯಲ್ಲಿ ಕಾಣಿಸಿಕೊಂಡ ನಡುಮನೆ ಹಾದು, ಯಾರೊಂದಿಗೂ ಮಾತೂ ಆಡದೆ ನೇರವಾಗಿ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಜೊತೆ ಮಾತಾಡಲು ವರ್ಕ್‌ಷಾಪ್ ಒಳಗೆ ಹೋದ.

ಉರ್ಸುಲಾ ಅವನನ್ನು ನೋಡದಿದ್ದರೂ ಅವನ ಫೋರ್‌ಮನ್ ಬೂಟುಗಳ ಸದ್ದಿನಿಂದ ಅರಿತಳು. ಮನೆಯವರಿಂದ ಅವನು ಎಷ್ಟು ದೂರ ಹೋಗಿದ್ದಾನೆಂಬುದರ ಅರಿವಿನಿಂದ ಅಚ್ಚರಿಗೊಂಡಳು. ಎಲ್ಲರನ್ನೂ ಇರಲಿ ಕಡೆಗೆ ತನ್ನಂತೆಯೇ ಇರುವ, ಬಾಲ್ಯದಲ್ಲಿ ಜೊತೆಯಾಗಿ ಆಟವಾಡುತ್ತಿದ್ದ, ಹೀಗಿದ್ದರೂ ಸ್ವಭಾವದಲ್ಲಿ ಭಿನ್ನವಾಗಿದ್ದ ಅವಳಿ ಸೋದರನನ್ನೂ ದೂರಮಾಡಿಕೊಂಡಿದ್ದ. ಅವನು ನೇರ, ಶಿಸ್ತುಬದ್ಧ, ಯೋಚನಾಪರ. ಚಿಂತೆ, ವಿಷಾದ ಛಾಯೆಗಳಿಂದ ಶರದದ ಬಣ್ಣವನ್ನು ಬಿಂಬಿಸುತ್ತಿದ್ದ. ಅವನು ಬಹಳಮಟ್ಟಿಗೆ ತಾಯಿ ಸಾಂತಾ ಸೋಫಿಯಾ ದ ಲಾ ಪೀದಾದಳನ್ನು ಹೋಲುತ್ತಿದ್ದ. ಮನೆಯವರ ಬಗ್ಗೆ ಮಾತಾಡುವಾಗಲೆಲ್ಲ ಇವನ ಬಗ್ಗೆ ಮರೆಯುತ್ತಿದ್ದುದಕ್ಕಾಗಿ ತನ್ನನ್ನೇ ಹಳಿದುಕೊಂಡಳು. ಮತ್ತೆ ಮನೆಗೆ ಬಂದದ್ದನ್ನು ಗಮನಿಸಿದಳಲ್ಲದೆ, ಕೆಲಸದ ಸಮಯದಲ್ಲಿ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಅವನನ್ನು ಬರಮಾಡಿಕೊಂಡಿರುವುದು ಅವಳಿಗೆ ಹಳೆಯ ನೆನಪುಗಳ ಮೂಲಕ, ಅವನು ಚಿಕ್ಕವನಾಗಿದ್ದಾಗ ತನ್ನ ಅವಳಿ ಸೋದರನ ಜೊತೆ ಜಾಗಗಳನ್ನು ಬದಲಾಯಿಸುತ್ತಿದ್ದುದನ್ನು ಖಚಿತಪಡಿಸಿಕೊಂಡಳು. ಅರೆಲಿಯಾನೊ ಹೆಸರು ಅವನದಾಗಿತ್ತೆ ಹೊರತು ಇವನದಾಗಿರಲಿಲ್ಲ. ಅವನ ಜೀವನದ ವಿವರಗಳು ಯಾರಿಗೂ ತಿಳಿದಿರಲಿಲ್ಲ. ಆದರೆ ಒಮ್ಮೆ ಕೆಲವು ವಿವರಗಳು ತಿಳಿದುಬಂದವು. ಅವನಿಗೆ ನಿಶ್ಚಿತ ನೆಲೆ ಇರಲಿಲ್ಲ. ಹುಂಜಗಳನ್ನು ಪಿಲಾರ್ ತರ್ನಿರಾ ಮನೆಯಲ್ಲಿ ಸಾಕಿ ಬೆಳೆಸಿದ. ಕೆಲವು ಸಲ ಅಲ್ಲಿಯೇ ಮಲಗಲು ಉಳಿದುಕೊಳ್ಳುತ್ತಿದ್ದ. ಆದರೆ ಸಾಮಾನ್ಯವಾಗಿ ಹೆಚ್ಚು ಕಾಲವನ್ನು ಫ್ರೆಂಚ್ ಮಹಿಳೆಯರ ಜೊತೆ ಕಳೆಯುತ್ತಿದ್ದ – ಎನ್ನುವ ವಿಷಯಗಳು ತಿಳಿದುಬಂದವು. ಪ್ರೀತಿಯ ನಂಟಾಗಲಿ ಮಹತ್ವಾಕಾಂಕ್ಷೆಗಳಾಗಲೀ ಯಾವುದೇ ಇಲ್ಲದೆ, ಸುಮ್ಮನೆ, ಉರ್ಸುಲಾಳ ಸುತ್ತ ತಿರುಗುವ ಗ್ರಹಗಳಂತೆ, ಅಂಡಲೆಯುತ್ತಿದ್ದ.

ಹಿಂದೊಂದು ದಿನ ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್, ಜೋಸ್ ಆರ್ಕಾಡಿಯೊ ಸೆಗುಂಡೊನನ್ನು ಸೇನಾಠಾಣೆಗೆ ಕರೆದುಕೊಂಡು ಹೋಗಿದ್ದ. ಅಲ್ಲಿ ಮರಣದಂಡನೆ ಶಿಕ್ಷೆ ಹೇಗಾಗುತ್ತದೆ ಎಂದು ತೋರಿಸುವುದಕ್ಕಿಂತ ಸಾಯುವ ಮನುಷ್ಯನ ದುಃಖಪೂರಿತವಾದ, ವಿಷಾದ ವ್ಯಂಗ್ಯ ನಗೆಯನ್ನು ನೋಡಿ ಜೀವನಪರ್ಯಂತ ಮರೆಯದಿರಲಿ ಎಂದು ತೋರಿಸಿಕೊಡುವ ಉದ್ದೇಶದಿಂದ ಕರೆದುಕೊಂಡು ಹೋಗಿದ್ದ ಆ ದಿನದಿಂದ ನಿಜವಾಗಿಯೂ ಅವನು ಕುಟುಂಬದ ಸದಸ್ಯನಾಗಿರಲಿಲ್ಲ ಮತ್ತೂ ಆಗುವುದೂ ಇಲ್ಲ. ಅವನು ಹುಡುಗನಾಗಿದ್ದಾಗಿನ ಹಳೆಯ ನೆನಪು ಅದೊಂದೇ ಆಗಿರಲಿಲ್ಲ. ಮತ್ತೊಂದೆಂದರೆ ಒಬ್ಬ ಮುದುಕ ಹಳೆಕಾಲದ ನಿಲುವಂಗಿ ಮತ್ತು ಕಾಗೆ ರೆಕ್ಕೆಗಳಂತಿದ್ದ ಹ್ಯಾಟುಹಾಕಿದವನು ಹೇಳಿದ. ಅಲೌಕಿಕವಾದ ಅಚ್ಚರಿಯ ಸಂಗತಿಗಳು, ಅವುಗಳನ್ನು ಯಾವ ಕಾಲದ್ದೆಂದು ನಿರ್ದಿಷ್ಟವಾಗಿ ಹೇಳಲು ಬರುತ್ತಿರಲಿಲ್ಲ. ಅದೊಂದು ಅಸ್ಪಷ್ಟ ನೆನಪು. ಯಾವ ನೀತಿಯನ್ನಾಗಲೀ, ಮನೋವ್ಯಥೆಯನ್ನಾಗಲಿ ಒಳಗೊಂಡಿದ್ದಾಗಿರಲಿಲ್ಲ. ಗುಂಡಿಗೆ ಬಲಿಯಾಗಿದ್ದ ಮನುಷ್ಯನ ನೆನಪಿಗೆ ವಿರುದ್ಧವಾದ ಸಂಗತಿಗಳೇ ಹಾಗೆ ನೋಡಿದರೆ, ಅವನಿಗೊಂದು ಅದು ಸಾಯುವವರೆಗೆ ದಿಕ್ಕು ತೋರಿಸಿದ್ದು! ಬೆಳೆದಂತೆಲ್ಲ ನೆನಪು ಸ್ಪಷ್ಟವಾಗುತ್ತ, ಅವನನ್ನು ಕಾಲ ಅದಕ್ಕೆ ಹತ್ತಿರ ಹತ್ತಿರ ತರುತ್ತಿರುವಂತೆನಿಸುತ್ತಿತ್ತು. ಜೋಸ್ ಆರ್ಕಾಡಿಯೊ ಸೆಗುಂಡೊನನ್ನು, ಉರ್ಸುಲಾ ಕರ್ನಲ್ ಅರೆಲಿಯಾನೊ ಬ್ಯುಂಡಿಯಾನನ್ನು

ಸೆರೆಯಿಂದ ಹೊರಗೆ ಬರುವಂತೆ ಮಾಡಲು ಬಳಸಿಕೊಂಡಳು. "ಅವನನ್ನು ಸಿನಿಮಾಗಳಿಗೆ ಕರೆದುಕೊಂಡು ಹೋಗು.... ಸಿನಿಮಾ ನೋಡದಿದ್ದರೂ ಒಂದಿಷ್ಟು ತಾಜಾ ಗಾಳಿಯಾದರೂ ಸಿಗುತ್ತೆ" ಎಂದು ಉರ್ಸುಲಾ ಹೇಳಿದ್ದಳು. ಆದರೆ ಕರ್ನಲ್‌ನಂತೆ ಇವನ ಮೇಲೂ ಯಾವ ಪ್ರಭಾವವೂ ಬೀಳಲಿಲ್ಲ. ಉರ್ಸುಲಾಗೆ ಇದು ಅರ್ಥವಾಗಲು ಬಹಳ ಸಮಯವೇನೂ ಹಿಡಿಸಲಿಲ್ಲ. ಅವರಿಬ್ಬರೂ ಸಹ ಪ್ರೀತಿಗೆ ಒಳಗಾಗದ ಅಭೇದ್ಯ ಕವಚವನ್ನು ಧರಿಸಿದಂತಿತ್ತು. ಅವಳಿಗಾಗಲೀ, ಮನೆಯವರಿಗಾಗಲೀ ಇಬ್ಬರೂ ವರ್ಕ್‌ಷಾಪಿನ ಒಳಗೆ ಸೇರಿಕೊಂಡು ಏನು ಮಾತಾಡುತ್ತಾರೆ ಇಷ್ಟು ಹೊತ್ತು ಎಂಬುದು ತಿಳಿದಿರಲಿಲ್ಲ. ಒಂದಂತೂ ಅವಳಿಗೆ ಸ್ಪಷ್ಟವಾಗಿತ್ತು. ಕುಟುಂಬದಲ್ಲಿ ಇವರಿಬ್ಬರು ಮಾತ್ರವೇ ಪರಸ್ಪರ ಸೆಳೆತಕ್ಕೆ ಯಾವುದೊ ಒಂದು ಸಮಾನ ಆಸಕ್ತಿಯಿಂದ ಒಳಗಾಗಿದ್ದು ಎಂದು.

ಸತ್ಯ ಏನೆಂದರೆ, ಕರ್ನಲ್‌ನನ್ನು ತನ್ನ ಸ್ವಬಂಧನದಿಂದ ಹೊರಗೆ ತರುವುದು ಜೋಸ್ ಆರ್ಕಾಡಿಯೊ ಸೆಗುಂಡೊನಿಗೂ ಸಾಧ್ಯವಾಗಲಿಲ್ಲ. ಶಾಲೆ ಹುಡುಗಿಯರ ದಂಡು ಬಂದು ಹೋದಾಗಿನಿಂದ ಅವನ ಸಹನೆಯ ಮಿತಿ ಮತ್ತಷ್ಟು ಕುಗ್ಗಿತ್ತು. ರೆಮೆಡಿಯೋಸ್‌ಳ ಪ್ರೀತಿಯ ಗೊಂಬೆಗಳನ್ನು ನುಸಿಹತ್ತುತ್ತದೆ ಎನ್ನುವ ನೆಪದಲ್ಲಿ ಧ್ವಂಸಮಾಡಿದ್ದರೂ ವರ್ಕ್‌ಷಾಪಿನಲ್ಲಿ ಮಂಚಹಾಕಿಕೊಂಡಿದ್ದು ತನ್ನ ಅಗತ್ಯಗಳನ್ನು ನೋಡಿಕೊಳ್ಳಲು ಮಾತ್ರ. ಅಲ್ಲಿಂದೆದ್ದು ಅಂಗಳಕ್ಕೆ ಬಂದು ಹೋಗುತ್ತಿದ್ದ. ಅವರಿಬ್ಬರ ನಡುವೆ ನಡೆದ ಒಂದು ಸಣ್ಣ ಮಾತುಕತೆಯ ಬಗ್ಗೆಯೂ ತಿಳಿಯಲಾಗಲಿಲ್ಲ. ಊಟಕ್ಕೆಂದು ಇರಿಸಿದ್ದ ವ್ಯಂಜನಗಳ ಬಗ್ಗೆಯಾಗಲೀ, ಅವು ಏನಾಗಿದೆ, ಮಾಂಸ ತಣ್ಣಗಾಗಿದೆಯೇ ಎಂದು ನೋಡುವುದಾಗಲಿ ಮಾಡದೆ ತನ್ನ ಕೆಲಸದಲ್ಲಿ ತಾನು ತೊಡಗಿರುತ್ತಾನೆಂಬುದನ್ನು ಅವಳು ಬಲ್ಲವಳಾಗಿದ್ದಳು. ನಿಷ್ಪ್ರಯೋಜಕವಾದ ಯುದ್ಧಕ್ಕೆ ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್ ಸಹಾಯವನ್ನು ನಿರಾಕರಿಸಿದಾಗಿನಿಂದ ಅವನು ಮತ್ತಷ್ಟು ಕಠಿನವಾಗುತ್ತ ಬಂದ. ತನ್ನನ್ನು ತನ್ನೊಳಗೇ ಬಂಧಿಸಿಕೊಂಡು ಬಿಟ್ಟ. ಮನೆಯವರ ಪಾಲಿಗೆ ಅವನು ಸತ್ತಂತಾಗಿದ್ದ. ಅಕ್ಟೋಬರ್ ಹನ್ನೊಂದರಂದು ಅವನು ಸರ್ಕಸ್ ಪೆರೇಡ್ ನೋಡಲು ಹೊರಗೆ ಬೀದಿಗೆ ಬರುವವರೆಗೂ ಅವನಲ್ಲಿ ಮಾನವ ಸಂವೇದನೆಯನ್ನೇ ಕಾಣಲಾಗದ ಸ್ಥಿತಿಯಲ್ಲಿದ್ದ. ಆ ದಿನ ಕರ್ನಲ್ ಅರೆಲಿಯಾನೊ ಬ್ಯುಂಡಿಯಾಗೆ, ಹಿಂದಿನ ವರ್ಷಗಳಲ್ಲಿ ಇದ್ದಂತಹ ದಿನವಾಗಿತ್ತು. ಕಪ್ಪೆಗಳ ಹುಳುಹುಪ್ಪಟೆಗಳ ಸದ್ದು ಅವನನ್ನು ಐದುಗಂಟೆಗೇ ಎಚ್ಚರಿಸಿತು. ಶನಿವಾರದಿಂದ ಹನಿಸುತ್ತಿದ್ದ ಮಳೆಯ ಸದ್ದು, ಎಲೆಗಳು ಪಿಸುಗುಡುವಂತೆ ಮಾಡುತ್ತಿದ್ದುದನ್ನು ಅವನಿಗೆ ಕೇಳಬೇಕೆನಿಸಲಿಲ್ಲ. ಕಾರಣ ಈಗಾಗಲೇ ಅವನಿಗೆ ಎಲುಬು ಕೊರೆವ ಚಳಿಯ ಅನುಭವ ಸಾಕಾಗಿತ್ತು. ಯಾವಾಗಿನಂತೆ ಕಂಬಳಿ ಸುತ್ತಿಕೊಂಡಿದ್ದ. ಒರಟಾದ ಉದ್ದನೆಯ ಹತ್ತಿಬಟ್ಟೆಯ ಡ್ರಾಯರ್ ಹಾಕಿದ್ದ. ಅವು ಹಳೆ ಮಾದರಿಯದಾಗಿದ್ದರೂ ಅನುಕೂಲಕ್ಕಾಗಿ ಅವುಗಳನ್ನು ಹಾಕುತ್ತಿದ್ದ. ಅದಕ್ಕೆ ಅವನು 'ಗಾತ್ ಡ್ರಾಯರ್ಸ್' ಎಂದೇ ಹೆಸರಿಟ್ಟಿದ್ದ. ಬಿಗಿಯಾದ ಪ್ಯಾಂಟ್ ತೊಟ್ಟುಕೊಂಡ. ಅದರ ಗುಂಡಿಗಳನ್ನು ಹಾಕಿರಲಿಲ್ಲ. ಷರ್ಟ್‌ಕಾಲರ್‌ಗೆ ಚಿನ್ನದ ಗುಂಡಿಗಳನ್ನೂ ಹಾಕಿರಲಿಲ್ಲ. ಅವನು ಸ್ನಾನಮಾಡಲು ಸಿದ್ಧನಾಗುತ್ತಿದ್ದ. ತಲೆಮೇಲೆ ಬ್ಲಾಂಕೆಟ್ಟನ್ನು ಗುಬುರು ಹಾಕಿಕೊಂಡ. ತೊಟ್ಟಿಕ್ಕುತ್ತಿದ್ದ ಮೀಸೆಯ ತುದಿಗಳನ್ನು

ಬೆರಳುಗಳಿಂದ ಉಜ್ಜಿದ, ಮೂತ್ರ ವಿಸರ್ಜನೆಗೆಂದು ಅಂಗಳದತ್ತ ಹೊರಟ. ಸೂರ್ಯ ಮೇಲೇರಲು ಇನ್ನೂ ಸಾಕಷ್ಟು ಸಮಯವಿತ್ತು. ಜೋಸ್ ಆರ್ಕಾಡಿಯೊ ಮಳೆನೀರಿನಿಂದ ಕೊಳೆತಿದ್ದ ತಾಳೆಮರದ ಗರಿಗಳಡಿಯಲ್ಲಿ ತೂಕಡಿಸುತ್ತಿದ್ದ. ನೋಡಿರದ, ಎಂದೂ ನೋಡದಿದ್ದ ತಂದೆಯ ಭೂತ. ಅವನು ಎಚ್ಚರಗೊಂಡು ಮೂತ್ರ ವಿಸರ್ಜನೆ ಮಾಡಿದಾಗ ಬೂಟುಗಳ ಮೇಲೆ ಬೆಚ್ಚನೆಯ ಮೂತ್ರ ಬಿದ್ದಾಗ, ಅರ್ಥವಾಗದ ಆ ಭೂತದ ಮಾತುಗಳನ್ನು ಈಗಲೂ ಕೇಳಿಸಿಕೊಳ್ಳಲಿಲ್ಲ. ಸ್ನಾನದ ಕಾರ್ಯಕ್ರಮವನ್ನು ಮುಂದಕ್ಕೆ ಹಾಕಿದ. ಚಳಿಯಿಂದ ಮತ್ತು ತೇವದಿಂದಾಗಲೀ ಸ್ನಾನವನ್ನು ಮುಂದೂಡಲಿಲ್ಲ. ಆದರೆ ಅಕ್ಟೋಬರ್ ತಿಂಗಳ ಮಂಜು ಅಸಹನೀಯವಾಗಿ ಕವಿದಿತ್ತಾದ್ದರಿಂದ ಸುಮ್ಮನಾದ. ವರ್ಕ್‌ಷಾಪ್‌ನತ್ತ ಹೆಜ್ಜೆಹಾಕುತ್ತಿದ್ದಾಗ ಒಲೆಹಚ್ಚಲು ಉಪಯೋಗಿಸುತ್ತಿದ್ದ ಬತ್ತಿಯ ವಾಸನೆ ಮೂಗಿಗೆ ಬಡಿಯಿತು. ಸಾಂತಾ ಸೋಫಿಯಾ ದಲಾ ಪೀದಾದ್ ಕಾಫಿಗೆ ರೆಡಿ ಮಾಡುತ್ತಿದ್ದುದರಿಂದ ಒಂದೆಸಲ ಸಕ್ಕರೆಯಿಲ್ಲದ ಕಾಫಿ ಮಗ್ಗನ್ನೂ ಜೊತೆಗೆ ತೆಗೆದುಕೊಂಡು ಹೋಗಬಹುದೆಂದು ಕಾದ. ಸಾಂತಾ ಸೋಫಿಯಾ ದ ಲಾ ಪೀದಾದ್ ಪ್ರತಿದಿನ ಕೇಳುತ್ತಿದ್ದಂತೆ ಆ ದಿನವೂ, ದಿನ ಯಾವುದೆಂದು ಪ್ರಶ್ನಿಸಿದಳು. ಅವನು ಮಂಗಳವಾರ. ಹನ್ನೊಂದನೆ ತಾರೀಖು ಎಂದು ಉತ್ತರಿಸಿದ. ಬೆಂಕಿಯ ಜ್ವಾಲೆಯ ಬೆಳಕು ಎಂದೂ ಅಸ್ತಿತ್ವದಲ್ಲಿ ಇರದಂತಿದ್ದ ಅವಳ ಮೇಲೆ ಬೆಳಕು ಚೆಲ್ಲಿತು. ಅದನ್ನು ನೋಡುತ್ತಿದ್ದಂತೆ ದಿಢೀರನೆ ಯಾವುದೊ ಒಂದು ಅಕ್ಟೋಬರ್ ಒಂದರಂದು ಯುದ್ಧದ ಮಧ್ಯದಲ್ಲಿ, ಯಾವ ಹೆಂಗಸಿನ ಜೊತೆಯಲ್ಲಿ ಮಲಗಿದ್ದುದು ನೆನಪಾಯಿತು. ಅವಳು ಇದ್ದದ್ದು ಖಂಡಿತವಾಗಿ ಸತ್ಯ, ಯಾಕೆಂದರೆ ಅವಳು ಒಂದು ಗಂಟೆ ಮುಂಚೆ ಇವತ್ತು ಯಾವ ದಿನ ಎಂದು ಕೇಳಿದ್ದಳು. ಅದು ಇನ್ನೂ ನೆನಪಿದೆ. ಆದರೂ ತನ್ನಲ್ಲಿದ್ದ ಮುಂಗಾಣುವ ಶಕ್ತಿ ಯಾವ ಮಟ್ಟಕ್ಕೆ ತನ್ನ ಕೈಬಿಟ್ಟಿದೆ ಎಂಬುದು ಮಾತ್ರ ತಿಳಿಯಲಿಲ್ಲ. ಕಾಫಿ ಕುದಿಯುತ್ತಿದ್ದಾಗ ಅವನು ಯೋಚಿಸುತ್ತಲೇ ಇದ್ದ. ಕುತೂಹಲವಿತ್ತೆ ಹೊರತು ಯಾವುದೇ ಮನೋವ್ಯಥೆ ಇರಲಿಲ್ಲ. ಅವಳ ಹೆಸರಾಗಲೀ ಮುಖವಾಗಲೀ ಅವನಿಗೆ ನೆನಪಾಗಲು ಸಾಧ್ಯವಿಲ್ಲ. ಯಾಕೆಂದರೆ ಕತ್ತಲಲ್ಲಿ ಯಾವಾಗಲೊ ಬಂದು ಹಾಸಿಗೆ ಸೇರುತ್ತಿದ್ದಳು. ಅವನ ಬದುಕಿನಲ್ಲಿ ಎಷ್ಟೋ ಜನ ಹೆಂಗಸರು ಅವಳ ಹಾಗೆ ಬಂದುಹೋದರು. ಆದರೆ ಮೊದಲ ಭೇಟಿಯಲ್ಲಿಯೇ ದಣಿದಿದ್ದ. ಇನ್ನೇನು ಕಣ್ಣೀರು ತೊಟ್ಟಿಕ್ಕುವ ಸ್ಥಿತಿಯಲ್ಲಿದ್ದಾಗ, ಸಾಯಲು ಕೇವಲ ಒಂದೇ ಒಂದು ಗಂಟೆ ಇದ್ದಾಗ, ಸಾಯುವ ತನಕವೂ ತನ್ನನ್ನು ಪ್ರೀತಿಸುತ್ತಿರುತ್ತೇನೆ ಎಂದು ಹೇಳಿದವಳು. ಆ ಅನೇಕ ಹೆಣ್ಣುಗಳಲ್ಲಿ ಒಬ್ಬಳಾಗಿದ್ದಳು. ಹೊಗೆಯಾಡುತ್ತಿರುವ ಕಾಫಿ ಕಪ್ಪು ಹಿಡಿದು ವರ್ಕ್‌ಷಾಪ್ ಒಳಗೆ ಹೋಗುವವರೆಗೆ ಅವಳ ಬಗ್ಗೆಯಾಗಲೀ ಬೇರೆಯವರ ಬಗ್ಗೆಯಾಗಲಿ ಯೋಚನೆ ಮಾಡಲಿಲ್ಲ. ಚಿನ್ನದ ಮೀನುಗಳನ್ನು ಎಣಿಸಬೇಕಾಗಿದ್ದುದರಿಂದ ಬೆಳಕು ಹೊತ್ತಿಸಿದ. ತಗಡಿನ ಡಬ್ಬಿಯಲ್ಲಿ ಇರಿಸಿದ್ದ ಅವು ಹದಿನೇಳು ಸಂಖ್ಯೆಯಲ್ಲಿದ್ದವು. ಅವುಗಳನ್ನು ಮಾರುವ ಉದ್ದೇಶ ಇರಲಿಲ್ಲವಾಗಿ ಅವುಗಳನ್ನು ಹಾಗೇ ಉಳಿಸಿ ದಿನಕ್ಕೆ ಎರಡರಂತೆ ಮೀನುಗಳನ್ನು ಮಾಡಿ ಅವುಗಳ ಜೊತೆ ಸೇರಿಸಿ ಇಪ್ಪತ್ತೈದು ಸಂಖ್ಯೆ ತಲುಪುತ್ತಲೇ ಅವೆಲ್ಲವನ್ನು ಕರಗಿಸಿ ಮತ್ತೊಮ್ಮೆ ತಯಾರಿಕೆಗೆ ತೊಡಗುತ್ತಿದ್ದ. ದಿನವೆಲ್ಲ ಬೇರೆಯಾವುದರ ಯೋಚನೆಯೂ ಇಲ್ಲದೆ ಕೆಲಸದಲ್ಲಿ ಮಗ್ನನಾಗಿ ಇರುತ್ತಿದ್ದ. ಹೊರಗಡೆ

ಜೋರಾಗಿ ಮಳೆ ಬರುತ್ತಿರುವುದಾಗಲೀ, ಹತ್ತುಗಂಟೆಗೆ ಮಳೆ ಜೋರಾದದ್ದಾಗಲೀ ಯಾರೊ ವರ್ಕ್‌ಷಾಪ್ ಕಡೆಯಿಂದ ಓಡಿ, ಬಾಗಿಲು ಮುಚ್ಚಿಕೊಳ್ಳಿ, ಇಲ್ಲವಾದರೆ ಪ್ರವಾಹ ನುಗ್ಗಿಬರುತ್ತೆ ಎಂದು ಕೂಗಿದ್ದಾಗಲೀ ಉರ್ಸುಲಾ ಊಟ ತರುವವರೆಗೆ ತನ್ನ ಬಗ್ಗೆ ಯೋಚನೆಯಾಗಲೀ ಇಲ್ಲದಂತೆ ಪೂರ್ತಿಯಾಗಿ ಕೆಲಸದಲ್ಲಿ ಮುಳುಗಿಹೋಗಿದ್ದ.

"ಎಂಥಾ ಮಳೆ !" ಉರ್ಸುಲಾ ಹೇಳಿದಳು.

"ಅಕ್ಟೋಬರ್" ಎಂದ. ಈ ಮಾತನ್ನು ಹೇಳುವಾಗ ಅವನು ಕಣ್ಣೆತ್ತಿಯೂ ನೋಡಲಿಲ್ಲ. ಆ ದಿನ ಮೊದಲ ಮೀನಿನ ಕಣ್ಣಿಗೆ ಮಾಣಿಕ್ಯವನ್ನು ಹೊಂದಿಸುತ್ತಿದ್ದ. ಕೆಲಸ ಮುಗಿದ ಮೇಲೆ ಅದನ್ನು ಉಳಿದ ಮೀನುಗಳ ರಾಶಿಗೆ ಸೇರಿಸಿದ. ನಂತರವೇ ಸೂಪನ್ನು ಸೇವಿಸಿದ. ನಂತರ ಈರುಳ್ಳಿ ಜೊತೆ ಬೇಯಿಸಿದ ಮಾಂಸ, ಅನ್ನ, ಹುರಿದ ಬನಾನಾ – ಹೀಗೆ ತಟ್ಟೆಯಲ್ಲಿ ಇದ್ದುದೆಲ್ಲವನ್ನೂ ಒಂದೊಂದಾಗಿ ಮುಗಿಸುತ್ತಾ ಬಂದ. ಅವನ ತಿನ್ನುವ ಪ್ರವೃತ್ತಿ ಯಾವುದೇ ಸಂದರ್ಭಗಳಲ್ಲಾಗಲಿ ಬದಲಾಗಿರಲಿಲ್ಲ. ಊಟದ ನಂತರ ಭುಕ್ತಾಯಾಸದ ಅನುಭವವಾಯಿತು. ವೈಜ್ಞಾನಿಕ ನಂಬಿಕೆಯಿರಿಸಿಕೊಂಡಿದ್ದ ಕಾರಣ ಊಟವಾದ ಕೂಡಲೇ ಅಂದರೆ ಇನ್ನೂ ಜೀರ್ಣವಾಗದೆ ಇರುವುದರಿಂದ, ಓದುವುದಾಗಲಿ, ಕೆಲಸ ಮಾಡುವುದಾಗಲಿ, ಸ್ನಾನಮಾಡುವುದಾಗಲಿ, ಪ್ರೀತಿಮಾಡುವುದಾಗಲಿ ಮಾಡುತ್ತಿರಲಿಲ್ಲ. ಅಷ್ಟೇ ಅಲ್ಲ ಸೈನಿಕರು ಅಜೀರ್ಣದಿಂದ ನರಳುವಂತಾಗಬಾರದೆಂದು ಮಿಲಿಟರಿ ಕಾರ್ಯಾಚರಣೆಗೂ ವಿರಾಮಕೊಡುತ್ತಿದ್ದ. ಆದ್ದರಿಂದ ಕೂಡಲೇ ಹಾಸಿಗೆ ಮೇಲೆ ಉರುಳಿ ಪೆನ್‌ನೈಫ್‌ನಿಂದ ಕಿವಿಯಲ್ಲಿನ ಮೇಣವನ್ನು ತೆಗೆಯುತ್ತಿದ್ದು ಸ್ವಲ್ಪ ಹೊತ್ತಿಗೆ ನಿದ್ದೆ ಹೋದ. ಅವನಿಗೆ ಕನಸು ಬಿತ್ತು. ಬಿಳಿ ಗೋಡೆಗಳಿದ್ದ ಖಾಲಿ ಮನೆಯನ್ನು ಪ್ರವೇಶಿಸಿದ. ಹಾಗೆ ಪ್ರವೇಶ ಮಾಡಿದವರಲ್ಲಿ ತಾನೇ ಮೊದಲ ಮನುಷ್ಯನೆಂಬ ಭಾವನೆಯ ಭಾರ ಅವನಲ್ಲಿ ಬೇಸರ ಉಂಟುಮಾಡಿತು. ಕನಸಿನಲ್ಲಿ ಅವನಿಗೆ ಆ ಥರದ ಕನಸು ಇದಕ್ಕೂ ಮೊದಲು ಹಲವು ಬಾರಿ ಬಿದ್ದುದನ್ನು, ಅನೇಕ ವರ್ಷಗಳಿಂದ ಬೀಳುತ್ತಲೇ ಇದ್ದುದನ್ನು ನೆನಪಿಸಿಕೊಂಡ. ಇಂಥ ಕನಸುಗಳನ್ನು ಕನಸುಗಳಲ್ಲಿ ಮಾತ್ರವೇ ನೆನಪಿಸಿಕೊಳ್ಳಬೇಕಲ್ಲದೆ ಎಚ್ಚೆತ್ತ ಮೇಲೂ ನೆನಪಿಸಿಕೊಳ್ಳಬೇಕಾದ ಮಹತ್ವದ ಕನಸುಗಳಾಗಿರಲಿಲ್ಲ. ಆದ್ದರಿಂದ ಎದ್ದ ಕೂಡಲೇ ಅದನ್ನು ಮನಸಿನಿಂದ ಅಳಿಸಿಬಿಡುತ್ತಿದ್ದ. ಒಂದು ಕ್ಷಣದ ನಂತರ ಕ್ಷೌರಿಕ ಬಾಗಿಲು ತಟ್ಟಿದಾಗ ಎಚ್ಚರಗೊಂಡಾಗ ಅವನಿಗೆ ತಾನು ಅಪ್ರಯತ್ನಪೂರ್ವಕವಾಗಿ ಒಂದೆರಡು ನಿಮಿಷವಷ್ಟೆ ಮಲಗಿದ್ದೆನೆಂದೂ ಕನಸು ಕಾಣಲು ಸಾಧ್ಯವೇ ಇರಲಿಲ್ಲವೆಂದೂ ಎನಿಸಿತು.

"ಇವತ್ತು ಬೇಡ, ಶುಕ್ರವಾರ ನೋಡೋಣ" ಎಂದು ಕ್ಷೌರಿಕನಿಗೆ ಹೇಳಿದ.

ಮೂರು ದಿನಗಳಿಂದ ಮುಖ ಕ್ಷೌರವಿಲ್ಲದ್ದಕ್ಕಾಗಿ ಅಲ್ಲಲ್ಲಿ ಬಿಳಿ ಕೂದಲು ಕಾಣಿಸಿಕೊಂಡವು. ಅವನಿಗೆ ಮಾಡಿಸಿಕೊಳ್ಳಲೇಬೇಕೆಂಬ ಅಗತ್ಯ ಇದೆ ಅನಿಸಿರಲಿಲ್ಲ. ಶುಕ್ರವಾರ ಎಂದು ಹೇಳಿದ್ದು, ಕೂದಲನ್ನೂ ಕತ್ತರಿಸಿಕೊಳ್ಳಬೇಕಿದ್ದರಿಂದ ಎರಡೂ ಒಟ್ಟಿಗೆಯಾಗಿ ಆಗಲಿ ಎನ್ನುವ ಉದ್ದೇಶದಿಂದ. ಅಗತ್ಯವಿಲ್ಲದ ಮಧ್ಯಾಹ್ನದ ನಿದ್ರೆಗಳಿಂದ ಕಂಕುಳಲ್ಲಿ ಅಂಟಂಟಾದ ಬೆವರಿನಿಂದ ಹುಣ್ಣುಗಳಾಗಿದ್ದವು. ಆಕಾಶ ನಿರ್ಮಲವಾಗಿತ್ತಾದರೂ

ಸೂರ್ಯ ಇನ್ನೂ ಕಾಣಿಸಿಕೊಂಡಿರಲಿಲ್ಲ. ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ದೊಡ್ಡದಾಗಿ ಒಂದು ತೇಗು ಹೊರಬಿಟ್ಟ. ಅದರೊಂದಿಗೆ ಸೂಪಿನ ಅಸಿಡಿಟಿ ಗಂಡಲಿಗೆ ಬಂತು. ಅದು ಬಂದದ್ದೇ, ಅವನಿಗೆ ಆದೇಶವಾಗಿ ಕಾಣಿಸಿ, ಹೆಗಲಮೇಲೆ ಬ್ಲಾಂಕೆಟ್ ಹೊದ್ದು ಟಾಯ್‌ಲೆಟ್ ಕಡೆ ಓಡಿದ. ಅಲ್ಲಿ ಅಗತ್ಯಕ್ಕಿಂತ ಹೆಚ್ಚು ಹೊತ್ತು ಕುಳಿತಿದ್ದು, ರೂಢಿಯ ಸನ್ನೆ ಬರುತ್ತಿದ್ದಂತೆ ಇನ್ನು ಕೆಲಸ ಶುರು ಮಾಡಿಕೊಳ್ಳಬಹುದೆಂಬ ಸಂದೇಶ ಬಂದಂತೆ ಅಲ್ಲಿಂದ ಎದ್ದ. ಆ ಸಮಯದಲ್ಲಿ ಅವನ ತಲೆ ಆ ದಿನ ಮಂಗಳವಾರವೆಂದು ನೆನಪಾಯಿತು. ಹಾಗೆಯೇ ಬನಾನಾ ಕಂಪನಿಯಲ್ಲಿ ಸಂಬಳದ ದಿನವಾದ್ದರಿಂದ ಜೋಸ್ ಆರ್ಕಾಡಿಯೊ ಸೆಗುಂಡೊ ವರ್ಕ್‌ಷಾಪ್ ಕಡೆ ಬಂದಿಲ್ಲವೆಂಬುದು ಹೊಳೆಯಿತು. ಆ ನೆನಪು, ಅದರ ಜೊತೆಗೆ ತನ್ನ ವರ್ಷಾನುಗಟ್ಟಲೆ ನಡೆದ ಯುದ್ಧದ ಬಗೆಗಿನ ನೆನಪೂ ಅಪ್ರಯತ್ನ ಪೂರ್ವಕವಾಗಿಯೇ ಮರುಕಳಿಸಿದವು. ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್ ಒಮ್ಮೆ ಅವನಿಗೆ ಹಣೆಯ ಮೇಲೆ ನಕ್ಷತ್ರವಿದ್ದ ಕುದುರೆಯನ್ನು ಕೊಡಿಸುವುದಾಗಿ ಮಾತುಕೊಟ್ಟವನು ನಂತರ ಅದರ ಬಗ್ಗೆ ಮಾತಾಡದೇ ಇದ್ದುದೂ ನೆನಪಾಯಿತು. ನಂತರ ಅನೇಕ ಚದುರಿದ ನೆನಪುಗಳ, ಸಂಭವಿಸಿದ ಘಟನೆಗಳ ಸುತ್ತ ಅಂಡಲೆದ ಮತ್ತು ಅವೆಲ್ಲವನ್ನೂ ತಂದು ಒಗ್ಗೂಡಿಸಿದ. ಅವನಿಗೆ ಮಾಡುವುದಕ್ಕೆ ಬೇರೆ ಕೆಲಸವಿರಲಿಲ್ಲ. ನಿರಾಳವಾಗಿ ಅವುಗಳನ್ನು ಕುರಿತು ಯೋಚಿಸುವುದರಿಂದ ಅವುಗಳು (ನೆನಪುಗಳು) ಭಾವಸ್ಪರ್ಶವನ್ನು ಮಾಡುವುದಿಲ್ಲ ಸಂವೇದನೆಗಳನ್ನು ಹುಟ್ಟು ಹಾಕುವುದಿಲ್ಲ. ಮರಳಿ ವರ್ಕ್‌ಷಾಪಿನತ್ತ ಹೊರಡುವಾಗ, ಒಣ ಗಾಳಿ ಶುರುವಾಗಿದ್ದುದರಿಂದ ಸ್ನಾನಮಾಡುವುದಕ್ಕೆ ಸರಿಯಾದ ಸಮಯವೆಂದುಕೊಂಡು ಹೋಗುವಷ್ಟರಲ್ಲಿ, ಅವನಿಗಿಂತ ಮೊದಲೇ ಅಮರಾಂತಾ ಸ್ನಾನಕ್ಕೆ ಇಳಿದಿದ್ದಳು. ಆದ್ದರಿಂದ ಆ ದಿನದ ಎರಡನೆ ಮೀನಿನ ತಯಾರಿಗೆ ಸಿದ್ಧನಾದ. ಬಾಲಕ್ಕೆ ಕೊಕ್ಕೆಯನ್ನು ಅಳವಡಿಸುತ್ತಿದ್ದಾಗ, ಸೂರ್ಯನಿಂದ ಬಂದ ಬೆಳಕಿನ ಪ್ರಖರತೆ ಎಷ್ಟಿತ್ತೆಂದರೆ ಮೀನಿನ ದೋಣಿಯಂತೆ ಅಲುಗಾಡಿತು. ಮೂರು ದಿನಗಳಿಂದ ಬಿದ್ದ ಮಳೆ ಹನಿಗಳಿಂದ ಶುದ್ಧವಾದ ಗಾಳಿಯಲ್ಲಿ ಹಾರುವ ಇರುವೆಗಳು ತುಂಬಿದ್ದವು. ಆಗ ಅವನಿಗೆ ಮೂತ್ರ ವಿಸರ್ಜನೆ ಮಾಡಬೇಕೆನಿಸಿದರೂ ಕೈಲಿದ್ದ ಕೆಲಸ ಪೂರ್ತಿಯಾಗಲೆಂದು ತಡೆದುಕೊಂಡು ಪುಟ್ಟ ಮೀನನ್ನು ಹೊಂದಿಸಿದ. ನಾಲ್ಕು ಗಂಟೆ ಹತ್ತು ನಿಮಿಷಕ್ಕೆ ಅವನು ಅಂಗಳದತ್ತ ಹೊರಟಾಗ ಸ್ವಲ್ಪ ದೂರದಿಂದ ಬರುತ್ತಿದ್ದ ಟ್ರಾಸ್ ವಾದ್ಯಗಳ, ಡೋಲಿನ ಸದ್ದು, ಮಕ್ಕಳ ಕೂಗಾಟ ಕೇಳಿಸಿತು. ಎಷ್ಟೋ ದಿನಗಳ ನಂತರ ನೆನಪಿನ ಗುಂಗಿಗೆ ಬಿದ್ದ. ಅವನು ಹುಡುಗನಾಗಿದ್ದಾಗ ಒಂದು ಮಧ್ಯಾಹ್ನದಲ್ಲಿನ ಜಿಪ್ಸಿಗಳು ಮತ್ತು ಐಸ್ ನೋಡಲು ತಂದೆ ತನ್ನನ್ನು ಕರೆದೊಯ್ದದ್ದು ಎಲ್ಲವೂ ಕಣ್ಮುಂದೆ ಜೀವಂತ ಚಿತ್ರಗಳಾಗಿ ನಿಂತವು. ಸಾಂತಾ ಸೋಫಿಯಾ ದ ಲಾ ಪೀದಾದ್ ಅಡಿಗೆ ಮನೆಯಲ್ಲಿ ಮಾಡುತ್ತಿದ್ದ ಕೆಲಸ ಬಿಟ್ಟು ಬಾಗಿಲ ಬಳಿಗೆ ಓಡಿದಳು.

"ಸರ್ಕಸ್ ಬಂದಿದೆ" ಎಂದು ಕೂಗಿಕೊಂಡಳು. ಚೆಸ್ಟ್‌ನಟ್ ಮರದ ಬಳಿಗೆ ಹೋಗುವುದನ್ನು ಬಿಟ್ಟು ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಕೂಡಾ ಬಾಗಿಲು ದಾಟಿ ರಸ್ತೆಗೆ ಬಂದು ನಿಂತು ನೋಡುತ್ತಿದ್ದ ಜನರೊಂದಿಗೆ ಕೂಡಿಕೊಂಡ. ಒಬ್ಬ ಹೆಣ್ಣುಮಗಳು ಚಿನ್ನದ ಬಣ್ಣದ ಉಡುಪು ತೊಟ್ಟು ಆನೆಯ ಮೇಲೆ ಕುಳಿತಿದ್ದಳು. ಅದನ್ನು ಮತ್ತು ಒಂಟೆಯನ್ನು ನೋಡಿದ. ಡಚ್ ಹುಡುಗಿಯ ವೇಷ ತೊಟ್ಟ ಕರಡಿಯೊಂದು ಸಂಗೀತದ

ತಾಳಕ್ಕೆ ತಕ್ಕಂತೆ ಸೂಪ್ ಸ್ಪೂನಿನಿಂದ ತಟ್ಟೆಯ ಮೇಲೆ ಬಡಿಯುತ್ತಿತ್ತು. ಸರ್ಕಸ್ ಪೆರೇಡಿನ ಕೊನೆಯಲ್ಲಿ ಗಾಡಿ ಚಕ್ರಗಳು ಉರುಳುವಂತೆ ಉರುಳುತ್ತಿದ್ದ ವಿದೂಷಕರನ್ನು ನೋಡಿದ. ಮತ್ತೆ ಅವನಿಗೆ ತನ್ನ ಒಂಟಿತನದ ಅನುಭವವಾಯಿತು. ಎಲ್ಲ ಖಾಲಿ ಖಾಲಿ. ಏನೂ ಉಳಿದಿರಲಿಲ್ಲ. ಉಳಿದಿದ್ದೆಂದರೆ ವಿಶಾಲವಾದ ರಸ್ತೆ ಮತ್ತು ಹಾರುವ ಇರುವೆಗಳಿಂದ ಕೂಡಿದ್ದ ಗಾಳಿ. ಉಳಿದೊಂದಿಬ್ಬರು ಅನಿಶ್ಚಿತತೆಯ ಭಾವದೊಂದಿಗಿದ್ದರು. ಮರದ ಬಳಿ ಮೂತ್ರ ವಿಸರ್ಜಿಸುತ್ತಿರುವಾಗಲೂ ಸರ್ಕಸ್, ಬರಿ ಸರ್ಕಸ್ ಬಗ್ಗೆಯೇ ಯೋಚಿಸುತ್ತಿದ್ದ. ಆದರೆ ನೆನಪಿಗೆ ದಕ್ಕಲಿಲ್ಲ. ಭುಜಗಳ ಮಧ್ಯಕ್ಕೆ ತಲೆಯೆಳೆದುಕೊಂಡು, ಹಣೆಯನ್ನು ಚೆಸ್ಟ್‌ನಟ್ ಮರದ ಕಾಂಡಕ್ಕೆ ಆನಿಸಿ ನಿಶ್ಚಲವಾಗಿ ಕುಳಿತಿದ್ದ ಮಾರನೆಯದಿನ ಬೆಳಗಿನವರೆಗೆ ಅಂದರೆ ಹನ್ನೊಂದು ಗಂಟೆ ಸುಮಾರಿಗೆ ಸಾಂತಾ ಸೋಫಿಯಾ ದ ಲಾ ಪೀದಾದ್ ಕಸ ಎಸೆಯಲು ಬಂದಾಗ, ಹದ್ದುಗಳು ಎರಗುತ್ತಿದ್ದುದ್ದು ಕಣ್ಣಿಗೆ ಬಿತ್ತು.



14

ಮೆಮೆಯ ಕೊನೆಯ ರಜೆ ದಿನಗಳು ಕರ್ನಲ್ ಅರೆಲಿಯಾನೊ ಬ್ಯುಂಡಿಯಾನ ಸಾವಿನ ಸೂತಕದ ದಿನಗಳೊಂದಿಗೆ ಹೊಂದಿಕೊಂಡಿತು. ಈಗ ಮನೆಯಲ್ಲಿ ಪಾರ್ಟಿಗಳಿಗೆ ಅವಕಾಶವಿರಲಿಲ್ಲ ಯಾರೂ ಹೆಚ್ಚಿಗೆ ಮಾತಾಡುತ್ತಿರಲಿಲ್ಲ. ಮೆಲುದನಿಯಲ್ಲಿ ಮಾತಾಡಿಕೊಳ್ಳುತ್ತಿದ್ದರು. ದಿನಕ್ಕೆ ಮೂರು ಸಲ ಜಪ ಮಾಡುತ್ತಿದ್ದರು. ಮಧ್ಯಾಹ್ನದ ಊಟದ ನಂತರದ ವಿಶ್ರಾಂತಿ ಸಮಯದಲ್ಲಿ ನುಡಿಸುತ್ತಿದ್ದ ಕ್ಲ್ಯಾವಿಕಾರ್ಡ್ ಕೂಡಾ ದುಃಖ ಸೂಚಕ ರಾಗಗಳನ್ನೇ ಹೊಮ್ಮಿಸುತ್ತಿತ್ತು. ಫರ್ನಾಂಡಾಗೆ ಕರ್ನಲ್‌ನನ್ನು ಕಂಡರೆ ಅಷ್ಟಾಗಿ ಹಿಡಿಸುತ್ತಿರಲಿಲ್ಲವಾದರೂ ಸರಕಾರ, ಸತ್ತ ಶತೃವಾದಿ ಅವನಿಗೆ ತೋರಿಸಿದ ಗೌರವದಿಂದ ಬಹಳ ಪ್ರಭಾವಿತಳಾಗಿದ್ದಳು. ಅರೆಲಿಯಾನೊ ಸೆಗುಂಡೊ ಪದ್ಧತಿಯಂತೆ, ಮಲಗುವುದಕ್ಕಾಗಿ, ಮೆಮೆಳ ರಜೆ ದಿನಗಳಲ್ಲಿ, ಮನೆಗೆ ಬರುತ್ತಿದ್ದ. ಫರ್ನಾಂಡಾ ನ್ಯಾಯಬದ್ಧ ಹೆಂಡತಿಯಾಗಿ, ಅವನ ಮೇಲೆ ಪ್ರಭಾವಬೀರಿ ತನ್ನ ಹಕ್ಕುಗಳನ್ನು ಮರಳಿ ಪಡೆದಿರಬೇಕೆಂಬುದಕ್ಕೆ, ಮರು ವರುಷ ಮೆಮೆಗೆ ಪುಟ್ಟ ತಂಗಿಯೊಬ್ಬಳು ಸಿಕ್ಕಿದಳು. ಅವಳ ತಾಯಿ ಇಷ್ಟಕ್ಕೆ ವಿರುದ್ಧವಾಗಿ ಅಮರಾಂತಾ ಉರ್ಸುಲಾ ಎಂದು ನಾಮಕರಣ ಮಾಡಲಾಯಿತು. ಮೆಮೆ 'ಕ್ಲ್ಯಾವಿಕಾರ್ಡ್' ಅಧ್ಯಯನ ಮುಗಿಸಿ 'ಕ್ಲ್ಯಾವಿಕಾರ್ಡಿಸ್ಟ್' ಎಂಬ ಬಿರುದಿಗೆ ಪಾತ್ರಳಾದಳು. ಅದರಲ್ಲಿ ಡಿಪ್ಲೊಮಾ

ಪಡೆದ ಅವಳು 17 ದೇಶದ ಜನಪ್ರಿಯ ರಾಗಗಳನ್ನು, ತನ್ನ ಅಧ್ಯಯನ ಮುಗಿದ ಸಂದರ್ಭದ ಸಮಾರಂಭವಾಗಿಯೂ, ಶೋಕಾಚರಣೆ ಮುಕ್ತಾಯಕ್ಕೆ ಬಂದುದರ ಭಾಗವಾಗಿಯೂ ಆಹ್ವಾನಿತ ಸಭಿಕರ ಮುಂದೆ ಪ್ರಸ್ತುತಪಡಿಸಿದಳು. ಅವಳ ಕಲೆಗಿಂತಲೂ ಅಲ್ಲಿ ಬಂದಿದ್ದವರು ಅವಳ ಎರಡು ಬಗೆಯ ನಡವಳಿಕೆಯನ್ನು ಮೆಚ್ಚಿಕೊಂಡರು. ನೋಡಿದರೆ ಹುಡುಗತನ, ಅವಳೆಷ್ಟು ಗಂಭೀರವಾಗಲು ಸಾಧ್ಯ ಎನ್ನುವ ಅನುಮಾನ ಸಹಜವಾಗಿರುವಾಗ, ಮೆಮೆ ಕ್ಲ್ಯಾವಿಕಾರ್ಡ್ ಕೈಗೆ ತೆಗೆದುಕೊಳ್ಳುತ್ತಿದ್ದಂತೆ ಪೂರ್ತಿಯಾಗಿ ಬೇರೆಯೇ ಹುಡುಗಿಯಾದಳು. ಯಾರಿಗೂ ಊಹಿಸಲಾಗಷ್ಟು ಪ್ರಬುದ್ಧತೆ ವಯಸ್ಸಾದವಳೆಂಬಂತೆ ಕಾಣಿಸಿತು. ಯಾವಾಗಲೂ ಅವಳು ಇರುತ್ತಿದ್ದ ರೀತಿಯೇ ಅದಾಗಿತ್ತು. ಅವಳಲ್ಲಿ ಅಂತಹ ಅಂತಃಪ್ರೇರಣೆಯಾಗಲಿ ಮನಃಪ್ರವೃತ್ತಿಯಾಗಲಿ ಇರಲಿಲ್ಲವಾದರೂ ತಾಯಿಯ ಭಯಕ್ಕೆ, ಶಿಸ್ತಿನಿಂದ ಕಲಿತು ಉನ್ನತ ಶ್ರೇಣಿಗಳನ್ನು ಪಡೆದಳು. ಇದಲ್ಲದೆ ಬೇರೆ ಇನ್ನೇನಾದರೂ ಕಲಿಸಬಹುದಾಗಿದ್ದರೂ, ಯಾವುದೇ ಆದರೂ ಮೆಮೆ ಹಾಗೇ ಇರುತ್ತಿದ್ದಳು. ಪರಿಣಾಮ ಒಂದೇ ಆಗಿರುತ್ತಿತ್ತು. ಅವಳು ಬಹಳ ಚಿಕ್ಕವಳಾದ್ದರಿಂದ ತಾಯಿ ತುಂಬ ಕಟ್ಟುನಿಟ್ಟಾಗಿದ್ದುದರಿಂದ, ತೀರಾ ಅತಿರೇಕಗಳನ್ನು ನಿರ್ಧರಿಸುವ ಅವಳ ಕ್ರಮದಿಂದ, ತುಂಬಾ ಸಂಕಟಕ್ಕೆ ಒಳಗಾಗುತ್ತಿದ್ದಳು. ಅವಳ ಹಠಕ್ಕೆ ಗುರಿಯಾಗಿ ಕ್ಲ್ಯಾವಿಕಾರ್ಡ್ ಕಲಿಯುವುದಕ್ಕೆ ಬದಲಾಗಿ ಇನ್ನೂ ಕಷ್ಟಕರವಾದ ತ್ಯಾಗಕ್ಕೂ ಸಿದ್ಧಳಿದ್ದಳು. ಪದವಿ ಪ್ರದಾನದ ದಿನ ಪಾರ್ಚ್‌ಮೆಂಟ್ ಪೇಪರ್ ಮೇಲಿನ ದಪ್ಪ ಅಕ್ಷರಗಳು ತನಗೆ ಇನ್ನು ಮುಂದೆ ಬಿಡುಗಡೆ ಕೊಡಬಹುದೆಂದು, ತಾಯಿ ಫರ್ನಾಂಡಾ ಕೂಡಾ, ನನ್‌ಗಳು ಯಾವ ವಾದ್ಯವನ್ನು ಹಳೆಯ ಪಳಿಯುಳಿಕೆ ಎಂದು ಭಾವಿಸಿದ್ದನ್ನು ಕಲಿಯಲು ಒತ್ತಾಯ ಮಾಡುವುದಿಲ್ಲವೆಂದು ಭಾವಿಸಿದ ಮೆಮೆಗೆ ನಿರಾಶೆಯಾಯಿತು. ತನ್ನ ಲೆಕ್ಕಾಚಾರಗಳೆಲ್ಲ ಆರಂಭದ ವರ್ಷಗಳಲ್ಲಿಯೆ, ತಪ್ಪೆಂಬುದು ಅರ್ಥವಾಯಿತು. ಅರ್ಧಊರು ನಿದ್ದೆಗೆ ಸಂದ ಮೇಲೆ, ಶಾಲಾಸಮಾರಂಭಗಳ, ದೇಶಭಕ್ತಿ ಪ್ರದರ್ಶನ ಸಮಾರಂಭಗಳು, ಧರ್ಮಾರ್ಥ ಕಾರ್ಯಕ್ರಮಗಳು ಮಕೊಂಡೊದಲ್ಲಿ ನಡೆಯುತ್ತಿದ್ದಾಗ, ಅವಳ ತಾಯಿ, ತನ್ನ ಮಗಳ ಪ್ರತಿಭೆಯನ್ನು ಹೊಗಳಬಲ್ಲವರನ್ನು ಹುಡುಕಿ ಅವರನ್ನು ಮನೆಗೆ ಆಹ್ವಾನಿಸುತ್ತಿದ್ದಳು. ಅಮರಾಂತಾಳ ಸಾವಿನ ನಂತರ, ಶೋಕಾವಧಿಯಲ್ಲಿ ಮಾತ್ರ ಮೆಮೆಗೆ ಕ್ಲ್ಯಾವಿಕಾರ್ಡ್ ಬೀಗ ಹಾಕಲು ಸಾಧ್ಯವಾಯಿತು. ಯಾವುದೋ ಒಂದು ಟ್ರೇನಲ್ಲಿ ಹಾಕಿ ಮರೆತುಬಿಟ್ಟಿದ್ದಳು. ಎಲ್ಲಿ ಯಾವಾಗ ಆ ಕೀ ಕಳೆಯಿತೆಂಬುದರ ವಿಚಾರ ಫರ್ನಾಂಡಾಗೆ ತಿಳಿಯದಂತೆ ಮರೆತುಬಿಟ್ಟಳು. ಮೆಮೆ ಮೊದಲ ಪ್ರದರ್ಶನದ ಸಮಯದಲ್ಲಿ ತೋರಿದ ಗಂಭೀರತೆ ದೃಢತೆಗಳನ್ನು ಪ್ರತಿಯೊಂದು ಪ್ರದರ್ಶನದಲ್ಲಿಯೂ ಮುಂದುವರೆಸಿದಳು. ಇದು ಅವಳ ಸ್ವಾತಂತ್ರ್ಯಕ್ಕೆ ಸಿಕ್ಕ ಬೆಲೆಯಾಗಿತ್ತು. ಫರ್ನಾಂಡಾ ತನ್ನ ಮಗಳ ಸೌಮ್ಯತೆಗೆ, ಎಲ್ಲರಿಂದ ಬರುತ್ತಿದ್ದ ಪ್ರಶಂಸೆಗೆ, ಎಷ್ಟು ಸಂತೋಷಪಟ್ಟಿದ್ದಳೆಂದರೆ, ಅವಳಿಗೆ ಎಲ್ಲ ಬಗೆಯ ಸ್ವಾತಂತ್ರ್ಯವನ್ನು ಕೊಟ್ಟಿದ್ದಳು. ಗೆಳತಿಯರನ್ನು ಮನೆಗೆ ಕರೆಯಲು, ಮಧ್ಯಾಹ್ನಗಳನ್ನು ತೋಪಿನಲ್ಲಿ ಕಳೆಯುವುದಕ್ಕೆ, ಅರೆಲಿಯಾನೊ ಸೆಗುಂಡೊ ಜೊತೆ ಸಿನಿಮಾಗಳಿಗೆ ಹೋಗಲು ಅಥವಾ ಫಾದರ್ ಆ್ಯಂಟೋನಿಯೊರ ಸಮ್ಮತಿ ಪಡೆದು ಯಾರಾದರೂ ಬೇರೆ ಹೆಂಗಸಿನ ಜೊತೆ ಹೋಗಲು ಅವಳಿಗೆ ಪೂರ್ಣ ಸ್ವಾತಂತ್ರ್ಯವನ್ನು ನೀಡಿದ್ದಳು. ಈ ಥರದ

ಬಿಡುವಿನ ಮಧ್ಯಂತರದಲ್ಲಿ ಮೆಮೆಯ ನಿಜವಾದ ಅಭಿರುಚಿಗಳು ಹೊರಗೆಬಂದವು. ಅವಳ ಸಂತೋಷ ಇದ್ದದ್ದು ಅತಿಯಾದ ಶಿಸ್ತಿನಲ್ಲಲ್ಲ, ಬದಲಾಗಿ, ಗದ್ದಲದ ಪಾರ್ಟಿಗಳಲ್ಲಿ, ಪ್ರೇಮಿಗಳ ಹರಟೆಯಲ್ಲಿ, ಗೆಳತಿಯರ ದೀರ್ಘ ಒಡನಾಟದಲ್ಲಿ. ಅಲ್ಲಿ ಅವರೊಂದಿಗೆ ಸಿಗರೇಟು ಸೇದುವುದು, ಹುಡುಗರ ಬಗ್ಗೆ ಮಾತಾಡುವುದು ಇತ್ಯಾದಿಗಳಲ್ಲಿ ಆಸಕ್ತಿ ತೋರುತ್ತಿದ್ದಳು. ಒಂದು ಬಾರಿ ಅವರಿಗೆ ಮದ್ಯದ ಕ್ರೇಟ್ ಸಿಕ್ಕಿತು. ಪೂರ್ತಿ ಬೆತ್ತಲಾಗಿ ತಮ್ಮ ಅಂಗಾಂಗಗಳ ಹೋಲಿಕೆ, ಅಳತೆ ಇತ್ಯಾದಿಗಳಲ್ಲಿ ಕಳೆದರು. ಮೆಮೆ ಯಾವುದೋ ಒಂದು ಬಗೆಯ ಬೇರನ್ನು ಅಗಿಯುತ್ತಾ ಬಂದಾಗ ಅಮರಾಂತಾ ಮತ್ತು ಫರ್ನಾಂಡಾ ಮಾತುಕತೆಯಿಲ್ಲದೆ ಊಟ ಮಾಡುತ್ತಿದ್ದ ಆ ರಾತ್ರಿಯನ್ನು ಅವಳು ಮರೆಯಲಿಲ್ಲ. ಅವರಿಬ್ಬರ ಮೌನದ ಅರ್ಥವನ್ನು ಗ್ರಹಿಸದೆ ಸುಮ್ಮನೆ ಮೇಜಿನ ಮುಂದೆ ಕುಳಿತಳು. ಗೆಳತಿಯ ಮಲಗುವ ಕೋಣೆಯಲ್ಲಿ ಅವಳು ನಗು ಮತ್ತು ಭಯದೊಂದಿಗೆ ಸುಮಾರು ಗಂಟೆಗಳನ್ನು ಕಳೆದಳು. ಎಲ್ಲ ವಿಷಮಪರಿಸ್ಥಿತಿಗಳನ್ನು ಮೀರಿ ಅವಳು ಅಪರೂಪಕ್ಕೆ ಎಲ್ಲಿಲ್ಲದ ಧೈರ್ಯವನ್ನು ತಂದುಕೊಂಡು, ಶಾಲೆಯಿಂದ ಓಡಿಹೋಗಿ ತಾಯಿಗೆ ಹೇಗಾದರೂ ಮಾಡಿ ಕ್ಲ್ಯಾವಿಕಾರ್ಡ್ ಎನಿಮಾ ರೀತಿಯಲ್ಲಿ ಉಪಯೋಗಿಸಬಹುದೆಂಬ ವಿಷಯವನ್ನು ಹೇಳುವಷ್ಟು ಮುಂದುವರೆದಳು. ಮೇಜಿನ ಬಳಿ ಕುಳಿತು ಕೋಳಿಸಾರನ್ನು ಕುಡಿದಳು. ಅದು ಹೊಟ್ಟೆಯೊಳಗೆ ಇಳಿದು ಔಷಧಿಯಂತೆ ಕೆಲಸಮಾಡುತ್ತಿರುವ ಸಮಯದಲ್ಲಿ, ಅಮರಾಂತಾ ಮತ್ತು ಫರ್ನಾಂಡಾ ವಾಸ್ತವವನ್ನು ದೂರುವ ಮನಃಸ್ಥಿತಿಯಲ್ಲಿ ಮುಳುಗಿದ್ದುದನ್ನು ಮೆಮೆ ನೋಡಿದಳು. ಅವರಿಬ್ಬರಲ್ಲಿನ ನಿರುತ್ಸಾಹ, ಭ್ರಮೆ ಇತ್ಯಾದಿಗಳ ಬಗ್ಗೆ ಹೇಳದಿರಲು ಸಾಕಷ್ಟು ಕಷ್ಟಪಡಬೇಕಾಯಿತು. ಎರಡನೆ ರಜೆಯ ಸಮಯದಷ್ಟು ಹೊತ್ತಿಗೆ, ಅವಳ ಅಪ್ಪ ತೋರಿಕೆಗಾಗಿ ಮನೆಯಲ್ಲಿರುತ್ತಿದ್ದಾನೆಂಬ ವಿಷಯ ತಿಳಿದುಬಂತು. ಪೆಟ್ರಾಕೋಟ್ಸ್‌ಳನ್ನು ಭೇಟಿ ಮಾಡಿ ತಾಯಿಯ ವಿಷಯ ತಿಳಿದಮೇಲೆ ತಂದೆ ಮಾಡಿದ್ದು ಸರಿ ಎನಿಸಿತು. ಅಷ್ಟೇ ಅಲ್ಲ ತಾನೂ ಕೂಡಾ ಪೆಟ್ರಾಕೋಟ್ಸ್ ನಂತಹ ಮಗಳಾಗಿದ್ದರೆ ಚೆನ್ನಾಗಿತ್ತು ಎಂದುಕೊಂಡಳು. ಕುಡಿದ ಮತ್ತಿನಲ್ಲಿದ್ದ ಮೆಮೆಗೆ ಆ ಕ್ಷಣದಲ್ಲಿ ತನ್ನ ಆಲೋಚನೆಗಳನ್ನು ಹೇಳಲು ಸಾಧ್ಯವಾದರೆ ಅದರಿಂದ ಉದ್ಭವಿಸಬಹುದಾದ ಗುಲ್ಲು, ಅಪಪ್ರಚಾರ, ಕೇಡಿಗತನಗಳಿಂದ ತನಗೆ ಎಷ್ಟು ಸಂತೋಷವಾಗಬಹುದು ಎಂದುಕೊಂಡಳು. ಅವಳ ಈ ಆಲೋಚನೆಗಳು ಎಷ್ಟು ತೀವ್ರವಾಗಿತ್ತೆಂದರೆ ಫರ್ನಾಂಡಾಳ ದೃಷ್ಟಿಯಿಂದ ತಪ್ಪಿಸಲು ಆಗಲಿಲ್ಲ.

"ಏನ್ಸಮಾಚಾರ?" – ಕೇಳಿದಳು ಫರ್ನಾಂಡಾ.

"ಏನಿಲ್ಲ, ನಾನು ನಿಮ್ಮಿಬ್ಬರನ್ನು ಎಷ್ಟು ಪ್ರೀತಿಸುತ್ತಿರಬಹುದು ಎಂಬುದನ್ನು ಕಂಡುಕೊಳ್ಳಲು ಪ್ರಯತ್ನಿಸುತ್ತಿದ್ದೆ" ಎಂದಳು. ಅವಳ ಆ ಹೇಳಿಕೆಗಳಲ್ಲಿ ಇದ್ದ ದ್ವೇಷದ ತೀವ್ರತೆಯನ್ನು ಗಮನಿಸಿ ಅಮರಾಂತಾ ಗಾಭರಿಗೊಂಡಳು. ಆದರೆ ಫರ್ನಾಂಡಾ ಅದರಿಂದ ಎಷ್ಟು ಪ್ರಭಾವಿತಳಾದಳೆಂದರೆ, ಮೆಮೆಯೇನಾದರೂ ಮಧ್ಯರಾತ್ರಿಯಲ್ಲಿ ತಲೆನೋವಿನಿಂದ, ವಾಂತಿಯಿಂದ ನರಳುವುದನ್ನು ಕಂಡರೆ ತನಗೆ ಹುಚ್ಚು ಹಿಡಿಯುತ್ತೆ ಎಂದುಕೊಂಡಳು. ಅವಳಿಗೆ ಒಂದು ಅಳತೆಯಲ್ಲಿ ಹರಳೆಣ್ಣೆ ನೀಡಿದಳು. ಹೊಟ್ಟೆಮೇಲೆ ಒತ್ತಿದಳು; ಹಣೆಮೇಲೆ

ಐಸ್ ಕ್ಯೂಬ್ಸ್ ಇರಿಸಿದಳು. ನಂತರ ಫ್ರೆಂಚ್ ಡಾಕ್ಟರ್ ಅವಳನ್ನು ಎರಡು ಗಂಟೆಗಳೂ ಮೀರಿ ಪರೀಕ್ಷಿಸಿ, ಹೆಂಗಸರಿಗೆ ವಿಶೇಷವಾದ ಖಾಯಿಲೆ ಇದೆಯೆಂದು ಹೇಳಿದ ಮೇಲೆ ಅವಳನ್ನು ಐದು ದಿನ ಹಾಸಿಗೆ ಬಿಟ್ಟು ಏಳಲು ಬಿಡಲಿಲ್ಲ. ಜೊತೆಗೆ ಪಥ್ಯವನ್ನೂ ಅನುಸರಿಸಿದಳು. ತನ್ನ ನೈತಿಕ ಪತನದಿಂದ ತಾನು ತಲುಪಿರುವ ಸ್ಥಿತಿಯಿಂದ ಧೈರ್ಯ ಕಳೆದುಕೊಂಡಿದ್ದರೂ ಅನುಭವಿಸದೆ ವಿಧಿಯಿಲ್ಲ ಎಂದು ಸುಮ್ಮನಿದ್ದಳು. ಉರ್ಸುಲಾಗೆ ಪೂರ್ತಿಯಾಗಿ ಕಣ್ಣು ಕಾಣಿಸದಿದ್ದರೂ ಇನ್ನೂ ಚುರುಕಾಗಿದ್ದಳು. ಎಲ್ಲವನ್ನೂ ಸ್ಪಷ್ಟವಾಗಿ ಅರ್ಥಮಾಡಿಕೊಳ್ಳಬಲ್ಲವಳಾಗಿದ್ದಳು. ಅವಳಿಗೆ ಮಾತ್ರವೇ ಮೆಮೆಯ ಸಮಸ್ಯೆ ಏನು ಎಂಬುದು ತಿಳಿಯಿತು. "ನನಗೆ ಗೊತ್ತಿದ್ದ ಹಾಗೆ, ಕುಡುಕರಿಗೆ ಸಾಮಾನ್ಯವಾಗಿ ಬರುವ ಸಮಸ್ಯೆಯೇ ಇದಾಗಿದೆ" ಎಂದು ಹೇಳಿದಳು. ಆದರೆ ಅವಳು ಅವಳ ಆಲೋಚನೆಯನ್ನು ನಿರಾಕರಿಸಿದ್ದೇ ಅಲ್ಲದೆ ಅವಳಿಗೇ ತುಚ್ಛವೆನಿಸಿ ಬೇಸರಗೊಂಡಳೂ ಕೂಡಾ. ಮೆಮೆಯ ದಯನೀಯ ಸ್ಥಿತಿಯನ್ನು ನೋಡಿ ಮರುಗಿದ ಅರೆಲಿಯಾನೊ ಸೆಗುಂಡೊ ಇನ್ನು ಮುಂದೆ ಅವಳನ್ನು ಜಾಗರೂಕತೆಯಿಂದ ನೋಡಿಕೊಳ್ಳಬೇಕೆಂದುಕೊಂಡ. ನಂತರ ತಂದೆ ಮಗಳ ನಡುವೆ ಆತ್ಮೀಯ ನಂಟು ಬೆಳೆಯಿತು. ಇದರಿಂದ ಅವನಿಗೆ ಒಂಟಿತನದ ಗುಂಗಿನಿಂದ ಮುಕ್ತಿ ಸಿಕ್ಕಿತು. ಮನೆಯಲ್ಲಿ ಸೃಷ್ಟಿಯಾಗಬಹುದಾದ ಅವಾಂತರಗಳಿಗೆ ದಾರಿಮಾಡುತ್ತಿದ್ದ ಫರ್ನಾಂಡಾಳ ಹದ್ದುಗಣ್ಣಿನ ಕಾವಲಿನಿಂದ ಅವಳಿಗೆ ಬಿಡುಗಡೆ ಸಿಕ್ಕಿತು. ಆ ಸಮಯದಲ್ಲಿ ಅರೆಲಿಯಾನೊ ಸೆಗುಂಡೊ ಮೆಮೆಯನ್ನು ಸಿನಿಮಾಗೆ ಸರ್ಕಸ್‌ಗೆ ಕರೆದುಕೊಂಡು ಹೋಗುವುದಕ್ಕೆಂದೇ ತನ್ನಷ್ಟೂ ಕೆಲಸಗಳನ್ನು ಮುಂದೂಡಿದ. ಕೆಲಸವಿಲ್ಲದ ಹೆಚ್ಚು ಸಮಯವನ್ನೆಲ್ಲ ಮೆಮೆಯ ಜೊತೆ ಕಳೆಯುತ್ತಿದ್ದ. ಇತ್ತೀಚೆಗೆ ಷೂ ಹಾಕಿಕೊಳ್ಳಲೂ ಆಗದಷ್ಟು ಬೆಳೆದ ಹೊಟ್ಟೆಯ ಬಗ್ಗೆ ಸಿಟ್ಟಾಗುತ್ತಿದ್ದ. ಅವನ ಅತಿಯಾದ ಹೊಟ್ಟೆಬಾಕತನ ಅವನ ಸ್ವಭಾವವನ್ನೇ ಹಾಳುಮಾಡಿತು. ಮಗಳ ಸ್ನೇಹದೊರೆತದ್ದೇ ಹಿಂದಿನ ಉತ್ಸಾಹವನ್ನು ಮರಳಿಪಡೆದ. ಅವಳ ಜೊತೆಗಿದ್ದಾಗ ದೊರೆಯುತ್ತಿದ್ದ ಸಂತೋಷ ಅವನನ್ನು ಅತ್ತ ಇತ್ತ ಹೋಗದಂತೆ ತಡೆಯಿತು. ಮೆಮೆ ವಯಸ್ಸಿಗೆ ಬರುತ್ತಿದ್ದಳು. ಅವಳು ಅಮರಾಂತಾಳಾ ಹಾಗೇ ಸುಂದರಿಯಾಗಿರಲಿಲ್ಲ. ಆದರೆ ನೋಡಿದ ಕೂಡಲೇ ಒಂದು ಬಗೆಯ ಆಕರ್ಷಣೆಯಿತ್ತು. ತೀರಾ ಸರಳ, ಮೊದಲ ಭೇಟಿಯಲ್ಲಿಯೇ ಜನರು ಅವಳೆಡೆಗೆ ಸೆಳೆಯಲ್ಪಡುತ್ತಿದ್ದರು. ಅವಳದು ಆಧುನಿಕ ಮನಸ್ಸು. ಇದರಿಂದ ಹಳೆಕಾಲದ ವಿಚಾರಗಳನ್ನು ಹೊಂದಿದ್ದ. ಮತ್ತು ಸಂಕುಚಿತ ಮನಸ್ಸಿನ ಫರ್ನಾಂಡಾಗೆ ನೋವನ್ನುಂಟುಮಾಡಿತು. ಇದನ್ನು ಹೆಚ್ಚಿಸುವುದರಲ್ಲಿ ಅರೆಲಿಯಾನೊ ಸೆಗುಂಡೊ ಖುಷಿ ಪಡೆಯುತ್ತಿದ್ದ. ಮಗಳನ್ನು ಚಿಕ್ಕ ಮಗುವಾಗಿದ್ದಾಗಿನಿಂದ ಬಳಸುತ್ತಿದ್ದ ಮಲಗುವ ಕೋಣೆಯಿಂದ ಹೊರತಂದದ್ದೂ ಕೂಡಾ ಅವನೆ. ವಯಸ್ಸಿಗೆ ಬಂದಿದ್ದರೂ ಈಗಲೂ ಅಲ್ಲಿನ ಸಂತರ ಮೂರ್ತಿಗಳು ಒಂದು ರೀತಿಯಲ್ಲಿ ಮೆಮೆಗೆ ಭಯ ಹುಟ್ಟಿಸುತ್ತಿದ್ದವು. ಅವಳಿಗೆ ಪ್ರತ್ಯೇಕವಾದ ಮಲಗುವ ಕೋಣೆಯನ್ನು ಏರ್ಪಡಿಸಿದ. ರಾಜಯೋಗ್ಯವಾದ ಹಾಸಿಗೆ, ದೊಡ್ಡದಾದ ಡ್ರೆಸ್ಸಿಂಗ್ ಟೇಬಲ್, ವೆಲ್ವೆಟ್ ಕರ್ಟನ್ಸ್, ಇತ್ಯಾದಿಗಳಿಂದ. ಅವನಿಗೆ ಅರಿವಿಲ್ಲದೆಯೇ ಪೆಟ್ರಾಕೋಟ್ಸ್ ಮಲಗುವ ಕೋಣೆಯ ಪ್ರತಿರೂಪದಂತೆ ಸೃಷ್ಟಿಮಾಡಿದ್ದ. ಮೆಮೆಯ ವಿಚಾರದಲ್ಲಿ ಅವನೆಷ್ಟು ದುಂದುಗಾರನಾಗಿದ್ದನೆಂದರೆ ಅವಳೇ ಅಪ್ಪನ ಜೇಬಿನಿಂದ ಹಣ ತೆಗೆದುಕೊಳ್ಳುತ್ತಿದ್ದುದರಿಂದ

ಅವಳೆಷ್ಟು ಖರ್ಚುಮಾಡುತ್ತಿದ್ದಾಳೆಂಬುದರ ಕಡೆಗೂ ಗಮನ ಕೊಡುತ್ತಿರಲಿಲ್ಲ. ಯಾವುದೇ ಹೊಸದಾಗಿ ಸೌಂದರ್ಯಸಾಧನ ಮಾರುಕಟ್ಟೆಗೆ ಬಂದರೆ, ಮೊದಲು ಅದನ್ನು ಮೆಮೆಗಾಗಿ ಕೊಂಡುತರುತ್ತಿದ್ದ. ಮೆಮೆಯ ಕೋಣೆಯನ್ನು, ಉಗುರುಗಳಿಗೆ ಪಾಲಿಷ್ ಮಾಡಲು, ಕೂದಲನ್ನು ಗುಂಗುರಾಗಿಸಲು, ಕಣ್ಣುಗಳನ್ನು ಹೊಳಪಾಗಿಸಲು, ಮತ್ತು ಇನ್ನೂ ಅನೇಕ ಬಗೆಯಲ್ಲಿ ಸೌಂದರ್ಯ ಹೆಚ್ಚಿಸಲು ಬೇಕಾದ ಸಾಧನ ಸಾಮಗ್ರಿಗಳನ್ನೆಲ್ಲ ತಂದು ತುಂಬಿಬಿಟ್ಟಿದ್ದ. ಫರ್ನಾಂಡಾ ಪ್ರತಿಸಲವೂ ಅಲ್ಲಿಗೆ ಹೋದಾಗ, ಅವಳಿಗೆ ಮಗಳ ಈ ಡ್ರೆಸ್ಸಿಂಗ್ ಟೇಬಲ್ ಬಹುಶಃ ಆ ಫ್ರೆಂಚ್ ಹೆಂಗಸರದ್ದು ಇರುವ ಹಾಗೇ ಇದೆ ಎನ್ನುವ ಅನುಮಾನ ಬರುತ್ತಿತ್ತು. ಆದರೆ ಫರ್ನಾಂಡಾಳ ಸಮಯ ತುಂಟಿಯಾಗಿದ್ದ ಅಮರಾಂತಾ ಉರ್ಸುಲಾ ಮತ್ತು ಅದೃಶ್ಯ ವೈದ್ಯರ ನಡುವೆ ಕಳೆದು ಹೋಗುತ್ತಿತ್ತು. ಆದ್ದರಿಂದ ತಂದೆ ಮತ್ತು ಮಗಳ ನಡುವಿನ ಹೊಂದಾಣಿಕೆ ಆತ್ಮೀಯತೆಯನ್ನು ನೋಡಿದಾಗ ಗಂಡನಿಂದ, ಮೆಮೆಯನ್ನೆಂದೂ ಪೆಟ್ರಾಕೋಟ್ಸ್ ಮನೆಗೆ ಕರೆದುಕೊಂಡು ಹೋಗಬಾರದೆಂದಷ್ಟೇ ಮಾತು ಕೊಡೆಂದು ಕೇಳಿದಳು. ಅವಳು ಹೀಗೆ ಕೇಳಿದ್ದು ಅರ್ಥವಿಲ್ಲದ್ದಾಗಿತ್ತು. ಯಾಕೆಂದರೆ ಇತ್ತೀಚೆಗೆ ಅರೆಲಿಯಾನೊ ಸೆಗುಂಡೊ ಮಗಳನ್ನು ಹಚ್ಚಿಕೊಂಡು ಪ್ರೇಯಸಿಯಾದ ತನ್ನಿಂದ ದೂರವಾಗುತ್ತಿರುವುದನ್ನು ಗಮನಿಸಿ ತಾನೇ, ಅವಳಿಂದ ಏನಾಗಬೇಕೆಂದು ಸುಮ್ಮನಿದ್ದಳು. ಅವಳಲ್ಲಿ ಆಗಲೇ ಒಂದು ಅವ್ಯಕ್ತಭೀತಿ ಕಾಡತೊಡಗಿತು. ದೂರದಲ್ಲೆಲ್ಲೊ ಅವಳಿಗೆ ಮನಸ್ಸಿನಲ್ಲಿ ಫರ್ನಾಂಡಾ ಯಾವುದನ್ನು ಮಾಡಬೇಕೆಂದು ಬಯಸಿದ್ದಳೊ ಅದು ಈಗ ಮಗಳಿಂದ ಸಾಧ್ಯವಾಗುತ್ತಿದೆ ಎನಿಸಿತ್ತು. ಸಾಯುವವರೆಗೆ ತನ್ನ ಜೊತೆ ಇರುತ್ತದೆ ಎಂದು ನಂಬಿದ್ದ ಪ್ರೀತಿಯಿಂದ ಈಗ ವಂಚಿತಳಾಗುತ್ತಿದ್ದಾಳೆ. ಮೊದಲ ಬಾರಿಗೆ ಅರೆಲಿಯಾನೊ ಸೆಗುಂಡೊಗೆ ತಾನಿಟ್ಟುಕೊಂಡವಳಿಂದ ಕಠೋರವಾದ ಮಾತುಗಳನ್ನು ಆಕ್ಷೇಪಗಳನ್ನು ಕೇಳಬೇಕಾಗಿಬಂತು. ಕಡೆಗೆ ಅವನಿಗೆ ಅಡ್ಡಾಡುವ ಟ್ರಂಕುಗಳು ಮತ್ತೆ ಹೆಂಡತಿಯ ಮನೆಯ ಕಡೆ ಪ್ರಯಾಣ ಬೆಳೆಸುವಂತೆ ಮಾಡುತ್ತವೊ ಎಂದು ಹೆದರಿದ. ಆದರೆ ಹಾಗಾಗಲಿಲ್ಲ. ಪೆಟ್ರಾಕೋಟ್ಸ್‌ಗೆ ತನ್ನ ಪ್ರಿಯಕರ ಏನೆಂಬುದು ಗೊತ್ತಿತ್ತು. ಟ್ರಂಕುಗಳು ಎಲ್ಲಿದೆಯೊ ಅಲ್ಲಿಯೇ ಇರುತ್ತವೆ ಎಂಬುದು ಅವಳಿಗೆ ಖಾತ್ರಿಯಾಗಿತ್ತು. ಅರೆಲಿಯಾನೊ ಸೆಗುಂಡೊ ದ್ವೇಷಿಸುತ್ತಿದ್ದ ಒಂದೇ ಒಂದು ಅಂಶವೆಂದರೆ, ಬದಲಾವಣೆಗಳಿಂದ ಬದುಕನ್ನು ಗೋಜಲು ಮಾಡಿಕೊಳ್ಳುವುದನ್ನು. ಆದ್ದರಿಂದ ಟ್ರಂಕುಗಳು ಇರುವ ಕಡೆಯೇ ಇದ್ದವು. ಪೆಟ್ರಾಕೋಟ್ಸ್ ಗಂಡನನ್ನು ಗೆಲ್ಲುವುದಕ್ಕೆ ಬೇಕಾದ ಆದರೆ ಮೆಮೆಗೆ ತಂದೆಯ ಮೇಲೆ ಪ್ರಯೋಗಿಸಲಾಗದ ಒಂದು ಅಸ್ತ್ರವನ್ನು ತೀಕ್ಷ್ಣಗೊಳಿಸಿದಳು. ಮೆಮೆಗು ಅವಳ ಮತ್ತು ತಂದೆಯ ಮಧ್ಯೆ ಪ್ರವೇಶಿಸಬೇಕೆನ್ನುವ ಆಸಕ್ತಿಯೋ ಇರಲಿಲ್ಲ. ಹಾಗೇನಾದರೂ ಇದ್ದರೆ ಅದು ಪೆಟ್ರಾಕೋಟ್ಸ್ ಪರವಾಗಿಯೇ ಇರುತ್ತಿತ್ತು. ಯಾರಿಗೂ ತೊಂದರೆ ಕೊಡೋದಕ್ಕೆ ಸಮಯವೂ ಇರಲಿಲ್ಲ. ನನ್ಸ್ ಕಲಿಸಿಕೊಟ್ಟಿದ್ದರಿಂದ ಅವಳ ಕೋಣೆಯನ್ನು ಅವಳೇ ಗುಡಿಸುತ್ತಿದ್ದಳು. ತನ್ನ ಹಾಸಿಗೆಯನ್ನು ತಾನೇ ಸರಿಮಾಡಿಕೊಳ್ಳುತ್ತಿದ್ದಳು. ಬೆಳಗಿನ ಹೊತ್ತು ತನ್ನ ಬಟ್ಟೆಗಳ ಕಡೆ ಗಮನಕೊಡುತ್ತಿದ್ದಳು. ನಡುಮನೆಯಲ್ಲಿ ಹೊಲಿಗೆ ಹಾಕುತ್ತಲೊ ಇಲ್ಲ ಅಮರಾಂತಾಳ ಹೊಲಿಗೆ ಯಂತ್ರದಲ್ಲಿ ಏನಾದರೂ ಹೊಲಿಯುತ್ತಲೋ ಸಮಯ ಕಳೆಯುತ್ತಿದ್ದಳು. ಮನೆಯಲ್ಲಿ ಮಧ್ಯಾಹ್ನದ ಹೊತ್ತು ಎಲ್ಲರೂ ಒಂದು ಸಣ್ಣ ನಿದ್ದೆ ತೆಗೆಯುತ್ತಿದ್ದರೆ, ಮೆಮೆ,

ಅಮ್ಮನಿಗೆ ಸಂತೋಷವಾಗಿ ಸುಮ್ಮನಿರುತ್ತಾಳೆಂದು ತಿಳಿದು ಕ್ಲ್ಯಾವಿಕಾರ್ಡ್ ಪಾಠಗಳನ್ನು ಎರಡು ಗಂಟೆ ಅಭ್ಯಾಸ ಮಾಡುತ್ತಿದ್ದಳು. ಅದೇ ಕಾರಣಕ್ಕಾಗಿ ಚರ್ಚ್ ಸಮಾರಂಭಗಳಲ್ಲಿ, ಶಾಲಾ ಪಾರ್ಟಿಗಳಲ್ಲಿ, ಬೇಡಿಕೆ ಕಡಿಮೆಯಿದ್ದರೂ ಹೋಗಿ ಸಂಗೀತ ಕಾರ್ಯಕ್ರಮಗಳನ್ನು ನೀಡುತ್ತಿದ್ದಳು.

ರಾತ್ರಿ ಆಗುತ್ತಿದ್ದಂತೆ, ಸರಳವಾದ ಉಡುಪುತೊಟ್ಟು, ಎತ್ತರದ ಹಿಮ್ಮಡಿ ಷೂ ತೊಟ್ಟು, ತಂದೆಯ ಜೊತೆ ಏನೂ ಕೆಲಸ ಇರಲಿಲ್ಲವೆಂದರೆ ಗೆಳತಿಯರ ಮನೆಗೆ ಹೋಗಿ ರಾತ್ರಿ ಊಟದ ಹೊತ್ತಿಗೆ ಹಿಂತಿರುಗಿ ಬರುತ್ತಿದ್ದಳು. ಸಾಮಾನ್ಯವಾಗಿ ಅರೆಲಿಯಾನೊ ಸೆಗುಂಡೊ ಆಗಾಗ ಅವಳನ್ನು ಸಿನಿಮಾಗೆಂದು ಕರೆದುಕೊಂಡು ಹೋಗಲು ಬರುತ್ತಿದ್ದ. ಮೆಮೆಯ ಸ್ನೇಹಿತರಲ್ಲಿ ಮೂರು ಜನ ಅಮೆರಿಕನ್ ಹುಡುಗಿಯರಿದ್ದರು. ಅವರು ವಿದ್ಯುತ್ ಬೇಲಿಯನ್ನೂ ದಾಟಿಕೊಂಡು ಬಂದು ಮಕೊಂಡೊ ಹುಡುಗಿಯರೊಂದಿಗೆ ಗೆಳೆತನ ಮಾಡುತ್ತಿದ್ದರು. ಅವರಲ್ಲಿ ಒಬ್ಬಳು ಪೆಟ್ರಿಷಿಯಾ ಬ್ರೌನ್. ಅರೆಲಿಯಾನೊ ಸೆಗುಂಡೊನ ಅತಿಥಿ ಸತ್ಕಾರಾನ ಮೆಚ್ಚಿಕೊಂಡಿದ್ದ ಮಿಸ್ಟರ್ ಬ್ರೌನ್, ಮೆಮೆಯನ್ನು ಶನಿವಾರದ ಡ್ಯಾನ್ಸ್ ಕಾರ್ಯಕ್ರಮಕ್ಕೆ ಆಹ್ವಾನಿಸಿದ. ಇಲ್ಲಿ ಮಾತ್ರವೇ ಸ್ಥಳೀಯರ ಜೊತೆ ಗ್ರಿಂಗೋಗಳೂ ಬೆರೆಯುತ್ತಿದ್ದುದು. ಫರ್ನಾಂಡಾಗೆ ಇದು ತಿಳಿದಾಗ, ಅಮರಾಂತಾ ಉರ್ಸುಲಾ, ಅದೃಶ್ಯ ವೈದ್ಯರನ್ನು ಮರೆತು, ಭಾವೋದ್ವೇಗಕ್ಕೆ ಒಳಗಾಗುತ್ತಿದ್ದಳು. “ಯೋಚನೆ ಮಾಡು ಸಮಾಧಿಯೊಳಗೆ ಕರ್ನಲ್ ಏನು ಯೋಚನೆ ಮಾಡುತ್ತಿರಬಹುದು” ಎಂದು ಮೆಮೆಗೆ ಹೇಳಿದಳು. ಅವಳ ಸಹಾಯಕ್ಕೆ ಉರ್ಸುಲಾ ಕೂಡಾ ಇದ್ದಳು. ಆದರೆ ಎಲ್ಲರ ನಿರೀಕ್ಷೆಗೆ ವಿರುದ್ಧವಾಗಿ, ಕಣ್ಣು ಕಾಣಿಸದ ಆಕೆಗೆ ಡ್ಯಾನ್ಸ್‌ಗೆ ಹೋಗುವುದರಲ್ಲಾಗಲಿ, ಒಂದಷ್ಟು ಸ್ನೇಹಿತರೊಂದಿಗೆ ಬೆರೆಯುವುದಾಗಲಿ ತಪ್ಪು ಎನಿಸಲಿಲ್ಲ. ಅದೂ ಅವಳು ಬೇರೆಲ್ಲ ವಿಷಯಗಳಲ್ಲಿ ಶಿಸ್ತನ್ನು ಪಾಲಿಸುತ್ತಿರುವವರೆಗೆ ಯಾವುದೇ ಅಪರಾಧವೆನಿಸಲಿಲ್ಲ. ಅವಳು ಪ್ರಾಟೆಸ್ಟೆಂಟ್ ಮತಕ್ಕೂ ಪರಿವರ್ತನೆ ಆಗಲಿಲ್ಲ. ಮೆಮೆ ತನ್ನ ಮುತ್ತಜ್ಜಿಯನ್ನು ಚೆನ್ನಾಗಿ ಅರ್ಥಮಾಡಿಕೊಂಡಿದ್ದು ಡಾನ್ಸ್‌ಗಳು ಮುಗಿದ ಮರುದಿನ ಮಾಮೂಲಿಗಿಂತ ಬೆಳಿಗ್ಗೆ ಬೇಗನೆ ಎದ್ದು ಸಾಮೂಹಿಕ ಪ್ರಾರ್ಥನೆಗೆ ಹೋದಳು. ಮಿಸ್ಟರ್ ಬ್ರೌನ್‌ರ ಕಡೆಯಿಂದ ಕ್ಲ್ಯಾವಿಕಾರ್ಡ್ ನುಡಿಸಲು ಮೆಮೆಗೆ ಆಹ್ವಾನ ಬಂದಿರುವ ಸುದ್ದಿ ತಿಳಿಯುತ್ತಿದ್ದಂತೆ ಫರ್ನಾಂಡಾಳ ಪ್ರತಿರೋಧ ಕಡಿದುಬಿತ್ತು. ಕ್ಲ್ಯಾವಿಕಾರ್ಡ್ ಮನೆಯಿಂದ ಬ್ರೌನ್‌ರ ಮನೆಗೆ ತೆಗೆದುಕೊಂಡು ಹೋಗಲಾಯಿತು. ಅಲ್ಲಿ ಕಿರಿಯ ಕಲಾವಿದೆಯಾದ ಮೆಮೆಳಿಗೆ ನಿಜವಾಗಿಯೂ ಬಹಳ ಮೆಚ್ಚುಗೆ ಪ್ರಶಂಸೆಗಳು ಲಭಿಸಿದವು. ಅಲ್ಲಿಂದ ಅವಳಿಗೆ ವಾದ್ಯ ನುಡಿಸಲು ಕೇವಲ ಡ್ಯಾನ್ಸ್ ಪಾರ್ಟಿಗಳಿಗೇ ಅಲ್ಲದೆ ಭಾನುವಾರಗಳಲ್ಲಿ ಈಜು ಪಾರ್ಟಿಗಳಿಗೂ ಬೇಡಿಕೆ ಬಂತು. ಜೊತೆಗೆ ವಾರಕ್ಕೊಮ್ಮೆ ಊಟಕ್ಕೂ ಕರೆ ಬರುತ್ತಿತ್ತು. ಮೆಮೆ ವೃತ್ತಿಪರರಂತೆ ಈಜು ಕಲಿತಳು. ಟೆನ್ನಿಸ್ ಕಲಿತಳು, ಪೈನಾಪ್ಪಲ್ ಚೂರುಗಳೊಂದಿಗೆ ಹೊಗೆಸೊಪ್ಪು ತಿನ್ನುವುದನ್ನೂ ಕಲಿತಳು. ಇದೆಲ್ಲ ಕಲಿಯುವಾಗ, ಇಂಗ್ಲಿಷ್ ಮಾತಾಡುವುದನ್ನೂ ಕಲಿತಳು. ಅರೆಲಿಯಾನೊ ಸೆಗುಂಡೊಗೆ ಮಗಳ ಪ್ರಗತಿಯನ್ನು ನೋಡಿ ಎಷ್ಟು ಸಂತೋಷವಾಯಿತೆಂದರೆ, ಬಣ್ಣಬಣ್ಣದ ಪ್ರಿಂಟ್ ಇದ್ದ ಇಂಗ್ಲಿಷಿನ ವಿಶ್ವಕೋಶಗಳನ್ನು ಖರೀದಿಸಿಕೊಟ್ಟ. ಮೆಮೆ ತನ್ನ ಬಿಡುವಿನ ವೇಳೆಯಲ್ಲಿ ಅದನ್ನು

ಓದುತ್ತಿದ್ದಳು. ಹಿಂದೆ ಹರಟೆಗೆ ಮೀಸಲಿಟ್ಟಿದ್ದ ಸಮಯವನ್ನು ಈಗ ಬಹಳ ಗಂಭೀರವಾಗಿ ಓದಲು ಬಳಸಿಕೊಂಡಳು. ಹಿಂದೆ ಗೆಳತಿಯರ ಜೊತೆ ಪ್ರೇಮಗೀಮ ಎಂದು ಏನೇನೋ ಮಾಡುತ್ತಿದ್ದುದೆಲ್ಲ ಬಿಟ್ಟು ಓದಿನಲ್ಲಿ ಮುಳುಗಿದಳು. ಆದರೆ ಇದು ಶಿಸ್ತಿನಿಂದ ಹೇರಿದ್ದಾಗಿರಲಿಲ್ಲ. ಸಾರ್ವಜನಿಕ ವಿಚಾರಗಳಲ್ಲಿ, ಅವಳಿಗೆ ಆಸಕ್ತಿ ಕಳೆದುಹೋಗಿತ್ತು. ಬಾಲ್ಯದಲ್ಲಿ ಕುಡಿದು ಮಾಡಿದ ಸಾಹಸ ಈಗ ಅವಳಿಗೆ ಹುಚ್ಚಾಟವೆನಿಸಿ ಅದನ್ನು ತಂದೆಗೆ ತಮಾಶೆಯಾಗಿ ವಿವರಿಸಿದಳು. "ನಿಮ್ಮಮ್ಮನಿಗೆ ಗೊತ್ತಾದರೆ" ಎಂದು ಜೋರಾಗಿ ನಗುತ್ತಾ, ಬಹಳ ಗುಟ್ಟಾಗಿ ಹೇಳುವಂತೆ ಹೇಳಿದ. ಆಮೇಲೆ ಅವಳು ತನ್ನ ಪ್ರಥಮ ಪ್ರೇಮಪ್ರಕರಣವನ್ನು ತನಗೆ ಹೇಳಬೇಕೆಂದು ವಚನ ತೆಗೆದುಕೊಂಡ. ಅವಳು ತಾನು ಪ್ರೀತಿಸಿದ ಹುಡುಗ ಕೆಂಚು ಕೂದಲಿನ ಅಮೆರಿಕನ್ ಎಂದು ಅವನು ತಂದೆ ತಾಯಿ ಜೊತೆ ರಜೆ ಕಳೆಯಲು ಬಂದಿದ್ದನೆಂದೂ ಹೇಳಿದಳು. ಮತ್ತೆ ನಗುತ್ತಾ ಅರೆಲಿಯಾನೊ ಸೆಗುಂಡೊ ಒಂದು ವೇಳೆ ನಿನ್ನಮ್ಮನಿಗೆ ಗೊತ್ತಾದರೆ ಎಂದಾಗ ಮೆಮೆ ಅವನು ಹಿಂತಿರುಗಿ ಹೋದದ್ದನ್ನೂ ಮತ್ತೆ ಕಾಣಿಸಲಿಲ್ಲವೆನ್ನುವುದನ್ನೂ ಹೇಳಿದಳು. ಅವಳ ತೀರ್ಮಾನಗಳಲ್ಲಿನ ಪ್ರಬುದ್ಧತೆಯಿಂದ ಮನೆಯಲ್ಲಿ ಶಾಂತಿ ನೆಲೆಗೊಂಡಿತು. ಅರೆಲಿಯಾನೊ ಸೆಗುಂಡೊ ಈಗ ಹೆಚ್ಚಿನ ಸಮಯವನ್ನು ಪೆಟ್ರಾಕೋಟ್ಸ್‌ಗೆ ಮೀಸಲಿಟ್ಟ. ಈಗ ಅವನ ದೇಹ ಮತ್ತು ಆತ್ಮ ಮೊದಲಿನಂತೆ ವ್ಯಭಿಚಾರಕ್ಕೆ ಅವಕಾಶ ಕಲ್ಪಿಸುತ್ತಿರಲಿಲ್ಲವಾದರೂ ಅವನು ಹೇಗೊ ಸಾವರಿಸಿದ. ಕೆಲವು ಕೀ ಗಳನ್ನು ಷೂಲೇಸಿನಿಂದ ಕಟ್ಟಿದ್ದ ಅಕಾರ್ಡಿಯೋನನ್ನು ಹೊರತೆಗೆದ. ಅಮರಾಂತಾ ಎಡಬಿಡದೆ ತನ್ನ ಶವವಸ್ತ್ರ ನೇಯುವುದನ್ನು ಮುಂದುವರೆಸಿದ್ದಳು. ಉರ್ಸುಲಾಗೆ ಹಾಗೂ ಹೀಗೂ ಕಾಲೆಳೆದುಕೊಂಡು ಚೆಸ್ಟ್‌ನಟ್ ಮರದ ಕೆಳಗೆ, ಕಾಣಿಸುತ್ತಿದ್ದ ಜೋಸ್ ಆರ್ಕಾಡಿಯೊ ಬ್ಯುಂಡಿಯಾನ ಭೂತವನ್ನು ಮಾತ್ರವೇ ನೆರಳುಗಳ ಮಧ್ಯೆ ಕಾಣಲು ಸಾಧ್ಯವಾಗಿತ್ತು. ಫರ್ನಾಂಡಾ ತನ್ನ ಅಧಿಕಾರವನ್ನು ಸಂಚಯಿಸಿಕೊಂಡಳು. ಪ್ರತಿ ತಿಂಗಳೂ ಅವಳು ತನ್ನ ಮಗ ಜೋಸ್ ಆರ್ಕಾಡಿಯೊಗೆ ಬರೆಯುತ್ತಿದ್ದ ಪತ್ರಗಳಲ್ಲಿ ಯಾವುದೇ ಸುಳ್ಳನ್ನು ಹೇಳುತ್ತಿರಲಿಲ್ಲವಾದರೂ ಅದೃಶ್ಯ ವೈದ್ಯರೊಂದಿಗೆ ನಡೆಯುತ್ತಿದ್ದ ವ್ಯವಹಾರ, ಮತ್ತು ತನ್ನ ದೊಡ್ಡ ಕರುಳಿನಲ್ಲಿ ಗೆಡ್ಡೆ ಇರುವುದನ್ನು ಪತ್ತೆಹಚ್ಚಿದ ವಿಷಯವನ್ನು ಮಾತ್ರ ಮುಚ್ಚಿಟ್ಟಿದ್ದಳು.

ಅಮರಾಂತಾಳ ಆಕಸ್ಮಿಕ ಮರಣದಿಂದ ಹುಯಿಲೆದ್ದದ್ದು ಬಿಟ್ಟರೆ ದಣಿದ ಆ ದೊಡ್ಡ ಮನೆಯಲ್ಲಿ ಶಾಂತಿ, ಸಂತೋಷಗಳು ಬಹಳ ಕಾಲ ನೆಲೆಸಿತ್ತು. ಅದು ಅನಿರೀಕ್ಷಿತವಾಗಿ ಸಂಭವಿಸಿದ್ದ ಘಟನೆಯಾಗಿತ್ತು. ವಯಸ್ಸು, ಏಕಾಕಿತನ ಬಿಟ್ಟರೆ ಅವಳು ಬಹಳ ಆರೋಗ್ಯದಿಂದ ಕಲ್ಲಿನಂತೆ ಗಟ್ಟಿಮುಟ್ಟಾಗಿ ಯಾವಾಗಲೂ ಇದ್ದಂತೆ ಇದ್ದಳು. ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್‌ನನ್ನು ಕಡೆಯಬಾರಿ ತಿರಸ್ಕರಿಸಿದ ಮಧ್ಯಾಹ್ನ ಕೋಣೆ ಸೇರಿಕೊಂಡು ಅತ್ತಂದಿನಿಂದ ಅವಳ ಆಲೋಚನೆಗಳು ಏನಿವೆ ಎಂಬುದು ಯಾರಿಗೂ ತಿಳಿದಿರಲಿಲ್ಲ. ಅವಳು ರೆಮೆಡಿಯೋಸ್ ದ ಬ್ಯೂಟಿ ಆಕಾಶಕ್ಕೆ ಹಾರಿದಾಗಾಗಲಿ, ಅರೆಲಿಯಾನೊಗಳ ಸಾವಿನಲ್ಲಾಗಲಿ, ಕರ್ನಲ್ ಅರೆಲಿಯಾನೊ ಬ್ಯುಂಡಿಯಾನ ಸಾವಿನಲ್ಲಾಗಲಿ ಒಂದು ಹನಿ ಕಣ್ಣೀರು ಹಾಕಿದ್ದನ್ನೂ ಯಾರೂ ನೋಡಲಿಲ್ಲ. ಅದರಲ್ಲೂ ಪ್ರಪಂಚದಲ್ಲಿಯೇ ಅತ್ಯಧಿಕವಾಗಿ ಪ್ರೀತಿಸುತ್ತಿದ್ದವನ ಪಾರ್ಥಿವ ಶರೀರ ಚೆಸ್ಟ್‌ನಟ್ ಮರದಬಳಿ ಬಿದ್ದಿದನ್ನು ತೋರಿಸದಾಗಲೂ

ಅವಳಲ್ಲಿ ಸ್ಪಂದನವಿರಲಿಲ್ಲ. ದೇಹವನ್ನು ಎತ್ತಲು ಸಹಕರಿಸಿದಳು, ಮಿಟ್ಟ್ರಿ ಯೂನಿಫಾರಮ್ ಅನ್ನು ತೊಡಿಸಿದಳು. ಕ್ಷೌರ ಮಾಡಿದಳು. ಕೂದಲು ಬಾಚಿದಳು. ಅವನ ಮೀಸೆಗೆ, ಅವನ ವಿಜಯದ ಕೀರ್ತಿಯ ಉತ್ತುಂಗದಲ್ಲಿದ್ದಾಗ ಅವನಿಗೂ ಮಾಡಿಕೊಳ್ಳಲು ಆಗದ ರೀತಿಯಲ್ಲಿ, ಮೇಣ ಹಚ್ಚಿದಳು. ಅದರಲ್ಲಿ ಪ್ರೀತಿ ಅಡಗಿದೆ ಎನ್ನುವುದನ್ನು ಯಾರಿಗೂ ಗುರುತಿಸಲು ಆಗಲಿಲ್ಲ. ಯಾಕೆಂದರೆ ಅವಳು ಮಾಡಿದ್ದೆಲ್ಲವೂ ಅಂತಿಮಸಂಸ್ಕಾರದ ಭಾಗವಾಗಿದ್ದು, ಅದು ಅಭ್ಯಾಸವಾಗಿತ್ತು. ಫರ್ನಾಂಡಾಳಿಗೆ ಈ ಸಂಸ್ಕಾರಗಳಿಗೂ ಕ್ಯಾಥೋಲಿಸಿಸಂಗೂ ಸಂಬಂಧ ಏನೆಂಬುದು ತಿಳಿಯಲಿಲ್ಲ. ಕ್ಯಾಥೋಲಿಕ್ ಧರ್ಮಾನುಸಾರ ಜೀವನದೊಂದಿಗೆ ಸಂಬಂಧವಿಲ್ಲದೆ, ಕೇವಲ ಶವಸಂಸ್ಕಾರ ಪದ್ಧತಿಗೆ ಮಾತ್ರವೇ ಸಂಬಂಧಪಟ್ಟುದೇ ಎಂದು ಸ್ವಲ್ಪ ಕಕ್ಕಾಬಿಕ್ಕಿಯಾದಳು. ಅಮರಾಂತಾ ಇಂಥ ಸೂಕ್ಷ್ಮಗಳನ್ನೆಲ್ಲ ಗಮನಿಸುವಷ್ಟು ಸಮಯವಿಲ್ಲದಂತೆ ನೆನಪುಗಳ ಸುಳಿಯಲ್ಲಿ ಸಿಕ್ಕಿಕೊಂಡಿದ್ದಳು. ಎಲ್ಲ ನೆನಪುಗಳನ್ನೂ ಒಂದಿಷ್ಟೂ ಕೆಡದಂತಿರಿಸಿಕೊಂಡೇ ಮುಪ್ಪಿಗೆ ಒಳಗಾಗಿದ್ದಳು. ಪೀತ್ರೋ ಕ್ರೆಸ್ಪಿಯ ವಾಲ್ಟ್ಜ಼ಗಳನ್ನು ಕೇಳಿದಾಗ, ಪ್ರಾಯದಲ್ಲಿನ ನೆನಪುಗಳು ಮರುಕಳಿಸಿ ಅಳುತ್ತಿದ್ದಳು. ಯಾವ ಸಂಗೀತದ ಸುರುಳಿಗಳನ್ನು ಕೆಲಸಕ್ಕೆ ಬಾರದ್ದೆಂದು, ತೇವದಿಂದ ಕೊಳೆತಿದೆಯೆಂದು ಭಾವಿಸಿ ಕಸದ ಬುಟ್ಟಿಗೆ ಎಸೆದಿದ್ದು ನೆನಪಿನಲ್ಲಿ ಸುಳಿದಾಡುತ್ತಿದ್ದವು. ಅವೆಲ್ಲವನ್ನು ತನ್ನ ಸೋದರಳಿಯ ಅರೆಲಿಯಾನೊ ಜೋಸ್‌ನ ಪ್ರೀತಿಯಲ್ಲಿ, ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್‌ನ ಪ್ರಶಾಂತತೆಯಲ್ಲಿ ಮರೆಯಲು ಪ್ರಯತ್ನಿಸಿದಳಾದರೂ ಸಾಧ್ಯವಾಗಲಿಲ್ಲ. ಮೂರು ವರ್ಷದ ಜೋಸ್‌ನನ್ನು ಶಾಲೆಗೆ ಕಳುಹಿಸುವ ಮೊದಲು ಮುದಿತನದಲ್ಲಿ ಸಾಮಾನ್ಯವಾಗಿ ಮಾಡುವಂತೆ, ಸ್ನಾನಮಾಡಿಸಿದಳು. ಅವನನ್ನು, ಅಜ್ಜಿಯೊಬ್ಬಳು ಮೊಮ್ಮಗನಿಗೆ ನೀಡುವ ಮುತ್ತಿನಂತಲ್ಲದೆ, ಹೆಣ್ಣೊಬ್ಬಳು ಗಂಡಸಿಗೆ ಮುತ್ತುಕೊಡುವಂತೆ ಕೊಟ್ಟಳು. ಫ್ರೆಂಚ್ ಹೆಂಗಸರು ಕೊಡುವಂಥ ರೀತಿಯದೆಂದು ಹೇಳಲಾಗುತ್ತಿತ್ತು. ಇಂಥದ್ದನ್ನೇ ಅವಳು ಹನ್ನೆರಡು ವರ್ಷದವಳಾಗಿದ್ದಾಗ, ಹದಿನಾಲ್ಕು ವರ್ಷದವಳಾಗಿದ್ದಾಗ, ಅದೂ ನೃತ್ಯ ಮಾಡುತ್ತಿದ್ದಾಗ ಪೀತ್ರೋ ಕ್ರೆಸ್ಪಿಗೆ ಕೊಡಬೇಕೆಂದು ಬಯಸಿದಂಥ ಮುತ್ತಾಗಿತ್ತು. ಕೆಲವೊಮ್ಮೆ ದುಃಖ, ಯಾತನೆಯನ್ನು ಹರಿಯಬಿಟ್ಟದ್ದಕ್ಕಾಗಿ ಮನಸ್ಸಿಗೆ ನೋವಾಗುತ್ತಿತ್ತು. ಕೆಲವೊಮ್ಮೆ ಉಂಟಾಗುತ್ತಿದ್ದ ಅಗಾಧ ಸಿಟ್ಟಿಗಾಗಿ ಸೂಜಿಯಿಂದ ಬೆರಳನ್ನು ಚುಚ್ಚಿಕೊಳ್ಳುತ್ತಿದ್ದಳು. ಆದರೆ ಅವಳಿಗೆ ಹೆಚ್ಚಿನ ನೋವು ಸಿಟ್ಟು ಉಂಟಾದದ್ದು, ಸಾವಿನೆಡೆಗೆ ತನ್ನನ್ನು ಕೊಂಡೊಯ್ಯುತ್ತಿರುವ ಪ್ರೇಮದ ಪರಿಮಳ. ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಮರೆಯಲಿಕ್ಕೇ ಸಾಧ್ಯವಾಗದಂತೆ ಯುದ್ಧ ಬಗ್ಗೆ ಯೋಚಿಸುತ್ತಿದ್ದಂತೆ ಅಮರಾಂತಾ ರೆಬೆಕಾಳ ಬಗ್ಗೆ ಯೋಚಿಸಿದ. ಆದರೆ ಅವಳ ಸೋದರ ನೆನಪುಗಳನ್ನು ಕರಗಿಸಿಬಿಟ್ಟನಾದರೂ ಇವಳು ಮಾತ್ರ ಅವುಗಳನ್ನು ಮತ್ತಷ್ಟು ಕಾಡುವಂತೆ ಮಾಡಿಕೊಂಡಳು. ಅವಳು ದೇವರಲ್ಲಿ ಪ್ರಾರ್ಥಿಸಿಕೊಂಡದ್ದು, ರೆಬೆಕಾಳಿಗಿಂತ ಮೊದಲೇ ತನಗೆ ಸಾಯುವ ಶಿಕ್ಷೆ ಕೊಡದಿರಲಿ ಎಂದು. ಪ್ರತಿಸಲವೂ ಅವಳ ಭಗ್ನಗೊಂಡ ಮನೆಯನ್ನು ಹಾದುಹೋಗುವಾಗಲೆಲ್ಲ, ದೇವರು ತನ್ನ ಪ್ರಾರ್ಥನೆಯನ್ನು ಕೇಳಿಸಿಕೊಳ್ಳುತ್ತಿದ್ದಾನೆ ಎಂದುಕೊಂಡಳು. ಒಂದು ದಿನ ಮಧ್ಯಾಹ್ನ ನಡುಮನೆಯಲ್ಲಿ ಕುಳಿತು ಹೊಲಿಗೆ ಕೆಲಸದಲ್ಲಿ ತೊಡಗಿದ್ದಾಗ, ಅವಳಿಗೆ, ರೆಬೆಕಾಳ ಸಾವಿನ ಸುದ್ದಿ ತಂದಾಗ ತಾನು ಇದೇ ಜಾಗದಲ್ಲಿ, ಇದೇ ರೀತಿಯಲ್ಲಿ, ಇದೇ

ಹೊತ್ತಿನಲ್ಲಿ, ಬೆಳಕಿನಲ್ಲಿ ಕುಳಿತಿರುತ್ತೇನೆ ಎಂದು ಖಚಿತವಾದ ನಂಬಿಕೆ ಇರಿಸಿಕೊಂಡಿದ್ದಳು. ಅದಕ್ಕಾಗಿ ಅವಳು ಯಾವುದೋ ಪತ್ರದ ನಿರೀಕ್ಷೆಯಲ್ಲಿ ಕುಳಿತಂತೆ ಕುಳಿತು ಎದುರು ನೋಡುತ್ತಿದ್ದಳು. ಕಾಯುವ ಬೇಸರವನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಹೊಲಿದ ಗುಂಡಿಗಳನ್ನು ಕಿತ್ತು ಮತ್ತೆ ಅವುಗಳನ್ನು ಹೊಲಿಯುತ್ತಿದ್ದಳು. ಮನೆಯಲ್ಲಿ ಆ ಸಮಯದಲ್ಲಿ ಅಮರಾಂತಾ ರೆಬೆಕಾಗಾಗಿ ಶವವಸ್ತ್ರವನ್ನು ಹೊಲಿಯುತ್ತಿದ್ದಾಳೆಂಬ ವಿಷಯ ಯಾರಿಗೂ ತಿಳಿದಿರಲಿಲ್ಲ. ನಂತರ ಅರೆಲಿಯಾನೊ ಟ್ರಿಸ್ಟ್ ರೆಬೆಕಾಳನ್ನು ತಾನು ನೋಡಿದ ಸಂಗತಿಯನ್ನು, ಅವಳು ಪ್ರೇತದಂತಾಗಿರುವುದನ್ನೂ, ತಲೆಮೇಲೆ ಒಂದೆರಡು ಚಿನ್ನದ ಬಣ್ಣದ ಕೂದಲಿರುವುದನ್ನೂ ವಿವರಿಸಿದಾಗ, ಅಮರಾಂತಾ ಅದೇ ರೀತಿಯಲ್ಲಿರಬಹುದೆಂದು ಸ್ವಲ್ಪಕಾಲ ಕಲ್ಪಿಸಿಕೊಂಡಿದ್ದರಿಂದ, ಆ ವಿವರಗಳನ್ನು ಕೇಳಿ ಅಚ್ಚರಿಗೊಳ್ಳಲಿಲ್ಲ. ಅವಳು ರೆಬೆಕಾಳ ಶವವನ್ನು ಪ್ಯಾರಾಫಿನ್‌ನಿಂದ ಮುಖದ ವಿಕಾರತೆಯನ್ನು ಮುಚ್ಚುವಂತೆ ಮಾಡಿ, ರಕ್ಷಿಸಬೇಕೆಂದುಕೊಂಡಿದ್ದಳು. ಸಂತರ ಕೂದಲುಗಳಿಂದ ಅವಳಿಗೊಂದು ವಿಗ್ ತಯಾರಿಸಬೇಕೆಂದುಕೊಂಡಿದ್ದಳು. ಶವವನ್ನು ತುಂಬಾ ಚೆನ್ನಾಗಿ ನೋಡುವುದಕ್ಕೆ ಸುಂದರವಾಗಿ ಕಾಣುವಂತೆ ಒಳ್ಳೊಳ್ಳೆ ನುಣುಪಾದ ವಸ್ತ್ರಗಳಿಂದ ಅಲಂಕರಿಸಬೇಕು, ಅದ್ದೂರಿಯ ಶವಸಂಸ್ಕಾರಗಳೊಂದಿಗೆ ಹುಳುಗಳ ವಶಕ್ಕೆ ಒಪ್ಪಿಸಬೇಕೆಂದೆಲ್ಲಾ ಯೋಜಿಸಿದ್ದಳು. ಎಂಥ ಕ್ರೂರವಾದ ಮನಸ್ಸಿನಿಂದ, ದ್ವೇಷದಿಂದ ಈ ರೀತಿಯ ಯೋಜನೆಯನ್ನು ಯೋಚಿಸಿದ್ದಳೆಂದರೆ, ತನ್ನ ಯೋಜನೆ ಬಗ್ಗೆ ತಾನೇ ಕಂಪಿಸುವಂಥಾದ್ದಾಗಿತ್ತು. ಈ ಯೋಜನೆಯನ್ನು ಪ್ರೀತಿಯಿಂದ ಯೋಚಿಸಿದ್ದೇ ಆಗಿದ್ದರೆ ಅದನ್ನು ಜಾರಿಗೊಳಿಸುತ್ತಿದ್ದಳು. ಆದರೆ ಇದರಿಂದ ಉಂಟಾಗಬಹುದಾಗಿದ್ದ ಗೊಂದಲದಿಂದ ಬೇಸರಗೊಳ್ಳದೆ, ಅಪರಕರ್ಮದ ಕ್ರಿಯಾವಿಧಿಗಳಲ್ಲಿ ನೈಪುಣ್ಯತೆ ಪಡೆದುಕೊಳ್ಳಲು ಪ್ರಯತ್ನಿಸಿದಳು. ಆದರೆ ಇದೆಲ್ಲದರ ನಡುವೆ ಒಂದನ್ನು ಮರೆತಳು. ದೇವರು ತನ್ನ ಪ್ರಾರ್ಥನೆಗೆ ಸ್ಪಂದಿಸುವುದರ ನಡುವೆಯೂ ರೆಬೆಕಾಳಿಗೂ ಮೊದಲೆ ತಾನು ಸಾಯಬಹುದೆಂಬ ಸತ್ಯವನ್ನು, ವಾಸ್ತವವಾಗಿ ಆದದ್ದೂ ಹಾಗೆಯೇ. ಕಡೆಯ ಕ್ಷಣಗಳಲ್ಲಿ ಅಮರಾಂತಾ ಹತಾಶೆಯನ್ನು ಅನುಭವಿಸಲಿಲ್ಲ. ಒಂದು ರೀತಿಯಲ್ಲಿ ಸಾವೆಂಬುದು, ಸಮಯಕ್ಕೆ ಮೊದಲೇ ತನ್ನನ್ನು ಅಪ್ಪಿಕೊಂಡು ಮನದ ಕಹಿ ದ್ವೇಷಗಳಿಗೆ ಬಿಡುಗಡೆಯನ್ನೇ ನೀಡಿತು. ಉರಿಬಿಸಿಲಿನ ಒಂದು ಮಧ್ಯಾಹ್ನ ಮೆಮೆ ಶಾಲೆಗೆ ಹೋದ ನಂತರ ಹೊಲಿಯುತ್ತಾ ಕುಳಿತಿದ್ದಾಗ ಅದನ್ನು ನೋಡಿದಳು. ನೀಳ ಕೂದಲಿನ, ನೀಲಿಬಣ್ಣದ ಉಡುಪು ತೊಡ್ಡಿದ್ದ, ಹೆಚ್ಚುಕಡಿಮೆ, ಅಡಿಗೆ ಮನೆಯ ಕೆಲಸಗಳಲ್ಲಿ ಸಹಾಯ ಮಾಡುತ್ತಿದ್ದ ಸಮಯದಲ್ಲಿ ಪಿಲಾರ್ ತರ್ನಿರಾ ಕಾಣಿಸಿಕೊಳ್ಳುತ್ತಿದ್ದ ರೀತಿಯಲ್ಲಿದ್ದ ಒಂದು ಹೆಣ್ಣನ್ನು ನೋಡಿದಳು. ಅವಳು ನಿಜವಾಗಿಯೂ ಮನುಷ್ಯಳು ಎಂಬಂತಿದ್ದುದೇ ಅಲ್ಲದೆ, ಸೂಜಿಗೆ ದಾರಪೋಣಿಸಿ ಕೊಡಲೇ ಎಂದು ಪ್ರಶ್ನಿಸಿದ್ದರೂ, ಫರ್ನಾಂಡಾಳಿಗೆ ಮಾತ್ರ ಕಾಣಿಸಿರಲಿಲ್ಲ. ಸಾವು ಅವಳು ಯಾವಾಗ ಸಾಯುತ್ತಾಳೆ, ಅವಳ ಸಾವಿನ ಕ್ಷಣಗಳು ಸಮೀಪಿಸಿವೆ, ರೆಬೆಕಾಗೆ ಮೊದಲೇ ಸಾಯುತ್ತಾಳೆಯೇ ಎಂದೇನೂ ಹೇಳದಿದ್ದರೂ ಮುಂದಿನ ಏಪ್ರಿಲ್ ಆರನೇ ತಾರೀಖಿನ ಹೊತ್ತಿಗೆ ತನ್ನ ಶವವಸ್ತ್ರವನ್ನು ಸಿದ್ಧಪಡಿಸಿಕೊಳ್ಳಲು ಆದೇಶಿಸಿದಳು. ಅವಳಿಗೆ ತನ್ನ ಶವವಸ್ತ್ರವನನು ಎಷ್ಟು ಸೂಕ್ಷ್ಮವಾಗಿ, ಸುಂದರವಾಗಿ ಇಷ್ಟ ಬಂದ ರೀತಿಯಲ್ಲಿ

ಮಾಡುವುದಕ್ಕೆ ಪೂರ್ಣವಾಗಿ ಪರವಾನಗಿ ಇತ್ತಾದರೂ ರೆಬೆಕಾಳ ಶವವಸ್ತ್ರವನ್ನು ಮಾಡುವಷ್ಟೇ ಪ್ರಾಮಾಣಿಕವಾಗಿ ಇರಬೇಕೆಂದೂ ಸೂಚಿಸಲಾಗಿತ್ತು. ಅಷ್ಟೇ ಅಲ್ಲ ಆ ಶವವಸ್ತ್ರ ಮುಗಿದ ಸಂಜೆಗೇ ನೋವು, ನರಳಿಕೆ ಕಹಿಭಾವನೆ ಇಲ್ಲದೆ ಸಾವು ಬರುವುದಾಗಿ ಹೇಳಿತ್ತು. ಅಮರಾಂತಾ ಆದಷ್ಟೂ ಸಮಯವನ್ನು ಎಷ್ಟು ಸಾಧ್ಯವೋ ಅಷ್ಟು ವ್ಯರ್ಥಮಾಡಲು ಒರಟಾದ ಬಟ್ಟೆ ನೇಯಲು, ದಾರಗಳನ್ನು ತರಿಸಿಕೊಂಡಳು. ಎಷ್ಟು ಜಾಣತನದಿಂದ ಕೆಲಸ ಮಾಡಿದಳೆಂದರೆ ಒಂದು ವಸ್ತ್ರಕ್ಕೆ ನಾಲ್ಕು ವರ್ಷಗಳನ್ನು ತೆಗೆದುಕೊಂಡಳು. ನಂತರ ಹೊಲಿಯಲು ಆರಂಭಿಸಿದಳು. ಕೊನೆಗಳಿಗೆಗಳು ಅನಿವಾರ್ಯವಾಗಿ ಹತ್ತಿರವಾಗುತ್ತಿದ್ದಂತೆ, ಪವಾಡ ಮಾತ್ರದಿಂದ ರೆಬೆಕಾಳ ಸಾವಿನ ನಂತರ ತನ್ನ ಸಾವು ಸಂಭವಿಸಲು ಸಾಧ್ಯವೆಂದರಿತಳು. ಆ ಗಂಭೀರ ಆಲೋಚನೆಯೇ ನಿರಾಸೆ, ಹತಾಶೆಯನ್ನು ಒಪ್ಪಿಕೊಳ್ಳುವ ತಾಳ್ಮೆಯನ್ನು ಕೊಟ್ಟಿತು. ಆಗ ಅವಳಿಗೆ ಕರ್ನಲ್ ಅರೆಲಿಯಾನೊ ಬ್ಯುಂಡಿಯಾನ ಪುಟ್ಟ ಚಿನ್ನದ ಮೀನುಗಳ ವಿಷಮುಚಕ್ರದ ಅರ್ಥ ಹೊಳೆಯಿತು. ಪ್ರಪಂಚ ಅವಳ ಹೊರಮೈ ಚರ್ಮಕ್ಕಷ್ಟೇ ಸೀಮಿತಗೊಂಡಿತ್ತು. ಮನದೊಂದಿಗಿನ ಕಹಿಯೆಲ್ಲವೂ ದೂರವಾಗಿ ಸ್ವಚ್ಛವಾಗಿತ್ತು. ವರ್ಷಗಳ ಮೊದಲೇ ಈ ಬಗೆಯ ಜ್ಞಾನೋದಯವಾಗಿದ್ದರೆ, ನೆನಪುಗಳನ್ನು ಶುದ್ಧಗೊಳಿಸಿಕೊಳ್ಳಬಹುದಾಗಿತ್ತು. ಮತ್ತೊಮ್ಮೆ ವಿಶ್ವವನ್ನು ಹೊಸ ಬೆಳಕಿನಲ್ಲಿ ಕಟ್ಟಿಕೊಳ್ಳಬಹುದಾಗಿತ್ತು. ಯಾವುದೇ ಕಂಪನವಿಲ್ಲದೆ ಪೀತ್ರೋ ಕ್ರೆಸ್ಪಿಯ ಲ್ಯಾವೆಂಡರ್ ಪರಿಮಳವನ್ನು ಮರುಕಳಿಸಿಕೊಳ್ಳಬಹುದಾಗಿತ್ತು; ಪ್ರೀತಿಯಿಂದ ಅಥವಾ ದ್ವೇಷದಿಂದ ಈ ರೀತಿ ಮಾಡಬೇಕೆಂಬುದಲ್ಲ, ಒಂಟಿತನವನ್ನು ಅಪಾರವಾಗಿ ಅರ್ಥಮಾಡಿ ಕೊಳ್ಳಬಹುದಾಗಿತ್ತೆಂಬ ಉದ್ದೇಶದಿಂದ ಮೆಮೆ ಮಾತಾಡುವಾಗ ಒಂದು ರಾತ್ರಿ ಅದರಲ್ಲಿ ಕಾಣಿಸಿಕೊಂಡ ದ್ವೇಷ ತನ್ನನ್ನೇ ಗುರಿಮಾಡಿದ್ದೆಂದು ಅನಿಸಿದರೂ ಸಿಟ್ಟಾಗಲಿಲ್ಲ. ತಾನೂ ಹದಿಹರೆಯದಲ್ಲಿ ಅದೇ ರೀತಿ ಇದ್ದದ್ದು, ಇವಳಲ್ಲಿ ಮರುಕಳಿಸಿದೆ ಎಂದಷ್ಟೇ ತಿಳಿದಳು. ಅಷ್ಟು ಹೊತ್ತಿಗೆ ತನ್ನ ವಿಧಿಯನ್ನು ಎಷ್ಟರಮಟ್ಟಿಗೆ ಒಪ್ಪಿಕೊಂಡಿದ್ದಳೆಂದರೆ, ತನ್ನನ್ನು ತನ್ನ ತಪ್ಪುಗಳನ್ನು ತಿದ್ದಿಕೊಳ್ಳುವುದಕ್ಕೆ ಸಾಧ್ಯತೆಗಳೇ ಕಾಣಿಸುತ್ತಿಲ್ಲವೆನಿಸಿದಾಗಲೂ ಬೇಸರಗೊಳ್ಳಲಿಲ್ಲ. ಶವವಸ್ತ್ರವನ್ನು ಮುಗಿಸುವುದಷ್ಟೇ ಅವಳ ಉದ್ದೇಶವಾಗಿತ್ತು. ನಿಧಾನವಾಗಿ ಎಲ್ಲ ವಿವರಗಳೊಂದಿಗೆ ಮೊದಲು ಮಾಡುತ್ತಿದ್ದಂತೆ ಮಾಡದೆ ಈಗ ಕೆಲಸವನ್ನು ತ್ವರಿತಗೊಳಿಸಿದಳು. ಒಂದು ವಾರಕ್ಕೆ ಮುಂಚೆ ಅವಳು ಲೆಕ್ಕಹಾಕಿ ಫೆಬ್ರವರಿ ನಾಲ್ಕನೆ ತಾರೀಖು ರಾತ್ರಿಯಷ್ಟು ಹೊತ್ತಿಗೆ ಕಡೆಯ ಹೊಲಿಗೆ ಹಾಕಬೇಕೆಂದುಕೊಂಡಳು. ಉದ್ದೇಶವನ್ನು ತಿಳಿಸದೆ, ಮೆಮೆಗೆ ಕ್ಲ್ಯಾವಿಕಾರ್ಡ್ ಸಂಗೀತ ಕಾರ್ಯಕ್ರಮವನ್ನು ಆ ದಿನದ ನಂತರದ ದಿನಕ್ಕೆ ಮುಂದೂಡುವಂತೆ ಸಲಹೆ ನೀಡಿದಳು. ಆದರೆ ಅವಳು ಅದನ್ನು ಲೆಕ್ಕಿಸಲಿಲ್ಲ. ಅಮರಾಂತಾ ನಲ್ವತ್ತೆಂಟು ಗಂಟೆಗಳನ್ನು ಹೇಗೆ ತಡಮಾಡುವುದೆಂದು ಯೋಚಿಸಿದಳು. ಸಾವೂ ಕೂಡಾ ಅವಳಿಗೆ ಅವಳ ದಾರಿಯನ್ನು ತೋರಿಸುತ್ತಿದೆ ಎನ್ನುವುದು ಫೆಬ್ರವರಿ ನಾಲ್ಕನೇ ತಾರೀಖಿನ ರಾತ್ರಿ ದೊಡ್ಡ ಬಿರುಗಾಳಿ ಎದ್ದು ವಿದ್ಯುಚ್ಛಕ್ತಿ ಸರಬರಾಜು ನಿಂತಾಗ ಮನವರಿಕೆಯಾಯಿತು. ಮರುದಿನ ಬೆಳಿಗ್ಗೆ ಎಂಟುಗಂಟೆಗೆ ಅತ್ಯಂತ ಸುಂದರವಾದ, ಎಂದೂ ಯಾವ ಹೆಣ್ಣೂ ಮಾಡಲು ಸಾಧ್ಯವಾಗದ ಹಾಗೆ, ಬಟ್ಟೆಯ ಮೇಲೆ ಕಡೆಯ ಹೊಲಿಗೆಯನ್ನು ಹಾಕಿದಳು, ಮತ್ತು ಯಾವುದೇ ನಾಟಕೀಯತೆಯ

ಪ್ರದರ್ಶನವಿಲ್ಲದೆ ಮನೆಯವರಿಗೆಲ್ಲ ಸಂಜೆಗೆ ಸಾಯುವುದಾಗಿ ತಿಳಿಸಿದಳು. ಮನೆಯವರಿಗೆ ಹೇಳಿದ್ದಷ್ಟೇ ಅಲ್ಲ, ಇಡೀ ಊರಿಗೇ ತಿಳಿಸಿದಳು. ತನ್ನ ಸಣ್ಣತನಗಳ ಬದುಕಿಗೆ ಪರಿಹಾರವಾಗಿ ಪ್ರಪಂಚಕ್ಕೆ ಒಂದು ಉಪಕಾರ ಮಾಡಿದಂತಾಗುತ್ತದೆ ಎಂದು ಆಲೋಚಿಸಿ ಹೀಗೆ ಮಾಡಿದಳು. ಸತ್ತವರ ಬಳಿಗೆ ಕಾಗದಗಳನ್ನು ತೆಗೆದುಕೊಂಡು ಹೋಗಲು ತನಗಲ್ಲದೆ ಬೇರೆಯವರಿಗೆ ಸಾಧ್ಯವಿಲ್ಲ ಎಂದು ಯೋಚಿಸಿದಳು.

ಅಮರಾಂತಾ ಬ್ಯುಂಡಿಯಾ ಸಂಜೆಗೆ ಸತ್ತವರ ಬಳಿಗೆ ಕಾಗದಗಳನ್ನು ತೆಗೆದುಕೊಂಡು ಹೋಗುತ್ತಿದ್ದಾಳೆಂಬ ಸುದ್ದಿ ಮಧ್ಯಾಹ್ನದ ಹೊತ್ತಿಗೆ ಮೊದಲೇ ಮಕೊಂಡೊದಲೆಲ್ಲ ಸುದ್ದಿ ಹರಡಿತು. ಮಧ್ಯಾಹ್ನ ಮೂರು ಗಂಟೆಯಷ್ಟು ಹೊತ್ತಿಗೆ ರಾಶಿ ರಾಶಿ ಕಾಗದಗಳು ನಡುಮನೆಯಲ್ಲಿ ತುಂಬಿದವು. ಯಾರಿಗೆ ಕಾಗದ ಬರೆಯಲು ಇಷ್ಟವಾಗಲಿಲ್ಲವೊ ಅವರೆಲ್ಲ ಬಾಯಲ್ಲಿ ಹೇಳಿದರು. ಅಮರಾಂತಾ ಒಂದು ನೋಟ್‌ಬುಕ್ಕಿನಲ್ಲಿ ಸತ್ತವರ ಹೆಸರು, ಸತ್ತ ದಿನಾಂಕ ಇತ್ಯಾದಿ ವಿವರಗಳನ್ನು ಬರೆದುಕೊಂಡಳು. "ಯೋಚನೆ ಮಾಡಬೇಡಿ" ಎಂದು ಅವರೆಲ್ಲರಿಗೂ (ಕಳಿಸುತ್ತಿದ್ದವರಿಗೆ) ಭರವಸೆಯ ಮಾತು ಹೇಳಿದಳು. "ಹೋದ ತಕ್ಷಣ ನಾನು ಮಾಡುವ ಕೆಲಸವೇ ಅವರನ್ನು ಪತ್ತೆ ಹಚ್ಚಿ, ನಿಮ್ಮ ಸಂದೇಶಗಳನ್ನು ತಲುಪಿಸುತ್ತೇನೆ" ಎಂದಳು. ಅದೆಲ್ಲ ಒಂದು ನಾಟಕವಾಗಿತ್ತು. ಅಮರಾಂತಾ ಒಂದಿಷ್ಟಾದರೂ ಬೇಸರವನ್ನಾಗಲಿ, ದುಃಖವನ್ನಾಗಲಿ ತೋರಿಸಿಕೊಳ್ಳಲಿಲ್ಲ. ಬದಲಾಗಿ ಕರ್ತವ್ಯವನ್ನು ಮಾಡಿದ್ದಕ್ಕೆ ಸ್ವಲ್ಪ ಗೆಲುವಾಗಿಯೇ ಇದ್ದಳು. ಅವಳು ನೆಟ್ಟಗೆ ತೆಳ್ಳಗೆ ಮೊದಲಿನ ಹಾಗೇ ಇದ್ದಳು. ಗಡುಸಾದ ಕೆನ್ನೆ ಮೂಳೆಗಳು, ಬಿದ್ದು ಹೋಗಿದ್ದ ಒಂದೆರಡು ಹಲ್ಲು ಬಿಟ್ಟರೆ ಮೊದಲಿಗಿಂತ ಅವಳು ಆಗಿದ್ದ ವಯಸ್ಸಿಗಿಂತ ಚಿಕ್ಕವಳಾಗಿ ಕಾಣುತ್ತಿದ್ದಳು. ಅವಳೇ ಖುದ್ದಾಗಿ ಅವರಿಗೆಲ್ಲ ಅವರವರ ಪತ್ರಗಳನ್ನು ಪೆಟ್ಟಿಗೆಯಲ್ಲಿ ಹಾಕಿ ಸೀಲುಮಾಡಿ ತನ್ನ ಗೋರಿಯಲ್ಲಿ ಹಾಕಲು ಹೇಳಿದಳು. ಬೆಳಿಗ್ಗೆ ಕಾರ್ಪೆಂಟರ್ ಬಂದು, ಯಾವುದೊ ಡ್ರೆಸ್ ಹೊಲಿಯಲು ಅಳತೆ ತೆಗೆದುಕೊಳ್ಳುವಂತೆ, ನಡುಮನೆಯಲ್ಲಿ ನಿಂತ ಅವಳ ಅಳತೆಯನ್ನು ಶವಪೆಟ್ಟಿಗೆ ತಯಾರಿಸಲು ತೆಗೆದುಕೊಂಡ. ಅವಳು ಎಷ್ಟು ಲವಲವಿಕೆಯಿಂದ ಕಾಣಿಸಿಕೊಂಡಳೆಂದರೆ ಫರ್ನಾಂಡಾಗೆ ಅವಳು ಮನೆಯವರ ಜೊತೆ ತಮಾಶೆ ಮಾಡುತ್ತಿದ್ದಾಳಾ ಹೇಗೆ ಎಂದುಕೊಂಡಳು. ಉರ್ಸುಲಾಗೆ ತನ್ನ ಅನುಭವದಲ್ಲಿ ಬ್ಯುಂಡಿಯಾ ಕುಟುಂಬದವರೆಲ್ಲ ಯಾವುದೇ ನರಳಿಕೆ ಇಲ್ಲದೆ ಸತ್ತದ್ದರಿಂದ, ಅಮರಾಂತಾಳಿಗೆ ಸಾವಿನ ಮುನ್ಸೂಚನೆ ದೊರೆತಿದೆ ಎಂಬುದರಲ್ಲಿ ಸಂದೇಹವೇ ಇರಲಿಲ್ಲ. ಆದರೆ ಈ ಕಾಗದಗಳ ಹಗರಣ, ಸಂಬಂಧಪಟ್ಟವರಿಗೆ ಬೇಗ ತಲುಪಿಸಬೇಕೆಂಬ ಆತಂಕದಲ್ಲಿ, ಕಾಗದಗಳನ್ನು ಕಳಿಸಿದವರಿಗೆ ಅವಳನ್ನು ಜೀವಂತವಾಗಿಯೇ ಎಲ್ಲಿ ಹೂಳಿ ಬಿಡುತ್ತಾರೊ ಎನ್ನುವ ತಲ್ಲಣ ಉರ್ಸುಲಾಳದಾಗಿತ್ತು. ಅದಕ್ಕಾಗಿ ಮನೆಗೆ ಬಂದ ಜನರನ್ನು ಹೊರಗೆ ಕಳಿಸಲು ಮತ್ತು ಬರುತ್ತಿರುವವರನ್ನು ಕೂಗಿ ತಡೆಯುವುದರಲ್ಲಿ, ಸಂಜೆ ನಾಲ್ಕು ಗಂಟೆ ಸುಮಾರಿಗೆ ಯಶಸ್ವಿಯಾದಳು. ಆ ಸಮಯಕ್ಕೆ ಅವಳು ತನ್ನಲ್ಲಿದ್ದ ವಸ್ತುಗಳನ್ನು ಬಡವರಿಗೆ ಹಂಚಿದಳು. ಇನ್ನೂ ಪೂರ್ತಿಯಾಗದ ಶವಪೆಟ್ಟಿಗೆಯ ಮೇಲೆ ಬದಲಾಯಿಸಬೇಕಾದ ಬಟ್ಟೆ ಮತ್ತು ಸಾಯುವಾಗ ಧರಿಸಲು ಬೇಕಾದ ಸಾಧಾರಣವಾದ ಶೂಗಳನ್ನು ಇರಿಸಿದಳು. ಅವಳು ಮುನ್ನೆಚ್ಚರಿಕೆ ತೆಗೆದುಕೊಂಡಿದ್ದಳು. ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಸತ್ತಾಗ, ಅವನ

ಯಾವುದೇ ಶೂಗಳು ಇರಲಿಲ್ಲ. ಇದ್ದದ್ದು ಕೇವಲ ವರ್ಕ್‌ಷಾಪಿನಲ್ಲಿ ಹಾಕಿಕೊಳ್ಳುತ್ತಿದ್ದ ಬೆಡ್‌ರೂಂ ಚಪ್ಪಲಿಗಳು. ಆದ್ದರಿಂದ ಒಂದು ಜೊತೆ ಹೊಸ ಶೂಗಳನ್ನು ಖರೀದಿಸಬೇಕಾಗಿ ಬಂದಿತ್ತು. ಐದುಗಂಟೆಗೆ ಸ್ವಲ್ಪ ಮೊದಲೇ ಅರೆಲಿಯಾನೊ ಸೆಗುಂಡೊ ಮೆಮೆಯನ್ನು ಸಂಗೀತ ಕಾರ್ಯಕ್ರಮಕ್ಕೆ ಕರೆದುಕೊಂಡು ಹೋಗಲೆಂದು ಬಂದವನು ಮನೆಯಲ್ಲಿ ಶವಸಂಸ್ಕಾರದ ಸಿದ್ಧತೆಗಳು ನಡೆಯುತ್ತಿದ್ದುದನ್ನು ನೋಡಿ ಅಚ್ಚರಿಪಟ್ಟ. ಆ ಕ್ಷಣದಲ್ಲಿ ಯಾರಾದರೂ ಬದುಕಿದ್ದರೆ ಅದು ಪ್ರಶಾಂತವಾಗಿದ್ದ ಅಮರಾಂತಾ. ಅವಳಿಗೆ ಆನೆಗಳನ್ನು ಪಳಗಿಸುವಷ್ಟು ಸಮಯವೂ ಇದ್ದ ಹಾಗಿತ್ತು. ಅರೆಲಿಯಾನೊ ಸೆಗುಂಡೊ ಮತ್ತು ಮೆಮೆ ಅವಳಿಂದ ಅಣಕು ರೀತಿಯಲ್ಲಿ ಬೀಳ್ಕೊಂಡು, ಮುಂದಿನ ಶನಿವಾರ ಒಂದು ದೊಡ್ಡ ಪುನರುತ್ಥಾನದ ಪಾರ್ಟಿಯನ್ನು ಏರ್ಪಡಿಸುವುದಾಗಿ ಮಾತುಕೊಟ್ಟರು. ಅಮರಾಂತಾ ಬ್ಯುಂಡಿಯಾ ಸತ್ತವರಿಗಾಗಿ ಕಾಗದಗಳನ್ನು ಸಂಗ್ರಹಿಸುತ್ತಿದ್ದಾಳೆ ಎಂದು ಜನರಾಡಿಕೊಳ್ಳುತ್ತಿದ್ದ ಮಾತು ಕೇಳಿ ಫಾದರ್ ಆ್ಯಂಟೊನಿಯಾ ಇಸಾಬೆಲ್ ಅಂತಿಮಕ್ರಿಯೆಗಳನ್ನು ಆಚರಿಸಲು ಸಂಜೆ ಐದುಗಂಟೆಗೆ ಆಗಮಿಸಿದ. ಇವುಗಳನ್ನು ಸ್ವೀಕರಿಸಬೇಕಾದವಳು ಸ್ನಾನದಲ್ಲಿದ್ದುದರಿಂದ ಹದಿನೈದು ನಿಮಿಷಕ್ಕೂ ಹೆಚ್ಚುಕಾಲ ಕಾಯಬೇಕಾಯಿತು. ನೈಟ್ ಷರ್ಟನ್ನು ಧರಿಸಿ, ಕೂದಲನ್ನು ಭುಜದ ಮೇಲೆ ಇಳಿಬಿಟ್ಟು ಬಂದು ನಿಂತ ಅವಳನ್ನು ನೋಡಿದಾಗ, ಅವಳು ತಮಾಶೆ ಮಾಡುತ್ತಿರಬೇಕೆನಿಸಿ, ಪವಿತ್ರಪೀಠವನ್ನು ಹಿಡಿದಿದ್ದ ಹುಡುಗನನ್ನು ಕಳಿಸಿಬಿಟ್ಟ. ಆದರೆ ಇಪ್ಪತ್ತು ವರ್ಷಗಳ ಉದ್ಧಟತನದ ನಂತರ ಈಗ ಅವಳಿಂದ ತಪ್ಪೊಪ್ಪಿಗೆ ಪಡೆಯಲು ಸದವಕಾಶವೆಂದು ಭಾವಿಸಿದ. ಅಮರಾಂತಾ ತನ್ನದು ಪರಿಶುದ್ಧ ಮನಸ್ಸಾಗಿರುವುದರಿಂದ ತನಗೆ ಯಾವುದೇ ಬಗೆಯ ಧಾರ್ಮಿಕ ವಿಧಿಗಳ ಅಗತ್ಯವಿಲ್ಲ ಎಂದು ಹೇಳಿಬಿಟ್ಟಳು. ಜನರು ಕೇಳಿಸಿಕೊಳ್ಳುತ್ತಾರೆಂಬ ಹೆದರಿಕೆಯೂ ಇಲ್ಲದೆ, ತಪ್ಪೊಪ್ಪಿಗೆಗೆ ಮುಂದಾಗಲು ತಾನು ಯಾವ ರೀತಿಯ ಭಯಂಕರ ಪಾಪವನ್ನು ಎಸಗಿದ್ದೇನೆ ಎಂದು ತನ್ನನ್ನು ತಾನೇ ಗಟ್ಟಿಯಾಗಿ ಪ್ರಶ್ನಿಸಿಕೊಂಡಳು. ಇಂಥ ನಾಚಿಕೆಗೇಡಿನ ಕೆಲಸಕ್ಕಿಂತ ಅಧಾರ್ಮಿಕವೆನಿಸುವಂಥ ಸಾವೇ ಮೇಲೆಂದುಕೊಂಡಳು. ನಂತರ ಅವಳು ಮಲಗಿದಳು ಮತ್ತು ಅಮರಾಂತಾಳ ಕನ್ಯತ್ವವನ್ನು ಸಾರ್ವಜನಿಕವಾಗಿ ಪ್ರಮಾಣೀಕರಿಸಬೇಕೆಂದು ಉರ್ಸುಲಾಳನ್ನು ಕೇಳಿಕೊಂಡಳು.

"ಯಾರಿಗೂ ಯಾವುದೇ ಬಗೆಯ ಅನುಮಾನ ಬೇಡ"

"ಅಮರಾಂತಾ ಈ ಪ್ರಪಂಚಕ್ಕೆ ಹೇಗೆ ಬಂದಳೊ ಹಾಗೇ ಇಲ್ಲಿಂದ ಹೋಗುತ್ತಿದ್ದಾಳೆ" ಎಂದು ಫರ್ನಾಂಡಾ ಕೇಳಿಸಿಕೊಳ್ಳಲೆಂದು ಗಟ್ಟಿಯಾಗಿ ಕೂಗಿ ಹೇಳಿದಳು.

ಮತ್ತೆ ಅವಳು ಏಳಲೇ ಇಲ್ಲ. ನಿಜವಾಗಿಯೂ ಖಾಯಿಲೆ ಬಿದ್ದವಳಂತೆ ಕುಷನ್ ಮೇಲೆ ಮಲಗಿದ್ದಳು. ಸಾವು ಹೇಳಿದ ರೀತಿಯಲ್ಲಿಯೇ ಉದ್ದನೆಯ ಕೂದಲನ್ನು ಹೆಣೆದು ಕಿವಿಯ ಸುತ್ತ ಸುರಳಿಯಾಗಿರಿಸಿದ್ದಳು. ನಲ್ವತ್ತು ವರ್ಷಗಳಿಗೂ ಮೇಲೆ ಮೊದಲ ಬಾರಿಗೆ, ಉರ್ಸುಲಾಳನ್ನು ಕನ್ನಡಿ ಕೊಡಲು ಕೇಳಿದಳು. ಅದರಲ್ಲಿ ತನ್ನ ಮುಖವನ್ನು ನೋಡಿಕೊಂಡಳು. ವಯಸ್ಸು ಮತ್ತು ಹುತಾತ್ಮತೆಯಿಂದ ಸೊರಗಿ ಹೋಗಿದ್ದ ಮುಖವನ್ನು ಕಂಡಾಗ, ತಾನು ತನ್ನನ್ನು ಊಹಿಸಿಕೊಂಡಂತೆ ಇರುವುದನ್ನು ನೋಡಿ

ಆಶ್ಚರ್ಯಚಕಿತಳಾದಳು. ಬೆಡ್‌ರೂಮಿನಲ್ಲಿನ ನಿಶ್ಶಬ್ದತೆಯನ್ನು ಗಮನಿಸಿ ಉರ್ಸುಲಾ ಕತ್ತಲಾಗುತ್ತಿದೆ ಎಂದುಕೊಂಡಳು.

"ಫರ್ನಾಂಡಾಳಿಗೆ ಗುಡ್‌ಬೈ ಹೇಳು, ಒಂದು ಕ್ಷಣದ ಹೊಂದಾಣಿಕೆ ಜೀವಮಾನದ ಸ್ನೇಹಕ್ಕಿಂತ ದೊಡ್ಡದು" ಎಂದು ಅವಳನ್ನು ಕೇಳಿಕೊಂಡಳು.

"ಪ್ರಯೋಜನವಿಲ್ಲ" ಅಮರಾಂತಾ ಉತ್ತರಿಸಿದಳು.

ಮೆಮೆಗೆ ಅವಳ ಬಗ್ಗೆ ಯೋಚನೆ ಮಾಡದಿರಲು ಸಾಧ್ಯವಾಗಲಿಲ್ಲ. ದೀಪಗಳು ಹೊತ್ತಿಕೊಂಡಾಗ ವೇದಿಕೆ ಮೇಲೆ ಅವಳು ಕಾರ್ಯಕ್ರಮದ ಎರಡನೆ ಭಾಗ ಆರಂಭಿಸಬೇಕಿತ್ತು. ಅಷ್ಟರಲ್ಲಿ ಯಾರೋ ಅವಳ ಬಳಿಗೆ ಬಂದು ಕಿವಿಯಲ್ಲಿ ಏನೋ ಹೇಳಿದರು. ಕೂಡಲೇ ಕಾರ್ಯಕ್ರಮ ನಿಲ್ಲಿಸಲಾಯಿತು. ಅರೆಲಿಯಾನೊ ಸೆಗುಂಡೊ ಮನೆಯ ಒಳಗೆ ಹೋಗಲು ಜನರನ್ನು ಸರಿಸಿ, ವಯಸ್ಸಾಗಿದ್ದ, ಕನ್ಯತ್ವದಲ್ಲಿಯೇ ಇದ್ದ ಮತ್ತು ನೋಡಲು ವಿಕಾರವಾಗಿದ್ದ, ಬ್ಯಾಂಡೇಜನ್ನು ಇನ್ನೂ ಕೈಯಲ್ಲಿ ಇರಿಸಿಕೊಂಡಿದ್ದ, ನೋಡಲು ಅದ್ಭುತವಾಗಿ ಕಂಗೊಳಿಸುತ್ತಿದ್ದ ವಸ್ತ್ರದಲ್ಲಿ ಸುತ್ತಿಡಲಾಗಿದ್ದ ಶವವನ್ನು ನೋಡಿದ. ನಡುಮನೆಯಲ್ಲಿ ಕಾಗದಗಳಿಂದ ತುಂಬಿದ್ದ ಪೆಟ್ಟಿಗೆಯ ಪಕ್ಕದಲ್ಲಿ ಮಲಗಿಸಲಾಗಿತ್ತು.

ಅಮರಾಂತಾಳ ಸಾವಿಗಾಗಿ ಒಂಭತ್ತು ರಾತ್ರಿಗಳ ಶೋಕಾಚರಣೆ ನಂತರ ಉರ್ಸುಲಾ ಎದ್ದೇಳಲೇ ಇಲ್ಲ. ಸಾಂತಾ ಸೋಫಿಯ ದ ಲಾ ಪೀದಾದ್ ನೋಡಿಕೊಂಡಳು. ಅವಳು ಮಲಗಿದ್ದಲ್ಲಿಗೇ ಊಟವನ್ನು ಕೊಂಡೊಯ್ಯುತ್ತಿದ್ದಳು. ತೊಳೆದುಕೊಳ್ಳಲು ನೀರನ್ನು ಅಲ್ಲಿಗೇ ಕೊಡುತ್ತಿದ್ದಳು. ಮಕೊಂಡೊದಲ್ಲಿ ನಡೆಯುವ ಪ್ರತಿಯೊಂದು ವಿಷಯದ ಬಗ್ಗೆ ದಿನನಿತ್ಯವೂ ತಿಳಿಸುತ್ತಿದ್ದಳು. ಅರೆಲಿಯಾನೊ ಸೆಗುಂಡೊ ಅವಳಿಗಾಗಿ ಬಟ್ಟೆಬರೆ ತಂದುಕೊಟ್ಟ. ಅದನ್ನು ಅವಳು ದಿನನಿತ್ಯಕ್ಕೆ ಅನಿವಾರ್ಯವಾದ ವಸ್ತುಗಳ ಜೊತೆಗೆ ಇರಿಸಿದಳು. ತನ್ನ ಕೈಗೆ ಎಟುಕುವ ಹಾಗೆ ಬೇಕಾದ್ದನ್ನೆಲ್ಲ ಇರಿಸಿ ತನ್ನದೊಂದು ಪ್ರಪಂಚವನ್ನು ಕಟ್ಟಿಕೊಂಡಳು. ಅಮರಾಂತ ಉರ್ಸುಲಾಳ ಬಗ್ಗೆ ಹೆಚ್ಚಿನ ಪ್ರೀತಿಯನ್ನು ಬೆಳೆಸಿಕೊಂಡಳು. ಅವಳು ಥೇಟ್ ಅಮರಾಂತಾಳಂತೆ ಇದ್ದಳು. ಅವಳಿಗೆ ಓದುವುದನ್ನೂ ಕಲಿಸಿದಳು. ಅವಳ ಸರಳತೆ, ಸ್ವಾವಲಂಬನಗಳನ್ನು ನೋಡಿದ ಯಾರಾದರೂ ಸ್ವಾಭಾವಿಕವಾಗಿ ನೂರು ವರ್ಷಗಳ ಭಾರ ಅವಳ ಮೇಲೆ ಗೆಲುವು ಸಾಧಿಸಿದೆ ಅಂದುಕೊಳ್ಳಬಹುದಾಗಿತ್ತು. ಅವಳಿಗೆ ಕಣ್ಣಿನ ಸಮಸ್ಯೆಯಿದ್ದರೂ, ಯಾರಿಗೂ ಅವಳಿಗೆ ಪೂರ್ತಿ ಕುರುಡಾಗಿದೆ ಎನ್ನುವ ಅನುಮಾನ ಬರುತ್ತಿರಲಿಲ್ಲ. ಅವಳ ಬಳಿ ಸಾಕಷ್ಟು ಸಮಯವಿತ್ತು. ಮನೆಯಲ್ಲಿ ಏನೇನು ನಡೆಯುತ್ತಿದೆ ಎಂಬುದನ್ನು ಮೌನವಾಗಿ ಗಮನಿಸುತ್ತಿದ್ದಳು. ಮನೆಯಲ್ಲಿ ಮೆಮೆಯ ಮಾನಸಿಕ ತೊಳಲಾಟವನ್ನು ಗಮನಿಸಿದವಳು ಅವಳೇ ಆಗಿದ್ದಳು.

"ಬಾ ಇಲ್ಲಿ, ಈಗ ನಾವಿಬ್ಬರೇ ಇರೋದು. ನಿನ್ನ ಮನಸ್ಸಿನಲ್ಲಿ ಏನಿದೆ ಅನ್ನುವುದನ್ನು ನನಗೆ ಹೇಳು. ಯಾವ ಚಿಂತೆ ನಿನ್ನನ್ನು ಕಾಡುತ್ತಿದೆ" ಎಂದು ಕೇಳಿದಳು.

ಮೆಮೆ ಸುಮ್ಮನೆ ನಕ್ಕು ಮಾತು ಮರೆಸಿದಳು. ಉರ್ಸುಲಾ ಒತ್ತಾಯ ಮಾಡಲಿಲ್ಲ. ಮೆಮೆ ಅದಾದ ಮೇಲೆ ಬಾರದಿದ್ದುದನ್ನು ನೋಡಿ ತನ್ನ ಅನುಮಾನ ನಿಜ ಎಂದು

ಸಮರ್ಥಿಸಿಕೊಂಡಳು. ಮಾಮೂಲಿಗಿಂತ ಬೇಗ ಏಳುವುದು, ಹೊರಗೆ ಹೋಗಲು ಚಡಪಡಿಸುವುದು, ಪಕ್ಕದ ರೂಮಿನಲ್ಲಿ ಇಡೀ ರಾತ್ರಿ ಶತಪಥ ಹಾಕುವುದು, ಒಂದು ಚಿಟ್ಟೆಯ ರೆಕ್ಕೆಬಡಿತಕ್ಕೂ ಅಸಮಾಧಾನಗೊಳ್ಳುವುದು ಎಲ್ಲವನ್ನೂ ಉರ್ಸುಲಾ ಗಮನಿಸಿದ್ದಳು. ಫರ್ನಾಂಡಾಳಿಗೆ ಯಾವ ವಿಚಾರವೂ ತಿಳಿಯದೆ ಹೋದದ್ದು, ಮೆಮೆ ಅಪ್ಪನನ್ನು ನೋಡಲು ಹೋಗುತ್ತೇನೆಂದು ಹೋದಳಾದರೂ ಅವಳನ್ನು ಹುಡುಕಿಕೊಂಡು ಅರೆಲಿಯಾನೊ ಸೆಗುಂಡೊ ಮನೆಗೆ ಬಂದದ್ದನ್ನು ನೋಡಿ ಆಶ್ಚರ್ಯಪಟ್ಟಳು. ಒಂದು ದಿನ ರಾತ್ರಿ ಸಿನಿಮಾ ಥಿಯೇಟರ್‌ನಲ್ಲಿ ಪುರುಷನೊಬ್ಬನಿಗೆ ಮುತ್ತುಕೊಡುತ್ತಿರುವಾಗ ಸಿಕ್ಕಿಬಿದ್ದ ಮೆಮೆ, ಫರ್ನಾಂಡಾಳು ಕಳವಳಗೊಳ್ಳುವುದಕ್ಕೆ ಮೊದಲಿನಿಂದಲೂ ತನ್ನ ಗೌಪ್ಯ ವ್ಯವಹಾರಗಳಿಂದಾಗಿ ಭಯ ಆತಂಕಗಳಿಂದ ಕೂಡಿದ್ದಳು.

ಮೆಮೆ ತನ್ನೊಳಗೆ ತಾನು ಮುಳುಗಿದ್ದ ಆ ಸಮಯದಲ್ಲಿ ಇದಕ್ಕೆಲ್ಲಾ ಉರ್ಸುಲಾ ಚಾಡಿ ಹೇಳಿರುವುದೇ ಕಾರಣವೆಂದುಕೊಂಡಳು. ವಾಸ್ತವವಾಗಿ ತನ್ನ ಬಗ್ಗೆ ತಾನೇ ಹೇಳಿಕೊಂಡಿದ್ದಳು. ಎಂಥ ಜಡವ್ಯಕ್ತಿಯನ್ನಾದರೂ ಎಬ್ಬಿಸಬಲ್ಲ ಸಾಮರ್ಥ್ಯ ಮೆಮೆಗೆ ಇದೆ ಎನ್ನುವ ಸೂಚನೆಗಳಿದ್ದರೂ ಅದನ್ನು ಗುರುತಿಸಲು ಫರ್ನಾಂಡಾಳಿಗೆ ಬಹಳ ಸಮಯ ಬೇಕಾಯಿತು. ಕಾರಣ ಅಮೂರ್ತ ವೈದ್ಯರ ಜೊತೆಗಿನ ವ್ಯವಹಾರದಲ್ಲಿ ಇದೆಲ್ಲ ಗಮನಿಸಲು ಅವಳಿಗೆ ಸಮಯ ಆಗಲಿಲ್ಲ. ಅಷ್ಟಾದರೂ, ಮೆಮೆ ಏನೂ ಮಾತಾಡದೆ ವಹಿಸುತ್ತಿದ್ದ ಮೌನಗಳು, ಇದ್ದಕ್ಕಿದ್ದಂತೆ ಸಿಡಿದೇಳುವ ಪ್ರವೃತ್ತಿ, ಕ್ಷಣ ಕ್ಷಣಕ್ಕೂ ಬದಲಾಗುತ್ತಿದ್ದ ಅವಳ ಭಾವಸ್ಥಿತಿಗಳು. ನಡವಳಿಕೆಯಲ್ಲಿನ ವೈರುಧ್ಯಗಳು ಇತ್ಯಾದಿಗಳನ್ನು ಕೊನೆಗೆ ಗಂಭೀರವಾಗಿ ಗಮನಿಸಿದಳು. ಏನೂ ಗೊತ್ತಿಲ್ಲದ ರೀತಿಯಲ್ಲಿ ಅವಳ ಮೇಲೆ ಕಣ್ಣಿಟ್ಟು ಕಾಯುತ್ತಿದ್ದಳು. ಗೆಳತಿಯರ ಜೊತೆ ಹೋಗಲು, ಪಾರ್ಟಿಗಳಿಗೆ ಒಳ್ಳೊಳ್ಳೆ ಬಟ್ಟೆ ಹಾಕಿಕೊಳ್ಳಲು ಯಾವ ನಿರ್ಬಂಧವನ್ನೂ ಹೇರಲಿಲ್ಲ. ಅವಳಿಗೆ ಮುಜುಗರವಾಗುವಂತಹ, ಸಿಟ್ಟಿಗೆಬ್ಬಿಸುವಂತಹ ಯಾವ ಪ್ರಶ್ನೆಗಳನ್ನೂ ಕೇಳಲಿಲ್ಲ. ತಾನು ಹೇಳುತ್ತಿರುವುದಕ್ಕಿಂತ ವಿರುದ್ಧವಾದ ಕೆಲಸಗಳಲ್ಲಿ ತೊಡಗಿದ್ದಾಳೆಂಬುದಕ್ಕೆ ಸಾಕಷ್ಟು ಪುರಾವೆ ಸಿಕ್ಕಿದ್ದರೂ ಅದನ್ನು ತೋರಿಸಿಕೊಳ್ಳದೆ, ಅವಳಿಗೆ ಅನುಮಾನ ಬಾರದಹಾಗೆ ಸರಿಯಾದ ಸಮಯಕ್ಕಾಗಿ ಕಾಯುತ್ತಿದ್ದಳು. ಒಂದು ರಾತ್ರಿ ಅವಳು ತಂದೆಯ ಜೊತೆ ಸಿನಿಮಾ ನೋಡಲು ಹೋಗುತ್ತಿರುವುದಾಗಿ ಹೇಳಿದಳು. ಸ್ವಲ್ಪ ಹೊತ್ತಿನ ನಂತರ ಪೆಟ್ರಾಕೋಟ್ಸ್ ಮನೆಯ ಕಡೆಯಿಂದ ಪಟಾಕಿಸದ್ದು, ಅರೆಲಿಯಾನೊ ಸೆಗುಂಡೊ ನುಡಿಸುತ್ತಿದ್ದ ಅಕಾರ್ಡಿಯೋನ್ ಸಂಗೀತ ಕೇಳಿ ಬಂತು. ಫರ್ನಾಂಡಾ ಕೂಡಲೆ ಬಟ್ಟೆ ಬದಲಾಯಿಸಿ ಸಿನಿಮಾ ಥಿಯೇಟರ್‌ಗೆ ಹೋದಳು. ಕತ್ತಲಲ್ಲೂ ಕೂಡ ತನ್ನ ಮಗಳನ್ನು ಗುರುತಿಸಿದಳು. ಮಗಳ ಬಗ್ಗೆ ಉಂಟಾಗಿದ್ದ ಕಳವಳದ ಗೊಂದಲದಲ್ಲಿ ಮುತ್ತು ಕೊಡುತ್ತಿದ್ದ ಮನುಷ್ಯ ಯಾರೆಂಬುದು ಸರಿಯಾಗಿ ತಿಳಿಯಲಿಲ್ಲ. ಆದರೆ ಪ್ರೇಕ್ಷಕರ ಕಿವಿಗಡಚಿಕ್ಕುವ ಗದ್ದಲ, ನಗುವಿನ ನಡುವೆಯೇ "ನನ್ನದು ತಪ್ಪಾಯಿತು" ಎಂದು ಅವನು ಹೇಳಿದ್ದನ್ನು ಕೇಳಿಸಿಕೊಂಡಳು. ಮೆಮೆಯನ್ನು ಸುಮ್ಮನೆ, ಏನೊಂದು ಮಾತೂ ಆಡದೆ ಅಲ್ಲಿಂದ ಎಬ್ಬಿಸಿಕೊಂಡು, ಅವಳಿಗೆ ನಾಚಿಕೆ ಬರುವಂತೆ ಟರ್ಕ್‌ಸ್ಟ್ರೀಟ್‌ನಲ್ಲಿ ನಡೆಸಿಕೊಂಡು ಮನೆಗೆಳೆದು ತಂದು ಬೆಡ್‌ರೂಂನಲ್ಲಿ ಹಾಕಿ ಬೀಗ ಜಡಿದಳು.

ಮಾರನೆದಿನ ಮಧ್ಯಾಹ್ನ ಆರು ಗಂಟೆ ಹೊತ್ತಿಗೆ, ಮೆಮೆಯನ್ನು ಕರೆಯಲು ಬಂದಿದ್ದ ಯುವಕನ ಧ್ವನಿಯನ್ನು ಗುರುತಿಸಿದಳು. ನೋಡಲು ಪೇಲವವಾಗಿಯೂ ವೇದನೆ ತುಂಬಿದ ಕಪ್ಪಾದ ಕಣ್ಣುಗಳುಳ್ಳ ಯುವಕನಾಗಿದ್ದ. ಜಿಪ್ಸಿಗಳನ್ನು ನೋಡಿದ್ದವರಿಗೆ ಇವನು ಅಚ್ಚರಿ ಮೂಡಿಸುತ್ತಿರಲಿಲ್ಲ. ಕನಸುಗಾರನಂತಿದ್ದ ಅವನ ಜೊತೆ ಇದ್ದ ಮಗಳ ಉದ್ದೇಶ ಸ್ವಲ್ಪ ಬಿಗಿಯಿಲ್ಲದ ಯಾವ ಹೆಂಗಸಿಗಾದರೂ ಹೊಳೆಯುತ್ತಿತ್ತು. ಅವನು ಕೊಳಕಾದ ಲಿನನ್ ಸೂಟ್ ಧರಿಸಿದ್ದ. ಬಿಳಿ ಝಿಂಕ್ ಕಲೆಗಳಿದ್ದ ಶೂ ಧರಿಸಿದ್ದ. ಕೈಯಲ್ಲಿ ಒಂದು ಸ್ಟ್ರಾ ಹ್ಯಾಟ್ ಇರಿಸಿಕೊಂಡಿದ್ದ. ಅದನ್ನು ಹಿಂದಿನ ಶನಿವಾರವೇ ಕೊಂಡಿದ್ದ. ಆ ಕ್ಷಣದಲ್ಲಿ ತನ್ನ ಜೀವಮಾನದಲ್ಲೆಂದೂ ಹೆದರಿರಲಿಲ್ಲದ ರೀತಿಯಲ್ಲಿ ಹೆದರುವ ಸಾಧ್ಯತೆಯಿದ್ದರೂ ಗಾಂಭೀರ್ಯ ಮತ್ತು ಸಮಯೋಜಿತತೆಯಿಂದ ಆಗುವ ಅವಮಾನದಿಂದ ತಪ್ಪಿಸಿಕೊಂಡ. ಆದರೆ ಅವನ ಒರಟಾದ ಕೈಗಳು ಬಣ್ಣಮೆತ್ತಿದ ಉಗುರುಗಳಿಂದ ವಿಲಕ್ಷಣವಾಗಿದ್ದುದು ಅವನ ಮರ್ಯಾದೆಗೆ ಅಡ್ಡಿಯಾಯಿತು. ಅವನ ರೀತಿಯಿಂದಲೇ ಒಮ್ಮೆ ನೋಡಿದ ಕೂಡಲೆ ಫರ್ನಾಂಡಾಳಿಗೆ ಅವನೊಬ್ಬ ಮೆಕಾನಿಕ್ ಎಂಬುದು ಅರ್ಥವಾಯಿತು. ಅವನು ಒಂದೇ ಭಾನುವಾರದ ಸೂಟ್ ಧರಿಸಿದ್ದ ಮತ್ತು ಅವನ ಷರ್ಟಿನ ಕೆಳಗೆ ಬನಾನಾ ಕಂಪನಿಯ ಗುರುತಿನ ಬಿಲ್ಲೆ ಇತ್ತು. ಅವನಿಗೆ ಮಾತಾಡಲು ಬಿಡಲಿಲ್ಲ. ಬಾಗಿಲ ಒಳಗೆ ಬರಲೂಬಿಡಲಿಲ್ಲ. ಒಂದು ಕ್ಷಣದ ನಂತರ, ಹಳದಿ ಚಿಟ್ಟೆಗಳು ತುಂಬಿಕೊಳ್ಳುತ್ತಿದ್ದುದರಿಂದ ಬಾಗಿಲನ್ನೇ ಮುಚ್ಚಿಬಿಟ್ಟಳು.

"ಹೊರಟುಹೋಗು, ಸಭ್ಯರ ಮನೆಗೆ ಹೀಗೆ ಬರಲು ಯಾವುದೇ ಕಾರಣವಿಲ್ಲ" ಎಂದು ಅವನಿಗೆ ಹೇಳಿದಳು.

ಅವನ ಹೆಸರು ಮೌರಿಸಿಯೊ ಬ್ಯಾಟಿಲೋನಿಯಾ, ಮಕೊಂಡೊದಲ್ಲಿಯೇ ಹುಟ್ಟಿ ಬೆಳೆದವನು. ಬನಾನಾ ಕಂಪನಿಯ ಗ್ಯಾರೇಜಿನಲ್ಲಿ ಮೆಕಾನಿಕ್ ಆಗಿ ಕೆಲಸ ಕಲಿಯುತ್ತಿದ್ದ. ಮೆಮೆ ಆಕಸ್ಮಿಕವಾಗಿ ಒಂದು ದಿನ ಮಧ್ಯಾಹ್ನ, ತನ್ನ ಗೆಳತಿ ಪೆಟ್ರಿಷಿಯಾ ಬ್ರೌನ್ ಜೊತೆ, ತೋಟದಲ್ಲಿ ಕಾರಿನಲ್ಲಿ ಸುತ್ತಾಡಲು, ಕಾರು ತೆಗೆದುಕೊಂಡು ಬರಲು ಹೋಗಿದ್ದಾಗ ಅವನನ್ನು ನೋಡಿದ್ದಳು. ಕಾರಿನ ಡ್ರೈವರ್ ಆ ದಿನ ಬರದಿದ್ದ ಕಾರಣ ಅವನನ್ನೇ ಡ್ರೈವ್ ಮಾಡಲು ಹೇಳಲಾಗಿತ್ತು. ಮೆಮೆಗೆ ಡ್ರೈವರ್ ಪಕ್ಕದಲ್ಲಿ ಕುಳಿತುಕೊಳ್ಳಬೇಕೆಂಬ ಎಷ್ಟೋ ದಿನಗಳ ಆಸೆ ಪೂರೈಸಿಕೊಳ್ಳಲು ಅವಕಾಶ ಸಿಕ್ಕಿತು. ರೆಗ್ಯುಲರಾಗಿ ಬರುತ್ತಿದ್ದ ಡ್ರೈವರ್‌ಗಿಂತ ಮೌರಿಸಿಯೊ ಬ್ಯಾಬಿಲೋನಿಯಾ ಕಾರು ನಡೆಸುವುದನ್ನು ಪ್ರಾಕ್ಟಿಕಲ್ ಮೂಲಕ ಚೆನ್ನಾಗಿ ತಿಳಿಸಿಕೊಟ್ಟಿದ್ದ. ಆ ಅವಧಿಯಲ್ಲಿಯೇ ಮೆಮೆ ಬ್ರೌನ್ ಮನೆಗೆ ಪದೇ ಪದೇ ಹೋಗುತ್ತಿದ್ದಳು. ಹೆಂಗಸರು ಕಾರು ಕಲಿಯುವುದು ಸರಿಯಲ್ಲವೆಂಬ ಭಾವನೆ ಇನ್ನೂ ಉಳಿದಿತ್ತು. ಆದ್ದರಿಂದ ಟೆಕ್ನಿಕಲ್ ವಿವರಗಳನ್ನು ತಿಳಿದುಕೊಂಡಳು. ಅದಾದ ನಂತರ ಎಷ್ಟೋ ತಿಂಗಳು ಬ್ಯಾಬಿಲೋನಿಯಾವನ್ನು ಅವಳು ನೋಡಿಯೇ ಇಇಲಿಲ್ಲ. ಡ್ರೈವ್ ಮಾಡುತ್ತಿದ್ದ ಅವಧಿಯಲ್ಲಿಯೇ ಅವಳಿಗೆ ಅವನ ಗಂಡು ಗಾಂಭೀರ್ಯ, ಸೌಂದರ್ಯಗಳು, ಅವನ ಒರಟು ಕೈಗಳನ್ನು ಮರೆಸಿ ಆಕರ್ಷಿಸಿದವು. ಆಮೇಲೆ ಅವಳು ಅವನ ಅತಿಯಾದ ಸೆಕ್ಯುರಿಟಿ ಪ್ರವೃತ್ತಿ ಸ್ವಲ್ಪ ಅವಳಿಗೆ ಹಿಂಸೆಯಾಯಿತೆಂಬುದನ್ನು ಪೆಟ್ರೀಷಿಯಾ ಬ್ರೌನ್‌ಗೆ ಹೇಳಿದಳು.

ಸಿನಿಮಾಗಳಿಗೆ ಹೋಗುತ್ತಿದ್ದ ಮೊದಲ ಶನಿವಾರ ತಂದೆಯ ಜೊತೆ ಥಿಯೇಟರ್‌ಗೆ ಹೋದಾಗ ಮೌರಿಷಿಯಾ ಬ್ಯಾಬಿಲೋನಿಯ ಕೆಲವು ಸೀಟುಗಳ ಅಂತರದಲ್ಲಿ ಕುಳಿತಿದ್ದುದನ್ನು ನೋಡಿದಳು. ಅಲ್ಲದೆ ಅವನು ಸಿನಿಮಾ ಕಡೆ ಗಮನ ಕೊಡದೆ, ಆಗಾಗ ತನ್ನ ಕಡೆ ತಿರುಗಿ ನೋಡುತ್ತಿದ್ದುದನ್ನು ಗಮನಿಸಿದಳು. ಅವನ ಆ ನೀಚತನ ಅವಳಿಗೆ ಬೇಸರ ತರಿಸಿತು. ನಂತರ ಬ್ಯಾಬಿಲೋನಿಯಾ ಎದ್ದು ಬಂದು ಅರೆಲಿಯಾನೊನನ್ನು ಮಾತಾಡಿಸಿದಾಗ, ಮೊದಲೇ ಇಬ್ಬರ ಪರಿಚಯ ಇದ್ದುದು ತಿಳಿಯಿತು. ಅವನು ಮೊದಲು ಅರೆಲಿಯಾನೊ ಟ್ರಿಸ್ಟೆಯ ಪವರ್ ಪ್ಲಾಂಟ್‌ನಲ್ಲಿ ಕೆಲಸ ಮಾಡುತ್ತಿದ್ದನೆಂಬುದನ್ನು ಅರಿತಳು. ಅವಳ ತಂದೆಯನ್ನು ತಾನು ಕೆಲಸಗಾರನೆಂಬ ಭಾವನೆಯಿಂದಲೇ ಮಾತಾಡಿಸಿದ್ದನೆಂದು ಅರ್ಥಮಾಡಿಕೊಂಡಳು. ಈ ವಿಷಯ ತಿಳಿದ ಮೇಲೆ ಅವನ ಅಹಂಕಾರದಿಂದ ತನ್ನಲ್ಲಿ ಉಂಟಾಗಿದ್ದ ತಿರಸ್ಕಾರ ಭಾವನೆಯನ್ನು ತೊಡೆದುಹಾಕಿದಳು. ಅವರೆಂದೂ ಒಟ್ಟಿಗೆ ಇರಲಿಲ್ಲ. ಪ್ರತ್ಯೇಕವಾಗಿ ಭೇಟಿಯಾಗಿರಲಿಲ್ಲ. ಎದುರಾದಾಗ ಪರಸ್ಪರ ಔಪಚಾರಿಕವಾಗಿ ಮಾತಾಡುತ್ತಿದ್ದರು ಅಷ್ಟೆ. ಕನಸಿನಲ್ಲಿ ಅವನು ತನ್ನನ್ನು ನೌಕಾಘಾತದಲ್ಲಿ ರಕ್ಷಿಸಿದ್ದಕ್ಕೆ ಅವನಿಗೆ ಕೃತಜ್ಞತೆ ಹೇಳುವ ಬದಲು ಸಿಟ್ಟಿಗೆದ್ದಿದ್ದಂತೆ ಕನಸು ಕಂಡಿದ್ದಳು. ಅವನಿಗೆ ಅವಳು ಅವಕಾಶ ಕೊಟ್ಟಿದ್ದಾಳೆಂಬಂತೆ ಅವನು ಅವಳಿಗಾಗಿ ಕಾಯುತ್ತಿದ್ದ. ಆದರೆ ಮೆಮೆ ಅದಕ್ಕೆ ತದ್ವಿರುದ್ಧವಾಗಿ ಬಯಸುತ್ತಿದ್ದಳು. ಹೀಗೆ ಮಾಡುತ್ತಿದ್ದುದು ಬ್ಯಾಬಿಲೋನಿಯಾ ವಿಷಯದಲ್ಲಿ ಮಾತ್ರವಲ್ಲ, ತನ್ನನ್ನು ಇಷ್ಟಪಡುವ ಯಾವ ಗಂಡಸಿಗಾದರೂ ಅವಳು ಮಾಡುವುದು ಹಾಗೆಯೇ ಇರುವಂಥಾದ್ದಾಗಿತ್ತು. ಆದ್ದರಿಂದ ಕನಸುಬಿದ್ದ ನಂತರ ಅವನನ್ನು ದ್ವೇಷಿಸುವುದಕ್ಕೆ ಬದಲಾಗಿ ಅವನನ್ನು ನೋಡಬೇಕೆಂಬ ತುಡಿತ ಹೆಚ್ಚಾದುದಕ್ಕೆ ತನ್ನ ಮೇಲೇ ಸಿಟ್ಟುಬಂತು. ವಾರದಲ್ಲಿ ಅವಳ ಆತಂಕ ಎಷ್ಟು ಹೆಚ್ಚಾಯಿತೆಂದರೆ, ಶನಿವಾರ, ಸಿನಿಮಾಕ್ಕೆ ಬಂದಾಗ ಅವನ ಕಡೆ ಗಮನಕೊಡದಿರಲು ಅವಳು ಸಾಕಷ್ಟು ಪ್ರಯತ್ನ ಮಾಡಬೇಕಾಯಿತು. ಅವನು ಅವಳನ್ನು ಮಾತಾಡಿಸಿದಾಗ ಅವಳ ಹೃದಯವೇ ಬಾಯಿಗೆ ಬಂದದ್ದನ್ನು ತೋರಿಸಿಕೊಳ್ಳದಂತೆ ಇದ್ದಳು. ಸಂತೋಷ ಸಿಟ್ಟುಗಳ ದ್ವಂದ್ವದಲ್ಲಿ, ಮೊಟ್ಟಮೊದಲ ಬಾರಿಗೆ ಹಸ್ತಲಾಘವಕ್ಕೆ ಕೈಚಾಚಿದಳು. ಅವನೂ ಆಗ ಕೈ ಕುಲುಕಲು ಅವಕಾಶ ಪಡೆದ. ಒಂದು ನಿಮಿಷದಲ್ಲಿ ಮೆಮೆ ತನ್ನ ಆತುರಕ್ಕೆ ಪಶ್ಚಾತ್ತಾಪಪಟ್ಟಳು. ಆದರೆ ಆ ಪಶ್ಚಾತ್ತಾಪ ಮರುಕ್ಷಣದಲ್ಲಿಯೇ, ಅವನ ಕೈಗಳು ಬೆವರಿ ತಣ್ಣಗಾಗಿದ್ದನ್ನು ನೋಡಿ ವಿಚಿತ್ರ ಸಮಾಧಾನವಾಯಿತು. ಆ ರಾತ್ರಿ ಅವನ ಆಸೆ ಪೂರೈಸುವುದು ಸಾಧ್ಯವಾಗುವುದಿಲ್ಲವೆನ್ನುವ ವಿಷಯವನ್ನು ಅವನಿಗೆ ತಿಳಿಸುವವರೆಗೂ ತನಗೆ ಸಮಾಧಾನ ಸಾಧ್ಯವಾಗುವುದಿಲ್ಲವೆಂಬುದನ್ನು ಅರಿತಳು. ಒಂದು ವಾರದವರೆಗೆ ಈ ಆತಂಕ ಅವಳ ತಲೆಯಲ್ಲಿ ಸುಳಿದಾಡುತ್ತಿತ್ತು. ಪೆಟ್ರಿಷಿಯಾ ಬ್ರೌನ್ ಹೋಗಿ ಕಾರನ್ನು ತರಲು ತನ್ನನ್ನು ಕರೆದುಕೊಂಡು ಹೋಗಲೆಂದು ನಿಷ್ಪ್ರಯೋಜಕವೆನಿಸುವ ಎಲ್ಲ ಬಗೆಯ ತಂತ್ರಗಳನ್ನು ಆಶ್ರಯಿಸಿದಳು. ಕಡೆಗೆ ಕೆಂಪುತಲೆ ಅಮೆರಿಕನ್ ಹುಡುಗ ರಜೆ ಕಳೆಯಲು ಬಂದವನನ್ನು, ತಾನು ಹೊಸ ಮಾಡಲ್ ಕಾರುಗಳನ್ನು ಕಲಿಯಬೇಕಾಗಿರುವುದರಿಂದ ಗ್ಯಾರೇಜಿಗೆ ಕರೆದೊಯ್ಯುವಂತೆ ಪುಸಲಾಯಿಸಿದಳು. ಅವನನ್ನು ನೋಡಿದ ಕೂಡಲೇ ತನ್ನನ್ನು ತಾನೇ ವಂಚಿಸಿಕೊಂಡಳು. ಅವನ ಜೊತೆ ಏಕಾಂತದಲ್ಲಿರಬೇಕೆಂಬ ತುಡಿತವನ್ನು

ಹತ್ತಿಕ್ಕಿಕೊಳ್ಳಲಾಗಲಿಲ್ಲ. ಆದರೂ ತೋರಗೊಡಲಿಲ್ಲ. ಅವಳು ಬರುತ್ತಿದ್ದುದನ್ನು ಗಮನಿಸಿದಾಗಲೇ ಅವನಿಗೆ ಅವಳ ಉದ್ದೇಶ ಅರ್ಥವಾಗಿತ್ತು.

"ಹೊಸ ಮಾಡಲ್‌ಗಳನ್ನು ನೋಡಲು ಬಂದಿದ್ದೆ" ಎಂದಳು ಮೆಮೆ.

"ಒಳ್ಳೆಯ ನೆಪ" ಎಂದ.

ಮೆಮೆಗೆ ಅವನು ಗರ್ವದಿಂದ ಬೀಗುತ್ತಿದ್ದಾನೆನಿಸಿತು. ಅವನಿಗೆ ಅವಮಾನ ಮಾಡಲು ಕಾರಣಗಳಿಗಾಗಿ ಹುಡುಕಾಡುತ್ತಿದ್ದಳು. ಆದರೆ ಅವನು ಅವಳಿಗೆ ಸಮಯವನ್ನೇ ಕೊಡಲಿಲ್ಲ. "ಮನಸ್ಸು ಕೆಡಿಸಿಕೊಳ್ಳಬೇಡ, ಒಂದು ಹೆಣ್ಣು ಗಂಡೊಬ್ಬನಿಗೆ ಹುಚ್ಚಳಾಗುವುದು ಇದೇ ಮೊದಲಲ್ಲ" ಎಂದು ಮೆಲುದನಿಯಲ್ಲಿ ಹೇಳಿದ. ಅವಳಿಗೆ ಸೋಲಿನ ಅನುಭವ ಎಷ್ಟು ತೀವ್ರವಾಗಿತ್ತೆಂದರೆ, ಯಾವುದೇ ಮಾಡೆಲ್‌ಗಳನ್ನು ನೋಡದೆಯೇ ಗ್ಯಾರೇಜಿನಿಂದ ಹೊರಬಂದಳು. ಇಡೀ ರಾತ್ರಿ ಹಾಸಿಗೆಯಲ್ಲಿ ಹೊರಳಾಡುತ್ತಾ, ಸಿಟ್ಟು ಸೆಡವುಗಳಿಂದ ಅಳುತ್ತಿದ್ದಳು. ಕೆಂಗೂದಲ ಅಮೆರಿಕನ್ ಹುಡುಗ, ಅವಳಲ್ಲಿ ಆಸಕ್ತಿ ತೋರುತ್ತಿದ್ದವನು ನೋಡಲು ಮಗುವಿನಂತಿದ್ದ. ಆಗ ಅವಳಿಗೆ ಮೌರಿಷಿಯಸ್ ಬ್ಯಾಬಿಲೋನಿಯಾ ಬರುವುದಕ್ಕೆ ಮೊದಲೇ ಹಳದಿ ಚಿಟ್ಟೆಗಳು ಬರುತ್ತಿದ್ದುದು ನೆನಪಾಯಿತು. ಅವಳು ಅವುಗಳನ್ನು ಮೊದಲೇ ಗ್ಯಾರೇಜ್ ಬಳಿ ನೋಡಿದ್ದಳು. ಅವುಗಳು ಬಹುಶಃ ಪೈಂಟ್‌ನ ವಾಸನೆಯಿಂದ ಬಂದಿರಬಹುದೆಂದು ಯೋಚಿಸಿದಳು. ಸಿನಿಮಾಗೆ ಹೋಗುತ್ತಿದ್ದಾಗ ಒಂದು ಸಲ ತನ್ನ ತಲೆಮೇಲೆ ಹಾರಾಡುತ್ತಿದ್ದುದನ್ನು ನೋಡಿದ್ದಳು. ಯಾವಾಗ ಮೌರಿಷಿಯಾ ಬ್ಯಾಬಿಲೋನಿಯಾ ಅವಳನ್ನು ಭೂತದ ಹಾಗೆ ಬೆನ್ನು ಹತ್ತಿದನೊ, ಗುಂಪಿನಲ್ಲಿದ್ದರೂ ಅವನನ್ನು ಗುರುತಿಸಲು ತನಗೆ ಮಾತ್ರ ಸಾಧ್ಯವಾದ ರೀತಿಯಲ್ಲಿ ಚಿಟ್ಟೆಗಳಿಗೂ ಮತ್ತು ಅವನ ನಡುವೆ ಸಂಬಂಧದ ಮೂಲಕ ಕಂಡು ಮೌರಿಷಿಯಾ ಬ್ಯಾಬಿಲೋನಿಯಾ ಯಾವಾಗಲೂ ಗುಂಪಿನ ನಡುವೆಯೇ ಇರುತ್ತಿದ್ದ. ಸಂಗೀತ ಸಭೆಗಳಲ್ಲಿ, ಸಿನಿಮಾ ಥಿಯೇಟರ್‌ಗಳಲ್ಲಿ, ಸಾಮೂಹಿಕ ಪ್ರಾರ್ಥನೆಯಲ್ಲಿ – ಹೀಗೆ ಎಲ್ಲಾ ಕಡೆ ಇರುತ್ತಿದ್ದ. ಅವನು ಎಲ್ಲೇ ಇದ್ದರೂ ಹುಡುಕುವ ಅವಶ್ಯಕತೆಯಿರಲಿಲ್ಲ. ಯಾಕೆಂದರೆ ಚಿಟ್ಟೆಗಳು ಇದ್ದಲ್ಲಿ ಅವನಿದ್ದೇ ಇರುತ್ತಾನೆಂಬುದು ಖಾತ್ರಿಯಿತ್ತು. ಅರೆಲಿಯಾನೊ ಸೆಗುಂಡೊಗೆ ಈ ಚಿಟ್ಟೆಗಳ ಕಾಟ ಉಸಿರುಕಟ್ಟುವಂತೆ ಮಾಡಿತ್ತು. ಅವನು ತೀರಾ ಅಸಮಾಧಾನಗೊಂಡಿದ್ದಾಗ, ಅವಳು ಹಿಂದೆ ಮಾತುಕೊಟ್ಟಿದ್ದಂತೆ ಅದರ ರಹಸ್ಯವನ್ನು ಅವನಿಗೆ ತಿಳಿಸಿದಳು. ಅವನು ಮಾಮೂಲಿನಂತೆ ಇದನ್ನು ಕೇಳಿ ನಕ್ಕುಬಿಡುತ್ತಾನೆ ಮತ್ತು "ನಿನ್ನ ತಾಯಿಗೆ ಗೊತ್ತಾದರೆ ಏನು ಮಾಡುತ್ತೀ? ಎಂದು ಕೇಳುತ್ತಾನೆ" ಎಂದು ಕೊಂಡಿದ್ದಳು. ಒಂದು ಬೆಳಿಗ್ಗೆ ಗುಲಾಬಿ ಗಿಡಗಳನ್ನು ಸವರುತ್ತಿದ್ದಾಗ, ಫರ್ನಾಂಡಾ ಭಯದಿಂದ ಗಟ್ಟಿಯಾಗಿ ಕಿರುಚಿಕೊಂಡಳು. ಮೆಮಯನ್ನು ಅಲ್ಲಿಂದ ದೂರ ತೆಗೆದುಕೊಂಡು ಹೋಗುವಂತೆ ಹೇಳಿದಳು. ಅವಳಿದ್ದ ಜಾಗ, ರೆಮೆಡಿಯೋಸ್ ದ ಬ್ಯೂಟಿ ಆಕಾಶಕ್ಕೆ ಹಾರಿ ಹೋದ ಜಾಗವೇ ಆಗಿತ್ತು. ಒಂದು ಕ್ಷಣ ಅವಳಿಗೆ ಅದೇ ರೀತಿಯ ಪವಾಡ ತನ್ನ ಮಗಳ ಜೊತೆಗೂ ಆಗಬಹುದೆಂದು ರೆಕ್ಕೆಗಳು ಫಡಫಡಿಸುವ ಸದ್ದು ಕೇಳಿ ಅಂದುಕೊಂಡಳು. ಅವು ಚಿಟ್ಟೆಗಳಾಗಿದ್ದವು. ಇದ್ದಕ್ಕಿದಂತೆ ಬೆಳಕಿನೊಳಗಿಂದ ಹುಟ್ಟಿಕೊಂಡವೇನೊ ಎಂಬಂತೆ ಮೆಮೆ ನೋಡಿದಳು.

ಅವಳೆದೆ ಪುಟಿಯಿತು. ಅದೇ ಸಮಯಕ್ಕೆ ಮೌರಿಷಿಯಾ ಬ್ಯಾಬಿಲೋನಿಯಾ ಪೊಟ್ಟಣವೊಂದನ್ನು ಹಿಡಿದು ಬಂದು, ಅದನ್ನು ಪೆಟ್ರಿಷಿಯಾ ಬ್ರೌನ್ ಕಡೆಯಿಂದ ಉಡುಗೊರೆ ಎಂದು ಹೇಳಿಕೊಟ್ಟನು. ಮೆಮೆ ಉಕ್ಕುತ್ತಿದ್ದ ನಾಚಿಕೆಯನ್ನು ನುಂಗಿಕೊಂಡಳು. ಅಧೈರ್ಯವನ್ನು ಮರೆಮಾಚಿದಳು. ಮತ್ತು ಸಹಜವಾದ ನಗೆ ತಂದುಕೊಂಡು, ತನ್ನ ಕೈಗಳು ಮಣ್ಣಾಗಿರುವುದರಿಂದ ಅದನ್ನು ರೈಲಿಂಗ್ಸ್ ಮೇಲೆ ಇಡಲು ಕೇಳಿಕೊಂಡಳು. ಅವನನ್ನು ಎಲ್ಲಿ ನೋಡಿದ್ದೆಂದು ನೆನಪಾಗದೆ, ಕೆಲವು ತಿಂಗಳ ಹಿಂದೆ ಮನೆಯಿಂದ ಹೊರಗೆ ಹಾಕಿದ ಅವನನ್ನು ಅವನ ಒರಡು ಚರ್ಮವೊಂದರಿಂದ ಮಾತ್ರವೇ ಗುರುತಿಸಲು ಸಾಧ್ಯವಾಯಿತು.

"ಅವನೊಬ್ಬ ವಿಚಿತ್ರ ಮನುಷ್ಯ. ಅವನ ಮುಖ ನೋಡು, ಅವನು ಸಾಯುವುದರಲ್ಲಿದ್ದಾನೆ" ಎಂದು ಫರ್ನಾಂಡಾ ಹೇಳಿದಳು.

ಮೆಮೆ ತಾಯಿ ಚಿಟ್ಟೆಗಳಿಂದ ಪ್ರಭಾವಿತಳಾಗಿದ್ದಾಳೆ ಎಂದುಕೊಂಡಳು. ಅವರು ಗುಲಾಬಿ ಗಿಡಗಳನ್ನು ಸಮರಿನೇರ್ಪುಗೊಳಿಸಿದ ನಂತರ ಕೈ ತೊಳೆದುಕೊಂಡು, ತನ್ನ ಉಡುಗೊರೆಯ ಪೊಟ್ಟಣವನ್ನು, ಏನಿದೆ ಎಂದು ಬಿಚ್ಚಿನೋಡಲು ಬೆಡ್‌ರೂಮಿಗೆ ತೆಗೆದುಕೊಂಡು ಹೋದಳು. ಅದು ಒಂದು ರೀತಿಯ ಚೈನೀಸ್ ಆಟಿಗೆಯಾಗಿತ್ತು. ಐದು ಪೆಟ್ಟಿಗೆಗಳಿಂದ ಸುತ್ತುವರೆಯಲ್ಪಟ್ಟಿತ್ತು. ಕಡೆಯ ಪೆಟ್ಟಿಗೆಯಲ್ಲಿ ಕಷ್ಟದಿಂದ "ಶನಿವಾರ ನಾವೆಲ್ಲರೂ ಸಿನಿಮಾ ಥಿಯೇಟರ್‌ನಲ್ಲಿ ಸೇರೋಣ" ಎಂದು ಅಕ್ಷರಗಳನ್ನು ಕೊರೆಯಲಾಗಿತ್ತು. ರೈಲಿಂಗ್ಸ್ ಮೇಲೆಯೇ ಎಷ್ಟೋ ಹೊತ್ತು ಆ ಪೆಟ್ಟಿಗೆ ಫರ್ನಾಂಡಾಳ ಕಣ್ಣಿಗೆ ಬೀಳುವಂತಿದ್ದರೂ ನೋಡುವ ಕುತೂಹಲವಿಲ್ಲದೆ ಹೋದದ್ದು ಅವಳಿಗೆ ಒಂದು ರೀತಿಯ ಶಾಕ್ ಎನಿಸಿತು. ಮೌರಿಷಿಯಾ ಬ್ಯಾಬಿಲೋನಿಯಾನ ಉದ್ಧಟತನ, ಸಾಚಾತನದಿಂದ ಮೆಚ್ಚಿಗೆ ಎನಿಸಿದರೂ, ಅವನ ಮುಗ್ಧತೆ, ಅವಳು ಹೇಳಿದಂತೆ ನಡೆದುಕೊಳ್ಳುತ್ತಾಳೆ ಎನ್ನುವ ನಿರೀಕ್ಷೆ, ಅವಳ ಅಂತಃಕರಣವನ್ನು ಸ್ಪರ್ಶಿಸಿತು. ಆ ಹೊತ್ತಿನಲ್ಲಿ, ಅರೆಲಿಯಾನೊ ಸೆಗುಂಡೊಗೆ ಶನಿವಾರ ರಾತ್ರಿ ಒಂದು ಕಾರ್ಯಕ್ರಮ ಇದೆ ಎಂಬುದನ್ನು ಮೆಮೆ ಬಲ್ಲವಳಾಗಿದ್ದಳು. ಇಡೀ ವಾರ ಆತಂಕದ ಬೆಂಕಿಯಲ್ಲಿ ಬೇಯುತ್ತಿದ್ದ ಮೆಮೆ ತಂದೆಯನ್ನು, ಶನಿವಾರ ಥಿಯೇಟರ್‌ಗೆ ತನ್ನೊಬ್ಬಳನ್ನೇ ಬಿಟ್ಟು, ಷೋ ನಂತರ ಕರೆದುಕೊಂಡು ಹೋಗುವಂತೆ ಕೇಳಿಕೊಂಡಳು. ದೀಪಗಳು ಉರಿಯುತ್ತಿದ್ದಾಗ ರಾತ್ರಿಯಲ್ಲಿನ ಪತಂಗ ಅವಳ ತಲೆ ಮೇಲೆ ಫಡಫಡಿಸಿತು. ದೀಪಗಳು ಆರಿದಾಗ ಮೌರಿಷಿಯೊ ಬ್ಯಾಬಿಲೋನಿಯಾ ಅವಳ ಪಕ್ಕದಲ್ಲಿ ಬಂದು ಕುಳಿತ. ಮೆಮೆಗೆ ತೀರಾ ಸಂಕೋಚವೆನಿಸಿ, ಕನಸಿನಲ್ಲಿ ಕಂಡಹಾಗೆ, ಅದರಿಂದ ತನ್ನನ್ನು ರಕ್ಷಿಸಿಕೊಳ್ಳಬೇಕಾಗುತ್ತದೆ ಎನಿಸಿತು. ಕತ್ತಲಲ್ಲಿ ನೆರಳನ್ನು ಮಾತ್ರವೇ ನೋಡಲು ಸಾಧ್ಯವಿದ್ದ ಅವನು ಗ್ರೀಸಿನ ವಾಸನೆಯಿಂದ ಕೂಡಿದ.

"ನೀನು ಬರದಿದ್ದರೆ, ಇನ್ನೆಂದೂ ನನ್ನನ್ನು ನೋಡಲಾಗುತ್ತಿರಲಿಲ್ಲ" ಎಂದ. ಅವನ ಕೈಗಳ ಭಾರ ತನ್ನ ತೊಡೆಮೇಲೆ ಬಿದ್ದಂತೆ ಅನಿಸಿದರೆ, ಮತ್ತೊಂದೆಡೆ ಆ ಕ್ಷಣ ಅವರಿಬ್ಬರೂ ಸ್ವಾಧೀನ ತಪ್ಪುತ್ತಿದ್ದೇವೆಂದೂ ಅರ್ಥಮಾಡಿಕೊಂಡರು.

"ನಿನ್ನ ಬಗ್ಗೆ ನನಗೆ ಗಾಭರಿ ಏನೂಂದ್ರೆ, ಯಾವುದನ್ನು ಹೇಳಬಾರದೊ ಅದನ್ನು ಯಾವಾಗಲೂ ಹೇಳುತ್ತಿರುತ್ತಿ" ಎಂದಳು.

ಅವನಿಗೆ ಪೂರ್ತಿಯಾಗಿ ಸೋತಳು. ನಿದ್ದೆ ಬರುತ್ತಿರಲಿಲ್ಲ. ಹಸಿವೂ ಆಗುತ್ತಿರಲಿಲ್ಲ. ಪೂರ್ತಿಯಾಗಿ, ಒಂಟಿತನದ ಗುಂಗಿಗೆ ಇಳಿದಳು. ತಂದೆಯೂ ಈಗ ಅವಳಿಗೆ ಬೇಡವೆನಿಸಿತ್ತು. ಫರ್ನಾಂಡಾಳನ್ನು ದಿಕ್ಕು ತಪ್ಪಿಸಲು ಸುಳ್ಳಿನ ಕಂತೆಗಳನ್ನು ಸೃಷ್ಟಿಸಿದಳು. ಗೆಳತಿಯರನ್ನೂ ಮರೆತಳು. ಎಲ್ಲ ಕಟ್ಟುಪಾಡುಗಳನ್ನೂ ಮುರಿದು ಎಲ್ಲೆಂದರಲ್ಲಿ ಯಾವ ಸಮಯದಲ್ಲಾದರೂ ಸರಿ ಮೌರಿಷಿಯಾ ಬ್ಯಾಬಿಲೋನಿಯಾ ಜೊತೆ ಇರುತ್ತಿದ್ದಳು. ಮೊದಮೊದಲು ಅವನ ಒರಟುತನ ಬೇಸರವೆನಿಸಿತ್ತು. ಮೊದಲಬಾರಿ ಗ್ಯಾರೇಜಿನ ಹಿಂದುಗಡೆ ಯಾರೂ ಇಲ್ಲದಿದ್ದ ಜಾಗದಲ್ಲಿ ಇಬ್ಬರೇ ಇದ್ದಾಗ ಪಶುವಿನಂತೆ ಅವಳನ್ನು ಬರಸೆಳೆದು ಬಿಗಿದಪ್ಪಿಕೊಂಡು ಪೂರ್ತಿಯಾಗಿ ದಣಿದು ಹೋಗುವಂತೆ ಮಾಡಿದ. ಕ್ರಮೇಣ ಅದೂ ಕೂಡಾ ಒಂದು ಬಗೆಯ ಮೆದುತನವೇ ಎಂದು ಅರ್ಥಮಾಡಿಕೊಂಡ ನಂತರ, ಅವಳು ಅವನಿಗಾಗಿಯೇ ಬದುಕಿದಳು. ಕಡೆಗೆ ಉಪ್ಪು ನೀರಿನಿಂದ ತೊಳೆದ ಗ್ರೀಸಿನ ವಾಸನೆಯಿಂದ, ವಾಸನೆಯಲ್ಲಿ ಮಾದಕತೆ ಅನುಭವಿಸುತ್ತಿದ್ದವಳಿಗೆ ಕಳವಳವಾಯಿತು. ಅಮರಾಂತಾ ಸಾಯುವುದಕ್ಕೆ ಸ್ವಲ್ಪ ಮೊದಲು, ಥಟ್ಟನೆ ಜ್ಞಾನೋದಯವಾಗಿ, ತನ್ನ ಹುಚ್ಚುತನದಿಂದ ಭವಿಷ್ಯದ ಅನಿಶ್ಚತತೆಯ ಬಗ್ಗೆ ಭಯದಿಂದ ಕಂಪಿಸಿದಳು. ಕಾರ್ಡ್‌ಗಳನ್ನು ಓದಿ ಭವಿಷ್ಯ ಹೇಳುವ ಒಬ್ಬ ಹೆಂಗಸಿನ ಬಗ್ಗೆ ತಿಳಿದು ಗುಟ್ಟಾಗಿ ಅವಳಲ್ಲಿಗೆ ಹೋದಳು. ಅವಳು ಪಿಲಾರ್ ತರ್ಸಿರಾ ಆಗಿದ್ದಳು. ಅವಳು ಒಳಗೆ ಬರುತ್ತಿದ್ದಂತೆ ಮೆಮೆಯ ಮನದೊಳಗಿನ ಉದ್ದೇಶಗಳು ಸ್ಪಷ್ಟವಾದವು. "ಕುಳಿತುಕೊ" ಅವಳಿಗೆ ಹೇಳಿದಳು. "ಬ್ಯುಂಡಿಯಾರ ಭವಿಷ್ಯ ಹೇಳೋಕೆ ಕಾರ್ಡ್‌ಗಳ ಅವಶ್ಯಕತೆ ನನಗೆ ಇಲ್ಲ" ಎಂದು ಮುಂದುವರೆದು ಹೇಳಿದಳು. ಆ ಶತಾಯುಷಿ ಹೆಂಗಸು ತನ್ನ ಮುತ್ತಜ್ಜಿ ಎಂಬುದು ಮೆಮೆಗೆ ತಿಳಿದಿರಲಿಲ್ಲ. ವಾಸ್ತವ ಸತ್ಯದೊಂದಿಗೆ ಅವಳು ಪ್ರೀತಿಗೆ ಬಿದ್ದು ಅನುಭವಿಸುತ್ತಿರುವ ಆತಂಕಕ್ಕೆ ಸಮಾಧಾನ ಸಿಗುವುದು ಹಾಸಿಗೆಯಲ್ಲಿಯೇ ಎಂದು ಹೇಳಿದ ಮೇಲೂ ಅವಳನ್ನು ತನ್ನ ಮುತ್ತಜ್ಜಿ ಎಂದು ಹೇಳಿದರೂ ನಂಬುತ್ತಿರಲಿಲ್ಲ. ಮೌರಿಷಿಯೊ ಬ್ಯಾಬಿಲೋನಿಯಾ ಹೇಳಿದ್ದೂ ಕೂಡಾ ಅದನ್ನೆ. ಆದರೆ ಮೆಮೆ ಅದನ್ನು ನಂಬಲಿಲ್ಲ. ಇದರ ಹಿಂದೆ ಮೆಕಾನಿಕ್‌ನ ಅವಿವೇಕ ಕೆಲಸ ಮಾಡಿದೆ ಎಂದು ಊಹಿಸಿದಳು. ಏಕಮುಖವಾದ ಪ್ರೀತಿ ಇನ್ನೊಂದು ಕಡೆಯ ಪ್ರೀತಿಯನ್ನು ಸೋಲಿಸುತ್ತದೆ ಎನ್ನುವುದು, ಗಂಡಸರಿಗೆ ಒಮ್ಮೆ ತೃಪ್ತಿಯಾದರೆ ಅಪೇಕ್ಷೆಯನ್ನು ನಿರಾಕರಿಸುತ್ತಾರೆ ಎನ್ನುವ ಸತ್ಯದಿಂದ ತಿಳಿಯುತ್ತದೆ. ಪಿಲಾರ್ ತರ್ಸಿರಾ ಆದ ತಪ್ಪನ್ನು ಸರಿಪಡಿಸಿದಳಲ್ಲದೆ, ಆರ್ಕಾಡಿಯೊನ ಗರ್ಭಧಾರಣೆಗೆ ಕಾರಣವಾಗಿದ್ದ ಹಳೆಯ ಹಾಸಿಗೆಯನ್ನು ನೀಡಿದಳು. ಇದೇ ಹಾಸಿಗೆಯ ಮೇಲೆ ತನ್ನಜ್ಜಂದಿರಾದ ಆರ್ಕಾಡಿಯೊ ಮತ್ತು ಅರೆಲಿಯಾನೊರಿಗೆ ಜನ್ಮ ಕೊಟ್ಟಿದ್ದಳು. ತರ್ಸಿರಾ ಅಲ್ಲದೆ ಈ ಥರದ ಅಚಾತುರ್ಯ ನಡೆದಲ್ಲಿ ಅದನ್ನು ಹೇಗೆ ನಿವಾರಿಸುವುದು ಮತ್ತು ಕಷ್ಟ ಸಂದರ್ಭದಲ್ಲಿ ಏನು ಮಾಡಬೇಕೆಂಬುದನ್ನು ತಿಳಿಸಿದಳು. ಸಾಸಿವೆ ಪಟ್ಟಿಯ ಆವಿಯನ್ನು ಹಾಕಿ ಬೇಡದ ಗರ್ಭವನ್ನು ಹೊರಹಾಕುವ ವಿಧಾನ ಮತ್ತು ಕೆಲವು ಕಷಾಯಗಳನ್ನು ತಯಾರಿಸುವ ವಿಧಾನವನ್ನೂ ಹೇಳಿಕೊಟ್ಟಳು. "ಅಷ್ಟೇ ಅಲ್ಲದೆ ಪಾಪಪ್ರಜ್ಞೆಯಿಂದಲೂ

ದೂರವಾಗಬಹುದು" – ಎಂದಳು. ಕುಡಿದು ಬಂದಿದ್ದ ಒಂದು ರಾತ್ರಿಯಲ್ಲಿ ತೋರಿದ್ದ ಧೈರ್ಯವೇ ಈಗಲೂ ಅವಳಲ್ಲಿ ಕಂಡುಬಂತು. ಅಮರಾಂತಾಳ ಸಾವು ಅವಳಿಗೆ ತನ್ನ ನಿರ್ಧಾರವನ್ನು ಮುಂದೂಡಲು ಅವಕಾಶ ಕಲ್ಪಿಸಿತು. ಮನೆಯೊಳಗಿದ್ದ ಗುಂಪಿನ ಜೊತೆ ಸೇರಿದ್ದ ಮೌರಿಷಿಯೊ ಬ್ಯಾಬಿಲೋನನ ಪಕ್ಕವನ್ನು ಒಂಭತ್ತು ದಿನಗಳ ಶೋಕಾಚರಣೆಯ ಅವಧಿಯಲ್ಲಿಯೂ ಬಿಡಲಿಲ್ಲ. ನಂತರ ಸುದೀರ್ಘವಾದ ದುಃಖಸೂಚಕ ಅವಧಿಯಲ್ಲಿ ಅನಿವಾರ್ಯವಾಗಿ ಅವರಿಬ್ಬರೂ ಪ್ರತ್ಯೇಕವಾಗಿ ಇರಲೇಬೇಕಾಯಿತು. ಅದು ಒಳತೋಟಗಳ, ಆತಂಕಗಳ ಅದಮ್ಯ ವಾಂಛೆಗಳ ಅವಧಿಯಾಗಿದ್ದು, ಅದು ಮುಗಿದ ಮೊದಲ ಸಂಜೆಯೇ ಮೆಮೆ ಪಿಲಾರ್ ತರ್ನಿರಾಳ ಮನೆಗೆ ಹೋದಳು. ಸಂಪೂರ್ಣವಾಗಿ ಅವಳು ಮೌರಿಷಿಯೊ ಬ್ಯಾಬಿಲೋನಿಯಾನ ವಶಕ್ಕೆ ಒಪ್ಪಿಸಿಕೊಂಡಳು. ಯಾವುದೇ ಪ್ರತಿರೋಧವಾಗಲಿ, ನಾಚಿಕೆಯಾಗಲಿ, ಔಪಚಾರಿಕತೆಯಾಗಲಿ ಅದರಲ್ಲಿ ಇರಲಿಲ್ಲ. ಅಂತಃಪ್ರೇರಣೆಯಿಂದ ಒಪ್ಪಿಸಿಕೊಂಡ ರೀತಿಯಿಂದ, ಅವಳಿಗಿಂತ ಅನುಮಾನಿಸುವ ವ್ಯಕ್ತಿಯಾಗಿದ್ದರೆ ಅವಳು ಬಹಳ ಪಳಗಿದವಳಾಗಿರಬೇಕೆಂದು ಗೊಂದಲಗೊಳ್ಳುತ್ತಿದ್ದ. ವಾರಕ್ಕೆ ಎರಡು ಬಾರಿಯಂತೆ ಮೂರು ತಿಂಗಳವರೆಗೆ ಅವರ ಪ್ರೇಮಸಲ್ಲಾಪ ಮುಂದುವರಿಯಿತು. ಅರೆಲಿಯೋನ ಮುಗ್ಧ ನಂಬಿಕೆಯ ರಕ್ಷಣೆಯಲ್ಲಿ ತಾಯಿಯ ನಿಷ್ಠುರ ನಿರ್ಬಂಧಗಳಿಂದ ರಕ್ಷಿಸಬೇಕೆನ್ನುವ ಉದ್ದೇಶದಿಂದ ಕೊಟ್ಟಿದ್ದ ಸ್ವಾತಂತ್ರ್ಯ ದುರುಪಯೋಗವಾಯಿತಾದರೂ, ಅರೆಲಿಯಾನೊ ಸೆಗುಂಡೊ ಮಗಳು ಸಾಚಾ ಎಂದೇ ನಂಬಿದ್ದ.

ಫರ್ನಾಂಡಾ ಅವರಿಬ್ಬರನ್ನೂ ಅಚ್ಚರಿಗೊಳ್ಳುವಂತೆ ಸಿನಿಮಾ ಥಿಯೇಟರ್‌ನಲ್ಲಿ ಎದುರಾದಾಗ, ಅರೆಲಿಯಾನೊ ಸೆಗುಂಡೊ ಹೃದಯ ಭಾರವಾಯಿತು. ಅಂತಃಪ್ರಜ್ಞೆ ಅವನನ್ನು ಕಾಡಿತು. ಫರ್ನಾಂಡಾ ಮೆಮೆಯನ್ನು ಬೀಗ ಹಾಕಿ ಇರಿಸಿದ್ದ ಬೆಡ್‌ರೂಮಿಗೆ, ಅವಳಿಂದ ನಿಜ ತಿಳಿಯಬಹುದೆಂದು, ತಾನು ತಂದೆಯಿಂದ ಏನನ್ನೂ ಬಚ್ಚಿಡುವುದಿಲ್ಲವೆಂದು ಮಾಡಿದ ಪ್ರತಿಜ್ಞೆಯನ್ನು ನಂಬಿ ಅವನು ಮೋಸ ಹೋದ. ಆದರೆ ಮೆಮೆ ತನ್ನ ಮೇಲಿನ ಆರೋಪಗಳನ್ನೆಲ್ಲ ನಿರಾಕರಿಸಿದಳು. ಮೆಮೆ ತನ್ನನ್ನು ಎಷ್ಟು ಸಮರ್ಥನೆಯೊಂದಿಗೆ, ಖಚಿತತೆಯೊಂದಿಗೆ, ತನ್ನಮಟ್ಟಿಗಷ್ಟೆ ಇದ್ದಳೆಂದರೆ, ಅರೆಲಿಯಾನೊ ಸೆಗುಂಡೊಗೆ, ಇನ್ನು ಮುಂದೆ ತಮ್ಮಿಬ್ಬರ ಮಧ್ಯೆ ಯಾವುದೇ ಸಂಬಂಧವಿಲ್ಲ ಎಂದುಕೊಂಡದ್ದಷ್ಟೆ ಅಲ್ಲ, ಸ್ನೇಹ, ಪ್ರೀತಿ, ಸೌಹಾರ್ದ ಸಂಬಂಧಗಳೆಲ್ಲವೂ ಕೇವಲ ಭ್ರಮೆ ಎನ್ನುವ ನಿಲುವಿಗೆ ಬಂದ. ಮೌರಿಷಿಯೊ ಬ್ಯಾಬಿಲೋನಿಯಾನೊಂದಿಗೆ, ಹಿಂದೆ ತಾನು ಅವನ ಯಜಮಾನನಾಗಿದ್ದುದರಿಂದ, ಅವನ ಯೋಜನೆಗಳನ್ನೂ ಕೈಬಿಡುವಂತೆ ಹೇಳುತ್ತೇನೆಂದುಕೊಂಡ. ತನ್ನ ಮಾತನ್ನು ಕೇಳಬಹುದೆಂದೂ ಭಾವಿಸಿದ. ಆದರೆ ಪೆಟ್ರಾಕೋಟ್ಸ್ ಅದೆಲ್ಲ ಹೆಂಗಸರ ವ್ಯವಹಾರ ಎಂದಾಗ, ಅವನಿಗೆ ಏನು ಮಾಡಬೇಕೆಂದು ತೋಚದೆ ಸಂದಿಗ್ಧದಲ್ಲಿ ಹೊಯ್ದಾಡುತ್ತಿದ್ದ. ಜೊತೆಗೆ ಬೆಡ್‌ರೂಮಿನಲ್ಲಿ ಬಂಧಿಸುವುದರಿಂದ ಮಗಳ ತೊಂದರೆಗಳು ಕೊನೆಯಾಗಬಹುದೆಂದು ತೀರಾ ಕ್ಷೀಣವಾದ ಭರವಸೆಯನ್ನು ಹೊಂದಿದ್ದ.

ಮೆಮೆಗೆ ಒಂದಿಷ್ಟೂ ನೋವಾದದ್ದು ಕಾಣಿಸಲಿಲ್ಲ. ಅದಕ್ಕೆ ವಿರುದ್ಧವಾಗಿ, ಪಕ್ಕದ ಕೋಣೆಯಿಂದ ಉರ್ಸುಲಾಗೆ ನೆಮ್ಮದಿಯ ನಿದ್ದೆಯ ಉಸಿರಾಟ ಕೇಳಿಸುತ್ತಿತ್ತು. ಜೊತೆಗೆ

ಊಟದಲ್ಲಿ ಕ್ರಮಬದ್ಧತೆಗಳು, ಒಳ್ಳೆಯ ಪಚನಶಕ್ತಿ ಇರುವುದನ್ನು ಉರ್ಸುಲಾ ಗಮನಿಸಿದಳು. ಉರ್ಸುಲಾಗೆ ಒಂದು ವಿಷಯ ತಲೆಕೊರೆಯುತ್ತಿತ್ತು. ಎರಡು ತಿಂಗಳ ದಿಗ್ಬಂಧನದ ನಂತರ, ಮೆಮೆ ಎಲ್ಲರಂತೆ ಬೆಳಗಿನ ಹೊತ್ತು ಸ್ನಾನಮಾಡದೆ ಸಂಜೆ ಏಳುಗಂಟೆಗೆ ಮಾಡುತ್ತಿದ್ದಳು. ಒಂದು ಸಲ ತಿಳಿಸಿ ಹೇಳೋಣವೆನಿಸಿತು. ಸಂಜೆ ಹೊತ್ತು ಚೇಳುಗಳು ಇರುವುದರಿಂದ ಎಚ್ಚರಿಸೋಣವೆಂದುಕೊಂಡಳು. ಆದರೆ ಮೆಮೆಯನ್ನು ನೋಡಿದ ಮೇಲೆ ಅವಳಿಂದ ತಾನು ದೂರವಿರುವುದೇ ಸರಿ ಎನಿಸಿ ಅವಳ ಪಾಡಿಗೆ ಅವಳನ್ನು ಬಿಟ್ಟುಬಿಟ್ಟಳು. ಮುತ್ತಜ್ಜಿ ಅನ್ನೋ ಅಧಿಕಾರದಿಂದ ಅವಳಿಗೆ ತೊಂದರೆ ಕೊಡುವುದು ಬೇಡವೆನಿಸಿ ಸುಮ್ಮನಾದಳು. ಹಳದಿ ಚಿಟ್ಟೆಗಳು ಸಂಜೆಯಾಗುತ್ತಿದ್ದಂತೆ ಮನೆಯನ್ನು ಮುತ್ತುತ್ತಿದ್ದವು. ಸಂಜೆಯಲ್ಲಿ ಸ್ನಾನಕ್ಕೆ ಹೋಗಿ ರಾತ್ರಿ ಮುಗಿಸಿ ಬರುತ್ತಿದ್ದಾಗ ಫರ್ನಾಂಡಾ ಕ್ರಿಮಿನಾಶಕದಿಂದ ಅವುಗಳನ್ನು ಸಾಯಿಸಲು ಸಾಹಸಪಡುತ್ತಿದ್ದುದನ್ನು ನೋಡುತ್ತಿದ್ದಳು. "ಭಯಂಕರ, ರಾತ್ರಿಹೊತ್ತು ಬರುವ ಚಿಟ್ಟೆಗಳಿಂದ ಕೆಡುಕು ಉಂಟಾಗುತ್ತೆ ಅಂತ ಯಾವಾಗಲೂ ಹೇಳುತ್ತಿದ್ದಳು". – ಎಂದು ಹೇಳುತ್ತಿದ್ದಳು. ಒಂದು ರಾತ್ರಿ ಮೆಮೆ ಬಾತ್‌ರೂಮಿನಲ್ಲಿ ಇರುವಾಗ ಫರ್ನಾಂಡಾ ಅವಳ ಬೆಡ್‌ರೂಮಿಗೆ ಹೋದಾಗ, ಉಸಿರಾಡಲೂ ಸಾಧ್ಯವಾಗದಷ್ಟು ದಟ್ಟವಾಗಿ ಚಿಟ್ಟೆಗಳು ಮುತ್ತಿಕೊಂಡಿದ್ದವು. ಚಿಟ್ಟೆಗಳನ್ನು ಹೊಡೆದು ಓಡಿಸಲು ತಕ್ಷಣ ಹತ್ತಿರದಲ್ಲಿದ್ದ ಬಟ್ಟೆಯನ್ನು ಎಳೆದುಕೊಂಡಾಗ, ಸ್ತಂಭಿಸಿ ನಿಂತುಬಿಟ್ಟಳು. ಸಂಜೆ ಸ್ನಾನಕ್ಕೂ ಸಾಸಿವೆ ಪಟ್ಟೆಗೂ ಇರಬಹುದಾದ ಸಂಬಂಧವನ್ನು ಊಹಿಸಿದಳು. ಇನ್ನೊಂದು ಅವಕಾಶ ಬರಲಿ ಅಂತ ಮೊದಲ ಅವಕಾಶವನ್ನು ಬಿಟ್ಟುಕೊಡಲಿಲ್ಲ. ಮಾರನೆ ದಿನವೇ ಹೊಸ ಮೇಯರನ್ನು ಊಟಕ್ಕೆ ಆಹ್ವಾನಿಸಿದಳು. ಅವಳ ಹಾಗೆ ಅವನೂ ಕೂಡಾ ಹೈಲ್ಯಾಂಡ್ (ಪ್ರಸ್ಥಭೂಮಿ) ನಿಂದ ಬಂದವನಾಗಿದ್ದ. ರಾತ್ರಿಯ ಹೊತ್ತು ಕೋಳಿಗಳು ಕಳವಾಗುತ್ತಿರುವುದರಿಂದ ಒಬ್ಬ ಕಾವಲುಗಾರನನ್ನು ಇರಿಸಲು ಕೇಳಿಕೊಂಡಳು. ಆ ರಾತ್ರಿ ಕಾವಲುಗಾರ ಮೌರಿಷಿಯೊ ಬ್ಯಾಬಿಲೋನಿಯಾನನ್ನು ಮೇಲಿನಿಂದ ಹೆಂಚುಗಳನ್ನು ತೆಗೆಯುತ್ತಿದ್ದಾಗ ಬುಲ್ಲೆಟ್‌ನಿಂದ ಹೊಡೆದಾಗ ಸಿಕ್ಕಿಬಿದ್ದ. ಮೆಮೆ ಬಾತ್ ರೂಮಿನಲ್ಲಿ ಅವನಿಗಾಗಿ ಕಾಯುತ್ತಿದ್ದರೆ, ಅವನು ಹೆಂಚುಗಳನ್ನು ತೆಗೆದು ಕೆಳಗೆ ಬಾತ್‌ರೂಮಿನಲ್ಲಿ ಇಳಿಯುತ್ತಿದ್ದ. ಮೆಮೆ ಬೆತ್ತಲೆಯಾಗಿ, ಚೇಳುಗಳ, ಚಿಟ್ಟೆಗಳ ನಡುವೆ, ತನ್ನ ಪ್ರಿಯನಿಗಾಗಿ ನಡುಗುತ್ತಾ ನಿಂತಿರುತ್ತಿದ್ದಳು. ಎರಡು ತಿಂಗಳು ಕಾಲ ಇದೇ ರೀತಿ ಮುಂದುವರಿದಿತ್ತು. ಬೆನ್ನುಹುರಿಯಲ್ಲಿ ಬುಲ್ಲೆಟ್ ಇಳಿದಿದ್ದುದರಿಂದ, ಜೀವನಪರ್ಯಂತ ಹಾಸಿಗೆಹಿಡಿದಿರಬೇಕಾಯಿತು. ಅವನು ವಯಸ್ಸಾದ ಮೇಲೆ ಒಂಟಿಯಾಗಿ ಒಂದಿಷ್ಟು ನರಳಾಟವಿಲ್ಲದೆ, ಪ್ರತಿರೋಧವಿಲ್ಲದೆ ವಿಶ್ವಾಸಘಾತ ಮಾಡದೆ, ಒಂದು ಕ್ಷಣವೂ ಎಡಬಿಡದೆ ಕಾಡುತ್ತಿದ್ದ ಹಳದಿ ಚಿಟ್ಟೆಗಳ ಮತ್ತು ನೆನಪುಗಳ ಹಿಂಸೆಯನ್ನು ತಾಳಲಾರದೆ ಕೋಳಿಕಳ್ಳ ಎಂಬ ಬಿರುದು ಹೊತ್ತು ಸತ್ತ.

○

15

ಮಕೊಂಡೊ ಊರಿನ ಮೇಲೆ ಮಾರಣಾಂತಿಕ ಹೊಡೆತಗಳು ಬೀಳುವ ಸೂಚನೆಗಳು ಮೆಮೆಯ ಮಗುವನ್ನು ಅವರು ಮನೆಗೆ ತಂದಾಗ ಕಾಣಿಸಿಕೊಳ್ಳಲು ತೊಡಗಿದವು. ಸಾರ್ವಜನಿಕ ಪರಿಸ್ಥಿತಿಯ ಅನಿಶ್ಚಿತತೆ ಎಷ್ಟಿತ್ತೆಂದರೆ ಯಾರಿಗೂ ಯಾರ ಖಾಸಗಿ ಬದುಕಿನ ಕಡೆಗೆ ಗಮನಹರಿಸಲು ಅಥವಾ ಅದರ ಭಾಗವಾಗಲು ಮನಸ್ಸಿರಲಿಲ್ಲ. ಇದು ಫರ್ನಾಂಡಾಗೆ ಒಳ್ಳೆಯ ಅವಕಾಶ ಕಲ್ಪಿಸಿತು. ಮಗುವನ್ನು ಯಾರ ಕಣ್ಣಿಗೂ ಬೀಳದಂತೆ, ಅದು ಇದೆ ಎನ್ನುವ ವಾಸನೆಗೂ ಅವಕಾಶವಿಲ್ಲದಂತೆ ಅಡಗಿಸಿಟ್ಟಳು. ಆ ಮಗುವನ್ನು ಅದು ಬಂದ ಪರಿಸ್ಥಿತಿಯನ್ನು ಗಮನಿಸಿದರೆ, ತಿರಸ್ಕರಿಸುವುದು ಯಾರಿಗೂ ಸಾಧ್ಯವಿರಲಿಲ್ಲ. ತನ್ನ ಇಚ್ಛೆಗೆ, ಮನಸ್ಸಿಗೆ ವಿರುದ್ಧವಾಗಿ ತಾನು ಬದುಕಿರುವವರೆಗೂ ನೋಡಿಕೊಳ್ಳಲೇಬೇಕಾಯಿತು. ಅವಳಿಗೆ ಆ ಮಗುವನ್ನು ಬಾತ್‌ರೂಮಿನ ನೀರಿನ ತೊಟ್ಟಿಯಲ್ಲಿ ಮುಳುಗಿಸಿ ಸಾಯಿಸಬೇಕೆಂಬ ನಿರ್ಧಾರದಂತೆ ನಡೆಯುವುದಕ್ಕೆ ಸದ್ಯದ ಪರಿಸ್ಥಿತಿಯಲ್ಲಿ ಸಾಧ್ಯವೇ ಆಗಲಿಲ್ಲ. ಕರ್ನಲ್ ಅರೆಲಿಯಾನೊ ಬ್ಯುಂಡಿಯಾನ ಹಳೆಯ ವರ್ಕ್‌ಷಾಪಿನಲ್ಲಿಟ್ಟು ಬೀಗ ಹಾಕಿದಳು. ಸಾಂತಾ ಸೋಫಿಯಾ ದ ಲಾ ಪೀದಾದಳನ್ನು, ಮಗುವನ್ನು ಒಂದು ಬುಟ್ಟಿಯಲ್ಲಿ ತೇಲುತ್ತಿದ್ದುದನ್ನು ನೋಡಿ ತಂದೆನೆಂದು

ನಂಬಿಸುವಲ್ಲಿ ಯಶಸ್ವಿಯಾದಳು. ಆ ಮಗುವಿನ ಹುಟ್ಟಿನ ರಹಸ್ಯ ತಿಳಿಯದೆಯೇ ಉರ್ಸುಲಾ ಸಾಯುತ್ತಾಳೆ. ಪುಟ್ಟ ಅಮರಾಂತಾ ಉರ್ಸುಲಾ, ಒಮ್ಮೆ ಫರ್ನಾಂಡಾ ಮಗುವಿಗೆ ಹಾಲು ಕುಡಿಸುತ್ತಿದ್ದುದನ್ನು ವರ್ಕ್‌ಷಾಪಿಗೆ ಹೋದಾಗ ನೋಡಿದಳು. ಅವಳೂ ಕೂಡಾ ತೇಲುವ ಬುಟ್ಟಿಯ ಕತೆಯನ್ನು ನಂಬಿದಳು. ಅರೆಲಿಯಾನೊ ಸೆಗುಂಡೊ ಮೆಮೆಯ ವಿಷಯದಲ್ಲಿ ಫರ್ನಾಂಡಾ ನಡೆದುಕೊಂಡ ರೀತಿಯಿಂದ ಬೇಸರಗೊಂಡು ಅವಳಿಂದ ಬೇರೆಯಾಗಿದ್ದ ಮನೆಯಲ್ಲಿ ಮೆಮಯ ಮಗು ಇರುವುದು ಗೊತ್ತೇ ಇರಲಿಲ್ಲ. ಆದರೆ ಮೂರು ವರ್ಷದ ನಂತರ ಫರ್ನಾಂಡಾಳ ಅಚಾತುರ್ಯದಿಂದ ಹೇಗೊ ಬಂಧನದಿಂದ ತಪ್ಪಿಸಿಕೊಂಡು ಬೆತ್ತಲೆಯಾಗಿ, ಗಂಟುಗಂಟಾದ ಕೂದಲು ಮತ್ತು ನೋಡಲು ಆಕರ್ಷಕವಾಗಿದ್ದ ಗುಪ್ತಾಂಗದೊಂದಿಗೆ, ನೋಡಲು ಜೋಲು ಮಾಂಸಲಭಾಗದ ಟರ್ಕಿಕೋಳಿಯಂತೆ, ಒಂದು ಕ್ಷಣ ಕಾಣಿಸಿಕೊಂಡನೇ ಹೊರತು ಮಾನವ ಮಗುವಾಗಿ ಕಾಣಿಸಿರಲಿಲ್ಲ. ವಿಶ್ವಕೋಶದಲ್ಲಿ ವಿವರಿಸಲಾದ ನರಮಾಂಸ ಭಕ್ಷಕನಂತೆ ಕಾಣಿಸಿದ.

ಫರ್ನಾಂಡಾಳಿಗೆ ತನ್ನ ವಿಧಿ ತನ್ನನ್ನು ಹೀಗಾಡಿಸುವುದೆಂದು ತಿಳಿದಿರಲಿಲ್ಲ. ಮನೆಯಿಂದ ಹೊರಗೆ ಹಾಕಿದ್ದ ನಾಚಿಕೆ, ಅವಮಾನ ಹಿಂತಿರುಗಿ ಬಂದಂತೆ ಅನಿಸಿತು. ಬೆನ್ನುಹುರಿ ಮುಂದು ಬಿದ್ದ ಮೌರಿಷಿಯಾ ಬ್ಯಾಬಿಲೋನಿಯಾನನನ್ನು ಎತ್ತಿಕೊಂಡು ಹೋದಮೇಲೆ, ತನಗೆ ತಲೆ ಭಾರವೆನಿಸುವ ಎಲ್ಲ ಕುರುಹುಗಳನ್ನು ಅಳಿಸಿಬಿಡಲು ಒಂದು ಯೋಜನೆ ರೂಪಿಸಿದಳು. ಗಂಡನ ಜೊತೆ ಚರ್ಚೆಮಾಡದೆ ಮೂರು ಜೊತೆ ಬಟ್ಟೆಯನ್ನು ಸೂಟ್‌ಕೇಸಿನಲ್ಲಿರಿಸಿ, ಬೆಡ್‌ರೂಮಿಗೆ, ಟ್ರೈನ್ ಬರುವುದಕ್ಕೆ ಅರ್ಧಗಂಟೆ ಮುಂಚಿತವಾಗಿ ಮಗಳನ್ನು ಕಾಣಲು ಹೋದಳು.

"ರೆನಾಟಾ ನಡಿ ಹೋಗೋಣ" ಅವಳಿಗೆ ಹೇಳಿದಳು.

ಅವಳಿಗೆ ಏನೆಂದು ವಿವರಿಸಲಿಲ್ಲ. ಮೆಮೆಗೂ ಇದು ಬೇಕಾಗಲಿಲ್ಲ. ಅವಳನ್ನು ಎಲ್ಲಿಗೆ ಕರೆದೊಯ್ಯಬಹುದೆಂದು ಚಿಂತೆಯೂ ಮಾಡಲಿಲ್ಲ. ಕಟುಕನ ಕಡೆಗೆ ಕರೆದೊಯ್ದರೂ ಅವಳಿಗೆ ಏನೂ ಅನಿಸುತ್ತಿರಲಿಲ್ಲ. ಹಿತ್ತಲಿನಲ್ಲಿ ಗುಂಡಿನ ಶಬ್ದ ಕೇಳಿಸಿದ್ದು, ಅವನು ನೋವಿನಿಂದ ಕಿರುಚಿಕೊಂಡದ್ದು – ಎಲ್ಲಾ ನಡೆದ ದಿನವೂ ಅವಳು ಏನನ್ನೂ ಮಾತಾಡಿರಲಿಲ್ಲ. ಈಗಲೂ ಅವಳು ಹಾಗೆಯೇ ಮಾತೂ ಆಡಲಿಲ್ಲ ಮತ್ತು ಜೀವನಪರ್ಯಂತ ಮಾತಾಡುವುದೂ ಇಲ್ಲ ಎಂಬಂತಿದ್ದಳು. ತಾಯಿ ಬೆಡ್ ರೂಂನಿಂದ ಹೊರಡಲು ಹೇಳಿದಾಗ ಕೂಡಲೇ ತಲೆಯನ್ನೂ ಬಾಚಿಕೊಳ್ಳದೆ ಮುಖವನ್ನೂ ತೊಳೆಯದೆ, ನಿದ್ದೆಯಿಂದ ಎದ್ದವಳಂತೆ ಎದ್ದು ನೇರವಾಗಿ ಟ್ರೈನ್ ಹತ್ತಿದಳು. ಅವಳ ಜೊತೆ ಬಿಡದೆ ಅವಳನ್ನು ಹಿಂಬಾಲಿಸಿದ್ದ ಹಳದಿ ಚಿಟ್ಟೆಗಳನ್ನು ಗಮನಿಸಲಿಲ್ಲ. ಅವಳ ಆ ಹೆಪ್ಪುಗಟ್ಟಿದ ಮೌನ, ಅವಳ ನಿರ್ಧಾರದ ಸಂಕೇತವೂ ಅಥವಾ ದುರಂತದ ಪರಿಣಾಮವೊ ಎಂಬುದನ್ನು ಫರ್ನಾಂಡಾ ತಿಳಿಯುವ ಪ್ರಯತ್ನವನ್ನೂ ಮಾಡಲಿಲ್ಲ. ತಿಳಿಯಲೂ ಇಲ್ಲ, ಮೆಮೆ, ಮೊದಲಿಗೆ ಪ್ರಯಾಣಿಸುತ್ತಿದ್ದ ಪ್ರದೇಶಕ್ಕೆ ಆಕರ್ಷಿತಳಾಗುತ್ತಿದ್ದಳಾದರೂ ಈಗ ಅದರ ಕಡೆ ಕಣ್ಣೆತ್ತಿಯೂ ನೋಡಲಿಲ್ಲ. ರೈಲುಹಾದಿಯ ಎರಡೂ ಪಕ್ಕಗಳಲ್ಲಿದ್ದ ಅಚ್ಚ ಹಸುರಾಗಿ ಬಾಳೆ

ತೋಟಗಳನ್ನೂ ಗಮನಿಸಲಿಲ್ಲ. ಗ್ರಿಂಗೋಗಳ ಶ್ವೇತಭವನಗಳನ್ನಾಗಲೀ, ಒಣಗಿಹೋಗಿದ್ದ ಕೈದೋಟಗಳನ್ನಾಗಲಿ, ತಾರಸಿ ಮೇಲೆ ಹೆಂಗಸರು ತುಂಡುಚಡ್ಡಿ ಪಟ್ಟೆ ಪಟ್ಟೆ ಷರ್ಟ್ ಹಾಕಿಕೊಂಡು ಕಾರ್ಡ್ ಆಡುತ್ತಿದ್ದುದನ್ನಾಗಲಿ ನೋಡಲಿಲ್ಲ. ಮಣ್ಣಿನ ರಸ್ತೆಗಳಲ್ಲಿ ಬಾಳೆಗೊನೆಗಳನ್ನು ಹೊತ್ತು ಚಲಿಸುತ್ತಿದ್ದ ಗಾಡಿಗಳನ್ನು ನೋಡಲಿಲ್ಲ. ತಿಳಿನೀರಿನ ನದಿಯಲ್ಲಿ ಮುಳುಕು ಹಾಕುತ್ತ ತಮ್ಮ ಆಕರ್ಷಕ ಮೊಲೆಗಳು ರೈಲಿನ ಪ್ರಯಾಣಿಕರಿಗೆ ದಕ್ಕದಂತೆ ನಿರಾಸೆಯುಂಟುಮಾಡುತ್ತಿದ್ದ ಹುಡುಗಿಯರನ್ನು, ದರಿದ್ರ ಸ್ಥಿತಿಯಲ್ಲಿದ್ದ ಗುಡಿಸಲುಗಳ ಬಳಿ ಮೌರಿಷಿಯೊ ಬ್ಯಾಬಿಲೋನಿಯಾನ ಹಳದಿ ಚಿಟ್ಟೆಗಳು ಮುಕುರಿದ್ದ ಕಡೆ ಕೆಲಸಗಾರರು ಒಟ್ಟಾಗಿ ಇದ್ದುದನ್ನು, ಬಾಗಿಲಬಳಿ ಕಕ್ಕಸಿಗೆ ಕುಳಿತಿದ್ದ ಮಕ್ಕಳನ್ನು ಮತ್ತು ಬಸಿರಿ ಹೆಂಗಸರು ರೈಲುಗಾಡಿಗೆ ಬೈಗುಳ ಎಸೆಯುತ್ತಿರುವುದನ್ನು – ಹೀಗೆ ಯಾವೊಂದನ್ನೂ ಅವಳು ನೋಡಲಿಲ್ಲ. ಶಾಲೆಯಿಂದ ಮನೆಗೆ ಬರುವಾಗ ಓಡುವ ರೈಲಿನ ಸಂಭ್ರಮದ ನೆನಪನ್ನು ಮನಸ್ಸಿಗೆ ತಂದುಕೊಂಡಳಾದರೂ ವಿಚಲಿತಳಾಗಲಿಲ್ಲ. ಕಿಟಕಿಯಿಂದ ಹೊರಗೆ ಇಣುಕಿಯೂ ನೋಡಲಿಲ್ಲ. ಕುದಿವ ಬಿಸಿಲಿನ ತೋಪುಗಳು ಇದ್ದ ಪ್ರದೇಶ ಕೊನೆಯಾಗಿ ಸಾಸಿವೆ ಗಿಡಗಳಿಂದ ತುಂಬಿದ್ದ, ವಿಸ್ತಾರ ಬಯಲಿನಲ್ಲಿ, ರೈಲಿನಿಂದ ಬಿದ್ದ ಇದ್ದಲಿನಿಂದ ಮಾಡಿದ ಸ್ಪೇನ್ ಯುದ್ಧದ ಹಡಗಿನ ಮಾದರಿಗಳನ್ನು ಇರಿಸಿದ್ದ ಪ್ರದೇಶ ಹಾದು ಕೊಳಕುನೀರಿನ ಬುರುಗಿನಿಂದ ತುಂಬಿದ್ದ ಸಮುದ್ರ ಇದ್ದು, ಆ ಜಾಗಕ್ಕೆ ನೂರು ವರ್ಷಗಳ ಹಿಂದೆ ಜೋಸ್ ಆರ್ಕಾಡಿಯೊ ಬ್ಯುಂಡಿಯಾ ಬಂದಿದ್ದು ಭ್ರಮನಿರಸನಗೊಂಡಿದ್ದ ಅದೇ ಸ್ಥಳಕ್ಕೆ ಬಂದಿತು.

ಮಧ್ಯಾಹ್ನ ಐದು ಗಂಟೆಗೆ ಜೌಗುಪ್ರದೇಶದಲ್ಲಿನ ಕಡೆಯ ಸ್ಟೇಷನ್‌ಗೆ ಬಂದು ನಿಂತಾಗ, ಫರ್ನಾಂಡಾ ಅವಳನ್ನು ಇಳಿಯುವಂತೆ ಹೇಳಿ, ಇಳಿಸಿದಳು. ದೊಡ್ಡ ಬಾವಲಿಯಂತೆ, ಅಸ್ತಮಾ ಪೀಡಿತ ಕುದುರೆ ಎಳೆಯುತ್ತಿದ್ದ ಸಣ್ಣ ಗಾಡಿಯಲ್ಲಿ ಕುಳಿತು ನಿರ್ಜನವಾದ ಮತ್ತು ಕೊನೆಯೇ ಇಲ್ಲದಂತೆ ಕಾಣುತ್ತಿದ್ದ ರಸ್ತೆಗಳಲ್ಲಿ ಹಾಯುತ್ತಿದ್ದಾಗ, ಫರ್ನಾಂಡಾಗೆ, ಮಧ್ಯಾಹ್ನದ ನಿದ್ದೆ ಸಮಯದಲ್ಲಿ ಕೇಳಿಸಿಕೊಳ್ಳುತ್ತಿದ್ದಂತಹ ಪಿಯಾನೊ ಪಾಠಗಳ ಧ್ವನಿ ಕೇಳಿಸಿತು. ನದಿಯಲ್ಲಿ ಅವರು ಸಣ್ಣ ದೋಣಿಯೊಂದನ್ನು ಹತ್ತಿದರು. ಅದರ ಮರದ ಚಕ್ರಗಳು ದೊಡ್ಡದಾಗಿ ಸದ್ದುಮಾಡುತ್ತಿದ್ದವು. ತುಕ್ಕುಹಿಡಿದ ಲೋಹದ ಪ್ಲೇಟುಗಳು ಕೂಡುಬಲೆಯ ಮುಖದಂತೆ ಪ್ರತಿಧ್ವನಿಸುತ್ತಿದ್ದವು. ಮೆಮೆ ತನ್ನ ಕ್ಯಾಬಿನ್‌ನಲ್ಲಿ ಸೇರಿಕೊಂಡಳು. ದಿನಕ್ಕೆ ಎರಡು ಬಾರಿ ಫರ್ನಾಂಡಾ ಅವಳಿಗಾಗಿ ಊಟ ಕೊಡುತ್ತಿದ್ದಳು. ಆದರೆ ಮೆಮೆ ಅದನ್ನು ಮುಟ್ಟದೆ ಹಾಗೆ ಇರಿಸುತ್ತಿದ್ದಳು. ಅವಳಿಗೆ ಊಟ ಮಾಡದೆ ಸಾಯಬೇಕೆಂಬ ಉದ್ದೇಶ ಇರಲಿಲ್ಲ. ಬಸಿರಿನಿಂದಾಗಿ ತಿನ್ನುವುದಕ್ಕೂ ಒಂದು ಹನಿ ನೀರು ಕುಡಿಯುವುದಕ್ಕೂ ಸಾಧ್ಯವಾಗುತ್ತಿರಲಿಲ್ಲ. ಸಾಸಿವೆ ಹೊಗೆಯೂ ಕೂಡಾ ಬಸಿರನ್ನು ತೆಗೆಯಲು ಸಾಧ್ಯವಾಗದಂತೆ ಮಾಡಿತ್ತು. ಫರ್ನಾಂಡಾಗೆ ಈ ವಿಷಯ ಗೊತ್ತಾಗಿದ್ದೂ ಕೂಡಾ ಒಂದು ವರ್ಷದ ನಂತರ. ಅದೂ ಮಗುವನ್ನು ಮನೆಗೆ ತಂದ ಸಂದರ್ಭದಲ್ಲಿ. ಉಸಿರುಕಟ್ಟುವ ಕ್ಯಾಬಿನ್, ತಲೆಗಡಚಿಕ್ಕುವ ಮೆಟಲ್ ಪ್ಲೇಟುಗಳ ದಢದಢಸದ್ದು, ಅಸಹನೀಯವಾದ ಮಣ್ಣಿನ ವಾಸನೆಯಿಂದ ತ್ರಸ್ತಳಾಗಿದ್ದ ಮೆಮೆಗೆ ದಿನಗಳ ಅರಿವೇ ಉಂಟಾಗಲಿಲ್ಲ. ಸಾಕಷ್ಟು ಸಮಯ ಸರಿದ ಮೇಲೆ ಮೆಮೆ ಕಡೆಗೆ ಉಳಿದಿದ್ದ ಒಂದೇ ಒಂದು

ಹಳದಿ ಚಿಟ್ಟೆ ಫ್ಯಾನ್‌ನ ಬ್ಲೇಡಿಗೆ ಸಿಕ್ಕು ಸತ್ತದ್ದನ್ನು ನೋಡಿದಾಗ, ಮೌರಿಷಿಯೊ ಬ್ಯಾಬಿಲೋನಿಯಾ ಸತ್ತಿರಬೇಕೆಂದು ತಿಳಿದಳು. ಇದರಿಂದ ಅವಳಿಗೇನೂ ವಿರಕ್ತಿ ಉಂಟಾಗಲಿಲ್ಲ. ಹಿಂದೊಮ್ಮೆ ಅರೆಲಿಯಾನೊ ಸೆಗುಂಡೊ ವಿಶ್ವದಲ್ಲಿಯೇ ಅತ್ಯಂತ ಸುಂದರಿಯಾದ ಹೆಣ್ಣನ್ನು ಹುಡುಕುತ್ತಾ ಹುಡುಕುತ್ತಾ ದಾರಿತಪ್ಪಿದ್ದ ಕಾಲ್ಪನಿಕ ಪ್ರದೇಶವನ್ನು ಪ್ರವೇಶಿಸಿದ್ದ. ಈಗ ಅದೇ ಆ ಪ್ರದೇಶವನ್ನು ದಾಟುವಾಗ ಅವಳು ಅವನನ್ನು ಕುರಿತು ಆಲೋಚಿಸುತ್ತಿದ್ದಳು. ಇಂಡಿಯನ್ನರ ಜಾಡುಹಿಡಿದು, ಪರ್ವತಗಳನ್ನು ದಾಟಿ, ಮೂವತ್ತೆರಡು ಚರ್ಚುಗಳಲ್ಲಿನ ಕಂಚಿನ ಗಂಟೆಗಳು, ಶವಸಂಸ್ಕಾರದ ಗಂಟೆ ಸದ್ದುಗಳಿಂದ, ಮಂಕು ಬಡಿದಿದ್ದ ನಗರವನ್ನು ಪ್ರವೇಶಿಸಿದರು. ಆ ರಾತ್ರಿಯನ್ನು ವಸಾಹತು ಕಾಲದಲ್ಲಿನ ಖಾಲಿಯಿದ್ದ ಅಥವಾ ನಿರ್ವಾಸಿತ ಬಂಗಲೆಯಲ್ಲಿ ಕಳೆದರು. ಮನೆಯಲ್ಲಿದ್ದ ಮರದ ಹಲಗೆಗಳನ್ನು ಕಳೆಯಾಗಿ ಬೆಳೆದಿದ್ದ ಗಿಡಗಳ ಮೇಲೆ, ಜೌಳು ಜೌಳಾಗಿದ್ದ ಪರದೆಯಿಂದ ಸುತ್ತಿ ಹಾಸಿಗೆಯನ್ನು ಸಿದ್ಧಪಡಿಸಿದ್ಧಳಾದರೂ ಪ್ರತಿಸಲ ಹೊರಳಿದಾಗಲೂ ತುಂಡುತುಂಡಾಗಿ ಬಿದ್ದುಹೋಗುತ್ತಿತ್ತು. ಭಯದಿಂದ ನಿದ್ದೆಗೆಟ್ಟಿದ್ದ ಮೆಮೆಗೆ ಕಪ್ಪುಬಟ್ಟೆ ತೊಟ್ಟಿದ್ದ ವ್ಯಕ್ತಿಯೊಬ್ಬ ಹಾದುಹೋದದ್ದು ಕಾಣಿಸಿತು. ಅವನು ಹಿಂದೊಮ್ಮೆ ಕ್ರಿಸ್‌ಮಸ್ ದಿನದಂದು ಸೀಸದ ಪೆಟ್ಟಿಗೆಯೊಂದನ್ನು ತಂದುಕೊಟ್ಟದ್ದು ನೆನಪಾಯಿತು. ಮಾರನೆಯ ದಿನ ಸಾಮೂಹಿಕ ಪ್ರಾರ್ಥನೆ ನಂತರ ಫರ್ನಾಂಡಾ ಅವಳನ್ನು ಸಾಧಾರಣವಾಗಿದ್ದ ಕಟ್ಟಡವೊಂದಕ್ಕೆ ಕರೆದುಕೊಂಡುಹೋದಳು. ಮೆಮೆಗೆ ಅಮ್ಮ ಹೇಳುತ್ತಿದ್ದ ಕಾನ್ವೆಂಟಿನ ಕಥೆಗಳಿಂದ ಮತ್ತು ರಾಣಿಯಾಗಲು ಬೇಕಾದ ತರಬೇತಿಯನ್ನು ಪಡೆದಿದ್ದ ವಿವರಗಳಿಂದ ಆ ಜಾಗ ಏನೆಂದು ತಿಳಿದದ್ದೇ ತಾವು ಪ್ರಯಾಣದ ಅಂತಿಮ ನಿಲವಿಗೆ ಬಂದಿದ್ದೇವೆಂದು ಭಾವಿಸಿದಳು. ಫರ್ನಾಂಡಾ ಪಕ್ಕದಲ್ಲಿದ್ದ ಆಫೀಸಿನಲ್ಲಿ ಯಾರ ಜೊತೆಗೊ ಮಾತಾಡುತ್ತಿದ್ದಾಗ, ಮೆಮೆ ನಡುಮನೆಯಲ್ಲಿ ವಸಾಹತುಶಾಹಿ ಯುಗದ ಕಪ್ಪು ಹೂಗಳಿದ್ದ ಉಡುಪು, ಎತ್ತರದ ಷೂಗಳನ್ನು ಧರಿಸಿದ್ದ ಆರ್ಚ್‌ಬಿಷಪ್‌ನ ತೈಲವರ್ಣ ಚಿತ್ರವನ್ನು ನೋಡುತ್ತಾ ನಡುಮನೆಯಲ್ಲಿ ಕುಳಿತಿದ್ದಳು. ನಡುಮನೆಯ ಮಧ್ಯದಲ್ಲಿ ಕಿಟಕಿ ಗಾಜಿನ ಮೂಲಕ ಬರುತ್ತಿದ್ದ ಹಳದಿ ಬೆಳಕಿನಲ್ಲಿ ಮೌರಿಷಿಯೊ ಬ್ಯಾಬಿಲೋನಿಯಾನನ್ನು ಕುರಿತು ಆಲೋಚಿಸುತ್ತಿದ್ದಳು. ಅದೇ ಸಮಯಕ್ಕೆ ನೋಡಲು ಚೆಲುವೆಯಾಗಿದ್ದ ಹುಡುಗಿಯೊಬ್ಬಳು ಮೆಮೆಯ ಸೂಟ್‌ಕೇಸನ್ನು ಹಿಡಿದು ಹೊರಬಂದಳು. ಬರುತ್ತಿದ್ದಂತೆ ಮೆಮೆಯ ಕೈಹಿಡಿದು "ನಡಿ ರೆನಾಟ" ಎಂದು ಹೇಳಿದಳು.

ಮೆಮೆ ಕೈಬಿಡಿಸಿಕೊಳ್ಳದೆ ಅವಳನ್ನು ಹಿಂಬಾಲಿಸಿದಳು. ಕಡೆಯ ಸಲ ನೋಡಿದಾಗ ಆ ಹೊಸ ಹುಡುಗಿಯ ಜೊತೆ ಹೆಜ್ಜೆ ಹಾಕಲು ಪ್ರಯತ್ನಿಸುತ್ತಿದ್ದಾಗ ಕಬ್ಬಿಣದ ಗೇಟು ಮುಚ್ಚಿಕೊಂಡಿತು. ಅವಳು ಇನ್ನೂ ಮೌರಿಷಿಯೊ ಬ್ಯಾಬಿಲೋನಿಯಾ ಬಗ್ಗೆಯೇ ಯೋಚಿಸುತ್ತಿದ್ದಳು. ಅವನ ಜೊತೆಗಿದ್ದಾಗಿನ ಗ್ರೀಸ್‌ನ ವಾಸನೆ, ಚಿಟ್ಟೆಗಳ ಪ್ರಭಾವಳಿ ಎಲ್ಲವನ್ನೂ, ವಯಸ್ಸಾಗಿ, ಹೆಸರು ಬದಲಾಗಿ, ಕೂದಲು ಬೋಳಾಗಿ, ಒಂದು ಮಾತೂ ಇಲ್ಲದೆ, ಒಂದು ಶರದೃತುವಿನ ಬೆಳಗಿನಲ್ಲಿ ಕ್ರಾಕೊ ಆಸ್ಪತ್ರೆಯಲ್ಲಿ ಕೊನೆಯುಸಿರು ಎಳೆದವರೆಗೂ ನೆನಪಿಸಿಕೊಳ್ಳುತ್ತಲೇ ಇದ್ದಳು.

ಫರ್ನಾಂಡಾ ಸಶಸ್ತ್ರ ಪೊಲೀಸರ ರಕ್ಷಣೆಯಲ್ಲಿ ಮಕೊಂಡೊಗೆ ಟ್ರೈನ್‌ನಲ್ಲಿ ಹಿಂತಿರುಗಿದಳು. ಅವಳು ಪ್ರಯಾಣದ ಸಮಯದಲ್ಲಿ ಪ್ರಯಾಣಿಕರ ಮುಖದಲ್ಲಿನ ಆತಂಕ, ಮಿಲಿಟರಿ ಸಿದ್ಧತೆಗಳು ಇವೆಲ್ಲವನ್ನೂ ನೋಡಿದಾಗ ಏನೋ ಗಂಭೀರವಾದ ಸಮಸ್ಯೆಯಿದೆ ಎನ್ನಿಸಿತು. ಅವಳಿಗೆ ಯಾವುದೇ ವಿಚಾರ ಗೊತ್ತಿರಲಿಲ್ಲ. ಮಕೊಂಡೊ ತಲುಪಿದ ಮೇಲೆ ಜೋಸ್ ಆರ್ಕಾಡಿಯೊ ಸೆಗುಂಡೊ ಕಾರ್ಮಿಕರನ್ನು ಬನಾನಾ ಕಂಪನಿ ವಿರುದ್ಧ ಮುಷ್ಕರಕ್ಕೆ ಪ್ರಚೋದಿಸುತ್ತಿದ್ದಾನೆಂದು ತಿಳಿಯಿತು. "ಅದೇ ನಮಗೆಲ್ಲ ಬೇಕಾಗಿರೋದು" ತನ್ನಲ್ಲೇ ಹೇಳಿಕೊಂಡಳು ಫರ್ನಾಂಡಾ. "ಕುಟುಂಬದಲ್ಲಿ ಒಬ್ಬ ಕ್ರಾಂತಿಕಾರಿ" ಮತ್ತೆ ಗೊಣಗಿಕೊಂಡಳು. ಎರಡು ದಿನಗಳ ನಂತರ ಮುಷ್ಕರ ಪ್ರಾರಂಭವಾಯಿತು. ಹೆದರಿದ್ದ ಯಾವುದೇ ನಾಟಕೀಯ ಪರಿಣಾಮಗಳು ಉಂಟಾಗಲಿಲ್ಲ. ಕೆಲಸದವರು ಭಾನುವಾರಗಳಲ್ಲಿ ಬನಾನಾಗಳನ್ನು ಬಿಡಿಸಿ ಗಾಡಿಗೆ ತುಂಬುವುದಿಲ್ಲ ಎಂದಷ್ಟೇ ಹೇಳಿದ್ದರು. ಅದು ನ್ಯಾಯಸಮ್ಮತವೂ ಆಗಿತ್ತು. ಆದ್ದರಿಂದಲೇ ಫಾದರ್ ಆ್ಯಂಟೋನಿಯೊ ಇಸಾಬೆಲ್ ಕೂಡಾ ಮಧ್ಯೆ ಪ್ರವೇಶಿಸಿ ದೇವರ ನಿಯಮವೂ ಹಾಗೇ ಇದೆ ಎಂದು ಕಾರ್ಮಿಕರ ಬೇಡಿಕೆಯನ್ನು ಸಮರ್ಥಿಸಿದ. ಇದರ ಗೆಲುವಿನ ಜೊತೆಗೆ ಇನ್ನೂ ಕೆಲವು ಕ್ರಮಗಳನ್ನು ತೆಗೆದುಕೊಂಡಿದ್ದರಿಂದ, ಜೋಸ್ ಆರ್ಕಾಡಿಯೊ ಮೊದಲು ಅನಾಮಿಕನಾಗಿಯೂ, ಅವನು ಫ್ರೆಂಚ್ ಗಣಿಕೆಯರನ್ನು ತಂದು ತುಂಬುವವನೂ ಎಂದಷ್ಟೆ ಭಾವಿಸಿದ್ದವರ ಕಣ್ಣಲ್ಲಿ ಈಗ ದೊಡ್ಡವನೆನಿಸಿದ.

ದೋಣಿಯ ವ್ಯವಹಾರಕ್ಕೆ ಬೇಕಾಗಿದ್ದ ಹಣಕ್ಕಾಗಿ ತನ್ನ ಕಾಳಗದ ಹುಂಜಗಳನ್ನು ಹರಾಜು ಹಾಕಿದ ಆವೇಶದಲ್ಲೇ ತನ್ನ ಫೋರ್‌ಮನ್ ಹುದ್ದೆಗೆ ರಾಜಿನಾಮೆ ನೀಡಿ ಕಾರ್ಮಿಕರ ಜೊತೆ ಸೇರಿದ. ಸ್ವಲ್ಪ ಸಮಯದಲ್ಲಿಯೇ ಸಾರ್ವಜನಿಕ ವ್ಯವಸ್ಥೆಯ ವಿರುದ್ಧ ಅಂತರಾಷ್ಟ್ರೀಯ ವಿದ್ರೋಹವನ್ನು ಪ್ರಚೋದಿಸುವ ಏಜೆಂಟ್ ಎಂದು ಅವನನ್ನು ಗುರುತಿಸಲಾಯಿತು. ಒಂದು ರಾತ್ರಿ, ವಾರದ ಅವಧಿಯಲ್ಲಿ, ಗುಪ್ತ ಸಮಾಲೋಚನಾ ಸಭೆಯಿಂದ ಹೊರಗೆ ಬರುವಾಗ ನಾಲ್ಕು ಬುಲ್ಲೆಟ್‌ಗಳು ಅನಾಮಧೇಯ ವ್ಯಕ್ತಿಗಳ ಕಡೆಯಿಂದ ಬಂದು ತಾಕಿದವು. ಆದರೆ ಅವುಗಳಿಂದ ಹೇಗೋ ಪಾರಾದ. ಮುಂದಿನ ತಿಂಗಳುಗಳು ಎಷ್ಟು ಗಂಭೀರ ವಾತಾವರಣದಿಂದ ಕೂಡಿತ್ತೆಂದರೆ, ಎಲ್ಲಿಯೋ ಕತ್ತಲ ಮೂಲೆಯಲ್ಲಿ ಇರುತ್ತಿದ್ದ ಉರ್ಸುಲಾಗೂ ಪರಿಸ್ಥಿತಿ ಅರ್ಥವಾಯಿತು. ಇದೇ ರೀತಿಯಲ್ಲಿ ಅರೆಲಿಯಾನೊ ಹೋಮಿಯೋಪತಿ ಗುಳಿಗೆಗಳನ್ನು ಇಟ್ಟುಕೊಂಡಿರುತ್ತಿದ್ದ, ಅಂದಿನ ಅಪಾಯದ ದಿನಗಳು ಮರುಕಳಿಸಿದಂತೆನಿಸಿತು. ಅವಳು ಜೋಸ್ ಆರ್ಕಾಡಿಯೊ ಸೆಗುಂಡೊ ಬಳಿ ಹಿಂದೆ ಆದದ್ದನ್ನು ತಿಳಿದುಕೊಳ್ಳುವುದಕ್ಕಾಗಿ ಪ್ರಯತ್ನಿಸಿದಳು. ಅರೆಲಿಯಾನೊ, ತನ್ನ ಮೇಲೆ ಆಕ್ರಮಣವಾದ ನಂತರ ತಾನೆಲ್ಲಿದ್ದೇನೆಂದು ಯಾರಿಗೂ ತಿಳಿದಿಲ್ಲವೆಂಬುದನ್ನು ಹೇಳಿದ.

"ಎಲ್ಲಾ ಅರೆಲಿಯಾನೊ ಥರಾನೇ, ಪ್ರಪಂಚವೇ ಪುನರಾವರ್ತನೆಯಾಗುತ್ತಿದೆಯೇನೊ ಅನಿಸುತ್ತಿದೆ" ಎಂದು ಉದ್ಗರಿಸಿದಳು.

ಆ ದಿನಗಳಲ್ಲಿನ ಅನಿಶ್ಚಿತತೆ ಫರ್ನಾಂಡಾಗೆ ಅಭ್ಯಾಸವಾಗಿಬಿಟ್ಟಿತ್ತು. ನಡುವೆ ಸೃಷ್ಟಿಯಾಗಿದ್ದ ವಿರಸದಿಂದಾಗಿ ಅವಳಿಗೆ ಹೊರಗಿನ ಪ್ರಪಂಚದ ಜೊತೆಗೆ ಸಂಪರ್ಕವೇ

ಇಲ್ಲದಂತಾಗಿತ್ತು. ಅರೆಲಿಯಾನೊ ಸೆಗುಂಡೊ ಪೊಲೀಸರ ಸಹಾಯದಿಂದಲಾದರೂ ಮಗಳನ್ನು ರಕ್ಷಿಸಬೇಕೆಂದುಕೊಂಡ. ಆದರೆ ಫರ್ನಾಂಡಾ ಕೆಲವು ಕಾಗದ ಪತ್ರಗಳನ್ನು ತೋರಿಸಿದಳು. ಅದರಲ್ಲಿ ಮೆಮೆ ಸ್ವ ಇಚ್ಛೆಯಿಂದ ಕಾನ್ವೆಂಟ್ ಸೇರಿದ್ದಾಳೆಂದು ನಮೂದಿಸಲಾಗಿತ್ತು. ಕಬ್ಬಿಣದ ಗೇಟಿನ ಒಳಗೆ ಹೋದಾಗ ಇದ್ದ ನಿರಾಸಕ್ತಿಯಿಂದಲೇ ಸಹಿ ಹಾಕಿದ್ದಳು. ಇಷ್ಟೆಲ್ಲ ಇದ್ದರೂ ಅರೆಲಿಯಾನೊ ಸೆಗುಂಡೊಗೆ ಆ ಪುರಾವೆಗಳಲ್ಲಿ ನಂಬಿಕೆ ಬರಲಿಲ್ಲ. ಅವನಿಗೆ ಮೌರಿಷಿಯೊ ಬ್ಯಾಬಿಲೋನಿಯಾ ಕೋಳಿ ಕದಿಯಲು ಹಿತ್ತಲಿಗೆ ಬಂದಿದ್ದನೆಂಬ ವಿಷಯದಲ್ಲಿಯೂ ಇದರಂತೆಯೇ ಪೂರ್ಣವಿಶ್ವಾಸ ಇರಿಸಿರಲಿಲ್ಲ. ಆದರೂ ಈ ಎರಡೂ ಸಮಸ್ಯೆಗಳಿಂದ ಅವನಿಗೆ ಬಿಡುಗಡೆ ಎನಿಸಿ ಮನಸ್ಸು ಹಗುರವಾಯಿತು. ಮತ್ತೆ ಅವನು ಪೆಟ್ರಾಕೋಟ್ಸ್‌ಳ ನೆರಳಿನಲ್ಲಿ ತನ್ನ ಹಿಂದಿನ ಚಾಳಿಗಳಾಗಿದ್ದ ಹೊಟ್ಟೆಬಾಕತನ, ಗದ್ದಲದ ಪಾರ್ಟಿಗಳು ಮುಂತಾದವನ್ನು ಮುಂದುವರೆಸಿದ. ಊರಿನಲ್ಲಿನ ಅಶಾಂತಿಗೆ ಪರಕೀಯವಾಗಿ, ಉರ್ಸುಲಾಳ ಮುನ್ಸೂಚನೆಗಳಿಗೆ ಕಿವುಡಾಗಿ ಫರ್ನಾಂಡಾ ತನ್ನ ಪೂರ್ವನಿಶ್ಚಿತ ಯೋಜನೆಗೆ ಕಡೆಯ ತಿರುವನ್ನು ಕೊಟ್ಟಳು. ತನ್ನ ಮಗನಾದ ಜೋಸ್ ಆರ್ಕಾಡಿಯೋಗೆ, ಸೋದರಿ ರೆನಾಟ ಕಪ್ಪಗೆ ವಾಂತಿಮಾಡಿಕೊಂಡು ಶಾಂತಿಯಿಂದ ದೇವರ ಪಾದ ಸೇರಿದಳೆಂದು ಉದ್ದನೆಯ ಪತ್ರ ಬರೆದಳು. ನಂತರ ಅಮರಾಂತಾ ಉರ್ಸುಲಾಳನ್ನು ಸೋಫಿಯಾ ದ ಲಾ ಪೀದಾದ್ ವಶಕ್ಕೆ ಒಪ್ಪಿಸಿ ಅಮೂರ್ತ ಡಾಕ್ಟರುಗಳೊಂದಿಗಿನ ಪತ್ರವ್ಯವಹಾರದಲ್ಲಿ ತೊಡಗಿದಳು. ಮೆಮೆಳಿಂದಾಗಿ ಇತ್ತೀಚೆಗೆ ಆ ವ್ಯವಹಾರಕ್ಕೆ ಅಡ್ಡಿಬಂದಿತ್ತು. ಮೊದಲು ಅವಳು ಮಾಡಿದ ಕೆಲಸವೆಂದರೆ 'ಟೆಲಿಪತಿಕ್ ಆಪರೇಷನ್' ಗೆ ನಿಗದಿತ ದಿನಾಂಕವನ್ನು ಗೊತ್ತುಮಾಡಿದ್ದು. ಆದರೆ ಆ ಡಾಕ್ಟರುಗಳು ಮಕೊಂಡೊದಲ್ಲಿ ಸಾಮಾಜಿಕ ಆಂದೋಲನ ಮುಂದುವರಿಯುತ್ತಿರುವವರೆಗೂ ಏನನ್ನೂ ಮಾಡುವುದು ಸರಿಯಲ್ಲವೆಂದು ತಿಳಿಸಿದರು. ಆದರೆ ಫರ್ನಾಂಡಾ ಮತ್ತೊಂದು ಪತ್ರದಲ್ಲಿ, ಅವರು ಭಾವಿಸಿದಂತೆ ಅಂಥಾದ್ದೇನೂ ಇಲ್ಲವೆಂದೂ, ಅದೆಲ್ಲವೂ ತನ್ನ ಮೈದುನನಾದವನ ಹುಚ್ಚುತನದ ಪರಿಣಾಮವೆಂದು, ಹುಂಜಕಾಳಗ, ದೋಣಿ ವ್ಯವಹಾರದ ಸಮಯದಲ್ಲಿದ್ದಂತೆ ಅಲ್ಲಿ ಇಲ್ಲಿ ಅಲೆದಾಡುತ್ತಾ ಏನೇನೊ ಮಾಡುತ್ತಾ ಕಾರ್ಮಿಕರ ಯೂನಿಯನ್ ಜೊತೆ ಸೇರಿದ್ದಾನೆಂದು ಬರೆದು ತಿಳಿಸಿದಳು. ಬೇಸಿಗೆಯ ಒಂದು ಬುಧವಾರ ವಯಸ್ಸಾದ ನನ್ ಒಬ್ಬಳು ಒಂದು ಬುಟ್ಟಿಯಲ್ಲಿ, ಹೆಣೆದ ವಸ್ತ್ರದಿಂದ ಮುಚ್ಚಿ ಏನನ್ನೊ ತಂದು ಬಾಗಿಲು ತಟ್ಟಿದಾಗ ಇನ್ನೂ ಒಪ್ಪಂದ ಪೂರ್ತಿಯಾಗಿರಲಿಲ್ಲ. ಸಾಂತಾ ಸೋಫಿಯಾ ದ ಲಾ ಪೀದಾದ್ ಬಾಗಿಲು ತೆಗೆದು ಆಕೆಯನ್ನು ನೋಡಿದಳು. ಬುಟ್ಟಿಯಲ್ಲಿದ್ದ ವಸ್ತುವನ್ನು ನೋಡಿದಾಗ ಏನೋ ಉಡುಗೊರೆ ತಂದಿರಬೇಕೆಂದು ಭಾವಿಸಿ ತೆಗೆದುಕೊಳ್ಳಲು ಕೈಚಾಚಿದಳು. ಆದರೆ ನನ್ ಅವಳ ಕೈಗೆ ನೀಡದೆ, ನೇರವಾಗಿ ಅದನ್ನು ಡೋನಾ ಫರ್ನಾಂಡಾ ಡೆಲ್ ಕಾರ್ಪಿಯೊ ದ ಬ್ಯುಂಡಿಯಾಗೆ ಕೊಡಬೇಕೆಂಬ ಆದೇಶವಿದೆ ಎಂದಳು. ಅದು ಮೆಮೆಯ ಮಗುವಾಗಿದ್ದು, ಫರ್ನಾಂಡಾಳ ಪೂರ್ವದ ಆಧ್ಯಾತ್ಮಿಕ ಗುರು ಪತ್ರದಲ್ಲಿ, 'ಎರಡು ತಿಂಗಳ ಹಿಂದೆ ಮೆಮೆಗೆ ಹುಟ್ಟಿದ್ದು. ಅದಕ್ಕೆ ನಾಮಕರಣ ಮಾಡುವ ಅವಕಾಶವನ್ನು, ತಾಯಿ ಬಾಯಿಬಿಟ್ಟು ಏನನ್ನೂ ಹೇಳಲು ಇಷ್ಟಪಡದಿದ್ದ ಕಾರಣ ತಾವೇ ನಿರ್ಧಾರ ತೆಗೆದುಕೊಂಡು ಅರೆಲಿಯಾನೊ ಎಂದು ತಾತನ ಹೆಸರನ್ನೇ ಇರಿಸಿದ್ದೇವೆಂದು

ವಿವರಿಸಲಾಗಿತ್ತು. ವಿಧಿಯಾಟದಿಂದ ಒಳಗೆ ಸಿಟ್ಟಾದರೂ ಅದನ್ನು ಕ್ರೈಸ್ತ ಸಂನ್ಯಾಸಿನಿಯ ಮುಂದೆ ತೋರಿಸಿಕೊಳ್ಳದಿರುವಷ್ಟು ಸಾಮರ್ಥ್ಯವನ್ನು ರೂಢಿಸಿಕೊಂಡಿದ್ದಳು.

"ನಾವು ಅವರಿಗೆ ಈ ಬುಟ್ಟಿ ತೇಲುವಾಗ ಸಿಕ್ಕಿತೆಂದು ಹೇಳುತ್ತೇವೆ" ಎಂದು ನಸುನಕ್ಕು ಹೇಳಿದಳು.

"ಯಾರೂ ಇದನ್ನು ನಂಬುವುದಿಲ್ಲ" ಎಂದು ಹೇಳಿದಳು ಆ ಸಂನ್ಯಾಸಿನಿ.

"ಬೈಬಲ್‌ನಲ್ಲಿ ನಡೆದದ್ದನ್ನು ನಂಬಲಿಕ್ಕೆ ಸಾಧ್ಯವಾಗಿರುವಾಗ ನಾನು ಹೇಳುವುದನ್ನೇಕೆ ನಂಬದೆ ಇರುತ್ತಾರೆ" ಉತ್ತರಿಸಿದಳು ಫರ್ನಾಂಡಾ.

ಗಾಡಿ ಬರುವವರೆಗೆ ಸಂನ್ಯಾಸಿನಿ ಮನೆಯಲ್ಲಿಯೇ ಇದ್ದಳು. ಆದರೆ ಮತ್ತೆ ಅವಳು ಮಗುವಿನ ಬಗ್ಗೆ, ಕೊಟ್ಟಿದ್ದ ಆದೇಶದಂತೆ ಮತ್ತೆ ಪ್ರಸ್ತಾಪಿಸಲಿಲ್ಲ. ಫರ್ನಾಂಡಾಗೆ ಅವಳು ಬೇಡದ ಅನುಮಾನ ನಾಚಿಕೆಗಳಿಗೆ ಸಾಕ್ಷಿಯಂತಿದ್ದಾಳೆ ಎನಿಸಿತು. ಆ ಕ್ಷಣದಲ್ಲಿ ಅವಳಿಗೆ, ಮಧ್ಯಯುಗದಲ್ಲಿ ಕೆಟ್ಟ ಸುದ್ದಿ ತರುವವರಿಗೆ ಮರಣದಂಡನೆಯ ಶಿಕ್ಷೆ ನೀಡುತ್ತಿದ್ದುದು ನೆನಪಾಗಿ, ಅದನ್ನು ಈಗ ರದ್ದುಗೊಳಿಸಿದ್ದಕ್ಕಾಗಿ ಪರಿತಪಿಸಿದಳು. ಸನ್ಯಾಸಿನಿ ಹೊರಟು ಹೋದ ಮೇಲೆಯೇ ಅವಳಿಗೆ ಬಾತ್ ರೂಮಿನ ನೀರಿನ ತೊಟ್ಟಿಯಲ್ಲಿ ಮುಳುಗಿಸಿ ಸಾಯಿಸಬೇಕೆಂದು ಕೊಂಡಳಾದರೂ, ಅವಳ ಮನಸ್ಸು ಅಷ್ಟೊಂದು ಕಠಿನವಾಗಿರಲಿಲ್ಲ. ಯಾರಾದರೂ ದೇವರು ಅನುಗ್ರಹಿಸಿ ತನ್ನ ಕೋಪ ತಣಿಯುವ ಹಾಗೆ ಮಾಡುವವರೆಗೆ ತಾಳ್ಮೆಯಿಂದ ಕಾಯೋಣ ಎಂದುಕೊಂಡಳು.

ಅರೆಲಿಯಾನೊ ಒಂದು ವರ್ಷದವನಿದ್ದಾಗ, ಯಾವುದೇ ಪೂರ್ವ ಸೂಚನೆಯಿಲ್ಲದೆ ಪ್ರಕ್ಷುಬ್ಧ ವಾತಾವರನ ಸೃಷ್ಟಿಯಾಯಿತು. ಜೋಸ್ ಆರ್ಕಾಡಿಯೊ ಸೆಗುಂಡೊ ಮತ್ತು ಉಳಿದ ಯೂನಿಯನ್ ಲೀಡರುಗಳು ಭೂಗತರಾಗಿದ್ದವರು ಇದ್ದಕ್ಕಿದ್ದಂತೆ ಬಹಿರಂಗವಾಗಿ ವಾರದ ಕೊನೆಯಲ್ಲಿ ಕಾಣಿಸಿಕೊಂಡು, ಬನಾನಾ ಪ್ರದೇಶದ ತುಂಬೆಲ್ಲ ನಗರಪಟ್ಟಣಗಳಲ್ಲಿ ಪ್ರದರ್ಶನಗಳನ್ನು ಏರ್ಪಡಿಸಿದರು. ಪೊಲೀಸರು ಕೇವಲ ಸಾರ್ವಜನಿಕ ವ್ಯವಸ್ಥೆಯನ್ನು ಮಾತ್ರವೇ ನೋಡಿಕೊಂಡರು. ಸೋಮವಾರ ರಾತ್ರಿ ನಾಯಕರನ್ನು ಅವರವರ ಮನೆಗಳಿಂದ ಎಳೆದು ತಂದು ಎರಡು ಪೌಂಡ್ ತೂಕದ ಸರಪಳಿಯನ್ನು ಕಾಲಿಗೆ ಬಿಗಿದು ಜೈಲಿನಲ್ಲಿ ಇರಿಸಿದರು. ಅವರಲ್ಲಿ ಜೋಸ್ ಆರ್ಕಾಡಿಯೊ ಸೆಗುಂಡೊ ಮತ್ತು ಮೆಕ್ಸಿಕೊ ಕ್ರಾಂತಿಯಲ್ಲಿ ಭಾಗವಹಿಸಿ ಮಕೊಂಡೊದಲ್ಲಿ ಆಶ್ರಯ ಪಡೆದಿದ್ದ ಕರ್ನಲ್ ಲೊರೆಂಜೊ ಗ್ಯಾವಿಲೋನ್ ಇದ್ದರು. ಗ್ಯಾವಿಲೋನ್ ತನ್ನ ಕಾಮ್ರೇಡ್ ಆಗಿದ್ದ ಆರ್ಟೆಮಿಯೊ ಕ್ರೂಜ್‌ನ ಸಾಹಸ ಕೃತ್ಯಗಳಿಗೆ ಸಾಕ್ಷಿಯಾಗಿದ್ದ. ಮೂರು ತಿಂಗಳಲ್ಲಿ ಅವರೆಲ್ಲರನ್ನೂ ಬಿಡುಗಡೆ ಮಾಡಿದರಾದರು, ಜೈಲಿನಲ್ಲಿ ಇರುವವರೆಗೆ ಅವರನ್ನು ಸಾಕುವುದು ಹೇಗೆಂಬ ವಿಷಯದಲ್ಲಿ ಬನಾನಾ ಕಂಪನಿ ಮತ್ತು ಸರಕಾರದ ನಡುವೆ ಸರಿಯಾದ ಒಪ್ಪಂದ ಸಾಧ್ಯವಾಗಿರಲಿಲ್ಲ. ಕಾರ್ಮಿಕರು ಈ ಬಾರಿ ಮನೆಗಳಲ್ಲಿ ನೈರ್ಮಲ್ಯ ವ್ಯವಸ್ಥೆ ಸರಿಯಾಗಿಲ್ಲವೆಂದೂ ವೈದ್ಯಕೀಯ ಸಹಾಯದ ಕೊರತೆ ಇದೆಯೆಂದೂ ಕೆಲಸ ಮಾಡುವಲ್ಲಿ ಸರಿಯಾದ ವಾತಾವರಣ ಇಲ್ಲವೆಂದೂ ಪ್ರತಿಭಟನೆಗೆ ಇಳಿದಿದ್ದರು. ಜೊತೆಗೆ ಸಂಬಳವನ್ನು ಹಣದ ರೂಪದಲ್ಲಿ

ಕೊಡದೆ, ಕಂಪನಿಗೆ ಸೇರಿದ್ದ ಅಂಗಡಿಗಳಲ್ಲಿ ಮಾತ್ರವೇ ಸಾಮಾನುಕೊಳ್ಳಲು ಸಾಧ್ಯವಾಗುವಂತೆ ಚೀಟಿಗಳ ರೂಪದಲ್ಲಿ ಕೊಡುತ್ತಿದ್ದಾರೆಂದು ಆಕ್ಷೇಪಿಸಿದರು. ಜೋಸ್ ಆರ್ಕಾಡಿಯೊ ಸೆಗುಂಡೊ ಚೀಟಿಗಳನ್ನು ಕೊಡುತ್ತಿರುವುದು ಕಂಪನಿ ಹಣ್ಣುಗಳನ್ನು ಸರಬರಾಜು ಮಾಡುವ ಹಡಗುಗಳಿಗೆ ಹಣಕಾಸು ಒದಗಿಸಲು ಮಾಡಿಕೊಂಡ ವ್ಯವಸ್ಥೆ ಎಂದೂ, ಈ ಬಗೆಯ ವ್ಯವಸ್ಥೆ ಆಗದಿದ್ದ ಪಕ್ಷದಲ್ಲಿ ಮಾರಾಟ ಪ್ರತಿನಿಧಿಗಳು ನ್ಯೂ ಆರ್ಲಿಯಾನ್ಸ್‌ನಿಂದ ಬನಾನಾ ಬೆಳೆಯುವ ನೌಕಾತೀರಗಳಿಗೆ ಖಾಲಿಯಾಗಿ ಹಿಂತಿರುಗಬೇಕಾಗುತ್ತದೆ ಎಂದೂ ಗುಟ್ಟೆಲ್ಲವನ್ನೂ ಬಯಲು ಮಾಡಿದ್ದ ಕಾರಣ ಅವನನ್ನು ಜೈಲಿಗೆ ಹಾಕಿದರು. ಬೇರೆ ಇತರ ಬೇಡಿಕೆಗಳು ಸಾಮಾನ್ಯವಾದವುಗಳಾಗಿದ್ದವು. ವೈದ್ಯರುಗಳು ರೋಗಿಗಳನ್ನು ಸರಿಯಾಗಿ ಪರೀಕ್ಷಿಸುವುದಿಲ್ಲ, ಡಿಸ್ಪೆನ್ಸರಿಯಲ್ಲಿ ಒಬ್ಬರ ಹಿಂದೆ ಒಬ್ಬರನ್ನು ಸಾಲಾಗಿ ನಿಲ್ಲಿಸಿ, ಗನೋರಿಯಾ ಇರಲಿ, ಹೊಟ್ಟೆ ನೋವಿರಲಿ, ಮಲೇರಿಯಾ ಇರಲಿ, ಎಲ್ಲ ರೋಗಗಳಿಗೂ ಒಂದೇ ಚಿಕಿತ್ಸೆ ಎಂಬಂತೆ ರೋಗಿಗಳ ನಾಲಗೆ ಮೇಲೆ ನರ್ಸ್ ಬಣ್ಣದ ಮಾತ್ರೆಯೊಂದನ್ನು ಇಟ್ಟು ಬಿಡುತ್ತಾಳೆ ಎನ್ನುವ ಆಕ್ಷೇಪವೂ ಒಂದು ಕಡೆ ಇತ್ತು. ರೋಗಗಳು ತಮಗೆ ತಾವೇ ಸಾಧಾರಣವಾಗಿ ವಾಸಿಯಾಗುತ್ತಿದ್ದುದರಿಂದ ಮಕ್ಕಳು ಮತ್ತೆ ಮತ್ತೆ ಸಾಲುಗಟ್ಟಿನಿಂತು ಬಣ್ಣದ ಮಾತ್ರೆಗಳನ್ನು ನಾಲಿಗೆ ಮೇಲಿರಿಸಿಕೊಂಡು ಅದನ್ನು ನುಂಗದೆ ಕೈಗೆ ತೆಗೆದುಕೊಂಡು ಆಟಕ್ಕೆ ಉಪಯೋಗಿಸಿಕೊಳ್ಳುತ್ತಿದ್ದರು. ದಯನೀಯ ಸ್ಥಿತಿಯಲ್ಲಿದ್ದ ಕೊಠಡಿಗಳಲ್ಲಿ ಕೆಲಸಗಾರರು ವಾಸಮಾಡಬೇಕಿತ್ತು. ಇಂಜನಿಯರುಗಳು ಟಾಯ್ಲೆಟ್ಸ್‌ಗಳನ್ನು ನಿರ್ಮಿಸಿಕೊಡುವ ಬದಲು ಕ್ರಿಸ್‌ಮಸ್ ಸಮಯದಲ್ಲಿ ಸಂಚಾರಿ ಟಾಯ್ಲೆಟ್‌ಗಳನ್ನು ಐವತ್ತು ಜನರ ಗುಂಪಿಗೆ ಒಂದರಂತೆ ತಂದು ಅವುಗಳು ಬಾಳಿಕೆ ಬರುವಂತೆ ಹೇಗೆ ಉಪಯೋಗಿಸಬೇಕೆಂಬುದನ್ನು ಪ್ರದರ್ಶನದ ಮೂಲಕ ತೋರಿಸಿಕೊಡುತ್ತಿದ್ದರು. ಕಪ್ಪು ಉಡುಪಿನಲ್ಲಿ ನಿಸ್ಸಹಾಯಕರಾಗಿದ್ದ ಲಾಯರುಗಳು ಒಂದು ಕಾಲದಲ್ಲಿ ಅರೆಲಿಯಾನೊನನ್ನು ಸುತ್ತುಗಟ್ಟಿದ್ದವರು. ಈಗ ಬನಾನಾ ಕಂಪನಿಯ ನಿಯಂತ್ರಣದಲ್ಲಿದ್ದುದರಿಂದ ಕಾರ್ಮಿಕರ ಬೇಡಿಕೆಗಳನ್ನು ಯಾವುದೊ ಒಂದು ಮೋಡಿಗೆ ಒಳಗಾದಂತೆ ಸಾರಾಸಗಟಾಗಿ ನಿರಾಕರಿಸುವಂತೆ ತೀರ್ಮಾನಗಳನ್ನು ಘೋಷಿಸಿದರು. ಕಾರ್ಮಿಕರು ಮತ್ತೊಮ್ಮೆ ಅನಾಮಧೇಯ ಹೆಸರಿನಲ್ಲಿ ಅಹವಾಲುಗಳನ್ನು ಸಿದ್ಧಪಡಿಸಿದರಾದರೂ ಅಧಿಕೃತವಾಗಿ ಕಂಪನಿ ಕಛೇರಿಗೆ ತಲುಪಿಸಲು ಬಹಳ ಸಮಯ ತೆಗೆದುಕೊಂಡರು. ಒಪ್ಪಂದದ ವಿಷಯ ತಿಳಿದಾಗ ಮಿಸ್ಟರ್ ಬ್ರೌನ್ ಪ್ರಮುಖರಾದ ಒಂದಷ್ಟು ಪ್ರತಿನಿಧಿಗಳೊಂದಿಗೆ, ತನ್ನ ವೈಭವಯುತವಾದ ಗಾಜಿನ ಕೋಚಿನಲ್ಲಿ ಅಲ್ಲಿಂದ ಪರಾರಿಯಾದ. ಆದರೆ ಕೆಲವರು ಕಾರ್ಮಿಕರು ಅವನನ್ನು ಸೂಳೆಯ ಮನೆಯಲ್ಲಿ ನಗ್ನನಾಗಿ ಅವಳೊಂದಿಗೆ ಇದ್ದ ಸಮಯದಲ್ಲಿ ಪತ್ತೆಹಚ್ಚಿ ಒಪ್ಪಂದಕ್ಕೆ ಸಹಿ ಮಾಡುವಂತೆ ಒತ್ತಾಯಿಸಿದರು. ಆದರೆ ಲಾಯರುಗಳು ಕೋರ್ಟಿನಲ್ಲಿ ಆ ವ್ಯಕ್ತಿಗೂ ಕಂಪನಿಗೂ ಯಾವುದೇ ಸಂಬಂಧವಿಲ್ಲವೆಂದೂ ಅವನೊಬ್ಬ ಮೋಸಗಾರನೆಂದು ಪುರಾವೆ ಒದಗಿಸಿ ಜೈಲಿಗೆ ಹೋಗುವಂತೆ ಮಾಡಿದರು. ನಂತರ ಮಿಸ್ಟರ್ ಬ್ರೌನ್ ಮೂರನೇ ದರ್ಜೆ ಕೋಚಿನಲ್ಲಿ ವೇಷಾಂತರದೊಂದಿಗೆ ಪ್ರಯಾಣಸುತ್ತಿದ್ದಾಗ, ತಮ್ಮ ಬೇಡಿಕೆಗಳ ಮತ್ತೊಂದು ಪ್ರತಿಯಲ್ಲಿ ಸಹಿ ಹಾಕಿಸಿಕೊಂಡರು. ಮರುದಿನ ಅವನು ಕೂದಲಿಗೆ ಕಪ್ಪು ಬಣ್ಣ

ಹಾಕಿಕೊಂಡು ನ್ಯಾಯಾಧೀಶರ ಮುಂದೆ ಕಾಣಿಸಿಕೊಂಡ. ಸ್ಪ್ಯಾನಿಷ್ ಭಾಷೆಯನ್ನು ಶುದ್ಧವಾಗಿ ಮಾತಾಡುತ್ತಿದ್ದ. ಲಾಯರುಗಳು ಅವನು ಬನಾನಾ ಕಂಪನಿಯ ಸೂಪರಿಡೆಂಟ್ ಆಗಿದ್ದ ಮತ್ತು ಪ್ರ್ಯಾತಿವಿಲ್ಲ ಆಲ್ಬ್‌ಮದಲ್ಲಿ ಹುಟ್ಟಿದ ಜ್ಯಾಕ್ ಮಿಸ್ಟರ್ ಬ್ರೌನ್ ಅಲ್ಲವೆಂದೂ ಮಕೊಂಡೊದಲ್ಲಿ ಹುಟ್ಟಿ ಡ್ಯಾಗೊಬೆರ್ಟ್ರೊ ಫೋನ್‌ಸೆಕಾ ಹೆಸರಿನ ಔಷಧೀಯ ಸಸ್ಯಗಳ ವ್ಯಾಪಾರಿಯೆಂದೂ ತೋರಿಸಿದರು. ಸ್ವಲ್ಪ ಸಮಯದ ನಂತರ ಕಾರ್ಮಿಕರು ಮತ್ತೆ ಹೊಸದಾಗಿ ಪ್ರತಿಭಟನೆ ಪ್ರಾರಂಭಿಸಲು ಲಾಯರುಗಳು ಸಾರ್ವಜನಿಕರ ಎದುರು ಮಿಸ್ಟರ್ ಬ್ರೌನ್ ಸಾವನ್ನಪ್ಪಿದನೆಂದು ಮರಣ ಪ್ರಮಾಣಪತ್ರವನ್ನು ತೋರಿಸಿದರು. ಜೂನ್ ಒಂಭತ್ತರಂದು ಚಿಕಾಗೊನಲ್ಲಿ ಫೈರ್ ಎಂಜಿನ್ ಕೆಳಗೆ ಸಿಕ್ಕು ಸತ್ತು ಹೋದನೆಂದು ತಿಳಿಸುವ ಮತ್ತು ರಾಯಬಾರಿಗಳಿಂದ ವಿದೇಶಿ ಮಂತ್ರಿಗಳಿಂದ ಸಹಿಮಾಡಲ್ಪಟ್ಟ ಪ್ರಮಾಣ ಪತ್ರವನ್ನು ತೋರಿಸಿದರು. ನಿಷ್ಫಲವಾದ ಹೋರಾಟಗಳಿಂದ ಬೇಸತ್ತು, ಮಕೊಂಡೊದಲ್ಲಿನ ಅಧಿಕಾರಿಗಳನ್ನು ಬಿಟ್ಟು ತಮ್ಮ ದೂರುಗಳನ್ನು ಉಚ್ಚನ್ಯಾಯಾಲಯಗಳ ಬಾಗಿಲಿಗೆ ತೆಗೆದುಕೊಂಡು ಹೋದರು. ಆದರೆ ಅಲ್ಲಿಯ ಲಾಯರುಗಳೂ ಕೂಡ ಅವರ ಬೇಡಿಕೆಗಳು ನ್ಯಾಯಸಮ್ಮತವಾದುದಲ್ಲವೆಂದೂ ಮೂಲಭೂತವಾಗಿ ಕಂಪನಿಯಲ್ಲಿ ಅಂದು ಇಂದು ಎಂದೆಂದೂ ಖಾಯಂ ನೇಮಕಾತಿ ಪಡೆದ ಕಾರ್ಮಿಕರೇ ಇಲ್ಲವೆಂದೂ, ಇರುವವರೆಲ್ಲ ಗುತ್ತಿಗೆಯ ಆಧಾರದ ಮೇಲೆ ನೇಮಕಗೊಂಡವರೆಂದೂ ವಾದಿಸಿ, ಕಾರ್ಮಿಕರನ್ನು ಪೂರ್ತಿಯಾಗಿ ವಂಚಿಸಿದರು.ವರ್ಜೀನಿಯ ಹ್ಯಾಮ್, ಬಣ್ಣದ ಮಾತ್ರೆಗಳು, ಶೌಚಾಲಯ ಇತ್ಯಾದಿ ಇತ್ಯಾದಿ ಎಲ್ಲವೂ ಕಟ್ಟು ಕತೆಗಳೆಂದು ಹೇಳಿದ್ದೇ ಅಲ್ಲದೆ, ಕೋರ್ಟಿನ ತೀರ್ಪಿನ ಪ್ರಕಾರ ಕಾರ್ಮಿಕರ ಅಸ್ತಿತ್ವವೇ ಇಲ್ಲವೆಂದು ಸಾಬೀತು ಪಡಿಸಲಾಯಿತು.

ಬಹುದೊಡ್ಡ ಪ್ರಮಾಣದ ಮುಷ್ಕರ ಆರಂಭವಾಯಿತು. ವ್ಯವಸಾಯ ಅರ್ಧದಲ್ಲೆ ನಿಂತುಹೋಯಿತು. ಹಣ್ಣುಗಳು ಮರಗಳಲ್ಲಿ ಕೊಳೆಯಲು ತೊಡಗಿದವು. ನೂರ ಇಪ್ಪತ್ತು ಸರಕು ಸಾಗಣೆ ವಾಹನಗಳು ಆ ಕಡೆ ಈ ಕಡೆ ನಿಂತುಹೋದವು. ಪಟ್ಟಣಗಳಲ್ಲಿ ಕೆಲಸವಿಲ್ಲದ ಕಾರ್ಮಿಕರು ತುಂಬಿಹೋದರು. ಟರ್ಕ್‌ಸ್ಟ್ರೀಟ್‌ನ ಶನಿವಾರದ ಗದ್ದಲ ಕೆಲ ದಿನಗಳ ತನಕ ಮುಂದುವರೆಯಿತು. ಹೋಟೆಲ್ ಜಾಕೋಬನಲ್ಲಿನ ರೂಮುಗಳು ಭರ್ತಿಯಾಗಿ, ಇಪ್ಪತ್ನಾಲ್ಕು ಗಂಟೆಗಳ ಸರದಿಯ ಆಧಾರದ ಮೇಲೆ ವ್ಯವಸ್ಥೆ ಮಾಡಬೇಕಾಯಿತು. ಜೋಸ್ ಆರ್ಕಾಡಿಯೊ ಸೆಗುಂಡೊ ಅಲ್ಲಿದ್ದ ದಿನವೆ ಸಾರ್ವಜನಿಕ ಶಿಸ್ತನ್ನು ರಕ್ಷಿಸುವ ಜವಾಬ್ದಾರಿಯನ್ನು ಸೇನಾದಳಕ್ಕೆ ವಹಿಸಿಕೊಡಲಾಗಿದೆ ಎನ್ನುವುದನ್ನು ಘೋಷಿಸಲಾಯಿತು. ಅವನಿಗೆ ಮುನ್ಸೂಚನೆಗಳಲ್ಲಿ ನಂಬಿಕೆ ಇಲ್ಲದಿದ್ದರೂ, ಆ ಘೋಷಣೆ, ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್ ತನ್ನನ್ನು ಗುಂಡಿಕ್ಕಿ ಕೊಲ್ಲುವ ಶಿಕ್ಷೆಯ ವಿಧಾನವನ್ನು ತೋರಿಸಲು ಕರೆದುಕೊಂಡು ಹೋದಾಗಿನಿಂದ ತಾನು ಬಯಸುತ್ತಿದ್ದ ತನ್ನ ಸಾವಿನ ಘೋಷಣೆ ಎಂಬಂತೆ ಭಾಸವಾಯಿತು. ಆದರೆ ಈ ಕೆಟ್ಟ ಸೂಚನೆ ತನ್ನ ಗಾಂಭೀರ್ಯವನ್ನು ಕದಡಲಿಲ್ಲ. ಸ್ವಲ್ಪ ಹೊತ್ತಿನ ನಂತರ ಡ್ರಮ್ಮುಗಳ ಸದ್ದು ಬ್ಯೂಗಲ್‌ಗಳ ಸದ್ದು, ಜನರ ಓಡಾಟ, ಕಿರುಚಾಟಗಳ ಗದ್ದಲ ಮುಗಿಯುತ್ತಿದ್ದಂತೆ ಕಾಣಿಸಿತು. ಅಲ್ಲದೆ ತನ್ನೊಡನೆ ತಾನು ಮೌನವಾಗಿ, ಒಂಟಿಯಾಗಿ, ಮರಣದಂಡನೆಯ ದಿನದಿಂದ ನಡೆಸುತ್ತಿದ್ದ ಹೋರಾಟವೂ ಅಂತ್ಯ ತಲುಪಿದೆ ಎಂದುಕೊಂಡ. ಹೊರಗೆ ಬಂದು ನೋಡಿದ. ಮೂರು

ರೆಜಿಮೆಂಟುಗಳಿದ್ದು, ಅವುಗಳು ನಡೆಯುತ್ತಿದ್ದಾಗಿನ ಹೆಜ್ಜೆಯ ಸಪ್ಪಳ ಭೂಮಿಯ ಕಂಪನದಂತೆ ತೋರಿತು. ಅವುಗಳ ಘೂಂಕರಿಕೆ ಮಧ್ಯಾಹ್ನದ ಬೆಳಕನ್ನು ಕ್ರಿಮಿನಾಶಕ ಹಬೆಯಿಂದ ತುಂಬಿತು. ಅವರು ಕುಳ್ಳಗೆ, ದಪ್ಪಗೆ ಕ್ರೂರವಾಗಿದ್ದರು. ಕುದುರೆಯಂತೆ ಬೆವರುತ್ತಿದ್ದರು. ಸೂರ್ಯನಿಂದ ಬೆಂದ ಚರ್ಮದಂತೆ ವಾಸನೆ ಹೊಮ್ಮಿಸುತ್ತಿದ್ದರು. ಒಳನಾಡಿನಿಂದ ಬಂದ ಅವರು ಹೆಚ್ಚು ಮಾತಿಲ್ಲದೆ ಹಿಡಿದದ್ದನ್ನು ಸಾಧಿಸುವ ಛಲದ ಮನುಷ್ಯರಾಗಿದ್ದರು. ಹಾದುಹೋಗಲು ಒಂದು ಗಂಟೆಗೂ ಮೇಲೆ ತೆಗೆದುಕೊಂಡರೂ ಅಲ್ಲಲ್ಲಿಯೇ ಸುತ್ತುತ್ತಿದ್ದಾರೆ ಎನಿಸಿತ್ತು. ಆದರೆ ಅವರು ಬಹಳಷ್ಟು ಮಂದಿ ಇದ್ದು ನೋಡಲು ಒಬ್ಬಳೇ ಸೂಳೆಗೆ ಹುಟ್ಟಿದವರಂತೆ ಎಲ್ಲರೂ ಒಂದೇ ಥರ ಇದ್ದರು. ಎಲ್ಲರ ಸ್ವಭಾವವವೂ ಒಂದೇ ತೆರನಾಗಿತ್ತು. ಬೆನ್ನಿನ ಮೇಲೆ ಸಾಮಾನುಗಳ ಚೀಲವಿತ್ತು. ಬಂದೂಕುಗಳು ****ನಟ್ಟುಗಳು ಒಂದೇ ಆಗಿದ್ದವು. ಕುರುಡು ವಿಧೇಯತೆಯನ್ನು ಎಲ್ಲರೂ ಸಮಾನವಾಗಿ ಹೊಂದಿದ್ದರು. ಜೊತೆಗೆ ಒಂದೇ ತೆರನಾದ ಗೌರವ ಪ್ರತಿಷ್ಠೆಯ ಪ್ರತಿಷ್ಠೆಯ ಪ್ರಜ್ಞೆಯೂ ಇತ್ತು. ಹಾಸಿಗೆ ಮೇಲಿದ್ದ ಉರ್ಸುಲಾ ಅವರು ಹಾದುಹೋದದ್ದನ್ನು ಪರಿಭಾವಿಸಿದಳು. ಮತ್ತು ಬೆರಳುಗಳಿಂದ ಕ್ರಾಸ್ ಚಿಹ್ನೆಯನ್ನು ಮಾಡಿದಳು. ಸಾಂತಾ ಸೋಫಿಯಾ ದ ಲಾ ಪೀದಾದ್ ಆಗತಾನೇ ಇಸ್ತ್ರಿಮಾಡಿದ್ದ ಟೇಬಲ್ ಕ್ಲಾತ್ ಮೇಲೆ ಬಾಗಿ ತನ್ನ ಮಗ ಜೋಸ್ ಆರ್ಕಾಡಿಯೊ ಸೆಗುಂಡೊ ಬಗ್ಗೆ ಯೋಚಿಸುತ್ತಲೇ ಹೋಟೆಲ್ ಜಾಕೋಬ್‌ನನ್ನು ಬಾಗಿಲನ್ನು ಹಾದು ಹೋಗುವ ಕಡೆಯ ಸೈನಿಕನವರೆಗೆ ಒಂದಿಷ್ಟೂ ಮುಖಚರ್ಯೆಯನ್ನು ಬದಲಿಸದೆ ನೋಡುತ್ತಲೇ ಇದ್ದಳು.

ವಿವಾಹದಲ್ಲಿ ಮಧ್ಯಸ್ಥಿಕೆ ವಹಿಸಲು ಸೈನಿಕಶಾಸನ, ಸೈನ್ಯಕ್ಕೆ ಅವಕಾಶ ಕೊಟ್ಟಿದ್ದರೂ, ರಾಜಿ ಮಾಡಿಸಲು ಯಾವ ಪ್ರಯತ್ನವನ್ನೂ ಮಾಡಲಿಲ್ಲ. ಮಕೊಂಡೊ ಪ್ರವೇಶಿಸಿದ ಕೂಡಲೆ ತಮ್ಮ ಹೊರೆಗಳನ್ನು ಪಕ್ಕಕ್ಕೆ ಇರಿಸಿ, ಬಾಳೆಗೊನೆಗಳನ್ನು ಕತ್ತರಿಸಿ, ಟ್ರೈನುಗಳು ಓಡಾಡುವಂತೆ ಮಾಡಿದರು. ಕಾರ್ಮಿಕರು ಅಲ್ಲಿವರೆಗೆ ಸುಮ್ಮನಿದ್ದವರು, ಅರಣ್ಯಪ್ರದೇಶಗಳೊಳಗೆ ನುಗ್ಗಿ ತಮ್ಮಲ್ಲಿದ್ದ ಮಚ್ಚುಗಳಿಂದ ವಿಧ್ವಂಸಕರನ್ನು ವಿಧ್ವಂಸಮಾಡಿದರು. ಬಾಳೆಗಿಡಗಳನ್ನು, ಪ್ರತಿನಿಧಿಗಳನ್ನು ಸುಟ್ಟುಹಾಕಿದರು. ರೈಲುಗಳ ಓಡಾಟ ನಿಲ್ಲಿಸಲು ಹಳಿಗಳನ್ನು ಕಿತ್ತೆಸೆದರು. ಅಲ್ಲಿಂದ ದಾರಿ ಮಾಡಿಕೊಂಡು ಮೆಷಿನ್‌ಗನ್‌ಗಳ ಮೂಲಕವಾಗಿ ಮುಂದೆ ಸಾಗಿ ಟೆಲಿಗ್ರಾಫ್ ಮತ್ತು ಟೆಲಿಫೋನ್ ತಂತಿಗಳನ್ನು ಕಿತ್ತುಹಾಕಿದರು. ನೀರಾವರಿ ಕುಳಿಗಳು ರಕ್ತದಿಂದ ತುಂಬಿದವು. ಮಿಸ್ಟರ್ ಬ್ರೌನ್ ಮತ್ತು ಅವನ ದೇಶವಾಸಿಗಳನ್ನು ಸೈನಿಕರ ರಕ್ಷಣೆಯಲ್ಲಿ ಮಕೊಂಡೊದಿಂದ ಹೊರಗೆ ಕರೆದುಕೊಂಡು ಹೋದರು. ಕಾರ್ಮಿಕರನ್ನು ಮಕೊಂಡೊದಲ್ಲಿ ಸೇರುವಂತೆ ಅಧಿಕಾರಿಗಳು ಆದೇಶಿಸಿದಾಗ ಪರಿಸ್ಥಿತಿ ಭಯಾನಕವಾಗಿದ್ದು, ರಕ್ತಸಿಕ್ತ ಸಿವಿಲ್ ವಾರ್ ಪ್ರಾರಂಭವಾಗುವ ಸೂಚನೆಗಳು ಕಂಡುಬಂದವು. ಆ ಪ್ರಾಂತದ ಸಿವಿಲ್ ಮತ್ತು ಮಿಲಿಟರಿ ನಾಯಕ ಮುಂದಿನ ಶುಕ್ರವಾರ ಸಂಘರ್ಷದ ಮಧ್ಯೆ ಪ್ರವೇಶಿಸುತ್ತಾರೆಂಬುದನ್ನು ಸೂಚನೆಯಲ್ಲಿ ಪ್ರಕಟಿಸಲಾಗಿತ್ತು.

ಬೆಳಗಿನ ಜಾವದಿಂದಲೇ ಜೋಸ್ ಆರ್ಕಾಡಿಯೊ ಸೆಗುಂಡೊ ಶುಕ್ರವಾರ ಸ್ಟೇಷನ್ ಬಳಿ ಸೇರಿದ್ದ ಗುಂಪಿನಲ್ಲಿದ್ದ. ಯೂನಿಯನ್ ನಾಯಕರ ಸಭೆಯಲ್ಲಿ ಭಾಗವಹಿಸಿ ಅಲ್ಲಿ

ನಡೆಯುವ ಕಲಾಪಗಳ ಬಗ್ಗೆ ಮಾಹಿತಿ ಸಂಗ್ರಹಿಸಲು ಅವನನ್ನು ಮತ್ತು ಕರ್ನಲ್ ಗ್ಯಾವಿಲಾನ್‌ರನ್ನು ಕೇಳಿಕೊಳ್ಳಲಾಗಿತ್ತು. ಸೆಗುಂಡೊಗೆ ಹುಷಾರಿರಲಿಲ್ಲ. ಸಣ್ಣ ಚೌಕವೊಂದರಲ್ಲಿ ಮೆಷಿನ್‌ಗನ್ ಇರಿಸಲಾಗಿತ್ತು. ಬನಾನಾ ಕಂಪನಿಯವರ ಸಣ್ಣ ಊರನ್ನು ಫಿರಂಗಿಗಳಿಂದ, ಶಸ್ತ್ರಾಸ್ತ್ರಗಳಿಂದ ರಕ್ಷಿಸಲಾಗಿತ್ತು. ಕಾಯುತ್ತಿದ್ದ ರೈಲುಗಾಡಿ ಹನ್ನೆರಡು ಗಂಟೆಯಾದರೂ ಬರಲಿಲ್ಲ. ಮೂರು ಸಾವಿರಕ್ಕೂ ಹೆಚ್ಚು ಜನ ಕಾರ್ಮಿಕರು, ಹೆಂಗಸರು ಮಕ್ಕಳು ಎಲ್ಲರೂ ಕಾಯುತ್ತಿದ್ದರು. ಜನ, ಮೆಷಿನ್ ಗನ್‌ಗಳಿಂದ ತುಂಬಿದ ರಸ್ತೆಗಳತ್ತಲೂ ಹರಡಿಕೊಂಡರು. ಅದನ್ನು ನೋಡಿದಾಗ ಕಾಯುತ್ತಿರುವ ಗುಂಪಿನಂತೆ ಕಾಣುವುದಕ್ಕೆ ಬದಲಾಗಿ ಯಾವಿದೊ ಜಾತ್ರೆಯ ಸಂಭ್ರಮದಲ್ಲಿ ಇದ್ದಂತೆ ತೋರುತ್ತಿತ್ತು. ಟರ್ಕ್ ಸ್ಟ್ರೀಟ್‌ನಿಂದ, ಕಾಯುವ ಬೇಸರ ಮತ್ತು ಸುಡುಬಿಸಿಲಿನಿಂದ ಪಾರಾಗಲು ಪಾನೀಯಗಳನ್ನು, ತಿಂಡಿ ತೀರ್ಥಗಳನ್ನು ತರಿಸಿಕೊಂಡಿದ್ದರು. ಮೂರು ಗಂಟೆಗೆ ಸ್ವಲ್ಪ ಮುಂಚೆ, ಬರಬೇಕಾಗಿದ್ದ ಟ್ರೈನ್ ಮರುದಿನದವರೆಗೆ ಬರುವುದಿಲ್ಲವೆಂದು ಸುದ್ದಿ ಹಬ್ಬಿತು. ಗುಂಪು ನಿರಾಶೆಯ ನಿಟ್ಟುಸಿರನ್ನೆಳೆಯಿತು. ಒಬ್ಬ ಸೈನ್ಯಾಧಿಕಾರಿ ಸ್ಟೇಷನ್‌ನ ಮೇಲ್ಛಾವಣಿ ಮೇಲೆ ಹತ್ತಿದ. ಅಲ್ಲಿ ಇರಿಸಿದ್ದ ನಾಲ್ಕು ಮೆಷಿನ್ ಗನ್‌ಗಳನ್ನು ಗುಂಪಿನ ಕಡೆಗೆ ಗುರಿಯಿಟ್ಟು ಗದ್ದಲಮಾಡದಿರಲು ಸೂಚಿಸಿದ. ಜೋಸ್ ಆರ್ಕಾಡಿಯೊ ಸೆಗುಂಡೊ ಪಕ್ಕದಲ್ಲಿ, ನಾಲ್ಕು ವರ್ಷದ ಮತ್ತು ಏಳು ವರ್ಷದ ಇಬ್ಬರು ಮಕ್ಕಳ ಜೊತೆಗೆ ಒಬ್ಬ ದಪ್ಪನೆಯ ಹೆಂಗಸು ನಿಂತಿದ್ದಳು. ಸಣ್ಣವನನ್ನು ಕಂಕುಳಲ್ಲಿ ಇರಿಸಿಕೊಂಡು, ದೊಡ್ಡವನನ್ನು, ಜೋಸ್ ಆರ್ಕಾಡಿಯೊ ಸೆಗುಂಡೊಗೆ, ತನಗೆ ಪರಿಚಯವಿಲ್ಲದಿದ್ದರೂ, ಎತ್ತಿಕೊಳ್ಳಲು ಹೇಳಿದಳು. ಜೋಸ್ ಆರ್ಕಾಡಿಯೊ ಸೆಗುಂಡೊ ಅವನನ್ನು ಹೆಗಲ ಮೇಲೆ ಎತ್ತಿಕೊಂಡ. ಎಷ್ಟೋ ವರ್ಷಗಳ ನಂತರ ಆ ಹುಡುಗ ಯಾರಿಗೂ ನಂಬಿಕೆ ಬಾರದ ರೀತಿಯಲ್ಲಿ ಲೆಫ್ಟಿನೆಂಟ್ ಡಿಕ್ರಿ ನಾಲ್ಕನೆಯದನ್ನು ಧ್ವನಿವರ್ಧಕದ ಮೂಲಕ ಓದಿದ್ದನ್ನು ತಾನು ನೋಡಿದೆನೆಂದು ಹೇಳಬಹುದಾಗಿತ್ತು. ಅದನ್ನು ಜನರಲ್ ಕಾರ್ಲೋಸ್ ಕೋರ್ಟಿಸ್ ವರ್ಗಾಸ್ ಮತ್ತು ಅವನ ಕಾರ್ಯದರ್ಶಿ, ಮೇಜರ್ ಎನ್‌ರಿಕ್ ಗಾರ್ಸಿಯಾ ಇಸಾಜಾ ಸಹಿಹಾಕಿದ್ದನ್ನೂ ಎಂಭತ್ತು ಪದಗಳ ಮೂರು ಪಂಕ್ತಿಗಳಲ್ಲಿ "ಮುಷ್ಕರವು" ಬರಿ ಸುಳ್ಳುಗಳ ಕಂತೆ, ಪುಂಡರ ಗುಂಪು ಎಂದು ಹೇಳಿ, ಮುಷ್ಕರ ಹೂಡುವವರನ್ನು ಗುಂಡಿಟ್ಟು ಕೊಲ್ಲುವಂತೆ ಸೈನಿಕರಿಗೆ ಆದೇಶಿಸಿದ.

ಡಿಕ್ರಿ ಅಥವಾ ನಿರ್ಣಯವನ್ನು ಓದಿದ ಮೇಲೆ, ಪ್ರತಿಭಟನೆ ಕಿವಿಗಡಚಿಕ್ಕುವ ಗದ್ದಲದ ನಡುವೆ, ಕ್ಯಾಪ್ಟನ್ ಒಬ್ಬನು ಲೆಫ್ಟಿನೆಂಟ್‌ನ ಸ್ಥಾನದಲ್ಲಿ ಬಂದು, ಧ್ವನಿವರ್ಧಕದಲ್ಲಿ ತಾನು ಅವರನ್ನು ಉದ್ದೇಶಿಸಿ ಮಾತಾಡಲಿರುವುದರಿಂದ ಶಾಂತವಾಗಿರಲು ಕೇಳಿಕೊಂಡ ಮೇಲೆ ಸದ್ದು ಅಡಗಿತು.

"ಮಹನೀಯರೇ ಮತ್ತು ಮಹಿಳೆಯರೇ, ಮುಷ್ಕರವನ್ನು ಹಿಂತೆಗೆದುಕೊಳ್ಳಲು ನಿಮಗೆ ಐದುನಿಮಿಷ ಕಾಲಾವಕಾಶವನ್ನು ಕೊಡಲಾಗಿದೆ" ಎಂದು ನಿಧಾನವಾಗಿ ದಣಿದ ದನಿಯಲ್ಲಿ ಘೋಷಿಸಿದ.

ಮತ್ತಷ್ಟು ತೀವ್ರಗೊಂಡ ಕೂಗಾಟ ಕಿರುಚಾಟಗಳ ಮಧ್ಯೆ ಬ್ಯೂಗಲ್ ಸದ್ದು ಅಡಗಿಹೋಯಿತು. ಒಂದು ಎರಡು ... ಎಂದು ಎಣಿಕೆ ಶುರುವಾದರೂ ಒಬ್ಬರೂ ಅಲ್ಲಿಂದ ಕದಲಿಲ್ಲ.

"ಐದು ನಿಮಿಷ ಪೂರ್ತಿಯಾಯಿತು. ಇನ್ನು ಒಂದೇ ನಿಮಿಷ. ಗುಂಡು ಹಾರಿಸುತ್ತೇವೆ" ಎಂದು ಅದೇ ದನಿಯಲ್ಲಿ ಹೇಳಿದ.

ಜೋಸ್ ಆರ್ಕಾಡಿಯೊ ಸೆಗುಂಡೊ, ಬೆವರುತ್ತಿದ್ದವನು ಮಗುವನ್ನು ಕೆಳಗಿಳಿಸಿದ. ಆ ಹೆಂಗಸಿಗೆ ಒಪ್ಪಿಸಿದ. "ಈ ಹಲ್ಕಾ ನನ್ಮಕ್ಕಳು ಷೂಟ್ ಮಾಡಿಯೇ ಮಾಡುತ್ತಾರೆ" ಎಂದು ಆ ಹೆಂಗಸು ಗೊಣಗುಟ್ಟಿದಳು. ಜೋಸ್ ಆರ್ಕಾಡಿಯೊ ಸೆಗುಂಡೊಗೆ ಮಾತಾಡಲು ಸಮಯವಿರಲಿಲ್ಲ. ಅದೇ ಸಮಯದಲ್ಲಿ ಆ ಹೆಂಗಸು ಹೇಳಿದ ಮಾತುಗಳನ್ನೇ ಗಡಸು ಧ್ವನಿಯಲ್ಲಿ ಕೂಗಿ ಹೇಳುತ್ತಿದ್ದುದನ್ನು ಗುರುತಿಸಿದ. ಪರಿಸ್ಥಿತಿ ಗಂಭೀರತೆ, ಭೀಕರ ಮೌನಗಳು, ಸಾವನ್ನು ಎದುರಿಸಲೂ ಸಿದ್ಧವಾಗಿದ್ದಂತಹ ಜನರ ಗುಂಪನ್ನು ಚದುರಿಸುವುದು ಸಾಧ್ಯವೇ ಇಲ್ಲವೆನಿಸಿ, ತನ್ನ ಮುಂದಿದ್ದ ತಲೆಗಳಿಗಿಂತ ಮೇಲೆ ನಿಂತು "ಸೂಳೆ ಮಕ್ಳಾ, ಬಾಲ ಮುದುರಿಕೊಂಡು ಮುಚ್ಕೊಂಡು ಇಲ್ಲಿಂದ ಹೊರಡಿ. ಒಂದು ನಿಮಿಷ ಹೆಚ್ಚಾಗಿಯೇ ಕೊಡ್ತಿದ್ದೀನಿ" ಎಂದು ಗಟ್ಟಿಯಾಗಿ ಹೇಳಿದ.

ಅವನು ಕೂಗಿಕೊಂಡ ನಂತರ ಏನಾಯಿತೆಂಬುದೇ ತಿಳಿಯಲಿಲ್ಲ. ಬೆದರಿಕೆಗೆ ಬದಲಾಗಿ ಚಿತ್ತಭ್ರಮೆಯುಂಟಾದಂತೆ ಎನಿಸಿತು. ಕ್ಯಾಪ್ಟನ್ ಶೂಟಿಂಗ್ ಆರ್ಡರ್ ಕೊಡುತ್ತಿದ್ದಂತೆ ಹದಿನಾಲ್ಕು ಮೆಷಿನ್‌ಗನ್‌ಗಳು ಸಿಡಿದವು. ಆದರೆ ಅವು ಕೇಪುಗಳಿಂದ ತುಂಬಿರಬೇಕೆನಿಸಿತು. ಯಾಕೆಂದರೆ ಅವು ಸಿಡಿದರೂ ಒಂದಿಷ್ಟು ಬೆಳಕು ಕಾಣಿಸಿಕೊಂಡಿತೇ ಹೊರತು ಮತ್ತೇನೂ ಆಗಲಿಲ್ಲ. ಒಂದಿಷ್ಟೂ ಪ್ರತಿಕ್ರಿಯೆ ಇರಲಿಲ್ಲ. ಅಳುವಾಗಲಿ, ನಿಟ್ಟುಸಿರಾಗಲಿ ಕೇಳಿಸದೆ ಜನರ ಗುಂಪು ದಿಗ್ಭ್ರಾಂತವಾಗಿದ್ದಂತೆ ಕಂಡಿತು. ಆದರೆ ಸ್ಟೇಷನ್‌ನ ಒಂದು ಕಡೆಯಿಂದ ಇದ್ದಕ್ಕಿದ್ದಂತೆ 'ಅಯ್ಯೋ ಸತ್ತೆ!" ಎಂಬ ಮಾರಣಾಂತಿಕ ಕೂಗುಗಳು ಭಯಾನಕ ನಿಟ್ಟುಸಿರು ಕೇಳಿಬಂದವು. ಸೆಗುಂಡೊಗೆ ಮಗುವನ್ನು ಎತ್ತಿಕೊಳ್ಳಲು ಸಮಯವಿರಲಿಲ್ಲ. ಇನ್ನೊಂದು ಮಗುವನ್ನು ಆ ಹೆಂಗಸು ಎತ್ತಿಕೊಂಡು, ಗಾಭರಿಯಿಂದ ಓಡುತ್ತಾ ಗುಂಪಿನ ನಡುವೆ ಸೇರಿಕೊಂಡಳು.

ಹಲವು ವರ್ಷಗಳಾದ ಮೇಲೆ, ಜನಕ್ಕೆ ತಾನು ತಲೆಕೆಟ್ಟ ಮುದುಕ ಅನಿಸಿದರೂ, ಹೇಗೆ ಜೋಸ್ ಆರ್ಕಾಡಿಯೊ ಸೆಗುಂಡೊ ತನ್ನನ್ನು ಎತ್ತಿಕೊಂಡು ತಲೆಮೇಲೆ ಕೂರಿಸಿಕೊಂಡು, ಎಗರಿ ಹಾಕಿದ. ತಾನು ಗಾಳಿಯಲ್ಲಿ, ಗುಂಪಿನ ಗಾಭರಿಯ ಅಲೆಮೇಲೆ ತೇಲುತ್ತಿದ್ದೆ ಎಂಬುದನ್ನು ಮತ್ತು ಮಗುವಾಗಿದ್ದಕ್ಕಾಗಿ, ಆ ಕ್ಷಣದಲ್ಲಿ ಹುಚ್ಚೆದ್ದ ಜನ, ಮೆಷಿನ್ ಗನ್‌ಗಳು ಸಿಡಿದಾಗ ಓಡಿ ಮೂಲೆ ಸೇರುತ್ತಿದ್ದುದನ್ನು ನೋಡುವ ಅವಕಾಶ ಸಿಕ್ಕಿದ್ದನ್ನು ಮತ್ತು "ಕೆಳಗೆ ಇಳಿ! ಕೆಳಗೆ ಇಳಿ" ಎಂದು ಗುಂಪು ಕೂಗುತ್ತಿದ್ದುದನ್ನು ಹೇಳುತ್ತಿದ್ದ.

ಮುಂದುಗಡೆ ಇದ್ದ ಜನರು ಗುಂಡಿನ ಅಲೆಗಳನ್ನು ತಪ್ಪಿಸಿಕೊಳ್ಳಲು ಕೆಳಗೆ ಮಲಗಿದರು. ಬದುಕುಳಿದವರು ಕೆಳಗೆ ಬಗ್ಗಿ ತಪ್ಪಿಸಿಕೊಳುವುದಕ್ಕೆ ಬದಲಾಗಿ, ಸಣ್ಣ ಚೌಕದ

ಬಳಿಗೆ ಹೋಗಲು ಪ್ರಯತ್ನಿಸಿದರು. ವಿರುದ್ಧ ದಿಕ್ಕುಗಳಿಂದ ಮೆಷಿನ್ ಗನ್‌ಗಳಿಂದ ಗುಂಡುಗಳು ಹಾರಿ ಬರುತ್ತಿದ್ದಾಗ ಗಾಭರಿ, ಭಯ, ತಲ್ಲಣಗಳಿಂದ ಜನ ಓಡುವಾಗ ಒಬ್ಬರಿಗೊಬ್ಬರು ಡಿಕ್ಕಿ ಹೊಡೆಯುತ್ತಿದ್ದರು. ಜನರು ಸಿಲುಕಿ ಬಿದ್ದರು. ಸುಂಟರಗಾಳಿಯಂತೆ ತಿರುತಿರುಗಿ ಈರುಳ್ಳಿ ಸಿಪ್ಪೆಸುಲಿಯುವಂತೆ ಮೆಷಿನ್‌ಗನ್‌ಗಳು ಸಕ್ರಮವಾಗಿ ತಮ್ಮ ಕೆಲಸ ನಿರ್ವಹಿಸಿದವು.

ಬಯಲಿನಲ್ಲಿ, ಗುಂಪಿನ ತುಳಿತಕ್ಕೆ ಒಳಗಾಗದೆ ಆಶ್ಚರ್ಯಕರವಾದ ರೀತಿಯಲ್ಲಿ, ಒಬ್ಬ ಹೆಂಗಸು ಮೊಣಕಾಲೂರಿ ಕ್ರಾಸ್‌ನ ರೀತಿಯಲ್ಲಿ ಕೈಗಳನ್ನು ಇರಿಸಿದ್ದನ್ನು ಮಗು ನೋಡಿತು. ಆ ಸಮಯದಲ್ಲಿ ಜೋಸ್ ಆರ್ಕಾಡಿಯೊ ಸೆಗುಂಡೊ ಮಗುವನ್ನು, ಅಲ್ಲಿ ಇಳಿಸಿದ. ಅವನ ಮುಖ ರಕ್ತದಿಂದ ತೊಯ್ದಿತ್ತು. ಅಷ್ಟರಲ್ಲಿ ಬಹುದೊಡ್ಡ ಸೈನ್ಯಪಡೆ, ವಿಸ್ತಾರ ಬಯಲಿನಲ್ಲಿ ಇದ್ದುದೆಲ್ಲವನ್ನೂ, ಮಂಡಿಯೂರಿದ್ದ ಹೆಂಗಸನ್ನು, ಎತ್ತರದ ದೀಪವನ್ನು, ಸೂಳೆಯರಿದ್ದ ಪ್ರದೇಶವನ್ನು, ಉರ್ಸುಲಾ ಇಗುವಾರನ್ ಮಾಂಸದ ಕ್ಯಾಂಡಿಗಳನ್ನು ಮಾರಿದ ಸ್ಥಳವನ್ನು – ಎಲ್ಲವನ್ನೂ ಸಂಪೂರ್ಣವಾಗಿ ನೆಲಸಮ ಮಾಡಿತು.

ಜೋಸ್ ಆರ್ಕಾಡಿಯೊ ಸೆಗುಂಡೊಗೆ ಪ್ರಜ್ಞೆ ಬಂದಾಗ, ಮೇಲು ಮುಖ ಮಾಡಿ ಕತ್ತಲಲ್ಲಿ ಇದ್ದುದನ್ನು ಅರಿತ. ಅವನಿಗೆ ತಾನು ಕೊನೆಯಿಲ್ಲದೆ, ಮೌನವಾಗಿ ಓಡುತ್ತಿದ್ದ ಟ್ರೈನಿನಲ್ಲಿ ಹೋಗುತ್ತಿರುವುದನ್ನು ಮತ್ತು ಒಣಗದ ರಕ್ತದಿಂದ ತಲೆ ರಟ್ಟುಗಟ್ಟಿದ್ದನ್ನು, ಮೂಳೆಗಳಲ್ಲಿ ಅತೀವವಾದ ನೋವುಂಟಾಗುತ್ತಿದ್ದುದನ್ನು ಗಮನಿಸಿದ. ತಡೆಯಲಾಗದಷ್ಟು ನಿದ್ದೆ ಆವರಿಸಿತ್ತು. ಬಹಳ ಹೊತ್ತು ಮಲಗಬೇಕೆನಿಸಿ, ನೋವಿಲ್ಲದ ಕಡೆಗೆ ಹೊರಳಿ, ಭಯ, ಆತಂಕಗಳಿಂದ ಬಿಡುಗಡೆ ಹೊಂದಬೇಕೆಂದುಕೊಂಡ. ಅವನಿಗೆ ಆಗಷ್ಟೇ ಅರ್ಥವಾಯಿತು. ತಾನು ಮಲಗಿರುವುದು ಹೆಣಗಳ ಮೇಲೆ ಎಂದು. ಹೆಣಗಳು ಇದ್ದ ಸ್ಥಿತಿಯಿಂದ, ತಣ್ಣಗೆ ಸೆಟೆದುಕೊಂಡು ಇದ್ದ ನಿಲುವಿನಿಂದ ಮಾರಣಹೋಮವಾಗಿ ಸಾಕಷ್ಟು ಸಮಯ ಕಳೆದಿರಬೇಕು ಎಂದುಕೊಂಡ. ಬಾಳೆಗೊನೆಗಳನ್ನು ಬೋಗಿಯಲ್ಲಿ ಪೇರಿಸಿ ಇಡುವಂತೆ ಹೆಣಗಳನ್ನೂ ಇಡಲಾಗಿತ್ತು. ಅಲ್ಲಿಂದ ತಪ್ಪಿಸಿಕೊಂಡು ಹೋಗಬೇಕೆಂದು ಕಾಲೆಳೆದುಕೊಳ್ಳುತ್ತಾ ಒಂದು ಬೋಗಿಯಿಂದ ಮತ್ತೊಂದು ಬೋಗಿಗೆ ಹೋಗುತ್ತಾ, ಯಾವ ದಿಕ್ಕಿನ ಕಡೆಗೆ ಟ್ರೈನ್ ಹೋಗುತ್ತಿತ್ತೊ ಆ ದಿಕ್ಕಿನ ಕಡೆಗಿದ್ದ ಬೋಗಿಗಳನ್ನು ಹಾದುಹೋಗುತ್ತಿದ್ದಾಗ ಅವನ ಕಣ್ಣಿಗೆ ಗಂಡಸರ, ಹೆಂಗಸರ, ಮಕ್ಕಳ ಶವಗಳು ಕಾಣಿಸಿದವು. ಮಧ್ಯೆ ಮಧ್ಯೆ ಹರಿದು ಬರುತ್ತಿದ್ದ ಬೆಳಕಿನ ಝಳಕುಗಳಲ್ಲಿ ಅವುಗಳನ್ನು ನಿರ್ದಾಕ್ಷಿಣ್ಯವಾಗಿ ಸಮುದ್ರಕ್ಕೆ ಕೊಳೆತ ಬಾಳೆಗೊನೆಗಳನ್ನು ಎಸೆಯುವಂತೆ ಎಸೆಯುತ್ತಿದ್ದುದನ್ನು ಕಂಡ. ಆ ಹೆಣಗಳಲ್ಲಿ ಚೌಕದಲ್ಲಿ ಪಾನೀಯಗಳನ್ನು ಮಾರುತ್ತಿದ್ದ ಹೆಂಗಸನ್ನು ಮತ್ತು ಗಾಬರಿಗೊಂಡಿದ್ದ ಗುಂಪಿನ ನಡುವಿನಿಂದ ದಾರಿ ಮಾಡಿಕೊಳ್ಳುತ್ತಾ ಕೈಯಲ್ಲಿ ಬೆಳ್ಳಿಯ ಮಾರೆಲಿಯಾ ಬಕಲ್ ಇದ್ದ ಬೆಲ್ಟನ್ನು ಇನ್ನೂ ಹಿಡಿದಿದ್ದ ಕರ್ನಲ್ ಗ್ಯಾವಿಲಾನ್‌ನನ್ನು ಗುರುತಿಸಿದ. ಮೊದಲ ಬೋಗಿಗೆ ಪ್ರವೇಶಿಸಿ, ಕತ್ತಲಿದ್ದುದರಿಂದ ಅಲ್ಲಿಂದ ಜಿಗಿದು. ಹಳಿಗಳ ಪಕ್ಕದಲ್ಲಿ, ಟ್ರೈನ್ ಮುಂದೆ ಹೋಗುವವರೆಗೆ ಬಿದ್ದುಕೊಂಡಿದ್ದ. ಅವನು ನೋಡಿದ ಟ್ರೈನ್‌ಗಳಲ್ಲಿ ಇದು ಅತಿ ಉದ್ದದ ಟ್ರೈನ್ ಆಗಿತ್ತು. ಎರಡು ಎಂಜಿನ್‌ಗಳ ಮಧ್ಯೆ

ಇನ್ನೂರು ಬೋಗಿಗಳಿದ್ದವು. ಅದಕ್ಕೆ ಕೆಂಪು, ಹಸಿರು ದೀಪಗಳೂ ಇರಲಿಲ್ಲ. ರಾತ್ರಿ ಹೊತ್ತಿನಲ್ಲಿ ಕಳ್ಳ ಹೆಜ್ಜೆಗಳಲ್ಲಿ ಸಾಗುತ್ತಿರುವಂತೆ ತೋರುತ್ತಿತ್ತು. ಟ್ರೈನಿನ ಮೇಲೆ ಮೆಷಿನ್‌ಗನ್‌ಗಳೊಂದಿಗೆ ಇದ್ದ ಸೈನಿಕರ ಕಪ್ಪು ಆಕಾರಗಳು ಕಾಣುತ್ತಿದ್ದವು.

ಮಧ್ಯರಾತ್ರಿ ಕಳೆದ ಮೇಲೆ ಮೋಡಗಳು ಸ್ಫೋಟಗೊಂಡಂತೆ ಭಾರಿ ಮಳೆಯಾಯಿತು. ಜೋಸ್ ಆರ್ಕಾಡಿಯೊ ಸೆಗುಂಡೊಗೆ ತಾನು ಜಿಗಿದ ಸ್ಥಳ ಯಾವುದೆಂದು ತಿಳಿಯಲಿಲ್ಲವಾದರೂ ಟ್ರೈನು ಹೋಗುತ್ತಿದ್ದ ದಿಕ್ಕಿಗೆ ವಿರುದ್ಧವಾಗಿ ಹೋದರೆ ಮಕೊಂಡೊ ತಲುಪಬಹುದು ಎಂದುಕೊಂಡ. ಮೂರುಗಂಟೆ ಕಾಲ ನಡೆದ. ಒಂದು ಕಡೆ ಮಳೆಯಿಂದ ಪೂರ್ತಿಯಾಗಿ ತೊಯ್ದು ಹೋಗಿದ್ದ, ಮತ್ತೊಂದು ಕಡೆ ಸಿಡಿವ ತಲೆನೋವು. ಅಂತೂ ಇಂತೂ ಬೆಳಗಿನ ಬೆಳಕಲ್ಲಿ ಕೆಲವು ಮನೆಗಳು ಇದ್ದುದನ್ನು ಗುರುತಿಸಲು ಸಾಧ್ಯವಾಯಿತು. ಕಾಫಿಯ ಪರಿಮಳದಿಂದ ಸೆಳೆಯಲ್ಪಟ್ಟು, ಒಲೆಯ ಬಳಿ, ಮಗುವನ್ನು ಕಂಕುಳಲ್ಲಿ ಇರಿಸಿಕೊಂಡು ನಿಂತಿದ್ದ ಹೆಂಗಸನ್ನು ನೋಡಿ, ಅಡಿಗೆ ಮನೆ ಒಳಗೆ ಬಂದ. "ನಾನು ಜೋಸ್ ಆರ್ಕಾಡಿಯೊ ಸೆಗುಂಡೊ" ಎಂದು ಹೇಳಿದ.

ತಾನಿನ್ನೂ ಬದುಕಿದ್ದೇನೆಂಬುದನ್ನು ತಿಳಿಸಲು, ತನ್ನ ಹೆಸರನ್ನು ಪೂರ್ತಿಯಾಗಿ ಬಿಡಿಸಿ ಬಿಡಿಸಿ ಹೇಳಿದ. ಈ ವಿಚಾರದಲ್ಲಿ ಅವನು ಬಹಳ ಹುಷಾರಾಗಿ ನಡೆದುಕೊಂಡ. ಇಲ್ಲದಿದ್ದಲ್ಲಿ ಆ ಹೆಂಗಸು ಅವನು ಕೊಳಕಾಗಿ, ರಕ್ತಸಿಕ್ತವಾಗಿ, ಸಾವನ್ನು ಸಮೀಪಿಸಿ, ಬಾಗಿಲ ಮೂಲಕ ಒಳಗೆ ಬಂದಿದ್ದಾನೆಂದು ಭಾವಿಸುತ್ತಿದ್ದಳು. ಅವನ ಗುರುತು ಹಿಡಿದಳು. ಸುತ್ತಿಕೊಳ್ಳಲು ಅವನಿಗೊಂದು ಬ್ಲಾಂಕೆಟ್ ತಂದುಕೊಟ್ಟಳು. ಅಷ್ಟರಲ್ಲಿ ಬೆಂಕಿಯ ಕಾವಿಗೆ ಬಟ್ಟೆಗಳು ಒಣಗಲಿ ಎಂದುಕೊಂಡಳು. ಹಾಗೆಯೇ ಒಂದಷ್ಟು ಬಿಸಿನೀರನ್ನು ಗಾಯಗಳನ್ನು ತೊಳೆಯಲೆಂದು ಕೊಟ್ಟಳು. ಶುದ್ಧವಾದ ಬಟ್ಟೆಯನ್ನು ಬ್ಯಾಂಡೇಜಿಗೆಂದು ಕೊಟ್ಟಳು. ನಂತರ ಬ್ಯುಂಡಿಯಾಗಳು ಸಕ್ಕರೆಯಿಲ್ಲದೆ ಕಾಫಿ ಕುಡಿಯುವುದನ್ನು ತಿಳಿದಿದ್ದ ಅವಳು ಒಂದು ಮಗ್ಗಿನಲ್ಲಿ ಬಿಸಿಬಿಸಿ ಕಾಫಿಯನ್ನು ಸಕ್ಕರೆಯಿಲ್ಲದೆ ನೀಡಿದಳು. ಬೆಂಕಿಯ ಮುಂದೆ ಒಣಗಲೆಂದು ಬಟ್ಟೆಗಳನ್ನು ಹರವಿದಳು.

ಕಾಫಿ ಕುಡಿದು ಮುಗಿಸುವವರೆಗೆ ಅವನು ಏನೂ ಮಾತಾಡಲಿಲ್ಲ.

"ಮೂರು ಸಾವಿರ ಜನ ಇದ್ದಿರಬೇಕು" ಎಂದು ಗೊಣಗಿದ.

"ಏನು"

"ಸತ್ತವರ ಸಂಖ್ಯೆ" ಸ್ಟೇಷನ್‌ನಲ್ಲಿ ಇದ್ದ ಅಷ್ಟೂ ಜನ" – ಎಂದು ಸ್ಪಷ್ಟಗೊಳಿಸಿದ.

ಆ ಹೆಂಗಸು ಕನಿಕರದಿಂದ ಅವನನ್ನು ನೋಡಿದಳು.

"ಇಲ್ಲಿ ಸತ್ತವರು ಯಾರೂ ಇಲ್ಲ ನಿನ್ನ ಚಿಕ್ಕಪ್ಪನ ಕಾಲದಿಂದಲೂ ಮಕೊಂಡೊದಲ್ಲಿ ಏನೂ ಸಂಭವಿಸಿಲ್ಲ" ಎಂದು ಹೇಳಿದಳು. ಜೋಸ್ ಆರ್ಕಾಡಿಯೊ ಸೆಗುಂಡೊ ಮನೆ ತಲುಪುವವರೆಗೆ ಮೂರು ಮನೆಗಳಲ್ಲಿ ತಂಗಿದಾಗ, ಎಲ್ಲರಿಂದಲೂ ಇದೇ ಬಗೆಯ

ಉತ್ತರಬಂದಿತ್ತು. ಸ್ಟೇಷನ್ ಬಳಿ ಇದ್ದ ಒಂದು ಸಣ್ಣ ಚೌಕದ ಮೂಲಕ ಹಾದು ಹೋಗುವಾಗ, ಚಿಂದಿ ಚಿಂದಿಯಾಗಿದ್ದ ಸಾಮಾನುಗಳನ್ನು ಒಂದರ ಮೇಲೊಂದು ಪೇರಿಸಿಟ್ಟುದನ್ನು ನೋಡಿದ. ಮಾರಣಹೋಮದ ಯಾವ ಗುರುತೂ ಕಾಣಲಿಲ್ಲ. ಮಳೆಯಿಂದಾಗಿ ರಸ್ತೆಗಳು ನಿರ್ಜನವಾಗಿದ್ದವು. ಬೀಗ ಜಡಿದಿದ್ದ ಖಾಲಿ ಮನೆಗಳೇ ಇದ್ದವು. ಅವನಿಗೆ ಮನುಷ್ಯ ಜೀವಿ ಇರಬಹುದೆನ್ನುವುದಕ್ಕೆ ಸಾಮೂಹಿಕ ಪ್ರಾರ್ಥನೆಗೆಂದು ಕೇಳಿಬಂದ ಕರೆಗಂಟೆಯ ಸದ್ದು ಸಾಕ್ಷಿಯಾಗಿತ್ತು. ಬಸುರಿ ಹೆಂಗಸೊಬ್ಬಳು ಕಾಣಿಸಿಕೊಂಡಳು. ಅವಳನ್ನು ಹಲವು ಬಾರಿ ನೋಡಿದ ಹಾಗಿದ್ದ ಆಕೆ ಅವನ ಮುಖಕ್ಕೆ ಹೊಡೆದಂತೆ ಬಾಗಿಲು ಮುಚ್ಚಿಕೊಂಡಳು. "ಅವನು ಹೋದ" "ಅವನ ದೇಶಕ್ಕೆ ಅವನಾಗಲೇ ಹೋದ" – ಹೆದರಿದಂತೆ ಆಕೆ ಹೇಳಿದಳು. ಮುಖ್ಯದ್ವಾರವನ್ನು ತಂತಿಬೇಲಿಯಿಂದ ರಕ್ಷಿಸಿದ್ದರು ಮತ್ತು ಒಂದಿಬ್ಬರು ಸ್ಥಳೀಯ ಪೊಲೀಸರೂ ಕಾವಲಿದ್ದರು. ಇವರು ರೈನ್‌ಕೋಟ್ ಮತ್ತು ರಬ್ಬರ್ ಬೂಟುಗಳನ್ನು ಧರಿಸಿ ಮಳೆಯಲ್ಲೂ ಕಲ್ಲಿನ ಪ್ರತಿಮೆಗಳಂತೆ ನಿಂತಿದ್ದರು. ಪಕ್ಕದ ರಸ್ತೆಯಲ್ಲಿ ವೆಸ್ಟ್ ಇಂಡಿಯಾದ ಹೆಂಗಸರು ಶನಿವಾರದ ಪ್ರಾರ್ಥನಾ ಗೀತೆಗಳನ್ನು ಹಾಡುತ್ತಿದ್ದರು. ಜೋಸ್ ಆರ್ಕಾಡಿಯೊ ಸೆಗುಂಡೊ ಅಂಗಳದ ಗೋಡೆ ಹಾರಿ ಅಡಿಗೆ ಮನೆ ಮೂಲಕ ಮನೆಯೊಳಗೆ ಪ್ರವೇಶಿಸಿದ. ಸಾಂತಾ ಸೋಫಿಯಾ ದ ಲಾ ಪೀದಾದ್ ತೀರಾ ತಗ್ಗಿದ ದನಿಯಲ್ಲಿ "ಫರ್ನಾಂಡಾಗೆ ಕಾಣಿಸಿಕೊಳ್ಳಬೇಡ ಈಗಷ್ಟೇ ಏಳುತ್ತಿದ್ದಾಳೆ" ಎಂದು, ತನ್ನ ಜೊತೆ ನಡೆದ ಮಾತಿನಂತೆ ಎಂಬಂತೆ ಅವನನ್ನು ಚೇಂಬರ್ ಪಾಟ್ ರೂಮಿಗೆ (ಉಚ್ಚೆ ಪಾತ್ರೆಗಳಿರುವ ಕೋಣೆ) ಕರೆದುಕೊಂಡು ಹೋದಳು. ಮೆಲ್‌ಕಿಯಾಡ್ಸ್ ಮಲಗುತ್ತಿದ್ದ, ಮುರಿದಿದ್ದ ಮಂಚವನ್ನು ತೋರಿಸಿದಳು. ಮಧ್ಯಾಹ್ನ ಎರಡು ಗಂಟೆ ಸಮಯಕ್ಕೆ, ಫರ್ನಾಂಡಾ ಊಟದ ನಂತರದ ನಿದ್ದೆಯಲ್ಲಿ ಇದ್ದಾಗ ಒಂದು ತಟ್ಟೆಯಲ್ಲಿ ಊಟವನ್ನು ಇರಿಸಿ ಕಿಟಕಿಯ ಮೂಲಕವಾಗಿ ಅವನಿಗೆ ತಲುಪಿಸಿದಳು.

ಮಳೆ ಬರುತ್ತಲೇ ಇದ್ದುದರಿಂದ, ಮಳೆ ನಿಲ್ಲುವವರೆಗೆ ಕಾಯುವುದಕ್ಕಾಗಿ ಮೂರುಗಂಟೆವರೆಗೆ ನಿದ್ರಿಸಿದ. ಸಾಂತಾ ಸೋಫಿಯಾ ದ ಲಾ ಪೀದಾದಳಿಗೆ, ಮೆಲ್‌ಕಿಯಾಡ್ಸ್‌ನ ಕೋಣೆಯಲ್ಲಿ ತನ್ನ ಸೋದರನನ್ನು ನೋಡಿದೆ ಎಂದು ಗುಟ್ಟಾಗಿ ಹೇಳಿದ.

ಸಾಮೂಹಿಕ ಹತ್ಯೆ ಸಂಬಂಧವಾದ ಮಾತನ್ನಾಗಲೀ ಹೆಣಗಳನ್ನು ತುಂಬಿಕೊಂಡು ಟ್ರೈನ್ ಸಮುದ್ರದ ಕಡೆ ಸಾಗುತ್ತಿರುವುದನ್ನಾಗಲೀ, ಅದರೊಳಗಿನ ತನ್ನ ಭಯಾನಕವಾದ ಪ್ರಯಾಣವನ್ನಾಗಲಿ ನಂಬಲಿಲ್ಲ. ಹಿಂದಿನ ರಾತ್ರಿ ವಿಶೇಷವಾದ ವಾರ್ತೆಯೊಂದನ್ನು ದೇಶಕ್ಕಾಗಿ ಪ್ರಕಟಿಸಿದ್ದನ್ನು ಓದಿದ. ಅದರಲ್ಲಿ ಕಾರ್ಮಿಕರು ಶಾಂತಿಯಿಂದ ಗುಂಪುಗಳಲ್ಲಿ ತಮ್ಮ ತಮ್ಮ ಮನೆಗಳಿಗೆ ತೆರಳಿದರು ಎಂದಿತ್ತು. ಜೊತೆಗೆ ದೇಶಪ್ರೇಮಿಗಳಾಗಿದ್ದ ಯೂನಿಯನ್ ಲೀಡರುಗಳು ತಮ್ಮ ಬೇಡಿಕೆಗಳ ಸಂಖ್ಯೆಯನ್ನು ಕೇವಲ ಎರಡಕ್ಕೆ ಮಾತ್ರವೇ ಸೀಮಿತಗೊಳಿಸಿಕೊಂಡಿರುವುದನ್ನೂ ಪ್ರಸ್ತಾಪಿಸಲಾಗಿತ್ತು. ಒಂದು ವೈದ್ಯಕೀಯ ಸೇವೆಯನ್ನು ಉತ್ತಮಗೊಳಿಸಬೇಕು, ಎರಡನೆಯದಾಗಿ ವಾಸದ ಮನೆಗಳಲ್ಲಿ ಶೌಚಾಲಯಗಳನ್ನು ನಿರ್ಮಿಸಬೇಕು ಎಂಬುದಾಗಿತ್ತು. ಮಿಲಿಟರಿ ಅಧಿಕಾರಿಗಳು

ಕಾರ್ಮಿಕರಿಂದ ಒಪ್ಪಂದವನ್ನು ಪಡೆದು ಮಿಸ್ಟರ್ ಬ್ರೌನ್‌ರಿಗೆ ತಲುಪಿಸಿ, ಅವನು ಅದಕ್ಕೆ ಕೂಡಲೇ ಒಪ್ಪಿಗೆ ಸೂಚಿಸಿದ್ದೇ ಅಲ್ಲದೆ ಮುಷ್ಕರ ಮುಕ್ತಾಯಕ್ಕೆ ಬಂದದ್ದಕ್ಕೆ ಸಾರ್ವಜನಿಕ ಸಂಭ್ರಮಾಚರಣೆಗೆ ಬೇಕಾದ ಹಣವನ್ನು ನೀಡುವುದಾಗಿ ಹೇಳಿದ್ದೂ ಕೂಡಾ ನಂತರ ತಿಳಿಯಿತು. ಆದರೆ ಮಿಲಿಟರಿ ಒಪ್ಪಂದಕ್ಕೆ ಸಹಿ ಹಾಕಬೇಕಾದ ದಿನಾಂಕವನ್ನು ನಿಶ್ಚಯಿಸಿ ಹೇಳಬೇಕೆಂದಾಗ, ಕಿಟಕಿಯಿಂದ ಹೊರಗೆ ಆಕಾಶವನ್ನು ನೋಡುತ್ತಾ, ಮಧ್ಯೆ ಮಧ್ಯೆ ಕಾಣಿಸುತ್ತಿದ್ದ ಸಿಡಿಲು, ಬೆಳಕಿನ ನಡುವೆ, ಅನುಮಾನದೊಂದಿಗೆ ಹೇಳಿದ. "ಮಳೆ ಯಾವಾಗ ನಿಲ್ಲುತ್ತೋ ಆವಾಗ, ಮಳೆ ಮುಂದುವರಿದಷ್ಟೂ ಕಾಲ ಎಲ್ಲ ಚಟುವಟಿಕೆಗಳನ್ನು ಸ್ಥಗಿತಗೊಳಿಸುತ್ತಿದ್ದೇವೆ" ಎಂದು.

ಮೂರು ತಿಂಗಳಿಂದ ಮಳೆ ಇಲ್ಲದೆ ಬರಗಾಲ ಎದುರಾಗಿತ್ತು. ಮಿಸ್ಟರ್ ಬ್ರೌನ್ ತನ್ನ ನಿರ್ಧಾರವನ್ನು ಘೋಷಿಸುತ್ತಿದ್ದಂತೆ ಬನಾನಾ ಪ್ರದೇಶದಲ್ಲಿ ಮುಸಲಧಾರೆ ಪ್ರಾರಂಭವಾಯಿತು. ಆಗಲೇ ಜೋಸ್ ಆರ್ಕಾಡಿಯೊ ಸೆಗುಂಡೊ ಮಕೊಂಡೊಗೆ ಬರುವಾಗ ಮಳೆಯಲ್ಲಿ ಸಿಕ್ಕಿಹಾಕಿಕೊಂಡದ್ದು, ಒಂದು ವಾರದ ನಂತರವೂ ಮಳೆ ಬರುತ್ತಲೇ ಇತ್ತು. ಸರ್ಕಾರ ಕೈಗೆ ಸಿಕ್ಕ ಎಲ್ಲಾ ಮಾಧ್ಯಮಗಳ ಮೂಲಕ ಮತ್ತೆ ಮತ್ತೆ ಅಧಿಕೃತ ಸುದ್ದಿಯನ್ನು ಪ್ರಚುರಪಡಿಸಿದಾಗ ಅದು ಎಲ್ಲರಿಗೂ ಒಪ್ಪಿತವಾಯಿತು. ಯಾರೂ ಸತ್ತಿರಲಿಲ್ಲ. ಬನಾನಾ ಕಂಪನಿಯ ಕಾರ್ಮಿಕರು ಸಂತೃಪ್ತಿಯಿಂದ ತಮ್ಮ ತಮ್ಮ ಕುಟುಂಬಗಳ ಜೊತೆ ಸೇರಿಕೊಂಡರು. ಬನಾನಾ ಕಂಪನಿ ಮಳೆ ನಿಲ್ಲುವವರೆಗೆ ತನ್ನ ಚಟುವಟಿಕೆಗಳನ್ನು ಸ್ಥಗಿತಗೊಳಿಸಿತು. ಒಂದೇ ಸಮನೆ ಸುರಿಯುತ್ತಿರುವ ಮಳೆಯಿಂದಾಗಿ ಏನಾದರೂ ಅವಘಡ ಸಂಭವಿಸಿದರೆ ತುರ್ತುಕ್ರಮ ಕೈಗೊಳ್ಳಲೆಂದು ಮಾತ್ರವೇ ಸೇನಾಡಳಿತ ಮುಂದುವರೆದಿತ್ತು. ಸೈನಿಕರು ಮಾತ್ರ ತಮ್ಮ ತಮ್ಮ ಕ್ವಾರ್ಟರ್ಸ್‌ಗಳಲ್ಲಿ ಇದ್ದರು. ಸೈನಿಕರು ವಿಪರೀತ ಮಳೆ ಬೀಳುತ್ತಿದ್ದಾಗ, ತಮ್ಮ ಪ್ಯಾಂಟುಗಳನ್ನು ಕೆಳಗಿನಿಂದ ಮಡಚಿ ರಸ್ತೆಗಳಲ್ಲಿ ಹರಿಯುತ್ತಿದ್ದ ನೀರಿನಲ್ಲಿ ಮಕ್ಕಳ ಜೊತೆ ದೋಣಿಯಾಟ ಆಡುತ್ತಿದ್ದರು. ರಾತ್ರಿಹೊತ್ತಿನಲ್ಲಿ ಸಂಶಯಾಸ್ಪದ ವ್ಯಕ್ತಿಗಳ ಮನೆಗಳಿಗೆ ಹೋಗಿ ರೈಫಲ್‌ಗಳಿಂದ ಬಾಗಿಲು ತಟ್ಟಿ ಹಾಸಿಗೆಯಿಂದ ಎಬ್ಬಿಸಿಕೊಂಡು ಮತ್ತೆಂದೂ ಹಿಂತಿರುಗಲು ಸಾಧ್ಯವಾಗದ ಜಾಗಕ್ಕೆ ಎಳೆದುಕೊಂಡು ಹೋದರು. ಡಿಕ್ರಿ ಸಂಖ್ಯೆ ನಾಲ್ಕರಂತೆ ಪುಂಡುಪೋಕರಿಗಳನ್ನು, ಕೊಲೆಗಾರರನ್ನು ಬೆಂಕಿ ಹಚ್ಚುವವರನ್ನು, ಕ್ರಾಂತಿಕಾರರನ್ನು ಶೋಧಿಸಿ, ಮುಗಿಸುವ ಕೆಲಸ ಇನ್ನೂ ಮುಂದುವರೆದಿತ್ತು. ಆದರೆ ಈ ರೀತಿಯಲ್ಲಿ ಸಿಕ್ಕ ಬಲಿಪಶುಗಳ ಬಂಧುಮಿತ್ರರ ಮಿಲಿಟರಿ ಅಧಿಕಾರಿಗಳ ಆಫೀಸಿನ ಮುಂದೆ ಜಮಾಯಿಸಿ ವಿಚಾರಿಸಿದಾಗ ಅದು ಸುಳ್ಳೆಂದು ನಿರಾಕರಿಸಿದರು. ಅಲ್ಲದೆ "ನೀವೆಲ್ಲೋ ಕನಸು ಕಾಣುತ್ತಿದ್ದಿರಬೇಕು, ಮಕೊಂಡೊದಲ್ಲಿ ಏನೂ ಆಗಿಲ್ಲ. ಆಗಿದ್ದೂ ಇಲ್ಲ, ಆಗುವುದೂ ಇಲ್ಲ, ಇದೊಂದು ಶಾಂತಿಯುತವಾದ ಊರು" ಎಂದು ಹೇಳಿ ಅವರಬಾಯಿ ಮುಚ್ಚಿಸಿದರು. ಈ ರೀತಿಯಲ್ಲಿ ಅಂತಿಮವಾಗಿ ಯೂನಿಯನ್ ಲೀಡರುಗಳನ್ನೆಲ್ಲ ಸಂಪೂರ್ಣವಾಗಿ ಒರೆಸಿಹಾಕಿದರು.

ಉಳಿದ ಒಬ್ಬನೇ ವ್ಯಕ್ತಿಯೆಂದರೆ ಜೋಸ್ ಆರ್ಕಾಡಿಯೊ ಸೆಗುಂಡೊ. ಫೆಬ್ರವರಿಯ ಒಂದು ರಾತ್ರಿ, ರೈಫಲ್ ತುದಿಯಿಂದ ಬಾಗಿಲು ಕುಟ್ಟಿದ ಶಬ್ದ ಕೇಳಿಸಿತು. ಅರೆಲಿಯಾನೊ

ಸೆಗುಂಡೊ ಆ ಸದ್ದು ಅಡಗುವವರೆಗೂ ಕಾದ. ಬಾಗಿಲು ತೆಗೆದ. ಅವನ ಮುಂದೆ ಒಬ್ಬ ಅಧಿಕಾರಿಯ ಜೊತೆ ಆರು ಜನ ಸೈನಿಕರು ಇದ್ದರು. ಮಳೆಯಲ್ಲಿ ತೋಯುತ್ತಲೇ, ಒಂದು ಮಾತನ್ನೂ ಆಡದೆ ಅವರು ಮನೆಯಲ್ಲೆಲ್ಲಾ ಒಂದು ರೂಮನ್ನೂ ಬಿಡದೆ, ಕಪಾಟುಗಳನ್ನೂ ಬಿಡದೆ, ಅಂಗಳ, ಅಡಿಗೆ ಮನೆ, ಎಲ್ಲವನ್ನೂ ಶೋಧಿಸಿದರು. ಆ ಸಮಯದಲ್ಲಿ ಉರ್ಸುಲಾ ಅವರು ದೀಪಹಾಕಲು ಎಚ್ಚರಗೊಂಡಳು. ಉಸಿರು ಬಿಗಿಹಿಡಿದು, ಕ್ರಾಸ್ ಸನ್ನೆ ಮಾಡಿ, ಸೈನಿಕರು ಓಡಾಡುತ್ತಿದ್ದ ದಿಕ್ಕಿನ ಕಡೆ ತೋರಿಸಿದಳು. ಈ ಮಧ್ಯೆ ಸಾಂತಾ ಸೋಫಿಯಾ ದ ಲಾ ಪೀದಾದ್ ಹೇಗೋ ಮಾಡಿ ಜೋಸ್ ಆರ್ಕಾಡಿಯೊ ಸೆಗುಂಡೊಗೆ ಸೂಚನೆ ನೀಡುವಲ್ಲಿ ಯಶಸ್ವಿಯಾದಳು. ಅವನು ಮೆಲ್‌ಕಿಯಾಡ್ಸ್‌ನ ರೂಮಿನಲ್ಲಿ ಮಲಗಿದ್ದ. ಅವನಿಗೆ ಈಗ ತಪ್ಪಿಸಿಕೊಳ್ಳುವುದು ಸಾಧ್ಯವಾಗುವುದಿಲ್ಲ ಎನಿಸಿತು. ಆದ್ದರಿಂದ ಸಾಂತಾ ಸೋಫಿಯಾ ದ ಲಾ ಪೀದಾದ್ ಮತ್ತೆ ಬೀಗ ಹಾಕಿದಳು. ಅವನು ಷರ್ಟ್. ಶೂಸು ಹಾಕಿಕೊಂಡು ಅವರಿಗೆ ಕಾಯುತ್ತಾ ಕುಳಿತ. ಆ ಸಮಯದಲ್ಲಿ ಅವರು ಚಿನ್ನದ ವರ್ಕ್‌ಷಾಪನ್ನು ಶೋಧಿಸುತ್ತಿದ್ದರು. ಆಫೀಸರ್ ಪ್ಯಾಡ್‌ಲಾಕ್ ತೆಗೆಯುವಂತೆ ಹೇಳಿದ. ಲಾಂಥ್ರದ ಬೆಳಕಿನಲ್ಲಿ ಅವನು ವರ್ಕ್‌ಬೆಂಚ್, ಗಾಜಿನ ಕಪಾಟು, ಬಾಟಲಿಗಳಲ್ಲಿ ಆಸಿಡ್ ಮತ್ತು ಕೆಲವು ಉಪಕರಣಗಳು ಅಲ್ಲಿಯೇ ಬಿದ್ದಿರುವುದನ್ನು ನೋಡಿದ. ಅಲ್ಲಿ ಯಾರೂ ವಾಸವಾಗಿದ್ದಂತೆ ಅವನಿಗೆ ತೋರಲಿಲ್ಲ. ಅವನು ಬಹಳ ನಾಜೂಕಾಗಿ ಕೇಳಿದ. – ಬೆಳ್ಳಿ ಕೆಲಸಗಾರನೇನು ಎಂದು. ಆದರೆ ಅರೆಲಿಯಾನೊ ಆಮೇಲೆ ಅದು ಕರ್ನಲ್ ಅರೆಲಿಯಾನೊ ಬ್ಯುಂಡಿಯಾನ ವರ್ಕ್‌ಷಾಪೆಂದು ವಿವರಿಸಿದ. "ಹೌದಾ" ಎಂದು ಆಫೀಸರ್ ತಲೆಯಾಡಿಸಿದ. ದೀಪ ಹಾಕಿದ. ಒಂದಂಗುಲವೂ ಬಿಡದಂತೆ ಹುಡುಕಲು ಆದೇಶಿಸಿದ. ಹೀಗೆ ಮಾಡುವಾಗ ಹದಿನೆಂಟು ಪುಟ್ಟ ಚಿನ್ನದ ಮೀನುಗಳಿದ್ದವು. ಅವುಗಳನ್ನು ಕರಗಿಸಿರಲಿಲ್ಲ. ಅವೆಲ್ಲವನ್ನೂ ಬಾಟಲಿಗಳ ಹಿಂದೆ ತಗಡಿನ ಡಬ್ಬಿಯಲ್ಲಿ ಬಚ್ಚಿಡಲಾಗಿತ್ತು. ಆಫೀಸರ್ ಅವುಗಳನ್ನು ಒಂದೊಂದಾಗಿ ಪರೀಕ್ಷಿಸಿದ. ನಂತರ ಒಬ್ಬ ಸಾಮಾನ್ಯ ಮನುಷ್ಯನಂತೆ ಬದಲಾದ. "ಈ ಒಂದು ಮೀನನ್ನು ನಾನು ತೆಗೆದುಕೊಳ್ಳಬಹುದೇ" ಎಂದು ಕೇಳಿದ. ಒಂದು ಕಾಲದಲ್ಲಿ ಅದು ರಾಜ್ಯಾಡಳಿತದ ಉಚ್ಚಾಟನೆಯ ಸಂಕೇತವಾಗಿದ್ದರೆ ಈಗ ಅವು ಪ್ರಾಚೀನ ವಸ್ತುಗಳು. ಅವನು ಇನ್ನೂ ಯುವಕ, ಯಾವುದೇ ಅಳುಕು ಇರಲಿಲ್ಲ. ಸಹಜವಾಗಿ, ನೋಡುಗರನ್ನು ಆಕರ್ಷಿಸುವ ಗುಣ ಇತ್ತು. ಆದರೆ ಅಲ್ಲಿಯವರೆಗೆ ಅವನಲ್ಲಿ ಅವುಗಳು ಕಾಣಿಸಿಕೊಂಡಿರಲಿಲ್ಲ. ಅರೆಲಿಯಾನೊ ಅವನಿಗೆ ಅದನ್ನು ಕೊಟ್ಟ. ಅವನು ಅದನ್ನು ಮಕ್ಕಳ ಕಣ್ಣಲ್ಲಿ ಕಾಣುವ ಹೊಳಪನ್ನು ಕಣ್ಣಲ್ಲಿ ತುಂಬಿಕೊಂಡು ಒಂದನ್ನು ಜೇಬಿನಲ್ಲಿ ಇರಿಸಿಕೊಂಡು ಮಿಕ್ಕವುಗಳನ್ನು ಮತ್ತೆ ಡಬ್ಬಿಯಲ್ಲಿ ಹಾಕಿದ.

"ಇದೊಂದು ಅದ್ಭುತವಾದ ಸ್ಮರಣಿಕೆ... ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಬಹಳ ದೊಡ್ಡ ವ್ಯಕ್ತಿ" ಎಂದ.

ಇಷ್ಟೆಲ್ಲ ಆದರೂ ಅವನಲ್ಲಿನ ಮನುಷ್ಯತ್ವ ಜಾಗೃತವಾಗಿದ್ದರೂ ವೃತ್ತಿಧರ್ಮವನ್ನು ಬಿಡಲಿಲ್ಲ. ಪ್ಯಾಡ್‌ಲಾಕ್ ಹಾಕಿದ್ದ ಮೆಲ್‌ಕಿಯಾಡ್ಸ್‌ನ ರೂಮು ಮತ್ತೊಮ್ಮೆ ಪ್ಯಾಡ್‌ಲಾಕ್ ಹಾಕಿಸಿಕೊಂಡಿತು. ಸಾಂತಾ ಸೋಫಿಯದ ಲಾ ಪೀದಾದ್ ಕಡೆಯ ಪ್ರಯತ್ನಕ್ಕೆ

ಮುಂದಾದಳು. "ಒಂದು ನೂರು ವರ್ಷಗಳಿಂದ ಇಲ್ಲಿ ಯಾರೂ ವಾಸವಾಗಿಲ್ಲ" ಎಂದಳು. ಆಫೀಸರ್ ಬೀಗ ತೆಗೆಸಿದ. ಲಾಂಥ್ರದ ಬೆಳಕನ್ನು ಹರಿಸಿದ. ಅರೆಲಿಯಾನೊ ಸೆಗುಂಡೊ ಸಾಂತಾ ಸೋಫೀಯಾ ದ ಲಾ ಪೀದಾದ್‌ರು, ಜೋಸ್ ಆರ್ಕಾಡಿಯೊ ಸೆಗುಂಡೊನ ಅರಬ್ ಕಣ್ಣುಗಳನ್ನು ನೋಡಿದರು. ಅವರಿಗೆ ಅರ್ಥವಾಯಿತು. ಇದರೊಂದಿಗೆ ಒಂದು ಮುಗಿದು ಮತ್ತೊಂದು ಆತಂಕ ಎದುರಾಯಿತು ಎಂದು. ಏನಾದರಾಗಲಿ ಎಂದು ಸುಮ್ಮನಿರುವುದೊಂದೇ ದಾರಿ ಎಂದುಕೊಂಡರು. ಆದರೆ ಆಫೀಸರ್ ಹುಡುಕುವುದನ್ನು ನಿಲ್ಲಿಸಲಿಲ್ಲ. ಎಪ್ಪತ್ತೆರಡು ಮೂತ್ರ ಪಾತ್ರೆಗಳು ಕಣ್ಣಿಗೆ ಬೀಳುವವರೆಗೆ ಅವನು ಯಾವುದೇ ಆಸಕ್ತಿಯನ್ನು ತೋರಿರಲಿಲ್ಲ. ಈಗ ದೀಪ ಹಾಕಿದ. ಜೋಸ್ ಆರ್ಕಾಡಿಯೊ ಸೆಗುಂಡೊ ಹೊರಡುವುದಕ್ಕೆ ಸಿದ್ಧನಾಗಿ ಮಂಚದ ತುದಿಯಲ್ಲಿ ಕುಳಿತಿದ್ದ. ಅವನ ಮುಖದಲ್ಲಿ ಎಂದಿಗಿಂತಲೂ ಹೆಚ್ಚಿನ ಗಂಭೀರತೆ ಕಾಣಿಸುತ್ತಿತ್ತು. ಅವನ ಬೆನ್ನಿಗೆ ಷೆಲ್ಫುಗಳಿಂದ ಅವುಗಳ ತುಂಬ ಹಳೆಯದಾದ ಪುಸ್ತಕಗಳು, ಚರ್ಮಕಾಗದದ ಸುರುಳಿಗಳು, ಶುಭ್ರವಾಗಿಯೂ ವ್ಯವಸ್ಥಿತವಾಗಿಯೂ ಇದ್ದ ಬರೆಯುವ ಮೇಜು, ಇನ್ನೂ ತಾಜಾ ಆಗಿರುವ ಇಂಕು, ಇಂಕ್ ಬಾಟಲುಗಳು ಇದ್ದವು. ತಾಜಾ ಗಾಳಿ, ಬೆಳಕು ಧಾರಾಳವಾಗಿತ್ತು. ಒಂದಿಷ್ಟೂ ಧೂಳಾಗಲಿ, ಹಾಳಾಗಿರುವುದಾಗಲಿ ಕಾಣುತ್ತಿರಲಿಲ್ಲ. ಅರೆಲಿಯಾನೊ ಸೆಗುಂಡೊ ಮಗುವಾಗಿದ್ದಾಗಲೂ ಕಾಣುತ್ತಿದ್ದ, ಆದರೆ ಕರ್ನಲ್ ಅರೆಲಿಯಾನೊ ಬ್ಯುಂಡಿಯಾಗೆ ಕಾಣದಿದ್ದ ಅಚ್ಚುಕಟ್ಟುತನವೇ ಈಗಲೂ ಇತ್ತು. ಆದರೆ ಆಫೀಸರ್‌ಗೆ ಮೂತ್ರ ಪಾತ್ರೆಗಳ ಬಗ್ಗೆಯೇ ಹೆಚ್ಚು ಆಸಕ್ತಿ ಇದ್ದಂತಿತ್ತು.

"ಈ ಮನೆಯಲ್ಲಿ ಎಷ್ಟು ಜನ ವಾಸವಾಗಿದ್ದೀರಿ?" ಕೇಳಿದ.

"ಐದು"

ಆದರೆ ಆಫೀಸರ್‌ಗೆ ಅರ್ಥವಾಗಲಿಲ್ಲ. ಒಮ್ಮೆ ಅವನು ಅರೆಲಿಯಾನೊ ಸೆಗುಂಡೊ, ಸಾಂತಾ ಸೋಫೀಯಾ ದ ಲಾ ಪೀದಾದರು ನೋಡುತ್ತಿದ್ದ ಕಡೆ ಕಣ್ಣು ಹಾಯಿಸಿದ. ಅವರು ಜೋಸ್ ಆರ್ಕಾಡಿಯೊ ಸೆಗುಂಡೊನನ್ನು ನೋಡುತ್ತಿದ್ದರೆ, ಅವನಿಗೆ ಸೈನಿಕ ತನ್ನ ಕಡೆ ನೋಡುತ್ತಿರುವುದನ್ನು, ಅವನನ್ನು ನೋಡದೆಯೇ ಅರ್ಥಮಾಡಿಕೊಂಡ. ನಂತರ ದೀಪ ಆರಿಸಿ ಬಾಗಿಲು ಮುಚ್ಚಿದ.

ಸೈನಿಕರ ಕಡೆ ತಿರುಗಿ ಹೇಳಿದಾಗ, ಅರೆಲಿಯಾನೊ ಸೆಗುಂಡೊ ಈ ಯುವ ಅಧಿಕಾರಿ ರೂಮನ್ನು ಕರ್ನಲ್ ಅರೆಲಿಯಾನೊ ಬ್ಯುಂಡಿಯಾನ ಕಣ್ಣುಗಳಿಂದಲೇ ನೋಡಿದ್ದಾನೆ ಎಂದು ಅರ್ಥಮಾಡಿಕೊಂಡ.

"ಈ ರೂಮಿನಲ್ಲಿ ಸುಮಾರು ನೂರು ವರ್ಷಗಳಿಂದ ಯಾರೂ ವಾಸಿಸುತ್ತಿಲ್ಲವೆನ್ನುವುದು ಸತ್ಯ, ಬಹುಶಃ ಈಗ ಅಲ್ಲಿ ಹಾವುಗಳೇ ಇದ್ದಿರಬೇಕು" – ಎಂದು ಸೈನಿಕರಿಗೆ ಹೇಳಿದ.

ಬಾಗಿಲು ಮುಚ್ಚುತ್ತಲೇ ಜೋಸ್ ಆರ್ಕಾಡಿಯೊ ಸೆಗುಂಡೊಗೆ ಹೋರಾಟ ಮುಗಿಯಿತು ಎನಿಸಿತು. ಬಹಳ ವರ್ಷಗಳ ಹಿಂದೆಯೇ ಕರ್ನಲ್ ಅರೆಲಿಯಾನೊ

ಬ್ಯುಂಡಿಯಾ ತನ್ನ ಸ್ವಂತ ಅನುಭವಗಳ ಮೂಲಕ ಯುದ್ಧದ ಮೋಹದ ಬಗ್ಗೆ ಹೇಳಿದ್ದ. ಅವನು ಅದನ್ನು ನಂಬಿದ್ದ. ಆದರೆ ಆ ರಾತ್ರಿ ಸೈನಿಕರು ಅವನನ್ನು ನೋಡದೆಯೇ ನೋಡುತ್ತಿದ್ದಂತೆ ಭಾಸವಾದಾಗ, ಕಳೆದ ಕೆಲ ತಿಂಗಳುಗಳಿಂದ ತನಗಿದ್ದ ಆತಂಕ, ಸೆರೆಮನೆ ವಾಸ, ಸ್ಟೇಷನ್‌ನಲ್ಲಿನ ಗಾಭರಿ, ಸತ್ತ ಶವಗಳ ಜೊತೆಯಲ್ಲಿ ಟ್ರೈನಿನಲ್ಲಿ ಇದ್ದದ್ದು – ಎಲ್ಲ ನೆನಪಾದಾಗ, ಕರ್ನಲ್ ಅರೆಲಿಯಾನೊ ಬ್ಯುಂಡಿಯಾನ ಮಾತೆಲ್ಲವೂ ಸುಳ್ಳಾಗಿರಬೇಕು ಇಲ್ಲವೆ ಬುದ್ಧಿಯಿಲ್ಲದವನಾಗಿರಬೇಕು ಎಂದುಕೊಂಡ. ಯುದ್ಧದ ಬಗ್ಗೆ ತಿಳಿಸಲು ಅಷ್ಟೊಂದು ಶಬ್ದಗಳನ್ನು ಬಳಸಿದ್ದಾದರೂ ಏಕೆ. 'ಭಯ' – ಎನ್ನುವ ಒಂದು ಪದವೇ ಸಾಕಾಗಿತ್ತು. ಇದಕ್ಕೆ ಪ್ರತಿಯಾಗಿ ಮೆಲ್‌ಕಿಯಾಡ್ಸ್‌ನ ರೂಮಿನಲ್ಲಿ, ಅಲೌಕಿಕ ಬೆಳಕಿನ ರಕ್ಷಣೆಯಲ್ಲಿ ಅಮೂರ್ತವಾದ ಅನುಭವಗಳಲ್ಲಿ, ಹಿಂದಿನ ಜನ್ಮದಲ್ಲಿಯೂ ಕಾಣಲಾಗದ ನೆಮ್ಮದಿ ಸಿಕ್ಕಿತ್ತು. ಆದರೆ ಅವನನ್ನು ಕಾಡಿದ್ದ ಭಯವೆಂದರೆ, ತನ್ನನ್ನು ಎಲ್ಲಿ ಜೀವಂತವಾಗಿ ಸಮಾಧಿ ಮಾಡುತ್ತಾರೊ ಎಂಬುದಷ್ಟೇ ಆಗಿತ್ತು. ಭಯದಿಂದ ಬಿಡುಗಡೆ ಪಡೆದು ಜೋಸ್ ಆರ್ಕಾಡಿಯೊ ಸೆಗುಂಡೊ ಮೆಲ್‌ಕಿಯಾಡ್ಸ್‌ನ ಹಸ್ತಪ್ರತಿಗಳನ್ನು ಮತ್ತೆ ಮತ್ತೆ ಓದುವ ಕೆಲಸದಲ್ಲಿ ತೊಡಗಿಸಿಕೊಂಡ. ಅವನಿಗೆ ಅರ್ಥವಾಗದಿದ್ದಷ್ಟೂ ಹೆಚ್ಚಿನ ಸಂತೋಷದಿಂದ ಓದುತ್ತಿದ್ದ. ಮಳೆಯ ಸದ್ದಿಗೆ ಹೊಂದಿಕೊಂಡುಬಿಟ್ಟಿದ್ದ. ಎರಡು ತಿಂಗಳ ನಂತರ ಅದೇ ಶಬ್ದ ಮತ್ತೊಂದು ತೆರನಾದ ನಿಶ್ಯಬ್ದವೆನಿಸಿತು. ಅವನ ಏಕಾಂತಕ್ಕೆ ಭಂಗ ಬರುತ್ತಿದ್ದುದು ಸಾಂತಾ ಸೋಫಿಯಾ ದ ಲಾ ಪೀದಾದಳ ಓಡಾಟದಿಂದ ಮಾತ್ರ. ಅದಕ್ಕಾಗಿ ಅವನು ಅವಳಿಗೆ ಊಟವನ್ನು ಕಿಟಕಿಯಲ್ಲಿಟ್ಟು ಬೀಗ ಹಾಕಿಕೊಳ್ಳಲು ಹೇಳಿದ. ಮನೆಯ ಉಳಿದ ಸದಸ್ಯರು ಅವನನ್ನು ಮರೆತೇಬಿಟ್ಟರು. ಫರ್ನಾಂಡಾ ಕೂಡಾ ಸೈನಿಕರು ಅವನನ್ನು ನೋಡಿಯೂ ನೋಡಲಿಲ್ಲವೆಂದು ತಿಳಿದ ಮೇಲೆ ಅವನ ಪಾಡಿಗೆ ಅವನು ಇರಲು ಒಪ್ಪಿ, ನಂತರ ಅವಳೂ ಮರೆತಳು. ಆರು ತಿಂಗಳು ಒಳಗೇ ಇದ್ದು ಸೈನಿಕರು ಮಕೊಂಡೊ ಬಿಟ್ಟು ಹೋದರೆಂದು ತಿಳಿದ ಮೇಲೆ ಪ್ಯಾಡ್‌ಲಾಕ್ ತೆಗೆಸಿದ. ಮಳೆ ನಿಲ್ಲುವವರೆಗೆ, ಮಾತಾಡಲು ಯಾರಾದರೂ ಸಿಗುವರೇನೊ ಎಂದು ನೋಡಿದ. ಬಾಗಿಲು ತೆಗೆಯುತ್ತಿದ್ದಂತೆಯೇ, ನೆಲದ ಮೇಲೆ ಇರಿಸಿದ ಮೂತ್ರ ಪಾತ್ರೆಗಳಿಂದ ಮಾರಕ ಕೀಟಗಳ ಆಕ್ರಮಣವಾದಂತೆನಿಸಿತು. ಹಲವು ಬಾರಿ ಅವುಗಳ ಬಳಕೆಯಾದಂತಿತ್ತು. ಜೋಸ್ ಆರ್ಕಾಡಿಯೊ ಸೆಗುಂಡೊ ಅಲ್ಲಿದ್ದ ತಲೆಯ ಬಗ್ಗೆಯಾಗಲೀ ವಾಕರಿಕೆ ಬರುವಂತಿದ್ದ ಹಬೆಯಿಂದಾಗಲಿ ವಿಚಲಿತನಾಗದೆ ಅರ್ಥವಾಗದ ಚರ್ಮಕಾಗದಗಳನ್ನು, ಓದಿದ್ದನ್ನೇ ಓದುತ್ತಿದ್ದ. ಅಲೌಕಿಕಬೆಳಕೊಂದು ಕಾಣಿಸಿತು. ಬಾಗಿಲು ತೆಗೆಯುವ ಸದ್ದು ಕೇಳಿ ಕಣ್ಣು ಅತ್ತ ಹಾಯಿಸಿದ. ಆ ನೋಟವೊಂದರಲ್ಲಿಯೇ ಅವನ ಸೋದರನಿಗೆ, ಸರಿಪಡಿಸಲಾಗದ ಮುತ್ತಜ್ಜನ ವಿಧಿಲಿಖಿತವು ಪುನರಾವರ್ತನೆಯಾಗಿರುವುದು ಕಾಣಿಸಿತು.

"ಅಲ್ಲಿ ಮೂರು ಸಾವಿರಕ್ಕೂ ಹೆಚ್ಚು ಜನ ಇದ್ದರು, ಈಗ ಗೊತ್ತಾಗ್ತಿದೆ ಸ್ಟೇಷನ್‌ಗೆ ಹೋಗದ್ದ ಪ್ರತಿಯೊಬ್ಬರೂ ಅಲ್ಲಿದ್ದರು" ಎಂದು ಜೋಸ್ ಆರ್ಕಾಡಿಯೊ ಸೆಗುಂಡೊ ಹೇಳಿದ.

○

16

ನಾಲ್ಕು ವರ್ಷ, ಹನ್ನೊಂದು ತಿಂಗಳು, ಎರಡು ದಿನ – ಒಂದೇ ಸಮನೆ ಮಳೆ ಸುರಿಯಿತು. ಮಧ್ಯೆ ಮಧ್ಯೆ ಯಾವಾಗಲಾದರೂ ತುಂತುರು ಮಳೆ ಮಾತ್ರವೇ ಇದ್ದಾಗ, ಒಳ್ಳೆ ಬಟ್ಟೆಧರಿಸಿ, ನಿರಾಳವಾಗಿ, ಮಳೆ ನಿಂತ ಸಂಭ್ರಮವನ್ನು ಅನುಭವಿಸಲು ಸಿದ್ಧರಾಗುತ್ತಿದ್ದರು. ಕಡೆ ಕಡೆಗೆ ಈ ಬಗೆಯ ತುಂತುರು ಮಳೆ ಭಾರಿ ಮಳೆಗೆ ಮುನ್ಸೂಚನೆ ಎಂಬಂತೆ ಭಾವಿಸಿ ಇಂತಹ ವ್ಯತ್ಯಾಸಗಳಿಗೆ ಹೊಂದಿಕೊಂಡು ಬಿಟ್ಟರು. ಆಕಾಶ ಮಳೆ ಮೋಡಗಳನ್ನು ಸ್ಫೋಟಿಸಿ, ವಿನಾಶಕಾರಿಯಾದ ಬಿರುಗಾಳಿಗೆ ದಾರಿ ಮಾಡಿದರೆ ಉತ್ತರದ ಕಡೆಯಿಂದ ಬಂದ ಚಂಡಮಾರುತ ಮನೆ ಮೇಲಿನ ಛಾವಣಿಗಳನ್ನು ಹಾರಿಸಿಬಿಟ್ಟಿತು. ಗೋಡೆಗಳು ಉರುಳಿಬಿದ್ದವು. ಬನಾನಾ ತೋಟದ ಒಂದೊಂದು ಗಿಡವನ್ನೂ ಬುಡಸಹಿತ ಕಿತ್ತೆಸೆಯಿತು. ನಿದ್ದೆಯಿಲ್ಲದ ಖಾಯಿಲೆಯ ದಿನಗಳಲ್ಲಿಯಂತೆ, ಉರ್ಸುಲಾಗೆ ನೆನಪಿದ್ದ ಹಾಗೆ, ಎದುರಾಗುವ ವಿಪತ್ತುಗಳೇ ಅವುಗಳಿಂದುಂಟಾಗುವಬೇಸರವನ್ನು ತಡೆಗಟ್ಟಲು ವಿಧಾನಗಳಿಗೆ ರಕ್ಷಣೆಗೆ ಅನುವುಮಾಡಿಕೊಡುತ್ತವೆ. ಸೋಮಾರಿತನಕ್ಕೆ ದಾರಿಯಾಗಬಾರದೆಂದು ಅರೆಲಿಯಾನೊ ಸೆಗುಂಡೊ ಒಬ್ಬನೇ ಕಷ್ಟಪಟ್ಟು ಕೆಲಸ ಮಾಡುತ್ತಿದ್ದ. ಏನೋ ಒಂದು ಸಣ್ಣ ವಿಷಯಕ್ಕಾಗಿ ಅವನು ಮನೆಗೆ ಹೋಗಿದ್ದ. ಫರ್ನಾಂಡಾ ಅವನಿಗೆ ಛತ್ರಿಕೊಟ್ಟು

ಸಹಾಯ ಮಾಡಲು ಪ್ರಯತ್ನಿಸಿದಳು. "ನನಗೆ ಅದರ ಅವಶ್ಯಕತೆ ಇಲ್ಲ, ಮಳೆ ನಿಲ್ಲುವವರೆಗೆ ಇಲ್ಲಿಯೇ ಇರುತ್ತೇನೆ" ಎಂದ. ಸುಮ್ಮನೆ ಬಾಯಲ್ಲಿ ಹೇಳುವ ಮಾತಾಗಿರಲಿಲ್ಲ. ಅವನು ಹಾಗೆಯೇ ನಡೆದುಕೊಳ್ಳುತ್ತಿದ್ದ. ಅವನ ಬಟ್ಟೆಗಳೆಲ್ಲ ಪೆಟ್ರಾಕೋಟ್ಸ್ ಮನೆಯಲ್ಲಿದ್ದವು. ಮೂರು ದಿವಸಕ್ಕೊಮ್ಮೆ ಬಟ್ಟೆ ಬದಲಾಯಿಸುತ್ತಿದ್ದ. ತೊಟ್ಟ ಬಟ್ಟೆಯನ್ನು ಒಗೆಯಲೆಂದು ಕಳಚಿಕೊಟ್ಟಾಗ ಅವು ಒಗೆದು ಒಣಗುವವರೆಗೆ ಒಳಚಡ್ಡಿಯಲ್ಲಿ ಇರುತ್ತಿದ್ದ. ಅಷ್ಟರಲ್ಲಿ ಸುಮ್ಮನೆ ಕಾಲ ಕಳೆಯಲು ಬೇಸರವಾಗಿ ಮನೆಯಲ್ಲಿ ಏನಾದರೂ ರಿಪೇರಿ ಕೆಲಸಗಳಿದ್ದರೆ ಅದರ ಕಡೆ ಗಮನ ಕೊಡುತ್ತಿದ್ದ. ಕೀಲುಗಳನ್ನು ಸರಿಪಡಿಸುತ್ತಿದ್ದ, ಬೀಗಗಳಿಗೆ ಎಣ್ಣೆ ಹಾಕುತ್ತಿದ್ದ, ಸ್ಕ್ರೂಗಳನ್ನು ಬಿಗಿಗೊಳಿಸುತ್ತಿದ್ದ, ಬಾಗಿಲುಗಳನ್ನು ಸರಿಪಡಿಸುತ್ತಿದ್ದ.

ಹಲವು ತಿಂಗಳು ಅವನು ಜಿಪ್ಸಿಗಳು ಬಿಟ್ಟುಹೋಗಿರಬಹುದಾಗಿದ್ದ ಟೂಲ್‌ಬಾಕ್ಸ್ ಹಿಡಿದುಕೊಂಡು ಓಡಾಡುತ್ತಿದ್ದ. ಅದೇ ಸಮಯದಲ್ಲಿ ಕಾರಣವೇನೆಂದು ತಿಳಿಯದಿದ್ದರೂ ಅವನಿಗೇ ತಿಳಿಯದಿದ್ದ ರೀತಿಯ ವ್ಯಾಯಾಮದಿಂದಲೊ, ಛಳಿಯಿಂದಾಗಿಯೊ, ಉದ್ದೇಶಪೂರ್ವಕ ನಿಯಂತ್ರಣದಿಂದಲೊ ಅವನ ಹೊಟ್ಟೆ ತೆಳ್ಳಗಾಗುತ್ತಿತ್ತು. ಆಮೆಯ ಹಾಗೆ ಊದಿಕೊಂಡಿರುವ ಮುಖ ಉರಿಗೆಂಪನ್ನು ಸ್ವಲ್ಪಮಟ್ಟಿಗೆ ಕಳೆದುಕೊಂಡಿತ್ತು. ಡಬಲ್‌ಚಿ, (ಜೋಡಿಗಲ್ಲ) ಮೃದುವಾಗಿತ್ತು. ಈಗ ಬಗ್ಗಿ ತನ್ನ ಷೂಗಳನ್ನು ತಾನೇ ಹಾಕಿಕೊಳ್ಳಲು ಸಾಧ್ಯವಾಗಿತ್ತು. ಫರ್ನಾಂಡಾ ಅವನು ಬಾಗಿಲ ಚಿಲಕಗಳನ್ನು ಬಿಗಿಯುತ್ತಾ, ಗಡಿಯಾರಗಳನ್ನು ರಿಪೇರಿ ಮಾಡುತ್ತಾ ಇದ್ದುದನ್ನು ಗಮನಿಸಿದಳು. ಇವನೂ ಏನಾದರೂ ಕಟ್ಟುವ ಕೆಟ್ಟ ಚಾಳಿಗೆ ಬೀಳುತ್ತಿರುವನೊ ಹೇಗೆ ಎಂದು ಅಚ್ಚರಿಪಟ್ಟಳು. ಇದರಿಂದಾಗಿ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಪುಟ್ಟ ಚಿನ್ನದ ಮೀನುಗಳನ್ನು ತಯಾರಿಸುವುದು, ಅಮರಾಂತಾಳ ಹಾಗೆ ಗುಂಡಿಗಳನ್ನು ಹೊಲಿಯುವುದು, ಶವವಸ್ತ್ರದ ಹೆಣಿಗೆ ಮಾಡುವುದು, ಜೋಸ್ ಆರ್ಕಾಡಿಯೊ ಹಾಗೆ ಚರ್ಮ ಕಾಗದಗಳನ್ನು ಓದುವುದು, ಮತ್ತು ಉರ್ಸುಲಾಳ ಹಾಗೆ, ಅವಳ ನೆನಪುಗಳ ಹಾಗೆ ಅವರ ಜಾಡಿನಲ್ಲಿ ಸಾಗಲು ಹೊರಟಿದ್ದಾನೊ ಹೇಗೆ ಅನಿಸಿತು. ಆದರೆ ಹಾಗಾಗಲಿಲ್ಲ. ಮಳೆಯಿಂದ ಆಗುತ್ತಿದ್ದ ಅತ್ಯಂತ ಕೆಟ್ಟ ಪರಿಣಾಮಗಳೆಂದರೆ ಚೆನ್ನಾಗಿ ಒಣಗಿರುತ್ತಿದ್ದ ಮೆಷಿನ್‌ಗಳು, ಪ್ರತಿ ಮೂರು ದಿವಸಕ್ಕೊಮ್ಮೆ ಎಣ್ಣೆಹಾಕದಿದ್ದರೆ, ಮಳೆಯಿಂದಾಗಿ ಗೇರ್‌ಗಳ ಮಧ್ಯೆ ಸಣ್ಣ ಸಣ್ಣ ಹೂಗಳು ಮೊಳೆಯುತ್ತಿದ್ದವು. ಚಿತ್ತಾರ ಬಿಡಿಸಿದ ವಸ್ತ್ರಗಳಲ್ಲಿನ ದಾರಗಳು ತುಂಡಾಗುತ್ತಿದ್ದವು, ಒದ್ದೆ ಬಟ್ಟೆಯಲ್ಲಿ ಕಾವಿಬಣ್ಣದ ಪಾಚಿ ಕಾಣಿಸಿಕೊಳ್ಳುತ್ತಿತ್ತು. ಗಾಳಿ ಎಷ್ಟು ತೇವದಿಂದ ಕೂಡಿರುತ್ತಿತ್ತೆಂದರೆ ಮೀನುಗಳು ಬಾಗಿಲುಗಳ ಮೂಲಕ ಒಳಗೆ ಬಂದು, ಕೊಠಡಿಯಲ್ಲಿನ ವಾತಾವರಣದಿಂದ ಕಿಟಕಿಗಳ ಮೂಲಕ ತೇಲುತ್ತಾ ಹೊರಗೆ ಹೋಗಬಹುದಾಗಿತ್ತು. ಒಂದು ದಿನ ಬೆಳಿಗ್ಗೆ, ಉರ್ಸುಲಾ ತನ್ನ ಅಂತಿಮ ಸಮಯ ಸಮೀಪಿಸಿತೆಂಬುದನ್ನು ಗ್ರಹಿಸಿದಳು. ಆಗಲೇ ತನ್ನನ್ನು ಫಾದರ್ ಆ್ಯಂಟೋನಿಯೊ ಇಸಾಬೆಲ್ ಬಳಿಗೆ, ಸ್ಟೆಚರ್ ಮೇಲೆ ಇರಿಸಿಕೊಂಡಾದರೂ ಕರೆದೊಯ್ಯಲು ಅವರಿಗೆ ಹೇಳಿದಳು. ಅಷ್ಟರಲ್ಲಿ ಸಾಂತಾ ಸೋಫಿಯಾ ದ ಲಾ ಪೀದಾದ್ ಅವಳ ಬೆನ್ನಿಗೆ ಜಿಗಣೆಗಳು ಹತ್ತಿದ್ದುದನ್ನು ಗಮನಿಸಿದಳು. ಒಂದೊಂದನ್ನೇ ತೆಗೆತೆಗೆದು, ಅವಳ ರಕ್ತ ಹೀರುವುದಕ್ಕೆ ಮೊದಲೇ ಕುಕ್ಕಿ ಸಾಯಿಸಿದಳು. ನೀರನ್ನು ಮನೆಯಿಂದ ಹೊರಗೆ ಹಾಕಲು ಹಳ್ಳಗಳನ್ನು ಅಗೆಯಬೇಕಾಯಿತು. ಇದರಿಂದಾಗಿ ಕಪ್ಪೆ, ಬಸವನ ಹುಳುಗಳ

ಕಾಟದಿಂದ ತಪ್ಪಿಸಿಕೊಂಡು ಮಂಚದ ಕೆಳಗಿನ ಇಟ್ಟಿಗೆಗಳನ್ನು ತೆಗೆದು, ಮತ್ತೊಮ್ಮೆ ಷೂ ಹಾಕಿಕೊಂಡು ಮನೆಯಲ್ಲಿ ಓಡಾಡಲು ಸಾಧ್ಯವಾಗುತ್ತಿತ್ತು. ಇಂಥ ಸಣ್ಣ ಸಣ್ಣ ವಿವರಗಳ ಕಡೆ ಗಮನ ಹರಿಸಿದ್ದ ಅರೆಲಿಯಾನೊ ಸೆಗುಂಡೊಗೆ ತನಗೆ ವಯಸ್ಸಾಗುತ್ತಿದ್ದುದರ ಪರಿವೆಯೇ ಇರಲಿಲ್ಲ. ತೂಗುವ ಕುರ್ಚಿಯಲ್ಲಿ ಕುಳಿತು ಮಧ್ಯಾಹ್ನದ ಹೊತ್ತಿಗೇ ಸಂಜೆಯಾಗದ್ದನ್ನು ಗಮನಿಸುತ್ತಾ ಒಂದಿಷ್ಟೂ ಕಂಪನವಿಲ್ಲದೆ ಪೆಟ್ರಾಕೋಟ್ಸ್ ಬಗ್ಗೆ ಯೋಚಿಸುತ್ತಿದ್ದ. ಫರ್ನಾಂಡಾಳ ಅತಿ ಮುಖ್ಯವಲ್ಲದ ಪ್ರೀತಿಯೆಡೆಗೆ ಮರಳಿ ಹೋಗುವುದಕ್ಕೆ ಸಮಸ್ಯೆಯೇನೂ ಇರಲಿಲ್ಲ. ಅವಳ ಸೌಂದರ್ಯಕ್ಕೆ ವಯಸ್ಸಿನಿಂದಾಗಿ ಗಾಂಭೀರ್ಯ ಬಂದಿತ್ತು. ಆದರೆ ಈ ಮಳೆಯಿಂದ ಅವನಲ್ಲಿ ಯಾವುದೇ ಭಾವನೆಗಳ ತುರ್ತು ಇರಲಿಲ್ಲ. ಬದಲಾಗಿ ಬಯಕೆಗಳೇ ಇಲ್ಲದ ಒಂದು ಬಗೆಯ ನಿರ್ಲಿಪ್ತತೆಯನ್ನು ಉಂಟುಮಾಡಿತ್ತು. ಹಿಂದೆ ಇಂಥದ್ದೇ ಮಳೆಯ ಸಮಯದಲ್ಲಿ ತಾನು ಮಾಡಿದ್ದಿರಬಹುದಾದ ಕೆಲಸಗಳನ್ನು ನೆನಪಿಸಿಕೊಂಡು ಅವನೇ ನಕ್ಕ. ಬನಾನಾ ಕಂಪನಿಯವರು ತಂದು ಜನಪ್ರಿಯಗೊಳಿಸಿದ ಝಿಂಕ್ ಶೀಟುಗಳನ್ನು ಅವರಿಗೂ ಮೊದಲೇ ಇವನು ತಂದು ಪೆಟ್ರಾಕೋಟ್ಸ್‌ಳ ಬೆಡ್ ರೂಮಿನ ಛಾವಣಿಗೆ ಹೊದಿಸಿದ್ದ. ಇದರಿಂದಾಗಿ ಛಾವಣಿ ಮೇಲೆ ಮಳೆಹನಿಗಳ ಸದ್ದಾಗುತ್ತಿದ್ದಾಗ ಅವರಿಬ್ಬರ ನಡುವೆ ಮತ್ತೂ ಆಳವಾದ ಆತ್ಮೀಯತೆ ಸಾಧ್ಯವಾಗುತ್ತಿತ್ತು. ಯುವಕನಾಗಿದ್ದಾಗಿನ ಪ್ರಾಯದ ಹುಚ್ಚು ಸಾಹಸಗಳ ನೆನಪಿನಿಂದಲೂ ಅವನು ವಿಚಲಿತನಾಗಲಿಲ್ಲ. ಇದಕ್ಕೆ ಮೊದಲು ತನ್ನಿಂದಾದ ಲಂಪಟತನದೊಂದಿಗೆ ಎಲ್ಲವೂ ಮುಗಿಯಿತೆಂಬ ಭಾವನೆಯಂತೆ ಇಂದೂ ಅವನಿಗೆ ಅನಿಸಿತ್ತು. ಅವನ ಆ ನೆನಪುಗಳಲ್ಲಿ ಕಹಿಭಾವನೆಯಾಗಲಿ ಪಶ್ಚಾತ್ತಾಪವಾಗಲಿ ಇರಲಿಲ್ಲ. ಈ ಭ್ರಮವಿರಸನ ಸ್ಥಿತಿ ಅವನಿಗೆ ಕುಳಿತು ಯೋಚಿಸಲು ಅವಕಾಶ ಕೊಟ್ಟಿದೆ ಎಂದೆನಿಸಬಹುದು. ಕೆಲಸದ ಉಪಕರಣಗಳು, ಎಣ್ಣೆ ಡಬ್ಬ ಹೀಗೆ ಏನೇನೊ ವ್ಯಾಪಾರ ಮಾಡಬಹುದಾಗಿದ್ದ, ಆದರೆ ಮಾಡದೆ ಹೋದುದರ ಬಗ್ಗೆ ಯೋಚಿಸುತ್ತಿದ್ದ. ಅವನ ಈ ಯೋಚನೆಗಳಲ್ಲಿ ನಿಜವಾಗಿರಲಿಲ್ಲ. ಮನೆಯಲ್ಲಿ ನಿಷ್ಕ್ರಿಯವಾಗಿ ಕುಳಿತುಕೊಳ್ಳುವ ಮನಸ್ಸಾಗುತ್ತಿದ್ದುದು, ನೈತಿಕ ಪಾಠಗಳ ಬಗ್ಗೆ ಮರುಯೋಚಿಸಬೇಕೆಂಬುದಕ್ಕೆ ಅದು ಬಂದುದು ಬಹಳ ದೂರದಿಂದ, ಅದೂ ಅವನು ಮಳೆಯ ಕಿರಿಕಿರಿಯಿಂದ ಮೆಲ್‌ಕಿಯಾಡ್ಸ್‌ನ ರೂಮಿನಲ್ಲಿದ್ದಾಗ ಅದ್ಭುತವಾದ ರೋಮಾಂಚಕಾರಿಯಾದ ಹಾರುವ ಜಮಖಾನ, ಹಡಗು ಮತ್ತು ಅದರ ಸಿಬ್ಬಂದಿಯನ್ನು ನುಂಗಿ ಬದುಕುತ್ತಿದ್ದ ತಿಮಿಂಗಲಗಳ ಕಥೆಗಳನ್ನು ಓದುತ್ತಿದ್ದಾಗ. ಆ ದಿನಗಳಲ್ಲಿ ಒಂದು ಕ್ಷಣದ ಅಜಾಗರೂಕತೆಯಿಂದ ಪುಟ್ಟ ಅರೆಲಿಯಾನೊ ನಡುಮನೆಯಲ್ಲಿ ಕಾಣಿಸಿಕೊಂಡಾಗ ಅಜ್ಜನಿಗೆ ಅವನು ಯಾರೆಂಬುದು ತಿಳಿಯಿತು. ಅವನ ಕೂದಲನ್ನು ಕ್ರಾಪ್ ಮಾಡಿಸಿದ. ಬಟ್ಟೆ ಹಾಕಿದ. ಜನರಿಂದ ಹೆದರಬೇಡವೆಂದು ತಿಳಿಸಿದ. ಸ್ವಲ್ಪ ಸಮಯದಲ್ಲಿಯೇ ಅವನ ಕೆನ್ನೆ ಮೂಳೆಗಳು, ಬೆರಗಿನ ನೋಟ, ಏಕಾಂತತೆಯ ಭಾವ ಎಲ್ಲವೂ ಅವನು ನ್ಯಾಯಸಮ್ಮತ ಅರೆಲಿಯಾನೊ ಬ್ಯುಂಡಿಯಾ ಎನ್ನುವುದು ಪ್ರಮಾಣಿತವಾಯಿತು. ಫರ್ನಾಂಡಾಗೆ ನಿರಾಳವೆನಿಸಿತು. ತನ್ನ ಅಹಂಕಾರ ಎಷ್ಟಿರಬಹುದೆಂಬುದನ್ನು ತಾನೇ ಅಳೆದಳು. ಅದಕ್ಕೆ ಸರಿಯಾದ ಪರಿಹಾರ ತೋಚಲಿಲ್ಲ. ಯಾವ ರೀತಿಯಲ್ಲಿ ಯೋಚಿಸಿದರೂ, ತರ್ಕಬದ್ಧವಾಗಿ ಕಾಣುತ್ತಿರಲಿಲ್ಲ. ಅರೆಲಿಯಾನೊ ಸೆಗುಂಡೊ ಅಜ್ಜಂತೆ ಸಂತೋಷದಿಂದ ಈಗ ನೋಡುತ್ತಿದ್ದ

ಹಾಗೆ ನಡೆದುಕೊಳ್ಳುತ್ತಾನೆಂದು ಗೊತ್ತಿದ್ದರೆ, ಅವಳು ಇಷ್ಟೊಂದು ತಲೆಕೆಡಿಸಿಕೊಳ್ಳುತ್ತಿರಲಿಲ್ಲ. ಅಲ್ಲದೆ ಒಂದು ವರ್ಷದ ಹಿಂದೆಯೇ ಚಿಂತೆಯಿಂದ ಮುಕ್ತವಾಗಬಹುದಿತ್ತು ಎಂದುಕೊಂಡಳು. ಅಮರಾಂತಾ ಉರ್ಸುಲಾಗೆ ಆಗಲೆ ಎರಡನೇ ಹಲ್ಲು ಬಂದಿತ್ತು. ಮಳೆಯ ಬೇಸರದಲ್ಲಿ ಅವಳಿಗೆ ಪುಟ ಪುಟ ಓಡಾಡುವ ಮಗು ಒಂದು ಆಟದ ಗೊಂಬೆಯಂತೆ ಕಾಣಿಸಿತು. ಅರೆಲಿಯಾನೊ ಸೆಗುಂಡೊ, ಮೆಮೆಯ ಕೋಣೆಯಲ್ಲಿದ್ದ ವಿಶ್ವಕೋಶ ಗ್ರಂಥವನ್ನು ಅಂದಿನಿಂದ ಯಾರೂ ಅದನ್ನು ಮುಟ್ಟಲಿಲ್ಲವೆಂಬುದನ್ನು ನೆನಪಿಸಿಕೊಂಡ. ಅವನು ಮಕ್ಕಳಿಗೆ ಅದರಲ್ಲಿದ್ದ ಪ್ರಾಣಿಗಳ ಚಿತ್ರಗಳನ್ನು ಭೂಪಟಗಳನ್ನು ಮತ್ತು ದೂರದೇಶಗಳನ್ನು ಅಲ್ಲಿನ ಪ್ರಸಿದ್ಧ ಜನರ ಚಿತ್ರಗಳನ್ನು ತೋರಿಸಲು ತೊಡಗಿದ. ಅವನಿಗೆ ಇಂಗ್ಲಿಷು ಬರುತ್ತಿರಲಿಲ್ಲ. ಏನಿದ್ದರೂ ನೋಡಿಯೇ ಅವನಿಗೆ ಗೊತ್ತಿದ್ದ ದೇಶಗಳ, ಪ್ರಸಿದ್ಧರ ಹೆಸರುಗಳನ್ನು ವಿವರಿಸುತ್ತಿದ್ದ ಉಳಿದವುಗಳ ಬಗ್ಗೆ ಮಕ್ಕಳ ಕುತೂಹಲವನ್ನು ಹತ್ತಿಕ್ಕಲಾಗದೆ ತಾನೇ ಹೆಸರುಗಳನ್ನು ಸೃಷ್ಟಿಸಿ ಹೇಳುತ್ತಿದ್ದ.

ಫರ್ನಾಂಡಾಗೆ, ತನ್ನ ಗಂಡ ಇಟ್ಟುಕೊಂಡವಳ ಮನೆಗೆ ಹೋಗಲು ಮಳೆ ನಿಲ್ಲುವುದಕ್ಕಾಗಿ ಕಾಯುತ್ತಿದ್ದಾನೆ ಎನಿಸಿತು. ಮಳೆಯ ಆರಂಭದ ತಿಂಗಳುಗಳಲ್ಲಿ ಫರ್ನಾಂಡಾಗೆ ತನ್ನ ಗಂಡ ಎಲ್ಲಿ ತನ್ನ ಬೆಡ್ ರೂಮಿಗೆ ಬಂದು ಮತ್ತೆ ತನ್ನನ್ನು ನಾಚಿಕೆ ಸಂಕೋಚಗಳಿಗೆ ಒಳಗಾಗಿಸುತ್ತಾನೊ ಎಂದು ಹೆದರಿದ್ದಳು. ಅಮರಾಂತಾ ಉರ್ಸುಲಾ ಹುಟ್ಟಿದಂದಿನಿಂದ ಅವಳಿಗೆ, ಅವನ ಜೊತೆ ಮಾಡಿಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ಅದೃಶ್ಯ ವೈದ್ಯರೊಂದಿಗೆ ವ್ಯವಹರಿಸಲೂ ಅದೂ ಒಂದು ಕಾರಣವಾಗಿತ್ತು. ಆದರೆ ಅಂಚೆ ತಲುಪುವುದರಲ್ಲಿ ಆಗಾಗ ಅಡೆತಡೆ ಉಂಟಾಗುತ್ತಿದ್ದುದು ಆತಂಕಕ್ಕೆ ಕಾರಣವಾಗಿತ್ತು. ಮೊದಲ ತಿಂಗಳುಗಳಲ್ಲಿ, ಮಳೆಗಾಲವಾದ್ದರಿಂದ ರೈಲುಗಾಡಿಗಳು ಹಳಿ ತಪ್ಪುತ್ತಿದ್ದುದರಿಂದ ಕಾಗದಗಳು ತಮಗೆ ತಲುಪುತ್ತಿಲ್ಲವೆಂದು ಅದೃಶ್ಯ ಡಾಕ್ಟರುಗಳಿಂದ ತಿಳಿದುಬಂತು. ನಂತರ ಅದೃಶ್ಯರೊಂದಿಗೆ ಪತ್ರಸಂಪರ್ಕ ಕಡಿದುಹೋದಮೇಲೆ, ಅವಳು ತನ್ನ ಗಂಡ ಕಾರ್ನಿವಾಲ್(ಜಾತ್ರೆ)ನಲ್ಲಿ ಧರಿಸುತ್ತಿದ್ದ ಹುಲಿಮುಖವಾಡ ಹಾಕಿಕೊಂಡು ಕಾಲ್ಪನಿಕ ಹೆಸರಿನೊಂದಿಗೆ ಬನಾನಾ ಕಂಪನಿಯ ವೈದ್ಯರುಗಳಿಂದ ಪರೀಕ್ಷಿಸಿಕೊಳ್ಳಬೇಕೆಂದು ಗಂಭೀರವಾಗಿ ಆಲೋಚಿಸಿದಳು. ಆದರೆ ಯಾವಾಗಲೂ ಅಹಿತಕರವಾದ ಸುದ್ದಿಯನ್ನು ತರುತ್ತಿದ್ದವರಲ್ಲಿ ಒಬ್ಬ, ಅವಳಿಗೆ, ಕಂಪನಿ ಆಸ್ಪತ್ರೆ ಅಥವಾ ಚಿಕಿತ್ಸಾಲಯಗಳನ್ನು ಮಳೆಯಿಲ್ಲದ ಪ್ರದೇಶಗಳಿಗೆ ಸ್ಥಳಾಂತರಗೊಳಿಸುತ್ತಿದೆ ಎಂಬ ಸುದ್ದಿಯನ್ನು ಹೇಳಿದ. ನಂತರ ಅವಳು ಭರವಸೆಯನ್ನೇ ಕಳೆದುಕೊಂಡಳು. ಮಳೆ ನಿಲ್ಲುವವರೆಗೆ ಕಾದು(ಅಂಚೆ) ಟಪಾಲು ಸೇವೆ ಮಾಮೂಲಿ ಸ್ಥಿತಿಗೆ ಬರುವವರೆಗೆ ಕಾಯಬೇಕೆಂದುಕೊಂಡಳು. ಈ ನಡುವೆ ತನ್ನ ರಹಸ್ಯ ಖಾಯಿಲೆಗಳಿಂದ ಸ್ವಲ್ಪವಾದರೂ ಉಪಶಮನ ಪಡೆಯಲು ತನ್ನ ಕಲ್ಪನೆಯ ಮೊರೆ ಹೊಕ್ಕಳೇ ಹೊರತು ಮಕೊಂಡೊದಲ್ಲಿದ್ದ ಒಬ್ಬನೇ ಒಬ್ಬ ಫ್ರೆಂಚ್ ಡಾಕ್ಟರ್ ಬಳಿಗೆ ಹೋಗುವುದಕ್ಕಿಂತ, ಕತ್ತೆಯಂತೆ ಹುಲ್ಲು ತಿನ್ನುವ ಆ ವಿಚಿತ್ರ ಪ್ರಾಣಿಯಿಂದ ಚಿಕಿತ್ಸೆ ಪಡೆಯುವುದಕ್ಕಿಂತ ಸಾಯುವುದೇ ಮೇಲು ಎಂದುಕೊಂಡಳು. ತನ್ನ ರೋಗಗಳಿಗೆ ಕೆಲವು ನಾಟಿ ಔಷಧಿಗಳನ್ನು ಸೂಚಿಸಬಹುದೆಂದು ಅವಳು ಉರ್ಸುಲಾಳ ಬಳಿಗೆ ಹೋದಳು. ಆದರೆ ಅವಳಿಗೆ ವಸ್ತುಗಳನ್ನು ತಿರುಗಾಮುರುಗಾ ಮತ್ತು ಅರ್ಥಾಂತರ ರೀತಿಯಲ್ಲಿ

ಹೇಳುವ ಅಭ್ಯಾಸವಿದ್ದುದರಿಂದ 'ಜನ್ಮ ಕೊಟ್ಟಳು' ಎನ್ನುವುದಕ್ಕೆ ಹೊರಗೆ ಹಾಕಿದಳು, 'ಹರಿಯುತ್ತಿದೆ' ಎನ್ನುವುದಕ್ಕೆ 'ಉರಿಯುತ್ತಿದೆ' ಎಂದೂ ಹೇಳುತ್ತಿದ್ದಳು. ಈ ರೀತಿ ಹೇಳುವುದರಿಂದ ನಾಚಿಕೆ ಕಡಿಮೆಯಾಗುವುದು ಎಂದು ಭಾವಿಸಿದ್ದಳು. ಇದರಿಂದಾಗಿ ಉರ್ಸುಲಾಗೆ ಅವಳ ಸಮಸ್ಯೆ ಕರುಳಿಗೆ ಸಂಬಂಧಿಸಿದ್ದೆಂಬ ತೀರ್ಮಾನಕ್ಕೆ ಬಂದಳು. ಆದರೆ ಸಮಸ್ಯೆ ಇದ್ದದ್ದು ಗರ್ಭಕೋಶದಲ್ಲಿ. ಹೀಗಾಗಿ ಒಂದು ಅಳತೆ 'ಕಾಲೊಮೆಲ್' ಅನ್ನು ಖಾಲಿ ಹೊಟ್ಟೆಯಲ್ಲಿ ತೆಗೆದುಕೊಳ್ಳಲು ಹೇಳಿದಳು. ಅವಳ ಚಿಂತೆ ಮಳೆ ಬರುತ್ತಿದ್ದುದಕ್ಕಾಗಿ ಅಲ್ಲ. ನಾಚಿಕೆಪಡುವಂತಹ, ಪಡಬೇಕಾದ ಅಗತ್ಯ ಇಲ್ಲದಿದ್ದಂತಹದಕ್ಕೆ ಮತ್ತು ಕಾಗದಗಳು ಕಳೆದು ಹೋದುದಕ್ಕೆ, ಮಳೆಯ ಯೋಚನೆಗೆ ಹೊರಳಿದ್ದಳು ಅಷ್ಟೆ. ಅವಳ ಇಡೀ ಬದುಕು ಮಳೆಯಲ್ಲಿಯೇ ಕಳೆದು ಹೋದಂತೆ ಇತ್ತು. ತನ್ನ ದಿನನಿತ್ಯದ ಚಟುವಟಿಕೆಗಳಲ್ಲಿ ಯಾವ ಬದಲಾವಣೆಯೂ ಇರಲಿಲ್ಲ. ಅಂತೆಯೇ ವಿದ್ಯುಕ್ತಕ್ರಿಯೆಗಳಲ್ಲಿಯೂ ವ್ಯತ್ಯಾಸ ಬರಲಿಲ್ಲ. ಊಟದ ಮೇಜನ್ನು ಸ್ವಲ್ಪ ಎತ್ತರಿಸಿ, ಕೆಳಗೆ ಕಾಲುಗಳು ಒದ್ದೆಯಾಗದಂತೆ ಮರದ ಹಲಗೆಗಳನ್ನು ಹಾಸಲಾಯಿತು ಕ್ರಮದಂತೆ ಮೇಜಿನ ಮೇಲೆ ಟೇಬಲ್ ಕ್ಲಾತ್ ಹಾಸುತ್ತಿದ್ದಳು. ಕ್ಯಾಂಡಲ್‌ಗಳನ್ನು ಹಚ್ಚುತ್ತಿದ್ದಳು. ಚೀನಾ ಪಾತ್ರೆಗಳನ್ನು ಬಳಸುತ್ತಿದ್ದಳು. ಅವಳ ದೃಷ್ಟಿಯಲ್ಲಿ ವೈಪರೀತ್ಯಗಳಿಂದ ಪದ್ಧತಿಯಲ್ಲಿ ವ್ಯತ್ಯಯ ಉಂಟಾಗಬಾರದು. ಯಾರೂ ಕೂಡಾ ಹೊರಗೆ ಹೋಗುತ್ತಲೇ ಇರಲಿಲ್ಲ. ಫರ್ನಾಂಡಾಳಿಂದಾಗಿ ಈ ನಿಯಮ. ಮಳೆ ಪ್ರಾರಂಭವಾದಾಗಿನಿಂದ ಮಾತ್ರವಲ್ಲ ಅದಕ್ಕೂ ಮೊದಲಿನಿಂದ, ಮನೆಯಲ್ಲಿ ಎಲ್ಲರೂ ಮುಚ್ಚಿಗೆ ಬಾಗಿಲುಗಳ ಒಳಗೆ ಇರಬೇಕಲ್ಲದೆ, ಹೊರಗೆ ರಸ್ತೆಯಲ್ಲಿ ಏನಾಗುತ್ತಿದೆ ಎಂದು ನೋಡುವ ಕುತೂಹಲವನ್ನು ಹೊಂದಿರಬಾರದು. ಆ ರೀತಿ ಮಾಡುವುದು ಸೂಳೆಯರಿಗಲ್ಲದೆ ಸಂಸಾರಸ್ಥರಿಗಲ್ಲ ಎಂಬುದು ಅವಳ ವಿಚಾರವಾಗಿತ್ತು. ಆದರೆ ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್‌ನ ಶವಯಾತ್ರೆ ನಡೆದಾಗ ಎಲ್ಲರಿಗಿಂತ ಮೊದಲು ಕಿಟಕಿಗಳ ಮರೆಯಿಂದ ನೋಡಿದವಳು ನೊಂದವಳು ಅವಳೇ ಆಗಿದ್ದಳು. ಬಹಳ ದಿನಗಳವರೆಗೆ ತನ್ನ ತಪ್ಪಿನ ಅರಿವಾಗಿ ಪಶ್ಚಾತ್ತಾಪದಿಂದ ನೋವನ್ನುಂಡಳು.

ಅದಕ್ಕಿಂತ ಕೆಟ್ಟ ರೀತಿಯ ಶವಯಾತ್ರೆಯನ್ನು ಊಹಿಸಿಕೊಳ್ಳಲೂ ಸಾಧ್ಯವಿರಲಿಲ್ಲ. ಶವಪೆಟ್ಟಿಗೆಯನ್ನು ಎತ್ತಿನ ಗಾಡಿಯಲ್ಲಿ ಇರಿಸಿ ಬಾಳೆ ಎಲೆಗಳ ಚಪ್ಪರವನ್ನು ಕಟ್ಟಿದ್ದರು. ಆದರೆ ಮಳೆಯ ಪ್ರಭಾವ ಹೇಗಿತ್ತೆಂದರೆ, ರಸ್ತೆಗಳು ಕೆಸರಿನಿಂದ ತುಂಬಿದ್ದರಿಂದ ಗಾಡಿ ಚಕ್ರಗಳು ಅಲ್ಲಲ್ಲಿ ಹೂತುಹೋಗುತ್ತಿದ್ದವು. ಮಳೆಯ ರಭಸಕ್ಕೆ ಚಪ್ಪರ ಇನ್ನೇನು ಬಿದ್ದೇ ಹೋಗುತ್ತದೆ ಎಂಬಂತಾಗುತ್ತಿತ್ತು. ಹೆಣದ ಪೆಟ್ಟಿಗೆ ಮೇಲೆ ಹೊದಿಸಿದ್ದ ಧ್ವಜ ಮಳೆಧಾರೆಯಿಂದ ತೊಯ್ದುಹೋಗಿತ್ತು. ಆ ಧ್ವಜವೂ ಕೂಡಾ ಗೌರವಯುತರಾದ ವ್ಯಕ್ತಿಗಳಿಂದ ತಿರಸ್ಕರಿಸಲ್ಪಟ್ಟ ರಕ್ತದ ಮತ್ತು ಗಂಧಕದ ಕಲೆಗಳಿಂದ ಕೂಡಿದ್ದುದಾಗಿತ್ತು. ಶವಪೆಟ್ಟಿಗೆ ಮೇಲೆ ಕರ್ನಲ್ ಜೆರಿನೆಲ್ಡೊ ಮಾರ್ಕ್ವೆಜ್ ಅಮರಾಂತಾಳನ್ನು ಕಾಣಲು ಹೋಗುತ್ತಿದ್ದಾಗ ನಿಶ್ಶಸ್ತ್ರನಾಗಿರಲು, ತನ್ನ ಬಳಿ ಇರಿಸಿಕೊಂಡಿರುತ್ತಿದ್ದ ಬೆಳ್ಳಿ ಮತ್ತು ತಾಮ್ರದ ಕುಚ್ಚಿರುವ ಕತ್ತಿಯನ್ನು ಕೋಟು ನೇತು ಹಾಕುವ ರ್‍ಯಾಕ್‌ನಲ್ಲಿ ಇರಿಸುತ್ತಿದ್ದ. ಗಾಡಿಯ ಹಿಂದೆ, ನೀರ್ಲಾಂಡಾದಲ್ಲಿ ಶರಣಾಗಿ ಬದುಕುಳಿದ ಮಂದಿ ತಮ್ಮ ಪ್ಯಾಂಟ್‌ಗಳನ್ನು ಮಡಿಚಿ, ಬರಿಗಾಲಲ್ಲಿ ಕೆಸರು ಚಿಮ್ಮಿಸುತ್ತಾ ನಡೆದು ಬರುತ್ತಿದ್ದರು. ಇವರು ಒಂದು ಕೈಯಲ್ಲಿ ಲಾಠಿ ಮತ್ತೊಂದು ಕೈಯಲ್ಲಿ

ಮಳೆಯಿಂದಾಗಿ ಬಣ್ಣಗೆಟ್ಟ ಕಾಗದದ ಹೂಗುಚ್ಛಗಳನ್ನು ಹಿಡಿದಿದ್ದರು. ಕರ್ನಲ್ ಅರೆಲಿಯಾನೊ ಬ್ಯುಂಡಿಯಾನ ಹೆಸರನ್ನು ಇನ್ನೂ ಉಳಿಸಿಕೊಂಡಿದ್ದ ರಸ್ತೆಯಲ್ಲಿ ಸಾಗುತ್ತಿದ್ದ ಅವರು ಕಲ್ಪನೆಯ ದೃಶ್ಯದಂತೆ ಕಾಣುತ್ತಿದ್ದರು. ಅವರೆಲ್ಲ ಮನೆಯತ್ತ ಒಮ್ಮೆ ದೃಷ್ಟಿ ಹಾಯಿಸಿದರು ಮತ್ತು ಚೌಕದಲ್ಲಿ ತಿರುಗಿದರು. ಆಗ ಹೂತು ಹೋಗಿದ್ದ ಗಾಡಿಯನ್ನು ಮೇಲೆತ್ತಲು ಸಹಾಯಕ್ಕಾಗಿ ಕೇಳಬೇಕಾಯಿತು. ಸಾಂತಾ ಸೋಫಿಯಾ ದ ಲಾ ಪೀದಾದ್ ಉರ್ಸುಲಾಳನ್ನು ಬಾಗಿಲ ಬಳಿಗೆ ಕರೆತಂದಿದ್ದಳು. ಶವಯಾತ್ರೆಯ ಸಂಕಷ್ಟಗಳನ್ನು ಎಷ್ಟೊಂದು ಗಮನವಿಟ್ಟು ಗಮನಿಸಿದಳೆಂದರೆ, ಅವಳು ನೋಡುತ್ತಿರುವುದನ್ನು ಯಾರೂ ಅನುಮಾನಿಸಲಿಲ್ಲ. ದೇವತೆಯಂತೆ ಎತ್ತಿದ ಕೈ ಗಾಡಿಯ ಕುಲುಕಾಟಕ್ಕೆ ತಕ್ಕಂತೆ, ಆಡುತ್ತಿತ್ತು.

"ಗುಡ್ ಬೈ ಜೆರಿನೆಲ್ಡೊ, ಮಗು ನನ್ನವರಿಗೆ ತಿಳಿಸು, ಮಳೆ ನಿಲ್ಲುತ್ತಿದ್ದಂತೆ ಅವರನ್ನು ನಾನು ಕಾಣುವೆ ಎಂದು" – ಹೇಳಿದಳು ಉರ್ಸುಲಾ.

ಅರೆಲಿಯಾನೊ ಸೆಗುಂಡೊ ಅವಳನ್ನು ಹಾಸಿಗೆಯ ಬಳಿಗೆ ಹೋಗಲು ಸಹಾಯ ಮಾಡಿದ. ಅವಳು 'ಫೇರ್‌ವೆಲ್' ಹೇಳಿದ್ದರ ಅರ್ಥವೇನೆಂದು ಕೇಳಿದ.

"ನಾನು ಹೇಳಿದ್ದು ನಿಜ. ಸಾಯಲು ಮಳೆ ನಿಲ್ಲುವ ದಿನಕ್ಕಾಗಿ ಕಾಯುತ್ತಿದ್ದೇನೆ" ಎಂದಳು.

ಅರೆಲಿಯಾನೊ ಸೆಗುಂಡೊ ರಸ್ತೆಗಳ ಸ್ಥಿತಿ ನೋಡಿ ಗಾಭರಿಗೊಂಡ. ನಂತರ ತನ್ನ ಪ್ರಾಣಿಗಳ ಸ್ಥಿತಿ ಏನಾಗಿರಬಹುದೊ ಎಂದು ಚಿಂತಿತನಾದ. ಕೂಡಲೇ ಎಣ್ಣೆ ಸವರಿದ ಬಟ್ಟೆಯನ್ನು ತಲೆಮೇಲೆ ಹೊದ್ದು ಪೆಟ್ರಾಕೋಟ್ಸ್ ಮನೆಗೆ ಧಾವಿಸಿದ. ಪೆಟ್ರಾಕೋಟ್ಸ್ ಅಂಗಳದಲ್ಲಿ ಸೊಂಟದ ತನಕದ ನೀರಿನಲ್ಲಿ ನಿಂತು, ಕುದುರೆಯ ಹೆಣವನ್ನು ನೀರಿನಲ್ಲಿ ತೇಲಿಸಲು ಪ್ರಯತ್ನಿಸುತ್ತಿದ್ದಳು. ಅರೆಲಿಯಾನೊ ಸೆಗುಂಡೊ ಮೀಟುಗೋಲಿನಿಂದ ಅವಳಿಗೆ ನೆರವಾಗುತ್ತಿದ್ದ. ಬೃಹದಾಕಾರದ ಊದಿಕೊಂಡಿದ್ದ ಆ ದೇಹ ಗಿರ್ರನೆ ಒಂದು ಸುತ್ತು ತಿರುಗಿ, ಮಣ್ಣಿನ ನೀರಿನ ಹರಿವಿನಿಂದ ದೂಡಿಕೊಂಡು ಹೋಯಿತು. ಮಳೆ ಶುರುವಾದಾಗಿನಿಂದ ಪೆಟ್ರಾಕೋಟ್ಸ್‌ಗೆ ಸತ್ತು ಬಿದ್ದಿದ್ದ ಪ್ರಾಣಿಗಳನ್ನು ಹೊರಗೆ ಹಾಕುವುದೊಂದೇ ಕೆಲಸವಾಗಿತ್ತು. ಮೊದಲ ವಾರಗಳಲ್ಲಿ ಪೆಟ್ರಾಕೋಟ್ಸ್, ಅರೆಲಿಯಾನೊ ಸೆಗುಂಡೊಗೆ ಪರಿಸ್ಥಿತಿಯನ್ನು ವಿವರಿಸಿ ಆದಷ್ಟು ಬೇಗ, ತುರ್ತಾಗಿ ಏನಾದರೂ ಕ್ರಮ ತೆಗೆದುಕೊಳ್ಳಬೇಕೆಂಬ ಸಂದೇಶವನ್ನು ಕಳಿಸಿದಳು. ಆದರೆ ಅರೆಲಿಯಾನೊ ಸೆಗುಂಡೊ, ಆತಂಕಕ್ಕೆ ಕಾರಣವಿಲ್ಲ, ಬೇಕಾದಷ್ಟು ಸಮಯವಿದೆ. ಮಳೆ ಪರಿಸ್ಥಿತಿ ಸುಧಾರಿಸಿದ ಮೇಲೆ ಯೋಚನೆ ಮಾಡೋಣ ಎಂದಿದ್ದ. ಅವಳು ಕುದುರೆ ಲಾಯಕ್ಕೆ ವಿಪರೀತ ನೀರು ನುಗ್ಗಿದೆ ಎಂಬ ಸುದ್ದಿ ಕಳಿಸಿದಳು. ಹಸುಕರುಗಳು ತಿನ್ನಲು ಏನೂ ಇಲ್ಲದ ಕಾರಣ ಎತ್ತರದ ಪ್ರದೇಶಕ್ಕೆ ಹೋಗಿದೆ. ಆದರೆ ಅಲ್ಲಿ ಅವುಗಳೇ ರೋಗ ಮತ್ತು ಚಿರತೆಗಳ ಬಾಯಿಗೆ ತುತ್ತಾಗುವ ಸಾಧ್ಯತೆಯಿದೆ ಎಂದೂ ತಿಳಿಸಿದ್ದಳು. "ಮಾಡೋದಕ್ಕೆ ಈಗ ಏನೂ ಸಾಧ್ಯವಿಲ್ಲ" ಎಂದು ಅರೆಲಿಯಾನೊ ಸೆಗುಂಡೊ ಉತ್ತರಿಸಿದ್ದ. ಎಲ್ಲ ಮುಗಿದ ಮೇಲೆ ಹೊಸದಾಗಿ ಪ್ರಾಣಿಗಳು ಹುಟ್ಟುತ್ತವೆ ಎಂದೂ ತಿಳಿಸಿದ. ಗುಂಪು ಗುಂಪಾಗಿ ಪ್ರಾಣಿಗಳು ಸಾಯುವುದನ್ನು ಪೆಟ್ರಾಕೋಟ್ಸ್

ನೋಡಿದಳು. ಮಣ್ಣಿನ ಕೆಸರಲ್ಲಿ ಸಿಕ್ಕಿಕೊಂಡಿದ್ದ ಪ್ರಾಣಿಗಳನ್ನು ಮಾತ್ರವೇ ಅವಳಿಗೆ ಕೊಚ್ಚಲು ಸಾಧ್ಯವಾಗಿತ್ತು. ಏನೂ ಇಲ್ಲದಿದ್ದ ಮಕೊಂಡೊದಲ್ಲಿ ಒಂದು ಕಾಲಕ್ಕೆ ಸಾಕಷ್ಟು ಸಿರಿಸಂಪತ್ತು ಸೇರಿತ್ತು. ಆದರೆ ಈಗ ಮಳೆಯ ವಿಧಿಯಾಟದಿಂದ ಸೋಂಕು ವ್ಯಾಧಿಗಳನ್ನುಳಿದು ಮತ್ತೇನೂ ಉಳಿದಿಲ್ಲ ಎಂದು ಸಂಕಟದಿಂದ ಹೇಳಿಕೊಂಡಳು. ಅರೆಲಿಯಾನೊ ಸೆಗುಂಡೊ ಕೊನೆಗೆ ಹೋಗಿ ನೋಡೋಣವೆಂದು ನಿರ್ಧರಿಸಿ ಬಂದಾಗ ಅವನಿಗೆ ಕಂಡದ್ದು ಕುದುರೆಯ ಹೆಣ. ಮತ್ತು ಧ್ವಂಸಗೊಂಡಿದ್ದ ಲಾಯದಲ್ಲಿ ಹೇಸರಗತ್ತೆ ಮಾತ್ರ. ಪೆಟ್ರಾಕೋಟ್ಸ್ ಅವನಲ್ಲಿ ಆಶ್ಚರ್ಯವಾಗಲಿ, ಸಂತೋಷವಾಗಲಿ, ಪಶ್ಚಾತ್ತಾಪವಾಗಲಿ ಕಾಣದಿದ್ದುದನ್ನು ನೋಡಿ ವ್ಯಂಗ್ಯವಾಗಿ ನಕ್ಕಳು. “ಇದು ಸರಿಯಾದ ಸಮಯ” – ಎಂದು ಹೇಳಿದಳು.

ಅವಳಿಗೂ ವಯಸ್ಸಾಗಿತ್ತು. ಚರ್ಮ ಮತ್ತು ಮೂಳೆಗಳು ವಯಸ್ಸಾದುದನ್ನು ತೋರಿಸುತ್ತಿದ್ದವು. ಮಾಂಸಭಕ್ಷಕ ಪ್ರಾಣಿಯ ಚೂಪಾದ ಕಣ್ಣಿನಂತಿದ್ದ ಅವಳ ಕಣ್ಣುಗಳು ಮಳೆಯನ್ನು ಒಂದೇ ಸಮನೆ ನೋಡಿ ನೋಡಿ, ದುಃಖದಿಂದ ಸೊರಗಿದ್ದವು. ಅರೆಲಿಯಾನೊ ಸೆಗುಂಡೊ ತನ್ನ ಮನೆಗಿಂತ ಇಲ್ಲಿ ಚೆನ್ನಾಗಿದೆ ಎನ್ನುವ ಕಾರಣಕ್ಕಾಗಿ ಅಲ್ಲದಿದ್ದರೂ ಪೆಟ್ರಾಕೋಟ್ಸ್ ಮನೆಯಲ್ಲಿ ಮೂರು ತಿಂಗಳ ಕಾಲ ಉಳಿದುಕೊಂಡ. ಅವನಿಗೆ ಎಣ್ಣೆ ಸವರಿದ ಬಟ್ಟೆಯನ್ನು ತಲೆ ಮೇಲೆ ಹಾಕಿಕೊಂಡು ಹೋಗಲು ನಿರ್ಧರಿಸುವುದಕ್ಕೆ ಅಷ್ಟ ಸಮಯ ಬೇಕಿತ್ತು. “ಆತುರ ಪಡಬೇಕಾದ ಅವಶ್ಯಕತೆ ಇಲ್ಲ. ಇನ್ನು ಕೆಲವು ಗಂಟೆಗಳಲ್ಲಿ ಎಲ್ಲವೂ ತಿಳಿಯಾಗುತ್ತೆ” ಎಂದು ಆ ಮನೆಯಲ್ಲಿ ಹೇಳಿದಂತೆ ಇಲ್ಲಿಯೂ ಹೇಳಿದ. ಮೊದಲ ವಾರದಲ್ಲಿ ಅವನು ಪರಿಸ್ಥಿತಿಗೆ ಹೊಂದಿಕೊಂಡ. ಕಾಲ ಮತ್ತು ಮಳೆ ಅವನು ಇಟ್ಟುಕೊಂಡಿದ್ದವಳ ಆರೋಗ್ಯದ ಮೇಲೆ ಪ್ರಭಾವವನ್ನು ಬೀರಿತ್ತು. ಕ್ರಮೇಣ ಅವಳಲ್ಲಿ ಹಿಂದಿದ್ದ ಉತ್ಸಾಹ, ಪ್ರಾಣಿಗಳಲ್ಲಿ ಅವಳ ಪ್ರೀತಿಯಿಂದಾಗಿ, ಮತ್ತು ಆಸಕ್ತಿಯಿಂದಾಗಿ ಉಂಟಾದ ಫಲವಂತಿಕೆ, ಇತ್ಯಾದಿಗಳನ್ನು ಗಮನಿಸಿದ. ಒಂದು ರಾತ್ರಿ ಅವಳನ್ನು ಪ್ರೀತಿಯ ಅತ್ಯುತ್ಸಾಹದಿಂದ ಎಚ್ಚರಿಸಿದ. ಪೆಟ್ರಾಕೋಟ್ಸ್ ಸ್ಪಂದಿಸಲಿಲ್ಲ. “ಹೋಗಿ ಮಲಗಿಕೊ ಅಂಥಾದ್ದಕ್ಕೆಲ್ಲಾ ಇದು ಸರಿಯಾದ ಸಮಯವಲ್ಲ” – ಎಂದು ಗೊಣಗುಟ್ಟಿದಳು. ಅರೆಲಿಯಾನೊ ಸೆಗುಂಡೊ ಛಾವಣಿಗೆ ಹೊದಿಸಿದ್ದ ಕನ್ನಡಿಯಲ್ಲಿ ನೋಡಿಕೊಂಡ ಮತ್ತು ಪೆಟ್ರಾಕೋಟ್ಸ್‌ಳನ್ನೂ ನೋಡಿದ. ಬೆನ್ನಹುರಿ, ಸೊರಗಿದ ನರಗಳ ಸುತ್ತ ಹೆಣೆದ ****** ಸಾಲಿನಂತೆ ಇತ್ತು. ಆಗ ಅವನಿಗೆ ಅವಳು ಹೇಳಿದ್ದರ ಅರ್ಥ ಹೊಳೆಯಿತು. ಕಾಲದಿಂದಲ್ಲ, ತಾವೀಗ ಮೊದಲಿನಂತೆ ಆ ಚಟುವಟಿಕೆಗಳಿಗೆ ಸಮರ್ಥರಲ್ಲ ಎಂದುಕೊಂಡ.

ಅರೆಲಿಯಾನೊ ಸೆಗುಂಡೊ ತನ್ನ ಟ್ರಂಕುಗಳೊಂದಿಗೆ ಮನೆಗೆ ಹಿಂತಿರುಗಿದ. ಉರ್ಸುಲಾ ಒಬ್ಬಳೆ ಅಲ್ಲದೆ ಮಕೊಂಡೊದ ಎಷ್ಟೊ ಮಂದಿ ಸಾಯುವುದಕ್ಕೆ ಸಿದ್ಧವಾಗಿ ಮಳೆ ನಿಲ್ಲುವುದನ್ನೇ ಕಾಯುತ್ತಿದ್ದಾರೆ ಎನ್ನುವ ವಿಚಾರ ಅವನಿಗೆ ಮನದಟ್ಟಾಯಿತು. ಅವನು ದಾರಿಯಲ್ಲಿ ಹೋಗುತ್ತಿದ್ದಾಗ ಮನೆಗಳ ಬಾಗಿಲಲ್ಲಿ ಅಂಗಳದಲ್ಲಿ, ಮಾಡುವುದಕ್ಕೆ ಕೆಲಸವಿಲ್ಲದೆ ಕೈಕಟ್ಟಿಕೊಂಡು ಸುಮ್ಮನೆ ನಿರ್ಭಾವುಕತೆಯಿಂದ ಕಾಲ ಸರಿಯುವುದನ್ನೇ ನೋಡುತ್ತಿದ್ದರು. ಮಳೆಯ ಬಗ್ಗೆ ಯೋಚಿಸುತ್ತ ಕುಳಿತುಕೊಳ್ಳುವುದರ ಹೊರತು ಬೇರೇನೂ ಕೆಲಸವಿಲ್ಲದಿದ್ದಾಗ ಕಾಲವನ್ನು ತಿಂಗಳುಗಳಾಗಿ, ದಿನಗಳಾಗಿ, ಗಂಟೆಗಳಾಗಿ

ವಿಭಜಿಸುವುದು ಪ್ರಯೋಜನವಿಲ್ಲದ್ದು ಎಂದುಕೊಂಡರು. ಅರೆಲಿಯಾನೊ ಸೆಗುಂಡೊನನ್ನು ನೋಡಿ, ಸಂತೋಷದಿಂದ ಸ್ವಾಗತಿಸಿದರು. ಅವನು ಮತ್ತೆ ಅವರಿಗಾಗಿ ಆರ್ಕಾಡಿಯೋನ್ ಬಾರಿಸುವುದರಲ್ಲಿದ್ದ. ಆದರೆ ಆ ಮಕ್ಕಳಿಗೆ ವಿಶ್ವಕೋಶದ ಚಿತ್ರಗಳನ್ನು ನೋಡುತ್ತಾ ಕುಳಿತುಕೊಳ್ಳುತ್ತಿದ್ದಾಗಿನ ಉತ್ಸಾಹ ಆರ್ಕಾಡಿಯೋನ್ ನುಡಿಸಿದಾಗ ಇರಲಿಲ್ಲ. ಮತ್ತೆ ಅವರೆಲ್ಲ ಮೆಮೆಯ ಕೋಣೆ ಸೇರಿದರು. ಅರೆಲಿಯಾನೊ ಸೆಗುಂಡೊನ ಕಲ್ಪನೆ ಆಕಾಶ ಬುಟ್ಟಿಯಿಂದ ಮೋಡಗಳ ಮಧ್ಯೆ ಮಲಗುವುದಕ್ಕೆ ಜಾಗ ಹುಡುಕುತ್ತಿದ್ದ ಆನೆಯತ್ತ ಹೊರಳಿತು. ಒಂದು ಸಂದರ್ಭದಲ್ಲಿ ಅವನು ಕುದುರೆ ಏರಿ ವಿಚಿತ್ರವಾದ ಉಡುಪು ತೊಟ್ಟುಕೊಂಡಿದ್ದ. ವ್ಯಕ್ತಿಯನ್ನು ನೋಡಿದಾಗ, ಅವನು ತನಗೆ ಪರಿಚಿತನಂತೆ ಕಾಣಿಸಿದ. ಪರೀಕ್ಷಿಸಿದ ಮೇಲೆ ಅವನು ಕರ್ನಲ್ ಅರೆಲಿಯಾನೊ ಬ್ಯುಂಡಿಯಾನ ಚಿತ್ರವೆಂಬ ನಿರ್ಧಾರಕ್ಕೆ ಬಂದ. ಫರ್ನಾಂಡಾಳಿಗೂ ತೋರಿಸಿದಾಗ, ಅವಳೂ ಕೂಡಾ ಆ ಮುಖ ಕರ್ನಲ್ ಅರೆಲಿಯಾನೊ ಬ್ಯುಂಡಿಯಾನನ್ನು ಮಾತ್ರವೇ ಅಲ್ಲ ಮನೆಯಲ್ಲಿನ ಪ್ರತಿಯೊಬ್ಬರನ್ನೂ ಹೋಲುತ್ತಿದೆ ಎಂದು ಹೇಳಿದಳು. ಆದರೆ ವಾಸ್ತವವಾಗಿ ಅದು ಟಾರ್ಟರ್ ಯೋಧನಾಗಿದ್ದ. ಅಪೋಲೊ ದೇವತೆಯ ವಿಗ್ರಹ, ಹಾವಾಡಿಗರು ಇತ್ಯಾದಿಗಳೊಂದಿಗೆ ಸಮಯ ಕಳೆಯುತ್ತಿದ್ದಾಗ, ಫರ್ನಾಂಡಾ, ಮೂರು ಪೌಂಡು ಒಣಗಿದ ಮಾಂಸ, ಒಂದು ಚೀಲ ಅಕ್ಕಿ ಮಾತ್ರವೆ ಉಳಿದಿದೆ ಎಂದು ಹೇಳಲು ಬಂದಳು.

"ಅದಕ್ಕೆ ನಾನೇನು ಮಾಡಬೇಕಿದೆ?" ಎಂದು ಕೇಳಿದ.

"ನನಗೆ ಗೊತ್ತಿಲ್ಲ, ಅದು ಗಂಡಸರಿಗೆ ಸಂಬಂಧಿಸಿದ್ದು" ಎಂದಳು.

"ಸರಿ, ಮಳೆ ನಿಲ್ಲಲಿ, ಏನಾದರೂ ಮಾಡೋಣ" ಎಂದ.

ಅವನು ವಿಶ್ವಕೋಶ ನೋಡುವುದರಲ್ಲಿ ಎಷ್ಟು ಮಗ್ನನಾಗಿದ್ದನೆಂದರೆ, ಮನೆಯ ಸಮಸ್ಯೆಗಳಾಗಲಿ, ತನಗೆ ಊಟಕ್ಕೆ ಒಂದು ಚೂರು ಮಾಂಸ, ಒಂದು ಹಿಡಿ ಅನ್ನವಷ್ಟೇ ಸಿಕ್ಕಿದ್ದಾಗಲಿ ಅರಿವಿಗೆ ಬರಲಿಲ್ಲ. "ಈಗ ಏನು ಮಾಡೋಕೂ ಸಾಧ್ಯವಿಲ್ಲ. ನಮ್ಮ ಜೀವನಪರ್ಯಂತ ಮಳೆಯೇನೂ ಬರುತ್ತಲೇ ಇರುವುದಿಲ್ಲ" ಎನ್ನುತ್ತಿದ್ದ. ಅಡಿಗೆ ಸಾಮಾನುಗಳು ತೀರಾ ತುರ್ತನ್ನು ಎದುರಿಸಿದಾಗ ಫರ್ನಾಂಡಾಗೆ ಸುಮ್ಮನಿರಲಾಗಿರಲಿಲ್ಲ. ಅವಳ ಮಾಮೂಲಿ ಮಾದರಿಯಲ್ಲಿ ಸಿಟ್ಟು ಸೆಡವು ಆಕ್ರೋಶ, ಕೂಗಾಟಗಳು ತಾರಕಕ್ಕೇರಿದವು. ದಿನೇ ದಿನೇ ಅದೆಲ್ಲ ವಿಪರೀತಕ್ಕೇರಿತು. ಬೆಳಗಾಗುತ್ತಿದ್ದಂತೆ ಗಿಟಾರಿನ ಸಂಗೀತ ಬರಬರುತ್ತಾ ಏರುವಂತೆ ಇವಳ ಕಿರಿಚಾಟವೂ ಏರುತ್ತಿತ್ತು. ಅರೆಲಿಯಾನೊ ಸೆಗುಂಡೊಗೆ ಮರುದಿನ ಬೆಳಿಗ್ಗೆ ಉಪಾಹಾರ ತೆಗೆದುಕೊಳ್ಳುತ್ತಿದ್ದಾಗ, ಮಳೆಗಿಂತ ಜೋರಾಗಿ ದುಂಬಿಯ ಝೇಂಕಾರದ ದನಿ ಕೇಳಿಸಿದಂತೆನಿಸಿ ನೋಡಿದಾಗ ಅದು ಫರ್ನಾಂಡಾಳಿಂದ ಬಂದುದಾಗಿತ್ತು. ತಾನು ರಾಣಿಯಾಗಿ ಬೆಳೆದವಳು. ತನ್ನ ತಂದೆ ತಾಯಿ ಹಾಗೆ ಬೆಳೆಸಿ ಕಡೆಯಲ್ಲಿ ಸೋಮಾರಿ, ಕೆಲಸಕ್ಕೆ ಬಾರದ ಗಂಡನನ್ನು ಕಟ್ಟಿಕೊಂಡು ಇಂತಹ ಹುಚ್ಚರ ಮನೆಯಲ್ಲಿ ಕೆಲಸದವಳಾಗಿ ದುಡಿಯಬೇಕಾದ ಕರ್ಮ ಬಂತು. ತಾನು ದುಡಿದು ದುಡಿದೂ ದೇಹ ಸವೆಸಿ ಹೇಗೋ ಮನೆಯನ್ನು ನಿಭಾಯಿಸುತ್ತಾ ಸಹಿಸುತ್ತಾ ಸಾಯುತ್ತಾ

ಇದ್ದರೆ, ಗಂಡ ತಿನ್ನೋಕೆ ಆಕಾಶದಿಂದ ಉದುರುತ್ತೆ ಅನ್ನೋ ಹಾಗೆ ಕೂತಿರುತ್ತಾನೆ. ಅಷ್ಟೆಲ್ಲಾ ಮಾಡಿ, ದುಡಿಯುತ್ತಿದ್ದರೂ ಯಾರೊಬ್ಬರೂ ಬೆಳಗಾಗುತ್ತಿದ್ದಂತೆ 'ಫರ್ನಾಂಡಾ ರಾತ್ರಿ ಚೆನ್ನಾಗಿ ನಿದ್ದೆ ಮಾಡಿದೆಯಾ? ಸುಪ್ರಭಾತ ನಿನಗೆ ಎಂದು ಹೇಳುವವರಿಲ್ಲ" ಎಂದು ನೊಂದು ನುಡಿಯುತ್ತಿದ್ದಳು. ಅಷ್ಟೇ ಅಲ್ಲ, ಸೌಜನ್ಯಕ್ಕಾದರೂ ಯಾಕೆ ಫರ್ನಾಂಡಾ ಇಷ್ಟೊಂದು ಸೊರಗಿದ್ದಿ ಎಂದು ಕೇಳುವವರು ಆ ಮನೆಯಲ್ಲಿ ಇರಲಿಲ್ಲ. ಕಣ್ಣಿನ ಕೆಳಗೆ ಗೆರೆಗಳು ಮೂಡುತ್ತಿದ್ದು, ಯಾರಾದರೂ ತನ್ನ ಬಗ್ಗೆ ವಿಚಾರಿಸಬಹುದು ಎಂದು ನಿರೀಕ್ಷಿಸಿದ್ದ ಅವಳಿಗೆ ಮನೆಯವರಿಂದ ಯಾವ ರೀತಿಯ ಸಹಾನುಭೂತಿಯೂ ಸಿಗಲಿಲ್ಲ. ಬದಲಾಗಿ ಅವಳಿಗೆ ಮನೆಯವರಿಂದ ಸಿಕ್ಕ ಬಿರುದುಗಳು, ಟೀಕೆ ಟಿಪ್ಪಣಿಗಳು ಒಂದಲ್ಲ ಹಲವಾರು. ಅವಳೊಂದು ತಲೆನೋವು, ಓಬಿರಾಯನ ಕಾಲದ ಅಜ್ಜಿ, ಗೋಡೆ ಮೇಲಿನ ನೀರಹಕ್ಕಿ, ಇತ್ಯಾದಿ ಇತ್ಯಾದಿ ಮಾತುಗಳನ್ನು ತನ್ನ ಹಿಂದೆ ಆಡಿಕೊಳ್ಳುತ್ತಿದ್ದರು. ತನ್ನನ್ನು ಚರ್ಚ್‌ಮೌಸ್, ಕಿಲಾಡಿ, ಆಷಾಢಭೂತಿ, ಕರ್ಮಠಳು ಇತ್ಯಾದಿ ಹೆಸರುಗಳಿಂದ ಕರೆಯುತ್ತಿದ್ದರು. ಅಮರಾಂತಳಂತೂ ಅವಳನ್ನು ಸತ್ತು ಬೂದಿಯಾದರೂ ನಿಜ ಸ್ವರೂಪ ಗೊತ್ತಾಗುವುದಿಲ್ಲ ಎಂದು ಹೇಳುತ್ತಿದ್ದಳು. ದೇವರೇ ಕಾಪಾಡಬೇಕು. ಎಷ್ಟೆಲ್ಲ ಕೆಟ್ಟ ಕೆಟ್ಟ ಮಾತುಗಳನ್ನೆಲ್ಲ, ಆ ಪವಿತ್ರ ತಂದೆಗಾಗಿ ಸಹಿಸಿಕೊಂಡಳು. ಆದರೆ ಈಗ ಸಹಿಸಿಕೊಳ್ಳುವುದು ಅವಳಿಂದ ಸಾಧ್ಯವಾಗಲಿಲ್ಲ. ಅದೂ ಜೋಸ್ ಆರ್ಕಾಡಿಯೊ ಸೆಗುಂಡೊ, 'ಮೇಲ್ನಾಡಿನಿಂದ ಬಂದವರಿಗೆ ಬಾಗಿಲು ತೆರೆದಂದಿನಿಂದಲೇ ಮನೆಯ ವಿನಾಶ ಆರಂಭವಾಯಿತು.' ಇನ್ನು ಅಧಿಕಾರ ಚಲಾಯಿಸುವವಳು ಬಂದಳೆಂದರೆ ಮುಗಿದೇ ಮುಗಿಯಿತು. ಕಾರ್ಮಿಕರನ್ನು ಕೊಲ್ಲುವುದಕ್ಕೆಂದೇ ಸರ್ಕಾರ ಕಳಿಸಿಕೊಟ್ಟ ಮೇಲ್ನಾಡಿಗರ ಜಾತಿಗೇ ಸೇರಿದವರಾಗಿರುವಾಗ ಹೇಳಲೇ ಬೇಕಾದ್ದಿಲ್ಲ. ಅಲ್ಬ್ ಡ್ಯೂಕನ ಮಗಳಾಗಿದ್ದು, ಅದೇ ವಂಶದ ಹೆಣ್ಣಾಗಿದ್ದು, ಅಧ್ಯಕ್ಷರ ಹೆಂಡಿರುಗಳು ನಡುಗುವಂತೆ ಮಾಡಿದಳು. ಅವಳಂಥ ಶುದ್ಧ ರಕ್ತದ ಯೋಗ್ಯ ಹೆಣ್ಣು, ಹನ್ನೊಂದು ಪರ್ಯಾಯ ದ್ವೀಪಗಳಿಗೆ ಸಹಿಹಾಕುವ ಅಧಿಕಾರ ಪಡೆದಿದ್ದ ಮತ್ತು ಆ ಊರಿನಲ್ಲಿ ತುಂಬಿದ್ದ ಗೊಂದಲಗಳ ನಡುವೆ ಅವಳೊಬ್ಬಳೇ ನಿಜವಾದ ಮನುಷ್ಯಳಾಗಿದ್ದಳು. 16 ಬೆಳ್ಳಿ ಪಾತ್ರೆಗಳನ್ನು ನೋಡಿದಾಗ ಅವರು ತಡಬಡಿಸಲಿಲ್ಲ. ಏಕೆಂದರೆ ಅವಳ ವಿಷಯಲಂಪಟಗಂಡ ಅಷ್ಟೊಂದು ಚಾಕು ಮತ್ತು ಫೋರ್ಕುಗಳು ಮನುಷ್ಯರಿಗಲ್ಲ ರಾಕ್ಷಸರಿಗೆ ಎಂದಾಗ, ಹೊಟ್ಟೆ ಹುಣ್ಣಾಗಿ ಸಾಯುವಂತಾಗಲಿ ಎಂದು ಆಲೋಚಿಸಿದ್ದಳು. ಕಣ್ಣು ಮುಚ್ಚಿಕೊಂಡು, ಯಾವಾಗ ಬಿಳಿ ವೈನನ್ನು, ಯಾವ ಗ್ಲಾಸಿನಲ್ಲಿ, ಯಾವ ಕಡೆಯಿಂದ. ಕೆಂಪು ವೈನನ್ನು ಯಾವ ಕಡೆ, ಎಲ್ಲಿಂದ ಯಾವ ಗ್ಲಾಸಿಗೆ ಎನ್ನುವುದನ್ನೂ ಹೇಳಬಲ್ಲವಳಾಗಿದ್ದಳು. ಅಮರಾಂತಾಳಂತೆ ಅಜ್ಞಳಾಗಿರಲಿಲ್ಲ. ಅಮರಾಂತಾಳ ಆತ್ಮಕ್ಕೆ ಶಾಂತಿ ಸಿಗಲಿ. ಅವಳು ಸುಮ್ಮನೆ ಬಿಳಿ ವೈನನ್ನು ದಿನದಲ್ಲಿ ಕೆಂಪು ವೈನನ್ನು ರಾತ್ರಿಯಲ್ಲಿ ಎಂದು ಹೇಳಿಬಿಡುತ್ತಿದ್ದಳಷ್ಟೆ. ಇಡೀ ತೀರ ಪ್ರದೇಶದಲ್ಲಿ, ದೇಹದ ಅಗತ್ಯಗಳನ್ನು ಚಿನ್ನದ ಮೂತ್ರ ಪಾತ್ರೆಯಲ್ಲಿ ತೀರಿಸಿಕೊಳ್ಳುತ್ತಿದ್ದವಳು ಅವಳೊಬ್ಬಳೇ ಎನ್ನುವ ಹೆಮ್ಮೆ ಅವಳದಾಗಿತ್ತು. ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಅವನ ಸಹಜ ವಿನೋದ ಪ್ರವೃತ್ತಿಯಿಂದ ಅವಳಿಗೆ ಈವೊಂದು ಸೌಲಭ್ಯ ಸಿಕ್ಕದ್ದಾದರೂ ಹೇಗೆ? ಯಾವುದೇ ಪಾತ್ರೆಯಾದರೂ ಹೇಲು ಒಂದೇ ಅಲ್ಲದೆ ಬೇರೆಯಾಗುವುದಿಲ್ಲವಲ್ಲ ಎಂದು ಲೇವಡಿ ಮಾಡಿದ. ಮತ್ತೊಮ್ಮೆ ಆಕಸ್ಮಿಕವಾಗಿ

ಅವಳ ಮಗಳು ಅವಳು ಹೇತದ್ದನ್ನು ನೋಡಿ. ಪಾತ್ರೆ ಬಂಗಾರದಾಗಿದ್ದರೂ ಒಳಗಿನದು ಮೂತ್ರ ಅಮೇಧ್ಯವೇ ಅದರಲ್ಲೂ ಮೇಲ್ನಾಡಿಗರ ಈ ಹೇಲು ಇನ್ನೂ ಅಧ್ವಾನ್ನ ಅಂತ ಸ್ವಂತ ಮಗಳೇ ತೀರ್ಮಾನಿಸಿದಾಗ, ಇನ್ನು ಮನೆಯವರಿಂದ ಯಾವ ರೀತಿಯ ನಿರೀಕ್ಷೆ ಇಟ್ಟುಕೊಳ್ಳಬಹುದಾಗಿತ್ತು. ಆದರೆ ಕಡೆ ಪಕ್ಷ ಸ್ವಂತ ಗಂಡನಿಂದಲಾದರೂ ಸ್ವಲ್ಪಮಟ್ಟಿನ ಸಹಾನುಭೂತಿಯನ್ನು ನಿರೀಕ್ಷಿಸಬಹುದಲ್ಲವೆ. ಅಲ್ಲದೆ ಅವನು ಬರಿಗಂಡ ಮಾತ್ರವಲ್ಲ, ಬಾಳ ಸಂಗಾತಿ. ನ್ಯಾಯಬದ್ಧವಾಗಿ ತನ್ನನ್ನು ಸೂರೆಮಾಡುವವನು. ಜೊತೆಗೆ ತನ್ನ ಸ್ವ ಇಚ್ಛೆಯಿಂದಲೆ ಎಲ್ಲ ಜವಾಬ್ದಾರಿಗಳೊಂದಿಗೆ ತನ್ನ ತವರಿನಿಂದ ಕರೆತಂದವನೂ ಅವನೆ. ಸುಖವಾಗಿ ಯಾವುದೇ ಕೊರತೆಯಿಲ್ಲದೆ ರಾಣಿಯಂತೆ ಬಾಳಿದವಳು. ಶವಗುಚ್ಛಗಳನ್ನು ಮಾಡುತ್ತಿದ್ದುದು ಸಮಯ ಕಳೆಯಲೆಂದೇ ಹೊರತು ಬೇರೆ ಕಾರಣಕ್ಕಲ್ಲ. ಅವಳ ಅಜ್ಜ ಕೂಡ ತನ್ನ ಸಹಿಯುಳ್ಳ ಪತ್ರವನ್ನು, ತನ್ನುಂಗುರದ ಮುದ್ರೆಯಿಂದ ಸೀಲುಮಾಡಿ ಕಳಿಸಿದ್ದು ಕೂಡಾ. ತನ್ನ ಮೊಮ್ಮಗಳ ಕೈಗಳು ಇರುವುದು ಕ್ಲ್ಯಾವಿಕಾರ್ಡ್ ನುಡಿಸುತ್ತಾ ಸುಖವಾಗಿರಲು ಮಾತ್ರವೆ ಹೊರತು ಪ್ರಪಂಚದಲ್ಲಿನ ಬೇರೆ ಕಷ್ಟಕರ ಕೆಲಸಗಳಿಗೆ ಅಲ್ಲ ಎನ್ನುವುದನ್ನು ತಿಳಿಸುವುದಕ್ಕಾಗಿಯೇ. ಆದರೆ ಅವಳ ಗಂಡ ಎಲ್ಲ ಎಚ್ಚರಿಕೆ, ಆದೇಶಗಳೊಂದಿಗೆ ಕರೆದು ತಂದು ಇಲ್ಲಿ ಉರಿಯುವ ಬೆಂಕಿಗೆ ಹಾಕಿದ. ಯಹೂದಿಗಳ ಸುಗ್ಗಿಯ ಹಬ್ಬದ ಪ್ರಯುಕ್ತ ಮಾಡುವ ಉಪವಾಸದ ಅವಧಿ ಮುಗಿಯುವುದಕ್ಕೆ ಮೊದಲೇ ಅಲೆದಾಡುವ ಟ್ರಂಕುಗಳು, ಅಕಾರ್ಡಿಯೋನ್ ವಾದ್ಯವನ್ನು ತೆಗೆದುಕೊಂಡು, ಹಿಂಬದಿಯಿಂದಷ್ಟೇ ನೋಡಬಹುದಾಗಿದ್ದ ಹಾದರಗಿತ್ತಿಯ ಜೊತೆ ಹಾದರ ಮಾಡಲು ಹೊರಟುಬಿಟ್ಟ. ನೋಡಲು ಚೆನ್ನಾಗಿಲ್ಲದಿದ್ದರೂ ಹಿಂಭಾಗವನ್ನು ಚೆನ್ನಾಗಿ ಬೆಳೆಸಿ ಕುಣಿಸಿದರೆ ಅವಳ ಹಿಂದೆ ಬಿದ್ದಾರೆಂದು, ತಾನು ಯಾರೆಂದು ತಿಳಿಯುತ್ತಾರೆಂದು ನಂಬಿದವಳಾಗಿದ್ದಳೆಂದು ಕೆಲವರು ಹೇಳುತ್ತಿದ್ದರು. ಅವಳು ದೈವ ಭೀತಿಯುಳ್ಳವಳೂ, ಅವನ ನಿಯಮ ಪಾಲಕಳೂ ಆದೇಶದಂತೆ ನಡೆದುಕೊಳ್ಳುವವಳೂ ಆಗಿದ್ದುದರಿಂದ ಅವನಿಗೆ ಬೇರೆಯವರ ಜೊತೆ ಹುಚ್ಚಾಟ, ದೊಂಬರಾಟ ನಡೆಸುವಂತೆ ಅವಳೊಂದಿಗೆ ನಡೆಯಲು ಆಗುತ್ತಿರಲಿಲ್ಲ. ಆದರೆ ಇನ್ನೊಬ್ಬಳು ಏನು ಮಾಡಲೂ ಸಿದ್ಧವಾಗಿರುತ್ತಿದ್ದಳು. ಫ್ರೆಂಚ್ ಹೆಣ್ಣುಗಳಂತೆ, ಕೆಲವೊಮ್ಮೆ ಅವರಿಗೂ ಮೀರಿ ನಡೆದುಕೊಳ್ಳುತ್ತಿದ್ದಳು. ಕಡೆ ಪಕ್ಷ ಅವರು ಮನೆಮುಂದೆ ಕೆಂಪು ದೀಪ ಹಾಕಿಕೊಳ್ಳುವ ಮಟ್ಟಕ್ಕೆ ಪ್ರಾಮಾಣಿಕರಾಗಿದ್ದರು. ಆದರೆ ಡೋನಾ ರೆನಾಟಾ ಆರ್ಗೋಟೆ ಮತ್ತು ಡಾನ್ ಫರ್ನಾಂಡೊ ಡೆಲ್ ಕಾರ್ಪಿಯೋರ ಒಬ್ಬಳೇ ಮುದ್ದಿನ ಮಗಳಾದ ಅವಳೂ ಹಾಗೇ ಮಾಡಬೇಕಿತ್ತು. ಅದರಲ್ಲಿಯೂ ಡಾನ್ ಫರ್ನಾಂಡೊ ಡೆಲ್ ಕಾರ್ಪಿಯೊ ನೇರನುಡಿಯ, ಅಪ್ಪಟ ಕ್ರಿಶ್ಚಿಯನ್ ಆದ, ಮತ್ತು ಸಾವಿನ ನಂತರವೂ ಗೋರಿಯಲ್ಲಿ ಚರ್ಮ ಕೆಡದಂತೆ, ಕಣ್ಣಲ್ಲಿ ಜೀವವಿರಿಸಿಕೊಂಡೇ, ಒಂದಿಷ್ಟೂ ಹಾಳಾಗದಂತೆ ಉಳಿಯುವವರನ್ನು ದೇವರಿಂದ ನೇರವಾಗಿ ಪಡೆದಿದ್ದ ಎಂದು ಹೇಳಿದಾಗ,

"ಅದು ಸತ್ಯ ಅಲ್ಲ, ಅವನನ್ನು ಇಲ್ಲಿಗೆ ತಂದಾಗಲೇ ಗಬ್ಬು ನಾರುತ್ತಿದ್ದ" ಎಂದು ಅವಳ ಮಾತಿನ ನಡುವೆ ಹೇಳಿದ.

ಅವಳು ತಪ್ಪಿಗೆ ಸಿಕ್ಕಿಹಾಕಿಕೊಳ್ಳುವವರೆಗೆ ಅವಳ ಮಾತುಗಳನ್ನು ತಾಳ್ಮೆಯಿಂದ ಕೇಳಿಸಿಕೊಳ್ಳುತ್ತಲೇ ಇದ್ದ. ಆದರೆ ಫರ್ನಾಂಡಾ ಅವನ ಬಗ್ಗೆ ತಲೆ ಕೆಡಿಸಿಕೊಳ್ಳಲಿಲ್ಲ. ಸ್ವಲ್ಪ ದನಿ ತಗ್ಗಿಸಿದಳು ಅಷ್ಟೆ.

ಆ ದಿನ ರಾತ್ರಿ ಊಟದ ಸಮಯದಲ್ಲಿ ರೇಗಾಟ ಕೂಗಾಟ ತೀವ್ರಸ್ಥಾಯಿ ತಲುಪಿದಾಗ, ಮಳೆಯ ಸದ್ದೇ ಕೇಳಿಸುತ್ತಿರಲಿಲ್ಲ. ಅರೆಲಿಯಾನೊ ಸೆಗುಂಡೊ ತಲೆಬಗ್ಗಿಸಿಕೊಂಡು ಸ್ವಲ್ಪ ಮಾತ್ರವೇ ಊಟ ಮಾಡಿದ. ನಂತರ ತನ್ನ ರೂಮಿಗೆ ಹೊರಡುಹೋದ. ಮರುದಿನ ಉಹಾರದ ಹೊತ್ತಿನಲ್ಲಿ ಫರ್ನಾಂಡಾ ನಡುಗುತ್ತಿದ್ದಳು. ಸರಿಯಾಗಿ ನಿದ್ದೆ ಮಾಡಿರಲಿಲ್ಲವೆನಿಸಿತು. ಹಿಂದಿನ ದಿನದ ರೇಗಾಟ ಕೂಗಾಟಗಳಿಂದ ಪೂರ್ತಿಯಾಗಿ ದಣಿದು ಹೋಗಿದ್ದುದು ಕಾಣಿಸುತ್ತಿತ್ತು. ಆದರೆ ಗಂಡ ಬೇಯಿಸಿದ ಮೊಟ್ಟೆಯೊಂದನ್ನಾದರೂ ಸಾಧ್ಯವಾದರೆ ಸಿಗುವುದೇನು ಎಂದು ಕೇಳಿದಾಗ ಅವಳೇನೂ ಉತ್ತರ ಕೊಡಲಿಲ್ಲ. ಮೊಟ್ಟೆಗಳು ವಾರದ ಹಿಂದೆಯೇ ಖಾಲಿಯಾಗಿದ್ದವು. ತಮ್ಮ ಹೊಟ್ಟೆಯ ಚಿಂತೆಯೊಂದನ್ನು ಬಿಟ್ಟರೆ ಬೇರೆ ಚಿಂತೆಯಿಲ್ಲದೆ ದೊಡ್ಡ ಮನುಷ್ಯರ ಹಾಗೆ ನಡೆದುಕೊಳ್ಳುವ ಗಂಡಸರ ಬಗ್ಗೆ ಅಸಹ್ಯವೆನಿಸಿತು. ಅರೆಲಿಯಾನೊ ಸೆಗುಂಡೊ ಮಕ್ಕಳನ್ನು ಮಾಮೂಲಿನಂತೆ ವಿಶ್ವಕೋಶವನ್ನು ನೋಡಲು ಕರೆದುಕೊಂಡು ಹೋದ. ಫರ್ನಾಂಡಾ ರೂಮನ್ನು ಸರಿಮಾಡುವಂತೆ ನಟಿಸುತ್ತಾ ತಾನೂ ಹೋದಳು. ತಾನು ಗೊಣಗುಟ್ಟುವುದನ್ನು ಕೇಳಿಸಿಕೊಳ್ಳಲೆಂದೇ ಹಾಗೆ ಮಾಡಿದಳು. ಅವನಿಗೂ ಪಾಪದ ಮಕ್ಕಳಿಗೆ ವಿಶ್ವಕೋಶದಲ್ಲಿ ಇರುವುದು ಕರ್ನಲ್ ಅರೆಲಿಯಾನೊ ಬ್ಯುಂಡಿಯಾನ ಚಿತ್ರ ಎಂದು ಹೇಳಲು ಸಾಧ್ಯವಾಗಲಿಲ್ಲ. ಮಧ್ಯಾಹ್ನದ ಹೊತ್ತಿನಲ್ಲಿ ಮಕ್ಕಳು ನಿದ್ದೆ ಮಾಡುತ್ತಿದ್ದಾಗ ಅರೆಲಿಯಾನೊ ಸೆಗುಂಡೊ ನಡುಮನೆಯಲ್ಲಿ ಕುಳಿತಿದ್ದ. ಫರ್ನಾಂಡಾ ಅಲ್ಲಿಗೂ ಗಂಡನನ್ನು ಹಿಂಬಾಲಿಸಿ ಬಂದಳು. ಅವನನ್ನು ಉದ್ರೇಕಿಸುತ್ತ, ಕಟಕಿಯಾಡುತ್ತ, ಅವನನ್ನು ಏನೇನೋ ಅನ್ನುತ್ತಾ, ನೊಣದ ಹಾಗೆ ಗುಂಯ್ ಗುಡುತ್ತಲೇ ಇದ್ದು, ಮನೆಯಲ್ಲಿ ತಿನ್ನೋದಕ್ಕೆ ಕಲ್ಲುಗಳನ್ನು ಬಿಟ್ಟರೆ ಬೇರೆ ಏನೂ ಇಲ್ಲದಿರುವಾಗ ಗಂಡ ಪರ್ಷಿಯಾದ ಸುಲ್ತಾನನ ಹಾಗೆ ಕುಳಿತುಕೊಂಡು ಮಳೆ ಬರುವುದನ್ನು ನೋಡುತ್ತಾ ಇದ್ದಾನೆಂದು, ಅವನೊಬ್ಬ ನಿಷ್ಪ್ರಯೋಜಕನೆಂದೂ, ಹೆಂಗಸರ ಸಂಪಾದನೆಯಲ್ಲಿ ಬದುಕುತ್ತಿರುವವನೆಂದೂ ಹಿಯಾಳಿಸಿ ಮಾತನಾಡುತ್ತಿದ್ದಳು. ಅರೆಲಿಯಾನೊ ಸೆಗುಂಡೊ ಏನೊಂದೂ ಮಾತನಾಡದೆ ಸುಮ್ಮನೆ ಎರಡುಗಂಟೆಗಳ ಕಾಲ ಕಿವುಡನಂತೆ ಕುಳಿತಿದ್ದ. ಅವಳ ತಮಟೆ ಧ್ವನಿಯನ್ನು ಇನ್ನು ಸಹಿಸಿಕೊಳ್ಳಲು ಸಾಧ್ಯವಿಲ್ಲವೆನಿಸಿದಾಗ, ತಡ ಮಧ್ಯಾಹ್ನದ ಸಮಯದಲ್ಲಿ, ತಲೆ ಸಿಡಿಯುತ್ತಿರುವಾಗ, "ದಯವಿಟ್ಟು ಬಾಯಿ ಮುಚ್ಚು" ಎಂದು ಕೇಳಿಕೊಂಡ.

ಫರ್ನಾಂಡಾ ಪ್ರತಿಯಾಗಿ ಇನ್ನಷ್ಟು ದನಿಯೇರಿಸಿದಳು. "ಬಾಯಿ ಮುಚ್ಚಬೇಕಾದ್ದಕ್ಕೆ ಕಾರಣವಿಲ್ಲ, ಯಾರಿಗಾದರೂ ಕೇಳಿಸಿಕೊಳ್ಳೋಕೆ ಆಗೋದಿಲ್ಲವಾದರೆ, ಎಲ್ಲಿಗಾದರೂ ಬೇರೆ ಕಡೆ ಹೋಗಲಿ" ಎಂದಳು. ಅರೆಲಿಯಾನೊ ಸೆಗುಂಡೊಗೆ ತಾಳ್ಮೆ ಇನ್ನು ಸಾಧ್ಯವಾಗಲಿಲ್ಲ. ನಿಧಾನವಾಗಿ ಎದ್ದ, ಕ್ರಮಬದ್ಧವಾಗಿ, ವ್ಯವಸ್ಥಿತವಾಗಿ ಉಂಟಾಗುತ್ತಿದ್ದ ಸಿಟ್ಟಿನಿಂದ ಬೆಗೊನಿಯಾ ಹೂಕುಂಡಗಳನ್ನು, ಮತ್ತೆ ಇತರೆ ಹೂಗಿಡಗಳಿದ್ದ ಕುಂಡಗಳನ್ನೂ,

ಒಂದೊಂದಾಗಿ ಎತ್ತಿ ನೆಲದಮೇಲೆ ಕುಕ್ಕಿದ. ಫರ್ನಾಂಡಾಳಿಗೆ ಭಯವಾಯಿತು. ತನ್ನ ಸಿಟ್ಟು ಅರಚಾಟಗಳು ಎಷ್ಟರಮಟ್ಟಿಗೆ ಆಂತರಿಕ ಶಕ್ತಿಯನ್ನು ಪ್ರಚೋದಿಸಬಲ್ಲವು ಎಂಬುದರ ಅರಿವು ಅಲ್ಲಿಯವರೆಗೆ ಅವಳಿಗಿರಲಿಲ್ಲ. ಆದರೆ ಈಗ ಅದನ್ನು ಸರಿಪಡಿಸುವುದಕ್ಕೆ ಕೈಮೀರಿ ಹೋಗಿತ್ತು. ಈ ವಿಧ್ವಂಸಕ ಕ್ರಿಯೆಯಿಂದ ದೊರೆಯುತ್ತಿದ್ದ ಸಮಾಧಾನದಿಂದ ಮತ್ತಷ್ಟು ಸ್ಫೂರ್ತಿಗೊಂಡು, ಚೈನಾ ಕಪಾಟಿನಲ್ಲಿ ಇರಿಸಿದ್ದ ಚೈನಾ ಪಾತ್ರೆಗಳನ್ನು, ಯಾವುದೇ ಆತುರವಿಲ್ಲದೆ ನಿಧಾನವಾಗಿ ಒಂದೊಂದನ್ನೇ ನೆಲದ ಮೇಲೆ ಕುಕ್ಕಿದ. ಬ್ಯಾಂಕ್ ನೋಟುಗಳನ್ನು ಹೇಗೆ ಅಚ್ಚುಕಟ್ಟಾಗಿ ವ್ಯವಸ್ಥಿತವಾಗಿ ಗೋಡೆಗಳಿಗೆ ಅಂಟಿಸಿದನೆ ಅದೇ ರೀತಿಯಲ್ಲಿ ಒಡೆಯುವುದರಲ್ಲಿ ಮುಂದುವರೆದ ನಂತರ ಬೊಹೆಮಿಯನ್ ಗಾಜಿನ ವಸ್ತುಗಳನ್ನು ಗೋಡೆಗಳಿಗೆ ಅಪ್ಪಳಿಸತೊಡಗಿದ. ಕೈಯಿಂದ ಪೈಂಟ್ ಮಾಡಿದ್ದ ಹೂದಾನಿಗಳ, ಹೂಗಳಿಂದ ತುಂಬಿದ್ದ ದೋಣಿಗಳಲ್ಲಿನ ಸುಂದರಿಯರ ಚಿತ್ರಗಳು ಸುಂದರ ಫ್ರೇಮುಗಳುಳ್ಳ ಕನ್ನಡಿಗಳು – ಮುರಿದುಹೋಗುವಂತಹ ಎಲ್ಲ ವಸ್ತುಗಳು – ನಡುಮನೆಯಲ್ಲಿರಲಿ, ಅಡುಗೆ ಮನೆಯಲ್ಲಿರಲಿ, ಒಂದೊಂದನ್ನಾಗಿ ಮುಗಿಸಿದ. ಅಡುಗೆ ಮನೆಯಲ್ಲಿದ್ದ ಮಣ್ಣಿನ ಹೂಜಿಯನ್ನು ಎತ್ತಿ ಒಗೆದಾಗ ನಡುಮನೆಯಲ್ಲಿ ದೊಡ್ಡ ಸ್ಫೋಟದ ಶಬ್ದವಾಯಿತು. ನಂತರ ಅವನು ಕೈ ತೊಳೆದುಕೊಂಡು, ಎಣ್ಣೆ ಬಟ್ಟೆಯನ್ನು ತಲೆ ಮೇಲೆ ಹಾಕಿಕೊಂಡು ಹೊರಟು, ಮಧ್ಯರಾತ್ರಿಯ ಹೊತ್ತಿಗೆ, ಒಣಗಿದ ಮಾಂಸ, ಅಕ್ಕಿ ಚೀಲಗಳು, ಬಾಳೆ ಗೊನೆಗಳೊಂದಿಗೆ ಹಿಂತಿರುಗಿದ. ಅಂದಿನಿಂದ ಆಹಾರಕ್ಕೆ ಕೊರತೆಯಿರಲಿಲ್ಲ.

ಅಮರಾಂತಾ ಉರ್ಸುಲಾ ಮತ್ತು ಪುಟ್ಟ ಅರೆಲಿಯಾನೊ ಮಳೆಗಾಲವನ್ನು ಸಂತಸದ ಕಾಲವೆಂದು ನೆನಪಿನಲ್ಲಿರಿಸಿಕೊಂಡಿರುತ್ತಾರೆ. ಫರ್ನಾಂಡಾಳ ಭಯದ ನಡುವೆಯೂ ಅಂಗಳದಲ್ಲಿ ಕೆಸರೆರೆಚಾಟವಾಡುತ್ತಿದ್ದಳು. ಹಲ್ಲಿಗಳನ್ನು ಕತ್ತರಿಸುತ್ತಿದ್ದರು. ಸಾಂತಾ ಸೋಫಿಯಾ ದ ಲಾ ಪೀದಾದಳು ನೋಡದಿರುವಾಗ ಚಿಟ್ಟೆಗಳ ಧೂಳನ್ನು ವಿಷವೆಂದು, ಬೆರಸುತ್ತಿದ್ದಂತೆ ತೋರಿಸಿಕೊಳ್ಳುತ್ತಿದ್ದರು. ಉರ್ಸುಲಾ ಅವರಿಗೆ ಅತಿ ಪ್ರೀತಿಯ ಆಟಿಗೆಯಂತೆ ಇದ್ದಳು. ಅವಳನ್ನು ಮುರಿದುಹೋದ ದೊಡ್ಡ ಬೊಂಬೆಯಂತೆ ಭಾವಿಸಿ ಬಣ್ಣದ ಬಟ್ಟೆಯಲ್ಲಿ ಸುತ್ತಿ ಹಿಂದಕ್ಕೆ ಮುಂದಕ್ಕೆ ಹೊತ್ತು ಆಟ ಆಡಿಸುತ್ತಿದ್ದರು. ಮಸಿಯನ್ನು ಮುಖಕ್ಕೆ ಬಳಿಯುತ್ತಿದ್ದರು. ಒಂದು ಸಲವಂತೂ, ಅವರು ಇನ್ನೇನು, ಕಪ್ಪೆಗಳ ಕಣ್ಣುಕಿತ್ತಂತೆ ದಬ್ಬಳದಿಂದ ಉರ್ಸುಲಾಳ ಕಣ್ಣು ಕೀಳುವುದರಲ್ಲಿದ್ದರು. ಎಲ್ಲೆಲ್ಲೋ ಹೋಗುತ್ತಿದ್ದ ಅವಳ ಜ್ಞಾನ, ಅವರಿಗೆ ಕೊಟ್ಟಷ್ಟು ಖುಷಿ ಬೇರೆ ಯಾವುದರಿಂದಲೂ ಸಾಧ್ಯವಿರಲಿಲ್ಲ. ಮಳೆಯ ಮೂರನೆ ವರ್ಷದಲ್ಲಿ ಅವಳ ಮನಸ್ಸಿಗೆ ಏನಾಯಿತೊ, ದಿನೇ ದಿನೇ ವಾಸ್ತವವನ್ನು ಗ್ರಹಿಸುವ ಶಕ್ತಿಯನ್ನು ಕಳೆದುಕೊಳ್ಳುತ್ತಿದ್ದಳು. ವರ್ತಮಾನವನ್ನು ಬಹಳ ಹಿಂದಿನಕಾಲವೆಂದು ಗೊಂದಲಕ್ಕೆ ಈಡಾಗುತ್ತಿದ್ದಳು. ಒಂದು ಸಂದರ್ಭದಲ್ಲಿ, ಒಂದು ಶತಮಾನದ ಹಿಂದೆಯೇ ಸತ್ತು ಸಮಾಧಿಯಾಗಿದ್ದ ಅವಳ ಮುತ್ತಾತ ಪೆಟ್ರೊನಿಲಾ ಇಗುವಾರನ್‌ನ ಸಾವಿಗೆ ಮೂರು ದಿನ ಒಂದೇ ಸಮನೆ ಅಳುತ್ತಿದ್ದಳು. ಅವಳು ಎಂಥ ಚಿತ್ತಭ್ರಮಿತ ಸ್ಥಿತಿಯಲ್ಲಿ ಇದ್ದಳೆಂದರೆ ಪುಟ್ಟ ಅರೆಲಿಯೊನನ್ನು, ಪಿಸ್ ನೋಡಲು ಕರೆದೊಯ್ದಿದ್ದಾಗಿನ ಕರ್ನಲ್ ಅರೆಲಿಯಾನೊ ಎಂದು ಭಾವಿಸಿದಳು. ಆ ಸಮಯದಲ್ಲಿ ಸೆಮಿನರಿನಲ್ಲಿದ್ದ ಜೋಸ್ ಆರ್ಕಾಡಿಯೊನನ್ನು ಜಿಪ್ಸಿಗಳ ಹಿಂದೆ ಹೋಗಿದ್ದ ತನ್ನ ಮೊದಲ ಮಗನೆಂದು ಭಾವಿಸಿದಳು. ಅವಳು

ಮನೆಯವರ ಬಗ್ಗೆ, ಸತ್ತವರು ಬೇರೆ ಬೇರೆ ಕಾಲದಲ್ಲಿ ಇದ್ದವರು ಎಲ್ಲರ ಬಗ್ಗೆ ಎಷ್ಟು ಮಾತಾಡಿದಳೆಂದರೆ ಮಕ್ಕಳು ಅವರ ಬಗ್ಗೆ ಕಾಲ್ಪನಿಕ ಚಿತ್ರಗಳನ್ನು ಕಟ್ಟಿಕೊಳ್ಳಬೇಕಾಯಿತು. ಕೆಂಪುಕರವಸ್ತ್ರ ಕಟ್ಟಿಕೊಂಡು, ಕೂದಲಲ್ಲಿ ಬೂದಿ ತುಂಬಿಕೊಂಡು ಮಂಚದ ಮೇಲೆ ಕುಳಿತುಕೊಂಡು, ಎದುರಿಗಿಲ್ಲದ ನೆಂಟರ ಜೊತೆ ಮಾತಾಡುತ್ತಿದ್ದರು. ಸಂತೋಷವಾಗಿ ಇರುತ್ತಿದ್ದುದನ್ನು ಮಕ್ಕಳು ವಿವರವಾಗಿ, ಅವರನ್ನು ತಾವೇ ಸ್ವತಃ ನೋಡಿದವರಂತೆ, ಬಣ್ಣಿಸಿದರು. ತಾನು ಹುಟ್ಟುವುದಕ್ಕೂ ಮೊದಲಿನ ಘಟನೆಗಳನ್ನು ಕುರಿತು ಹಿಂದಿನವರ ಜೊತೆ ಮಾತಾಡುತ್ತಿದ್ದಳು. ಅವರು ತಿಳಿಸುತ್ತಿದ್ದ ಸುದ್ದಿಗಳಿಂದ ಸಂತಸಗೊಳ್ಳುತ್ತಿದ್ದಳು. ಅತಿಥಿಗಳಿಗಿಂತ ಈಚಿನವರ ಸಾವಿಗಾಗಿ ದುಃಖಿಸುತ್ತಿದ್ದಳು. ಪ್ರೇತಗಳ ಭೇಟಿ, ಅವರೊಂದಿಗಿನ ಮಾತುಕತೆಯ ನಡುವೆ ಮಕ್ಕಳು ಒಂದು ವಿಷಯವನ್ನು ಬೇಗನೆ ಗ್ರಹಿಸಿದರು. ಉರ್ಸುಲಾ ಬಂದವರಿಂದ, ಮನುಷ್ಯ ಪ್ರಮಾಣದ ಸಂತ ಜೋಸಫನ ವಿಗ್ರಹವನ್ನು ಮನೆಗೆ ತಂದು ಮಳೆ ನಿಲ್ಲುವವರೆಗೆ ಇರಿಸಿಕೊಳ್ಳಲು ಹೇಳಿದವರು ಯಾರೆಂದು ತಿಳಿಯುವುದಕ್ಕಾಗಿ, ಪ್ರಶ್ನೆಗಳನ್ನು ಕೇಳುತ್ತಿದ್ದುದನ್ನು ಗಮನಿಸಿದರು. ಈ ರೀತಿಯಲ್ಲಿಯೇ ಅರೆಲಿಯಾನೊ ಸೆಗುಂಡೊಗೆ ಆ ಅಡಗಿರುವ ಸಂಪತ್ತಿನ ರಹಸ್ಯ ಉರ್ಸುಲಾಗೆ ಮಾತ್ರವೇ ತಿಳಿದಿದೆ ಎನ್ನುವುದು ಗೊತ್ತಾಯಿತಾದರೂ ಅದಕ್ಕೆ ಸಂಬಂಧಿಸಿದ ಪ್ರಶ್ನೆಗಳು, ಅದರ ನಿರ್ವಹಣೆ ಕುರಿತ ಆಲೋಚನೆಗಳು ಪ್ರಯೋಜನಕ್ಕೆ ಬರಲಿಲ್ಲ. ಆ ಚಿತ್ತಭ್ರಮಣದ ನಡುವೆಯೂ ಅವಳ ಪ್ರಜ್ಞೆಯಡಿಯಲ್ಲಿ ಅದರ ಕುರಿತಾದ ರಹಸ್ಯವನ್ನು ರಕ್ಷಿಸಿಕೊಳ್ಳುವ ಸಾಮರ್ಥ್ಯವಿದ್ದಂತೆ ತೋರಿತು. ಆ ಚಿನ್ನದ ಬಗ್ಗೆ ಸರಿಯಾದ ಪುರಾವೆ ಒದಗಿಸಿ ತಾನೆ ಅದರ ಮಾಲಿಕನೆಂದು ತೋರಿಸಿಕೊಟ್ಟಾಗಲೇ, ರಹಸ್ಯವನ್ನು ತಿಳಿಸುವವಳಾಗಿದ್ದಳು. ಅವಳು ಬಹಳ ಜಾಣೆಯಾಗಿದ್ದಳು. ಅರೆಲಿಯಾನೊ ಸೆಗುಂಡೊ ತನ್ನ ಕಡೆಯವನೊಬ್ಬನನ್ನು ಅದರ ಮಾಲಿಕ ತಾನೇ ಎಂದು ಹೇಳುವಂತೆ, ಹೇಳಿ ಕಳುಹಿಸಿದಾಗ ಒಂದೇ ನಿಮಷದಲ್ಲಿ ಒಗಟಿನ ಪ್ರಶ್ನೆಗಳಿಂದ ಅವನನ್ನು ತಬ್ಬಿಬ್ಬಾಗಿ ಮಾಡಿದಳು. ಉರ್ಸುಲಾ ಈ ರಹಸ್ಯವನ್ನು ಹೊತ್ತೇ ಸಾಯುತ್ತಾಳೆಂದೆನಿಸಿ ಅರೆಲಿಯಾನೊ ಸೆಗುಂಡೊ ಡ್ರೈನೇಜ್ ವ್ಯವಸ್ಥೆಯಾಗಬೇಕೆಂದು ಅಂಗಳದಲ್ಲಿ, ಹಿತ್ತಲಲ್ಲಿ ಎಲ್ಲಾ ಕಡೆ ಅಗೆಸಿ, ತಾನೇ ಖುದ್ದಾಗಿ, ಕಬ್ಬಿಣದ ಹಾರೆಯಿಂದ, ಲೋಹ ಪತ್ತೆ ಉಪಕರಣಗಳಿಂದ ಚಿನ್ನದಂಥ ವಸ್ತುವೇನಾದರೂ ಕಾಣುವುದೇನೊ ಎಂದು ಎಲ್ಲಾ ಕಡೆ ನೆಲವನ್ನು ಶೋಧಿಸಿದ. ಮೂರುತಿಂಗಳು ಕಷ್ಟಪಟ್ಟು ಹುಡುಕಿದರೂ ಏನೂ ಪತ್ತೆಯಾಗಲಿಲ್ಲ. ನಂತರ ಅವನು ಕಾರ್ಡುಗಳ ಮೂಲಕವಾದರೂ ಸಾಧ್ಯವಾಗುವುದೇನೋ ಎಂದು ಭಾವಿಸಿ ಪಿಲಾರ್ ತರ್ನಿರಾಳ ಬಳಿಗೆ ಹೋದ. ಉರ್ಸುಲಾ ಸ್ವತಃ ತಾನೇ ಕಾರ್ಡು ತೆಗೆಯದ ಹೊರತು, ಪ್ರಯತ್ನ ಏನೇ ಮಾಡಿದರೂ ಪ್ರಯೋಜನವಿಲ್ಲ ಎಂದು ಹೇಳಿದಳು. ಆದರೆ ಆ ಸಂಪತ್ತಿನ ಮೊತ್ತ ಏಳುಸಾವಿರದ ಇನ್ನೂರ ಹದಿನಾಲ್ಕು ನಾಣ್ಯಗಳೆಂದು ಕರಾರುವಾಕ್ಕಾಗಿ ಹೇಳಿದಳು. ಅದನ್ನು ಮೂರು ಕ್ಯಾನ್‌ವಾಸ್ ಚೀಲಗಳಲ್ಲಿ ತುಂಬಿ ತಾಮ್ರದ ಕಂಬಿಯಿಂದ ಚೀಲಗಳ ಬಾಯಿ ಕಟ್ಟಿ ಮುನ್ನೂರ ಎಂಬತ್ತೆಂಟು ಅಡಿ ತ್ರಿಜ್ಯವುಳ್ಳ ವೃತ್ತದ ಪರಿಧಿಯಲ್ಲಿ, ಉರ್ಸುಲಾಳ ಮಂಚ ಮಧ್ಯಕ್ಕೆ ಇರುವಂತಹ ರೀತಿಯಲ್ಲಿ, ಆ ಸಂಪತ್ತು ಇದೆ ಎಂಬುದನ್ನು ವಿವರಿಸಿ ತಿಳಿಸಿದಳು. ಆದರೆ, ಮಳೆ ನಿಲ್ಲುವವರೆಗೆ ಮತ್ತು ಒಂದಾದ ಮೇಲೊಂದು ಬರುವ ಜೂನ್

ತಿಂಗಳುಗಳಲ್ಲಿ ಸೂರ್ಯನ ಶಾಖದಿಂದ ಮಣ್ಣಿನ ರಾಶಿ ಧೂಳಾಗುವ ತನಕ ಅದು ಸಿಗುವುದಿಲ್ಲವೆಂದು ಎಚ್ಚರಿಸಿದಳು. ಅವಳ ವಿವರಣೆ ಮಾಹಿತಿಯ ನಿಖರತೆ ಅರೆಲಿಯಾನೊ ಸೆಗುಂಡೊಗೆ, ತಾನೀಗ ಆಗಸ್ಟ್‌ನಲ್ಲಿದ್ದು ಇನ್ನೂ ಮೂರು ವರ್ಷಗಳು, ಆ ಭವಿಷ್ಯವಾಣಿ ನಿಜವಾಗಲು ಕಾಯಬೇಕಾಗಿದ್ದರೂ, ಅಧ್ಯಾತ್ಮವಾದಿಗಳ ಕತೆಗಳಂತೆ ಕಾಣಿಸಿದವು. ಅವನಿಗೆ ಸ್ವಲ್ಪ ಗೊಂದಲವೆನಿಸಿದರೂ, ಹಿತ್ತಿಲಿನ ಗೋಡೆವರೆಗೆ ಚಾಚುವ ಮುನ್ನೂರ ಎಂಬತ್ತೆಂಟು ಅಡಿ ಉರ್ಸುಲಾಳ ಮಂಚದಿಂದ ಎನ್ನುವ ಖಚಿತ ವಿವರಣೆ. ಫರ್ನಾಂಡಾಳಿಗೆ ಇವನೂ ಕೂಡಾ ಇವನ ಸೋದರನಂತೆ ತಲೆಹಿಡುಕನೇ ಆಗಿದ್ದಾನೆ ಎನ್ನುವ ಭಾವನೆ ಬಂದದ್ದು, ಅವನು ಅಳತೆಗಳನ್ನು ತೆಗೆದುಕೊಳ್ಳುತ್ತಿದ್ದುದನ್ನು ಮತ್ತು ನೆಲ ಅಗೆಯುವವರಿಗೆ ಅಲ್ಲಲ್ಲಿ ಮೂರು ಮೂರು ಅಡಿ ಆಳದ ಗುಂಡಿಗಳನ್ನು ತೋಡಲು ಹೇಳುವುದನ್ನು ಕೇಳಿದಾಗ ಅವನ ಮುತ್ತಾತ ಹೊಸ ಶೋಧಗಳಿಗಾಗಿ ದಾರಿಗಳನ್ನು ಹುಡುಕುತ್ತಿದ್ದಂತೆ, ಇವನೂ ಶೋಧದ ಹುಚ್ಚಿಗೆ ಇಳಿದಿದ್ದು, ಕಡೆಗೆ ಬೇಸರಗೊಂಡನಾದರೂ ಈ ಪ್ರಯತ್ನದಲ್ಲಿ ಒಂದಷ್ಟು ಕೊಬ್ಬು ಕಳೆದುಕೊಂಡು ತೆಳ್ಳಗಾಗಿ, ತನ್ನ ಅವಳಿ ಸೋದರನನ್ನು ಹೋಲುವ ಸ್ಥಿತಿಗೆ ಮತ್ತೆ ಬರತೊಡಗಿದ. ಸ್ವಭಾವದಲ್ಲಿಯೂ ಅವನಂತೆ ಅಂತರ್ಮುಖತೆ, ನಿರ್ಲಿಪ್ತತೆಗಳು ಕಾಣಿಸಿದವು. ಮಕ್ಕಳ ಜೊತೆ ಸೇರುತ್ತಿರಲಿಲ್ಲ. ಹೊತ್ತಲ್ಲದ ಹೊತ್ತಲ್ಲಿ ಊಟ ಮಾಡುತ್ತಿದ್ದ. ಅಡಿಯಿಂದ ಮುಡಿವರೆಗೆ ಮಣ್ಣು ಮೆತ್ತಿಕೊಳ್ಳುತ್ತಿದ್ದ. ಒಮ್ಮೊಮ್ಮೆ ಅಡಿಗೆ ಮನೆಯ ಮೂಲೆಯಲ್ಲಿ ಸಾಂತಾ ಸೋಫಿಯಾ ದ ಲಾ ಪೀದಾದ್ ಕೇಳುವ ಪ್ರಶ್ನೆಗಳಿಗೆ ಅಪರೂಪಕ್ಕೆ ಉತ್ತರಿಸುವಾಗ ಈ ರೀತಿ ಮಾಡಿಕೊಳ್ಳುತ್ತಿದ್ದ. ಅವನು ಈ ರೀತಿ ಮಾಡುತ್ತಿದ್ದುದನ್ನು ನೋಡಿದಾಗ, ಫರ್ನಾಂಡಾಗೆ, ಅವನು ಹೀಗೆಲ್ಲ ಮಾಡಲು ಸಾಧ್ಯವೆಂಬುದನ್ನು ಕನಸಿನಲ್ಲಿಯೂ ಊಹಿಸಿರಲಿಲ್ಲ. ಫರ್ನಾಂಡಾಳಿಗೆ ಅವನ ಹಟಮಾರಿತನ ಶ್ರದ್ಧೆಯಾಗಿಯೂ, ದುರಾಶೆಯನ್ನು ತ್ಯಾಗವಾಗಿಯೂ ಮಂದಬುದ್ಧಿಯನ್ನು ಪಟ್ಟುಬಿಡದೆ ಸಾಧಿಸುವ ಗುಣವೆಂದೂ ಅರ್ಥೈಸಿದಳು. ಅವನ ಮೇಲೆ ರೇಗಾಡಿದ್ದನ್ನು ನೆನಸಿಕೊಂಡು ತುಂಬ ಪಶ್ಚಾತ್ತಾಪಪಟ್ಟಳು. ಆದರೆ ಅರೆಲಿಯಾನೊ ಸೆಗುಂಡೊ ಆ ಸಮಯದಲ್ಲಿ ರಾಜಿಯಾಗುವ ಮನಃಸ್ಥಿತಿಯಲ್ಲಿ ಇರಲಿಲ್ಲ. ಕೊಳೆತು ಬಿದ್ದಿದ್ದ ರೆಂಬೆ ಕೊಂಬೆ ಹೂಗಳ ರಾಶಿಯ ನಡುವೆ ಮುಳುಗಿದ್ದು, ಹೂವಿನಲ್ಲಿನ ಎಲ್ಲ ಕಸಕಡ್ಡಿಯನ್ನು ಎಲ್ಲೆಡೆಗೂ ಎಸೆದು ಬಿಸಾಡಿದ. ಅಂಗಳದ ಹಿತ್ತಿಲಿನ ಕೆಲಸವೆಲ್ಲ ಮುಗಿದ ಮೇಲೆ, ಮನೆಯ ಪೂರ್ವಕ್ಕಿದ್ದ ಜಾಗವನ್ನು ಎಷ್ಟು ಆಳವಾಗಿ ಅಗೆದನೆಂದರೆ ಮನೆಯ ಅಡಿಪಾಯವೇ, ಅಲ್ಲಾಡಿ ಭೂಕಂಪವಾದಂತೆನಿಸಿ ಮನೆಯವರೆಲ್ಲ ಭಯಭೀತರಾಗಿ ಎದ್ದುಬಿಟ್ಟರು. ಮೂರು ರೂಮುಗಳೂ ಕುಸಿಯುವಂತಾಗಿದ್ದವು. ಭಯಹುಟ್ಟಿಸುವ ರೀತಿಯಲ್ಲಿ ನಡುಮನೆಯಿಂದ ಫರ್ನಾಂಡಾಳ ರೂಮಿನವರೆಗೆ ಬಹುದೊಡ್ಡ ಬಿರುಕು ಕಾಣಿಸಿಕೊಂಡಿತು. ಆದರೆ ಇಷ್ಟೆಲ್ಲದರ ನಡುವೆಯೂ ಅರೆಲಿಯಾನೊ ಸೆಗುಂಡೊ ಶೋಧಕಾರ್ಯ ಮುಂದುವರೆಸಿದ. ಅವನ ಕಡೆಯ ಭರವಸೆಯೂ ಅಳಿಸಿ ಹೋದಾಗಲೂ, ಕಾರ್ಡುಗಳು ನುಡಿದ ಭವಿಷ್ಯ ಸುಳ್ಳಾಗಲಾರದು ಎನಿಸಿ, ಅಡಿಪಾಯವನ್ನು ಭದ್ರಪಡಿಸಿದ. ಬಿರುಕುಗಳನ್ನು ಕಾಂಕ್ರೀಟಿನಿಂದ ತುಂಬಿದ. ನಂತರ ಪಶ್ಚಿಮದ ದಿಕ್ಕಿನಲ್ಲಿ ಪ್ರಯತ್ನಕ್ಕೆ ಅಣಿಯಾದ. ಜೂನ್‌ನ ಎರಡನೇ ವಾರ ಅವನಿನ್ನೂ ಅಲ್ಲಿಯೇ ಇದ್ದ. ಮಳೆ ನಿಲ್ಲುವ ಸೂಚನೆಗಳು ಕಾಣಿಸಿದವು. ನಿಮಿಷ

ನಿಮಿಷಕ್ಕೂ ಮೋಡಗಳು ದೂರವಾಗುತ್ತಿದ್ದವು. ಒಂದು ಶುಕ್ರವಾರ ಮಧ್ಯಾಹ್ನ ಎರಡು ಗಂಟೆ ಸಮಯ. ಕೆಂಬಣ್ಣದ ಸೂರ್ಯ ಕಾಣಿಸಿದ. ಜಗತ್ತು ಬೆಳಗಿತು. ಹವಾ ತಂಪಾಯಿತು. ಮುಂದೆ ಹತ್ತು ವರ್ಷಗಳು ಮಳೆಯೇ ಆಗಲಿಲ್ಲ.

ಮಕೊಂಡೊ ವಿನಾಶದ ಸ್ಥಿತಿಯಲ್ಲಿತ್ತು. ಜೌಗುಪ್ರದೇಶಗಳಲ್ಲಿ ಮುರಿದ ಪೀಠೋಪಕರಣಗಳು, ಪ್ರಾಣಿಗಳ ಅಸ್ಥಿಪಂಜರಗಳು ಮಕೊಂಡೊಗೆ ಬಂದಿದ್ದ ಗುಂಪು ಗುಂಪು ಜನರು ಹೇಗೆ ಬಂದರೊ ಹಾಗೆ ಕಾಲುಕಿತ್ತು ಓಡಿದವರ ನೆನಪುಗಳು ತುಂಬಿದ್ದವು. ಬನಾನಾ ಉರುಬಿನಲ್ಲಿ ಕಟ್ಟಿದ್ದ ಮನೆಗಳೆಲ್ಲವೂ ಈಗ ನಿರ್ಜನವಾಗಿದ್ದವು. ಬನಾನಾ ಕಂಪನಿ ಕಟ್ಟಡ ನೆಲಸಮವಾಗಿತ್ತು. ಬೇಲಿಯಿಂದ ಸುತ್ತುವರೆದಿದ್ದ ಊರಿನಲ್ಲಿ ಉಳಿದದ್ದು ಕೇವಲ ಅವಶೇಷಗಳು ಅಷ್ಟೆ. ಮರದ ಮನೆಗಳು, ಕಾರ್ಡುಗಳನ್ನು ಆಡುತ್ತಿದ್ದ ತಾರಸಿಗಳು, ಬಹುಶಃ ಭವಿಷ್ಯದಲ್ಲಿ ಭೂಮಿ ಮೇಲಿಂದ ಮಕೊಂಡೊ ಪೂರ್ತಿಯಾಗಿ ನಾಶವಾಗುತ್ತದೆ ಎನ್ನುವುದರ ಸೂಚನೆಯಂತೆ, ಧೂಳೀಪಟವಾಗಿದ್ದವು. ಮನುಷ್ಯನ ಗುರುತಾಗಿ ಉಳಿದಿದ್ದ ಒಂದೇ ಒಂದು ವಸ್ತುವೆಂದರೆ ವಾಹನವೊಂದರಲ್ಲಿ, ಕಾಡುಗಿಡಗಳ ನಡುವೆ ಇದ್ದ ಪೆಟ್ರಿಷಿಯಾ ಬ್ರೌನ್‌ಳ ಕೈ ಗವಸು ಒಂದು ಕಾಲದಲ್ಲಿ ಜೋಸ್ ಆರ್ಕಾಡಿಯೊ ಸ್ಥಾಪಿಸಿದ ಮಕೊಂಡೊ ಮೋಹಕ ಪ್ರದೇಶವಾಗಿದ್ದು, ಬನಾನಾ ಕಂಪನಿಯ ಅಭಿವೃದ್ಧಿ ಕಂಡದ್ದು ಈಗ ಕೊಳೆತ ಬೇರುಗಳ ರಾಶಿಯಿಂದ ಕೂಡಿದೆ. ದೂರ ಕ್ಷಿತಿಜದಿಂದ, ನೊರೆಯಿಂದ ತುಂಬಿ ಮೌನವಾಗಿ ಇರುವ ಸಮುದ್ರವನ್ನು ಈಗ ಯಾರಿಗಾದರೂ ನೋಡಬಹುದಾಗಿದೆ. ಅರೆಲಿಯಾನೊ ಸೆಗುಂಡೊ ಈ ಅನಾಹುತದ ಮೂಲಕ ಚಿಂತೆಗೆ ಒಳಗಾಗಿದ್ದವನು ಮೊದಲ ಭಾನುವಾರ ಒಣಗಿದ ಬಟ್ಟೆ ಹಾಕಿಕೊಂಡು ಊರಿನ ಜೊತೆಗಿನ ನಂಟನ್ನು ಮತ್ತೊಮ್ಮೆ ನವೀಕರಿಸಲೆಂದು ಹೊರಟ. ಈ ಅವಘಡದಿಂದ ಪಾರಾಗಿ ಬದುಕಿದ್ದವರು ಬನಾನಾ ಕಂಪನಿಯ ಬಿರುಗಾಳಿಗೆ ಸಿಗುವುದಕ್ಕೆ ಮೊದಲಿನಿಂದಲೂ ಮಕೊಂಡೊದಲ್ಲಿದ್ದವರು ರಸ್ತೆಯ ಮಧ್ಯದಲ್ಲಿ ಮೊದಲ ಸೂರ್ಯನ ಬಿಸಿಲಿನ ಸುಖವನ್ನು ಅನುಭವಿಸುತ್ತಾ ಕುಳಿತಿದ್ದರು. ಇನ್ನೂ ಮೈಮೇಲೆ ಪಾಚಿ ಇತ್ತು. ಮೂಲೆಯಿಂದ ಬರುತ್ತಿದ್ದ ವಾಸನೆಯೂ ಅಂಟಿತ್ತು. ಆದರೆ ತಾವು ಹುಟ್ಟಿದ ಊರು ಈಗ ಸ್ವಲ್ಪ ಸುಧಾರಿಸಿದ್ದರಿಂದ ಅವರಿಗೆ ಸಂತೋಷವಾಗಿತ್ತು. ಟರ್ಕ್ ರಸ್ತೆ ಮೊದಲಿನ ಸ್ಥಿತಿಗೆ ಬಂದಿತು. ಹಿಂದಿನ ದಿನಗಳಲ್ಲಿ ಅರಬರು ಕಿವಿಯಲ್ಲಿ ರಿಂಗುಗಳನ್ನು ಧರಿಸಿ, ಚಪ್ಪಲಿಮೆಟ್ಟಿ, ಗಿಳಿಗಳಿಗೆ ಬದಲಾಗಿ ವಸ್ತುಗಳನ್ನು ವಿನಿಮಯ ವ್ಯವಹಾರವನ್ನು ನಡೆಸುತ್ತಿದ್ದರು. ಅವರಿಗೆ ತಮ್ಮ ಅಲೆಮಾರಿ ಬದುಕಿನಿಂದ ಮಕೊಂಡೊ ರಸ್ತೆಯ ತಿರುವಿನ ನಿಲುಗಡೆ ಸಿಕ್ಕಿತು. ಮಳೆಯ ದಿನಗಳು ಮುಗಿದ ಮೇಲೆ ಅಂಗಡಿ ಸಾಮಾನುಗಳೆಲ್ಲ ಬಿದ್ದು ಹೋಗಿದ್ದವು. ಬಾಗಿಲ ಮೇಲೆ ಹರಡಿದ್ದ ಬಟ್ಟೆಗಳೆಲ್ಲ ಚಿತ್ತು ಚಿತ್ತಾಗಿತ್ತು. ಗಲ್ಲಾಪೆಟ್ಟಿಗೆಗಳು ಗೆದ್ದಲು ಹಿಡುದು ಹಾಳಾಗಿದ್ದವು. ಗೋಡೆಗಳು ತೇವದಿಂದ ಬೂಜು ಹಿಡಿದಿದ್ದವು. ಆದರೂ ಅರಬರ ಮೂರನೆ ತಲೆಮಾರಿನ ಹುಡುಗರು ತಮ್ಮ ತಂದೆ, ತಾತಂದಿರು ಇರುತ್ತಿದ್ದ ಜಾಗಗಳಲ್ಲಿ, ಇರುತ್ತಿದ್ದಂತೆಯೆ ಹೆಚ್ಚು ಮಾತಿಲ್ಲದೆ, ಅಧೀರರಾಗದೆ ಕಾಲ ಮತ್ತು ಅವಘಡಗಳಿಗೆ ನಿದ್ದೆಯಿಲ್ಲದ ರೋಗದ ನಂತರ ಚೇತರಿಸಿಕೊಂಡಂತೆ, ಈಗಲೂ ಚೇತರಿಸಿಕೊಂಡಿದ್ದರು ಮತ್ತು ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಮೂವತ್ತೆರಡು ಯುದ್ಧಗಳನ್ನು ಮಾಡಿ ಚೇತರಿಸಿಕೊಂಡಂತೆಯೆ

ಕಾಣುತ್ತಿದ್ದರು. ಇಂತಹ ವಿನಾಶ, ಅವಶೇಷಗಳ ನಡುವೆಯೂ ವಿಧ್ವಂಸಕ್ಕೆ ಒಳಗಾದ ಮತ್ತು ಕೇವಲ ಭಗ್ನಾವಶೇಷಗಳಂತೆ ಬಿದ್ದಿದ್ದ ಆಟದ ಮೇಜುಗಳು, ಚೂರುಚೂರಾದ ಸ್ಟ್ಯಾಂಡುಗಳು, ಕುಳಿತು ಕನಸುಗಳನ್ನು ಕಾಣುತ್ತಿದ್ದ, ಭವಿಷ್ಯವನ್ನು ತಿಳಿಯುತ್ತಿದ್ದ ರಸ್ತೆಗಳು – ಇವುಗಳ ಮಧ್ಯೆಯಿದ್ದೂ ಅವರಲ್ಲಿ ಒಂದಿಷ್ಟಾದರೂ ದುಃಖದ ಛಾಯೆಯಿಲ್ಲದೆ ಅದೇ ಉತ್ಸಾಹದಿಂದ ಕಾಣುತ್ತಿದ್ದ ಅವರನ್ನು ಅರೆಲಿಯಾನೊ ಸೆಗುಂಡೊ ಪ್ರಶ್ನಿಸಬೇಕು ಎಂದುಕೊಂಡ. ಯಾವ ನಿಗೂಢಶಕ್ತಿಯ ಪ್ರಭಾವದಿಂದ ಅವರೆಲ್ಲ ಕೊಚ್ಚಿಹೋಗದೆ ಬದುಕಿ ಉಳಿದರು ಎಂದು ಒಬ್ಬೊಬ್ಬರನ್ನೂ ಪ್ರಶ್ನಿಸುತ್ತಾ ಹೋದ. ಎಲ್ಲರೂ ಕೂಡಾ ಪೂರ್ವಭಾವಿಯಾಗಿ ಒಬ್ಬರನ್ನೊಬ್ಬರು ಭೇಟಿಯಾಗಿ ಯಾವುದೇ ಚರ್ಚೆ, ಸೂಚನೆ ಸಲಹೆಗಳು ಪರಸ್ಪರರ ನಡುವೆ ನಡೆಯದಿದ್ದರೂ ಅವರೆಲ್ಲ ಒಂದೇ ಉತ್ತರ ಕೊಟ್ಟರು.

"ಈಜುವುದರ ಮೂಲಕ"

ಪೆಟ್ರಾಕೋಟ್ಸ್ ಒಬ್ಬಳಿಗೇ ಸ್ಥಳೀಯಳಾದರೂ ಅರಬ್ ಹೃದಯವನ್ನು ಪಡೆದಿದ್ದವಳು. ಲಾಯಗಳು ನಾಶವಾಗುವುದನ್ನು, ಕಣಜಗಳು ಬಿರುಗಾಳಿಗೆ ಸಿಲುಕಿ ಹಾಳಾಗುವುದನ್ನು ನೋಡುತ್ತಿದ್ದು ಮನೆಯನ್ನು ಉಳಿಸಿಕೊಳ್ಳುವಲ್ಲಿ ಯಶಸ್ವಿಯಾದಳು.

ಎರಡನೆ ವರ್ಷ ಅವಳು ಅರೆಲಿಯಾನೊಗೆ ಯಾವಾಗ ಮನೆಗೆ ಬರುತ್ತೀಯೆಂದು ಕೇಳಿ ಸಂದೇಶ ಕಳಿಸಿದ್ದಳು. ಅರೆಲಿಯಾನೊ ಸೆಗುಂಡೊ ತಾನಲ್ಲಿಗೆ ಬರುವುದು ಯಾವಾಗ ಎಂದು ಹೇಳುವುದು ಸಾಧ್ಯವಿಲ್ಲವೆಂದೂ, ಆದರೆ ಬರುವಾಗ, ಮಲಗುವ ಮನೆಯ ಫ್ಲೋರಿಂಗ್ ಮಾಡಿಸಲು ಒಂದಷ್ಟು ಚಿನ್ನದ ನಾಣ್ಯಗಳನ್ನು ತರುವುದಾಗಿ ಹೇಳಿಕಳಿಸಿದ್ದ. ಆ ಸಮಯದಲ್ಲಿ ತನ್ನೆದೆಯಾಳದ ಧೈರ್ಯ ಎಷ್ಟೆಂದು ಪರೀಕ್ಷಿಸಿಕೊಂಡಿದ್ದಳು. ದುರಾದೃಷ್ಟದ ಪರಿಸ್ಥಿತಿಯಿಂದ ಪಾರಾಗುವ ದಾರಿಗಾಗಿ, ತನ್ನ ಪ್ರಿಯಕರ ದುಂದುವೆಚ್ಚದಿಂದ ಕಳೆದುಕೊಂಡ ಸಂಪತ್ತನ್ನು ಹೇಗಾದರೂ ಮತ್ತೆ ಪಡೆಯಬೇಕೆಂದು ಪ್ರತಿಜ್ಞೆ ಮಾಡಿದಳು. ಆ ನಿರ್ಧಾರವನ್ನು ಸಡಿಲಗೊಳಿಸುವುದು ಸಾಧ್ಯವಿಲ್ಲದ್ದಾಗಿತ್ತು. ಎಂಟು ತಿಂಗಳ ನಂತರ, ಕಡೆಯ ಸಂದೇಶ ಬಂದ ಮೇಲೆ ಅರೆಲಿಯಾನೊ ಸೆಗುಂಡೊ ಅವಳ ಮನೆಗೆ ಹೋದ. ಅವಳು ಎಂದಿನಂತೆಯೆ ಅಚ್ಚ ಹಸುರಾಗಿ, ಅವಿಚಲಿತಳಾಗಿದ್ದರೂ ಕಣ್ಣುಗಳು ಗುಳಿಬಿದ್ದಿದ್ದವು. ಚರ್ಮಕ್ಕೆ ರೋಗವಂಟಿತ್ತು. ಆದರೆ ಲಾಟರಿ ವ್ಯಾಪಾರ ಶುರುಮಾಡಲು ಸಣ್ಣ ಸಣ್ಣ ಕಾಗದದ ತುಂಡುಗಳ ಮೇಲೆ ಅಂಕಿಗಳನ್ನು ಬರೆಯುತ್ತಿದ್ದಳು. ಅರೆಲಿಯಾನೊ ಸೆಗುಂಡೊಗೆ ಅವಳನ್ನು ನೋಡಿ ಅಚ್ಚರಿಎನಿಸಿತು. ಅವನು ಎಷ್ಟು ಕೊಳಕಾಗಿ, ಗಂಭೀರವಾಗಿ ಇದ್ದನೆಂದರೆ, ಪೆಟ್ರಾಕೋಟ್ಸ್‌ಗೆ ಬಂದವನು ತನ್ನ ಬದುಕಿನ ಜೊತೆಗಿದ್ದ ಪ್ರಿಯಕರನಲ್ಲ, ಬದಲಾಗಿ ಅವನ ಅವಳಿ ಸೋದರನೇ ಇರಬೇಕೆಂದು ಬಲವಾಗಿ ನಂಬುವ ಸ್ಥಿತಿಗೆ ಬಂದಿದ್ದಳು. "ನಿಂಗೆಲ್ಲೊ ಹುಚ್ಚು, ಮೂಳೆಗಳ ಲಾಟರಿ ವ್ಯಾಪಾರ ಮಾತ್ರವೇ ಸಾಧ್ಯ" ಎಂದ.

ಅವಳು ಅವನಿಗೆ ತಮ್ಮ ಬೆಡ್‌ರೂಮನ್ನು ಹೋಗಿ ನೋಡಲು ಹೇಳಿದಳು. ಅರೆಲಿಯಾನೊ ಸೆಗುಂಡೊ, ಅಲ್ಲಿ ಸತ್ತು ಬಿದ್ದಿದ್ದ ಹೇಸರಗತ್ತೆಯನ್ನು ನೋಡಿದ. ಅದರ

ಒಡತಿಯ ಚರ್ಮದಂತೆ, ಚರ್ಮ ಮೂಳೆಗಳಿಗೆ ಅಂಟಿಕೊಂಡಿತ್ತು. ಆದರೆ ಅದು ಇನ್ನೂ ಉಸಿರಾಡುತ್ತಿತ್ತು. ಅದರ ಒಡತಿಯ ಹಾಗೆ ಅದರಲ್ಲಿಯೂ ಸಹನಶಕ್ತಿಯಿದ್ದಂತೆ ಕಾಣುತ್ತಿತ್ತು. ಪೆಟ್ರಾಕೋಟ್ಸ್ ಸಿಡಿಮಿಡಿಗೊಳ್ಳುತ್ತಲೇ ಮೇವು ಹಾಕುತ್ತಿದ್ದಳು. ಹುಲ್ಲಾಗಲೀ ಕಾಳುಗಳಾಗಲೀ ಏನೂ ಉಳಿದಿರಲಿಲ್ಲ. ಕಡೆಗೆ ತನ್ನ ಬೆಡ್‌ರೂಮಿನಲ್ಲಿ ಆಶ್ರಯ ನೀಡಿದ್ದಳು. ಅಲ್ಲಿದ್ದಂತಹ, ಹಾಸುಗಳು, ಕಂಬಳಿಗಳು, ಚಿನ್ನದ ಬಣ್ಣದ ಹಾರದಿಂದ ಎಂಬ್ರಾಯಿಡರಿ ಮಾಡಿದ, ಸಿಲ್ಕ್ ದಾರದ ಕುಚ್ಚುಗಳಿದ್ದ ಕ್ಯಾನೋಪಿ, ಇನ್ನೂ ಏನೆಲ್ಲವಿತ್ತೋ ಅದನ್ನೇ ಅದಕ್ಕೆ ಮೇವಾಗಿ ಕೊಟ್ಟಳು.

○

# 17

ಮಳೆ ಕಳೆದ ಮೇಲೆ ಸಾಯಬೇಕೆಂಬ ಪ್ರತಿಜ್ಞೆಯನ್ನು ಪೂರೈಸಲು ಬಹಳ ಶ್ರಮಿಸಬೇಕಾಯಿತು. ಮಳೆ ಬರುತ್ತಿದ್ದಾಗ ಸ್ಪಷ್ಟವಾದ ದೃಷ್ಟಿ ಅಪರೂಪವಾಗಿತ್ತು. ಆಗಸ್ಟ್ ನಂತರ ಮಳೆ ಪದೇ ಪದೇ ಬರುತ್ತಿತ್ತು. ಒಣ ಗಾಳಿ ಗುಲಾಬಿ ಗಿಡಗಳ ಮೇಲೆ ದಟ್ಟವಾದ ಧೂಳು ಕೂತಿತ್ತು. ನಂತರ ಇಡೀ ಮಕೊಂಡೊವನ್ನು ಉರಿವ ಧೂಳು ಆವರಿಸಿತು. ಕಿಲುಬು ಹಿಡಿದ ಝಿಂಕ್ ಷೀಟ್ ಛಾವಣಿಗಳು, ಹಳೆಯದಾದ ಬಾದಾಮಿ ಮರಗಳು – ಎಲ್ಲದರ ಮೇಲೂ ಧೂಳು ತುಂಬಿತು. ಮೂರು ವರ್ಷಗಳ ಕಾಲ ತಾನು ಮಕ್ಕಳ ಆಟದ ಗೊಂಬೆಯಾಗಿದ್ದುದನ್ನು ತಿಳಿದು ದುಃಖಿಸಿದಳು. ಪೈಂಟ್ ಮೆತ್ತಿದ ಮುಖ ತೊಳೆದುಕೊಂಡಳು. ಕಣ್ಣು ಕುಕ್ಕುವ ಬಣ್ಣದ ಬಟ್ಟೆ ತುಂಡುಗಳನ್ನು ಒಣಗಿದ ಹಲ್ಲಿ ಕಪ್ಪೆಗಳನ್ನು ಕಿತ್ತೆಸೆದಳು. ತನ್ನ ಮೈಮೇಲೆ ಹಾಕಿದ್ದ ಜಪಸರಗಳು ಅರಬ್ ನೆಕ್‌ಲೇಸುಗಳು ಮುಂತಾದವನ್ನು ತೆಗೆದಳು. ಅಮರಾಂತಾ ಸಾವಿನ ನಂತರ ಮೊದಲ ಬಾರಿಗೆ, ಯಾರ ಸಹಾಯವೂ ಇಲ್ಲದೆ ಹಾಸಿಗೆಯಿಂದ ಎದ್ದು, ಕುಟುಂಬದವರ ಜೊತೆಗೆ ಭಾಗಿಯಾದಳು. ಅವಳ ಮನೋಧೈರ್ಯವೇ, ನೆರಳುಗಳ ಮೂಲಕ ಮಾರ್ಗದರ್ಶನ ನೀಡಿತು. ಅವಳು ಬೀಳುವುದರಲ್ಲಿದ್ದಾಳೆ ಎನಿಸಿ ಯಾರಾದರೂ ನೆರವಿಗೆ ಓಡಿದರೆ, ತಲೆ ಎತ್ತರಕ್ಕೆ ನಿಂತು ಯೋಚಿಸಿದಾಗ ತನ್ನ ದೇಹ

ತನಗೆ ಸಹಕರಿಸುತ್ತಿಲ್ಲ ಎನಿಸುತ್ತಿತ್ತು. ಆದರೂ ನೋಡಿದವರಿಗೆ ಅವಳ ದೃಷ್ಟಿ ದೋಷ ತಿಳಿಯುತ್ತಿರಲಿಲ್ಲ. ಅವಳಿಗೆ ನೋಡಬೇಕಾದ್ದು ಇರಲಿಲ್ಲ. ಪ್ರೀತಿಯಿಂದ ಬೆಳೆಸಿದ ಪೋಷಿಸಿದ ಹೂಗಿಡಗಳು, ಮಳೆಯಿಂದ ಹಾಳಾದುದನ್ನು, ಸೆಗುಂಡೊ ಶೋಧ ಪ್ರಯತ್ನದ ಫಲವಾಗಿ ಬಿರುಕುಬಿಟ್ಟ ಗೋಡೆಗಳನ್ನು ನೆಲವನ್ನು, ಬಣ್ಣಗೆಟ್ಟ ಪೀಠೋಪಕರಣಗಳನ್ನು, ಕೀಲುಗಳು ಮುರಿದ ಬಾಗಿಲುಗಳನ್ನು, ಒದಗಿದ ತೊಂದರೆಗಳಿಂದ ಹತಾಶರಾಗಿದ್ದ ಕುಟುಂಬದವರನ್ನು ನೋಡಬೇಕಾದ್ದಿರಲಿಲ್ಲ. ಇಂಥ ಹತಾಶ ಪರಿಸ್ಥಿತಿ ಅವಳ ಕಾಲದಲ್ಲಿ ಕಂಡದ್ದಾಗಿರಲಿಲ್ಲ. ಬೆಡ್‌ರೂಮುಗಳನ್ನು ಕೊರೆಯುತ್ತಿದ್ದ ಗೆದ್ದಲು ಹುಳುಗಳ ಸದ್ದು, ಬಟ್ಟೆ ಕಪಾಟುಗಳಲ್ಲಿ ಬಟ್ಟೆಗಳನ್ನು ಕಡಿಯುತ್ತಿದ್ದ ನುಸಿ ಹುಳು ಸದ್ದು ದೈತ್ಯಾಕಾರದ ಕೆಂಪು ಇರುವೆಗಳ ರಾಶಿ – ಇವೆಲ್ಲವನ್ನು ಗಮನಿಸಿ ಮನೆಯ ಅಡಿಪಾಯವನ್ನೇ ಹಾಳು ಮಾಡುತ್ತಿವೆ ಎಂದು ಅರ್ಥಮಾಡಿಕೊಂಡಳು. ಒಂದು ದಿನ ಅವಳು ಟ್ರಂಕಿನ ಬಾಗಿಲನ್ನು ತೆರೆದಳು. ಅದರಲ್ಲಿ ಸಂತರ ಉಡುಪುಗಳನ್ನು ಇರಿಸಿದ್ದಳು. ಅಲ್ಲಿಯೇ ನಿಂತಿದ್ದ ಸಾಂತಾ ಸೋಫಿಯಾ ದ ಲಾ ಪೀದಾದಳಿಗೆ ತನ್ನ ಮೇಲೆ ಹಾರುತ್ತಿದ್ದ ಜಿರಲೆಗಳನ್ನು ತೆಗೆಯಲು ಹೇಳಿದಳು. ಅಷ್ಟೊತ್ತಿಗೆ ಆಗಲೆ ಅವು ಬಟ್ಟೆಯನ್ನು ಹಾಳು ಮಾಡಿದ್ದವು. “ಈ ಥರದ ನಿರ್ಲಕ್ಷ್ಯ ಇರಬಾರದು, ಹೀಗೇ ಆದರೆ ಪ್ರಾಣಿಗಳು ನಮ್ಮನ್ನು ತಿಂದು ಹಾಕುತ್ತವೆ” – ಎಂದಳು. ಅಂದಿನಿಂದ ಅವಳಿಗೆ ಒಂದು ಕ್ಷಣದ ವಿಶ್ರಾಂತಿಯೂ ಇರಲಿಲ್ಲ. ಬೆಳಕು ಹರಿಯುವುದಕ್ಕೆ ಮೊದಲೆ ಯಾರದಾದರೂ, ಮಕ್ಕಳಾದರೂ ಸರಿಯೆ, ಸಹಾಯ ತೆಗೆದುಕೊಳ್ಳುತ್ತಿದ್ದಳು. ಕೆಲವು, ಉಡುಪುಗಳನ್ನು, ಬಿಸಿಲಲ್ಲಿ ಹಾಕಿಕೊಂಡು ಹೋಗಲು ಉಪಯೋಗಕ್ಕೆ ಬರುತ್ತಿದ್ದವುಗಳನ್ನು ತೆಗೆದಿರಿಸಿದಳು. ಜಿರಲೆಗಳನ್ನು, ಪರಿಣಾಮಕಾರಿಯಾದ ಕ್ರಿಮಿನಾಶಕಗಳಿಂದ ಕೊಂದಳು. ಗೆದ್ದಲು ಮಾಡಿದ್ದ ಕಿಟಕಿ, ಬಾಗಿಲುಗಳ ಮೇಲಿನ ಗೆರೆಗಳನ್ನು ಕೆರೆದು ಹಾಕಿದಳು. ಇರುವೆ ರಾಶಿಯ ಮೇಲೆ, ಸುಣ್ಣಸುರಿದು ಉಸಿರುಗಟ್ಟಿ ನಾಶಮಾಡಿದಳು. ಎಲ್ಲವನ್ನು ಸರಿಪಡಿಸುವ ಯೋಚನೆಯೊಂದಿಗೆ ಮರೆತು ಹೋಗಿದ್ದ ರೂಮುಗಳೆಡೆಗೆ ಕರೆತಂದಿತು. ಜೋಸ್ ಆರ್ಕಾಡಿಯೊ ಬ್ಯುಂಡಿಯಾ ಸ್ಪರ್ಷಮಣಿಯ ಹುಡುಕಾಟದ ಪ್ರಯತ್ನದಲ್ಲಿ ಬುದ್ಧಿಭ್ರಮಣೆಗೆ ಒಳಗಾಗಿದ್ದ. ಸಿಲ್ವರ್‌ಷಾಪ್ ಅನ್ನು ತೆರೆದಿದ್ದ ಆದರೆ ಸೈನಿಕರಿಂದ ಅಲ್ಲಿಯೇ ಭಗ್ನಗೊಳಿಸಲಾಗಿದ್ದ, ಕಡೆಯದಾಗಿ ಮೆಲ್‌ಕಿಯಾಡ್ಸ್‌ನ ರೂಮು ಈಗ ಹೇಗಿದೆ ಎಂದು ನೋಡುವುದಕ್ಕಾಗಿ ಬೀಗದ ಕೈ ಕೇಳಿದ್ದ. ಆ ರೂಮಿನಲ್ಲಿದ್ದ ರದ್ದಿಯನ್ನು, ಜೇಡಬಲೆಗಳನ್ನು ತೆಗೆದು ಶುದ್ಧಮಾಡಿದಳು. ಜೋಸ್ ಆರ್ಕಾಡಿಯೊ ಸೆಗುಂಡೊ, ತಾನು ಸಾಯುವುದು, ಸತ್ತದ್ದು ಖಚಿತ ಪಡಿಸಿಕೊಳ್ಳುವವರಿಗೆ ಯಾರೂ ಒಳಗೆ ಪ್ರವೇಶಿಸಬಾರದೆಂದು ಆದೇಶಿಸಿದ್ದ. ಅವನ ಆದೇಶಕ್ಕೆ ಬದ್ಧಳಾಗಿದ್ದ ಸಾಂತಾ ಸೋಫಿಯಾ ದ ಲಾ ಪೀದಾದ್ ಉರ್ಸುಲಾಗೆ ಏನೇನೊ ಹೇಳಿ, ದಿಕ್ಕು ತಪ್ಪಿಸಲು ಪ್ರಯತ್ನಿಸಿದಳು. ಆದರೆ ಮನೆಯ ಯಾವ ಮೂಲೆಯನ್ನೂ ಬಿಡದೆ ಎಲ್ಲವನ್ನೂ ಚೊಕ್ಕಟವಾಗಿ ಇರಿಸಬೇಕೆಂಬ ಉರ್ಸುಲಾಳ ಹಠ ಮೂರು ದಿನಗಳ ನಂತರ ಪೂರೈಸಲು ಸಾಧ್ಯವಾಯಿತು. ಬಾಗಿಲು ತೆರೆದದ್ದೇ ಒಳಗಿನಿಂದ ಬಂದ ದುರ್ವಾಸನೆಗೆ ಬಿದ್ದುಬಿಡಬಹುದೆಂದು ಹೆದರಿ ಬಾಗಿಲ ಹ್ಯಾಂಡಲನ್ನು ಗಟ್ಟಿಯಾಗಿ ಹಿಡಿದುಕೊಂಡಳು. ಒಂದೆರಡು ಕ್ಷಣಗಳಲ್ಲಿಯೇ ಅವಳಿಗೆ, ಎಪ್ಪತ್ತೆರಡು ಶಾಲಾ ಹುಡುಗಿಯರ ಮೂತ್ರ ಪಾತ್ರೆಗಳು ಅಲ್ಲಿದ್ದುದನ್ನು, ಒಂದು ಮಳೆಯ

ರಾತ್ರಿ ಒಂದಷ್ಟು ಮಂದಿ ಸೈನಿಕರು ಜೋಸ್ ಆರ್ಕಾಡಿಯೊನನ್ನು ಮನೆಯಲ್ಲೆಲ್ಲ ಶೋಧಿಸಿದ್ದು ಮತ್ತು ಅವನು ಪತ್ತೆಯಾಗದೆ ಹೋದದ್ದು ಎಲ್ಲವೂ ಥಟ್ಟನೆ ನೆನಪಾಯಿತು.

"ದೇವರೇ ಕಾಪಾಡು !.... ಒಳ್ಳೆ ನಡವಳಿಕೆಯನ್ನು ಕಲಿಸಿಕೊಡಲು ಎಷ್ಟೊಂದು ಸಮಯ ! ಆದರೆ ಕಡೆಯಲ್ಲಿ ಹಂದಿಯಂತೆ ಬದುಕುವುದು !" ಎಂದು ಭಾವೋದ್ಗಾರದೊಂದಿಗೆ ಹೇಳಿದಳು.

ಜೋಸ್ ಆರ್ಕಾಡಿಯೊ ಸೆಗುಂಡೊ ಇನ್ನೂ ಚರ್ಮಕಾಗದಗಳನ್ನು ಓದುತ್ತಲೇ ಇದ್ದ. ಗಂಟು ಕಟ್ಟಿದ ಕೂದಲಿನ ಮಧ್ಯೆ ಹಸಿರುಗಟ್ಟಿದ ಹಲ್ಲು ಮತ್ತು ನಿಶ್ಚಲವಾದ ಕಣ್ಣುಗಳು ಮಾತ್ರವೇ ಕಾಣುತ್ತಿದ್ದುದು. ತನ್ನ ಮುತ್ತಜ್ಜಿಯ ಧ್ವನಿ ಗುರುತಿಸಿದ ಮೇಲೆ ತಲೆಯನ್ನು ಬಾಗಿಲುಕಡೆ ತಿರುಗಿಸಿದ. ಒಂದು ಮುಗುಳುನಗೆ ನಕ್ಕ, ಉರ್ಸುಲಾ ಹಳೆಯ ಮಾತನ್ನೇ ಹೇಳುತ್ತಿದ್ದೇವೆಂಬ ಅರಿವಿಲ್ಲದೆಯೇ,

"ನೀನೇನು ನಿರೀಕ್ಷೆ ಮಾಡಿದ್ದೆ.... ಸಮಯ ಸರಿದುಹೋಗುತ್ತೆ" – ಗೊಣಗೊಣಿಸುತ್ತಾ ಹೇಳಿದ.

"ಅದು ಹಾಗೇ ಆಗುತ್ತೆ, ಆದರೆ ಹೀಗಲ್ಲ" ಎಂದಳು ಉರ್ಸುಲಾ. ಇದನ್ನು ಹೇಳಿದಾಗ, ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಸಾಯುವ ಸಮಯದಲ್ಲಿ ಕೊಟ್ಟಿದ್ದ ಉತ್ತರವನ್ನೇ ತಾನು ಕೊಟ್ಟಿದ್ದೇನೆ ಎನಿಸಿ, ಕಾಲ ಸರಿಯುತ್ತಿಲ್ಲ ಎಂಬ ಅರಿವಿನೊಂದಿಗೆ ಕಂಪಿಸಿದಳು. ತಾನು ತಿಳಿದು ಒಪ್ಪಿಕೊಂಡಿದ್ದಂತೆ ಕಾಲ ಸರಿಯುತ್ತಿಲ್ಲ. ವೃತ್ತಾಕಾರದಲ್ಲಿ ಸುತ್ತುತ್ತಿದೆ ಎನಿಸಿತು. ಜೋಸ್ ಆರ್ಕಾಡಿಯೊ ಸೆಗುಂಡೊನನ್ನು ಇನ್ನೂ ಮಗುವೆಂತಲೇ ಭಾವಿಸಿ, ಸ್ನಾನ ಮಾಡಿ, ಕ್ಷೌರ ಮಾಡಿಕೊಂಡು ಮನೆ ಸರಿಪಡಿಸೋಕೆ ಸಹಾಯ ಮಾಡು ಎಂದು ಗದರಿಸಿದಳು. ತನಗೆ ಇಷ್ಟು ನೆಮ್ಮದಿ ಶಾಂತಿಯನ್ನು ನೀಡುತ್ತಿರುವ ಇಂಥ ಕೋಣೆಯನ್ನು ನಿರ್ಲಕ್ಷಿಸಿ, ವಾಸಮಾಡದೆ ಬಿಟ್ಟದ್ದು ಏಕೆ ಎಂಬ ವಿಚಾರ ಅವನಿಗೆ ಭಯಹುಟ್ಟಿಸಿತು. ಅವನಿಗೆ ಇನ್ನೂರು ಹೆಣಗಳನ್ನು ಹಾಕಿಕೊಂಡು, ಪ್ರತಿದಿನಾ ಮಕೊಂಡೊದಿಂದ ಹೊರಟು ಸಂಜೆ ಹೊತ್ತಿಗೆ ಸಮುದ್ರದೆಡೆಗೆ ಸಾಗುತ್ತಿದ್ದ ರೈಲು ಗಾಡಿಯನ್ನು ನೋಡುವುದು ತನಗೆ ಇಷ್ಟವಿರಲಿಲ್ಲವಾದ್ದರಿಂದ, ತನ್ನನ್ನು ಈ ರೂಮಿನಿಂದ ಹೊರಗೆ ಕಳಿಸುವುದಕ್ಕೆ ಯಾವ ಮಾನವಶಕ್ತಿಗೂ ಸಾಧ್ಯವಿಲ್ಲವೆಂದು ಕೂಗಾಡಿದ. "ಅವರೆಲ್ಲ ಸ್ಟೇಷನ್ನಿನಲ್ಲಿ ಇದ್ದರು.... ಮೂರು ಸಾವಿರದ ನಾಲ್ಕು ನೂರ ಎಂಟು" ಎಂದು ಮತ್ತೊಮ್ಮೆ ಅಬ್ಬರಿಸಿದ. ಆಗ ಉರ್ಸುಲಾಗೆ ಅವನು ತನಗಿಂತಲೂ, ಭೇದಿಸಲಾಗದ ನೆರಳುಗಳ ಪ್ರಪಂಚದಲ್ಲಿ, ತನ್ನ ಮುತ್ತಜ್ಜನ ಹಾಗೆ ತಲುಪಲಾರದ ಏಕಾಕಿತನದಲ್ಲಿ ಇದ್ದಾನೆಂದು ಭಾವಿಸಿದಳು. ಅವನನ್ನು ಅಲ್ಲಿಯೇ ಬಿಟ್ಟುಹೋದಳು. ಬೀಗ ಹಾಕದಿರಲು ಆದೇಶಿಸಿದಳು. ಹಾಗೆಯೇ ಪ್ರತಿದಿನ ಚೊಕ್ಕಟ ಮಾಡಲು ಮತ್ತು ಒಂದನ್ನು ಬಿಟ್ಟು ಮಿಕ್ಕೆಲ್ಲ ಮೂತ್ರಪಾತ್ರೆಗಳನ್ನು ಹೊರಗೆಸೆಯಲು ಹೇಳಿದಳು. ಅಷ್ಟೆ ಅಲ್ಲ ಜೋಸ್ ಆರ್ಕಾಡಿಯೊನನ್ನೂ ಕೂಡಾ. ಚೆಸ್ಟ್‌ನಟ್ ಮರದ ಕೆಳಗೆ ಬಂದಿಯಾಗಿದ್ದರೂ ಹೇಗೆ ಶುಭ್ರವಾಗಿ, ನೋಡುವವರಿಗೆ ಚೆನ್ನಾಗಿ ಕಾಣುವಂತೆ ಮುತ್ತಜ್ಜನನ್ನು ಇರಿಸುತ್ತಿದ್ದರೊ

ಇವನನ್ನು ಹಾಗೆಯೇ ಇರಿಸಲು ಹೇಳಿದಳು. ಮೊದಲಿಗೆ ಫರ್ನಾಂಡಾ ವಯಸ್ಸಿನ ಹುಚ್ಚುತನವೆಂದು ಅರ್ಥೈಸಿದಳು. ಅವಳ ಭಾವಾವೇಶವನ್ನು ಹತ್ತಿಕ್ಕುವುದು ಸಾಧ್ಯವಿಲ್ಲದ್ದಾಗಿತ್ತು. ಅದೇ ಹೊತ್ತಿಗೆ ಜೋಸ್ ಆರ್ಕಾಡಿಯೊ, ತಾನು ಕೊನೆಯ ಪ್ರತಿಜ್ಞೆಯನ್ನು ತೆಗೆದುಕೊಳ್ಳುವ ಮೊದಲು ರೋಮ್‌ನಿಂದ ಮಕೊಂಡೊಗೆ ಬರಲು ಯೋಚಿಸಿದ್ದೇನೆ ಎಂದು ಹೇಳಿದ್ದು ಅವಳಲ್ಲಿ ಎಷ್ಟು ಉತ್ಸಾಹವನ್ನು ಉಕ್ಕಿಸಿತು ಎಂದರೆ, ಪ್ರತಿದಿನ ಬೆಳಗಿನಿಂದ ರಾತ್ರಿವರೆಗೆ ನಾಲ್ಕುಸಲ ಗಿಡಗಳಿಗೆ ನೀರು ಹಾಕುತ್ತಾ, ತನ್ನ ಮಗನ ಎದುರು ಕಾಣಿಸಿಕೊಂಡು, ಮನೆಯಲ್ಲಿ ಎಲ್ಲವೂ ಸರಿಯಾಗಿದೆ ಎನ್ನುವ ಭಾವನೆ ಬರಲಿ ಎಂದುಕೊಂಡಳು. ಇದರಿಂದಾಗಿಯೇ ಅವಳಿಗೆ ಅದೃಶ್ಯ ವೈದ್ಯರ ಜೊತೆ ಪತ್ರವ್ಯವಹಾರವನ್ನು ಬೇಗ ಬೇಗನೆ ಮುಂದುವರಿಸಲು ಸ್ಫೂರ್ತಿನೀಡಿತು. ಅಲ್ಲದೆ ಉರ್ಸುಲಾಗೆ ಹೂಕುಂಡಗಳು ಹಾಳಾಗಿದ್ದವು ಎನ್ನುವ ವಿಷಯ ಗಮನಕ್ಕೆ ಬರುವ ಮೊದಲೇ ಬೆಗೊನಿಯಾ, ಗುಲಾಬಿ ಇತ್ಯಾದಿ ಹೂಕುಂಡಗಳನ್ನು ಹೊಂದಿಸಿ ಇಟ್ಟುಬಿಟ್ಟಳು. ನಂತರ ಬೆಳ್ಳಿ ಪಾತ್ರೆಗಳು, ಊಟದ ಉಪಕರಣಗಳು ಇವೆಲ್ಲವನ್ನೂ ಮಾರಿ ಅವುಗಳ ಜಾಗದಲ್ಲಿ ಪಿಂಗಾಣಿ ಮತ್ತು ಮಿಶ್ರಲೋಹ ಸೂಡ್‌ಸ್ಪೂನುಗಳು, ಬಟ್ಟಲುಗಳು ಇತ್ಯಾದಿಗಳನ್ನು ತಂದಿರಿಸಿದಳು. ಮೃದು ಟೇಬಲ್ ಕ್ಲಾತ್ ಹಾಸಿದಳು. ಕಪಾಟುಗಳಲ್ಲಿ ಇರುತ್ತಿದ್ದ ಇಂಡಿಯಾ ಕಂಪನಿಯ ವಸ್ತುಗಳು ಬೊಹೆಮಿಯಾದ ಹರಳುಗಳನ್ನು ಕಡಿಮೆ ಮಾಡಿದಳು. ಉರ್ಸುಲಾ ಯಾವಾಗಲೂ ಒಂದು ಹೆಜ್ಜೆ ಮುಂದಿರುತ್ತಿದ್ದಳು. "ಕಿಟಕಿಗಳನ್ನು, ಬಾಗಿಲುಗಳನ್ನು ತೆಗೆದಿರಿಸಿ, ಒಂದಿಷ್ಟು ಮಾಂಸ ಮತ್ತು ಮೀನನ್ನು ಬೇಯಿಸಿ, ದೊಡ್ಡದಾದ ಆಮೆಯೊಂದನ್ನು ಖರೀದಿಸಿ ಅಪರಿಚಿತರು ಬಂದರೆ ಬರಲಿ, ತಮ್ಮ ಚಾಪೆಗಳನ್ನು ಮೂಲೆಯಲ್ಲಿ ಹಾಸಿಕೊಳ್ಳಲಿ. ಗುಲಾಬಿ ಪೊದೆಗಳ ಮೇಲೆ ಬೇಕಾದರೆ ಮೂತ್ರ ಮಾಡಲಿ. ಕೆಳಗೇ ಕುಳಿತು ಎಷ್ಟು ಸಲ ಬೇಕಾದರೆ ಅಷ್ಟು ಸಲ ಊಟ ಮಾಡಲಿ, ತೇಗುವುದಾದರೆ ತೇಗಲಿ. ತಮ್ಮ ಬೂಟುಗಳಿಂದ ಕುಣಿದುಕುಪ್ಪಳಿಸಲಿ. ಎಲ್ಲವನ್ನೂ ಗಲೀಜುಮಾಡಲಿ. ಅವರು ನಮಗೆ ಏನು ಮಾಡಬೇಕಾದರೂ ಮಾಡಲಿ, ವಿನಾಶವನ್ನು ದೂರ ಮಾಡಲು ಅದೊಂದೇ ದಾರಿ" ಎಂದು ಜೋರಾಗಿ ಹೇಳಿದಳು. ಆದರೆ ಅದೆಲ್ಲ ನಿಷ್ಪ್ರಯೋಜಕ. ಸಾಲ ಪಡೆದ ಸಮಯದೊಂದಿಗೆ ಬದುಕುತ್ತಿದ್ದಾಳೆ. ಹಿಂದಿನ ಮಾಂಸದ ಕ್ಯಾಂಡಿಗಳನ್ನು ಮಾಡಲು ಈಗ ಅವಳಿಗೆ ತುಂಬಾ ವಯಸ್ಸಾಗಿದೆ. ಅವಳಿಗಿರುವ ಶಕ್ತಿ ಮುಂದೆ ವಂಶದಲ್ಲಿ ಯಾರಿಗೂ ದತ್ತವಾಗಲಿಲ್ಲ. ಫರ್ನಾಂಡಾಳ ಆದೇಶದಂತೆ ಮನೆ ಬಾಗಿಲುಗಳು ಮುಚ್ಚಿಕೊಂಡವು.

ಅರೆಲಿಯಾನೊ ಸೆಗುಂಡೊ ತನ್ನ ಟ್ರಂಕುಗಳನ್ನು ತೆಗೆದುಕೊಂಡು ಪೆಟ್ರಾಕೋಟ್ಸ್ ಮನೆಗೆ ಹೊರಟ. ಮನೆಯಲ್ಲಿ ಯಾರೂ ಉಪವಾಸವಿರದಂತೆ ನೋಡಿಕೊಳ್ಳಲು ಅವನಿಗೆ ಸಂಪಾದನೆಯ ದಾರಿಗಳು ಇರಲಿಲ್ಲ. ಹೇಸರಗತ್ತೆಯ ಲಾಟರಿ ಮೂಲಕ ಬಂದ ಹಣದಿಂದ ಪೆಟ್ರಾಕೋಟ್ಸ್ ಮತ್ತು ಅವನು ಸೇರಿ ಮತ್ತೆ ಕೆಲವು ಪ್ರಾಣಿಗಳನ್ನು ತಂದರು. ಇದರೊಂದಿಗೆ ಹೇಗೊ ಹಿಂದಿನ ಲಾಟರಿ ವ್ಯಾಪಾರವನ್ನು ಶುರುಮಾಡಿಕೊಂಡರು. ಅರೆಲಿಯಾನೊ ಮನೆಮನೆಗೆ ಹೋಗಿ ಟಿಕೇಟುಗಳನ್ನು ಮಾರಿಬರುತ್ತಿದ್ದ. ಅವುಗಳನ್ನು ಆಕರ್ಷಕವಾಗಿ ಮಾಡಲು ತಾನೇ ಪೈಂಟ್ ಮಾಡುತ್ತಿದ್ದ. ಜನ ಅವನಿಂದ ಅವನ ಬಗ್ಗೆ ದಯೆ

ಅನುಕಂಪಗಳಿಂದ ಟಿಕೇಟು ಕೊಳ್ಳುತ್ತಿದ್ದುದು ಅವನಿಗೆ ಬಹುಶಃ ಗೊತ್ತಿರಲಿಲ್ಲ. ಏನಾದರೂ, ದಯೆ, ಮರುಕಗಳಿಂದ ಕೊಂಡವನಿಗೂ ಒಂದು ಹಂದಿಯನ್ನು ಇಪ್ಪತ್ತು ಸೆಂಟುಗಳಿಗೆ ಮತ್ತು ಕರುವನ್ನು ಮೂವತ್ತೆರಡು ಸೆಂಟುಗಳಿಗೆ ಕೊಳ್ಳುವ ಅವಕಾಶ ಸಿಗುತ್ತಿತ್ತು. ಅವರಿಗೆಲ್ಲ ಎಷ್ಟು ವಿಶ್ವಾಸ ಉಂಟಾಯಿತೆಂದರೆ ಮಂಗಳವಾರದ ರಾತ್ರಿಗಳಲ್ಲಿ ಪೆಟ್ರಾಕೋಟ್ಸ್ ಅಂಗಳ ಕಿಕ್ಕಿರಿದು ಹೋಗುತ್ತಿತ್ತು. ಒಂದು ಮಗು ಚೀಟಿಯನ್ನು, ಗೆದ್ದ ಸಂಖ್ಯೆ ಇರುವುದನ್ನು, ಚೀಲದೊಳಗಿಂದ ತೆಗೆಯುತ್ತಿದ್ದ. ಇದು ವಾರದ ಜಾತ್ರೆಯಾಗಿ ಪರಿವರ್ತನೆಯಾಗಲು ಬಹಳಕಾಲ ತೆಗೆದುಕೊಳ್ಳಲಿಲ್ಲ. ಸಂಜೆಹೊತ್ತಿಗೆ ಅಂಗಳದಲ್ಲಿ, ತಿಂಡಿ, ಪಾನೀಯದ ಅಂಗಡಿಗಳು ಎದ್ದು ಬಿಡುತ್ತಿದ್ದವು. ತುಂಬಾ ಜನ ತಾವು ಗೆದ್ದ ಪ್ರಾಣಿಗಳನ್ನು ಅಲ್ಲಿಯೇ ಕೊಚ್ಚುತ್ತಿದ್ದರು. ಆದರೆ ಬೇರೆಯವರು ಯಾರಾದರೂ, ಹೆಂಡ ಮತ್ತು ಸಂಗೀತಕ್ಕೆ ಒಪ್ಪಿಕೊಳ್ಳಬೇಕು ಎಂಬ ಷರತ್ತಿನ ಮೇಲೆ, ಅದರಿಂದ ಅರೆಲಿಯಾನೊ ಸೆಗುಂಡೊಗೆ ಬಯಸದೆಯೇ ಅಕಾರ್ಡಿಯೋನ್ ನುಡಿಸುವ ಅವಕಾಶ ಸಿಕ್ಕಿತು. ಹಿಂದಿನ ದಿನಗಳಲ್ಲಿನ ತನ್ನ ಸಾಮರ್ಥ್ಯ ಪ್ರತಿಭೆಗಳು ನೆನಪಾದಾಗ, ಅವನಿಗೆ ತನ್ನಲ್ಲಿನ ಉತ್ಸಾಹ ಕುಗ್ಗಿದುದನ್ನೂ, ಕುಡಿದು ಅಮಲೇರಿದ ಸ್ಥಿತಿಯಲ್ಲಿ ತನಗಿದ್ದ ಸಂಗೀತ ನುಡಿಸುವ ಚಾತುರ್ಯ ಕುಗ್ಗಿರುವುದನ್ನೂ ಗುರುತಿಸಿದ. ಅವನು ಬದಲಾದ ಮನುಷ್ಯನಾಗಿದ್ದ. ಎಲಿಫೆಂಟ್ ಜೊತೆ ಪಂದ್ಯಕ್ಕೆ ನಿಂತಾಗ ಅವನ ತೂಕ ಇನ್ನೂರ ನಲವತ್ತು ಪೌಂಡುಗಳಾಗಿದ್ದರೆ, ಈಗ ಕೇವಲ ನೂರೈವತ್ತು ಪೌಂಡುಗಳಷ್ಟು ಮಾತ್ರವೇ ಇದ್ದಾನೆ. ದುಂಡಗೆ ಮಿಂಚುತ್ತಲಿದ್ದ ಆಮೆಯ ಮುಖ ಈಗ ಉಡದ ಮುಖವಾಗಿತ್ತು, ಯಾವಾಗಲೂ ದಣಿದವನಾಗಿಯೂ ಬೇಸರಗೊಂಡವನಂತೆಯೂ ಕಾಣುತ್ತಿದ್ದ. ಆದರೆ ಪೆಟ್ರಾಕೋಟ್ಸ್‌ಗೆ ಮಾತ್ರ ಈಗ ಅವನು ಇರುವಷ್ಟು ಒಳ್ಳೆಯವನಾಗಿ ಹಿಂದೆಂದೂ ಇರಲಿಲ್ಲ ಎನಿಸುತ್ತಿತ್ತು. ಬಹುಶಃ ಅವನು ಹುಟ್ಟಿಸಿದ ಮರುಕ ಪ್ರೀತಿಯಿಂದ ಕೂಡಿತ್ತು. ಇಬ್ಬರಲ್ಲಿಯೂ, ಬಿಗಿ ಬಂಧನ ಸಾಧ್ಯವಾದದ್ದು ಅನುಭವಿಸಿದ ಕಷ್ಟಗಳಿಂದ. ಮುರಿದುಹೋದ ಮಂಚ ಹಿಂದಿನ ಉತ್ಕಟ ಭಾವನೆಗಳ ಅಭಿವ್ಯಕ್ತಿಗಾಗಿರದೆ ಈಗ ಅದು ಇಬ್ಬರ ಆತ್ಮೀಯತೆಯ ನೆಮ್ಮದಿಯ ತಾಣವಾಗಿತ್ತು. ಹೊದಿಸಿದ್ದ ಕನ್ನಡಿಗಳನ್ನೆಲ್ಲ ಹರಾಜು ಹಾಕಿ, ಲಾಟರಿ ಪ್ರಾಣಿಗಳನ್ನು ಕೊಂಡರು. ಹೇಸರಗತ್ತೆಗಳು ತಿಂದು ಚಿಂದಿಯಾಗಿಸಿದ್ದ ವೆಲ್‌ವೆಟ್‌ಗಳು ದೂರವಾದವು. ರಾತ್ರಿ ಬಹಳ ಹೊತ್ತು ನಿದ್ದೆಮಾಡದೆ, ಮುಗ್ಧ ಅಜ್ಜ ಅಜ್ಜಿಯರಂತೆ ಎಚ್ಚರವಾಗಿದ್ದು, ಆ ಸಮಯವನ್ನು ಲೆಕ್ಕ ಬರೆಯುವುದಕ್ಕೆ ಖರ್ಚು ಆದಾಯಗಳನ್ನು ತೂಗಿನೋಡುವುದಕ್ಕೆ ಬಳಸಿಕೊಳ್ಳುತ್ತಿದ್ದರು. ಉಳಿದ ಪೆನ್ನಿಗಳನ್ನು ಮೊದಲು ಮಾಡುತ್ತಿದ್ದಂತೆ ಐಷಾರಾಮಗಳಿಗೆಂದು ದುಂದುವೆಚ್ಚ ಮಾಡದೆ ಎಚ್ಚರ ವಹಿಸುತ್ತಿದ್ದರು. ನಾಣ್ಯಗಳನ್ನು ಎಣಿಸಿ ಒಟ್ಟುಗೂಡಿಸುತ್ತಾ ಒಂದಿಷ್ಟು ಅದರಿಂದ ಒಂದಿಷ್ಟು ಇದರಿಂದ ತೆಗೆದು, ಫರ್ನಾಂಡಾಳನ್ನು ಸಂತೋಷವಾಗಿ ಇರಿಸಲು ಇಷ್ಟು ಸಾಕು. ಅದು ಅಮರಾಂತಾ ಉರ್ಸುಲಾಳಿಗೆ ಶೂ ಕೊಳ್ಳಲು, ಮತ್ತು ಇನ್ನೊಂದು, ಸಾಂತಾ ಸೋಫಿಯಾ ದ ಲಾ ಪೀದಾದಳಿಗೆ ಹೊಸಬಟ್ಟೆ ಕೊಳ್ಳಲು, ಬಹಳ ಸಮಯದಿಂದ ಅವಳಿಗೆ ಬಟ್ಟೆ ಕೊಂಡದ್ದೇಇಲ್ಲ ಎಂದು, ಒಂದು ವೇಳೆ ಉರ್ಸುಲಾ ಸಾವನ್ನಪ್ಪಿದರೆ, ಇದಿಷ್ಟೂ ಅವಳ ಶವ ಪೆಟ್ಟಿಗೆಗೆ, ಇದು ಪ್ರತಿ ಮೂರು ತಿಂಗಳಿಗೊಮ್ಮೆ ಬೆಲೆ ಏರಿಕೆಯಾಗುತ್ತಿರುವ ಕಾಫಿಗೆ, ದಿನೇ ದಿನೇ ಸಿಹಿ ಕಳೆದುಕೊಳ್ಳುತ್ತಿರುವ ಸಕ್ಕರೆಗೆ, ಇನ್ನೂ

ಮಳೆಯಿಂದ ಒದ್ದೆಯಾಗಿರುವ ಹರಕು ಮುರುಕು ಸಾಮಾನಿಗೆ, ಇದು ಟಿಕೆಟ್ ಮಾಡಲು ಕಾಗದ ಮತ್ತು ಬಣ್ಣದ ಇಂಕುಗಳಿಗೆ, ಮತ್ತು ಇದು ಈಗಷ್ಟೇ ಮಾರಾಟವಾದ ಏಪ್ರಿಲ್ ತಿಂಗಳ ಲಾಟರಿಯಲ್ಲಿ ಕರು ಗೆದ್ದವನಿಗೆ ಕೊಡಲು ಎಂದೆಲ್ಲ ಹಣ ಬಂದೊದಗಿದತ್ತ ತೆಗೆದಿರಿಸಿದರು. ಕುರುರೋಗ ಹರಡುವ ಸೂಚನೆ ಇರುವಂಥದ್ದನ್ನು ಅಚ್ಚರಿ ಎಂಬಂತೆ ತಂದು ಮಿಗಿಸಿರುವುದು. ಬಡತನದ ಬದುಕಿನ ರೀತಿ ನೀತಿಗಳು ಎಷ್ಟು ಶುದ್ಧವಾಗಿದ್ದುವೆಂದರೆ, ಎಲ್ಲದಕ್ಕಿಂತ ಹೆಚ್ಚಿನ ಮೊತ್ತವನ್ನು ಫರ್ನಾಂಡಾಳಿಗೆಂದು ತೆಗೆದು ಪಕ್ಕಕ್ಕಿಡುತ್ತಿದ್ದರು. ಅದನ್ನು ಮರುಕದಿಂದಾಗಲೀ, ದಾನ ಕೊಡುತ್ತಿದ್ದೇವೆಂಬ ಭಾವನೆಯಿಂದಾಗಲಿ ಮಾಡುತ್ತಿರಲಿಲ್ಲ. ತಮ್ಮ ಸುಖಕ್ಕಿಂತ ಅವಳ ಸುಖವೇ ಹೆಚ್ಚೆಂದು ಭಾವಿಸುತ್ತಿದ್ದರು. ನಿಜವಾಗಿಯೂ ಅವರ ಮನಸ್ಸಿನಲ್ಲಿ ಇದ್ದುದೇನೆಂದರೆ, ಫರ್ನಾಂಡಾಳಂಥ ಮಗಳನ್ನು ಪಡೆಯಬೇಕೆಂದು ಹಂಬಲಿಸಿದರಾದರೂ ಅದು ಸಾಧ್ಯವಾಗಲಿಲ್ಲವೆನ್ನುವ ವಿಚಾರ ಅವರಿಗೆ ಅರ್ಥವಾಗಿರಲಿಲ್ಲ. ಅವರು ಎಷ್ಟು ನಿರ್ಲಿಪ್ತ ನೆಲೆಗೆ ಹೋಗಿದ್ದರೆಂದರೆ, ಡಚ್ ಟೇಬಲ್ ಕ್ಲಾತ್ ಕೊಳ್ಳುವುದಕ್ಕೆ ಚೂರುಪಾರು ತಿಂದುಕೊಂಡು ಹಣ ಉಳಿತಾಯ ಮಾಡಿದರು. ಆದರೂ ಅವರೆಷ್ಟು ಹಣ ಉಳಿತಾಯ ಮಾಡಿದರೂ, ಅವರೆಷ್ಟು ಯೋಜನೆಗಳ ಬಗ್ಗೆ ಆಲೋಚಿಸಿದರೂ, ಎಷ್ಟು ನಾಣ್ಯಗಳನ್ನು ಒಟ್ಟು ಮಾಡಿದರೂ ಕೂಡಾ, ಬದುಕುವುದಕ್ಕೆ ಎಷ್ಟು ಬೇಕೋ ಅಷ್ಟನ್ನು ಮಾತ್ರವೇ ತೆಗೆಯುತ್ತಿದ್ದಾಗ ಅವರ ರಕ್ಷಕ ದೇವರು ದಣಿವಿನಿಂದ ಮಲಗಿದ್ದರು. ಅವರು ಎಚ್ಚರದಿಂದಿದ್ದಾಗ, ಲೆಕ್ಕದಲ್ಲಿ ಖೋತಾ ಬಂದಾಗ, ಪ್ರಪಂಚದಲ್ಲಿ ಏನಾಗಿದೆ, ಹಿಂದಿನಂತೆ ಪ್ರಾಣಿಗಳೇಕೆ ಮರಿಗಳನ್ನು ಹಾಕುತ್ತಿಲ್ಲ. ದುಡ್ಡು ಹೇಗೆ ಕೈಯಿಂದ ಜಾರಿಹೋಯಿತು. ಜನ ಏಕೆ ಕುಡಿತಕ್ಕೆ ದೊಡ್ಡ ದೊಡ್ಡ ಮೊತ್ತವನ್ನು ಖರ್ಚು ಮಾಡುತ್ತಿದ್ದವರು ಆರು ಕೋಳಿಗಳಿಗೆ ಹನ್ನೆರಡು ಸೆಂಟ್ ಎಂದು ಹೇಳಿದರೆ ಹೆದ್ದಾರಿ ದರೋಡೆ ಎಂದು ಟೀಕಿಸುತ್ತಾರೆ ಎಂದು ಯೋಚಿಸುತ್ತಿದ್ದರು. ಅರೆಲಿಯಾನೊ ಸೆಗುಂಡೊಗೆ, ಅವನು ಹೇಳದಿದ್ದರೂ ಕೂಡ ಕೆಡುಕು ಪ್ರಪಂಚದಲ್ಲಿ ಎಲ್ಲಿಯೂ ಇಲ್ಲ. ಪೆಟ್ರಾಕೋಟ್ಸ್‌ಳ ನಿಗೂಢ ಹೃದಯದಲ್ಲಿ ಎಲ್ಲೊ ಅಡಗಿದೆ ಎಂದುಕೊಂಡ. ಮಳೆಯಿಂದಾಗಿ ಏನೊ ನಡೆದು ಪ್ರಾಣಿಗಳೆಲ್ಲ ಫಲವಂತಿಕೆಯನ್ನು ಕಳೆದುಕೊಂಡದ್ದರಿಂದ ಹಣಕ್ಕೆ ಮುಗ್ಗಟ್ಟಾಗಿರಬೇಕು ಎಂದುಕೊಂಡ. ಇಂತಹ ಆಲೋಚನೆಗಳಲ್ಲಿ ಮುಳುಗಿ ಅವಳ ಹೃದಯದಾಳದಲ್ಲಿ ಹುಡುಕಾಟ ಆರಂಭಿಸಿದಾಗ ಅವನಿಗೆ ಕಂಡದ್ದು ಅವಳ ಪ್ರೀತಿ. ಅವಳು ತನ್ನನ್ನು ಪ್ರೀತಿಸುವಂತೆ ಮಾಡಬೇಕೆಂಬ ಪ್ರಯತ್ನದಲ್ಲಿ ಅವನೇ ಅವಳ ಪ್ರೀತಿಗೆ ಬಿದ್ದ. ಅವನ ಪ್ರೀತಿ ಹೆಚ್ಚುತ್ತಿದ್ದಂತೆ ಅವಳೂ ಅವನನ್ನು ಹೆಚ್ಚು ಹೆಚ್ಚಾಗಿ ಪ್ರೀತಿಸತೊಡಗಿದಳು. ಹೀಗಾಗಿಯೇ ಶರತ್ಕಾಲದ ಉತ್ತುಂಗದಲ್ಲಿ ಅವಳು ಪ್ರಾಯದಲ್ಲಿದ್ದ ಮೂಢನಂಬಿಕೆ 'ಬಡತನ ಪ್ರೀತಿಯ ಗುಲಾಮ' ಎಂಬುದನ್ನು ಮತ್ತೊಮ್ಮೆ ನಂಬಿದಳು. ಇಬ್ಬರೂ ಹಿಂದಿನ ಹುಚ್ಚು ಕನಸುಗಳು, ಅಪಾರ ಸಂಪತ್ತು, ಅನಿಯಂತ್ರಿತ ಸಂಭೋಗ ಇವೆಲ್ಲವೂ ಕೋಪ ತರಿಸುವ ಸಂಗತಿಗಳೆಂದು ಕೊರಗಿದರು. ಇದರಿಂದಾಗಿ ಹಂಚಿಕೊಂಡ ಸ್ವರ್ಗದ ಏಕಾಂತಕ್ಕಾಗಿ ಎಷ್ಟೆಲ್ಲವನ್ನೂ ಕಳೆದುಕೊಳ್ಳಬೇಕಾಯಿತು. ಎಷ್ಟೋ ವರ್ಷಗಳ ನಿರರ್ಥಕ ಜೀವನವನ್ನು ಕಳೆದ ಮೇಲೆ ಪ್ರೀತಿಯ ಪವಾಡ ಏನೆಂಬುದನ್ನು ಒಬ್ಬರನ್ನೊಬ್ಬರು ಹಂಚಿಕೊಂಡು ಅನುಭವಿಸಿದರು. ಅವರೆಷ್ಟು ಸಂತೋಷವಾಗಿದ್ದರೆಂದರೆ, ಹಣ್ಣಾದ ಜೋಡಿಯಾಗಿದ್ದರೂ, ಮಕ್ಕಳಂತೆ ಅರಳಿದರು. ನಾಯಿಗಳಂತೆ ಆಟವಾಡುತ್ತಿದ್ದರು.

ಲಾಟರಿ ವ್ಯವಹಾರ ಬಹಳ ಕಾಲ ಮುಂದುವರಿಯಲಿಲ್ಲ. ಮೊದಲಿಗೆ ಅರೆಲಿಯಾನೊ ಸೆಗುಂಡೊ ವಾರದಲ್ಲಿ ಮೂರು ದಿನ ತನ್ನ ಆಫೀಸಿನಲ್ಲಿ ಕುಳಿತು ಒಂದೊಂದು ಟಿಕೆಟ್ಟಿನ ಮೇಲೂ ಬಹಳ ಕೌಶಲ್ಯದಿಂದ, ಲಾಟರಿಗಿಟ್ಟ ಪ್ರಾಣಿಗಳ ಚಿತ್ರಗಳನ್ನು ಬರೆಯುತ್ತಿದ್ದ, ಕೆಂಪು ಹಸು, ಹಸಿರು ಹಂದಿ, ನೀಲಿ ಕೋಳಿಗಳ ಗುಂಪು ಇತ್ಯಾದಿ ಪ್ರಾಣಿಗಳ ಚಿತ್ರಗಳಿರುತ್ತಿದ್ದವು. ನಂತರ ಟಿಕೇಟುಗಳ ಮೇಲೆ ಪ್ರಿಂಟ್ ಮಾಡಿದ ನಂಬರುಗಳಂತೆಯೇ ಮತ್ತು ಪೆಟ್ರಾಕೋಟ್ಸ್ ವ್ಯಾಪಾರಕ್ಕೆ ಒಳ್ಳೆಯ ಹೆಸರೆಂದು ಭಾವಿಸಿದ. 'ಡಿವೈನ್ ಪ್ರಾವಿಡೆನ್ಸ್ ರ್‍ಯಾಫೆಲ್ಸ್' (ದೈವಕೃಪೆಯ ಲಾಟರಿ) ಎಂದು ಬರೆಯುತ್ತಿದ್ದ. ಕ್ರಮೇಣ ಅವನಿಗೆ ವಾರಕ್ಕೆ ಎರಡು ಸಾವಿರ ಟಿಕೇಟುಗಳ ಮೇಲೆ ಬರೆಯುವುದು ಬಹಳ ಶ್ರಮದಾಯಕವೆನಿಸಿದ್ದರಿಂದ, ಪ್ರಾಣಿಯ ಚಿತ್ರ, ಹೆಸರು, ನಂಬರು ಎಲ್ಲವನ್ನೂ ರಬ್ಬರ್ ಸ್ಟ್ಯಾಂಪಿನಿಂದ ನಿಭಾಯಿಸಲು ಆರಂಭಿಸಿದ. ನಂತರ ಬೇರೆ ಬೇರೆ ಬಣ್ಣದ ಪ್ಯಾಡ್‌ಗಳಿಂದ, ಬಣ್ಣಗಳಿಂದ ಪ್ರಾಣಿಗಳನ್ನು ಒದ್ದೆ ಮಾಡುತ್ತಿದ್ದರು. ಕಡೆಯ ವರ್ಷಗಳಲ್ಲಿ ನಂಬರುಗಳ, ಬದಲಿಗೆ ಒಗಟುಗಳನ್ನು ಹಾಕಿದರೆ, ಸರಿಯಾಗಿ ಊಹಿಸಿದವರೆಲ್ಲರಿಗೂ ಬಹುಮಾನ ಹಂಚಿಕೆಯಾಗುವುದೆಂದು ಯೋಚಿಸಿದ. ಆದರೆ ಈ ಕ್ರಮ ಸ್ವಲ್ಪ ಗೋಜಲು ಅನಿಸಿದ್ದೇ ಅಲ್ಲದೆ ಅನೇಕ ಅನುಮಾನಗಳಿಗೆ ಕಾರಣವಾಯಿತು. ಇದರಿಂದಾಗಿ ಎರಡನೇ ಸಲಕ್ಕೆ ಇದನ್ನು ನಿಲ್ಲಿಸಿಬಿಟ್ಟ.

ಅರೆಲಿಯಾನೊ ಸೆಗುಂಡೊಗೆ ತನ್ನ ಲಾಟರಿ ವ್ಯವಹಾರದ ಪ್ರತಿಷ್ಠೆಯನ್ನು ಕಾಯ್ದುಕೊಳ್ಳುವ ಪ್ರಯತ್ನದಲ್ಲಿ ಸಮಯವೇ ಸಾಕಾಗುತ್ತಿರಲಿಲ್ಲವಾಗಿ, ಮಕ್ಕಳನ್ನು ನೋಡಲು ಸಮಯವೇ ಆಗಲಿಲ್ಲ. ಫರ್ನಾಂಡಾ ಅಮರಾಂತಾ ಉರ್ಸುಲಾಳನ್ನು, ಕೇವಲ ಆರು ಹುಡುಗಿಯರಿದ್ದ ಒಂದು ಚಿಕ್ಕ ಪ್ರೈವೇಟ್ ಶಾಲೆಗೆ ಸೇರಿಸಿದಳು. ಆದರೆ ಅರೆಲಿಯಾನೊನನ್ನು ಪಬ್ಲಿಕ್ ಶಾಲೆಗೆ ಕಳಿಸಲು ಒಪ್ಪಲಿಲ್ಲ. ರೂಮಿನಿಂದ ಹೊರಗೆ ಬಿಟ್ಟದ್ದೇ ತಪ್ಪಾಯಿತೆಂದು ಯೋಚಿಸುತ್ತಿದ್ದಳು. ಅಲ್ಲದೆ ಶಾಲೆಗಳಲ್ಲಿ ಕ್ಯಾಥೋಲಿಕ್ ವಿವಾಹದಿಂದ ಕಾನೂನುಬದ್ಧವಾಗಿ ಹುಟ್ಟಿದ ಮಕ್ಕಳಿಗೇ, ಅದೂ ಜನ್ಮಪ್ರಮಾಣಪತ್ರ ಇದ್ದಾಗ ಮಾತ್ರವೇ ಪ್ರವೇಶ ಸಾಧ್ಯವಿತ್ತು. ಆದರೆ ಅರೆಲಿಯಾನೊ ಮನೆಗೆ ಬಂದಾಗ ಅವನ ಅಂಗಿಗೆ, ಸಿಕ್ಕಿಬಿದ್ದ, ಅವನ ಜನ್ಮ ಪ್ರಮಾಣಪತ್ರದಲ್ಲಿ 'ತಬ್ಬಲಿ' ಎಂದು ನಮೂದಿಸಲಾಗಿತ್ತು. ಹಾಗಾಗಿ ಅವನನ್ನು ಮನೆಯಲ್ಲಿಯೇ ಕೂಡಿ ಹಾಕಿ ಬೆಳಸಲಾಗುತ್ತಿತ್ತು. ಸಾಂತಾ ಸೋಫೀಯಾ ದ ಲಾ ಪೀದಾದಳ ಅಕ್ಕರೆಯ ಕಣ್ಣುಗಳ ನೆರಳಲ್ಲಿ ಅಜ್ಜಿ ಉರ್ಸುಲಾಳಿಂದ ಆ ಸೀಮಿತ ಜಗತ್ತಿನಲ್ಲಿ ಎಷ್ಟು ಕಲಿಯಲು ಸಾಧ್ಯವಿತ್ತೊ ಅಷ್ಟನ್ನು ಕಲಿತ. ಅವನು ತೆಳ್ಳಗೆ, ಬಲುಸೂಕ್ಷ್ಮವಾಗಿದ್ದ. ಕುತೂಹಲದ ಕಣ್ಣುಗಳು ಹಿರಿಯರನ್ನು ದಿಗ್ಭ್ರಾಂತರನ್ನಾಗಿ ಮಾಡುತ್ತಿದ್ದವು. ಇವನ ವಯಸ್ಸಿನಲ್ಲಿ ಇದ್ದಾಗ ಕರ್ನಲ್‌ನಲ್ಲಿ ಕಾಣುತ್ತಿದ್ದ ಕುತೂಹಲಕರವಾದ ಮತ್ತು ಅಸಾಧಾರಣ ನೋಟಕ್ಕೆ ಬದಲಾಗಿ ಇವನ ನೋಟದಲ್ಲಿ ಚಂಚಲತೆ ಇತ್ತು. ಅಮರಾಂತಾ ಉರ್ಸುಲಾ ಕಿಂಡರ್ ಗಾರ್ಡನ್‌ನಲ್ಲಿ ಇದ್ದಾಗ, ಇವನು ಗಾರ್ಡನ್‌ನಲ್ಲಿ ಎರೆಹುಳ ಮತ್ತು ಅನ್ಯ ಕೀಟಗಳನ್ನು ಹಿಡಿದು ಹಿಂಸಿಸುತ್ತಿದ್ದ. ಒಂದು ಸಲ ಇವನು ಚೇಳೊಂದನ್ನು ಉರ್ಸುಲಾಳ ಹಾಸಿಗೆಗೆ ಬಿಡಲು ಬಾಕ್ಸ್‌ನಲ್ಲಿ ಹಾಕುತ್ತಿದ್ದುದನ್ನು ನೋಡಿದ ಫರ್ನಾಂಡಾ, ಅವನನ್ನು ಮೆಮೆಯ ಹಳೆಯ ರೂಮಿನಲ್ಲಿರಿಸಿ ಬೀಗ ಹಾಕಿದಳು. ಅಲ್ಲಿ ಒಬ್ಬನೇ ಕುಳಿತು ವಿಶ್ವಕೋಶದಲ್ಲಿನ ಚಿತ್ರಗಳನ್ನು ನೋಡುತ್ತಿದ್ದ. ಒಂದು ದಿನ ಮಧ್ಯಾಹ್ನ ಉರ್ಸುಲಾ ಶುದ್ಧ

ನೀರನ್ನು, ಒಂದು ಬಗೆಯ ಬೇರನ್ನು ಮನೆಯಲ್ಲೆಲ್ಲ ಚಿಮುಕಿಸುತ್ತಿದ್ದಾಗ ಅವನನ್ನು ನೋಡಿದಳು. ಅವಳು ಅವನನ್ನು ಎಷ್ಟೋ ಸಲ ನೋಡಿದ್ದರೂ ಅವನನ್ನು ಯಾರೆಂದು ವಿಚಾರಿಸುತ್ತಿದ್ದಳು.

"ನಾನು ಅರೆಲಿಯಾನೊ ಬ್ಯುಂಡಿಯಾ" ಎಂದು ಹೇಳಿದ.

"ಸರಿ, ಈಗ ನೀನು ಬೆಳ್ಳಿ ಕೆಲಸ ಮಾಡುವುದನ್ನು ಕಲಿಯುವ ಸಮಯ ಬಂದಿದೆ" ಎಂದು ಉತ್ತರಿಸಿದಳು.

ಮತ್ತೆ ಉರ್ಸುಲಾ ಅವನನ್ನು ತನ್ನ ಮಗನೆಂದು ತಪ್ಪುತಿಳಿದುಕೊಂಡಳು. ಅಖಂಡ ಮಳೆಗಾಲ ಬಂದುಹೋದಮೇಲೆ, ಒಂದೊಮ್ಮೆ ಉರ್ಸುಲಾಳಿಗೆ ಸ್ಪಷ್ಟತೆಯ ಗಾಳಿ ಬೀಸುತ್ತಿದ್ದುದು ಈಗ ಇಲ್ಲವಾಗಿತ್ತು. ತರ್ಕಬದ್ಧ ಆಲೋಚನೆಗಳು ಹಿಂತಿರುಗಿರಲಿಲ್ಲ. ಅವಳು ಬೆಡ್‌ರೂಮಿಗೆ ಹೋದಾಗ ಸಾಮಾನ್ಯವಾಗಿ ಹೊರಗೆ ಹೋದಾಗ ತೊಡುತ್ತಿದ್ದ ಕ್ರಿನೊಲಿನ್, ಮತ್ತು ಬೀಡೆಡ್ ಜಾಕೆಟ್ ತೊಟ್ಟಿದ್ದ. ಪೆಟ್ರೊನಿಲಾ ಇಗುಆರನ್, ಟ್ರಾಂಕ್ವಿಲಿನಾ ಮಾರಿಯಾ ಮಿನಿಯೇಟಾ ಅಲಾಕೋಕ್ ಬ್ಯುಂಡಿಯಾ ತನ್ನ ಅಜ್ಜಿ ತೂಗಾಡುವ ಕುರ್ಚಿಯಲ್ಲಿ ಗಾಳಿ ಹಾಕಿಕೊಳ್ಳುತ್ತಾ ಕುಳಿತಿದ್ದುದನ್ನು ನೋಡಿದಳು. ಇವರಲ್ಲದೆ ವೈಸ್‌ರಾಯ್ ಸಂಬಂಧಿತವಾದ ನಕಲಿ ಟರ್ಕಿ ಉಡುಗೆ ತೊಟ್ಟ ಮುತ್ತಜ್ಜ ಅರೆಲಿಯಾನೊ ಆರ್ಕಾಡಿಯೊ ಬ್ಯುಂಡಿಯಾ, ಹಸುಗಳ ಮೈಮೇಲಿನ ಹುಳುಗಳು ಸುರುಟಿಕೊಂಡು ಕೆಳಗೆ ಬೀಳುವ ಹಾಗೆ ಮಾಡುವ ಶಕ್ತಿಯುಳ್ಳ ಪ್ರಾರ್ಥನೆ(ಮಂತ್ರ)ಯನ್ನು ಕಂಡುಹಿಡಿದಿದ್ದ ತಂದೆ ಅರೆಲಿಯಾನೊ ಇಗುಆರಸ್, ಹೆದರಿಕೆ ಸ್ವಭಾವದ ತನ್ನ ತಾಯಿ, ಹಂದಿಬಾಲವಿರುವ ಸೋದರ ಸಂಬಂಧಿ ಜೋಸ್ ಆರ್ಕಾಡಿಯೊ ಬ್ಯುಂಡಿಯಾ, ಅವಳ ಸತ್ತ ಮಕ್ಕಳು ಗೋಡೆಗೆ ಆನಿದಂತೆ ಸಾಲಾಗಿ ಜೋಡಿಸಿದ್ದ ಕುರ್ಚಿಗಳಲ್ಲಿ ಭೇಟಿಗಾಗಿ ಬಂದಂತಲ್ಲದೆ ಜಾಗರಣೆಗಾಗಿ ಕುಳಿತಿದ್ದಂತೆ ಇದ್ದರು. ಬಣ್ಣ ಬಣ್ಣದ ಹರಟೆ ಮಾತುಗಳನ್ನು ಜೋಡಿಸುತ್ತಿದ್ದಳು. ಬೇರೆ ಬೇರೆ ಕಾಲಗಳಲ್ಲಿ, ಬೇರೆ ಬೇರೆ ಸ್ಥಳಗಳಲ್ಲಿನ ವಿಷಯಗಳ ಬಗ್ಗೆ ಟೀಕೆ ಮಾಡುತ್ತಿದ್ದಳು. ಇದರಿಂದಾಗಿ ಶಾಲೆಯಿಂದ ಹಿಂತಿರುಗಿದ ಅಮರಾಂತಾ ಉರ್ಸುಲಾ ಮತ್ತು ವಿಶ್ವಕೋಶದಲ್ಲಿ ಮುಳುಗಿರುತ್ತಿದ್ದ ಅರೆಲಿಯಾನೊರಿಗೆ ಸಾಕುಸಾಕಾಗಿ ಹೋಗುತ್ತಿತ್ತು. ಯಾವಾಗಲೂ ತನ್ನ ಹಾಸಿಗೆಯಲ್ಲಿ ಕುಳಿತು ತನ್ನಲ್ಲಿ ತಾನು ಮಾತಾಡಿಕೊಳ್ಳುತ್ತಾ ಸತ್ತವರ ಪ್ರಪಂಚದಲ್ಲಿ ಮುಳುಗಿಹೋಗುತ್ತಿದ್ದಳು. ಒಂದು ಸಲ ಇದ್ದಕ್ಕಿದ್ದಂತೆ 'ಬೆಂಕಿ!' ಎಂದು ಕೂಗಿಕೊಂಡಳು. ಮನೆಯವರಿಗೆಲ್ಲಾ ಗಾಭರಿಯಾಯಿತು. ಆದರೆ ಅವಳು ಕಂಡದ್ದು ತಾನು ನಾಲ್ಕು ವರ್ಷದ ವಯಸ್ಸಿನವಳಾಗಿದ್ದಾಗ ಕಣಜಕ್ಕೆ ಬೆಂಕಿ ಹತ್ತಿದುದನ್ನು ನೋಡುತ್ತಿದ್ದಳು. ಕಡೆಗೆ ಅವಳು ಭೂತ ವರ್ತಮಾನಗಳನ್ನು ಹೇಗೆ ಬೆರೆಸುತ್ತಿದ್ದಳೆಂದರೆ, ಅದು ನೆನಪಿನಿಂದ ಬಂದುದೊ ಅಥವಾ ವರ್ತಮಾನದಲ್ಲಿ ಅನಿಸಿದ್ದೊ ಎನ್ನುವುದು ಯಾರಿಗೂ ತಿಳಿಯುತ್ತಿರಲಿಲ್ಲ. ಕೊಂಚ ಕೊಂಚವಾಗಿ ಕುಗ್ಗಿ ಮಾಂಸದ ಮುದ್ದೆಯಂತಾದಳು, ಕಡೆಯ ತಿಂಗಳುಗಳಲ್ಲಿ, ತನ್ನ ನೈಟ್‌ಗೌನ್‌ನಲ್ಲಿ ಮರೆಯಾದ ಒಣಗಿದ ದ್ರಾಕ್ಷಿಬಳ್ಳಿಯಂತಾದಳು. ಯಾವಾಗಲೂ ಎತ್ತಿ ಹಿಡಿಯುತ್ತಿದ್ದ ಕೈ ಮರಿಮೊಂಡಾ ಜಾತಿಯ ಕೋತಿಯ ಪಂಜಾದಂತೆ ಇರುತ್ತಿತ್ತು. ಎಷ್ಟೋ ದಿನಗಳು ನಿಶ್ಚಲವಾಗಿದ್ದಳು. ಸಾಂತಾ ಸೋಫಿಯಾ ದ ಲಾ ಪೀದಾದ್ ಅವಳು

ಬದುಕಿದ್ದಾಳೆಂದು ಅವಳಿಗೆ ಮನವರಿಕೆ ಮಾಡಲು ಅಲ್ಲಾಡಿಸುತ್ತಿದ್ದಳು. ಅವಳನ್ನು ತೊಡೆಯಮೇಲೆ ಕೂರಿಸಿಕೊಂಡು ಒಂದೆರಡು ಚಮಚೆ ಸಕ್ಕರೆ ನೀರನ್ನು ಕುಡಿಸುತ್ತಿದ್ದಳು. ಹೊಸದಾಗಿ ಹುಟ್ಟಿದ ಮುದುಕಿಯಂತೆ ಕಾಣುತ್ತಿದ್ದಳು. ಅಮರಾಂತಾ ಉರ್ಸುಲಾ ಮತ್ತು ಅರೆಲಿಯಾನೊ ಅವಳನ್ನು ಹಾಸಿಗೆಯಿಂದ ಎಬ್ಬಿಸಿ ಹೊರಗೆ ಕರೆದೊಯ್ಯುತ್ತಿದ್ದರು. ಅವರು ಅವಳನ್ನು ದೇವ ಪೀಠದ ಮೇಲೆ, ಬಾಲಕ್ರೈಸ್ತನಿಗಿಂತ ಎತ್ತರವಿದ್ದಾಳೆಯೇ ಎಂದು ಪರೀಕ್ಷಿಸಲು ಕೂರಿಸಿದರು. ಒಂದು ಮಧ್ಯಾಹ್ನ ಅಡಿಗೆಮನೆ ಕಪಾಟಿನಲ್ಲಿ ಬಚ್ಚಿಟ್ಟರು. ಅವಕಾಶ ಸಿಕ್ಕಿದ್ದರೆ ಇಲಿಗಳು ತಿಂದುಹಾಕಿಬಿಡಬಹುದಾಗಿತ್ತು. ಒಂದು ಕ್ರೈಸ್ತಉತ್ಸವದ ಭಾನುವಾರದಂದು ಫರ್ನಾಂಡಾ ಚರ್ಚಿಗೆ ಹೋಗಿದ್ದಾಗ, ಆ ಮಕ್ಕಳಿಬ್ಬರೂ ಕುತ್ತಿಗೆ ಮತ್ತು ಕಾಲು ಹಿಡಿದುಕೊಂಡು ಹೊರಗೆ ಕರೆದೊಯ್ದರು.

"ಅಯ್ಯೋ ಪಾಪ ಅಜ್ಜಿ, ಮುದುಕಿಯಾಗಿ ಸತ್ತು ಹೋದಳು" – ಎಂದು ಅಮರಾಂತಾ ಉರ್ಸುಲಾ ಹೇಳಿದಳು.

ಉರ್ಸುಲಾಗೆ ಗಾಭರಿಯಾಯಿತು.

"ಅಯ್ಯೋ ನಾನು ಬದುಕಿದ್ದೇನೆ!" ಎಂದಳು.

"ನೀನೇ ನೋಡು, ಅವಳು ಉಸಿರಾಡುತ್ತಲೂ ಇಲ್ಲ" ಎಂದು ಬರುತ್ತಿದ್ದ ನಗುವನ್ನು ಹತ್ತಿಕ್ಕಿಕೊಂಡು ಹೇಳಿದಳು.

"ನಾನು ಮಾತಾಡುತ್ತಿದ್ದೀನಿ!" ಉರ್ಸುಲಾ ಜೋರಾಗಿ ಹೇಳಿದಳು.

"ಅವಳಿಗೆ ಮಾತಾಡೋಕೂ ಆಗೊಲ್ಲ, ಪಾಪ! ಅವಳು ಮಿಡತೆ ತರ ಸತ್ತುಹೋದಳು" ಅರೆಲಿಯಾನೊ ಹೇಳಿದ.

ಆಗ ಅವಳಿಗೆ ಸಾಕ್ಷಿ ಕೊಡಬೇಕಾಯಿತು 'ದೇವರೇ! ಸಾವೆಂದರೆ ಹೀಗೇನೆ!" ಎಂದು ಭಾವೋದ್ವೇಗದಿಂದ ಹೇಳಿದಳು.

ತಡವರಿಸುತ್ತಲೇ ಎರಡು ದಿನಗಳ ಕಾಲ ಪ್ರಾರ್ಥನೆಯನ್ನು ನಿರಂತರವಾಗಿ ಅಖಂಡವಾಗಿ ಮುಂದುವರೆಸಿದಳು. ಮಂಗಳವಾರದ ಹೊತ್ತಿಗೆ ಅವಳ ಪ್ರಾರ್ಥನೆ ತಡವರಿಸತೊಡಗಿತು. ದೇವರ ಮುಂದೆ ಬೇಡಿಕೆಗಳು ಶುರುವಾಯಿತು. ಕೆಂಜಿರುವೆಗಳಿಂದ ಮನೆ ಹಾಳಾಗದಿರಲಿ, ರೆಮೆಡಿಯೋಸ್‌ಳ ಭಾವಚಿತ್ರದ ಮುಂದಿರುವ ದೀಪ ಆರದಿರಲಿ. ಬ್ಯುಂಡಿಯಾ ಕುಟುಂಬದಲ್ಲಿ ಒಂದೇ ರಕ್ತವಿರುವವರೊಡನೆ ವಿವಾಹವೆಂದೂ ಆಗದಿರಲಿ. ಆದದ್ದೇ ಆದರೆ ಹಂದಿಬಾಲದೊಂದಿಗೆ ಮಕ್ಕಳು ಹುಟ್ಟುತ್ತಾರೆ, ಎಂದೆಲ್ಲ ಬೇಡಿಕೊಂಡಳು. ಅವಳ ಆಗಿನ ಆ ಸ್ಥಿತಿಯ ಪ್ರಯೋಜನ ಪಡೆಯಲು ಅರೆಲಿಯಾನೊ ಸೆಗುಂಡೊ ಚಿನ್ನ ಎಲ್ಲಿದೆ ಎಂದು ಹೇಳುವಂತೆ ಮಾಡಲು ಪ್ರಯತ್ನಿಸಿದ. ಎಂದಿನಂತೆ ಅವನ ಪ್ರಯತ್ನಗಳು ಫಲಕಾರಿಯಾಗಲಿಲ್ಲ. "ಅದರ ಒಡೆಯ ಬಂದಾಗ, ದೇವರೆ ದಾರಿ ತೋರಿಸುತ್ತಾನೆ ಅವನಿಗೆ ಅದನ್ನು ಪಡೆಯಲು" ಎಂದು ಹೇಳಿದಳು. ಸಾಂತಾ ಸೋಫಿಯಾ ದ ಲಾ ಪೀದಾದ್‌ಳಿಗೆ

ಕ್ಷಣ ಕ್ಷಣಕ್ಕೂ ಅವಳು ಸಾವಿಗೆ ಹತ್ತಿರವಾಗುತ್ತಿದ್ದಾಳೆ ಎಂಬುದು ಖಚಿತವಾಯಿತು. ಅವಳಿಗೆ ಪ್ರಕೃತಿಯಲ್ಲಿ ಅಸ್ತವ್ಯಸ್ತವಾದಂತೆ ತೋರಿತು. ಗುಲಾಬಿಗಳು ಗೂಸ್‌ಫುಟ್ ಜಾತಿಯ ಸಸ್ಯದ ವಾಸನೆ ಹೊಮ್ಮಿಸಿದವು. ಕಡಲೆ ಸಸ್ಯಗಳು ಬಿದ್ದುಹೋದರೆ ಬೀನ್ಸ್ ನೆಲದ ಮೇಲೆ ಪರಿಪೂರ್ಣವಾದ ಜ್ಯಾಮಿತಿಯ ಲೆಕ್ಕಾಚಾರದಲ್ಲಿ ನಕ್ಷತ್ರ ಮೀನಿನ ಆಕಾರದಲ್ಲಿ ಕಾಣಿಸಿತು. ರಾತ್ರಿಯಲ್ಲಿ ಕಿತ್ತಲೆ ಬಣ್ಣದ ಪ್ರಕಾಶಮಾನವಾದ ತಟ್ಟೆಗಳು ಆಕಾಶದಲ್ಲಿ ಹಾದುಹೋದದ್ದನ್ನು ಕಂಡಳು.

ಗುಡ್ ಫ್ರೈಡೆಯ ದಿನ ಬೆಳಗಿನ ಹೊತ್ತಿಗೆ ಅವಳು ಸಾವನ್ನಪ್ಪಿದ್ದಳು. ಹೋದಸಲ ಬನಾನಾ ಕಂಪನಿಯ ಅವಧಿಯಲ್ಲಿ ಅವಳ ವಯಸ್ಸಿನ ಲೆಕ್ಕ ಹಾಕುವಲ್ಲಿ ಅವರೆಲ್ಲ ಸಹಾಯಮಾಡಿದ್ದರು. ಆಗಿನ ಸಮಯದಲ್ಲಿ ಅವಳ ವಯಸ್ಸು, ನೂರ ಹದಿನೈದು ಇಲ್ಲ ನೂರ ಇಪ್ಪತ್ತೆರಡು ಎಂದು ಅಂದಾಜು ಮಾಡಿದ್ದರು. ಅವಳ ಶವ ಪೆಟ್ಟಿಗೆ, ಅರೆಲಿಯಾನೋನನ್ನು ತಂದ ಬುಟ್ಟಿಗಿಂತ ದೊಡ್ಡದಿರಲಿಲ್ಲ. ಅಂತಿಮ ಸಂಸ್ಕಾರಕ್ಕೆ ಬಹಳ ಜನ ಇರಲಿಲ್ಲ. ಯಾಕೆಂದರೆ ಅವಳ ಸಮಕಾಲೀನರು ಬಹಳ ಮಂದಿ ಉಳಿದಿರಲಿಲ್ಲ. ಅಲ್ಲದೆ ಆ ಮಧ್ಯಾಹ್ನದ ಬಿಸಿಲು ವಿಪರೀತವಾಗಿತ್ತು. ಹಕ್ಕಿಗಳೂ ಕೂಡಾ ಏನು ಮಾಡಲೂ ತೋಚದೆ ಕಿಟಕಿಗಳೊಳಗೆ, ಪರದೆಗಳನ್ನು ಹರಿದು ನುಗ್ಗಿ ಬೆಡ್‌ರೂಮುಗಳಲ್ಲಿ ಸಾಯಲು ಮುಂದಾಗಿದ್ದವು. ಮೊದಲು ಅವರಿಗೆ ಪ್ಲೇಗು ಎನಿಸಿತು. ಮನೆ ಹೆಂಗಸರು, ಮಧ್ಯಾಹ್ನದ ಮಲಗುವ ಸಮಯದಲ್ಲಿ ಸತ್ತ ಹಕ್ಕಿಗಳನ್ನು ಗುಡಿಸಿ ಹೊರಗೆ ಹಾಕುವಲ್ಲಿ ದಣಿದು ಹೋಗಿದ್ದರು. ಗಂಡಸರು ಸತ್ತ ಹಕ್ಕಿಗಳ ರಾಶಿಯನ್ನು ಗಾಡಿಗಳಲ್ಲಿ ತುಂಬಿಕೊಂಡು ಹೋಗಿ ನದಿಯಲ್ಲಿ ಎಸೆದರು. ಈಸ್ಟರ್ ಭಾನುವಾರ ನೂರುವರ್ಷ ವಯಸ್ಸಿನ ಫಾದರ್ ಆ್ಯಂಟೋನಿಯೊ ಇಸಾಬೆಲ್, ಧರ್ಮಪೀಠದ ಮೇಲಿಂದ, ಹಕ್ಕಿಗಳ ಸಾವಿಗೆ ಕಾರಣ ಅಲೆಮಾರಿ ಯಹೂದಿಯ ಕೆಟ್ಟ ಪ್ರಭಾವದಿಂದ ಎಂದು ಹೇಳಿದ. ಆತನನ್ನು ತಾನು ರಾತ್ರಿಗೆ ಮುಂಚೆ ನೋಡಿದ್ದೆನೆಂದು ಅವನು ಹೋತ ಮತ್ತು ಧರ್ಮಬಾಹಿರ ಹೆಣ್ಣಿನ ಸಂಪರ್ಕದಿಂದ ಹುಟ್ಟಿದ ರಾಕ್ಷಸ ಪ್ರಾಣಿಯೆಂದೂ ಅದರ ಉಸಿರಿನ ಬೆಂಕಿಯಿಂದ ಹಕ್ಕಿಗಳು ಸತ್ತವೆಂದೂ, ಹೊಸದಾಗಿ ಮದುವೆಯಾದ ಹೆಂಗಸರ ಮೇಲೆ ದೃಷ್ಟಿಬಿದ್ದಲ್ಲಿ ರಾಕ್ಷಸರು ಹುಟ್ಟುತ್ತಾರೆಂದು ವಿವರಿಸಿದ. ಆದರೆ ಅವನ ಮಾತುಗಳನ್ನು, ವಯಸ್ಸಾಗಿರುವುದರಿಂದ ಏನೇನೊ ಬಡಬಡಿಸುತ್ತಿದ್ದಾನೆಂದೂ ಯಾರೂ ಗಮನ ಕೊಡಲಿಲ್ಲ. ಆದರೆ ಒಬ್ಬಳು ಹೆಂಗಸು ಬುಧವಾರ ಬೆಳಿಗ್ಗೆ ಎಲ್ಲರನ್ನೂ ಎಬ್ಬಿಸಿದಳು. ಎರಡು ಕಾಲಿನ ಭಾರಿ ಪ್ರಾಣಿಯ ಸೀಳುಪಾದಗಳ ಗುರುತನ್ನು ನೋಡಿದ್ದಳು. ಅದನ್ನು ನೋಡಿದ ಮೇಲೆ ಪಾದ್ರಿ ಹೇಳಿದ ಮಾತುಗಳಲ್ಲಿ ಯಾವುದೇ ಅನುಮಾನ ಉಳಿದಿರಲಿಲ್ಲ. ಭಯಾನಕ ಪ್ರಾಣಿಯನ್ನು ಹೋಲುವಂತಹ ಗುರುತುಗಳೇ ಇದ್ದವು. ಅವರೆಲ್ಲರೂ ಒಟ್ಟಿಗೆ ಸೇರಿ ತಮ್ಮ ಅಂಗಳದಲ್ಲಿ ಬಲೆಗಳನ್ನು ಹರಡಿದರು. ಹಾಗೆ ಮಾಡಿ ಅದನ್ನು ಹಿಡಿದರು. ಉರ್ಸುಲಾ ಸತ್ತು ಎರಡುವಾರ ಕಳೆದ ಮೇಲೆ ಪೆಟ್ರಾಕೋಟ್ಸ್ ಮತ್ತು ಅರೆಲಿಯಾನೊ ಸೆಗುಂಡೊ ಹತ್ತಿರದಿಂದ ಕೇಳಿ ಬರುತ್ತಿದ್ದ ಕರುವಿನ ಕೂಗಿನಿಂದ ಗಾಭರಿಗೊಂಡು ಎದ್ದರು. ಅವರು ಅಲ್ಲಿಗೆ ಹೋದಾಗ ಗಂಡಸರ ಒಂದು ಗುಂಪು ಒಣಗಿದ ಎಲೆಗಳಿಂದ ಮುಚ್ಚಿದ ಗುಂಡಿಯಿಂದ, ಚೂಪಾದ ಕೋಲುಗಳಿಂದ ಅದನ್ನು ಹಿಡಿದೆತ್ತುತ್ತಿದ್ದರು. ಅದು

ಕೂಗುವುದನ್ನು ನಿಲ್ಲಿಸಿತ್ತು. ಅದು ನೋಡಲು ಚಿಕ್ಕ ಹೋರಿಯಷ್ಟಿದ್ದರೂ ಭಾರದಲ್ಲಿ ದೊಡ್ಡ ಎತ್ತಿನಂತಿತ್ತು. ಅದರ ಮೈಮೇಲಿನ ಗಾಯಗಳಿಂದ ಹಸಿರು ಮತ್ತು ಅಂಟಂಟಾದ ದ್ರವ ಸುರಿಯುತ್ತಿತ್ತು. ಅದರ ದೇಹ ಒರಟಾದ ಕೂದಲಿನಿಂದ ತುಂಬಿತ್ತು. ಚರ್ಮ ಮೀನಿನ ಗಟ್ಟಿಯಾದ ಪೊರೆಗಳಂತಿದ್ದವು. ಆದರೆ ಪಾದ್ರಿ ವಿವರಿಸಿದ್ದಕ್ಕಿಂತ ಭಿನ್ನವಾಗಿ, ಮನುಷ್ಯರ ಭಾಗಗಳು ಗಂಡಸಿನ ಹಾಗೆ ಇರದೆ ಸೊರಗಿದ ದೇವತೆಯಂತೆ ಇದ್ದವು. ಅದರ ಕೈಗಳು ಸೆಟೆದಿದ್ದರೂ ಚುರುಕಾಗಿದ್ದವು. ಕಣ್ಣುಗಳು ದೊಡ್ಡದಾಗಿದ್ದರೂ ಮಂಕಾಗಿದ್ದವು. ಅದರ ಭುಜಗಳ ಮೇಲೆ ರೆಕ್ಕೆಗಳಿದ್ದವು. ಅವುಗಳನ್ನು ಕತ್ತರಿಸಿದ್ದರಿಂದ ಕಲೆಗಳಿದ್ದವು. ಚೌಕದಲ್ಲಿದ್ದ ಬಾದಾಮಿ ಮರಕ್ಕೆ ಅದನ್ನು ಜನರೆಲ್ಲರೂ ನೋಡಲೆಂದು ಕಾಲುಗಳನ್ನು ಕಟ್ಟಿ ನೇತುಹಾಕಿದ್ದರು. ಅದು ಕೊಳೆಯುವುದಕ್ಕೆ ಆರಂಭವಾದಾಗ ಅದನ್ನು ಬೆಂಕಿ ಹಚ್ಚಿ ಸುಟ್ಟರು. ಏಕೆಂದರೆ ನದಿಯಲ್ಲಿ ಬಿಸಾಡಲು ಪೂರ್ತಿ ಪ್ರಾಣಿ ಜಾತಿಯೂ ಆಗಿರಲಿಲ್ಲ. ಸಮಾಧಿ ಮಾಡಲು ಪೂರ್ತಿ ಮನುಷ್ಯ ಜಾತಿಯೂ ಆಗಿರಲಿಲ್ಲ. ನಿಜವಾಗಿಯೂ ಹಕ್ಕಿಗಳ ಸಾವಿಗೆ ಅದು ಕಾರಣವೆಂಬುದಾಗಲಿ, ಹೊಸದಾಗಿ ವಿವಾಹವಾದವರಿಗೆ ರಾಕ್ಷಸ ಮಕ್ಕಳು ಹುಟ್ಟುತ್ತಾರೆಂಬುದಾಗಲೀ ಸಾಬೀತಾಗಲಿಲ್ಲ. ಬಿಸಿಲಿನ ತಾಪವೂ ಕಡಿಮೆಯಾಗಲಿಲ್ಲ.

ಅದೇ ವರ್ಷದ ಕೊನೆಯಲ್ಲಿ ರೆಬೆಕಾ ತೀರಿಕೊಂಡಳು. ಅರ್ಜೆನಿಡಾ ಅವಳ ಆಜೀವ ಸೇವಕಿ, ಮೂರು ದಿನಗಳಿಂದ ಬೆಡ್‌ರೂಮಿನ ಬಾಗಿಲು ತೆರೆಯಲೇ ಇಲ್ಲವಾಗಿ ಅಧಿಕಾರಿಗಳ ನೆರವನ್ನು ಪಡೆದು ಒಳಗೆ ಸೇರಿಕೊಂಡ ಒಡತಿಯನ್ನು ಹೊರಗೆ ಬರಿಸಲು ಯತ್ನಿಸಿದಳು. ಬಾಗಿಲು ತೆರೆದಾಗ ರೆಬೆಕಾ ಹಾಸಿಗೆಯಲ್ಲಿ ಒಂಟಿಯಾಗಿ ಸೀಗಡಿಯ ಹಾಗೆ ಸುರುಳಿ ಸುತ್ತಿಕೊಂಡು ಬಾಯಲ್ಲಿ ಬೆರಳಿರಿಸಿಕೊಂಡು ಮಲಗಿದ್ದಳು. ತಲೆ ಬೋಳಾಗಿತ್ತು. ಅರೆಲಿಯಾನೊ ಸೆಗುಂಡೊ ಅಂತಿಮ ಸಂಸ್ಕಾರದ ಜವಾಬ್ದಾರಿ ವಹಿಸಿಕೊಂಡ. ಮನೆಯನ್ನೆಲ್ಲ ದುರಸ್ತಿಮಾಡಿಸಿ ಮಾರಾಟಕ್ಕೆ ಯೋಚಿಸಿದ. ಆದರೆ ಮನೆ ಎಷ್ಟು ಅಧ್ವಾನ್ನ ಸ್ಥಿತಿಯಲ್ಲಿತ್ತೆಂದರೆ, ಬಣ್ಣ ಹೊಡೆದರೆ ಪೆಳ್ಳೆ ಪೆಳ್ಳೆಯೇ ಕಿತ್ತುಬರುತ್ತಿತ್ತು. ನೆಲದ ಬಿರುಕುಗಳಲ್ಲಿ ಬೆಳೆದಿದ್ದ ಕಳೆಯನ್ನು ತಡೆಯಲು, ತೊಲೆಗಳಿಂದ ಇಳಿಬೀಳುತ್ತಿದ್ದ ಬಳ್ಳಿಗಳನ್ನು ತಡೆಯಲು ಸಾಕಷ್ಟು ಗಾರೆ ಇರಲಿಲ್ಲ.

ಜಲಪ್ರಳಯದ ನಂತರ ಎಲ್ಲೆಲ್ಲೂ ಇದೇ ಸ್ಥಿತಿ. ಜನರಲ್ಲಿ ಹಿಂದಿನ ಜೀವನೋತ್ಸಾಹಕ್ಕೆ ಬದಲಾಗಿ ಸೋಮಾರಿತನ ಮನೆಮಾಡಿತ್ತು. ನಿರ್ದಾಕ್ಷಿಣ್ಯವಾಗಿ ನೆನಪುಗಳನ್ನು ಅಳಿಸಿಬಿಡುತ್ತಿತ್ತು. ಈ ವಿಸ್ಮೃತಿಯ ತೀಕ್ಷ್ಣತೆ ಎಷ್ಟಿತ್ತೆಂದರೆ, ನೀರ್ಲಾಂಡಿಯಾ ವಾರ್ಷಿಕೋತ್ಸವ ಸಂದರ್ಭದಲ್ಲಿ, ಕರ್ನಲ್ ಅರೆಲಿಯಾನೊ ಬ್ಯುಂಡಿಯಾಗೆ, ಅವನು ಹಲವು ಬಾರಿ ತಿರಸ್ಕರಿಸಿದ್ದ ಪ್ರಶಸ್ತಿಯನ್ನು ನೀಡಲು ರಿಪಬ್ಲಿಕ್‌ನ ಪ್ರೆಸಿಡೆಂಟ್ ಕೆಲವು ಅಧಿಕಾರಿಗಳ ಜೊತೆಗೆ ಮಕೊಂಡೊಗೆ ಬಂದಿದ್ದ. ಅವರು ಒಂದು ಮಧ್ಯಾಹ್ನ ಪೂರ್ತಿ, ಕರ್ನಲ್‌ನ ವಂಶದವರು ಯಾರಾದರೂ ಇದ್ದಾರೆಯೇ ಎಂಬ ಹುಡುಕಾಟದಲ್ಲಿ, ಯಾರು ಯಾರನ್ನು ಕೇಳಿದರು ಅರೆಲಿಯಾನೊ ಸೆಗುಂಡೊ ಕೊಡುವ ಪದಕ ಅಪ್ಪಟ ಚಿನ್ನವಾಗಿರುವುದೆಂದು ಭಾವಿಸಿ ತಾನು ಕರ್ನಲ್‌ನ ಪರವಾಗಿ ಸ್ವೀಕರಿಸಲು ಯೋಚಿಸಿದ. ಆದರೆ ಪೆಟ್ರಾಕೋಟ್ಸ್ ಈಗಾಗಲೇ ಪ್ರತಿನಿಧಿಗಳು ಕೆಲವು ಹೇಳಿಕೆಗಳನ್ನು ಭಾಷಣಗಳನ್ನು ಸಮಾರಂಭಕ್ಕೆಂದು

ಸಿದ್ಧಪಡಿಸುತ್ತಿರುವಾಗ, ಹೋಗಿ ಕೇಳುವುದು ಸರಿಯಲ್ಲವೆಂದು ತಿಳಿಸಿದಳು. ಅದೇ ಹೊತ್ತಿಗೆ ಮೆಲ್‌ಕಿಯಾಡ್ಸ್ ವಿಜ್ಞಾನದ ಉತ್ತರಾಧಿಕಾರಿಗಳು ಆಗಮಿಸಿದರು. ಊರಿನ ಜನರು ಸೋತವರಂತೆ ಮತ್ತು ಪ್ರಪಂಚದಿಂದ ದೂರವಿದ್ದವರಂತೆ ತೋರಿದಾಗ, ಮತ್ತೊಮ್ಮೆ ಅಯಸ್ಕಾಂತೀಕರಣಗೊಂಡ ಕಬ್ಬಿಣದ ತುಂಡುಗಳನ್ನು ಮನೆಗಳ ಮುಂದಿನಿಂದ ಎಳೆದುಕೊಂಡು ಹೋಗಿ, ನಿಜವಾಗಿಯೂ ಅದು ಬ್ಯಾಬಿಲೋನಿಯನ್ ಬುದ್ಧಿವಂತರ ಹೊಸ ಶೋಧವೆಂಬಂತೆ ಬಿಂಬಿಸಿದರು. ಮತ್ತೊಮ್ಮೆ ಭೂತಕನ್ನಡಿಯ ಮೂಲಕ ಸೂರ್ಯಕಿರಣಗಳನ್ನು ಕೇಂದ್ರೀಕರಿಸಿದರು. ಪಾತ್ರೆಗಳು, ಕೆಟಲುಗಳನ್ನು ಉರುಳುವುದನ್ನು ಬಾಯಿ ಬಿಟ್ಟುಕೊಂಡು ನೋಡುವ ಜನಕ್ಕೆ ಕೊರತೆಯೇನೂ ಇರಲಿಲ್ಲ. ಒಬ್ಬ ಜಿಪ್ಸಿ ಹೆಣ್ಣು ಮಗಳು ಕೃತಕ ಹಲ್ಲುಗಳನ್ನು ತೆಗೆದು ತೋರಿಸಿ ಮತ್ತೆ ಹಾಕಿಕೊಳ್ಳುವುದನ್ನು ನೋಡಲು ಐವತ್ತು ಸೆಂಟುಗಳನ್ನು ಕೊಡುತ್ತಿದ್ದ ಜನರಿಗೂ ಕಡಿಮೆಯಿರಲಿಲ್ಲ. ನಿರ್ಜನವಾದ ಸ್ಟೇಷನ್‌ನಲ್ಲಿ, ಯಾರನ್ನೂ ಕರೆದೊಯ್ಯದ ಮತ್ತು ಯಾರನ್ನೂ ಕರೆದುಕೊಂಡುಬಾರದ ಹಳದಿ ಬಣ್ಣದ ಉದ್ದನೆಯ ಗಾಜುಗಳಿದ್ದ ಐಷಾರಾಮಿ ಕುರ್ಚಿಗಳಿದ್ದ ಕೋಚನ್ನು ಮತ್ತು ನೂರ ಇಪ್ಪತ್ತು ಬೋಗಿಗಳಿದ್ದು ಹಣ್ಣುಗಳನ್ನು ಮಿಸ್ಟರ್ ಬ್ರೌನ್ ರವಾನೆಮಾಡುತ್ತಾ ತಾನೂ ಪ್ರಯಾಣಿಸುತ್ತಿದ್ದ. ಪ್ರಯಾಣಕ್ಕೆ ಇಡೀ ಮಧ್ಯಾಹ್ನ ತೆಗೆದುಕೊಳ್ಳುತ್ತಿದ್ದ. ಆದರೆ ಈಗ ಸ್ಥಗಿತವಾಗಿದ್ದ ಟ್ರೈನ್, ಅವಶೇಷ ರೂಪದಲ್ಲಿ ನಿಂತಿತ್ತು. ವಿಚಿತ್ರವೆಂಬ ರೀತಿಯಲ್ಲಿ ಹಕ್ಕಿಗಳು ಸಾಯುತ್ತಿದ್ದುದು ಮತ್ತು ಯಹೂದಿಯ ಆತ್ಮಹತ್ಯೆಯ ಕಾರಣವನ್ನು ತಿಳಿಯಲು ಆಗಮಿಸಿದ ಅಧಿಕಾರಿಗಳು, ಫಾದರ್ ಆ್ಯಂಟೋನಿಯೊ ಇಸಾಬೆಲ್ ಮಕ್ಕಳ ಜೊತೆ ಕಣ್ಣಾಮುಚ್ಚಾಲೆ ಆಡುತ್ತಿದ್ದುದನ್ನು ನೋಡಿ ಅವನಿಗೆಲ್ಲೊ ಬುದ್ಧಿಭ್ರಮಣೆ ಆಗಿರಬೇಕೆಂದು ಭಾವಿಸಿ ಆಶ್ರಮಕ್ಕೆ ಕರೆದುಕೊಂಡು ಹೋದರು. ಸ್ವಲ್ಪ ಸಮಯದ ನಂತರ ಹೊಸ ತಲೆಮಾರಿನ, ಸಾಹಸಿಯೂ ಧೈರ್ಯವುಳ್ಳವನೂ ಆಗಿದ್ದ ಫಾದರ್ ಅಗಸ್ಟೊ ಏಂಜಲ್‌ನನ್ನು ಇಲ್ಲಿಗೆ ಕಳಿಸಿದರು. ಅವನು ಜನರನ್ನು ಉತ್ಸಾಹ ಕುಗ್ಗದಂತೆ ಸದಾ ಜಾಗೃತರಾಗಿರುವಂತೆ ದಿನಕ್ಕೆ ಹಲವು ಬಾರಿ ಗಂಟೆಬಾರಿಸಿ, ನಿದ್ದೆಮಾಡುವವರನ್ನು ಎಚ್ಚರಿಸಿ ಸಾಮೂಹಿಕ ಪ್ರಾರ್ಥನೆಗೆ ಹೋಗುವಂತೆ ಮಾಡಿದನಾದರೂ ಒಂದು ವರ್ಷಕ್ಕೆ ಮೊದಲೇ, ಆ ವಾತಾವರಣದಲ್ಲಿಯೇ ಇದ್ದ ನಿರ್ಲಕ್ಷ್ಯ, ಪ್ರತಿಯೊಂದನ್ನೂ ಹಳತಾಗಿಸುತ್ತ, ಹೊರೆಯಾಗಿಸುತ್ತ ಇದ್ದ ಬಿಸಿ ಗಾಳಿ, ಮಾಂಸದ ಊಟ, ಊಟದ ನಂತರ ವಿಶ್ರಾಂತಿ ಸಮಯದಲ್ಲಿದ್ದ ಅಸಹನೀಯವಾದ ಬಿಸಿಗಾಳಿ ಅವರನ್ನು ತೂಕಡಿಸುವಂತೆ ಮಾಡುತ್ತಿತ್ತು.

ಉರ್ಸುಲಾಳ ಸಾವಿನ ನಂತರ ಮತ್ತೆ ಮನೆ ನಿರ್ಲಕ್ಷ್ಯಕ್ಕೆ ಒಳಗಾಯಿತು. ಎಷ್ಟೇ ಮನಸ್ಸು ಮಾಡಿದರೂ, ಅಮರಾಂತಾ ಉರ್ಸುಲಾಳ ಹಾಗೆ ದೃಢಮನಸ್ಸು, ಚುರುಕುತನವಿದ್ದರೂ ಮೊದಲಿನ ಹಾಗೆ ಮಾಡಲು ಸಾಧ್ಯವಾಗಲಿಲ್ಲ. ಆದರೆ ಹಲವು ವರ್ಷಗಳ ನಂತರ ಯಾವುದೇ ಪೂರ್ವಗ್ರಹಗಳಿಲ್ಲದ ಆಧುನಿಕ ಮನಸ್ಸಿನ, ಮತ್ತು ವಾಸ್ತವತೆಯರಿತ ಅವಳು, ಹಾಳುಸುರಿವುದನ್ನು ತಪ್ಪಿಸಲು ಕಿಟಕಿಗಳನ್ನು, ಬಾಗಿಲುಗಳನ್ನು ತೆರೆದಿರಿಸಿದಳು. ತೋಟವನ್ನು ಮೊದಲಿನಂತೆ ಅಂದಗೊಳಿಸಿದಳು. ಹಗಲಿನ ಬೆಳಕಲ್ಲಿ ಆಗಲೇ ನಡುಮನೆ ಹಾದು ಹೋಗುತ್ತಿದ್ದ ಕೆಂಜಿರುವೆಗಳನ್ನು ಪೂರ್ತಿಯಾಗಿ ನಿವಾರಿಸಿದಳು. ಮರೆತು ಹೋಗಿದ್ದ ಅತಿಥಿ ಸತ್ಕಾರದ ಸಂಪ್ರದಾಯವನ್ನು ಮತ್ತೊಮ್ಮೆ

ಜೀವಂತಗೊಳಿಸಿದಳು. ಫರ್ನಾಂಡಾಳ ನಿರ್ಲಿಪ್ತ ಬದುಕಿನ ಬಗೆಗಿದ್ದ ಪ್ರೀತಿ, ಉರ್ಸುಲಾಳ ಉತ್ತುಂಗದ ಉತ್ಸಾಹದ ಎದುರು ಭೇದಿಸಲಾಗದ ಪ್ರತಿಬಂಧಕವನ್ನು ನಿರ್ಮಿಸಿತ್ತು. ಬಾಗಿಲು ತೆಗೆದಿರಿಸುವುದನ್ನು ನಿಷೇಧಿಸಿದಳು. ಕಿಟಕಿಗಳನ್ನು ಕ್ರಾಸ್ ಆಕಾರದ ಹಲಗೆಗಳಿಂದ ಮೊಳೆಹೊಡೆದು ಮುಚ್ಚಿಸಿದಳು. ಜೀವಂತವಾಗಿ ಗೋರಿಯಾಗುವ ರೀತಿಯಲ್ಲಿ ತಾಯಿಯ ಅಪ್ಪಣೆಯ ಎಲ್ಲವನ್ನೂ ಪಾಲಿಸಿದಳು. ಅದೃಶ್ಯ ವೈದ್ಯರುಗಳ ಜೊತೆ ನಡೆಸಿದ ಪತ್ರವ್ಯವಹಾರ ಪೂರ್ತಿಯಾಗಿ ನಿಷ್ಫಲವಾಯಿತು. ಎಷ್ಟೋ ಸಲ ಮುಂದೂಡಿದ ನಂತರ ಅವಳು ತನ್ನ ರೂಮಿನಲ್ಲಿ ಸೇರಿಕೊಂಡು ಒಪ್ಪಿಕೊಂಡಿದ್ದಂತೆ ನಿಗದಿತ ದಿನ ಮತ್ತು ಸಮಯಕ್ಕೆ ಸರಿಯಾಗಿ, ತಲೆಯನ್ನು ಉತ್ತರ ದಿಕ್ಕಿಗೆ ಇರಿಸಿ, ಬರೀ ಬಿಳೀ ಹೊದಿಕೆ ಹೊದ್ದು ಅಂಗಾತ ಮಲಗಿದಳು. ಬೆಳಗಿನ ಜಾವ ಒಂದು ಗಂಟೆಗೆ ಅವಳಿಗೆ, ತಿಳಿಯಾದ ದ್ರವದಲ್ಲಿ ಅದ್ದಿದ ಕರವಸ್ತ್ರದಿಂದ ಮುಚ್ಚಿದ್ದಾಗೆ ಎನಿಸಿತು.. ಅವಳು ಎದ್ದಾಗ, ಕಿಟಕಿಯಿಂದ ಸೂರ್ಯ ಹೊಳೆಯುತ್ತಿದ್ದುದನ್ನು ನೋಡಿದಳು. ಕೆಳಹೊಟ್ಟೆಯಿಂದ ಎದೆಗೂಡಿನತನಕ ಒರಟಾದ ಹೊಲಿಗೆಯನ್ನು ಹಾಕಿದ್ದರು. ಎಷ್ಟು ದಿನ ವಿಶ್ರಾಂತಿ ಇರಬೇಕೆಂದು ಹೇಳಿದ್ದರೊ ಅದಕ್ಕೂ ಮೊದಲೇ ಅದೃಶ್ಯ ವೈದ್ಯರುಗಳಿಂದ ಮನಸ್ಸಿಗೆ ನೋವಾಗುವ ಪತ್ರ ಬಂತು. ಆರು ಗಂಟೆಗಳ ಕಾಲ ಪರೀಕ್ಷಿಸಿದರೂ ಅವಳು ಹೇಳುತ್ತಿದ್ದ ಚಿಹ್ನೆಗಳು ಯಾವುವೂ ಕಾಣಿಸಲಿಲ್ಲವೆಂದು ಆ ಪತ್ರದಲ್ಲಿ ತಿಳಿಸಿದ್ದರು. ಅವಳಿಗಿದ್ದ ಒಂದೇ ಒಂದು ಕೆಟ್ಟ ಚಾಳಿಯೆಂದರೆ ವಸ್ತುಗಳಿಗಿದ್ದ ಹೆಸರುಗಳಿಂದ ಕರೆಯದೆ ಏನೇನೊ ಹೇಳುತ್ತಿದ್ದುದೇ ಈ ರಾದ್ಧಾಂತಕ್ಕೆ ಕಾರಣವಾಗಿತ್ತು, ಗೊಂದಲಕ್ಕೂ ಕಾರಣವಾಯಿತು. ದೂರ ಚಿಕಿತ್ಸಾ ವೈದ್ಯರು ಹೇಳಿದ್ದು ಇಷ್ಟೆ – ಗರ್ಭಕೋಶದಲ್ಲಿ ವಸ್ತುವೊಂದಿದ್ದು ಅದನ್ನು ಗರ್ಭಾಶಯವನ್ನು ಸ್ಥಾನಪಲ್ಲಟ ಮಾಡುವ ಸಲಕರಣೆಗಳಿಂದ ಸರಿಪಡಿಸಬಹುದು ಎಂದಿದ್ದರು. ಭ್ರಮನಿರಸನಗೊಂಡ ಫರ್ನಾಂಡಾ ನಿಜವಾದ ಕಾರಣ ಏನೆಂದು ತಿಳಿಸಬೇಕೆಂದು ಪತ್ರ ಬರೆದರೂ ಅದಕ್ಕೆ ಉತ್ತರವೇ ಬರುತ್ತಿರಲಿಲ್ಲ. ಅದೃಶ್ಯ ವೈದ್ಯರು ಹೇಳಿದ್ದ ಒಂದು ಅಪರಿಚಿತ ಪದ 'ಪೆಸ್ಸರಿ' ಅನ್ನುವುದು ಏನೆಂದು ಅವಳಿಗೆ ಸರಿಯಾಗಿ ಅರ್ಥವಾಗಿರಲಿಲ್ಲ. ಅದೃಶ್ಯ ವೈದ್ಯರಿಂದ ಉಂಟಾದ ತಲೆನೋವು, ಅವಳಿಗೆ ತನ್ನ ನಾಚಿಕೆಯನ್ನೂ ಬಿಟ್ಟು ಪೆಸ್ಸರಿ (ಗರ್ಭಾಶಯ ಪಲ್ಲಟ) ಎಂದರೇನೆಂದು ಫ್ರೆಂಚ್ ವೈದ್ಯನಿಂದ ತಿಳಿದುಕೊಳ್ಳಬೇಕೆಂದು ಕೊಂಡಳು. ಆದರೆ ಮೂರು ತಿಂಗಳ ಹಿಂದೆಯೇ ತೊಲೆಗೆ ನೇಣುಹಾಕಿಕೊಂಡು ಸತ್ತನೆಂದೂ, ಊರಿನವರ ಅಭಿಪ್ರಾಯಕ್ಕೆ ವಿರುದ್ಧವಾಗಿ ಕರ್ನಲ್ ಅರೆಲಿಯಾನೊ ಬ್ಯುಂಡಿಯಾನ ಸ್ನೇಹಿತನಾಗಿದ್ದವನೊಬ್ಬ ಅವನನ್ನು ಸಮಾಧಿ ಮಾಡಿದನೆಂದೂ ತಿಳಿದುಬಂತು. ನಂತರ ತನ್ನ ಮಗ ಜೋಸ್ ಆರ್ಕಾಡಿಯೊನಲ್ಲಿ ವಿಷಯವೆಲ್ಲವನ್ನೂ ಹೇಳಿಕೊಂಡಳು. ಅವನು ರೋಮ್‌ನಿಂದ ಅದಕ್ಕೆ ಬೇಕಾದ ಸಲಕರಣೆಗಳನ್ನೂ ಅವುಗಳನ್ನು ಉಪಯೋಗಿಸುವ ವಿಧಾನವನ್ನೂ ತಿಳಿಸಿಕಳಿಸಿದ್ದ. ಆದರೆ ಅವಳು ಅದೆಲ್ಲವನ್ನೂ ಬಾಯಿಪಾಠಮಾಡಿ ನೆನಪಿನಲ್ಲಿ ಇರಿಸಿಕೊಂಡು ಮಾಹಿತಿ ಇದ್ದ ಕಾಗದಗಳನ್ನು, ತನ್ನ ತೊಂದರೆ ಏನೆಂದು ಯಾರಿಗೂ ತಿಳಿಯದಿರಲೆಂದು ಟಾಯ್‌ಲೆಟ್‌ನಲ್ಲಿ ಹಾಕಿಬಿಟ್ಟಳು. ಅವಳು ಅಷ್ಟೆಲ್ಲ ಎಚ್ಚರಿಕೆ ತೆಗೆದುಕೊಂಡದ್ದು ವ್ಯರ್ಥವಾಗಿತ್ತು. ಮನೆಯಲ್ಲಿ ಇದ್ದವರು ಯಾರೂ ಅವಳ ಬಗ್ಗೆ ಗಮನಕೊಡುವುದಕ್ಕೇ

ಹೋಗಿರಲಿಲ್ಲ. ಸಾಂತಾ ಸೋಫಿಯಾ ದ ಲಾ ಪೀದಾದ್ ವಯಸ್ಸಾದವಳು. ತಿನ್ನುತ್ತಿದ್ದ ಒಂದಿಷ್ಟನ್ನು ಹೇಗೊ ಬೇಯಿಸಿ ಹಾಕುತ್ತಿದ್ದಳು. ಪೂರ್ತಿಯಾಗಿ ಜೋಸ್ ಆರ್ಕಾಡಿಯೊ ಸೆಗುಂಡೊನ ಕಡೆಗೇ ಲಕ್ಷ್ಯವಹಿಸಿದ್ದಳು. ಅಮರಾಂತಾ ಉರ್ಸುಲಾ, ರೆಮೆಡಿಯೋಸ್ ದ ಬ್ಯೂಟಿಯ ಕೆಲವು ಲಕ್ಷಣಗಳನ್ನು ಹೊಂದಿದ್ದಳು. ಹಿಂದೆ ಉರ್ಸುಲಾಳನ್ನು ಗೋಳು ಹುಯ್ಯುಕೊಳ್ಳಲು ಸಮಯವನ್ನು ವ್ಯರ್ಥಮಾಡುತ್ತಿದ್ದಳು. ಈಗ ಓದಿಗೆ ಗಮನಕೊಟ್ಟಳು. ಇದು ಅರೆಲಿಯಾನೊ ಸೆಗುಂಡೊಗೆ ಮೆಮೆ ಹುಟ್ಟುಹಾಕಿದ್ದ ಭರವಸೆಗಳನ್ನು, ಮತ್ತೆ ಮೂಡಿಸಿದವು. ಅವಳನ್ನು ಓದಲು, ಬನಾನಾ ಕಂಪನಿ ಇದ್ದ ಅವಧಿಯಲ್ಲಿ ಇದ್ದ ಪದ್ಧತಿಯಂತೆ, ಬ್ರಸ್ಸೆಲ್‌ಗೆ ಕಳಿಸುವುದಾಗಿ ಅವಳಿಗೆ ಮಾತುಕೊಟ್ಟ. ಅದೇ ಸಮಯದಲ್ಲಿ ಮಳೆಯ ಸಮಯದಲ್ಲಿ ಹಾಳಾಗಿದ್ದ ಭೂಮಿಯನ್ನು ಮತ್ತೆ ಸರಿಪಡಿಸುವ ಆಲೋಚನೆ ಮಾಡಿದ. ಅವನು ಮನೆಯಲ್ಲಿ ಕೆಲವು ಸಲ ಕಾಣಿಸಿಕೊಳ್ಳುತ್ತಿದ್ದುದೂ ಕೂಡಾ ಅಮರಾಂತಾ ಉರ್ಸುಲಾಳಿಗಾಗಿಯೇ. ಫರ್ನಾಂಡಾಳಿಗೆ ಅವನು ಅಪರಿಚಿತನಂತೆ ಆಗಿದ್ದ. ವಯಸ್ಸು ಸಮೀಪಿಸುತ್ತಿದ್ದಂತೆ ಅರೆಲಿಯಾನೊ ಕೂಡಾ ಅಂತರ್ಮುಖಿಯಾಗಿಬಿಟ್ಟಿದ್ದ. ವಯಸ್ಸಾದಂತೆ ಫರ್ನಾಂಡಾ ಮನಸ್ಸು ಮೆದುವಾಗಿ ಅರೆಲಿಯಾನೊನನ್ನು ಊರಿನ ಜನರ ಬದುಕಿನ ಜೊತೆಗೆ ಸೇರುವಂತೆ ಮಾಡಿದಳು. ಈಗ ಜನ ಯಾರೂ, ಅವನ ಹುಟ್ಟಿನ ಬಗ್ಗೆ ತಲೆಕೆಡಿಸಿಕೊಳ್ಳಲಾರರು ಎಂದು ಭಾವಿಸಿದ್ದ. ಆದರೆ ಸ್ವತಃ ಅರೆಲಿಯಾನೊಗೆ ಒಂಟಿತನವೇ ಇಷ್ಟವಾಗಿತ್ತು. ಪ್ರಪಂಚ ತಿಳಿಯಬೇಕೆಂಬ ಆಸಕ್ತಿಯೂ ಅವನಿಗೆ ಇರಲಿಲ್ಲ. ಆದ್ದರಿಂದ ಪ್ರಪಂಚಕ್ಕೆ ತೆರೆದುಕೊಳ್ಳುತ್ತಿದ್ದ ರಸ್ತೆಯ ಕಡೆಯ ಬಾಗಿಲಿಗೂ ಅವನು ಹೋಗುತ್ತಿರಲಿಲ್ಲ. ಮೆಲ್‌ಕಿಯಾಡ್ಸ್‌ನ ರೂಮಿನ ಬಾಗಿಲನ್ನು ಉರ್ಸುಲಾ ತೆರೆಯುವಂತೆ ಮಾಡಿದಾಗ ಅವನು ಮೆಲ್ಲಗೆ ಅದರ ಮುಂದೆ ಅಡ್ಡಾಡುತ್ತಿದ್ದ. ಅರ್ಧ ತೆರೆದ ಬಾಗಿಲೊಳಗಿಂದ ಒಳಗೆ ಇಣುಕಿನೋಡುತ್ತಿದ್ದ, ಅದೇನಾಯಿತೊ ಅರೆಲಿಯಾನೊ ಮತ್ತು ಜೋಸ್ ಆರ್ಕಾಡಿಯೊ ಸೆಗುಂಡೊರ ನಡುವೆ, ಯಾವ ಕ್ಷಣದಲ್ಲಿಯೂ ಪ್ರೀತಿಯ ತಂತುಗಳು ಬಿಗಿದುಕೊಂಡದ್ದು ಯಾರಿಗೂ ತಿಳಿಯಲಿಲ್ಲ. ಸ್ಟೇಷನ್‌ನಲ್ಲಿ ಆದ ಸಾವುಗಳ ಬಗ್ಗೆ ಈ ಹುಡುಗ ಮಾತಾಡುತ್ತಿದ್ದುದನ್ನು ಕೇಳಿದಾಗಿನಿಂದ ತಮ್ಮಿಬ್ಬರ ನಡುವೆ ಸ್ನೇಹ ಬೆಳೆದದ್ದನ್ನು ಗಮನಿಸಿದ. ಒಮ್ಮೆ ಊಟದ ಟೇಬಲ್ ಮುಂದೆ ಕುಳಿತಿದ್ದಾಗ, ಬನಾನಾ ಕಂಪನಿ ಬಿಟ್ಟು ಹೋದಾಗಿನಿಂದ ಇಡೀ ಊರು ಹಾಳಾಗಿ ಹೋಗಿದೆ ಎಂದು ಯಾರೊ ದೂರಿದಾಗ, ಅರೆಲಿಯಾನೊ ಒಬ್ಬ ಪ್ರಬುದ್ಧನಂತೆ, ದೊಡ್ಡವನಂತೆ ಆ ಅಭಿಪ್ರಾಯವನ್ನು ವಿರೋಧಿಸಿದ. ಸಾಮಾನ್ಯ ಅಭಿಪ್ರಾಯಕ್ಕೆ ವಿರುದ್ಧವಾಗಿ ಅವನು ಹೇಳಿದ್ದು, ಮಕೊಂಡೊ ಸಾಕಷ್ಟು ಅಭಿವೃದ್ಧಿ ಮತ್ತು ಶ್ರೀಮಂತಿಕೆಯ ಊರಾಗಿದ್ದು, ಇನ್ನೂ ಬೆಳೆಯುವುದರಲ್ಲಿತ್ತು. ಆದರೆ ಬನಾನಾ ಕಂಪನಿ, ಅವ್ಯವಸ್ಥೆ, ಭ್ರಷ್ಟಾಚಾರಗಳಿಂದ ಬೆಳೆಯಗೊಡಲಿಲ್ಲ. ಅಲ್ಲದೆ ಇಂಜನಿಯರುಗಳು ಸುರಿಮಳೆಯ ನೆಪದಲ್ಲಿ, ಕಾರ್ಮಿಕರಿಗೆ ನೀಡಿದ್ದ ಆಶ್ವಾಸನೆಗಳಿಂದ ತಪ್ಪಿಸಿಕೊಂಡರು. ಅವನು ಅಷ್ಟೊಂದು ಅರ್ಥವತ್ತಾಗಿ ಮಾತಾಡಿದ್ದು ಫರ್ನಾಂಡಾಳಿಗೆ ಕ್ರಿಸ್ತನ ದೈವದ್ರೋಹದ ಅಣಕದಂತೆ ಕಂಡಿತು.

ಆ ಮಗು ಸಂಕ್ಷಿಪ್ತವಾಗಿ ಸ್ಪಷ್ಟವಾಗಿ ಮತ್ತು ಸಮರ್ಥನೀಯವಾಗಿ, ಸೇನಾತುಕಡಿ ಸ್ಟೇಷನ್‌ನಲ್ಲಿದ್ದ ಮೂರುಸಾವಿರ ಕಾರ್ಮಿಕರನ್ನು ಹೇಗೆ ಗುಂಡಿಟ್ಟು ಕೊಂದಿತು, ಶವಗಳನ್ನು

ಇನ್ನೂರು ಬೋಗಿಗಳಲ್ಲಿ ತುಂಬಿ ಸಮುದ್ರದಲ್ಲಿ ಹೇಗೆ ಬಿಸಾಡಿದರು ಎಂಬುದನ್ನೆಲ್ಲ ಸವಿಸ್ತಾರವಾಗಿ ವಿವರಿಸಿತು. ಅಧಿಕೃತವಾಗಿ ಬಂದ ಸುದ್ದಿಯಂತೆ ಅಲ್ಲಿ ಏನೂ ಆಗಲಿಲ್ಲವೆಂಬುದನ್ನು ನಂಬಿದ್ದ ಫರ್ನಾಂಡಾಳಿಗೆ ಈ ಹುಡುಗ ಕರ್ನಲ್ ಅರೆಲಿಯಾನೊ ಬ್ಯುಂಡಿಯಾನಂತೆ ಕ್ರಾಂತಿಕಾರಿ ವಿಚಾರಗಳನ್ನು ಹೊಂದಿದ್ದಾನೆಂದು ಜಿಗುಪ್ಸೆಗೊಂಡು ಸುಮ್ಮನಿರಲು ಹೇಳಿದಳು. ಅರೆಲಿಯಾನೊ ಸೆಗುಂಡೊಗೆ ಕೂಡಲೆ ತನ್ನ ಮಲಸೋದರನ ವಿಚಾರವನ್ನು ಗುರುತಿಸಿದ. ವಾಸ್ತವವಾಗಿ ಮನೆಯಲ್ಲಿ ಅವನನ್ನು ಹುಚ್ಚನೆಂದು ಭಾವಿಸಿದ್ದರೂ, ಎಲ್ಲರಿಗಿಂತ ಜೋಸ್ ಆರ್ಕಾಡಿಯೊ ಸೆಗುಂಡೊ ಒಬ್ಬನೇ ನಿಜವಾದ ತಿಳಿವಳಿಕೆ ಹೊಂದಿದವನಾಗಿದ್ದ. ಅವನು ಪುಟ್ಟ ಅರೆಲಿಯಾನೊಗೆ ಓದುಬರಹ ಕಲಿಸಿದ. ಚರ್ಮಕಾಗದಗಳನ್ನು ಹೇಗೆ ಓದಬೇಕೆಂಬುದನ್ನು ತಿಳಿಸಿಕೊಟ್ಟ. ನಂತರ ಕೆಲ ವರ್ಷಗಳಾದ ಮೇಲೆ, ಮಕಾಂಡೊಗೆ ಬನಾನಾ ಕಂಪನಿಯ ಜೊತೆಗಿನ ಸಂಬಂಧ ಹೇಗಿತ್ತು ಅನ್ನುವುದನ್ನು ತನ್ನ ವೈಯಕ್ತಿಕ ನೆಲೆಯಿಂದ ಅವನಲ್ಲಿ ನಾಟುವಂತೆ ಮಾಡಿದ್ದ. ಅವನು ಮುಂದೆ ಪ್ರಪಂಚದ ಭಾಗವಾದಾಗ, ಅವನು ಹೇಳುತ್ತಿದ್ದುದು, ಚರಿತ್ರೆಕಾರರು ಯಾವ ಅಭಿಪ್ರಾಯವನ್ನು ಪ್ರಚಾರಮಾಡಿ ಶಾಲಾ ಪಠ್ಯಗಳಲ್ಲಿ ಸೇರಿಸಿದ್ದುದಕ್ಕಿಂತ ಬೇರೆಯಾಗಿದ್ದುದರಿಂದ ಅದನ್ನೆಲ್ಲ ಕಲ್ಪಿತ ಕತೆಗಳೆಂದು ನಂಬುವಂತಿತ್ತು. ಪ್ರತ್ಯೇಕವಾದ ಒಂದು ಸಣ್ಣ ರೂಮಿನಲ್ಲಿ, ಗಾಳಿ ಪ್ರವೇಶಕ್ಕೂ ಅವಕಾಶವಿಲ್ಲದಂತೆ ಮತ್ತು ಧೂಳಾಗಲೀ, ಸೆಕೆಯಾಗಲಿ ಇಲ್ಲದಿದ್ದಂತಹ ಪರಿಸರದಲ್ಲಿ ಕಿಟಕಿಗೆ ಬೆನ್ನುಕೊಟ್ಟು, ರೆಕ್ಕೆಗಳಿದ್ದ ಹ್ಯಾಟನ್ನು ಧರಿಸಿ, ಅವನು ಹುಟ್ಟುವುದಕ್ಕೂ ಮೊದಲಿನ ಪ್ರಪಂಚದ ಬಗ್ಗೆ ಮಾತನಾಡುತ್ತಿದ್ದ ಪಿತೃರೂಪದ ಪುನರಾವೃತ್ತಿಯಂತೆ ಕಾಣುತ್ತಿದ್ದ ಮುದುಕನನ್ನು ಕಂಡರು. ಇಬ್ಬರೂ ಕೂಡಾ ಒಂದೇ ಸಮಯದಲ್ಲಿ ಯಾವಾಗಲೂ ಮಾರ್ಚ್ ತಿಂಗಳೇ ಆಗಿರುತ್ತದೆ. ಸೋಮವಾರವೇ ಆಗಿರುತ್ತದೆ. ಇದು ಹೇಗೆ ಆಗುತ್ತದೆ ಎಂದು ಯೋಚಿಸಿದರು. ಅವರಿಗೆ ಅರ್ಥವಾಯಿತು, ಜೋಸ್ ಆರ್ಕಾಡಿಯೊ ಬ್ಯುಂಡಿಯಾ ಎಲ್ಲರೂ ತಿಳಿದಂತೆ ಹುಚ್ಚನಾಗಿರಲಿಲ್ಲ. ಹಾಗೆ ನೋಡಿದರೆ ಅವನೊಬ್ಬನೇ ಎಲ್ಲರಿಗಿಂತ ಸ್ಪಷ್ಟವಾಗಿ ಸತ್ಯವೇನೆಂದು ಸರಿಯಾಗಿ ಅರ್ಥಮಾಡಿಕೊಂಡಿದ್ದ. ಸಮಯ ಅಥವಾ ಕಾಲವೂ ಕೂಡಾ ಎಡವುತ್ತೆ, ಆಕಸ್ಮಿಕಗಳು ಸಂಭವಿಸುತ್ತೆ. ಅದರಿಂದಾಗಿ ಅದು ಚೂರು ಚೂರಾಗಬಹುದಾದರೂ ಅನಂತತೆಯ ತುಣುಕೊಂದನ್ನು ಆ ರೂಮಿನಲ್ಲಿ ಇರಿಸಿದೆ ಎಂದು ನಂಬಿದ್ದರು. ಜೋಸ್ ಆರ್ಕಾಡಿಯೊ ಸೆಗುಂಡೊ ಚರ್ಮಕಾಗದಗಳಲ್ಲಿ ನಿಗೂಢಬರಹಗಳನ್ನು ಅರ್ಥಮಾಡಿಕೊಳ್ಳುವುದನ್ನು ರೂಢಿಸಿಕೊಂಡ. ಅದು ನಲ್ವತ್ತೇಳರಿಂದ ಐವತ್ತೇಳು ಅಕ್ಷರಗಳಿಗೆ ಸಂವಾದಿಯಾಗಿದ್ದು, ಅವುಗಳನ್ನು ಪ್ರತ್ಯೇಕಿಸಿದಾಗ ಗೀಚಿದಂತೆ, ಗೀರಿದಂತೆ ಇರುವುದನ್ನು ಖಚಿತಪಡಿಸಿಕೊಂಡ. ಅದು ನೋಡುವುದಕ್ಕೆ ಮೆಲ್‌ಕಿಯಾಡ್ಸ್, ಒಣಗಲು ಹಾಕಿದ ಬಟ್ಟೆ ಚೂರುಗಳಂತೆ ಕಾಣುತ್ತಿದ್ದವು. ಜೋಸ್ ಆರ್ಕಾಡಿಯೊ ಇಂಥಾದ್ದನ್ನೇ ವಿಶ್ವಕೋಶದಲ್ಲಿ ನೋಡಿದ್ದ. ಆದ್ದರಿಂದ ಅದನ್ನು ಇದರ ಜೊತೆ ಹೋಲಿಸಲು, ನೋಡಲು ರೂಮಿಗೆ ತಂದ. ನೋಡಿದರೆ, ಅವೆರಡೂ ಒಂದೇ ಆಗಿತ್ತು !

ಒಗಟಿನ ಲಾಟರಿ ಸಮಯದಲ್ಲಿ, ಅರೆಲಿಯಾನೊ ಸೆಗುಂಡೊ ಬೆಳಗಿನಲ್ಲಿ, ಗಂಟಲಲ್ಲಿ ಗಂಟೊಂದಿದ್ದು, ಅಳುವುದಕ್ಕೆ ಪ್ರಯತ್ನಿಸುತ್ತಿರುವಂತೆ ಎಚ್ಚರಗೊಳ್ಳುತ್ತಿದ್ದ. ಪೆಟ್ರಾಕೋಟ್ಸ್‌ಗೆ,

ಕೆಟ್ಟ ಪರಿಸ್ಥಿತಿಯಲ್ಲಿ ಸಂಭವಿಸಿದ ಅನೇಕ ತೊಂದರೆಗಳಲ್ಲಿ ಇದೂ ಒಂದು ಎಂದು ಭಾವಿಸಿದಳು. ಪ್ರತಿದಿನ ಬೆಳಗ್ಗೆ ಅವನ ಅಂಗುಳುವನ್ನು ಸ್ಪರ್ಶಿಸಿ ಜೇನುತುಪ್ಪದಿಂದ ಸವರುತ್ತಿದ್ದಳು. ಹಾಗೂ ಮೂಲಂಗಿ ರಸವನ್ನೂ ಕೊಡುತ್ತಿದ್ದಳು. ಗಂಟಲಲ್ಲಿನ ಗಂಟು ಎಷ್ಟು ದೊಡ್ಡದಾಯಿತೆಂದರೆ ಅವನಿಗೆ ಉಸಿರಾಟಕ್ಕೂ ತೊಂದರೆಯುಂಟಾಯಿತು. ಅರೆಲಿಯಾನೊ ಸೆಗುಂಡೊ ಪಿಲಾರ್ ತರ್ಸಿರಾ ಬಳಿ ಹೋಗಿ ಅದರ ಪರಿಹಾರಕ್ಕೆ ಯಾವುದಾದರೂ ಮೂಲಿಕೆಗಳು ಇರುವುದೇನು ಎಂದು ವಿಚಾರಿಸಿದ. ಅಧೀರಳಾಗಿರದಿದ್ದ ಅಜ್ಜಿ ನೂರು ವರ್ಷ ವಯಸ್ಸಾಗಿದ್ದರೂ ಸಣ್ಣದಾಗಿ ಒಂದು ವೇಶ್ಯಾವಾಟಿಕೆಯನ್ನು ನಡೆಸುತ್ತಿದ್ದಳು. ಅವಳಿಗೆ ಔಷಧಿ ಮೂಲಿಕೆಗಳಲ್ಲಿ ಅಷ್ಟಾಗಿ ನಂಬಿಕೆ ಇಲ್ಲದ ಕಾರಣ ಮತ್ತೊಮ್ಮೆ ಕಾರ್ಡುಗಳನ್ನೇ ನಂಬಿದಳು. ಕಾರ್ಡುಗಳಲ್ಲಿ ಕ್ವೀನ್ ಆಫ್ ಡೈಮಂಡ್‌ಳು, ಗಂಟಲು, ಜ್ಯಾಕ್ ಆಫ್ ಸ್ಪೇಡ್ಸ್‌ನಿಂದಾಗಿ ಗಾಯಗೊಂಡಿರುವುದನ್ನು ನೋಡಿದಳು. ಥಟ್ಟನೆ ಅವಳಿಗೆ ಅನುಮಾನ ಬಂತು. ಫರ್ನಾಂಡಾ ತನ್ನ ಗಂಡನನ್ನು ಹಿಂಪಡೆಯಲು ಮಾಡುತ್ತಿರುವ ಕೆಟ್ಟ ಚಾಳಿಯ ಮಾಯಾ ಮಾಟದ ಪರಿಣಾಮವೆಂಬುದನ್ನು, ಅವನ ಭಾವಚಿತ್ರದಲ್ಲಿ ಗುಂಡುಸೂಜಿಗಳನ್ನು ಚುಚ್ಚಿರುವುದರ ಮೂಲಕ ಗ್ರಹಿಸಿದಳು. ಫರ್ನಾಂಡಾಳ ಬಳಿ ಮದುವೆಯ ಭಾವಚಿತ್ರವೊಂದಲ್ಲದೆ ಮಿಕ್ಕೆಲ್ಲವೂ ಫ್ಯಾಮಿಲಿ ಆಲ್ಬಂನಲ್ಲಿದ್ದ ಪ್ರತಿಗಳಾಗಿದ್ದವು. ಅವನು ಅದಕ್ಕಾಗಿ ಹುಡುಕಾಟ ನಡೆಸುತ್ತಿದ್ದಾಗ ಡ್ರಾಯರ್‌ನಲ್ಲಿ ಒಂದು ಅರ್ಧ ಡಜನ್ ಪೆಸ್ಸರಿ(ಗರ್ಭಾಶಯವನ್ನು ಪಲ್ಲಟವಾಗಲು ಬಿಡದೆ ಅದರ ಸ್ಥಾನದಲ್ಲಿ ಇರಿಸುವ ಸಲಕರಣೆ) ತಮ್ಮ ಬಾಕ್ಸ್‌ಗಳಲ್ಲಿ ಇದ್ದುದನ್ನು ಕಂಡನು. ಚಿಕ್ಕಚಿಕ್ಕದಾದ ಕೆಂಪು ರಬ್ಬರ್ ರಿಂಗ್‌ಗಳನ್ನು ಮಾಟದ ವಸ್ತುಗಳೆಂದು ಭಾವಿಸಿ ಅವುಗಳನ್ನು ಜೇಬಿನಲ್ಲಿರಿಸಿಕೊಂಡು ಪಿಲಾರ್ ತರ್ಸಿರಾಳಿಗೆ ತೋರಿಸಬೇಕೆಂದುಕೊಂಡ. ಆದರೆ ಅವಳಿಗೆ ಅವು ಏನೆಂದು ಅರ್ಥವಾಗಲಿಲ್ಲ. ಆದರೂ ಅವುಗಳನ್ನು ಅವಳು ಮಾಟಕ್ಕೆ ಸಂಬಂಧಪಟ್ಟ ವಸ್ತುಗಳಿರಬಹುದೇನೊ ಎಂದು ಅನುಮಾನಿಸಿ, ಹಿತ್ತಿಲಿನಲ್ಲಿ ಬೆಂಕಿಹಚ್ಚಿ ಸುಟ್ಟುಬಿಟ್ಟಳು. ಫರ್ನಾಂಡಾಳು ಮಾಡಿಸಿದ ಕೆಡುಕನ್ನು ನಿವಾರಿಸಲು, ಅರೆಲಿಯಾನೊ ಸೆಗುಂಡೊಗೆ ಕಾವಿಗೆ ಕುಳಿತುಕೊಳ್ಳುವ ಸ್ಥಿತಿಯಲ್ಲಿರುವ ಕೋಳಿಯನ್ನು ತೋಯಿಸಿಟ್ಟು ಜೀವಂತವಾಗಿ ಚೆಸ್ಟ್‌ನಟ್ ಮರದ ಬುಡದಲ್ಲಿ ಸಮಾಧಿ ಮಾಡುವಂತೆ ಸಲಹೆ ನೀಡಿದಳು. ಅವನು ಸಹ ಶ್ರದ್ಧೆಯಿಂದ ಮಾಡಿದ. ನಂತರ ಅದರ ಮೇಲೆ ಮಣ್ಣೆಳೆದು ಒಣಗಿದ ಎಲೆಗಳಿಂದ ಮುಚ್ಚಿದ. ಅವನಿಗೆ ಆಗಲೆ ತನ್ನ ಉಸಿರಾಟ ಸಲೀಸಾಗುತ್ತಿದೆ ಎನಿಸಿತು. ಫರ್ನಾಂಡಾ ತನ್ನ ಪೆಸ್ಸರಿಗಳು ಮಾಯವಾಗಿದ್ದುದನ್ನು ಅದೃಶ್ಯ ವೈದ್ಯರುಗಳ ಸೇಡಿನ ಪರಿಣಾಮವೆಂದು ಭಾವಿಸಿದಳು. ಮಗ ಕಳಿಸಿಕೊಟ್ಟಿದ್ದ ಮತ್ತೊಂದಷ್ಟನ್ನು ತನ್ನ ಒಳ ಉಡುಪಿನಲ್ಲಿರಿಸಿ ಹೊಲಿದುಬಿಟ್ಟಳು.

ಕೋಳಿಯನ್ನು ಹೂತ ಆರುತಿಂಗಳ ನಂತರ ಅರೆಲಿಯಾನೊ ಸೆಗುಂಡೊ ವಿಪರೀತ ಕೆಮ್ಮಿನಿಂದಾಗಿ ಮಧ್ಯರಾತ್ರಿಯಲ್ಲಿ ಎದ್ದು ಕುಳಿತ. ಅಲ್ಲದೆ ಏಡಿ ತನ್ನ ಕಾಲುಗಳಿಂದ ಕತ್ತನ್ನು ಹಿಚುಕುತ್ತಿದ್ದಂತೆ ಅನುಭವಿಸಿದ. ಇದೆಲ್ಲ ಮಾಂತ್ರಿಕ ಪೆಸ್ಸರಿಗಳನ್ನು ಕದ್ದು ಹಾಳು ಮಾಡಿದ್ದಕ್ಕಾಗಿ ಮತ್ತು ಕೋಳಿಯನ್ನು ತೋಯಿಸಿ ಸಾಯಿಸಿದ್ದಕ್ಕಾಗಿ ನಡೆಯುತ್ತಿದೆ ಎಂದು ಭಾವಿಸಿದ. ಆದರೆ ನಿಜವಾದ ಒಂದೇ ಸತ್ಯವೆಂದರೆ ಅವನು ಸಾಯುತ್ತಿದ್ದ. ಯಾರಿಗೂ ಇದನ್ನು ಹೇಳಲಿಲ್ಲ. ಅಮರಾಂತಾ ಉರ್ಸುಲಾಳನ್ನುಬ್ರಸೆಲ್‌ಗೆ ಕಳಿಸದೆಯೇ ತಾನು

ಸಾಯುತ್ತೇನೆಂಬ ಭಯ ಅವನನ್ನು ಕಾಡಿತು. ಹಿಂದೆಂದೂ ದುಡಿಯದಂತೆ, ಈಗ ವಾರಕ್ಕೊಂದು ಲಾಟರಿಯ ಬದಲಾಗಿ, ಮೂರುವಾರಗಳ ಲಾಟರಿ ಸಿದ್ಧಪಡಿಸಿದ. ಬೆಳಿಗ್ಗೆ ಅಷ್ಟು ಹೊತ್ತಿಗೇ ಎದ್ದು ಊರಿನಲ್ಲೆಲ್ಲಾ ಎಂಥ ಅಸಹ್ಯ ಬೀದಿ, ಗಲ್ಲಿಗಳೇ ಆಗಿರಲಿ ಕೈಯ್ಯಲ್ಲಿ ಲಾಟರಿ ಟಿಕೇಟುಗಳನ್ನು ಹಿಡಿದು, ಆದಷ್ಟು ಹೆಚ್ಚಿನ ಸಂಖ್ಯೆಯ ಟಿಕೇಟುಗಳನ್ನು ಮಾರಬೇಕೆಂಬ ಆತುರ, ಸಾಮಾನ್ಯವಾಗಿ ಸಾಯುತ್ತಿರುವ ಮನುಷ್ಯನಲ್ಲಿ ಕಾಣುವಂತೆ, ಕಾಣುತ್ತಿತ್ತು. "ಇದು ಡಿವೈನ್ ಪ್ರಾವಿಡೆನ್ಸ್" "ಇಂಥ ಅವಕಾಶ ನೂರು ವರ್ಷಗಳಿಗೊಮ್ಮೆ ಸಿಗುತ್ತದೆ. ಅದನ್ನು ಕಳೆದುಕೊಳ್ಳಬೇಡಿ" ಎಂದು ಅತ್ಯಂತ ದಯನೀಯವಾದ ರೀತಿಯಲ್ಲಿದ್ದರೂ ತೋರಿಸಿಕೊಳ್ಳದೆ ಬಲವಂತದ ನಗೆಮುಖ ನೋಡುವವರಿಗೆ ಹಿತವಾಗಿ, ವಾಚಾಳಿಯಾಗಿ ಕಾಣಿಸಿಕೊಳ್ಳುತ್ತ ಸಾಮರ್ಥ್ಯಕ್ಕೆ ಮೀರಿ ಪ್ರಯತ್ನಿಸುತ್ತಿದ್ದ. ಮಧ್ಯೆಮಧ್ಯೆ ಯಾರೂ ಇಲ್ಲದ ಜಾಗಕ್ಕೆ ಹೋಗಿ ಕುಳಿತು ಸ್ವಲ್ಪ ಸುಧಾರಿಸಿಕೊಳ್ಳುತ್ತಿದ್ದ. ಅವಳಿಗೆ ಕಿತ್ತುತಿನ್ನುವ ಹಿಂಸೆಯಾಗುತ್ತಿದ್ದರೂ ನುಂಗಿಕೊಂಡಿದ್ದ. ಮಧ್ಯರಾತ್ರಿಯಲ್ಲೂ ಕೂಡಾ ಕೆಂಪು ದೀಪದ ಪ್ರದೇಶದಲ್ಲಿಯೂ ಕೂಡಾ ಅದೃಷ್ಟದ ಭರವಸೆಯನ್ನು ತೋರಿಸಿ, "ನೋಡಿ ಈ ನಂಬರ್ ನಾಲ್ಕು ತಿಂಗಳಿಂದ ಬಂದಿಲ್ಲ" ಎಂದು ತಾವೇ ಒಂಟಿತನದಿಂದ ಅಳುತ್ತಿದ್ದ ಆ ಹೆಣ್ಣುಗಳಿಗೆ ತೋರಿಸಿ, ಹೇಳುತ್ತಿದ್ದ. ಈ ಅವಕಾಶ ಕಳೆದುಕೊಳ್ಳಬೇಡಿ. ಬದುಕು ನಾವು ಊಹಿಸಿದ್ದಕ್ಕಿಂತ ಕ್ಷಣಿಕವಾದ್ದು ಎಂದು ಮಾತು ಮುಂದುವರೆಸಿ ಹೇಳುತ್ತಿದ್ದ. ಆದರೆ ಕಡೆಗೆ ಅವರು ಅವನ ಬಗ್ಗೆ ಗೌರವ ತೋರುವುದನ್ನು ಬಿಟ್ಟರು; ತಮಾಶೆ ಮಾಡಿದರು. ಅವನ ಕೊನೆಯ ತಿಂಗಳುಗಳಲ್ಲಿ ಅವನನ್ನು ಯಾವಾಗಲೂ ಹಿಂದೆ ಕರೆಯುತ್ತಿದ್ದಂತೆ ಡಾನ್ ಅರೆಲಿಯಾನೊ ಎಂದು ಕರೆಯುವುದಕ್ಕೆ ಬದಲಾಗಿ ಮಿಸ್ಟರ್ ಡಿವೈನ್ ಪ್ರಾವಿಡೆನ್ಸ್ ಎಂದು ಕರೆಯಲು ತೊಡಗಿದರು. ಅವನ ಧ್ವನಿಯೂ ಗೊಗ್ಗರವಾಯಿತು. ಮುಂದೆ ಧ್ವನಿಯೇ ಹೊರಡುವುದು ಕಷ್ಟವಾಯಿತು. ಕಡೆಯಲ್ಲಿ ಧ್ವನಿಯಲ್ಲಿ ಮಾತುಗಳಿಗೆ ಬದಲಾಗಿ ಕೇವಲ ನಾಯಿ ಊಳಿನಂತೆ ಕೇಳಿಸತೊಡಗಿತು. ಆದರೂ ಅವನು ಪೆಟ್ರಾಕೋಟ್ಸ್ ಅಂಗಳದಲ್ಲಿ ಜನರು ಮೊದಲಿಗಿಂತ ಕಡಿಮೆಯಾಗದಂತೆ, ಅವಳ ವಿಶ್ವಾಸವನ್ನು ಕಾಯ್ದಿರಿಸಲು ಪ್ರಯತ್ನಿಸುವುದನ್ನು ಬಿಡಲಿಲ್ಲ. ತನ್ನ ಧ್ವನಿಯನ್ನು ಕಳೆದುಕೊಂಡ ಮೇಲೆ, ಅವನಿಗೆ ಅನಿಸಿತು, ಕೇವಲ ಕುರಿ, ಕೋಳಿ, ಹಸುಗಳ ಲಾಟರಿಯಿಂದ ಮಗಳನ್ನು ಬ್ರಸೆಲ್‌ಗೆ ಕಳುಹಿಸುವುದು ಸಾಧ್ಯವಾಗುವುದಿಲ್ಲವೆಂದು ಮನವರಿಕೆಯಾದ ಮೇಲೆ ಅವನಿಗೊಂದು ವಿಚಾರ ಹೊಳೆಯಿತು. ಮಳೆಯಿಂದ ಹಾಳಾಗಿ ಬಿದ್ದಿರುವ ಭೂಮಿಯನ್ನು ಲಾಟರಿ ಹಾಕುವ ಯೋಜನೆಯನ್ನು ಯೋಚಿಸಿದ. ದುಡ್ಡು ಇದ್ದವನು ಅಂಥ ಭೂಮಿಯನ್ನು ಬೇಕಾದರೆ ಹಸನು ಮಾಡಿಕೊಳ್ಳುತ್ತಾನೆ. ಇದು ಎಂಥ ಅದ್ಭುತ ವಿಚಾರವಾಗಿ ಕಾಣಿಸಿತೆಂದರೆ ಸ್ವತಃ ಮೇಯರ್ ಮುಂದೆ ಬಂದು ಈ ಲಾಟರಿ ಯೋಜನೆಯ ಬಗ್ಗೆ ಪ್ರಕಟಣೆಗೆ ಸಹಾಯ ಮಾಡಿದ. ಟಿಕೆಟ್ ಕೊಳ್ಳಲು ಸಂಘಗಳನ್ನು ಸ್ಥಾಪಿಸಿದರು. ಒಂದೊಂದು ತುಂಡು ಭೂಮಿಗೆ ಒಂದು ನೂರು ಪೆಸೊಗಳಂತೆ, ಕೇವಲ ಒಂದೇ ವಾರದಲ್ಲಿ ಅಷ್ಟೂ ಭೂಮಿ ಮಾರಾಟವಾಗಿ ಹೋಯಿತು. ಲಾಟರಿ ಗೆದ್ದವರು, ಆ ರಾತ್ರಿ, ಬನಾನಾ ಕಂಪನಿ ಚೆನ್ನಾಗಿದ್ದ ದಿನಗಳಲ್ಲಿ ಏರ್ಪಡಿಸಿದ್ದ ಸಂತೋಷಕೂಟವನ್ನು ಗೆಲುವಿನ ಸಂಭ್ರಮ ಹಂಚಿಕೊಳ್ಳಲು ಏರ್ಪಡಿಸಿದರು. ಫ್ರಾನ್ಸಿಸೊನ ಹಾಡುಗಳನ್ನು ಅಕಾರ್ಡಿಯೋನ್ ವಾದ್ಯದಲ್ಲಿ ನುಡಿಸಿದ. ಆದರೆ ಹಾಡುವುದಕ್ಕೆ ಅವನಿಂದ ಆಗಲಿಲ್ಲ.

ಎರಡು ತಿಂಗಳ ನಂತರ ಅಮರಾಂತಾ ಉರ್ಸುಲಾ ಬ್ರಸೆಲ್‌ಗೆ ಹೋದಳು. ಅರೆಲಿಯಾನೊ ಸೆಗುಂಡೊ ಈ ಸ್ಪೆಷಲ್ ಲಾಟರಿಯಿಂದ ಬಂದ ಹಣ, ಅದಕ್ಕೂ ಮೊದಲು ಕೂಡಿಟ್ಟಿದ್ದ ಅಲ್ಪಸ್ವಲ್ಪ ಹಣ, ಅಲ್ಲದೆ ಹಾಳಾಗಿ ರಿಪೇರಿಗೂ ಸಾಧ್ಯವಾಗದಂತಿದ್ದ ಪಿಯಾನೋಲಾ, ಕ್ಲ್ಯಾವಿಕಾರ್ಡ್ ಮತ್ತು ಅದೂ ಇದೂ ಮೊದಲಾಗಿ ಹಾಳಾದ ಕೆಲಸಕ್ಕೆ ಬಾರದ ವಸ್ತುಗಳನ್ನು ಮಾರಿ ಬಂದ ಹಣ ಎಲ್ಲವನ್ನೂ ಸೇರಿಸಿ, ಮಗಳಿಗೆ ಕೊಟ್ಟ. ಅವನ ಲೆಕ್ಕಾಚಾರದ ಪ್ರಕಾರ ಈಗ ಕೂಡಿಟ್ಟು ಕೊಟ್ಟ ಹಣ ಅವಳ ವಿದ್ಯಾಭ್ಯಾಸಕ್ಕೆ ಸಾಕಾಗುವುದು. ಆದರೆ ಓದುಮುಗಿಸಿ ಬರುವಾಗ ಬೇಕಾದ ಪ್ರಯಾಣದ ವೆಚ್ಚವೊಂದೇ ಸಮಸ್ಯೆಯೆನಿಸಿತ್ತು. ಹೊರಡುವ ಕೊನೆ ಕ್ಷಣದವರೆಗೂ ಫರ್ನಾಂಡಾ ಮಗಳನ್ನು ಬ್ರಸೆಲ್‌ಗೆ ಕಳುಹಿಸುವುದರ ವಿರುದ್ಧವಿದ್ದಳು. ಅವಳ ವಿರೋಧಕ್ಕೆ, ಬ್ರಸೆಲ್‌ಗೆ ಫ್ರಾನ್ಸ್‌ಗೆ ಹತ್ತಿರವಿರುವುದರಿಂದ ಮಗಳು ಅಲ್ಲಿನ ಕೆಟ್ಟ ಚಾಳಿಗಳ ಪ್ರಭಾವಕ್ಕೆ ಒಳಗಾಗಬಹುದೆಂಬುದೇ ಕಾರಣವಾಗಿತ್ತು. ಆದರೆ ಫಾದರ್ ಏಂಜಲ್, ನನ್‌ಗಳು ನಡೆಸುತ್ತಿರುವ ಬೋರ್ಡಿಂಗ್ ಹೌಸ್‌ನಲ್ಲಿ ಅಮರಾಂತಾ ಉರ್ಸುಲಾ ಇರುವುದಕ್ಕೆ ವ್ಯವಸ್ಥೆಯಾಗುವಂತೆ ಕಾಗದ ಕೊಟ್ಟಮೇಲೆ ಒಪ್ಪಿಕೊಂಡಳು. ಅವಳ ಓದು ಮುಗಿಯುವವರೆಗೂ ಅಲ್ಲಿ ಇರಬಹುದಾಗಿತ್ತು. ಹೋಗುವಾಗಲೂ ಕೂಡಾ ಅಮರಾಂತಾಳನ್ನು ಫ್ರಾನ್ಸಿನ ನನ್‌ಗಳು ಒಂದು ತಂಡದ ಜೊತೆಗೆ ಟೊಲೆಡೊವರೆಗೂ ಮತ್ತು ಅಲ್ಲಿಂದ ಬೆಲ್ಜಿಯಂಗೆ ಹೋಗಲು ವಿಶ್ವಸನೀಯ ಜನರು ಸಿಗುವರೆಂದೂ ಪಾದ್ರಿ ತಿಳಿಸಿ, ಅವಳಿಗೆ ವ್ಯವಸ್ಥೆಮಾಡಿಕೊಟ್ಟರು. ತುರ್ತು ಪತ್ರವ್ಯವಹಾರದ ಮೂಲಕ ಪ್ರಯಾಣದ ವ್ಯವಸ್ಥೆ ನಡೆಯುತ್ತಿದ್ದಂತೆ, ಅರೆಲಿಯಾನೊ ಸೆಗುಂಡೊ ಮತ್ತು ಪೆಟ್ರಾಕೋಟ್ಸ್ ಅಮರಾಂತಾ ಉರ್ಸುಲಾಳ ಸಾಮಾನು ಸರಂಜಾಮನ್ನು ಸಿದ್ಧಪಡಿಸಿದರು. ಆ ದಿನ ರಾತ್ರಿ ಅವರು ಫರ್ನಾಂಡಾಳ ಮದುವೆ ದಿನಗಳಲ್ಲಿನ ಟ್ರಂಕೊಂದರಲ್ಲಿ ತುಂಬ ವ್ಯವಸ್ಥಿತವಾಗಿ ಎಲ್ಲವನ್ನೂ ಜೋಡಿಸಿದ್ದರು. ಅಮರಾಂತಾ ಉರ್ಸುಲಾಳಿಗೆ ಅಟ್ಲಾಂಟಿಕ್ ದಾಟುವಾಗ ಯಾವ ಬಟ್ಟೆ ಚಪ್ಪಲಿ ಹಾಕಿಕೊಳ್ಳಬೇಕು, ತಲುಪಿದಾಗ ನೀಲಿ ಉಡುಪು, ಕ್ಯಾನ್‌ವಾಸ್ ಷೂ ಹಾಕಿಕೊಳ್ಳಬೇಕೆಂಬುದನ್ನು ಬಾಯಿಪಾಠ ಮಾಡಿಬಿಟ್ಟಿದ್ದಳು. ನೀರಿಗೆ ಬೀಳದ ಹಾಗೆ ಹೇಗೆ ನಡೆಯಬೇಕು, ಊಟ ತಿಂಡಿ ಸಮಯದಲ್ಲಿ ಹೊರತು, ನನ್‌ಗಳ ಜೊತೆ ಬಿಟ್ಟಿರಬಾರದೆಂದು, ಗಂಡಸರಾಗಲಿ, ಹೆಂಗಸರಾಗಲಿ ಯಾರೇ ಆಗಲಿ ಯಾವ ಕಾರಣಕ್ಕೂ ಅವರ ಜೊತೆ ಮಾತಾಡಬಾರದು ಎಂಬುದನ್ನೆಲ್ಲ ತಿಳಿದಿದ್ದಳು. ಜೊತೆಗೆ ಅವಳು ಸಣ್ಣದೊಂದು ನೋಟ್‌ಬುಕ್ ಇರಿಸಿಕೊಂಡಿದ್ದು ಅದರಲ್ಲಿ ಫಾದರ್ ಏಂಜಲ್, ಬಿರುಗಾಳಿ ಬಂದಾಗ ಹೇಳುವುದಕ್ಕೆ ಆರು ಪ್ರಾರ್ಥನೆಗಳನ್ನು ತಾನೇ ಸ್ವತಃ ತನ್ನ ಕೈಯಿಂದ ಬರೆದುಕೊಟ್ಟಿದ್ದ. ಸೀಸಿಕ್‌ನೆಸ್ ಸಮಯದಲ್ಲಿ ಉಪಯೋಗಿಸಲು ಒಂದು ಬಾಟಲಿನಲ್ಲಿ ಔಷಧಿಯನ್ನು ಇರಿಸಲಾಗಿತ್ತು. ಹಣವನ್ನು ಭದ್ರವಾಗಿರಿಸಿಕೊಳ್ಳಲು ಅವಳಿಗಾಗಿ ಒಂದು ಕ್ಯಾನ್‌ವಾಸ್ ಬೆಲ್ಟನ್ನು ಸಿದ್ಧಮಾಡಿಕೊಟ್ಟಳು. ಮಲಗುವಾಗಲೂ ಇದನ್ನು ಇರಿಸಿಕೊಳ್ಳಬಹುದಾಗಿತ್ತು. ಮೂತ್ರ ಪಾತ್ರೆಯನ್ನೂ ಕೂಡಾ ಚೆನ್ನಾಗಿ ಕ್ರಿಮಿನಾಶಕಗಳಿಂದ, ಉಪ್ಪುನೀರಿನಿಂದ, ಆಲ್ಕೋಹಾಲ್‌ನಿಂದ ತೊಳೆದು ಫರ್ನಾಂಡಾ, ಮಗಳಿಗೆ ಉಪಯೋಗಿಸಲು ಕೊಟ್ಟಳು. ಆದರೆ ಅವಳು ತನ್ನ ಸಹಪಾಠಿಗಳು ಗೇಲಿ ಮಾಡುತ್ತಾರೆಂದು ಅದನ್ನು ನಿರಾಕರಿಸಿದಳು. ಕೆಲವು ತಿಂಗಳ ನಂತರ, ಸಾವಿನ ಕ್ಷಣಗಳಲ್ಲಿ

ಇದ್ದಾಗ ಅರೆಲಿಯಾನೊ ಸೆಗುಂಡೊಗೆ, ಅಮರಾಂತಾ ಉರ್ಸುಲಾ, ಫರ್ನಾಂಡಾ ಕಡೆಯ ಬುದ್ಧಿವಾದದ ಮಾತನ್ನು ಹೇಳುತ್ತಿದ್ದಾಗ, ಎರಡನೆ ದರ್ಜೆ ಕೋಚಿನಲ್ಲಿ ಕೆಳಗಿನ ಕಿಟಕಿಯನ್ನು ಹಾಕಲು ಕಷ್ಟಪಡುತ್ತಿದ್ದಾಗಿನ ದೃಶ್ಯವೇ ಕಡೆಯ ನೆನಪಾಗಿತ್ತು. ಅವಳು ನೇರಳೆಬಣ್ಣದ ಸಿಲ್ಕ್ ಡ್ರೆಸ್ ಹಾಕಿಕೊಂಡು ಭುಜಕ್ಕೆ ಕೃತಕ ಕುಪ್ಪಸವನ್ನು ಪಿನ್ ಮಾಡಿಕೊಂಡಿದ್ದಳು. ಕೆಳಹಿಮ್ಮಡಿ ಬಕಲ್‌ಗಳಿದ್ದ ಕ್ಯಾನ್‌ವಾಸ್ ಶೂ ಹಾಕಿಕೊಂಡಿದ್ದಳು. ತೊಡೆಯವರೆಗೆ ಚಾಚಿದ್ದ ಸ್ಯಾಟಿನ್ ಸ್ಟಾಕಿಂಗ್ಸ್‌ನ್ನು ಹಿಗ್ಗುವ ಪಟ್ಟಿಯೊಂದಿಗೆ ಹಾಕಿಕೊಂಡಿದ್ದಳು. ತೆಳ್ಳನೆಯ ದೇಹ, ಸಡಿಲಾಗಿ ಬಿಟ್ಟ ಉದ್ದನೆಯ ಕೂದಲು, ಅವಳ ವಯಸ್ಸಿನಲ್ಲಿ ಇರಬೇಕಾಗಿದ್ದ ಗೆಲುವಿನ ಕಣ್ಣುಗಳ, ಅಳುವೂ ಇಲ್ಲದೆ ನಗುವೂ ಇಲ್ಲದೆ ಹೇಳುತ್ತಿದ್ದ ಗುಡ್ ಬೈ ರೀತಿ ಅವಳಲ್ಲಿನ ಆಂತರಿಕ ಶಕ್ತಿಯನ್ನು ಬಿಂಬಿಸುತ್ತಿತ್ತು. ಬೋಗಿಯ ಪಕ್ಕದಲ್ಲಿಯೇ ಅದು ವೇಗವನ್ನು ಪಡೆಯುತ್ತಿದ್ದಂತೆ ಅದರ ಜೊತೆ ಹೆಜ್ಜೆ ಹಾಕುತ್ತ, ಫರ್ನಾಂಡಾಳ ಕೈ ಹಿಡಿದು ನಡೆಯುತ್ತಿದ್ದ ಅರೆಲಿಯಾನೊ ಸೆಗುಂಡೊ ಮಗಳತ್ತ ಕೈಯಾಡಿಸಲೂ ಸಮಯವಿಲ್ಲದಿರುವಾಗ ಅಮರಾಂತಾ ತನ್ನ ತುಟಿಗಳ ಮೇಲಿಂದ ಎರಡು ಬೆರಳಿರಿಸಿ, ಮುತ್ತಿಟ್ಟು ಅವನತ್ತ ಎಸೆಯುತ್ತಿರುವಂತೆ ಮಾಡಿದಳು. ಮದುವೆ ನಂತರ ಮೊಟ್ಟ ಮೊದಲಬಾರಿಗೆ ಇಬ್ಬರೂ ತಮ್ಮ ತೋಳನ್ನು ಬೆಸೆದುಕೊಂಡು. ಸುಡುಬಿಸಿಲಿನಲ್ಲಿ, ವೇಗವಾಗಿ ಸಾಗುತ್ತ ಕತ್ತಲಲ್ಲಿ ಮರೆಯಾದ ಟ್ರೈನನ್ನು ನೋಡುತ್ತಾ ನಿಂತಿದ್ದರು.

ಆಗಸ್ಟ್ ಒಂಭತ್ತರಂದು, ಅವಳಿಂದ 'ಬ್ರಸೆಲ್‌ನಿಂದ ಬರೆದ ಮೊದಲ ಕಾಗದವನ್ನು ಪಡೆಯುವ ಮುನ್ನ ಜೋಸ್ ಆರ್ಕಾಡಿಯೊ ಸೆಗುಂಡೊ ಅರೆಲಿಯಾನೊ ಜೊತೆ ಮೆಲ್‌ಕಿಯಾಡ್ಸ್‌ನ ರೂಮಿನಲ್ಲಿ ಕುಳಿತು ಅವನಿಗರಿವಿಲ್ಲದಂತೆ ಮಾತಾಡುತ್ತದ್ದ. "ನೆನಪಿರಲಿ, ಅವರು ಮೂರು ಸಾವಿರಕ್ಕಿಂತ ಹೆಚ್ಚಿದ್ದರು. ಅವರೆಲ್ಲರನ್ನು ಸಮುದ್ರಕ್ಕೆ ಎಸೆಯಲಾಯಿತು" ಎಂದ. ನಂತರ ಚರ್ಮಕಾಗದಗಳ ಮೇಲೆ ಬಿದ್ದ. ಕಣ್ಣುಗಳು ತೆರೆದುಕೊಂಡಿದ್ದವು. ಅದೇ ಹೊತ್ತಿನಲ್ಲಿ, ಫರ್ನಾಂಡಾಳ ಹಾಸಿಗೆಯಲ್ಲಿ, ಅವನ ಮಲಸೋದರ ಬಹಳ ದಿನಗಳಿಂದ, ಉಕ್ಕಿನ ಉಗುರುಗಳಿಂದ ಗಂಟಲನ್ನು ಕಿತ್ತುತಿನ್ನುತ್ತಿದ್ದ ರೋಗದಿಂದ ಬಿಡುಗಡೆ ಎಂಬಂತೆ ಕೊನೆಯ ಹಂತಕ್ಕೆ ತಲುಪಿದ್ದ. ಒಂದು ವಾರ ಮುಂಚೆಯಷ್ಟೇ ಧ್ವನಿ ಕಳೆದುಕೊಂಡು, ಮೂಳೆ ಬಿಟ್ಟುಕೊಂಡು, ಅಲೆಮಾರಿ ಟ್ರಂಕುಗಳೊಂದಿಗೆ ಮತ್ತು ಅಕಾರ್ಡಿಯೋನ್‌ನೊಂದಿಗೆ ಹಿಂತಿರುಗಿದ್ದ. ಸಾಯುವಾಗ ಹೆಂಡತಿಯ ಪಕ್ಕದಲ್ಲಿಯೇ ಸಾಯುತ್ತೇನೆಂದು ಕೊಟ್ಟ ಮಾತನ್ನು ಉಳಿಸಿಕೊಳ್ಳಲೆಂದು ಬಂದಿದ್ದ. ಪೆಟ್ರಾಕೋಟ್ಸ್ ಒಂದು ಹನಿ ಕಣ್ಣೀರಿಲ್ಲದೆ ಅವನ ವಸ್ತುಗಳನ್ನೆಲ್ಲ ಜೋಡಿಸಿಕೊಟ್ಟು ಗುಡ್ ಬೈ ಹೇಳಿದಳು. ಆದರೆ ಶವಪೆಟ್ಟಿಗೆಯಲ್ಲಿ ತಾನು ತೊಡಬೇಕೆಂದಿದ್ದ ಲೆದರ್ ಶೂಗಳನ್ನು ಇರಿಸುವುದನ್ನು ಮಾತ್ರ ಮರೆತಿದ್ದಳು. ಅವನು ಸತ್ತುಹೋದ ವಿಷಯ ತಿಳಿದಕೂಡಲೆ ಕಪ್ಪುಬಟ್ಟೆ ಧರಿಸಿದಳು. ಶೂಗಳನ್ನು ಒಂದು ಕಾಗದದಲ್ಲಿ ಸುತ್ತಿಕೊಂಡು ಹೋಗಿ, ಫರ್ನಾಂಡಾಳನ್ನು, ಅವನ ಪಾರ್ಥಿವ ಶರೀರವನ್ನು ನೋಡಲು ಅಪ್ಪಣೆ ಕೇಳಿದಳು. ಆದರೆ ಫರ್ನಾಂಡಾ ಒಳಗೆ ಪ್ರವೇಶಿಸಲು ಬಿಡಲಿಲ್ಲ.

“ನೋಡು, ನಿನ್ನನ್ನು ನನ್ನ ಜಾಗದಲ್ಲಿ ಇರಿಸಿಕೊಂಡು ನೋಡು, ಈ ರೀತಿಯ ಅವಮಾನವನ್ನೆಲ್ಲ ಸಹಿಸಿಕೊಂಡು ಇರಬೇಕಾದರೆ ಅವನನ್ನು ನಾನೆಷ್ಟು ಪ್ರೀತಿಸುತ್ತೇನೆ ಎಂಬುದನ್ನು ಅರ್ಥಮಾಡಿಕೊ” ಎಂದು ದೈನ್ಯವಾಗಿ ಬೇಡಿಕೊಂಡಳು.

“ನಿನ್ನಂಥ ಸೂಳೆಗೆ ಅವಮಾನ ಅನ್ನುವಂಥಾದ್ದೇನೂ ಇಲ್ಲ. ಅದೆಲ್ಲಾ ನಿಮಗೆ ಆಗಬೇಕಾದ್ದೆ. ನಿನ್ನ ಇನ್ನೂ ಯಾವನಾದರೂ ಗಂಡಸು ಸತ್ತಾಗ, ಇವುಗಳನ್ನು ಅವನಿಗೆ ಹಾಕು” ಎಂದು ಹೇಳಿದಳು.

ತನ್ನ ಮಾತಿನಂತೆ, ಸಾಂತಾ ಸೋಫಿಯಾ ದ ಲಾ ಪೀದಾದ್ ಜೋಸ್ ಆರ್ಕಾಡಿಯೊನನ್ನು ಜೀವಂತವಾಗಿ ಸಮಾಧಿ ಮಾಡುವರೊ ಏನೋ ಎಂದು ಖಚಿತಪಡಿಸಿಕೊಳ್ಳಲು ಅಡಿಗೆ ಮನೆ ಚಾಕುವಿನಿಂದ ಅವನ ಗಂಟಲನ್ನು ಕತ್ತರಿಸಿದಳು. ಒಂದೇ ತೆರನಾದ ಶವ ಪೆಟ್ಟಿಗೆಗಳಲ್ಲಿ ಇಬ್ಬರ ದೇಹಗಳನ್ನು ಇರಿಸಿದರು. ಪ್ರಾಯಕ್ಕೆ ಬರುವವರೆಗೆ ಅವರಿಬ್ಬರೂ ಒಂದೇ ತೆರನಾಗಿ ಇದ್ದಂತೆ ಕಾಣುತ್ತಿದ್ದರು. ಅರೆಲಿಯಾನೊ ಸೆಗುಂಡೊನ ಹಳೆಯ ಪಾನ ಮಿತ್ರರು ಹೂಗುಚ್ಛವನ್ನು ಇರಿಸಿದರು. ಅದಕ್ಕೆ ಕಟ್ಟಿದ್ದ ಕೆನ್ನಿಲಿ ಬಣ್ಣದ ರಿಬ್ಬನ್ನಿನ ಮೇಲೆ “ಸೀಸ್, ಕೌಸ್, ಲೈಫ್ ಈಸ್ ಷಾರ್ಟ್” ಎಂದು ಬರೆದಿದ್ದರು. ಫರ್ನಾಂಡಾಳ ಉದ್ಧಟತನ ಎಷ್ಟಿತ್ತೆಂದರೆ, ಆ ಗುಚ್ಛವನ್ನು ತೆಗೆದು ಕಸದಬುಟ್ಟಿಗೆ ಹಾಕಿದಳು. ಗೊಂದಲದ ಪರಿಸರದಲ್ಲಿ, ದುಃಖದಲ್ಲಿದ್ದ ಕುಡುಕರು ಶವಗಳನ್ನು ಅದಲು ಬದಲು ಮಾಡಿ ಹೂಳಿದರು. ಮೀಸಲಿದ್ದ ಗೋರಿಗಳೂ ಅದಲು ಬದಲಾದವು.

○

# 18

ಅರೆಲಿಯಾನೊ ಮೆಲ್‌ಕಿಯಾಡ್ಸ್‌ನ ಕೋಣೆಯಿಂದ ಬಹಳ ಸಮಯದವರೆಗೆ, ಹೊರಗೆ ಬರಲೇಇಲ್ಲ. ಹಳೆಯದಾಗಿ ಹರಿದುಹೋಗುತ್ತಿದ್ದ ಪುಸ್ತಕಗಳಲ್ಲಿನ ಅದ್ಭುತವಾದ ಕಥೆಗಳನ್ನು ಬಾಯಿಪಾಠ ಮಾಡಿದ. ಹರ್‌ಮನ್ ಕ್ರಿಪಲ್ ಭೂತ ವಿದ್ಯೆಯ ಮೇಲೆ ನಡೆಸಿದ ಅಧ್ಯಯನಗಳನ್ನು, ಸ್ಪರ್ಷಮಣಿಯನ್ನು ಅರಿಯುವ ಸೂತ್ರಗಳನ್ನು ನೋಸ್ತ್ರ ಡ್ಯಾಮಸ್‌ನ ಶತಮಾನಗಳನ್ನು, ಪ್ಲೇಗ್ ಸಂಬಂಧವಾದ ಸಂಶೋಧನೆಗಳನ್ನು ಓದುತ್ತಿದ್ದ. ತನ್ನ ಕಾಲದ ಬಗ್ಗೆ ಒಂದಿಷ್ಟೂ ಅರಿವಿಲ್ಲದವನು ಮಧ್ಯಕಾಲೀನ ಮನುಷ್ಯನ ಬಗ್ಗೆ ಓದುವುದರಲ್ಲಿ ಮಗ್ನನಾಗಿರುತ್ತಿದ್ದ. ಸಾಂತಾ ಸೋಫಿಯಾ ದ ಲಾ ಪೀದಾದ್ ಯಾವಾಗ ಅಲ್ಲಿ ಹೋದರೂ ಅವನು ಓದಿನಲ್ಲಿ ಮುಳುಗಿರುತ್ತಿದ್ದ. ಬೆಳಿಗ್ಗೆ ಅವನಿಗಾಗಿ ಒಂದು ಮಗ ಕಾಫಿ ಮತ್ತು ಮಧ್ಯಾಹ್ನ, ಅರೆಲಿಯಾನೊ ಸೆಗುಂಡೊನ ಸಾವಿನ ನಂತರ, ಊಟ ಮಾಡುತ್ತಿದ್ದ ಒಂದು ಪ್ಲೇಟು ಅನ್ನ ಮತ್ತು ಒಂದೆರಡು ಬಾಳೆಹಣ್ಣಿನ ಚೂರುಗಳು, ಇವುಗಳನ್ನು ಮಾತ್ರವೇ ತಂದು ಕೊಡುತ್ತಿದ್ದಳು. ಅವನಿಗೆ ಹೇರ್‌ಕಟ್ ಮಾಡಿಸಿ, ಹೇನುತೆಗೆದು, ಅವನ ಹಳೆ ಟ್ರಂಕಿನಲ್ಲಿದ್ದ ಬಟ್ಟೆಗಳ ಅಳತೆಗೆ ಬಟ್ಟೆಹೊಲಿಸಿ, ಅವನಿಗೆ ಬೇಕಾದ್ದೆಲ್ಲ ನೋಡಿಕೊಂಡಳು. ಮೀಸೆ ಮೊಳೆಯಲು ಶುರುವಾಗುತ್ತಿದ್ದಂತೆ ಕರ್ನಲ್ ಅರೆಲಿಯಾನೊ ಬ್ಯುಂಡಿಯಾನ ರೇಜರ್ ಮತ್ತು ಷೇವಿಂಗ್

ಕಪ್ ಮಾಡಿಕೊಂಡಿದ್ದ ಸೋರೆ ಬುರುಡೆಯನ್ನೂ ತಂದುಕೊಟ್ಟಳು. ಅವನಿಗಿದ್ದಂತೆ ಎದ್ದುಕಾಣುವ ಚೂಪುಗಲ್ಲ ಮತ್ತು ಬಿರುದುಟಗಳು ಅರೆಲಿಯಾನೊ ಜೋಸ್ ಸೇರಿದಂತೆ, ಕರ್ನಲ್ ಅರೆಲಿಯಾನೊ ಬ್ಯುಂಡಿಯಾನ ಯಾವ ಮಕ್ಕಳಿಗೂ ಇರಲಿಲ್ಲ. ಅರೆಲಿಯಾನೊ ಸೆಗುಂಡೊ ರೂಮಿನಲ್ಲಿ ಓದುತ್ತಿದ್ದಾಗ ಉರ್ಸುಲಾಗೆ ಅನುಭವವಾದಂತೆ, ಸಾಂತಾ ಸೋಫಿಯಾ ದ ಲಾ ಪೀದಾದಳಿಗೂ ಅರೆಲಿಯಾನೊ ತನ್ನೊಳಗೆ ತಾನೇ ಮಾತನಾಡಿಕೊಳ್ಳುತ್ತಿದ್ದಾನೆ ಎನಿಸಿತು. ವಾಸ್ತವವಾಗಿ ಅವನು ಮೆಲ್‌ಕಿಯಾಡ್ಸ್ ಜೊತೆ ಮಾತಾಡುತ್ತಿದ್ದ. ಒಂದು ಬಿಸಿಲಿನ ಮಧ್ಯಾಹ್ನ ಅವಳಿ ಸೋದರರ ಸಾವಿನ ನಂತರ ಕಿಟಕಿಯ ಬೆಳಕಿನಲ್ಲಿ ಕಾಗೆ ರೆಕ್ಕೆಗಳ ಹ್ಯಾಟನ್ನು ಧರಿಸಿ ಸಪ್ಪೆ ಮೋರೆ ಹಾಕಿಕೊಂಡಿದ್ದ ಮುದುಕ ತಾನು ಹುಟ್ಟುವುದಕ್ಕೂ ಮೊದಲಿಂದಲೇ ಇದ್ದ ನೆನಪಿನ ಸಾಕ್ಷಾತ್ಕಾರವಾದಂತೆ ಕಾಣಿಸಿಕೊಂಡ. ಅರೆಲಿಯಾನೊ ಚರ್ಮಕಾಗದಗಳಲ್ಲಿನ ವರ್ಣಮಾಲೆಯನ್ನು ವಿಂಗಡಿಸುವ ಕೆಲಸವನ್ನು ಮುಗಿಸಿದ್ದ. ಒಂದು ವೇಳೆ ಮೆಲ್‌ಕಿಯಾಡ್ಸ್ ಆ ಅಕ್ಷರಗಳು ಯಾವ ಭಾಷೆಯಲ್ಲಿನವು ಎಂದು ಕೇಳಿದರೆ, ಅವನು ಸಂಕೋಚವಿಲ್ಲದೆ ಹೇಳುತ್ತಿದ್ದ, "ಸಂಸ್ಕೃತ" ಎಂದು.

ರೂಮಿಗೆ ಹಿಂತಿರುಗುವುದು ಅವಕಾಶಗಳು ತನಗೆ ಇನ್ನು ಕಡಿಮೆ ಎಂದು ಮೆಲ್‌ಕಿಯಾಡ್ಸ್ ಅವನಿಗೆ ತಿಳಿಸಿದ. ಈಗ ನೆಮ್ಮದಿಯಿಂದ ತಾನು ಸಾವಿನ ಮನೆಗೆ ಹೋಗುವುದಾಗಿಯೂ ಅರೆಲಿಯಾನೊ ಸಂಸ್ಕೃತ ಕಲಿತು, ಚರ್ಮಕಾಗದಗಳು ನೂರುವರ್ಷದವರೆಗಿರುವುದರಿಂದ ಅಷ್ಟು ಸಮಯದಲ್ಲಿ ಅವು ಅವನಿಗೆ ಅರ್ಥವಾಗುವುದೆಂದೂ ತಿಳಿಸಿದ. ಅಷ್ಟೆ ಅಲ್ಲ, ನದಿವರೆಗೆ ಸಾಗುವ ಒಂದು ಸಣ್ಣ ರಸ್ತೆ ಇದ್ದು, ಬನಾನಾ ಕಂಪನಿ ಇದ್ದ ಕಾಲದಲ್ಲಿ ಕನಸುಗಳನ್ನು ವ್ಯಾಖ್ಯಾನಿಸಲಾಗುತ್ತಿದ್ದ ಜಾಗದಲ್ಲಿ ಕ್ಯಾಟಲೋನಿಯಾದ ಬುದ್ಧಿವಂತನೊಬ್ಬ ಪುಸ್ತಕದ ಅಂಗಡಿ ಇಟ್ಟಿದ್ದಾನೆ. ಅವನಲ್ಲಿ ಸಂಸ್ಕೃತ ಪ್ರವೇಶಿಕ ಪುಸ್ತಕವಿದೆ. ಆರು ವರ್ಷಗಳ ಒಳಗಾಗಿ ಆದಷ್ಟು ಬೇಗ ಅವನ್ನು ಕೊಂಡುಕೊಳ್ಳದಿದ್ದರೆ ಹುಳುಹುಪ್ಪಟೆ ತಿಂದು ಹಾಕುತ್ತವೆ ಎಂದು ಎಲ್ಲ ವಿವರಗಳನ್ನೂ ತಿಳಿಸಿದ. ಸಾಂತಾ ಸೋಫಿಯಾ ದ ಲಾ ಪೀದಾದಳ ಜೀವನದಲ್ಲಿ ಮೊಟ್ಟ ಮೊದಲ ಬಾರಿಗೆ ಅಚ್ಚರಿ ಉಂಟಾದದ್ದು, ಅರೆಲಿಯಾನೊ ಅವಳಿಗೆ ಪುಸ್ತಕಗಳ ಎರಡನೆ ಷೆಲ್ಫಿನಲ್ಲಿ ತೀರಾ ಬಲಭಾಗದಲ್ಲಿ 'ಜೆರುಸಲೇಮ್ ವಿಮೋಚನೆ' ಮತ್ತು ಮಿಲ್ಟನ್ ಕವಿತೆಗಳು ಪುಸ್ತಕವನ್ನು ಮಧ್ಯೆ ಇರುವ ಪುಸ್ತಕವನ್ನು ತಂದುಕೊಡಲು ಕೇಳಿಕೊಂಡಾಗ, ಅವಳಿಗೆ ಓದುವುದು ಬರುತ್ತಿರಲಿಲ್ಲವಾಗಿ ಅವನು ಹೇಳಿದ್ದನ್ನು ನೆನಪಿನಲ್ಲಿ ಇಟ್ಟುಕೊಂಡಳು ಮತ್ತು ಸೈನಿಕರು ಬಂದು ಮನೆಯನ್ನು ಹುಡುಕಿದಾಗ ಕಾಣದಿದ್ದ ಹದಿನೇಳು ಚಿನ್ನದ ಮೀನುಗಳನ್ನು ಬಚ್ಚಿಟ್ಟ ವಿಷಯ ಅವಳಿಗೆ ಮತ್ತು ಅರೆಲಿಯಾನೊಗೆ ಮಾತ್ರ ತಿಳಿದಿತ್ತಾಗಿ, ಈಗ ಅವುಗಳನ್ನು ಮಾರಿ ಸ್ವಲ್ಪ ಹಣ ಗಳಿಸಿದಳು.

ಸಂಸ್ಕೃತದ ಅಭ್ಯಾಸ ಮುಂದುವರೆಯುತ್ತಿದ್ದಂತೆ ಮೆಲ್‌ಕಿಯಾಡ್ಸ್ ಬಂದು ಹೋಗುವುದೂ ಕೂಡಾ ಕಡಿಮೆಯಾಗುತ್ತ, ಆಗೊಮ್ಮೆ ಈಗೊಮ್ಮೆ ಮಾತ್ರವೆ ಕಾಣಿಸಿಕೊಂಡು ಮಧ್ಯಾಹ್ನದ ಬೆಳಕಿನಲ್ಲಿ ಕರಗಿ ದೂರವಾಗುತ್ತಿತ್ತು. ಕಡೆಯಸಲ ನೋಡಿದ್ದೆಂದರೆ ಅಮೂರ್ತ ಸ್ಥಿತಿಯಲ್ಲಿ, ಅವನು ಗೊಣಗೊಣಿಸುತ್ತಾ "ಸಿಂಗಪೂರದ

ಮರಳ ದಂಡೆಯಲ್ಲಿ ಜ್ವರದಿಂದ ನಾನು ಸತ್ತುಹೋದೆ" ಎಂದು ಹೇಳಿದ. ನಂತರ ಚರ್ಮಕಾಗದಗಳು ಧೂಳು, ಶಾಖ, ಗೆದ್ದಲು ಕೆಂಪು ಇರುವೆ, ಮೊದಲಾದವುಗಳಿಗೆ ತುತ್ತಾಗಿ, ಅವುಗಳಲ್ಲಿನ ಜ್ಞಾನ ಸಂಪತ್ತು ಮಣ್ಣುಪಾಲಾಯಿತು.

ಮನೆಯಲ್ಲಿ ಆಹಾರಕ್ಕೆ ಕೊರತೆಯಿರಲಿಲ್ಲ. ಅರೆಲಿಯಾನೊ ಸೆಗುಂಡೊ ತೀರಿಕೊಂಡ ಮರುದಿನ, ಹೂಗುಚ್ಛದ ಮೇಲೆ ಅಸಂಬದ್ಧ ಬರವಣಿಗೆಯನ್ನು ಕಾಣಿಸಿದ್ದ ಒಬ್ಬ ಗೆಳೆಯ ಫರ್ನಾಂಡಾಳಿಗೆ, ಅರೆಲಿಯಾನೊ ಸೆಗುಂಡೊಗೆ ತಾನು ಕೊಡಬೇಕಾಗಿದ್ದ ಹಣವನ್ನು ತಂದುಕೊಟ್ಟ. ಅದಾದನಂತರ ಪ್ರತಿ ಬುಧವಾರ ಒಬ್ಬ ಹುಡುಗ ಬುಟ್ಟಿಯೊಂದರಲ್ಲಿ ಇಡೀ ವಾರಕ್ಕೆ ಸಾಕಾಗುವಷ್ಟು ಆಹಾರ ಪದಾರ್ಥಗಳನ್ನು ತಂದುಕೊಡುತ್ತಿದ್ದ. ಅದೆಲ್ಲವೂ ಪೆಟ್ರಾಕೋಟ್ಸ್ ಕಡೆಯಿಂದ ಬರುತ್ತಿದೆಯೆಂಬುದು ಯಾರಿಗೂ ಗೊತ್ತಿರಲಿಲ್ಲ; ಪೆಟ್ರಾಕೋಟ್ಸ್‌ಳ ದೃಷ್ಟಿಯಲ್ಲಿ ಹೀಗೆ ನಿರಂತರವಾಗಿ ಅವಮಾನಕ್ಕೆ ಒಳಗಾದ ವ್ಯಕ್ತಿಯೊಬ್ಬರು ಔದಾರ್ಯವನ್ನು ತೋರಿಸುವುದೇ, ಅವರಿಗೆ ಅವಮಾನ ಎಂಬುದಾಗಿತ್ತು. ಆದರೆ ಆ ಸೇಡಿನ ಮನೋಭಾವ ತಾನು ನಿರೀಕ್ಷಿಸಿದ್ದಕ್ಕಿಂತ ಬೇಗನೆ ಮರೆಯಾಯಿತು. ಮೊದಲು ಸ್ವಲ್ಪ ಅಹಂಕಾರ ಬೆರೆತಿರುತ್ತಿದ್ದರೂ ಅದೂ ಮರೆಯಾಗಿ ಕೇವಲ ಪ್ರೀತಿ, ಅಂತಃಕರಣಗಳೇ ಉಳಿದಿದ್ದವು. ಎಷ್ಟೋಸಲ ಲಾಟರಿ ವ್ಯಾಪಾರ ಮಾಡಲು ಪ್ರಾಣಿಗಳೇ ಇರುತ್ತಿರಲಿಲ್ಲ. ಜನ ಆಸಕ್ತಿ ಕಳೆದುಕೊಂಡರು. ಎಷ್ಟೋ ದಿನ ತಾನು ಉಪವಾಸವಿದ್ದು, ತಾನು ಮಾತುಕೊಟ್ಟಂತೆ, ಫರ್ನಾಂಡಾಳಿಗೆ ಆಹಾರಕ್ಕೆ ಕೊರತೆಯಾಗದಂತೆ ನೋಡಿಕೊಳ್ಳುವುದನ್ನು, ಫರ್ನಾಂಡಾಳ ಶವಯಾತ್ರೆಯನ್ನು ಕಾಣುವವರೆಗೆ ಮುಂದುವರೆಸಿದಳು.

ಮನೆಯಲ್ಲಿ ಜನರ ಸಂಖ್ಯೆ ಕಡಿಮೆಯಾದದ್ದು, ನಿರಂತರ ಅರ್ಧಶತಮಾನದಷ್ಟು ಕಾಲ ದುಡಿದ ಮೇಲೆ ಸ್ವಲ್ಪವಾದರೂ ಅವಳಿಗೆ ಅತ್ಯಂತ ಅಗತ್ಯವಿದ್ದ ವಿಶ್ರಾಂತಿ ದೊರೆತಂತೆ ಆಗಿತ್ತು. ಒಂದು ದಿನವಾದರೂ ಕೊರಗಿದ್ದಿಲ್ಲ. ಗೊಣಗಿದ್ದಿಲ್ಲ, ಕುಟುಂಬದಲ್ಲಿ ದೇವತೆಯಂಥ ರೆಮೆಡಿಯೋಸ್ ದ ಬ್ಯೂಟಿ ಮತ್ತು ನಿಗೂಢ ಗಾಂಭೀರ್ಯತೆಯನ್ನು ಹೊಂದಿದ್ದ ಜೋಸ್ ಆರ್ಕಾಡಿಯೊ ಸೆಗುಂಡೊನಂಥವನನ್ನು ಹುಟ್ಟಿಸಿದವಳಾಗಿದ್ದಳು. ಇಡೀ ಬದುಕು ಒಂಟಿಯಾಗಿ, ವಿವೇಕದೊಂದಿಗೆ, ತನ್ನ ಮಕ್ಕಳೊ ಮೊಮ್ಮಕ್ಕಳೊ ಎಂಬುದನ್ನೂ ಯೋಚಿಸದೆ ಬೆಳೆಸಿದಳು. ಅರೆಲಿಯಾನೊಗೆ ತಾನು ಮುತ್ತಜ್ಜಿ ಎಂಬ ವಿಷಯವನ್ನೇ ತಿಳಿಯದಿದ್ದರೂ ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗುವಿಗಿಂತಲೂ ಹೆಚ್ಚಿನ ಪ್ರೀತಿಯಿಂದ ನೋಡಿಕೊಂಡಳು. ಅಡಿಗೆ ಮನೆಯಲ್ಲಿ ಕೇವಲ ಒಂದು ಚಾಪೆಹಾಸಿಕೊಂಡು ಇಲಿ ಹೆಗ್ಗಣಗಳ ಗದ್ದಲದ ನಡುವೆ ಮಲಗುವುದು ಅಂಥ ಮನೆಯಲ್ಲಿ ಮಾತ್ರವೆ ಸಾಧ್ಯವಿತ್ತು. ಒಂದು ದಿನ ರಾತ್ರಿ, ಭಯದಿಂದ ಎದ್ದು ಕುಳಿತಳು. ಕತ್ತಲಲ್ಲಿ ಯಾರೋ ತನ್ನನ್ನು ನೋಡುತ್ತಿರುವಂತೆ ಭಾವಿಸಿದಳು. ನೋಡಿದಾಗ ಅದೊಂದು ವಿಷದ ಹಾವು ತನ್ನ ಹೊಟ್ಟೆಮೇಲೆ ಸರಿದು ಹೋಗುತ್ತಿತ್ತು. ಈ ವಿಷಯವನ್ನು ಯಾರೊಂದಿಗೂ ಹೇಳಲಿಲ್ಲ. ಉರ್ಸುಲಾಗೆ ತಿಳಿಸಿದರೆ ತನ್ನ ಹಾಸಿಗೆಯಲ್ಲಿಯೇ ಮಲಗುವಂತೆ ಮಾಡುತ್ತಾಳೆಂಬುದು ಗೊತ್ತಿತ್ತು. ಅದು ಎಂಥ ದಿನಗಳಾಗಿದ್ದುವೆಂದರೆ, ಹೇಳಿದರೂ ಕೇಳಿಸುವಂತೆ ಇರಲಿಲ್ಲ. ಹೊರಗೆ ಅಂಗಳಕ್ಕೆ ಬಂದು ಕಿರುಚಿಕೊಳ್ಳಬೇಕಾಗಿತ್ತು ಅಷ್ಟೆ. ಒಂದು ಕಡೆ ಬೇಕರಿ ಸದ್ದು,

ಯುದ್ಧದ ಅಚ್ಚರಿಗಳು, ಮಕ್ಕಳ ಉಸ್ತುವಾರಿ, – ಬೇರೆಯವರ ಸುಖ ಸಂತೋಷಗಳ ಬಗ್ಗೆ ಯೋಚಿಸುವುದಕ್ಕೆ ಬಿಡುವೇ ಇರಲಿಲ್ಲ. ತಾನೆಂದೂ ನೋಡದಿದ್ದ ಪೆಟ್ರಾಕೋಟ್ಸ್ ಒಬ್ಬಳಿಗೆ ಮಾತ್ರವೇ ತನ್ನ ನೆನಪು ಇದ್ದುದು. ಅವಳಿಗೆ ರಸ್ತೇಲಿ ಓಡಾಡಲು ಒಳ್ಳೆ ಶೂ, ಹಾಕಿಕೊಳ್ಳಲು ಒಳ್ಳೆ ಬಟ್ಟೆ ಇದೆಯೆ ಎಂದೆಲ್ಲ ಗಮನಿಸುತ್ತಿದ್ದಳು. ಅವಳ ಲಾಟರಿ ವ್ಯವಹಾರವೂ ಹೇಗೊ ಒಂದು ಪವಾಡದಂತೆ ನಡೆದುಕೊಂಡು ಹೋಗುತ್ತಿದ್ದಾಗಲೂ ಕೂಡಾ ಇದೆಲ್ಲವನ್ನೂ ಗಮನದಲ್ಲಿ ಇಟ್ಟುಕೊಂಡಿದ್ದಳು. ಫರ್ನಾಂಡಾ ಮನೆಗೆ ಬಂದಾಗ, ಇವಳು ಯಾವಾಗಲೂ ಇರಬಹುದಾದ ಕೆಲಸದವಳು ಎಂದು ಭಾವಿಸಲು ಕಾರಣವೂ ಇತ್ತು. ಅವಳು ತನ್ನ ಗಂಡನ ತಾಯಿ ಎಂದು ಹೇಳುವುದನ್ನು ಎಷ್ಟೋ ಬಾರಿ ಕೇಳಿಸಿಕೊಂಡಿದ್ದರೂ ಅದನ್ನು ಕಂಡುಕೊಳ್ಳ, ಮರೆಯಲು ಬೇಕಾದ್ದಕ್ಕಿಂತ ಹೆಚ್ಚು ಸಮಯ ಬೇಕಾಯಿತು. ಸಾಂತಾ ಸೋಫಿಯಾ ದ ಲಾ ಪೀದಾದಳಿಗೆ ತನ್ನ ಸ್ಥಾನ ಎಷ್ಟೆ ಕೆಳಗಿನದಾಗಿದ್ದರೂ ಅದರ ಬಗ್ಗೆ ತಲೆ ಕೆಡಿಸಿಕೊಳ್ಳಲಿಲ್ಲ. ಬದಲಾಗಿ ಅವಳು ಯಾವುದೊ ಅಷ್ಟು ದೊಡ್ಡ ಮನೆಯನ್ನು ಸ್ವಚ್ಛವಾಗಿ, ವ್ಯವಸ್ಥಿತವಾಗಿ, ತಾನು ವಯಸ್ಸಿನಲ್ಲಿ ಇದ್ದಾಗ ಬಂದಾಗಿನಿಂದಲೂ ಕಾಪಾಡಿ ಇರಿಸಿಕೊಂಡಿದ್ದಳು. ಅದರಲ್ಲೂ ಬನಾನಾ ಕಂಪನಿ ಇದ್ದ ಕಾಲದಲ್ಲಿ ಆ ಮನೆ ಮನೆಯಾಗಿದ್ದುದಕ್ಕಿಂತ ದಂಡಿನ ಪಾಳೆಯದಂತೆ ಇದ್ದಾಗಲಂತೂ ಮತ್ತೂ ಗಮನ ಹರಿಸಬೇಕಿತ್ತು. ಆದರೆ ಉರ್ಸುಲಾ ತೀರಿಕೊಂಡ ನಂತರ ಅವಳ ಅತಿಮಾನವ ಶಕ್ತಿ, ದುಡಿಯುವ ಸಾಮರ್ಥ್ಯ ಕುಗ್ಗಿಹೋಯಿತು. ವಯಸ್ಸು, ಹೆಚ್ಚಿನ ತ್ರಾಸಗಳಷ್ಟೇ ಇದಕ್ಕೆ ಕಾರಣವಾಗಿರಲಿಲ್ಲ. ರಾತ್ರೋ ರಾತ್ರಿ ಇಡೀ ಮನೆ ಅರೆಮರೆವಿನ ಅವಘಡಕ್ಕೆ ಒಳಗಾಗಿ ಬಿಟ್ಟಿತ್ತು. ಗೋಡೆಗಳ ಮೇಲೆಲ್ಲ ಪಾಚಿ ಬೆಳೆದಿತ್ತು. ಅಂಗಳದಲ್ಲಿ ಒಂದಿಷ್ಟೂ ಖಾಲಿ ಜಾಗ ಇಲ್ಲದಿದ್ದಾಗ, ನಡುಮನೆಯಲ್ಲಿ ಸಿಮೆಂಟನ್ನು ಸೀಳಿಕೊಂಡು, ಗಾಜನ್ನು ಒಡೆದು, ಕಳೆ ಗಿಡಗಳು ಬೆಳೆದೆದ್ದವು. ಬಿರುಕುಗಳಲ್ಲಿ, ಒಂದು ಶತಮಾನದ ಹಿಂದೆ ಮೆಲ್‌ಕಿಯಾಡ್ಸ್ ಕೃತಕ ಹಲ್ಲುಗಳನ್ನಿರಿಸಿಇದ್ದ ಗ್ಲಾಸಿನಲ್ಲಿ ಕಂಡಿದ್ದ ಅದೇ ಹಳದಿ ಹೂಗಳನ್ನು ಕಂಡಳು. ಪ್ರಕೃತಿಯ ಸವಾಲನ್ನು ಎದುರಿಸಲು ಸಮಯವಾಗಲೀ ಸಾಧನವಾಗಲಿ ಇರಲಿಲ್ಲ. ಸಾಂತಾ ಸೋಫಿಯಾ ದ ಲಾ ಪೀದಾದ್, ಬೆಡ್‌ರೂಮುಗಳಲ್ಲಿ ಹಲ್ಲಿಗಳನ್ನು ಓಡಿಸುವುದರಲ್ಲಿಯೇ ದಿನ ಕಳೆಯುತ್ತಿದ್ದಳು. ಒಂದು ದಿನ ಬೆಳಿಗ್ಗೆ ಅಡಿಪಾಯವನ್ನೇ ಅಲುಗಿಸಿದ್ದ ಕೆಂಪು ಇರುವೆಗಳು ಆ ಜಾಗದಿಂದೆದ್ದು ತೋಟವನ್ನು ದಾಟಿ ರೈಲಿಂಗ್ಸ್ ಹತ್ತಿ, ಮಣ್ಣಿನ ಬಣ್ಣಕ್ಕೆ ತಿರುಗಿದ್ದ ಬೆಗೊನಿಯಾಗಳನ್ನು ದಾಟಿ ಮನೆಯ ಮಧ್ಯಕ್ಕೆ ನುಗ್ಗಿ ಬಂದಿದ್ದವು. ಕ್ರಿಮಿನಾಶಕಗಳನ್ನು ಹಾಕಿದಳು. ಕಡೆಗೆ ಉಪ್ಪುನೀರಿನಿಂದಲೂ ನಾಶಮಾಡಿದಳು. ಆದರೆ ಮರುದಿನ ಮತ್ತೆ ಅದೇ ಜಾಗದಲ್ಲಿ ಸದ್ದಿಲ್ಲದೆ ಓಡಾಡುತ್ತಿದ್ದುವು. ಮಕ್ಕಳಿಗೆ ಪತ್ರ ಬರೆಯುತ್ತಿದ್ದ ಫರ್ನಾಂಡಾಳಿಗೆ ಈ ಇರುವೆಗಳ ದಾಳಿಯಕಡೆ ಗಮನವೇ ಇರಲಿಲ್ಲ. ಸಾಂತಾ ಸೋಫಿಯಾ ದ ಲಾ ಪೀದಾದ್ ಒಬ್ಬಳೆ, ಕಳೆ ಗಿಡಗಳು ಅಡಿಗೆ ಮನೆಯ ಕಡೆ ಚಾಚುವುದನ್ನು ತಡೆಗಟ್ಟಲು ಹೆಣಗುತ್ತಿದ್ದಳು. ಗೋಡೆಗಳ ಮೇಲಿನ ಜೇಡಬಲೆಗಳನ್ನು ತೆಗೆದುಹಾಕುತ್ತಿದ್ದಳು. ಆದರೆ ಕೆಲವೇ ಗಂಟೆಗಳಲ್ಲಿ ಮತ್ತೆ ಬಲೆಗಳು ಸಿದ್ಧವಾಗುತ್ತಿದ್ದವು. ಮೆಲ್‌ಕಿಯಾಡ್ಸ್ ರೂಮು ಕೂಡಾ ದಿನಕ್ಕೆ ಮೂರು ಬಾರಿ ಶುಭ್ರಗೊಳಿಸುತ್ತಿದ್ದರೂ ಶಕ್ತಿಮೀರಿ ಕೆಲಸ ಮಾಡುತ್ತಿದ್ದರೂ, ತುಂಬಿದ್ದ ಕಸ, ದರಿದ್ರ ಗಾಳಿ ಭಯ ಹುಟ್ಟಿಸುವಂತಿತ್ತು.

ಇಂಥ ಸ್ಥಿತಿಯನ್ನು ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಮತ್ತು ಕಿರಿಯ ಅಧಿಕಾರಿ ಮುಂಗಡ್ಡಿದ್ದರಾದ್ದರಿಂದ ಸಾಂತಾ ಸೋಫಿಯಾ ಕಡೆಗೆ ಸೋಲನ್ನು ಒಪ್ಪಿಕೊಂಡಳು. ನಂತರ ತನ್ನ ಭಾನುವಾರದ ಉಡುಪುತೊಟ್ಟು, ಉರ್ಸುಲಾಳ ಹಳೆಯ ಶೂ ಹಾಕಿಕೊಂಡು, ಅಮರಾಂತಾ ಉರ್ಸುಲಾ ಕೊಟ್ಟಿದ್ದ ಕಾಟನ್ ಪ್ಯಾಂಕಿಗ್ಸ್ ಹಾಕಿಕೊಂಡು ತಾನು ಬಿಟ್ಟಿದ್ದ ಎರಡು ಮೂರು ಜೊತೆ ಬಟ್ಟೆ ಮೂಟೆ ಕಟ್ಟಿಕೊಂಡು ಹೊರಟು ನಿಂತಳು.

"ಸಾಕಾಯಿತು, ನನ್ನ ಈ ಮುದಿ ವಯಸ್ಸಿನಲ್ಲಿ ಇವೆಲ್ಲವೂ ನನಗಾಗುವುದಿಲ್ಲ" ಎಂದು ಅರೆಲಿಯಾನೊ ಹೇಳಿದಳು.

ಅರೆಲಿಯಾನೊ ಅವಳನ್ನು ಹೋಗುವುದೆಲ್ಲಿಗೆ ಎಂದು ಕೇಳಿದಾಗ ತಾನು ಹೋಗಬೇಕಾದ ಜಾಗ ತನಗೇ ಗೊತ್ತಿಲ್ಲವೆಂಬಂತೆ ಅಸ್ಪಷ್ಟವಾದ ಸನ್ನೆಮಾಡಿದಳು. ಆದರೂ ಸ್ವಲ್ಪವಾದರೂ ನಿಖರವಾಗಿ ಹೇಳಲು ಪ್ರಯತ್ನಿಸಿ, ತನ್ನ ಕಡೆಯ ವರ್ಷಗಳನ್ನು ಸೋದರ ಸಂಬಂಧಿಯೊಬ್ಬರ ಮನೆಯಲ್ಲಿ ಕಳೆಯಲು ರಿಯೊಹಚಾಗೆ ಹೋಗುತ್ತಿದ್ದೇನೆಂದು ಹೇಳಿದಳು. ಅವಳಿಗೆ ಆ ವಿವರಣೆ ಕೊಡಬೇಕಾಗಿರಲಿಲ್ಲ. ಅವಳ ತಂದೆ ತಾಯಿ ತೀರಿಕೊಂಡ ಮೇಲೆ ಊರಿನಲ್ಲಿ ಯಾರ ಜೊತೆಗೂ ಸಂಬಂಧವಿರಲಿಲ್ಲ. ಪತ್ರವ್ಯವಹಾರವಾಗಲಿ, ಸಂದೇಶ ವಿನಿಮಯವಾಗಲಿ ಯಾವ ನೆಂಟರ ಜೊತೆಯೂ ಇರಲಿಲ್ಲ. ಅರೆಲಿಯಾನೊ ಅವಳಿಗೆ ಹದಿನಾಲ್ಕು ಚಿನ್ನದ ಮೀನುಗಳನ್ನು ಕೊಟ್ಟ. ಅವಳ ಹತ್ತಿರ ಇದ್ದ ಒಂದು ಪೆಸೊ ಮತ್ತು ಇಪ್ಪತ್ತು ಸೆಂಟ್‌ಗಳನ್ನು ಮಾತ್ರವೇ ತೆಗೆದುಕೊಂಡು ಹೋಗುತ್ತಿದ್ದಳು. ರೂಮಿನ ಕಿಟಕಿಯಿಂದ ಅವಳು ಅಂಗಳ ದಾಟಿ, ಬಟ್ಟ ಮೂಟೆ ಹೊತ್ತುಕೊಂಡು ಕಾಲೆಳೆದುಕೊಳ್ಳುತ್ತಾ ನಡೆದು ಮುಖ್ಯದ್ವಾರದ ಕಬ್ಬಿಣದ ಅಡ್ಡಪಟ್ಟಿ ತೆಗೆದು ಹೊರಗೆ ಹೋದ ಮೇಲೆ ಮತ್ತೆ ಮೊದಲಿನಂತೆ ಅದನ್ನು ಇರಿಸಿ ಹೋಗುತ್ತಿದ್ದುದನ್ನು ಅರೆಲಿಯಾನೊ ನೋಡಿದ. ಅವಳು ಹೋದ ನಂತರ ಅವಳ ಬಗ್ಗೆ ಏನೂ ವಿಷಯ ತಿಳಿಯಲಿಲ್ಲ.

ಅವಳು ಹೋದದ್ದನ್ನು ಕೇಳಿದ ಮೇಲೆ ಫರ್ನಾಂಡಾ ಇಡೀ ದಿನ ಕೂಗಾಡುತ್ತ, ಟ್ರಂಕುಗಳನ್ನು, ಕಪಾಟುಗಳನ್ನು ಒಂದೊಂದಾಗಿ ಪರೀಕ್ಷಿಸಿದಳು. ಸಾಂತಾ ಸೋಫಿಯಾ ದ ಲಾ ಪೀದಾದಳು ಹೋಗುವಾಗ ಏನನ್ನೂ ಕೊಂಡುಹೋಗಿಲ್ಲವೆಂಬುದನ್ನು ಖಚಿತಪಡಿಸಿಕೊಳ್ಳುವುದಕ್ಕಾಗಿ ಅಷ್ಟೆಲ್ಲ ಮಾಡಿದಳು. ಒಲೆಹಚ್ಚುವ ಪ್ರಯತ್ನದಲ್ಲಿ ಬೆರಳು ಸುಟ್ಟುಕೊಂಡಳು. ಜೀವನದಲ್ಲಿ ಮೊದಲ ಬಾರಿಗೆ ಅಡಿಗೆ ಮನೆಗೆ ಪ್ರವೇಶಮಾಡಿದ್ದಳು. ಕಾಫಿ ಮಾಡುವುದು ಹೇಗೆಂದು ಅರೆಲಿಯಾನನ್ನು ಕಲಿಸಿಕೊಡಲು ಕೇಳಿಕೊಂಡಳು. ಕಡೆಗೆ ಈ ಪರಿಸ್ಥಿತಿಯಲ್ಲಿ ಅಡಿಗೆಮನೆ ಜವಾಬ್ದಾರಿ ಅರೆಲಿಯಾನೊಗೆ ಬಿತ್ತು. ಫರ್ನಾಂಡಾ ಏಳುವಷ್ಟು ಹೊತ್ತಿಗೆ ತಿಂಡಿ ರೆಡಿಯಾಗಿ ಇರುತ್ತಿತ್ತು. ಮತ್ತೆ ಅವಳು ರೂಮಿನಿಂದ ಹೊರಗೆ ಬರುತ್ತಿದ್ದದ್ದು ಅವಳಿಗಾಗಿ ಅಡಿಗೆ ಮನೆಯಲ್ಲಿ ಮುಚ್ಚಿ ಇರಿಸಿದ ಊಟ ತೆಗೆದುಕೊಂಡು ಹೋಗಲು ಮಾತ್ರ. ಅಲ್ಲಿ ಅವಳು ಒಬ್ಬಳೇ ಹದಿನೈದು ಖಾಲಿ ಕುರ್ಚಿಗಳ ಮಧ್ಯೆ ಒಂದು ಕುರ್ಚಿಯಲ್ಲಿ ಕುಳಿತು ಲಿನನ್ ಟೇಬಲ್ ಕ್ಲಾತ್ ಹಾಸಿದ ಟೇಬಲ್ ಮೇಲೆ ದೀಪಸ್ತಂಭಗಳ ನಡುವೆ ಕುಳಿತು ಊಟ ಮಾಡುತ್ತಿದ್ದಳು. ಅಂಥಾ ಪರಿಸ್ಥಿತಿಯಲ್ಲೂ ಫರ್ನಾಂಡಾ ಮತ್ತು ಅರೆಲಿಯಾನೊ ತಮ್ಮ ಒಂಟಿತನವನ್ನು ಹಂಚಿಕೊಳ್ಳುತ್ತಿರಲಿಲ್ಲ. ಅವರಿಬ್ಬರೂ ಅವರವರ

ಪಾಡಿಗೆ ಇರುತ್ತಿದ್ದರು. ತಮ್ಮ ತಮ್ಮ ರೂಮುಗಳನ್ನು ತಾವೇ ಶುಭ್ರಮಾಡಿಕೊಳ್ಳುತ್ತಿದ್ದರು. ಗುಲಾಬಿ ಪೊದೆಗಳ ಮೇಲೆ ಜೇಡನ ಬಲೆಗಳು ಮಂಜಿನ ಹಾಗೆ ಬಿದ್ದಿದ್ದವು. ತೊಲೆಗಳ ಮೇಲೆ ಚಾಪೆ ಹಾಸಿದಂತೆಯೂ, ಗೋಡೆಗಳ ಮೇಲೆ ಕುಷನ್‌ನಂತೆಯೂ ತುಂಬಿಕೊಂಡಿದ್ದವು. ಅಂಥದೇ ಸಮಯದಲ್ಲಿ ಫರ್ನಾಂಡಾಳಿಗೆ ಮನೆಯಲ್ಲಿ ದೆವ್ವಗಳು ತುಂಬಿದಂತೆ ಭಾಸವಾಗುತ್ತಿತ್ತು. ದಿನನಿತ್ಯದ ವಸ್ತುಗಳು ಒಂದು ಕಡೆಯಿಂದ ಮತ್ತೊಂದು ಕಡೆಗೆ ಸ್ವತಃ ಸ್ಥಳಾಂತರಗೊಳ್ಳುತ್ತಿವೆಯೇನೊ ಎನಿಸಿತ್ತು. ಉಣ್ಣೆ ಕತ್ತರಿಗಳನ್ನು ಹಾಸಿಗೆಯ ಮೇಲೆ ಇರಿಸಿದ್ದೇನೆಂದು ಖಚಿತವಾಗಿ ನಂಬಿದ್ದ ಫರ್ನಾಂಡಾ ಅವುಗಳಿಗಾಗಿ ಮನೆಯಲ್ಲಿನ ವಸ್ತುಗಳನ್ನು ತಾರುಮೂರು ಮಾಡಿ ಹುಡುಕಾಡಿ ಕಡೆಗೆ ಅಡಿಗೆ ಮನೆ ಷೆಲ್ಫ್ ಮೇಲೆ ಇದ್ದುದನ್ನು ಪತ್ತೆ ಹಚ್ಚಿದಳು. ನಾಲ್ಕು ದಿನಗಳಿಂದ ತಾನು ಅಲ್ಲಿಗೆ ಹೋಗಿಲ್ಲವೆಂದೇ ಅಂದುಕೊಂಡಿದ್ದಳು. ಇದ್ದಕ್ಕಿದ್ದಂತೆ ಬೆಳ್ಳಿ ಬೋಗುಣಿಯೂ ಫೋರ್ಕ್ ಇಲ್ಲವೆನಿಸಿ ಹುಡುಕಿದಾಗ, ಆರು ಫೋರ್ಕ್‌ಗಳು ಪವಿತ್ರ ಪೀಠದ ಮೇಲೆ ಮೂರು ಬಟ್ಟೆ ಒಗೆಯುವ ಸ್ಥಳದಲ್ಲಿ ಇರುವುದನ್ನು ಗಮನಿಸಿದಳು. ಅವಳು ಬರೆಯುವುದಕ್ಕೆ ಕುಳಿತಾಗಲಂತೂ ವಸ್ತುಗಳು ಆಕಡೆ ಈಕಡೆ ಆಗುತ್ತಿದ್ದುದು ಇನ್ನೂ ಜಾಸ್ತಿಯಾಗುತ್ತಿತ್ತು. ಬಲಗಡೆ ಇರಿಸಿಕೊಂಡಿದ್ದ ಇಂಕ್‌ಬಾಟಲು ಎಡಗಡೆ ಇರುತ್ತಿತ್ತು. ಬ್ಲಾಟರ್ ಕಾಣಿಸದೆ ಹೋದದ್ದು, ಮೂರು ದಿನಗಳ ನಂತರ ದಿಂಬಿನ ಕೆಳಗೆ ಕಾಣಿಸುತ್ತಿತ್ತು. ಜೋಸ್ ಆರ್ಕಾಡಿಯೊಗೆ ಬರೆದ ಕಾಗದಗಳು ಅಮರಾಂತಾ ಉರ್ಸುಲಾಳ ಪತ್ರದ ಹಾಳೆಗಳ ಜೊತೆ ಸೇರಿಹೋಗುತ್ತಿದ್ದವು. ಯಾವಾಗಲೂ ಅವಳಿಗೆ ಯಾರ ಪತ್ರವನ್ನೂ ಯಾವ ಕವರಿಗೆ ಹಾಕಿದ್ದೇನೊ ಎನ್ನುವ ಗೊಂದಲ ಇದ್ದೇ ಇರುತ್ತಿತ್ತು. ಈ ರೀತಿ ಎಷ್ಟೋ ಸಲ ಆಗಿರುವುದರಿಂದಲೇ ಇದರ ಬಗ್ಗೆ ಸ್ವಲ್ಪ ಆತಂಕವಿರುತ್ತಿತ್ತು. ಒಂದು ಸಂದರ್ಭದಲ್ಲಿ ಅವಳ ಫೌಂಟನ್ ಪೆನ್ ಕಳೆದುಹೋಗಿತ್ತು. ಎರಡು ವಾರಗಳ ನಂತರ ಅಂಚೆಪೇದೆಯ ಬ್ಯಾಗಿನಲ್ಲಿ ಅದು ಸಿಕ್ಕಿ, ಅವನು ಅದನ್ನು ಹಿಂತಿರುಗಿಸಿದ. ಆ ಪೆನ್ನಿನ ಯಜಮಾನ ಯಾರೆಂಬುದನ್ನು ಹುಡುಕಲು ಮನೆ ಮನೆ ಅಲೆದಾಡಿದ. ಮೊದಲಿಗೆ ಅವಳಿಗೆ ಅದೃಶ್ಯ ವೈದ್ಯರುಗಳ ಮೇಲೆ ಅನುಮಾನಬಂತು. ತನ್ನ ಪೆಸ್ಸರಿಗಳು ಕಾಣದಾಗಲು ಅವರೇ ಕಾರಣ ಎಂದು ನಂಬಿದ್ದರಿಂದ ಇದಕ್ಕೂ ಅವರೇ ಕಾರಣರಿರಬೇಕೆಂದು ಊಹಿಸಿದಳು. ಮತ್ತು ತನ್ನನ್ನು ಸದ್ಯಕ್ಕೆ ಬಿಟ್ಟುಬಿಡಿ ಎಂದರು.

ಅವರಿಗೆ ಪತ್ರಬರೆಯಲು ಅಣಿಯಾದಳು. ಪತ್ರ ಬರೆಯುವಾಗ ಮಧ್ಯದಲ್ಲಿ ಯಾವುದಕ್ಕೂ ಎದ್ದು ಹೋಗಬೇಕಾಗಿ ಬಂತು. ಮತ್ತೆ ಬಂದು ನೋಡಿದರೆ ಪತ್ರವೇ ಇಲ್ಲ. ಅವಳು ಮತ್ತೆ ರೂಮಿಗೆ ಹೋದಾಗ ಬರೆಯುತ್ತಿದ್ದ ಪತ್ರವೂ ಸಿಗಲಿಲ್ಲವೆನ್ನುವುದು ಒಂದು ಕಡೆಯಾದರೆ, ಪತ್ರ ಬರೆಯಲು ಕಾರಣವೇನೆಂಬುದನ್ನೇ ಮರೆತು ಬಿಟ್ಟಿದ್ದಳು. ಒಂದಷ್ಟು ದಿನ ಇದೆಲ್ಲ ಅರೆಲಿಯಾನೊ ಕೆಲಸ ಎಂದು ಊಹಿಸಿದ್ದಷ್ಟೇ ಅಲ್ಲ, ಅವನನ್ನು ಗುಟ್ಟಾಗಿ ಗಮನಿಸುತ್ತಿದ್ದಳು. ಅವನು ಬರುವ ದಾರಿಯಲ್ಲಿ ವಸ್ತುಗಳನ್ನು ಇರಿಸಿ, ಅವನು ಅವುಗಳ ಜಾಗ ಬದಲಾಯಿಸುವನೇನೊ ಎಂದು ಗಮನಿಸಿ ಹಿಡಿಯಬೇಕೆಂದುಕೊಂಡಳು. ಆದರೆ ಕೂಡಲೆ ಅವಳಿಗೆ ಸಮಾಧಾನವಾಯಿತು. ಅರೆಲಿಯಾನೊ ಮೆಲ್‌ಕಿಯಾಡ್ಸ್‌ನ ರೂಮಿನಿಂದ ಹೊರಗೆ ಊಟಕ್ಕೆಂದೊ ಟಾಯ್ಲೆಟ್‌ಗೆಂದೊ ಬರುತ್ತಿದ್ದನೇ ಹೊರತು ಬೇರೆ ಸಮಯದಲ್ಲಿ ಆ ಜಾಗದಿಂದ ಕದಲುತ್ತಿರಲಿಲ್ಲ. ಅಲ್ಲದೆ ಅವನು ಈ ಥರದ ಕೆಲಸಗಳನ್ನು

ಮಾಡುವಂಥವನು ಅಲ್ಲವೆಂಬುದನ್ನು ಮನಗಂಡಳು. ಕಡೆಗೆ ಅವಳು ಇದೆಲ್ಲವೂ ದೆವ್ವಗಳ ಕೆಲಸವೆಂದೇ ನಂಬಿದಳು. ಆದ್ದರಿಂದ ತಾನು ಉಪಯೋಗಿಸುವ ವಸ್ತುಗಳನ್ನು ಉಪಯೋಗಿಸುವ ಸ್ಥಳಗಳಲ್ಲಿಯೇ ಭದ್ರವಾಗಿ ಇರುವಂತಹ ವ್ಯವಸ್ಥೆಯನ್ನು ಮಾಡಿದಳು. ಪೆನ್ನು ಮತ್ತು ಬ್ಲಾಟರನ್ನು ಮೇಜಿನ ಕಾಲಿಗೆ ಕಟ್ಟಿದಳು. ಇಂಕ್ ಬಾಟಲಿಯನ್ನು ಮೇಜಿನ ಮೇಲೆ ಅಂಟಿಸಿದಳು. ಅದೂ ಸಾಮಾನ್ಯವಾಗಿ ಬರೆಯಲು ಕುಳಿತುಕೊಳ್ಳುತ್ತಿದ್ದ ಬಲಭಾಗಕ್ಕೆ ಅಂಟಿಸಿದಳು. ಒಂದೇ ರಾತ್ರಿಗೆ ಸಮಸ್ಯೆಗಳ ಪರಿಹಾರ ಸಾಧ್ಯವಾಗಲಿಲ್ಲ. ಕೆಲ ಗಂಟೆಗಳಲ್ಲಿ ದೆವ್ವಗಳೇ ದಾರದ ಉದ್ದವನ್ನು ಕಡಿಮೆ ಮಾಡಿದವೊ ಎಂಬಂತೆ ಅವಳಿಗೆ ಅದನ್ನು ಉಪಯೋಗಿಸಿ ಕತ್ತರಿಸಲು ಸಾಧ್ಯವಾಗಲಿಲ್ಲ. ಪೆನ್ ಜೊತೆಗೂ ಇದೇ ರೀತಿ ಆಯಿತು. ಕೈಯಿಂದ ಬರೆಯುತ್ತಿದ್ದವಳಿಗೆ, ಪೆನ್ನನ್ನು ಇಂಕ್ ಬಾಟಲ್ ಬಳಿಗೆ ತೆಗೆದುಕೊಂಡು ಹೋಗಲು ಆಗಲಿಲ್ಲ. ಆದರೆ ಇಂಥಾ ಅನಾಹುತಗಳ ವಿಷಯ ಅಮರಾಂತಾ ಉರ್ಸುಲಾಗಾಗಲೀ ಜೋಸ್ ಆರ್ಕಾಡಿಯೊಗಾಗಲಿ ತಿಳಿಯಲಿಲ್ಲ. ಅವರಿಗೆ ತಾನು ಸಂತೋಷ ವಾಗಿದ್ದೇನೆಂದೇ ಬರೆದಿದ್ದಳು. ಸಂತೋಷವಾಗಿರುವುದೂ ಕೂಡಾ ನಿಜವೇ ಆಗಿತ್ತು. ಯಾವುದೇ ರೀತಿಯಲ್ಲಿ ರಾಜಿ ಮಾಡಿಕೊಂಡು ಇರಬೇಕಾದ ಅಗತ್ಯವಿರಲಿಲ್ಲ. ಮತ್ತೊಮ್ಮೆ ತನ್ನ ತಾಯ್ತಂದೆಯಿರ ಜೊತೆ ಸುಖವಾಗಿ ಇರುತ್ತಿದ್ದ ಭಾವನೆ ಉಂಟಾಯಿತು. ದಿನನಿತ್ಯದ ಸಮಸ್ಯೆಗಳೇ ಇರುತ್ತಿರಲಿಲ್ಲ. ಯಾಕೆಂದರೆ ಅವಳ ಕಲ್ಪನೆಯಲ್ಲಿಯೇ ಅವಳ ಸಮಸ್ಯೆಗಳಿಗೆ ಪರಿಹಾರ ಸಿಕ್ಕಿ ಬಿಡುತ್ತಿತ್ತು. ಸಾಂತಾ ಸೋಫಿಯಾ ದ ಲಾ ಪೀದಾದಳು ಆ ಮನೆಬಿಟ್ಟು ಹೋದಮೇಲೆ, ಮುಗಿಯದ ಪತ್ರವ್ಯವಹಾರ ಸಮಯ ಪ್ರಜ್ಞೆಯನ್ನೇ ಮರೆಸಿತ್ತು. ಮಕ್ಕಳು ಹಿಂತಿರುಗಿ ಬರಬೇಕಾಗಿದ್ದ ದಿನ, ವಾರ, ತಿಂಗಳು, ವರ್ಷ ಇವುಗಳ ಸಂಪೂರ್ಣ ಮಾಹಿತಿಯನ್ನು ಇರಿಸಿಕೊಂಡಿದ್ದಳು. ಆದರೆ ಅವರು ಬರುವುದನ್ನು, ದಿನ, ದಿನಾಂಕ ಇತ್ಯಾದಿಗಳಲ್ಲಿ ಸ್ವಲ್ಪ ವ್ಯತ್ಯಾಸ ಮಾಡಿದಾಗ ಅವಳಿಗೆ ಗೊಂದಲ ಉಂಟಾಯಿತು. ಅವಧಿಯಲ್ಲಿ ಹೆಚ್ಚು ಕಡಿಮೆಯಾಯಿತು. ಪ್ರತಿದಿನವೂ ಒಂದೇ ಥರ ಅನಿಸುವುದಷ್ಟೆ ಅಲ್ಲದೆ ಸಮಯ ಸರಿಯುತ್ತಿಲ್ಲವೆಂದೇ ಅವಳಿಗೆ ಅನಿಸತೊಡಗಿತು. ಬರುವುದು ತಡವಾದದ್ದಕ್ಕೆ ತಾಳ್ಮೆ ಗೆಡದೆ, ವಿಳಂಬದಲ್ಲಿ ಸಂತೋಷವನ್ನೇ ಅನುಭವಿಸಿದಳು. ಜೋಸ್ ಆರ್ಕಾಡಿಯೊ, ಅಂತಿಮ ಪ್ರಮಾಣ ವಚನಗಳನ್ನು ಪೂರೈಸಲು ವರ್ಷಗಳೇ ಕಳೆದಿದ್ದರೂ, ತಾನಿನ್ನೂ ರಾಯಭಾರ ಕುಶಲತೆಯನ್ನು ಗಳಿಸುವುದಕ್ಕಾಗಿ ತತ್ತ್ವಶಾಸ್ತ್ರ ಅಧ್ಯಯನವನ್ನು ಮುಂದುವರೆಸಬೇಕಾಗಿರುವುದನ್ನು ತಿಳಿಸಿದಾಗ ಅವಳು ಹೆಚ್ಚಿಗೆ ಚಿಂತೆ ಮಾಡಲಿಲ್ಲ. ಸಂತ ಪೀಟರ್ ಸಿಂಹಾಸನ ತಲುಪಲು ಎಷ್ಟೆಲ್ಲಾ ಅಡೆತಡೆಗಳನ್ನು ಎದುರಿಸಬೇಕಾಗುತ್ತದೆಂಬುದನ್ನು ಅರ್ಥಮಾಡಿಕೊಂಡಿದ್ದಳು. ಇನ್ನೊಂದು ಕಡೆ, ಬೇರೆಯವರಿಗೆ ಅಷ್ಟು ಮುಖ್ಯವೆನಿಸದ ಆದರೆ ಅವಳ ಉತ್ಸಾಹ, ಸಂತೋಷಗಳನ್ನು ಹೆಚ್ಚಿಸುವ ಸುದ್ದಿಯೊಂದು ಕೇಳಿಬಂತು. ಅದೆಂದರೆ ತನ್ನ ಮಗ ಪೋಪ್‌ನನ್ನು ನೋಡಿದ್ದಾನೆ ಎಂಬುದಾಗಿತ್ತು. ಇಂಥದೇ ಸಂತೋಷ ಕೊಟ್ಟ ಮತ್ತೊಂದು ಸುದ್ದಿ ಅಮರಾಂತಾ ಉರ್ಸುಲಾ, ತನ್ನ ಉತ್ತಮ ಶ್ರೇಣಿಯ ಗಳಿಕೆಯಿಂದಾಗಿ, ನಿರೀಕ್ಷಿಸಿದ್ದಕ್ಕಿಂತ, ಅಧ್ಯಯನಕ್ಕೆ ಹೆಚ್ಚಿನ ಅವಧಿ ಬೇಕಾಗಿರುವುದರಿಂದ, ಬರುವ ಸಮಯಕ್ಕೆ ಬರಲಾಗುವುದಿಲ್ಲ ಎಂದು ಬರೆದ ಪತ್ರವಾಗಿತ್ತು. ಅವಳಿಗೆ ತಂದೆ ನಿರೀಕ್ಷಿಸಿರದ ವಿಶೇಷ ಅವಕಾಶಗಳು ಸಿಕ್ಕಿದ್ದವು.

ಸಾಂತಾ ಸೋಫಿಯಾ ದ ಲಾ ಪೀದಾದ್ ವ್ಯಾಕರಣದ ಪುಸ್ತಕವನ್ನು ತಂದು ಕೊಟ್ಟು ಮೂರು ವರ್ಷಗಳಾದ ಮೇಲೆ ಅರೆಲಿಯಾನೊ ಮೊದಲ ಪುಟದಲ್ಲಿದ್ದುದನ್ನು ಭಾಷಾಂತರಿಸುವಲ್ಲಿ ಯಶಸ್ವಿಯಾಗಿ ಅದೇನೂ ವ್ಯರ್ಥದ ಕೆಲಸವಾಗಿರಲಿಲ್ಲ. ಆದರೆ ಇದು ಮೊದಲ ಹೆಜ್ಜೆ. ಅದರ ದೂರ ಎಲ್ಲಿಹೋಗಿ ಮುಟ್ಟುವುದೊ, ಹೇಳುವುದು ಬಹಳ ಅಸಾಧ್ಯದ ಮಾತಾಗಿತ್ತು. ಸ್ಪ್ಯಾನಿಷ್‌ನಲ್ಲಿನ ಪಠ್ಯ, ಅಧರ ಸಾಲುಗಳು ಸಂಕೇತ ಭಾಷೆಯಲ್ಲಿದ್ದುದರಿಂದ, ಏನೂ ಅರ್ಥವಾಗುತ್ತಿರಲಿಲ್ಲ. ಅರೆಲಿಯಾನೊಗೆ ಅರ್ಥದ ತನಕ ಪ್ರವೇಶಿಸುವುದಕ್ಕೆ ಬೇಕಾದ ಸೂತ್ರಗಳ ಅರಿವಿರಲಿಲ್ಲ. ಆದರೆ ಮೆಲ್‌ಕಿಯಾಡ್ಸ್ ಚರ್ಮಕಾಗದಗಳಲ್ಲಿನ ವಿಷಯದಾಳವನ್ನು ತಲುಪುವುದಕ್ಕೆ ಬೇಕಾದ ಪುಸ್ತಕಗಳು ಕ್ಯಾಟಲೋನಿಯನ್ ಅಂಗಡಿಯಲ್ಲಿ ಸಿಗುವುದೆಂದು ತಿಳಿಸಿದ್ದ. ಫರ್ನಾಂಡಾಳ ಹತ್ತಿರ ಮಾತಾಡಿದರೆ ಅವಳು ತನಗೆ ಅಲ್ಲಿ ಹೋಗಲು ಕಸಕಡ್ಡಿರಾಶಿ ನಡುವೆ ಮಗ್ನತೆಯೊಂದಿಗೆ ಕುಳಿತಿದ್ದು, ಫರ್ನಾಂಡಾಳನ್ನು ಯಾವರೀತಿ ಮಾತನಾಡಿಸಬಹುದೆಂದು ಯೋಚಿಸುತ್ತಿದ್ದ. ಅವಳು ಕೆಂಡದ ಮೇಲೆ ಇರಿಸಿದ್ದ ಊಟದ ತಟ್ಟೆಯನ್ನು ತೆಗೆದುಕೊಳ್ಳುತ್ತಿರುವಾಗ ಅವನಿಗೆ ಇದೇ ಸರಿಯಾದ ಸಮಯವೆನಿಸಿ ಬಹಳ ಕಷ್ಟಪಟ್ಟು ತಯಾರಿಸಿಕೊಂಡಿದ್ದ ನಿವೇದನೆಯನ್ನು ಒಪ್ಪಿಸಲು ಬಾಯಿ ತೆರೆಯಬೇಕೆಂದಾಗ ಮಾತು ಬಾಯಿಂದ ಹೊರಡಲಿಲ್ಲ. ಧ್ವನಿಯೇ ಉಡುಗಿಹೋಯಿತು. ಆ ಸಮಯದಲ್ಲಷ್ಟೇ ಅವಳನ್ನು ಗಮನಿಸಿದ್ದು, ಬೆಡ್‌ರೂಮಿನಲ್ಲಿ ಅವಳ ಹೆಜ್ಜೆ ಸಪ್ಪಳ ಕೇಳಿಸಿಕೊಂಡಿದ್ದ. ಮಕ್ಕಳಿಂದ ಬರುವ ಕಾಗದಗಳನ್ನು ನಿರೀಕ್ಷಿಸಿ, ಮತ್ತು ತಾನು ಬರೆದ ಕಾಗದಗಳನ್ನು ಅಂಚೆಯವನಿಗೆ ಕೊಡಲೆಂದು ಹೋಗುತ್ತಿದ್ದಾಗ, ರಾತ್ರಿ ಹೊತ್ತು ಕಾಗದ ಬರೆಯಲೆಂದು ಕುಳಿತು ತಾಳ್ಮೆಗೆಟ್ಟು ಪೆನ್ನಿನಿಂದ ಗೀಚುತ್ತಿದ್ದುದನ್ನು, ದೀಪದ ಸ್ವಿಚ್ ಹಾಕಿದಾಗ, ಕತ್ತಲಲ್ಲಿ ಪ್ರಾರ್ಥನೆಯನ್ನು ಮಣಮಣಿಸುತ್ತಿದ್ದಾಗ, ಅವಳನ್ನೂ ಗಮನಿಸಿದ್ದ. ಇಷ್ಟೆಲ್ಲ ಗಮನಿಸಿದ ನಂತರ ಅವನು ನಾಳೆ ಬೆಳಿಗ್ಗೆಯಾದರೂ ಮಾತಾಡಲು ಅವಕಾಶ ಸಿಗಬಹುದೆಂಬ ನಂಬಿಕೆಯಿಂದ, ನಿದ್ದೆಮಾಡಲು ಹೋಗುತ್ತಿದ್ದ. ತನಗೆ ಹೋಗುವುದಕ್ಕೆ ಅನುಮತಿ ಸಿಗುವುದೆಂಬ ಕಲ್ಪನೆಯಿಂದ ಅವನೆಷ್ಟು ಉತ್ಸಾಹಿತನಾಗಿದ್ದನೆಂದರೆ, ಬೆಳಿಗ್ಗೆ ಎದ್ದ ತಕ್ಷಣ ಭುಜದ ತನಕ ಬೆಳೆದಿದ್ದ ಕೂದಲನ್ನು ಕತ್ತರಿಸಿಕೊಂಡ, ಗಂಟುಗಂಟಾಗಿದ್ದ ಗಡ್ಡವನ್ನು ಬೋಳಿಸಿಕೊಂಡ, ಬಿಗಿಯಾದ ಪ್ಯಾಂಟ್ ಏರಿಸಿಕೊಂಡ, ಕೃತಕ ಕಾಲರ್‌ನ ಷರ್ಟ್‌ಹಾಕಿಕೊಂಡ. ಅದು ಯಾರಿಂದ ಯಾವಾಗ ಅವನಿಗೆ ಸಿಕ್ಕಿತ್ತೊ ಗೊತ್ತಿರಲಿಲ್ಲ. ಎಲ್ಲ ಸಜ್ಜಾಗಿ ಅಡಿಗೆ ಮನೆಗೆ ಹೋಗಿ ಅವಳು ಬರುವುದನ್ನು ಕಾಯುತ್ತಿದ್ದ. ಪ್ರತಿದಿನ ದರ್ಪದಿಂದ ತಲೆ ಎತ್ತಿಕೊಂಡು, ತೂಕದ ಹೆಜ್ಜೆ ಇಡುತ್ತಾ ಬರುತ್ತಿದ್ದ ಹೆಂಗಸು ಬರಲೇ ಇಲ್ಲ. ಆದರೆ ಅಲೌಕಿಕ ಸೌಂದರ್ಯವುಳ್ಳ ವಯಸ್ಸಾದ ಹೆಂಗಸೊಬ್ಬಳು, ಚಿನ್ನದ ಬಣ್ಣದ ಕಿರೀಟವಿಟ್ಟುಕೊಂಡು, ತನ್ನಲ್ಲೇ ಅಳುವ, ಒಂದು ಪೇಲವ ಮುಖದವಳು ಕಾಣಿಸಿಕೊಂಡಳು. ಅರೆಲಿಯಾನೊ ಸೆಗುಂಡೊನ ಟ್ರಂಕಿನಲ್ಲಿ ರಾಣಿಯ ಡ್ರೆಸ್ಸು ಸಿಕ್ಕಿದಾಗಿನಿಂದ, ಆಗಾಗ ಹಾಕಿಕೊಳ್ಳುತ್ತಲೇ ಇದ್ದಳು. ಯಾರಾದರೂ ಅವಳು ಕನ್ನಡಿ ಮುಂದೆ ನಿಂತು ತನ್ನ ರಾಣಿ ವೇಷಕ್ಕೆ ತಾನೇ ಮರುಳಾಗಿ, ಅವಳು ಮಾಡುತ್ತಿದ್ದ ಗತ್ತಿನ ಅಭಿನಯವನ್ನು ನೋಡಿದರೆ, ಅವಳನ್ನು ಖಂಡಿತವಾಗಿಯೂ ಹುಚ್ಚಿ ಎಂದೇ ಭಾವಿಸುತ್ತಿದ್ದರು. ಆದರೆ ಅವಳು ಹುಚ್ಚಿಯಾಗಿರಲಿಲ್ಲ. ತನ್ನ ಹಳೆಯ

ನೆನಪುಗಳನ್ನು ತಂದುಕೊಳ್ಳುವುದಕ್ಕಾಗಿ ಈ ರಾಜ ಲಾಂಛನಗಳನ್ನು ಬಳಸಿಕೊಂಡಿದ್ದಳು. ಮೊದಲ ಸಲ ಅದನ್ನು ಅವಳು ಹಾಕಿಕೊಂಡಾಗ, ಅವಳ ಸಂಕಟ ಹೇಳತೀರದಾಗಿತ್ತು. ಕಣ್ಣು ತುಂಬಿಬಂದಿತ್ತು. ಆ ಕ್ಷಣದಲ್ಲಿ ತನ್ನನ್ನು ರಾಣಿಯನ್ನಾಗಿ ಮಾಡುತ್ತೇನೆಂದು ಕೇಳಿಕೊಂಡು ತನ್ನ ಮನೆಗೆ ಬಂದಿದ್ದ ಅಧಿಕಾರಿಯ ಶೂ ಪಾಲಿಷ್‌ಗೆ ವಾಸನೆಯನ್ನು ಮತ್ತೊಮ್ಮೆ ಅನುಭವಿಸಿದಳು. ನನಸಾಗದ ಕನಸುಗಳ ಗುಂಗಿನಲ್ಲಿ ಕಳೆದುಹೋದಳು. ಎಷ್ಟೋ ವಯಸ್ಸಾದ ಹಾಗೆ, ಕುಗ್ಗಿಹೋದರೂ ಬದುಕಿನ ಅಮೂಲ್ಯ ಕ್ಷಣಗಳನ್ನು ಕಳೆದುಕೊಂಡಹಾಗೆ ಅನಿಸಿತು ಅವಳಿಗೆ. ತನಗೆ ಎಷ್ಟು ಕೆಟ್ಟದ್ದು ಎನಿಸಿದ್ದ ಕ್ಷಣಗಳೂ ಕೂಡಾ ಬೇಕೆನಿಸುವಂತಾಯಿತು. ಆಗ ಅವಳಿಗೆ, ತಾನು ಕಳೆದುಕೊಂಡದ್ದು ಎಷ್ಟೆಂಬುದರ ಅರಿವಾಯಿತು. ಮುಖಮಂಟಪದ ಕಡೆಯಿಂದ ಬೀಸಿ ಬರುತ್ತಿದ್ದ ಗಾಳಿ, ಸಂಜೆಯಲ್ಲಿನ ಗುಲಾಬಿ ಗಂಧ, ಯೋಗ್ಯತೆಯಿಲ್ಲದವನ ಮೃಗ ಸದೃಶ ನಡವಳಿಕೆ ಇತ್ಯಾದಿ ಇತ್ಯಾದಿ. ದಿನನಿತ್ಯದ ಸಂಕಷ್ಟಗಳನ್ನು ನಿರಾಯಾಸವಾಗಿ ಎದೆಯಲ್ಲಿ ಅಡಗಿರಿಸಿಕೊಂಡಿದ್ದವುಗಳು, ಇಂದಿನ ಈ ನೆನಪುಗಳಿಂದಾಗಿ ಛಿದ್ರಗೊಂಡವು. ಕುಗ್ಗಿದ ವಯಸ್ಸಿನಲ್ಲಿ ದುಃಖಿಸುವುದೊಂದು ದುರಭ್ಯಾಸವಾಗಿ ಹೋಗಿತ್ತು. ಒಂಟಿತನದಲ್ಲಿ ಮನುಷ್ಯಳಾಗುತ್ತಿದ್ದಳು. ಹೀಗಿರುವಾಗ ಅಡಿಗೆ ಮನೆ ಪ್ರವೇಶಿಸಿದ ಬೆಳಿಗ್ಗೆ, ಪೇಲವವಾಗಿ ಮೂಳೆ ಬಿಟ್ಟುಕೊಂಡಿದ್ದ. ಕಣ್ಣುಗಳಲ್ಲಿ ಭ್ರಮಾತ್ಮಕ ನೋಟವನ್ನೂ ತುಂಬಿಕೊಂಡಿದ್ದ. ಪ್ರಾಯದ ಯುವಕ ಕಾಫಿ ಕಪ್ಪನ್ನು ಕೈಚಾಚಿ ನೀಡುತ್ತಿದ್ದುದನ್ನು ನೋಡಿದಳು. ವ್ಯಂಗ್ಯದ ಪಂಜು ಅವಳನ್ನು ಸೀಳುತ್ತಿರುವಂತೆ ಭಾಸವಾಯಿತು. ಅವಳು ಅವನಿಗೆ ಅನುಮತಿಯನ್ನು ನಿರಾಕರಿಸಿದ್ದೇ ಅಲ್ಲದೆ, ಅಂದಿನಿಂದ ಮನೆಯ ಬೀಗದಕೈಗಳನ್ನು, ಪೆಸ್ಸರಿಗಳನ್ನು ಇರಿಸಿದ್ದ ಪಾಕೆಟ್ಟಿನಲ್ಲಿ ಇರಿಸಿದಳು. ಇಷ್ಟೆಲ್ಲ ಮಾಡುವ ಅಗತ್ಯವೇ ಇರಲಿಲ್ಲ. ಅವನು ಬಯಸಿದ್ದರೆ ಹೇಳದೆ ಕೇಳದೆ ಓಡಿಹೋಗಿ, ತಿಳಿಯದಂತೆ ಮನೆ ಸೇರಿಕೊಳ್ಳಬಹುದಾಗಿತ್ತು. ದೀರ್ಘ ಕಾಲದ ಬಂದೀವಾಸ, ಪ್ರಪಂಚದ ಬಗ್ಗೆ ಇರದ ಸ್ಪಷ್ಟ ಕಲ್ಪನೆ, ವಿಧೇಯತೆಯ ಅಭ್ಯಾಸಗಳು ಅವನೆದೆಯಲ್ಲಿನ ಕ್ರಾಂತಿ ಬೀಜಗಳನ್ನು ಒಣಗಿಸಿದ್ದವು. ವಿಧಿಯಿಲ್ಲದೆ ತನ್ನ ಗೂಡಿಗೆ ಹಿಂತಿರುಗಿದ. ಚರ್ಮಕಾಗದಗಳನ್ನು ಓದು ಓದುತ್ತಲೇ ಇದ್ದ. ಫರ್ನಾಂಡಾ ತಡರಾತ್ರಿಯವರೆಗೆ ಬಿಕ್ಕಿ ಬಿಕ್ಕಿ ಅಳುತ್ತಿದ್ದ ಸಮಯದವರೆಗೂ ಓದಿನಲ್ಲಿ ಮಗ್ನನಾಗಿ ಇರುತ್ತಿದ್ದ. ಒಂದು ದಿನ ಬೆಳಿಗ್ಗೆ ಮಾಮೂಲಿನಂತೆ ಒಲೆಹಚ್ಚಲು ಹೋದ. ಬೆಂಕಿ ಆರಿಸಿದ ಬೂದಿ ಮೇಲೆ ಅವಳಿಗಾಗಿ ನೆನ್ನೆ ಇರಿಸಿದ್ದ ಆಹಾರ ಹಾಗೆಯೇ ಇತ್ತು. ಅವನು ಅವಳ ಕೋಣೆಗೆ ಹೋಗಿ ನೋಡಿದ. ಮೊದಲೆಂದಿಗಿಂತ ಸುಂದರವಾಗಿ ಎರಮೈನ್ ಕ್ಯಾಪನ್ನು ಧರಿಸಿ ದಂತದ ಬಣ್ಣದ ಚರ್ಮದೊಂದಿಗೆ, ಹಾಸಿಗೆ ಮೇಲೆ ಮೈಚಾಚಿದ್ದಳು. ನಾಲ್ಕು ತಿಂಗಳ ನಂತರ ಜೋಸ್ ಆರ್ಕಾಡಿಯೊ ಬಂದಾಗ, ಅವಳು ಹಾಗೆಯೇ ಇದ್ದಳು.

ಅವನ ತಾಯಿಯನ್ನು ಹೋಲುವಂತಿದ್ದ ಮನುಷ್ಯನನ್ನು ಊಹಿಸಿಕೊಳ್ಳುವುದು ಸಾಧ್ಯವೇ ಇರಲಿಲ್ಲ. ಅವನು ತೆಳುಬಣ್ಣದ ಟಫೇಟಾ ಸೂಟು ಧರಿಸಿದ್ದ. ದುಂಡನೆ ಗಡುಸಾದ ಕಾಲರ್ ಇದ್ದ ಷರ್ಟ್ ಹಾಕಿಕೊಂಡಿದ್ದ. ನೆಕ್ ಟೈ ಜಾಗದಲ್ಲಿ ಚಾ ಆಕಾರದ ಸಿಲ್ಕ್ ರಿಬ್ಬನ್ನು ಇತ್ತು. ಕೆಂಪು ಛಾಯೆಯುಳ್ಳ ನಿರುತ್ಸಾಹಿ ಯುವಕನಾಗಿದ್ದ. ಕಣ್ಣಲ್ಲಿ ಬೆರಗುನೋಟವಿತ್ತು.

ಮಿರಮಿರನೆ ಮಿಂಚುತ್ತಿದ್ದ ಕಪ್ಪು ಕೂದಲು, ಸಂತರ ತಲೆ ಮೇಲೆ ಕಾಣುವ ಕೃತಕ ಕೂದಲಿನಂತೆ ಕಾಣುತ್ತಿತ್ತು. ನುಣ್ಣಗೆ ಸವರಿದ ಗಡ್ಡ, ಪ್ಯಾರಾಫಿನ ಮೇಣಸವರಿದ ಮುಖದ ಮೇಲೆ ಆತ್ಮಸಾಕ್ಷಿಯ ಪ್ರಶ್ನೆಯಂತೆ ಕಾಣುತ್ತಿತ್ತು. ಅವನ ಕೈಗಳು ಕಳಾಹೀನವಾಗಿದ್ದವು. ಹಸಿರು ನರಗಳು, ಬೆರಳುಗಳು ಪ್ಯಾರಾಸೈಟುಗಳಂತೆ ಇದ್ದವು. ಎಡಗೈನ ತೋರು ಬೆರಳಿನಲ್ಲಿ ಸೂರ್ಯಕಾಂತಿ ಹೂಗಳ ಬಣ್ಣದ ಅಪ್ಪಟ ಚಿನ್ನದ ಉಂಗುರವಿತ್ತು. ರಸ್ತೆ ಕಡೆಗಿದ್ದ ಬಾಗಿಲನ್ನು ತೆರೆದಾಗ ಅರೆಲಿಯಾನೊಗೆ ಅವನು ಯಾರೆಂದು ಹೇಳಬೇಕಾದ ಅಗತ್ಯವಿರಲಿಲ್ಲ. ಬಹಳ ದೂರದಿಂದ ಬಂದಿದ್ದಾನೆ ಎಂಬುದು ಅರ್ಥಮಾಡಿಕೊಳ್ಳಬೇಕಿತ್ತು. ಅವನು ಮನೆಯಲ್ಲಿದ್ದಾಗ, ನೆರಳುಗಳ ನಡುವೆ ಎಲ್ಲೆಂದು ಪತ್ತೆಹಚ್ಚಲು ಅವನ ಮೇಲೆ ಬಚ್ಚಲು ಮನೆಯ ನೀರನ್ನು ಉರ್ಸುಲಾ ಎರಚುತ್ತಿದ್ದಳು. ಅಂಥದೇ ವಾಸನೆ ಈಗ ಮನೆಯಲ್ಲಿ ಹರಡಿತು. ಎಷ್ಟೋ ವರ್ಷಗಳ ಅನುಪಸ್ಥಿತಿಯ ನಂತರ, ಒಂದು ರೀತಿಯಿಂದ ಜೋಸ ಆರ್ಕಾಡಿಯೊ ಇನ್ನೂ ಒಂಟಿಯಾಗಿರುವ, ದುಃಖಪೂರಿತ ಮೊಗದ ಪ್ರಾಯದ ಹುಡುಗನಾಗಿಯೇ ಇರುತ್ತಾನೆಂದು ನಂಬುವುದು ಸಾಧ್ಯವಿರಲಿಲ್ಲ. ಅವನು ನೇರವಾಗಿ ತಾಯಿಯಿದ್ದ ರೂಮಿಗೆ ಹೋದ. ಅಲ್ಲಿ ಅರೆಲಿಯಾನೊ ಮೆಲ್‌ಕಿಯಾಡ್ಸ್‌ನ ಸೂತ್ರದಂತೆ, ಪಾರ್ಥಿವ ಶರೀರವನ್ನು ಹಾಳಾಗದಂತೆ ಉಳಿಸಲು ನಾಲ್ಕು ತಿಂಗಳಿನಿಂದ ತಾತನ ನೀರಿನ ಪೈಪಿನಲ್ಲಿ ಪಾದರಸವನ್ನು ಕುದಿಸುತ್ತಿದ್ದ. ಜೋಸ್ ಆರ್ಕಾಡಿಯೊ ಅವನ ಬಳಿ ಏನನ್ನೂ ವಿಚಾರಿಸಲಿಲ್ಲ. ತಾಯಿಯ ಹಣೆಯ ಮೇಲೆ ಮುತ್ತಿಟ್ಟ. ಅವಳ ಸ್ಕರ್ಟ್ ಒಳಗಿನಿಂದ ಇನ್ನೂ ಬಳಸದೆ ಇದ್ದ ಪೆಸ್ಸರಿಗಳನ್ನು ಮತ್ತು ಕಪಾಟಿನ ಬೀಗದಕೈಯನ್ನು ತೆಗೆದ. ನೋಡಲು ಚುರುಕುತನವಿಲ್ಲದಂತೆ ಕಾಣಿಸುತ್ತಿದ್ದರೂ ನೇರವಾಗಿ, ನಿಖರವಾಗಿ ಮಾಡಬೇಕಾದ್ದೆಲ್ಲವನ್ನೂ ಮಾಡಿದ. ಕಪಾಟಿನಿಂದ ಗಂಧದ ವಾಸನೆಯುಳ್ಳ ಸಣ್ಣ ಪೆಟ್ಟಿಗೆಯನ್ನು ತೆಗೆದ. ಅದರಲ್ಲಿ ತಾಯಿ ಬರೆದಿರಿಸಿದ್ದ ಉದ್ದನೆಯ ಕಾಗದವಿತ್ತು. ಅದರಲ್ಲಿ ಅವಳು, ಅವನಿಂದ ಮುಚ್ಚಿಟ್ಟಿದ್ದ ಸತ್ಯಗಳನ್ನೆಲ್ಲ ಹೇಳಿಕೊಂಡು ಹೃದಯವನ್ನು ಹಗುರಮಾಡಿಕೊಂಡಿದ್ದಳು. ಅವನು ನಿಂತುಕೊಂಡೇ ಯಾವುದೇ ರೀತಿಯ ಆತಂಕಕ್ಕೆ ಒಳಗಾಗದೆ ಗಂಭೀರವಾಗಿ ಓದಿಕೊಂಡ. ಮೂರನೆ ಪುಟಕ್ಕೆ ಬಂದಾಗ, ಎರಡನೆ ಬಾರಿ ಗುರುತಿಸುತ್ತಿರುವಂತೆ ಅರೆಲಿಯೊನನ್ನು ಪರೀಕ್ಷಿಸಿ ನೋಡಿದ.

"ಹಾಗಾದರೆ, ನೀನೇ ಹಾದರಕ್ಕೆ ಹುಟ್ಟಿದವನು" ಎಂದು ಕತ್ತಿಯ ಮೊನಚಿನೊಂದಿಗೆ ಕೇಳಿದ.

"ನಾನು ಅರೆಲಿಯಾನೊ ಬ್ಯುಂಡಿಯಾ"

"ನಿನ್ನ ರೂಮಿಗೆ ಹೋಗು" ಎಂದು ಜೋಸ್ ಆರ್ಕಾಡಿಯೊ ಹೇಳಿದ.

ಅರೆಲಿಯಾನೊ ಹೋದವನು ಬರಲೇ ಇಲ್ಲ. ಒಬ್ಬನೇ ಅಂತಿಮ ಸಂಸ್ಕಾರವನ್ನು ನೆರವೇರಿಸುತ್ತಿದ್ದ ಶಬ್ದವನ್ನು ಕೇಳಿಸಿಕೊಂಡರೂ ನೋಡುವ ಕುತೂಹಲಕ್ಕೂ ಹೊರಗೆ ಬರಲಿಲ್ಲ. ಕೆಲವು ಸಲ ಅವನ ರಭಸದ ಉಸಿರಾಟವನ್ನು ಕೇಳಿಸಿಕೊಂಡೇ ಮನೆಯಲ್ಲೆಲ್ಲಾ ಜೋಸ್ ಆರ್ಕಾಡಿಯೊ ಓಡಾಡುತ್ತಿದ್ದುದನ್ನು ನೋಡುತ್ತಿದ್ದ. ಹಾಳು ಬಿದ್ದಿದ್ದ

ಬೆಡ್‌ರೂಮುಗಳಲ್ಲಿಯೂ ಅವನ ಹೆಜ್ಜೆ ಸಪ್ಪಳವನ್ನು ಮಧ್ಯರಾತ್ರಿಯಲ್ಲಿಯೂ ಕೇಳಿಸಿಕೊಳ್ಳುತ್ತಿದ್ದ. ಎಷ್ಟೋ ತಿಂಗಳಿಂದ ಅವನ ಧ್ವನಿಯನ್ನೇ ಕೇಳಿಸಿಕೊಂಡಿರಲಿಲ್ಲ. ಜೋಸ್ ಆರ್ಕಾಡಿಯೊ ಅವನನ್ನೆಂದೂ ಮಾತನಾಡಿಸಿರಲಿಲ್ಲ. ಅಲ್ಲದೆ ಅವನಿಗೂ ಮಾತನಾಡಿಸಲಿ ಎಂಬ ಆಸೆಯೂ ಇರಲಿಲ್ಲ. ಚರ್ಮಕಾಗದಗಳಲ್ಲಿ ಮುಳುಗುವುದು ಬಿಟ್ಟರೆ ಬೇರೇನೂ ಯೋಚನೆ ಬರುತ್ತಿರಲಿಲ್ಲ. ಫರ್ನಾಂಡಾ ಸಾವಿನ ನಂತರ, ಅವನು ಕಡೆಯದೊಂದನ್ನು ಬಿಟ್ಟು, ಉಳಿದಿದ್ದ ಒಂದು ಚಿನ್ನದ ಮೀನನ್ನು ತೆಗೆದುಕೊಂಡು ತನಗೆ ಬೇಕಾದ ಪುಸ್ತಕಗಳನ್ನು ಹುಡುಕುತ್ತಾ ಕ್ಯಾಟಲೋನಿ ಅಂಗಡಿಗೆ ಹೋದ. ದಾರಿಯಲ್ಲಿ ಅವನಿಗೆ ಆಸಕ್ತಿ ಮೂಡಿಸುವ ಏನೊಂದೂ ಇರಲಿಲ್ಲ. ಕಾರಣ ಅವನಿಗೆ ಹೋಲಿಸಿನೋಡಲು ಯಾವುದೇ ನೆನಪುಗಳು ಇರಲಿಲ್ಲ. ನಿರ್ಜನ ರಸ್ತೆಗಳು, ಹಾಳುಬಿದ್ದ ಮನೆಗಳು, ತಾನು ತಿಳಿದುಕೊಳ್ಳಲು ಆಸಕ್ತನಾಗಿರಬಹುದಾಗಿದ್ದ ಸಮಯದಲ್ಲಿ, ಕಲ್ಪಿಸಿಕೊಂಡಂತೆಯೇ ಇದ್ದವು. ಫರ್ನಾಂಡಾ ನಿರಾಕರಿಸಿದ್ದ ಅನುಮತಿಯನ್ನು ತನಗೆ ತಾನೇ ತೆಗೆದುಕೊಂಡ. ಆದ್ದರಿಂದ ಹೆಚ್ಚಿನ ಸಮಯವನ್ನು ಹಾಳುಮಾಡದೆ, ಕಿರಿದಾದ ರಸ್ತೆಯಿಂದ ಪ್ರತ್ಯೇಕಿಸಿದ ಹನ್ನೊಂದು ಬ್ಲಾಕುಗಳನ್ನು ದಾಟಿಕೊಂಡು ಒಂದು ಕಾಲದಲ್ಲಿ ಕನಸುಗಳನ್ನು ವಿಶ್ಲೇಷಿಸಲಾಗುತ್ತಿದ್ದ ಒಂದು ಮನೆಯೊಳಗೆ ಹೋದ. ದಾರಿಕಾಣದೆ ಗೊಂದಲಕ್ಕೆ ದೂಡುವ ಆ ಕತ್ತಲ ಜಾಗದಲ್ಲಿ ಓಡಾಡಲೂ ಕೂಡಾ ಸಾಧ್ಯವಿರಲಿಲ್ಲ. ಅದು ಪುಸ್ತಕದ ಅಂಗಡಿ ಎನಿಸಿಕೊಳ್ಳುವುದಕ್ಕಿಂತ ಓದಿ ಹಳೆಯದಾದ ಪುಸ್ತಕಗಳ ರಾಶಿಯಂತೆ ಕಾಣುತ್ತಿತ್ತು. ಗೆದ್ದಲು ತಿಂದು, ಜೇಡರ ಬಲೆಗಳು ತುಂಬಿಕೊಂಡಿದ್ದ ಶೆಲ್ಫ್‌ಗಳಲ್ಲಿ ಪುಸ್ತಕಗಳು ಅಸ್ತವ್ಯಸ್ತವಾಗಿ ಬಿದ್ದಿದ್ದವು. ಒಂದು ಉದ್ದನೆಯ ಮೇಜಿನ ಮೇಲೆ ಹಳೆಪುಸ್ತಕಗಳ, ಹಳೆ ಪೇಪರುಗಳ ರಾಶಿ ಬಿದ್ದಿತ್ತು. ಪುಸ್ತಕದಂಗಡಿಯ ಮಾಲಿಕ ನೇರಳೆ ಬಣ್ಣದಲ್ಲಿ ದಣಿವಿಲ್ಲದೆ ಅಕ್ಷರಗಳನ್ನು ಬರೆಯುತ್ತಿದ್ದ. ಸ್ಕೂಲುನೋಟ್ ಬುಕ್ಕುಗಳ ಬಿಡಿ ಹಾಳೆಗಳನ್ನೂ ಬಿಡದೆ ಕಣ್ಣಿಗೆ ರಾಚುವಂತೆ ಬರೆಯುತ್ತಿದ್ದ. ಬೆಳ್ಳಿ ಕೂದಲಿನ ತಲೆ ಬಗ್ಗಿಸಿದಾಗ, ಅದು ಹಣೆಯ ಮೇಲೆ ಬಿದ್ದು ಕೋಳಿಜುಟ್ಟಿನಂತೆ ಕಾಣುತ್ತಿತ್ತು. ಅವನ ನೀಲಿ ಕಣ್ಣುಗಳು ಎಲ್ಲ ಪುಸ್ತಕಗಳನ್ನು ಓದಿದ ಸಭ್ಯನಂತೆ ತೋರಿಸುತ್ತಿದ್ದವು. ತುಂಡು ಪ್ಯಾಟನ್ನು ಹಾಕಿಕೊಂಡಿದ್ದ. ಬೆವರಿನಿಂದ ಅದು ತೊಯ್ದು ಹೋಗಿತ್ತು. ಯಾರು ಬಂದಿದ್ದಾರೆಂಬುದನ್ನು ನೋಡುವುದಕ್ಕಾಗಿ ಬರೆಯುವುದನ್ನು ನಿಲ್ಲಿಸಲಿಲ್ಲ. ಪುಸ್ತಕದಂಗಡಿಯ ಅವ್ಯವಸ್ಥೆಯ ನಡುವೆಯೂ ತನಗೆ ಬೇಕಾಗಿದ್ದ ಐದು ಪುಸ್ತಕಗಳನ್ನು ಪತ್ತೆಹಚ್ಚಿ ಹೊರತೆಗೆದ. ಯಾಕೆಂದರೆ ಮೆಲ್‌ಕಿಯಾಡ್ಸ್ ಅವುಗಳಿದ್ದ ಜಾಗವನ್ನು ನಿಖರವಾಗಿ ಹೇಳಿದ್ದ. ಒಂದು ಮಾತನ್ನೂ ಆಡದೆ ಅವನು ಆ ಐದು ಪುಸ್ತಕಗಳನ್ನು ಮತ್ತು ಚಿನ್ನದ ಮೀನನ್ನು ಆ ಬುದ್ಧಿವಂತ ಕ್ಯಾಟಲೋನಿಯನ್ನಿಗೆ ಒಟ್ಟಿಗೆ ನೀಡಿದ. ಅವನು ಅವುಗಳನ್ನು ಪರೀಕ್ಷಿಸುತ್ತಾ "ನೀನೆಲ್ಲೊ ಹುಚ್ಚನಿರಬೇಕು" ಎಂದು ಭುಜ ಹಾರಿಸುತ್ತ ತನ್ನ ಮಾತೃಭಾಷೆಯಲ್ಲಿ ಹೇಳಿದ. ನಂತರ ಅವನು ಐದು ಪುಸ್ತಕ ಮತ್ತು ಚಿನ್ನದ ಮೀನನ್ನು ಅರೆಲಿಯಾನೊಗೆ ಹಿಂತಿರುಗಿಸಿದ.

"ಅದನ್ನು ನೀನೇ ಇಟ್ಟುಕೊ" ಇವುಗಳನ್ನು ಕಡೆಯದಾಗಿ ಓದಿದವನೆಂದರೆ ಕುರುಡನಾಗಿದ್ದ ಐಸಾಕ್ ಇರಬೇಕು. ಆದ್ದರಿಂದ ಮಾಡುವುದನ್ನು ಸರಿಯಾಗಿ ಯೋಚಿಸು" ಎಂದ.

ಜೋಸ್ ಆರ್ಕಾಡಿಯೊ ಮೆಮೆಯ ಬೆಡ್‌ರೂಮನ್ನು ಮೊದಲಿನ ಸ್ಥಿತಿಗೆ ತಂದ. ವೆಲ್ವೆಟ್ ಪರದೆಗಳನ್ನು ಶುಭ್ರಗೊಳಿಸಿದ. ಅದ್ದೂರಿ ಮಂಚವನ್ನು ಸರಿಪಡಿಸಿದ. ಮತ್ತೆ ಅದು ಉಪಯೋಗಕ್ಕೆ ಯೋಗ್ಯವೆನ್ನುವಂತೆ ಮಾಡಿದ. ಉಪಯೋಗಿಸದೆ ಹಾಳಾಗಿದ್ದ ಬಚ್ಚಲು ಮನೆಯನ್ನು ಸರಿಪಡಿಸಿದ. ಕಪ್ಪಾಗಿದ್ದ ಸಿಮೆಂಟ್ ತೊಟ್ಟಿಯನ್ನು ರಿಪೇರಿ ಮಾಡಿಸಿದ. ಬೆಲೆಯುಳ್ಳ ಉಡುಪುಗಳನ್ನು, ಕೃತಕ ಸುಗಂಧಗಳನ್ನು, ಒಡವೆಗಳನ್ನು ಅಗತ್ಯ ಸಂದರ್ಭಗಳಿಗೆ ಮಾತ್ರವೆ ಸೀಮಿತಗೊಳಿಸಿದ. ಅವನನ್ನು ಕಾಡಿದ್ದ ಒಂದೇ ಒಂದು ಸಮಸ್ಯೆಯೆಂದರೆ ಮನೆಯಲ್ಲಿದ್ದ ಸಂತರ ವಿಗ್ರಹಗಳು. ಅವುಗಳನ್ನು ಒಂದು ದಿನ ಮಧ್ಯಾಹ್ನ ಅಂಗಳದಲ್ಲಿ ಬೆಂಕಿಯಲ್ಲಿ ಸುಟ್ಟು ಬೂದಿ ಮಾಡಿದ. ಹನ್ನೊಂದು ಗಂಟೆ ದಾಟಿದ ಮೇಲೆಯೇ ಅವನು ಮಲಗುತ್ತಿದ್ದ. ಚಿನ್ನದ ಡ್ರ್ಯಾಗನ್‌ಗಳಿದ್ದ, ಕೊಳಕಾದ ಬಟ್ಟೆ ಹಾಕಿಕೊಂಡು, ಚಪ್ಪಲಿ ಮೆಟ್ಟಿಕೊಂಡು ಬಚ್ಚಲು ಮನೆ ಪ್ರವೇಶಿಸುತ್ತಿದ್ದ. ಅಲ್ಲಿ ವಿಧ್ಯುಕ್ತ ಕ್ರಿಯೆಗಳನ್ನು ಮಾಡಿ ರೆಮೆಡಿಯೋಸ್ ದ ಬ್ಯೂಟಿಯನ್ನು ಆಹ್ವಾನಿಸುತ್ತಿದ್ದ. ಸ್ನಾನಕ್ಕೆ ಮೊದಲು ನೀರಿಗೆ ಸುಗಂಧ ಮತ್ತು ಕಲ್ಲಿನ ಪೆಟ್ಟಿಗೆಗಳಲ್ಲಿ ತರುತ್ತಿದ್ದ ಲವಣಗಳನ್ನು ಹಾಕುತ್ತಿದ್ದ. ಅವನು ಸೋರೆ ಬುರುಡೆಯಿಂದ ಸ್ನಾನ ಮಾಡುತ್ತಿರಲಿಲ್ಲ ಬದಲಾಗಿ ನೀರಿನ ತೊಟ್ಟಿಯಲ್ಲಿ ಮುಖ ಮೇಲುಮಾಡಿ ಎರಡು ಗಂಟೆಗಳ ಕಾಲ ನೀರಿನ ತಣ್ಣನೆಯ ಸುಖವನ್ನು ಅನುಭವಿಸುತ್ತ, ಅಮರಾಂತಾಳನ್ನು ನೆನಪಿಸಿಕೊಳ್ಳುತ್ತಾ ತೇಲುತ್ತಿದ್ದ ಬಂದ ಕೆಲವು ದಿನಗಳ ನಂತರ, ಅವನ ಬಳಿ ಇದ್ದ, ಆ ಊರಿನ ಸೆಕೆಗೆ ಸರಿಹೊಂದದ ಟಫೆಟಾ ಸೂಟನ್ನು ಬಿಟ್ಟು, ಪೀಟ್ರೋ ಕ್ರೆಸ್ಪಿ ಸಂಗೀತ ಪಾಠಗಳನ್ನು ಹೇಳಿ ಕೊಡುವಾಗ ಹಾಕುತ್ತಿದ್ದ ಬಿಗಿ ಪ್ಯಾಂಟು ರೇಷಿಮೆಯ ಷರ್ಟ್ ಅನ್ನು ಹಾಕುವುದಕ್ಕೆ ಆರಂಭಿಸಿದ. ಷರ್ಟಿನ ಮಧ್ಯಭಾಗದಲ್ಲಿ ಹೆಸರಿನ ಇನಿಷಿಯಲ್‌ಗಳನ್ನು ಕಸೂತಿ ಮಾಡಿರಲಾಗುತ್ತಿತ್ತು. ಅವನಲ್ಲಿ ಅದು ಬಿಟ್ಟು ಬೇರೆ ಬಟ್ಟೆ ಇರಲಿಲ್ಲವಾಗಿ ಅವುಗಳು ಒಣಗುವ ತನಕ ಹೊದಿಕೆಯೊಂದನ್ನು ಉಪಯೋಗಿಸುತ್ತಿದ್ದ. ಮನೆಯಲ್ಲಿ ತಿನ್ನುತ್ತಲೇ ಇರಲಿಲ್ಲ. ಮಧ್ಯಾಹ್ನ ಕಳೆದು ಸ್ವಲ್ಪ ತಂಪಾದ ಮೇಲೆ ಹೊರಗಡೆ ಹೋಗುತ್ತಿದ್ದ. ರಾತ್ರಿಯಾಗುವವರೆಗೂ ಹಿಂತಿರುಗುತ್ತಿರಲಿಲ್ಲ. ನಂತರ ಅದನ್ನು ಬೆಕ್ಕಿನಂತೆ ಚಡಪಡಿಸುತ್ತಾ ಓಡಾಡುತ್ತಾ, ಅಮರಾಂತಾ ಬಗ್ಗೆ ಯೋಚಿಸುತ್ತಾ ಇರುತ್ತಿದ್ದ. ಅವನಿಗೆ ರಾತ್ರಿಯ ಆ ಮಂದ ಬೆಳಕಿನಲ್ಲಿ ಮನೆಗೆ ಸಂಬಂಧಿಸಿದಂತೆ ನೆನಪಿದ್ದ ವಿಷಯಗಳೆಂದರೆ ಅಮರಾಂತಾ ಮತ್ತು ಸಂತರ ವಿಗ್ರಹಗಳ ಭಯ ಹುಟ್ಟಿಸುವ ನೋಟ. ರೋಮನ್ ಆಗಸ್ಟ್ ಸಮಯದಲ್ಲಿ ಹಲವು ಬಾರಿ ಮೈಮರೆತ ನಿದ್ದೆಯ ನಡುವಿನಿಂದ ಎಚ್ಚರಗೊಂಡಾಗ, ಲೇಸ್ ಹಾಕಿದ ಒಳಲಂಗ, ಕೈಗೆ ಬ್ಯಾಂಡೇಜ್‌ನೊಂದಿಗೆ ಅಮೃತಶಿಲೆಯ ಕೊಳದಿಂದ, ದೇಶ ಬಹಿಷ್ಕಾರದ ಆತಂಕದಿಂದ ಹೊರ ಬರುತ್ತಿದ್ದುದನ್ನು ನೋಡುತ್ತಿದ್ದ. ಅರೆಲಿಯಾನೊ ಜೋಸ್ ರಕ್ತಸಿಕ್ತ ಯುದ್ಧಗಳಲ್ಲಿ ನೆನಪುಗಳನ್ನು ಮುಳುಗಿಸಿದರೆ, ಇವನು ಅವನಿಗೆ ವ್ಯತಿರಿಕ್ತವಾಗಿ ವಿಷಯಾಸಕ್ತಿಯ ನಡುವೆ ನೆನಪುಗಳನ್ನು ಜೀವಂತವಾಗಿ ಇಡುವುದರ ಜೊತೆಗೆ ತನ್ನ ತಾಯಿಯನ್ನು ಧರ್ಮ ಗುರುವಿನ ವೃತ್ತಿಗೆ ಸಂಬಂಧಿಸಿದಂತೆ ಕೊನೆಯಿಲ್ಲದಷ್ಟು ಕಥೆಗಳನ್ನು ಹೇಳಿ ಸಂತೋಷಪಡಿಸುತ್ತಿದ್ದ. ಅವನ ಮತ್ತು ಫರ್ನಾಂಡಾ ನಡುವೆ ನಡೆಯುತ್ತಿದ್ದ ಪತ್ರವ್ಯವಹಾರದಲ್ಲಿ ಬಹಳಷ್ಟು ಕಲ್ಪನೆಗಳೇ ಇರುತ್ತವೆಂಬುದು ಇಬ್ಬರಿಗೂ ತಿಳಿದಿರಲಿಲ್ಲ. ಜೋಸ್ ಆರ್ಕಾಡಿಯೊ ಶಾಲೆ ಮುಗಿಸಿ ರೂಮಿಗೆ ಹೋದ

ಮೇಲೆ ತನ್ನ ತಾಯಿ ಪತ್ರಗಳ ಮೂಲಕ ಪರಂಪರಾಗತ ವೈಭವವನ್ನು ಹಾಳುಮಾಡಬಾರದೆಂದು ಕ್ರೈಸ್ತಮತದ ವಿಧಿ ನಿಯಮ ಸಂಬಂಧವಾದ ಕಾನೂನನ್ನು, ಧರ್ಮಶಾಸ್ತ್ರವನ್ನು ಅಭ್ಯಾಸ ಮಾಡುವುದಕ್ಕೆ ಮನಸ್ಸು ಮಾಡಿದ. ಇದರಿಂದಾಗಿ ತಾನು ಸ್ನೇಹಿತರೊಂದಿಗೆ ಹಂಚಿಕೊಂಡ ದುಃಖ ಮತ್ತು ಮಲಿನತೆಗಳಿಂದ ದೂರವಿರಬಹುದೆಂದು ಭಾವಿಸಿದ. ತಾಯಿಯಿಂದ ತನ್ನ ಸಾವು ಸಮೀಪಿಸುತ್ತಿದೆ ಎಂದು ತಿಳಿಸುತ್ತಿದ್ದ ಕಡೆಯ ಕಾಗದ ಬಂದಾಗ, ತನ್ನ ವೈಭವದ ಉಡುಪುಗಳನ್ನೆಲ್ಲ ಪೆಟ್ಟಿಗೆಯಲ್ಲಿರಿಸಿ, ಕಟುಕನೆಡೆಗೆ ಕೊಂಡೊಯ್ಯುವ ಕುರಿಮಂದೆಯಂತೆ ತುಂಬಿದ್ದ ವಲಸೆ ಮಂದಿಯಿದ್ದ ಹಡಗನ್ನು ಹತ್ತಿಬಂದ. ತನ್ನ ದುಃಖ ಸಂಕಷ್ಟಗಳನ್ನೇ ತೋಡಿಕೊಂಡಿದ್ದ ಫರ್ನಾಂಡಾಳ ಉಯಿಲನ್ನು ಓದುವುದಕ್ಕೆ ಮೊದಲೇ, ಮುರಿದು ಬಿದ್ದ ಪೀಠೋಪಕರಣಗಳು, ಪ್ರವೇಶ ದ್ವಾರದಲ್ಲಿ ಬೆಳೆದಿದ್ದ ಕಳೆಗಿಡಗಳು, ಅವನು ಬಲೆಗೆ ಬಿದ್ದಿರುವುದನ್ನು ಮತ್ತು, ರೋಮನ್ ವಸಂತದ ಗಾಳಿ ಸ್ಪರ್ಶ, ಬೆಳಕಿನ ಹಿತದಿಂದ ವಂಚಿತನಾಗಿರುವುದನ್ನು ಸೂಚಿಸುತ್ತಿದ್ದವು. ಅಸ್ತಮಾದಿಂದ ನಿದ್ದೆಯಿಲ್ಲದಂತಾದ ಸಮಯದಲ್ಲಿ, ಉರ್ಸುಲಾಳ ಮುಪ್ಪಿನ ಕಿರಿಕಿರಿಯಿಂದ ಅವನಲ್ಲಿ ಉಂಟಾಗಿದ್ದ ಭಯದ ನೆರಳಿನಲ್ಲಿ ಅವನು ಆ ಮನೆಯಲ್ಲಿ ತನ್ನ ದುರಾದೃಷ್ಟದ ಆಳವನ್ನು ಅಳೆಯುತ್ತ ಮತ್ತೆ ಮತ್ತೆ ಅಳೆಯುತ್ತಾ ಇದ್ದ. ನೆರಳಿನ ಮಧ್ಯದಲ್ಲಿ ಅವನು ಕಳೆದುಹೋಗಬಹುದೆಂದು ಅವಳು ಅವನನ್ನು ತನ್ನ ಬೆಡ್‌ರೂಮಿನ ಒಂದು ಮೂಲೆಯಲ್ಲಿ ಇರುವಂತೆ ಮಾಡಿದಳು. ಅದು ಅವಳಿಗೆ ಅವನ ದೃಷ್ಟಿಯಿಂದ ಸುರಕ್ಷಿತ ಜಾಗವೆನಿಸಿತ್ತು. ಸೂರ್ಯಾಸ್ತದ ನಂತರ ಪ್ರೇತಗಳು ಅಲ್ಲಿ ಓಡಾಡುತ್ತವೆ ಎನ್ನುವ ಕಾರಣದಿಂದ ಅವನನ್ನು ರಕ್ಷಿಸಬೇಕಾಗಿತ್ತು. ಅದಕ್ಕೇ ಆ ಮೂಲೆಯೇ ಸುರಕ್ಷಿತವೆನಿಸಿತ್ತು. "ನೀನೇನಾದರೂ ಕೆಟ್ಟ ಕೆಲಸಮಾಡಿದರೆ, ಸಂತರು ನನಗೆ ತಿಳಿಸಿಬಿಡುತ್ತಾರೆ" ಎಂದಿದ್ದಳು ಉರ್ಸುಲಾ. ಅವನ ಬಾಲ್ಯವೆಲ್ಲ ಭಯತುಂಬಿದ್ದ ರಾತ್ರಿಗಳಲ್ಲಿ, ಆ ಮೂಲೆಯಲ್ಲಿ ಸೀಮಿತವಾಗಿತ್ತು. ಮಲಗುವ ಸಮಯ ಬರುವವರೆಗೂ ಆ ಮೂಲೆಯಲ್ಲಿ ಒಂದು ಸ್ಟೂಲಿನ ಮೇಲೆ ನಿಶ್ಚಲವಾಗಿ ಕೂತಿರುತ್ತಿದ್ದ. ಅಲ್ಲಿಯೂ ಸಂತರ ಭಯ ಹುಟ್ಟಿಸುವ ರೀತಿಯಲ್ಲಿ ಕಣ್ಗಾವಲು ಇದ್ದೇ ಇರುತ್ತಿತ್ತು. ಅದು ನಿಷ್ಪ್ರಯೋಜಕ ಹಿಂಸೆಯಾಗಿತ್ತು. ಸಹಜವಾಗಿಯೇ ಅವನು ಪ್ರತಿಯೊಂದು ವಿಷಯಕ್ಕೂ ಹೆದರುತ್ತಿದ್ದ. ಅವನಿಗೆ ಎದುರಾಗುವ ಪ್ರತಿಯೊಂದಕ್ಕೂ ಹೆದರುತ್ತಲೇ ಇರುತ್ತಿದ್ದ. ಹಂದಿ ಬಾಲವಿರುವ ಮಕ್ಕಳನ್ನು ಹುಟ್ಟಿಸುವ ಮನೆಯಲ್ಲಿನ ಹೆಂಗಸರು; ಮನುಷ್ಯರ ಸಾವನ್ನು ತರುವ, ಬಾಳಿನುದ್ದಕ್ಕೂ ಪರಿತಪಿಸುವಂತೆ ಮಾಡುವ ಕಾಳಗದ ಹುಂಜಗಳು. ಇಪ್ಪತ್ತು ವರ್ಷಗಳ ಯುದ್ಧವನ್ನೂ ಹೇಳಹೆಸರಿಲ್ಲದಂತೆ ಅಳಿಸಿಬಿಡುವ ಬಂದೂಕುಗಳು, ಕಡೆಯಲ್ಲಿ ಕೇವಲ ಭ್ರಮನಿರಸನ ಮತ್ತು ಮತಿಭ್ರಮಣೆ ತರುವಂತಹ ಅನಿಶ್ಚಿತ ಸಾಹಸಗಳು – ಹೀಗೆ ಎಲ್ಲವೂ, ಸಂಕ್ಷೇಪವಾ ಹೇಳುವುದಾದರೆ, ಅಪಾರವಾದ ಒಳ್ಳೆತನದಿಂದ ಸೃಷ್ಟಿಸಿದ ಎಲ್ಲವೂ, ಆದರೆ ಸೈತಾನನಿಂದ ವಿರುದ್ಧವಾಗಿ ಪರಿವರ್ತಿತವಾದುದು – ಎಲ್ಲದರಿಂದಲೂ ಹೆದರುತ್ತಿದ್ದ! ಅವನು ಎದ್ದಾಗ, ಭಯಾನಕವಾದ ದುಃಸ್ವಪ್ನಗಳಿಂದ, ಕಿಟಕಿಯಿಂದ ಬರುತ್ತಿದ್ದ ಬೆಳಕು, ಅಮರಾಂತಾಳ ಪ್ರೀತಿ, ಅದೂ ಬಚ್ಚಲು ಮನೆಯಲ್ಲಿ ಕಾಲುಗಳ ಮಧ್ಯೆ ಮೃದುವಾದ ಪಫ್‌ನಿಂದ ಹಾಕುತ್ತಿದ್ದ ಪೌಡರ್‌ಗಳು ಬಿಡಿಸುತ್ತಿದ್ದವು. ಉರ್ಸುಲಾ ಕೂಡಾ ಬೆಳಗಿನ ಹೊತ್ತು, ಹೂದೋಟದಲ್ಲಿ, ಭಯಹುಟ್ಟಿಸುವ

ಮಾತುಗಳನ್ನಾಡದೆ, ಇದ್ದಿಲ ಪುಡಿಯಿಂದ ಅವನ ಹಲ್ಲು ಉಜ್ಜುತ್ತಿದ್ದಳು. ಇದರಿಂದ ಅವನು ಪೋಪ್ ಆದಾಗ ಮುಗುಳ್ನಗೆಯ ಹೊಳಪು ಹೊಂದಿರಲಿ ಎಂದು ಆಶಿಸುತ್ತಿದ್ದಳು. ಪ್ರಪಂಚದ ಮೂಲೆ ಮೂಲೆಗಳಿಂದ ಯಾತ್ರಾರ್ಥಿಗಳು ರೋಮಿಗೆ ಬಂದಾಗ, ಪೋಪ್ ಬಳಿ ಆಶೀರ್ವಾದಕ್ಕೆ ನಿಂತಾಗ, ಅವರಿಗೆ ಪೋಪ್‌ನ ಕೈಗಳ ಸೌಂದರ್ಯ ಬೆಚ್ಚುವಂತಾಗಬೇಕೆಂದು ಬಯಸಿ ಉಗುರುಗಳನ್ನು ನೀಟಾಗಿ ಕತ್ತರಿಸಿ, ಹೊಳಪು ಕೊಡುತ್ತಿದ್ದಳು. ಅವಳು ಅವನ ಮೈಗೆ, ಬಟ್ಟೆಗೆ ಸುಗಂಧದ ನೀರನ್ನು ಚಿಮುಕಿಸಿ ಪೋಪ್‌ನ ಬಟ್ಟೆಗಳು ಸುವಾಸನೆಯಿಂದ ಇರುವಂತೆ ಮಾಡುತ್ತಿದ್ದಳು. ಬಾಲ್ಕನಿಯಲ್ಲಿ ನಿಂತು, ಕ್ಯಾಸ್ಟಲ್ ಗೊಂಡಾಲ್ಫ್‌ನ ಅಂಗಳದಲ್ಲಿ, ಪೋಪ್ ಅಲ್ಲಿ ನೆರೆದಿದ್ದ ತೀರ್ಥಯಾತ್ರಿಗಳಿಗೆ ಏಳು ಭಾಷೆಗಳಲ್ಲಿ ಭಾಷಣ ಮಾಡುತ್ತಿದ್ದುದನ್ನು ನೋಡಿದ್ದ. ಆದರೆ ಅವನನ್ನು ಆಕರ್ಷಿಸಿದ್ದು ಮಾತ್ರ, ಉಪ್ಪುನೀರಿನಲ್ಲಿ ಅದ್ದಿದ ಅವನ ಕೈಗಳ ಮಿರಮಿರ ಮಿರುಗುತ್ತಿದ್ದ ಹೊಳಪು, ಬೇಸಿಗೆ ಉಡುಪಿನ ಕಣ್‌ಕುಕ್ಕುವ ಹೊಳಪು, ಸುಗಂಧ ಬೆರೆಸಿದ ನೀರಿನ ವಾಸನೆ.

ಅವನು ಮನೆಗೆ ಹಿಂತಿರುಗಿ ಬಂದ ಒಂದು ವರ್ಷದಲ್ಲಿ ಹೊಟ್ಟೆಪಾಡಿಗಾಗಿ ಬೆಳ್ಳಿಯ ದೀಪಸ್ತಂಭಗಳನ್ನು ಮತ್ತು ಕೇವಲ ಕಂಠದ ಬಳಿಯಷ್ಟೇ ಚಿನ್ನದ ಲೇಪವಿದ್ದ ಮೂತ್ರ ಪಾತ್ರೆಯನ್ನು ಮಾರಿದ. ಊರಿನ ಮಕ್ಕಳನ್ನು ಆಟವಾಡಲೆಂದು ಮನೆಗೆ ಕರೆದುಕೊಂಡು ಬರಲು ಮನಸ್ಸು ಮಾಡಿದ. ಮಧ್ಯಾಹ್ನ ಊಟದ ನಂತರ ವಿಶ್ರಾಮದ ಸಮಯದಲ್ಲಿ ಅವನು ಅವರೊಂದಿಗೆ ಕಾಣಿಸಿಕೊಳ್ಳುತ್ತಿದ್ದ. ಹೂದೋಟದಲ್ಲಿ ಅವರು ಹಗ್ಗದಾಟವಾಡಲು ಅವಕಾಶಕೊಡುತ್ತಿದ್ದ. ನಡುಮನೆಯಲ್ಲಿ ಹಾಡುವುದಕ್ಕೆ, ಪೀಠೋಪಕರಣಗಳ ಮೇಲಿಂದ ದೊಂಬರಾಟಕ್ಕೆ ಪಡಸಾಲೆಯಲ್ಲಿ ಅನುವುಮಾಡಿಕೊಡುತ್ತಿದ್ದ. ಗುಂಪು ಗುಂಪಾಗಿ ಹುಡುಗರನ್ನು ಸೇರಿಸಿ ಒಳ್ಳೆಯ ನಡವಳಿಕೆಯನ್ನು ತಿಳಿಸುತ್ತಿದ್ದ. ಅಷ್ಟುಹೊತ್ತಿಗೆ ಅವನು ಬಿಗಿ ಪ್ಯಾಂಟು, ಸಿಲ್ಕ್ ಷರ್ಟಿಗೆ ಬದಲಾಗಿ ಅರಬ್ ಸ್ಟೋರ್ಸ್‌ನಲ್ಲಿ ಕೊಂಡಿದ್ದ ಸಾಮಾನ್ಯ ಸೂಟನ್ನು ಧರಿಸುತ್ತಿದ್ದನಾದರೂ ತನ್ನ ಗಾಂಭೀರ್ಯವನ್ನು ಉಳಿಸಿಕೊಂಡು ಪೋಪ್‌ನಂತೆಯೇ ನಡೆದುಕೊಳ್ಳುತ್ತಿದ್ದ. ಹಿಂದೆ ಮೆಮೆಯ ಗೆಳತಿಯರು ಮನೆಯನ್ನು ಮುತ್ತಿದಂತೆ ಮಕ್ಕಳೂ ಕೂಡಾ ಮನೆಯನ್ನು ಆಕ್ರಮಿಸಿಕೊಂಡುಬಿಟ್ಟರು. ತಡರಾತ್ರಿಯವರೆಗೆ ಕುಣಿಯುವುದು, ಹಾಡುವುದು, ಹೆಜ್ಜೆ ಹಾಕುವುದು, ಮುಂದುವರೆಸಿದ್ದರು. ಬೋರ್ಡಿಂಗ್ ಸ್ಕೂಲು ಮಕ್ಕಳು ಆಗ ಹೇಗೆ ಒಂದಿಷ್ಟೂ ಶಿಸ್ತು ಇಲ್ಲದಂತೆ ವರ್ತಿಸುತ್ತಿದ್ದರೋ ಇವರೂ ಹಾಗೇ ಆದರು. ಅರೆಲಿಯಾನೊ ತಾನು ಮೆಲ್‌ಕಿಯಾಡ್ಸ್ ರೂಮಿನಲ್ಲಿ ಇರುವವರೆಗೆ ತನ್ನ ತಂಟೆಗೆ ಬರದಿದ್ದರೆ ಸಾಕೆಂದು ಸುಮ್ಮನಿದ್ದ.

ಒಂದು ದಿನ ಬೆಳಿಗ್ಗೆ ಒಂದಿಬ್ಬರು ಮಕ್ಕಳು ಬಾಗಿಲು ತಳ್ಳಿ ಒಳಗೆ ನೋಡಿದಾಗ, ಕೊಳಕಾಗಿ, ಕೂದಲು ಕೆದರಿಕೊಂಡು ಚರ್ಮಕಾಗದಗಳಲ್ಲಿ ಮಗ್ನನಾಗಿದ್ದವನನ್ನು ನೋಡಿ ಬೆಚ್ಚಿಬಿದ್ದರು. ಒಳಗೆ ಹೋಗುವ ಧೈರ್ಯ ಮಾಡಲಿಲ್ಲವಾದರೂ ಹೊರಗಿನಿಂದಲೇ ರೂಮನ್ನೆಲ್ಲಾ ಗಮನಿಸುತ್ತಿದ್ದರು. ಬಿರುಕುಗಳ ಮಧ್ಯದಿಂದ ನೋಡುತ್ತಾ, ಪಿಸುಮಾತಾಡುತ್ತಾ ಜೀವಂತ ಪ್ರಾಣಿಗಳನ್ನು ಅರೆತೆರೆದ ಬಾಗಿಲೊಳಗಿಂದ ಎಸೆಯುತ್ತಿದ್ದರು. ಒಂದು ಸಲವಂತೂ ಕಿಟಕಿ, ಬಾಗಿಲುಗಳಿಗೆಲ್ಲ ಮೊಳೆ ಒಡೆದು ಮುಚ್ಚಿಬಿಟ್ಟರು. ಅವುಗಳನ್ನು

ತೆರೆಯಲು ಅರೆಲಿಯಾನೊಗೆ ಅರ್ಧದಿನ ಬೇಕಾಯಿತು. ಶಿಕ್ಷೆಗೆ ಒಳಗಾದ ತಮ್ಮ ತುಂಟತನದಿಂದ ಹುರುಪುಗೊಂಡು ನಾಲ್ಕು ಮಕ್ಕಳು ಅರೆಲಿಯಾನೊ ಅಡಿಗೆ ಮನೆಯಲ್ಲಿ ಚರ್ಮಕಾಗದಗಳನ್ನು ಸುಟ್ಟು ನಾಶಮಾಡುವುದಕ್ಕೆ ಸಿದ್ಧನಾಗುತ್ತಿದ್ದಾಗ, ಅವನ ರೂಮಿಗೆ ಹೋದರು. ಅಲ್ಲಿದ್ದ ಹಳದಿ ಹಾಳೆಗಳ ಮೇಲೆ ಕೈಯಿಟ್ಟದ್ದೇ ನೆಲದ ಮೇಲಿಂದ ಎದ್ದು ಗಾಳಿಯಲ್ಲಿ ಹಾಗೆಯೆ ಅರೆಲಿಯಾನೊ ಬರುವವರೆಗೂ ನೇತಾಡುತ್ತಿದ್ದರು. ಅವನು ಬಂದು ಅವರಿಂದ ಚರ್ಮಕಾಗದಗಳನ್ನು ತೆಗೆದುಕೊಳ್ಳುವವರೆಗೆ ಹಾಗೆಯೇ ಇದ್ದರು. ಅದಾದನಂತರ ಅವರು ಅವನಿಗೆ ತೊಂದರೆ ಕೊಡಲಿಲ್ಲ. ಮಕ್ಕಳಲ್ಲಿ ದೊಡ್ಡವರೆನಿಸಿಕೊಂಡಿದ್ದ ಈ ನಾಲ್ಕು ಜನ ಪ್ರಾಯಕ್ಕೆ ಸಮೀಪಿಸುತ್ತಿದ್ದರೂ ಅರೆ ಪ್ಯಾಂಟನ್ನು ಧರಿಸಿದ್ದರು. ಅವರೆಲ್ಲ ಜೋಸ್ ಆರ್ಕಾಡಿಯೊ ಬಗ್ಗೆ ಗಮನ ಕೊಡುವುದರಲ್ಲಿ ನಿರತರಾದರು. ಬೇರೆಯವರು ಬರುವುದಕ್ಕೆ ಮೊದಲೇ ಬಂದು ಬೆಳಗಿನ ಹೊತ್ತು ಅವನ ಕ್ಷೌರಕ್ಕೆ ಸಹಾಯ ಮಾಡುತ್ತಿದ್ದರು, ಕೆಲವರು ದೇಹವನ್ನು ಬಿಸಿನೀರಿನಲ್ಲಿ ಅದ್ದಿದ ಟವೆಲಿನಿಂದ ಮಸಾಜು ಮಾಡುತ್ತಿದ್ದರು. ಮತ್ತು ಅವನ ಉಗುರುಗಳನ್ನು ಕತ್ತರಿಸಿ ಅವುಗಳನ್ನು ಪಾಲಿಷು ಮಾಡುತ್ತಿದ್ದರು. ಸುಗಂಧ ನೀರನ್ನು ಸಿಂಪಡಿಸಿ ಗಮಗಮಿಸುವಂತೆ ಮಾಡುತ್ತಿದ್ದರು. ಕೆಲವೊಮ್ಮೆ ಅವನು ಬಚ್ಚಲು ಮನೆಯ ನೀರಿನ ತೊಟ್ಟಿಯಲ್ಲಿ ಅಮರಾಂತಾಳ ಬಗ್ಗೆ ಯೋಚಿಸುತ್ತಿದ್ದಾಗ ಆ ಹುಡುಗರು ತಲೆಯಿಂದ ಕಾಲಿನವರೆಗೆ ಸೋಪು ಹಾಕಿ ತಿಕ್ಕುತ್ತಿದ್ದರು. ನಂತರ ಮೈಯೆಲ್ಲ ಒರಸಿ ಒಣಸಿಸಿ ಪೌಡರ್ ಹಾಕಿ ಬಟ್ಟೆ ತೊಡಿಸುತ್ತಿದ್ದರು. ಅವರಲ್ಲಿ ಒಬ್ಬ ಗುಂಗುರಾದ ಕೆಂಗೂದಲು, ಮೊಲದಂತೆ ಗಾಜು ಕಣ್ಣುಳ್ಳವ ಆ ಮನೆಯಲ್ಲಿಯೇ ಮಲಗುವುದನ್ನು ಅಭ್ಯಾಸಮಾಡಿಕೊಂಡಿದ್ದ. ಇವನು ಆರ್ಕಾಡಿಯೊ ನಡುವಿನ ಸ್ನೇಹ ಎಷ್ಟರಮಟ್ಟಿಗಿತ್ತೆಂದರೆ ಯಾವಾಗಲೂ ಅವನ ಜೊತೆಯೇ ಇರುತ್ತಿದ್ದುದಲ್ಲದೆ ಅಸ್ತಮಾದಿಂದ ನಿದ್ದೆಬಾರದೆ ಮನೆಯಲ್ಲೆಲ್ಲ ಓಡಾಡುತ್ತಿರುವಾಗಲೂ ಒಂದಿಷ್ಟೂ ಮಾತಿಲ್ಲದೆಯೇ ಅವನ ಜೊತೆಯಲ್ಲಿ ಅವನಂತೆಯೇ ಕತ್ತಲಲ್ಲಿ ಓಡಾಡುತ್ತಿದ್ದ. ಒಂದು ದಿನ ಉರ್ಸುಲಾ ಮಲಗುತ್ತಿದ್ದ ರೂಮಿನಲ್ಲಿ, ಉದುರುತ್ತಿದ್ದ ಸಿಮೆಂಟಿನ ಮೂಲಕ ಹಳದಿ ಬೆಳಕೊಂದು ಕಾಣಿಸಿತು. ಭೂಮಿಯೊಳಗಿನ ಸೂರ್ಯ ಬಹುಶಃ ನೆಲವನ್ನು ಗಾಜಿನ ಪದರವನ್ನಾಗಿ ಮಾರ್ಪಡಿಸಿದ್ದಾನೊ ಎನ್ನುವಂತೆ ಕಾಣುತ್ತಿತ್ತು. ದೀಪ ಹಾಕುವ ಅಗತ್ಯವೇ ಬರಲಿಲ್ಲ. ಉರ್ಸುಲಾಳ ಮಂಚವಿದ್ದ ಮೂಲೆಯಲ್ಲಿ ಬೆಳಕು ತೀಕ್ಷ್ಣವಾಗಿತ್ತು. ಈ ರಹಸ್ಯ ಜಾಗವನ್ನು ಪತ್ತೆಮಾಡಲೆಂದೇ ಅರೆಲಿಯಾನೊ ಸೆಗುಂಡೊ ಅಷ್ಟೆಲ್ಲಾ ಕಷ್ಟಪಟ್ಟು ಮನೆಯನ್ನೆಲ್ಲ ಅಗೆದು ಶೋಧಿಸಿದ್ದು, ಅಲ್ಲಿ ಮೂರು ಕ್ಯಾನ್‌ವಾಸ್ ಚೀಲಗಳಿದ್ದು ತಾಮ್ರದ ತಂತಿಯಿಂದ ಕಟ್ಟಿ ಇರಿಸಲಾಗಿತ್ತು. ಅವುಗಳ ಒಳಗೆ ಎಂಟರ ಏಳುಸಾವಿರದ ಇನ್ನೂರ ಹದಿನಾಲ್ಕು ನಾಣ್ಯಗಳಿದ್ದು, ಆ ಕತ್ತಲಲ್ಲಿ ಬೆಂಕಿಯ ಕೆಂಡಗಳಂತೆ ಹೊಳೆಯುತ್ತಿದ್ದವು.

ಆಕಸ್ಮಿಕವಾಗಿ ದೊರೆತ ಈ ನಿಧಿ ಸುಡುವ ಬೆಂಕಿಯಾಯಿತು. ಕಷ್ಟದ ದಿನಗಳಲ್ಲಿ ರೋಮ್‌ಗೆ ಹೋಗಬೇಕೆಂದು ಕನಸು ಕಾಣುತ್ತಿದ್ದ. ಈಗ ಸಿಕ್ಕ ಸಂಪತ್ತಿನಿಂದ ಅವನು ರೋಮ್‌ಗೆ ಹೋಗುವ ಬದಲು ಜೋಸ್ ಆರ್ಕಾಡಿಯೊ ಮನೆಯನ್ನು ಅಧಃಪತನದತ್ತ ಸಾಗುತ್ತಿರುವುದನ್ನು ಸ್ವರ್ಗವಾಗಿ ಪರಿವರ್ತಿಸಿದ. ಪರದೆಗಳನ್ನು ಬದಲಾಯಿಸಿದ. ಹಾಸಿಗೆ ಮೇಲೆ ವೆಲ್‌ವೆಟ್ ಬಟ್ಟೆಯನ್ನು ಹಾಸಿದ. ಬಚ್ಚಲು ಮನೆಗೆ ಒಳ್ಳೆಯ ಅಂದವಾದ

ಹಾಸುಕಲ್ಲುಗಳನ್ನು ಹಾಕಿಸಿದ. ಗೋಡೆಗಳಿಗೆ ಹೆಂಚುಗಳನ್ನು ಹೊದಿಸಿದ. ಊಟದ ಮನೆಯ ಕಪಾಟನ್ನು ಹಣ್ಣುಗಳಿಂದ, ಉಪ್ಪಿನಕಾಯಿಗಳಿಂದ ತುಂಬಿದ. ಉಪಯೋಗಿಸದೆ ಬಿಟ್ಟಿದ್ದ ಪ್ಯಾಲಿಟ್ರಿಯಲ್ಲಿ ಜೋಸ್ ಆರ್ಕಾಡಿಯೊ ಟ್ರೈನ್ ಮೂಲಕ ಕ್ರೇಟ್‌ಗಳಲ್ಲಿ ತುಂಬಿ ತರಿಸುತ್ತಿದ್ದ ಬ್ರಾಂಡಿನ ಮದ್ಯ ಮತ್ತು ವೈನ್‌ಗಳಿಂದ ತುಂಬಿಬಿಟ್ಟ. ಒಂದು ನಾಲ್ಕು ಹುಡುಗರ ಜೊತೆ ತಾನೂ ಸೇರಿ ಬೆಳಗಿನ ಜಾವದವರೆಗೂ ಪಾರ್ಟಿ ಮಾಡಿಕೊಂಡ. ಬೆಳಿಗ್ಗೆ ಆರುಗಂಟೆಗೆ ಸರಿಯಾಗಿ ಎಲ್ಲರೂ ಬೆತ್ತಲೆಯಾಗಿ ಬಂದು ಬಚ್ಚಲು ಮನೆಯಲ್ಲಿನ ನೀರಿನ ತೊಟ್ಟಿಯನ್ನು ಖಾಲಿಮಾಡಿ ಷಾಂಪೇನ್‌ನಿಂದ ತುಂಬಿದರು. ಅಷ್ಟೂ ಮಂದಿ ಒಟ್ಟಿಗೆ ಅದರೊಳಕ್ಕೆ ಜಿಗಿದರು. ಹಾರುವ ಹಕ್ಕಿಗಳಂತೆ ಈಜುತ್ತಾ, ಷಾಂಪೇನ್‌ನನ್ನು ಚಿಮ್ಮಿಸುತ್ತಾ ಆಟವಾಡಿದರು. ಜೋಸ್ ಆರ್ಕಾಡಿಯೊ ಮಾಮೂಲಿನಂತೆ ಮುಖ ಮೇಲೆ ಮಾಡಿ ತೇಲುತ್ತಾ, ಕಣ್ಣುಬಿಟ್ಟುಕೊಂಡು ಅಮರಾಂತಳನ್ನು ಧ್ಯಾನಿಸುತ್ತಿದ್ದ. ತನ್ನೊಳಗೆ ತಾನು ಮುಳುಗಿದ್ದು ಹಾಗೆಯೇ ಇದ್ದ. ಅಲ್ಲದೆ ಅವನ ಜೊತೆ ಹುಡುಗರು ಸಾಕಷ್ಟು ದಣಿದು ಬೆಡ್‌ರೂಮಿಗೆ ಹೋಗಿ, ಪರದೆಗಳನ್ನೇ ಎಳೆದು ಮೈಒರೆಸಿಕೊಂಡು, ಸಂಭ್ರಮಿಸುವ ಭರದಲ್ಲಿ, ಕನ್ನಡಿ ಒಡೆದು ಹಾಕಿದರೂ ಹಾಸಿಗೆ ಮೇಲಿನ ಹಾಸನ್ನು ಹರಿದುಹಾಕಿ ನಾಶಮಾಡುವವರೆಗೆ ಜೋಸ್ ಆರ್ಕಾಡಿಯೊ ಕಹಿಬೆರೆತ ಸಂತೋಷದ ಬಗ್ಗೆ ಯೋಚಿಸುತ್ತಿದ್ದ. ಅವನು ಬೆಡ್‌ರೂಮಿಗೆ ಬಂದಾಗ ನೌಕಾಘಾತಕ್ಕೆ ಒಳಗಾದಂತೆ ಕಾಣುತ್ತಿದ್ದ ರೂಮಿನಲ್ಲಿ ಆ ಹುಡುಗರು ಬೆತ್ತಲೆಯ ರಾಶಿಯಾಗಿ ಬಿದ್ದುಕೊಂಡಿದ್ದರು. ಹಾಳಾದ ವಸ್ತುಗಳಿಗಾಗಿ ಚಿಂತಿಸದೆ ಅವರ ಅನಿಯಂತ್ರಿತ ಸ್ವಚ್ಛಂದಕ್ಕೆ ವ್ಯಥೆಗೊಂಡು, ಟ್ರಂಕಿನಲ್ಲಿ ಇಟ್ಟಿದ್ದ ಬಾರುಕೋಲನ್ನು ತೆಗೆದುಕೊಂಡು ಚೆನ್ನಾಗಿ ಬಾರಿಸಿ, ಸಿಟ್ಟು ಆವೇಶಗಳಿಂದ ಹುಚ್ಚನಂತೆ ಕೂಗಾಡುತ್ತ ಅವರನ್ನೆಲ್ಲ ಹೊರಗೆ ಅಟ್ಟಿದ.

ಅಷ್ಟರಲ್ಲಿ ಅಸ್ತಮಾ ಅವನನ್ನು ಮುತ್ತಿ ಎಷ್ಟೋ ದಿನಗಳವರೆಗೆ ಕಾಡುತ್ತ ಸಾಯುವ ಸ್ಥಿತಿಗೆ ತಲುಪಿಸಿತು. ಮಾರನೇ ದಿನ ರಾತ್ರಿ ಉಸಿರುಗಟ್ಟುವ ಸ್ಥಿತಿ ತಲುಪಿದಾಗ ಅವನು ಅರೆಲಿಯಾನೊನ ಕೋಣೆಗೆ ಹೋಗಿ, ತನಗೆ ಒಂದು ಔಷಧದ ಪುಡಿಯನ್ನು ತಂದು ಕೊಡುವಂತೆ ಕೇಳಿಕೊಂಡ. ಔಷಧದ ಅಂಗಡಿ ಹತ್ತಿರದಲ್ಲಿಯೇ ಇತ್ತು. ಅದು ಬಹಳ ಚಿಕ್ಕದಾದ ಔಷಧಿಯ ಅಂಗಡಿಯಾಗಿದ್ದು, ಔಷಧಿಯ ಬಾಟಲಿಗಳ ಮೇಲೆ ಔಷಧಿಗಳ ಹೆಸರನ್ನು ಲ್ಯಾಟಿನ್‌ನಲ್ಲಿ ಬರೆದಿತ್ತು. ಅಲ್ಲಿ ನೈಲ್ ನದಿಯ ಸರ್ಪ ಸೌಂದರ್ಯದಂತೆ ಸುಂದರಿಯಾಗಿದ್ದ ಹುಡುಗಿಯೊಬ್ಬಳು ಆರ್ಕಾಡಿಯೊ ಬರೆದುಕೊಟ್ಟಿದ್ದ, ಚೀಟಿಯಲ್ಲಿನ ಹೆಸರನ್ನು ನೋಡಿ ಔಷಧಿಯನ್ನು ಕೊಟ್ಟಳು. ಅರೆಲಿಯಾನೊ ಎರಡನೆ ಬಾರಿ ಈ ನಿರ್ಜನವಾದ, ಹಳದಿ ದೀಪಗಳ ಮಂದ ಬೆಳಕಿನ ಊರನ್ನು ನೋಡಿದಾಗಲೂ ಮೊದಲ ಸಲದ ಹಾಗೆ ಯಾವುದೇ ಕುತೂಹಲವನ್ನು ಮೂಡಿಸಲಿಲ್ಲ. ಜೋಸ್ ಆರ್ಕಾಡಿಯೊ ಅವನೆಲ್ಲೊ ಓಡಿಹೋಗಿರಬೇಕು ಎಂದು ಯೋಚಿಸಿದ. ಆದರೆ ಅವನು, ಒಳಗೇ ಸೇರಿಕೊಂಡಿದ್ದ. ಚಲನೆಯಿಲ್ಲದೆ ದುರ್ಬಲವಾದ ಕಾಲುಗಳನ್ನು ಎಳೆದುಕೊಂಡು ವೇಗವಾಗಿ, ಏದುಸಿರುಬಿಡುತ್ತಾ ಬಂದು ಕಾಣಿಸಿಕೊಂಡ. ಜೋಸ್ ಆರ್ಕಾಡಿಯೊ ತನ್ನ ತಾಯಿಯ ಮಾತಿಗೆ ವಿರುದ್ಧವಾಗಿ ಅವನನ್ನು ಯಾವಾಗ ಎಲ್ಲಿಗೆ ಹೋಗಬೇಕಾದರೂ ಹೋಗಲು ಅನುಮತಿ ಕೊಟ್ಟ.

"ನನಗೆ ಹೊರಗಡೆ ಮಾಡಬೇಕಾದ್ದೇನೂ ಇಲ್ಲ" ಎಂದ ಅರೆಲಿಯಾನೊ.

ಅವನು ಒಳಗೇ ಸೇರಿಕೊಂಡಿದ್ದು ಚರ್ಮಕಾಗದಗಳಲ್ಲಿ ಮುಳುಗಿದ್ದ. ಸ್ವಲ್ಪ ಸ್ವಲ್ಪವೇ ಅರ್ಥವಾಗುವುದಕ್ಕೆ ಶುರುವಾಗಿತ್ತಾದರೂ ಅದನ್ನು ವಿವರಿಸಲು ಅವನಿಂದ ಆಗಲಿಲ್ಲ. ಜೋಸ್ ಆರ್ಕಾಡಿಯೊ ಅವನಿಗೆಂದು ಒಂದೆರಡು ಮಾಂಸದ ತುಂಡುಗಳನ್ನು, ಸಕ್ಕರೆ ಸವರಿದ ಹೂಗಳನ್ನು ಮತ್ತು ಒಂದೆರಡು ಸಲ ವೈನನ್ನೂ ತಂದುಕೊಡುತ್ತಿದ್ದ. ಅವನಿಗೆ ಈ ಚರ್ಮಕಾಗದಗಳಲ್ಲಿ ಆಸಕ್ತಿ ಇರಲಿಲ್ಲ. ಅವುಗಳು ಏನಿದ್ದರೂ ಒಗಟಿನ ಆಟವಷ್ಟೆ ಎಂದು ಭಾವಿಸಿದ್ದ. ಆದರೆ ಅಗಾಧವಾದ ಅವನ ಸಂಬಂಧಿಯ ಜ್ಞಾನ ಮತ್ತು ತಿಳಿವಳಿಕೆಯಿಂದ ಆಕರ್ಷಿತನಾಗಿದ್ದ. ಅವನಿಗೆ, ಜೊತೆಗೆ ಇಂಗ್ಲಿಷ್ ಬರವಣಿಗೆ ಅರ್ಥವಾಗುತ್ತದೆ ಎಂಬುದನ್ನು ಪತ್ತೆಹಚ್ಚಿ ವಿಶ್ವಕೋಶದ ಆರು ಸಂಪುಟಗಳನ್ನೂ ಮೊದಲಿಂದ ಕಡೆಯ ಪುಟದವರೆಗೆ, ಕಾದಂಬರಿ ಓದುವಂತೆ, ಈ ಕಾಗದಗಳ ಓದಿನ ಮಧ್ಯೆ ಓದಿ ಮುಗಿಸಿದ್ದಾನೆ ಎಂಬುದನ್ನೂ ತಿಳಿದುಕೊಂಡ. ಅಷ್ಟೆ ಅಲ್ಲ ವಿಶ್ವಕೋಶದಲ್ಲಿ ಇಲ್ಲದ ವಿಷಯಗಳ ಬಗ್ಗೆಯೂ ಅವನು ತಿಳಿದುಕೊಂಡಿದ್ದಾನೆ. ರೋಮ್ ನಗರದ ಬಗ್ಗೆ ತಾನಲ್ಲಿದ್ದುದಕ್ಕಿಂತ ಹೆಚ್ಚಿನ ವಿವರಗಳನ್ನು ನೀಡಬಲ್ಲ. ವಸ್ತುಗಳ ಬೆಲೆಯನ್ನೂ ಹೇಳಬಲ್ಲ ಎಂಬುದನ್ನು ಅರಿತ. ಅರೆಲಿಯಾನೊನಿಂದ, ಏನೇ ಕೇಳಿದರೂ ಬರುತ್ತಿದ್ದ ಉತ್ತರ "ಎಲ್ಲಾ ಗೊತ್ತು" ಎಂಬುದೊಂದೇ. ಅರೆಲಿಯಾನೊಗೆ, ಜೋಸ್ ಆರ್ಕಾಡಿಯೊನನ್ನು ಹತ್ತಿರದಿಂದ ನೋಡಿದಾಗ ಉಂಟಾಗುವ ಭಾವನೆಗೂ ಮನೆಯಲ್ಲಿ ಅವನು ಓಡಾಡುತ್ತಿದ್ದಾಗ ನೋಡಿದಾಗ ಅವನ ಬಗ್ಗೆ ಮೂಡಿದ ಅಭಿಪ್ರಾಯಕ್ಕೂ ವ್ಯತ್ಯಾಸವಿರುವುದು ಗಮನಕ್ಕೆ ಬಂದಾಗ, ಆಶ್ಚರ್ಯವೆನಿಸಿತು. ಅವನು ನಗಲೂ ಬಲ್ಲವನಾಗಿದ್ದ. ಮನೆಯ ಹಿಂದಿನ ಸ್ಥಿತಿಯನ್ನು ನೆನಪಿಸಿಕೊಂಡು ಭಾವಲೋಕಕ್ಕೆ ಹೋಗಬಲ್ಲವನಾಗಿದ್ದ. ಮೆಲ್‌ಕಿಯಾಡ್ಸ್‌ನ ರೂಮಿನ ಹದಗೆಟ್ಟ ಸ್ಥಿತಿಗೆ ಮರುಗಬಲ್ಲವನಾಗಿದ್ದ. ಒಂದೇ ರಕ್ತದ ಒಂಟಿ ಜೀವಿಗಳು ಹತ್ತಿರ ಬಂದಿದ್ದರೂ ಅದು ಸ್ನೇಹಕ್ಕಿಂತ ಭಿನ್ನವಾಗಿತ್ತು. ಅರ್ಥವಾಗದ ಇಬ್ಬರ ಒಂಟಿತನಗಳು, ಅವರಿಬ್ಬರನ್ನು ಏಕಕಾಲದಲ್ಲಿ ಹತ್ತಿರವೂ ತಂದಿತ್ತು, ದೂರವೂ ಮಾಡಿತ್ತು. ಇದರಿಂದಾಗಿ ಜೋಸ್ ಆರ್ಕಾಡಿಯೊ ತನಗೆ ತಲೆನೋವಾಗಿದ್ದ ಕೆಲವು ಮನೆಯ ಸಮಸ್ಯೆಗಳಿಗೆ ಪರಿಹಾರವನ್ನು ಕೇಳಿದಾಗ, ಅರೆಲಿಯಾನೊ ಪ್ರತಿಯಾಗಿ ನಡುಮನೆಯಲ್ಲಿ ಕುಳಿತು ಅಮರಾಂತಾ ಉರ್ಸುಲಾಳಿಂದ ಬಂದ ಕಾಗದಗಳನ್ನು ಓದುತ್ತಾ ಬರುವುದಕ್ಕಾಗಿ ನಿರೀಕ್ಷಿಸುತ್ತಾ ನಿಯಮದಂತೆ ಕುಳಿತಿರುತ್ತಿದ್ದ ಈಗ ಅವನಿಗೆ ನಿಷೇಧಿಸಲಾಗಿದ್ದ ಬಚ್ಚಲು ಮನೆಯನ್ನು ಉಪಯೋಗಿಸಲು ಅವಕಾಶ ಸಿಕ್ಕಿತ್ತು.

ಒಂದು ಬೇಸಿಗೆಯ ಬೆಳಿಗ್ಗೆ, ಬಾಗಿಲು ತಟ್ಟುವ ಸದ್ದಿನಿಂದ ಇಬ್ಬರೂ ಗಾಭರಿಯಿಂದ ಎದ್ದರು. ಕಪ್ಪಾಗಿ, ದೊಡ್ಡದಾದ ಹಸಿರು ಕಣ್ಣುಗಳಿದ್ದ, ಭೂತದಂತೆ ಕಾಣಿಸುತ್ತಿದ್ದ. ಹಣೆಯ ಮೇಲೆ ಬೂದಿಯ ಕ್ರಾಸ್ ಹೊಂದಿದ್ದ ಮುದುಕನೊಬ್ಬ ಕಾಣಿಸಿಕೊಂಡ. ಉಟ್ಟ ಬಟ್ಟೆಗಳು ಚಿಂದಿಯಾಗಿದ್ದವು. ಶೂಗಳು ಹರಿದಿದ್ದವು. ಭುಜದ ಮೇಲೆ, ಬಟ್ಟೆ ಚೀಲವೊಂದಿತ್ತು. ನೋಡಲು ಭಿಕ್ಷುಕನಂತೆ ಕಾಣುತ್ತಿದ್ದರೂ, ಕಾಣಿಸುತ್ತಿದ್ದುದಕ್ಕಿಂತ ಭಿನ್ನವಾದ ಗಾಂಭೀರ್ಯವಿತ್ತು. ಅಂಗಳದ ಆ ಮಂದ ಬೆಳಕಿನಲ್ಲಿ ಒಂದು ಸಲ ನೋಡಿದರೂ ಸಾಕು, ಅವನು ಬದುಕಿರಲು ಅವನಿಗಿರುವ ಶಕ್ತಿ, ತಾನು ಬದುಕಬೇಕೆಂಬ ಆಂತರಿಕ ಶಕ್ತಿಗಿಂತ, ಹೆದರಿಕೊಳ್ಳುವ ಅಭ್ಯಾಸವೇ ನಿಗೂಢ ಶಕ್ತಿಯಾಗಿತ್ತು. ಅವನು ಬೇರಾರೂ ಆಗಿರದೆ ಕರ್ನಲ್

ಅರೆಲಿಯಾನೊ ಬ್ಯುಂಡಿಯಾನ ಹದಿನೇಳು ಮಕ್ಕಳಲ್ಲಿ ಬದುಕುಳಿದ ಒಬ್ಬನೇ ಒಬ್ಬ ಮಗನಾಗಿದ್ದ. ಅರೆಲಿಯಾನೊ ಅಮಾಡೋರ್ ತಲೆಮರೆಸಿಕೊಂಡು ಅಲ್ಲಿ ಇಲ್ಲಿ ಓಡಾಡುತ್ತಾ ಯಾವುದಾದರೂ ಆಶ್ರಯ ತಾಣ ಸಿಗುವುದೇನೊ ಎಂದು ಹುಡುಕಾಡುತ್ತಿದ್ದ. ತನ್ನನ್ನು ಪರಿಚಯಿಸಿಕೊಂಡು ಆಶ್ರಯ ಕೊಡುವಂತೆ ಬೇಡಿಕೊಂಡ. ರಾತ್ರಿಗಳಲ್ಲಿ, ದಯನೀಯ ಸ್ಥಿತಿಯಲ್ಲಿರುವ ತನಗೆ, ಜೀವನದಲ್ಲಿ ಇದೊಂದೇ ಸುರಕ್ಷಿತವಾದ ಸ್ಥಳ ಎಂದೂ ಹೇಳಿಕೊಂಡ. ಆದರೆ ಜೋಸ್ ಆರ್ಕಾಡಿಯೊಗಾಗಲಿ, ಅರೆಲಿಯಾನೊಗಾಗಲಿ ಅವನ ಪರಿಚಯವಿರಲಿಲ್ಲ. ನೆನಪೂ ಇರಲಿಲ್ಲ. ಅವನು ಯಾರೊ ಬೀದಿಹೋಕ ಎಂದು ಭಾವಿಸಿ ಹೊರಗೆ ತಳ್ಳಿದರು. ಅವರಿಬ್ಬರೂ ಬಾಗಿಲಿಂದಲೇ, ನೋಡಿದರೂ, ಜೋಸ್ ಆರ್ಕಾಡಿಯೊ ಯೋಚಿಸುವ ಹೊತ್ತಿಗೆ, ಆರಂಭವಾದ ನಾಟಕ ಮುಗಿತಾಯದ ಹಂತ ತಲುಪಿತ್ತು. ಇಬ್ಬರು ಪೊಲೀಸರು ಅರೆಲಿಯಾನೊ ಅಮಾಡೋರ್‌ನನ್ನು ಅಟ್ಟಿಸಿಕೊಂಡು ಪ್ರಪಂಚವೆಲ್ಲ ಸುತ್ತಾಡಿ ಕಡೆಗೆ ಬಾದಾಮಿ ಗಿಡಗಳ ಮರೆಯಿಂದ, ಹೊರಬಂದು ಅವನಿಗೆ ಗುರಿಯಿಟ್ಟು ಎರಡು ಗುಂಡು ಹಾರಿಸಿದರು. ಅವು ನೇರವಾಗಿ ಬೂದಿಯ ಕ್ರಾಸ್ ಚಿಹ್ನೆಯಿದ್ದ ಹಣೆಗೆ ಬಂದು ಭೇದಿಸಿದವು.

ಹುಡುಗರನ್ನು ಮನೆಯಿಂದ ಹೊರಗೆ ಅಟ್ಟಿದಂದಿನಿಂದ ಜೋಸ್ ಆರ್ಕಾಡಿಯೊ, ಕ್ರಿಸ್‌ಮಸ್‌ಗೆ ಮೊದಲು ನೇಪಲ್ಸ್ ಕಡೆಗೆ ಹೊರಡುವ ಹಡಗಿನ ಬಗೆಗಿನ ಸುದ್ದಿಗಾಗಿ ಎದುರುನೋಡುತ್ತಿದ್ದ. ಇದರ ಬಗ್ಗೆ ಅರೆಲಿಯಾನೊಗೆ ಹೇಳಿದ್ದ. ಜೊತೆಗೆ, ಫರ್ನಾಂಡಾ ತೀರಿಕೊಂಡಾಗಿನಿಂದ ಆಹಾರದ ಬುಟ್ಟಿ ಬರುವುದೂ ನಿಂತುಹೋಗಿದ್ದುದರಿಂದ, ಅರೆಲಿಯಾನೊಗೆ ಏನಾದರೂ ಮಾಡಿ ಜೀವನೋಪಾಯಕ್ಕೆ ದಾರಿಯೊಂದನ್ನು ಮಾಡಿಕೊಡುವುದಾಗಿಯೂ ಹೇಳಿದ್ದ. ಆದರೆ ಆ ಕಡೆಯ ಕನಸು ಪೂರೈಸಲು ಸಾಧ್ಯವಿರಲಿಲ್ಲ. ಸೆಪ್ಟೆಂಬರ್‌ನ ಒಂದು ದಿನ ಜೋಸ್ ಆರ್ಕಾಡಿಯೊ, ಅರೆಲಿಯಾನೊ ಜೊತೆ ಕಾಫಿ ಕುಡಿದಾದ ಮೇಲೆ ಸ್ನಾನಕ್ಕೆಂದು ಹೋದ. ಸ್ನಾನ ಮುಗಿಯುತ್ತಿದ್ದಾಗ, ಇವನಿಂದ ಹೊರಹಾಕಲ್ಪಟ್ಟಿದ್ದ ನಾಲ್ಕುಜನ ಹುಡುಗರು ಬಚ್ಚಲು ಮನೆಯ ಮೇಲಿನ ಛಾವಣಿಯ ಹೆಂಚುಗಳನ್ನು ತೆಗೆದು, ನೀರಿನ ತೊಟ್ಟಿಯಲ್ಲಿ ದಿಢೀರನೆ ಧುಮುಕಿದರು. ಜೋಸ್ ಆರ್ಕಾಡಿಯೋಗೆ ರಕ್ಷಿಸಿಕೊಳ್ಳುವುದಕ್ಕೂ ಅವಕಾಶವಿಲ್ಲದಂತೆ ಅವನನ್ನು ಎಳೆದು ಅವನ ತಲೆಯನ್ನು ನೀರಿನಲ್ಲಿ ಉಸಿರುಹೋಗುವವರೆಗೂ ಅದ್ದಿರಿಸಿ, ಇಡೀ ದೇಹ ಜೀವಕಳೆದುಕೊಂಡು ನೀರಿನ ತಳಕ್ಕೆ ಇಳಿಯಿತು. ನಂತರ ಮೂರು ಚೀಲ ಚಿನ್ನದ ನಾಣ್ಯಗಳನ್ನು, ರಹಸ್ಯ ಸ್ಥಳದಿಂದ ಎತ್ತಿಕೊಂಡು ಓಡಿಹೋದರು. ಅದನ್ನು ಅಚ್ಚುಕಟ್ಟಾಗಿ, ಮಿಲಿಟರಿ ಕಾರ್ಯಾಚರಣೆಯಂತೆ, ಕ್ರಮಬದ್ಧವಾಗಿ ಮತ್ತು ಕ್ರೂರವಾಗಿ ಆಯೋಜಿಸಲಾಗಿತ್ತು. ತನ್ನ ರೂಮಿನಲ್ಲಿ ತನ್ನ ಪಾಡಿಗಿದ್ದ ಅರೆಲಿಯಾನೋಗೆ ಇದು ಯಾವುದೂ ತಿಳಿಯಲಿಲ್ಲ. ಮಧ್ಯಾಹ್ನ ಅಡಿಗೆ ಮನೆಯಲ್ಲಿ ಅವನು ಕಾಣದೆ ಹೋದಾಗ ಮನೆಯಲ್ಲೆಲ್ಲ ಹುಡುಕಾಡಿದ. ಕಡೆಗೆ ಬಚ್ಚಲು ಮನೆಯಲ್ಲಿ ನೀರಿನ ತೊಟ್ಟಿಯಲ್ಲಿ, ಗಾಜಿನ ಪದರದಂತಿದ್ದ ನೀರಿನಲ್ಲಿ ತೇಲುತ್ತಿದ್ದ. ದೇಹ ಊದಿ ದೊಡ್ಡ ಗಾತ್ರದ್ದಾಗಿ ಕಾಣುತ್ತಿತ್ತು; ಮತ್ತು ಇನ್ನೂ ಅಮರಾಂತಾಳ ಯೋಚನೆಯಲ್ಲಿ ಇದ್ದಂತೆ ಇತ್ತು. ಆ ಕ್ಷಣದಲ್ಲಿ ಅವನಿಗೆ ತಾನು ಅವನನ್ನು ಎಷ್ಟು ಪ್ರೀತಿಸುತ್ತಿದ್ದೇನೆ ಎಂಬುದರ ಅರಿವಾಯಿತು.

19

ಅಮರಾಂತಾ ಉರ್ಸುಲಾ ಡಿಸೆಂಬರ್‌ನ ಮೊದಲಲ್ಲಿ, ಕತ್ತಿಗೆ ಸಿಲ್ಕ್ ದಾರವನ್ನು ಕಟ್ಟಿಕೊಂಡಿದ್ದ ಗಂಡನನ್ನು ಕರೆದುಕೊಂಡು ವಾಪಸು ಬಂದಳು. ಅವಳು ಬರುವ ಮುನ್ಸೂಚನೆಯನ್ನೂ ಕೊಟ್ಟಿರಲಿಲ್ಲ. ಮಂಡಿಯತನಕ ಬರುತ್ತಿದ್ದ ಮುತ್ತಿನಹಾರ, ಬೆರಳಿಗೆ ಪಚ್ಚೆ, ಗೋಮೇದಿಕ ಉಂಗುರ ಧರಿಸಿ ನೀಳವಾಗಿದ್ದ ಕೂದಲನ್ನು ಹಿಂದಕ್ಕೆ ಗಂಟುಕಟ್ಟಿ ಪಿನ್ನುಗಳನ್ನು ಧರಿಸಿದ್ದಳು. ಆರು ತಿಂಗಳ ಹಿಂದಷ್ಟೇ ಮದುವೆಯಾಗಿದ್ದ ಆ ವ್ಯಕ್ತಿ ತೆಳ್ಳಗಿದ್ದ. ನೋಡಿದರೆ ನಾವಿಕನಂತಿದ್ದ. ಅವಳಿಗೆ ನಡುಮನೆಯ ಬಾಗಿಲನ್ನು ತಳ್ಳಿ ಹೋಗುವುದಷ್ಟೇ ಸಾಕು, ಮನೆ ತನ್ನ ದೀರ್ಘ ಅನುಪಸ್ಥಿತಿಯಲ್ಲಿ, ತಾನು ಊಹಿಸಿಕೊಂಡಿದ್ದಕ್ಕಿಂತ ದರಿದ್ರ ಅವಸ್ಥೆ ತಲುಪಿದೆ ಎನ್ನುವುದು ಅರ್ಥವಾಗುತ್ತಿತ್ತು.

"ಓ ದೇವರೇ, ಈ ಮನೆಯಲ್ಲಿ ಹೆಂಗಸರು ಯಾರೂ ಇಲ್ಲವೆಂಬುದು ಸ್ಪಷ್ಟವಾಗಿದೆ!" ಅವಳ ದನಿಯಲ್ಲಿ ಸಂತೋಷ ಅಚ್ಚರಿಗಿಂತ ಹೆಚ್ಚಾಗಿತ್ತು.

ಸಾಮಾನುಗಳನ್ನು ಇಡಲು ಆ ಜಾಗ ಸಾಕಾಗಲಿಲ್ಲ. ಅವಳನ್ನು ಸ್ಕೂಲಿಗೆ ಕಳಿಸಿದಾಗಿನ ಎರಡು ಹಳೆಯ ಟ್ರಂಕುಗಳು ಮತ್ತು ಇನ್ನೆರಡು ಟ್ರಂಕುಗಳ, ದೊಡ್ಡದಾದ ನಾಲ್ಕು ಸೂಟ್‌ಕೇಸುಗಳು ಛತ್ರಿಗಳನ್ನು ಇರಿಸಿಕೊಳ್ಳಲು ಬ್ಯಾಗುಗಳು, ಎಂಟು ಹ್ಯಾಟ್‌ಗಳನ್ನು ಇಡುವ ಬಾಕ್ಸ್‌ಗಳು,

ಕನೇರಿ ಹಕ್ಕಿಗಳಿದ್ದ ದೈತ್ಯ ಪಂಜರ, ಮುರಿದುಹೋಗಿದ್ದರೂ ಪೆಟ್ಟಿಗೆಯಲ್ಲಿ ಇಟ್ಟುಕೊಂಡು ಬಂದಿದ್ದ ಗಂಡನ ವಾಹನ. ಇತ್ಯಾದಿಗಳೆಲ್ಲ ಅವಳ ಪ್ರಯಾಣದಿಂದ ಬಂದ ಸಾಮಾನುಗಳಾಗಿದ್ದವು. ಅಷ್ಟು ದೂರದ ಪ್ರಯಾಣ ಮಾಡಿ ಬಂದಿದ್ದರೂ ಒಂದು ದಿನವೂ ವಿಶ್ರಾಂತಿಯನ್ನು ತೆಗೆದುಕೊಂಡಿರಲಿಲ್ಲ. ಅವಳು ತನ್ನ ವಾಹನ ಸಲಕರಣೆಗಳೊಂದಿಗೆ ಗಂಡ ತಂದಿದ್ದ ಒಂದು ಹಳೆಯ ಮೇಲುಡುಗೆಯನ್ನು ತೊಟ್ಟು ಮನೆಯನ್ನು ಸರಿಮಾಡಲು ನಿಂತಳು. ನಡುಮನೆಯನ್ನು ಆಗಲೇ ಆಕ್ರಮಿಸಿಕೊಂಡಿದ್ದ ಕೆಂಪು ಇರುವೆಗಳನ್ನು ಚದುರಿಸಿದಳು, ಗುಲಾಬಿ ಪೊದೆಗಳಲ್ಲಿ ಜೀವ ತುಂಬಿದಳು. ಕಳೆಗಿಡಗಳನ್ನು ಬೇರು ಸಹಿತ ಕಿತ್ತೆಸೆದಳು. ಫರ್ನ್ ಗಿಡಗಳನ್ನು, ಒರೆಗಾನೊ, ಬೆಗೊನಿಯಾ ಮೊದಲಾದ ಗಿಡಗಳನ್ನು ಹೂಕುಂಡಗಳಲ್ಲಿ ಇರಿಸಿದಳು. ಒಂದಷ್ಟು ಮಂದಿ ಮರಗೆಲಸದವರನ್ನು, ಬೀಗ ರಿಪೇರಿ ಮಾಡುವವರನ್ನು ಮೇಸ್ತ್ರಿಗಳನ್ನು ಕರೆಸಿ ಕೆಲಸ ಶುರುಮಾಡಿಸಿದಳು. ನೆಲದ ಬಿರುಕುಗಳನ್ನು ಮುಚ್ಚಿಸಿದಳು. ಮನೆ, ಕಿಟಕಿ, ಬಾಗಿಲುಗಳನ್ನು ಸರಿಪಡಿಸಿದಳು. ಮನೆಯ ಪೀಠೋಪಕರಣಗಳನ್ನೂ ಸರಿಮಾಡಿಸಿದಳು. ಒಳ ಹೊರಗೆಲ್ಲ ಸುಣ್ಣ ಬಳಿಸಿದಳು. ಇದರಿಂದಾಗಿ ಅವಳು ಹಿಂದಿರುಗಿದ ಮೂರು ತಿಂಗಳ ನಂತರ ಮನೆ, ಅವಳು ಪಿಯಾನೋಲ ಕಲಿಯುತ್ತಿದ್ದ ದಿನಗಳಲ್ಲಿ ಇದ್ದಂತೆ ಜೀವತುಂಬಿಕೊಂಡು, ಉತ್ಸಾಹದ ವಾತಾವರಣದೊಂದಿಗೆ ಕಾಣಿಸಿಕೊಳ್ಳತೊಡಗಿತು. ಮನೆಯಲ್ಲಿ ಯಾರೊಬ್ಬರೂ ಎಂದೂ ಯಾವುದೇ ಪರಿಸ್ಥಿತಿಯಲ್ಲೂ, ಹಾಡುವುದಕ್ಕಾಗಲೀ, ಕುಣಿಯುವುದಕ್ಕಾಗಲೀ, ಎಲ್ಲ ವಸ್ತುಗಳನ್ನೂ ಪದ್ಧತಿಗಳನ್ನೂ ಕೆಲಸವಿಲ್ಲದ್ದೆಂದು ಬಿಸಾಡುವುದಕ್ಕೆ ಎಲ್ಲಾ ಸಮಯದಲ್ಲೂ ಸಿದ್ಧವಿರಲಿಲ್ಲ. ಆದರೆ ಇವಳು ಒಂದೇಸಲಕ್ಕೆ ಸಾವಿನ ನೆನಪುಗಳನ್ನು, ನಿಷ್ಪ್ರಯೋಜಕ ವಸ್ತುಗಳನ್ನು, ಎಷ್ಟೋ ಕಾಲದಿಂದ ಮೂಲೆಯಲ್ಲಿ ರಾಶಿಯಾಗಿ ಬಿದ್ದಿದ್ದ ಮೂಢನಂಬಿಕೆಗಳನ್ನು ಗುಡಿಸಿಹಾಕಿದಳು. ಅವಳು ಹಾಗೇ ಉಳಿಯಲು ಬಿಟ್ಟದ್ದು, ಉರ್ಸುಲಾ ಬಗೆಗಿದ್ದ ಕೃತಜ್ಞತೆಯಿಂದಾಗಿ, ರೆಮೆಡಿಯೋಸ್ ದ ಬ್ಯೂಟಿಯ ಭಾವಚಿತ್ರವನ್ನು 'ಆಹ್ ! ಏನು ಅದ್ಭುತ! ಹದಿನಾಲ್ಕು ವರ್ಷದ ಅಜ್ಜಿ!" ಎಂದು ಹೇಳಿಕೊಂಡು ನಕ್ಕು ನಕ್ಕು ಸುಸ್ತಾದಳು. ಮೇಸ್ತ್ರಿಗಳಲ್ಲಿ ಒಬ್ಬ ಈ ಮನೆಯಲ್ಲಿ ತುಂಬಾ ಆತ್ಮಗಳಿವೆ, ಅವುಗಳನ್ನು ಅಟ್ಟಬೇಕೆಂದರೆ, ಅಡಗಿಸಿಟ್ಟಿರುವ ನಿಧಿಯನ್ನು ಹುಡುಕಿ ತೆಗೆಯಬೇಕು ಎಂದಾಗ, ಅವಳು "ಗಂಡಸರು ಇಂಥ ಮೂಢನಂಬಿಕೆಗಳಲ್ಲಿ ವಿಶ್ವಾಸವಿರಿಸಿಕೊಳ್ಳಬಾರದು" ಎಂದು ಹೇಳಿದಳು. ಅವಳು ಅತ್ಯಂತ ಆಧುನಿಕ ಮನಸ್ಸಿನವಳು. ಸ್ವತಂತ್ರ ವಿಚಾರವುಳ್ಳವಳೂ ಆಗಿದ್ದವಳು. ಬರುವುದನ್ನು ನೋಡಿದಾಗ, ಅರೆಲಿಯಾನೊಗೆ, ಅವನ (ಆರ್ಕಾಡಿಯೋನ) ದೇಹವನ್ನು (ಶವ) ಏನು ಮಾಡಬೇಕೆಂದು ತೋಚಲಿಲ್ಲ.

"ಓಹೋ ! ಹೋ! ನೋಡು ನೋಡು ನನ್ನ ಮುದ್ದಿನ ಕ್ಯಾನಿಬಾಲ್ ಎಷ್ಟು ಬೆಳೆದು ಬಿಟ್ಟಿದ್ದಾನೆ!" ಎಂದು ಎರಡೂ ಕೈಗಳನ್ನು ಮುಂದೆ ಚಾಚಿ ಸಂತೋಷದಿಂದ ಕೂಗಿದಳು. ಅವಳ ಆ ಸಂತೋಷದ ಉದ್ಗಾರಕ್ಕೆ ಪ್ರತಿಕ್ರಿಯಿಸುವುದಕ್ಕೆ ಮೊದಲೇ ಪೋರ್ಟಬಲ್ ಫೋನೋಗ್ರಾಫ್‌ನಲ್ಲಿ ರೆಕಾರ್ಡ್ ಇರಿಸಿ ಅವನಿಗೆ ನೃತ್ಯದ ಹೆಜ್ಜೆಗಳನ್ನು ಹೇಳಿಕೊಡಲು ಮುಂದಾದಳು. ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ತೊಟ್ಟಿದ್ದ ಹಳೆಯ ಪ್ಯಾಂಟನ್ನು ಬಿಸಾಡಿ ಅವನಿಗೆ ಯುವಕರು ಹಾಕಿಕೊಳ್ಳುವಂತಹ ಷರ್ಟು, ಮತ್ತು ಶೂಗಳನ್ನು ಕೊಟ್ಟಳು.

ರೂಮಿನಲ್ಲಿಯೇ ಕೊಳೆಯುತ್ತಾ ಬಿದ್ದಿರುತ್ತಿದ್ದ ಅವನನ್ನು ಹೊರಗೆಳೆದು ರಸ್ತೆಗೆ ದೂಡುತ್ತಿದ್ದಳು.

ಉರ್ಸುಲಾಳಷ್ಟೇ ಚುರುಕು, ರೆಮೆಡಿಯೋಸ್ ದ ಬ್ಯೂಟಿಯಷ್ಟೇ ಪ್ರಚೋದಕ ಸೌಂದರ್ಯವಿದ್ದ ಅವಳಲ್ಲಿ ಹೊಸ ಹೊಸ ಫ್ಯಾಷನ್‌ಗಳನ್ನು ಗುರುತಿಸುವ ವಿಶೇಷ ಪ್ರತಿಭೆ ಇತ್ತು. ಅಂಚೆಯ ಮೂಲಕ ಕೆಲವು ಫ್ಯಾಷನ್ ಪಿಕ್ಚರ್ಸ್ ಬಂದಾಗ, ಅಮರಾಂತಾಳ ಹಳೆಯ ಪೆಡಲ್ ಹೊಲಿಗೆಯಂತ್ರದಲ್ಲಿ ತಾನೇ ಡಿಸೈನ್ ಮಾಡಿದ ಬಟ್ಟೆಗಳನ್ನು ಹೊಲಿಯುತ್ತಿದ್ದುದು ಸರಿಯಾಗಿಯೇ ಇರುತ್ತಿದ್ದುದನ್ನು ಗಮನಿಸಿದಳು. ಅವಳ ಡಿಸೈನ್‌ಗಳು ತಪ್ಪಾಗಿರಲಿಲ್ಲ. ಯೂರೋಪಿನಲ್ಲಿ ಪ್ರಕಟವಾಗುತ್ತಿದ್ದ ಫ್ಯಾಷನ್ ಮ್ಯಾಗಝೀನ್, ಆರ್ಟ್‌ಮ್ಯಾಗಝೀನ್, ಜನಪ್ರಿಯ ಮ್ಯೂಸಿಕ್ ರಿವ್ಯೂ – ಮುಂತಾದ ಪತ್ರಿಕೆಗಳಿಗೆ ಚಂದಾದಾರಳಾದಳು. ಅವುಗಳನ್ನೆಲ್ಲ ನೋಡಿ ಗಮನಿಸಿದ ಮೇಲೆ ಅವಳಿಗೆ ಅನಿಸಿತು. ಪ್ರಪಂಚದಲ್ಲಿ ಏನಾಗುತ್ತಿದೆ ಎನ್ನುವುದನ್ನು ತಾನು ಊಹಿಸಿದಂತೆಯೇ ಆಗುತ್ತಿದೆ ಎಂದು ಒಂದೇ ಸಲಕ್ಕೆ ಅರ್ಥಮಾಡಿಕೊಂಡಳು. ಈ ಥರ ಇರುವಾಗ, ಇಂಥಾ ಆಲೋಚನೆ ಇರುವಂಥ ಹೆಣ್ಣು, ಧೂಳು, ಬಿಸಿಲುಗಳಿಂದ ತುಂಬಿ ಹೆಣಭಾರದಂತೆ ಹೊತ್ತು ನಿರ್ಜನವಾಗಿರುವ ಈ ಊರಿಗೆ ಬಂದದ್ದಾದರೂ ಏಕೆ, ಅದರಲ್ಲಿಯೂ ಸಾಕಷ್ಟು ಶ್ರೀಮಂತ ಗಂಡನಿದ್ದು ಪ್ರಪಂಚದ ಯಾವ ಮೂಲೆಯಲ್ಲಾದರೂ ಎಷ್ಟು ಹಣವಾದರೂ ಬಂದು ಇರಲಿಕ್ಕೆ ಸಾಧ್ಯವಿರುವಾಗ, ಅವಳನ್ನು ಎಷ್ಟೊಂದು ಪ್ರೀತಿಸುತ್ತಾನೆಂದರೆ ರೇಶಿಮೆಯ ದಾರದ ಕಡಿವಾಣ ಹಾಕಿ ಎಲ್ಲಿಗೆ ಬೇಕಾದರೂ ಎಳೆದು ತರುವ ಸಾಧ್ಯತೆ ಇರುವಾಗ, ಇಲ್ಲಿಗೆ ಬಂದದ್ದಾದರೂ ಏಕೆಂಬುದು ಅವಳಿಗೆ ಹೊಳೆಯಲಿಲ್ಲ. ಕಾಲ ಸರಿದಂತೆ, ಇಲ್ಲೇ ಉಳಿಯಬೇಕೆಂಬ ಅವಳ ಉದ್ದೇಶ ಸಹವಾಗಿಯೇ ಇತ್ತು. ಅಲ್ಲದೆ ದೂರದೃಷ್ಟಿ ಇರುವ ಯಾವ ಯೋಜನೆಗಳನ್ನೂ ಅವರು ಯೋಚಿಸಿರಲಿಲ್ಲ. ಮಕೊಂಡೊದಲ್ಲಿ ನೆಮ್ಮದಿಯಿಂದ ಶಾಂತಿಯಿಂದ ವೃದ್ಧಾಪ್ಯವನ್ನು ಕಳೆಯಬೇಕೆಂಬ ಗುರಿಯೆ ಹೊರತಾಗಿ ಬೇರೇನನ್ನೂ ಯೋಚಿಸಿರಲಿಲ್ಲ. ಕ್ಯಾನರಿಹಕ್ಕಿಗಳಿದ್ದ ಪಂಜರ ನೋಡಿದಾಗ, ತಾನು ಯೋಚಿಸಿದ ಗುರಿಗಳೆಲ್ಲ ಆತತ್ ಕ್ಷಣದ ಆಲೋಚನೆಗಳೆಂಬುದು ಹೊಳೆಯಿತು. ಅವಳ ತಾಯಿ ತನ್ನ ಪತ್ರದಲ್ಲಿ ಹಕ್ಕಿಗಳ ಸಂತತಿಯ ವಿನಾಶದ ಬಗ್ಗೆ ಬರೆದಿದ್ದಳು. ಅದಕ್ಕಾಗಿ ತಾನು ತನ್ನ ಪ್ರಯಾಣವನ್ನು ತಿಂಗಳು ಗಟ್ಟಲೆ ಮುಂದೂಡಬೇಕಾಗಿಬಂತು. ಯಾವಾಗ ಫಾರ್ಚ್ಯನೇಟ್ ದ್ವೀಪದಲ್ಲಿ ಹಡಗು ತಂಗುವ ಅವಕಾಶವಿರುವಂತಹ ಹಡಗಿಗಾಗಿ ಕಾದು, ಅಲ್ಲಿ ಇಪ್ಪತ್ತೈದು ಜೊತೆ ಕ್ಯಾನರಿ ಹಕ್ಕಿಗಳನ್ನು ಕೊಂಡುತಂದು ಮಕೊಂಡೊದಲ್ಲಿ ಅವುಗಳ ಸಂಖ್ಯೆ ವೃದ್ಧಿಸಿ ಆಕಾಶ ತುಂಬಿಸುವ ಆಲೋಚನೆ ಮಾಡಿದ್ದನ್ನು ನೆನಪಿಸಿಕೊಂಡಳು. ಅವಳ ಅನೇಕ ಉತ್ಸಾಹದ ಸಾಹಸಕಾರ್ಯಗಳಲ್ಲಿ ಉಂಟಾದ ವಿಫಲತೆಗಳಲ್ಲಿ ಹೆಚ್ಚು ಶೋಚನೀಯವೆನಿಸಿದ್ದು ಇದೊಂದೆ. ಹಕ್ಕಿಗಳು ಮರಿಹಾಕುತ್ತಿದ್ದಂತೆ ಅಮರಾಂತಾ ಉರ್ಸುಲಾ ಜೊತೆ ಜೊತೆಯಾಗಿ ಅವುಗಳನ್ನು ಹಾರಿಬಿಡಬೇಕೆಂದುಕೊಳ್ಳುವ ಮೊದಲೇ ಅವು ಊರಿಂದ ದೂರ ಹಾರಿಬಿಟ್ಟವು. ಅವುಗಳಲ್ಲಿ ಪ್ರೀತಿಹುಟ್ಟಿಸಲು, ಉರ್ಸುಲಾ ಮನೆಯನ್ನು ಮೊದಲ ಬಾರಿ ಕಟ್ಟಿಸಿದಾಗ ಇಟ್ಟಿದ್ದ ಪಂಜರಗಳು, ಬಾದಾಮಿ ಗಿಡಗಳಲ್ಲಿ ಇರಿಸಿದ ಕೃತಕ ಗೂಡುಗಳು ಹೆಂಚುಗಳ ಮೇಲೆ ಚೆಲ್ಲಿದ್ದ ಧಾನ್ಯಗಳು ಇವುಗಳ ಮೂಲಕವಾಗಿ ಪ್ರಯತ್ನಸಿದಳು.

ಅವುಗಳು ಇಲ್ಲಿನ ಜಾಗವನ್ನು ಬಿಟ್ಟು ಫಾರ್ಚ್ಯೂನೇಟ್ ದ್ವೀಪಕ್ಕೆ ಮತ್ತೆ ಹೋಗಲಿ ದಾರಿ ಕಂಡುಕೊಳ್ಳಲು ಸಾಕಷ್ಟು ಸಮಯ ಬೇಕಾಗುತ್ತದೆಂದು ಯೋಚಿಸಿ, ಮಾಡಿದ ಪ್ರಯತ್ನಗಳೆಲ್ಲವೂ ವ್ಯರ್ಥವಾದವು.

ಹಿಂತಿರುಗಿ ಬಂದು ಒಂದು ವರ್ಷವಾದರೂ, ಅವಳಿಗೆ ಸ್ನೇಹಿತರನ್ನು ಪಡೆಯಲು, ಪಾರ್ಟಿಗಳನ್ನು ಕೊಡಲು ಸಾಧ್ಯವಾಗಲೇ ಇಲ್ಲ. ಆದರೂ, ದುರದೃಷ್ಟದಿಂದ ಏಕಾಂಗಿತನದೊಂದಿಗೆ ಇರುವ ಜನಸಮುದಾಯಕ್ಕೆ ಏನಾದರೂ ಮಾಡಿ ಕಾಪಾಡುವುದು ಸಾಧ್ಯವೆಂದು ನಂಬಿದಳು. ಅವಳ ಗಂಡ ಗ್ಯಾಸ್ಟನ್, ಅವಳ ಭಾವನೆಗಳಿಗೆ ಧಕ್ಕೆ ತರುವ ಪ್ರಯತ್ನ ಮಾಡಲಿಲ್ಲ. ಟ್ರೈನ್ ಇಳಿಯುತ್ತಿದ್ದಂತೆ ತನ್ನ ಹೆಂಡತಿಯ ನಿರ್ಧಾರಗಳು ಹಿಂದಿನ ನೆನಪುಗಳಿಂದ ಪ್ರಚೋದಿತವೆಂಬುದನ್ನು ಅರಿತಿದ್ದ. ವಾಸ್ತವತೆಯ ಅರಿವು ಉಂಟಾಗುತ್ತಿದ್ದಂತೆ ಅವಳಿಗೆ ತನ್ನ ಸೋಲಿನ ಅನುಭವವಾಗುತ್ತದೆ ಎಂಬುದನ್ನು ಖಚಿತವಾಗಿ ನಂಬಿದ್ದ. ಆದ್ದರಿಂದ ಅವಳಿಗೆ ಅಡ್ಡಬರದೆ ಅವನು ತನ್ನ ವಾಹನವನ್ನೂ ರಿಪೇರಿ ಮಾಡಲು ಹೋಗಲಿಲ್ಲ. ಬದಲಾಗಿ ಗಾರೆಯವನು ಕೆಳಗೆ ಬೀಳಿಸಿದ್ದ ಜೇಡರ ಬಲೆಯನ್ನು ಭೂತಕನ್ನಡಿ ಹಿಡಿದು ದೊಡ್ಡ ಮೊಟ್ಟೆ ಯಾವುದಾದರೂ ಸಿಗಬಹುದೇನೋ ಎಂದು ಅನ್ವೇಷಿಸತೊಡಗಿದ. ಅದನ್ನು ಮೆಲ್ಲಗೆ ಬೆರಳುಗಳಿಂದ ಒಡೆದು ಅತಿಪುಟ್ಟ ಜೇಡವೇನಾದರೂ ಹೊಮ್ಮುವುದೇನೊ ಎಂದೂ ಕಾಯುತ್ತಿದ್ದ. ನಂತರ ಅಮರಾಂತಾ ಉರ್ಸುಲಾ ಸುಮ್ಮನೆ ಕೂರದೆ ಏನಾದರೂ ರಿಪೇರಿ ಕೆಲಸ ಮಾಡುತ್ತಲೇ ಇರುತ್ತಾಳೆ ಎನಿಸಿ ತಾನೂ ಬೈಸಿಕಲ್ಲಿನ ಭಾಗಗಳನ್ನು ಜೋಡಿಸಲು ತೊಡಗಿದ. ಅದರ ಮುಂದಿನ ಚಕ್ರ ಹಿಂದಿನ ಚಕ್ರಕ್ಕಿಂತ ಬಹಳ ದೊಡ್ಡದಿತ್ತು. ನಂತರ ಅವನು ಸ್ಥಳೀಯ ಕ್ರಿಮಿಕೀಟಗಳನ್ನು, ಸಿಕ್ಕಿದಲ್ಲೆಲ್ಲ ಹಿಡಿದು ಅವುಗಳನ್ನೆಲ್ಲ ಜ್ಯಾಮ್ ಜಾಡಿಗಳಲ್ಲಿ ಹಾಕಿ ಲೀಜ್ ಯೂನಿವರ್ಸಿಟಿಯಲ್ಲಿದ್ದ ತನ್ನ ಪ್ರೊಫೆಸರ್‌ಗೆ 'ಕೀಟ ಶಾಸ್ತ್ರ' ದ ಬಗ್ಗೆ ಉನ್ನತ ಅಧ್ಯಯನಕ್ಕಾಗಿ ಕಳಿಸಿಕೊಟ್ಟ. ಅವನ ಮುಖ್ಯ ವೃತ್ತಿ ನೌಕಾಚಾಲನೆಯೇ ಆಗಿದ್ದರು. ಕೀಟಶಾಸ್ತ್ರದಲ್ಲಿ ಆಸಕ್ತಿಯನ್ನಿರಿಸಿಕೊಂಡಿದ್ದ. ಅವನು ಸೈಕಲ್ ಸವಾರಿ ಮಾಡುವಾಗ ಬಿಗಿಯುಡುಗೆ, ಗಾಢಬಣ್ಣದ ಕಾಲುಚೀಲ, ಷೇರ್‌ಲಾಕ್ ಹೋಮ್ಸ್ ಮಾದರಿಯ ಹ್ಯಾಟ್ ಹಾಕಿಕೊಳ್ಳುತ್ತಿದ್ದ. ಕಾಲುನಡಿಗೆಯ ಸಮಯದಲ್ಲಿ ಅತಿ ಶುಭ್ರವಾದ ಒಂದಿಷ್ಟೂ ಕಲೆಯಿರದ ಲಿನನ್ ಸೂಟು, ಬಿಳಿ ಶೂ, ಸಿಲ್ಕ್ **** ಮತ್ತು ಕೈಯ್ಯಲ್ಲೊಂದು ಬೆತ್ತ ಹಿಡಿದುಕೊಂಡಿರುವುದು ಕಾಣಿಸುತ್ತಿತ್ತು. ಅವನ ಕಾಂತಿಹೀನ ಕಣ್ಣುಗಳ ನೋಟ ನೌಕಾ ಚಾಲಕನೆಂಬುದನ್ನು ಹೊರಗೆಡಹುತ್ತಿತ್ತು. ಅವನ ಮುಖದ ಮೇಲಿನ ಸಣ್ಣ ಮೀಸೆ ಅಳಿಲಿನ ಮೀಸೆಯಂತೆ ತೋರುತ್ತಿತ್ತು. ಅವಳಿಗಿಂತ ಹದಿನೈದು ವರ್ಷ ದೊಡ್ಡವನಾಗಿದ್ದರೂ ಹೆಂಡತಿಯ ಮೇಲೆ ತೋರುತ್ತಿದ್ದ ಪ್ರೀತಿ, ಅವನ ಗುಣಗಳು, ಆ ವ್ಯತ್ಯಾಸವನ್ನು ಸರಿದೂಗಿಸುತ್ತಿತ್ತು. ಅವನು ನಲವತ್ತರ ವಯಸ್ಸಿನಲ್ಲಿ ಎಚ್ಚರದ ಅಭ್ಯಾಸಗಳು, ಕತ್ತಿನ ಸುತ್ತಲಿದ್ದ ರೇಶಿಮೆದಾರ ಇದನ್ನು ನೋಡಿದವರಿಗೆ, ಎಣೆಯಿಲ್ಲದ ಪ್ರೀತಿಯೊಂದಿಗೆ ಒಪ್ಪಂದ ಮಾಡಿಕೊಂಡಿದ್ದಾರೆ ಎಂಬುದನ್ನು ತಿಳಿಯಲು ಸಾಧ್ಯವೇ ಇರಲಿಲ್ಲ. ಇಬ್ಬರ ನಡುವೆಯೂ ಪರಸ್ಪರ ಪ್ರತಿಸ್ಪಂದನಗಳಿದ್ದವು. ಅವರು ಮೊದಲ ಸಲ ಭೇಟಿಯಾದಾಗಿನಿಂದಲೂ ಇಂಥದೇ ಪ್ರೀತಿಯ ಪ್ರತಿಕ್ರಿಯೆಗಳಲ್ಲಿ ತನ್ಮಯರಾಗಿರುತ್ತಿದ್ದರು. ಕಾಲದ ಹರಿವಿನೊಂದಿಗೆ

ಅವರ ಪ್ರೀತಿ ಮತ್ತಷ್ಟು ಗಾಢವೂ ಆಳವೂ ಆಗಿ ಪರಿವರ್ತಿತವಾಯಿತು. ಗ್ಯಾಸ್ಟನ್ ಅಪಾರ ಜ್ಞಾನ, ಕಲ್ಪನಾಶಕ್ತಿಯಿರುವ ಉತ್ಕಟ ಪ್ರೇಮಿ ಮಾತ್ರವಾಗಿರಲಿಲ್ಲ, ಬಿಳಿ ಹೂಗಳ ಬಯಲಲ್ಲಿ ತಾನೂ ತನ್ನ ಪ್ರೇಯಸಿ ಪ್ರೀತಿಮಾಡುವುದಕ್ಕಾಗಿಯೇ, ವಿಮಾನವನ್ನು ತುರ್ತು ಭೂಸ್ಪರ್ಶ ಮಾಡಿಸಿ, ತಾನೂ ತನ್ನ ಪ್ರಿಯತಮೆ ಇಬ್ಬರೂ ಸಾವಿನ ಅಂಚನ್ನು ತಲುಪಿದರು.

ಮದುವೆಯಾಗುವುದಕ್ಕೆ ಎರಡು ವರ್ಷ ಮೊದಲು ಅವರು ಭೇಟಿಯಾಗಿದ್ದರು. ಸ್ಪೋರ್ಟ್ಸ್ ವಿಮಾನ ಉರುಳುರುಳಿ ಪಲ್ಟಿಹೊಡೆದು, ಅಮರಾಂತಾ ಉರ್ಸುಲಾ ಓದುತ್ತಿದ್ದ ಸ್ಕೂಲಿನ ಧ್ವಜಸ್ತಂಭಕ್ಕೆ ಡಿಕ್ಕಿಹೊಡೆಯುವುದನ್ನು ತಪ್ಪಿಸಲು ಪ್ರಯತ್ನಿಸುತ್ತಿದ್ದಾಗ, ಅದರ ಬಾಲ, ಹಳೆಯ ಚೌಕಟ್ಟು ಮತ್ತು ಅಲ್ಯುಮಿನಿಯಂ ಫಾಯಲ್‌ಗೆ, ವಿದ್ಯುತ್ ತಂತಿಯ ಮೇಲೆ ಸಿಕ್ಕಿಕೊಂಡಿತು. ಆ ನಂತರ ತನ್ನ ಕಾಲಿಗಾದ ಪೆಟ್ಟನ್ನೂ ಲೆಕ್ಕಿಸದೆ, ವಾರಾಂತ್ಯಗಳಲ್ಲಿ ಅಮರಾಂತಾ ಉರ್ಸುಲಾಳನ್ನು, ಫರ್ನಾಂಡಾ ನಿರೀಕ್ಷಿಸಿದಷ್ಟು ಕಟ್ಟುಪಾಡುಗಳು ಇರದಿದ್ದ ಕಾರಣ ನನ್‌ಗಳ ವಸತಿಗೃಹದಿಂದ, ಕಂಟ್ರಿ ಕ್ಲಬ್‌ಗೆ ಕರೆದೊಯ್ಯುತ್ತಿದ್ದ. ಭಾನುವಾರಗಳಲ್ಲಿ ಸಾವಿರದ ಐನೂರು ಅಡಿ ಎತ್ತರದಲ್ಲಿ ಹಾರುತ್ತ ಪ್ರೀತಿಮಾಡುತ್ತಿದ್ದರು. ಭೂಮಿಯ ಮೇಲಿನ ಮನುಷ್ಯರು ಚಿಕ್ಕಚಿಕ್ಕದಾಗಿ ಕಾಣುತ್ತಿದ್ದಷ್ಟೂ ಅವರು ಪ್ರೀತಿಯಲ್ಲಿ ಹತ್ತಿರ ಹತ್ತಿರವಾಗುತ್ತಿದ್ದರು. ಅವರು ಜೊತೆಗಿದ್ದಾಗೆಲ್ಲ, ಭೂಮಿಯ ಮೇಲೆ ಮಕೊಂಡೊ ಒಂದೇ ಅತ್ಯಂತ ಪ್ರಶಾಂತವಾದ ಸ್ಥಳ. ದೊಡ್ಡದಾದ ಮನೆ, ಒರೆಗಾನೊ ಪರಿಮಳ ಇವುಗಳ ಮಧ್ಯೆ ವೃದ್ಧಾಪ್ಯದವರೆಗೆ ನಿಷ್ಠಾವಂತ ಗಂಡನ ಜೊತೆ ಇರಬೇಕು. ಇಬ್ಬರು ದೃಢಕಾಯರಾದ ಗಂಡುಮಕ್ಕಳು ಇರಬೇಕು. ಅವರ ಹೆಸರುಗಳು ಅರೆಲಿಯಾನೊ, ಜೋಸ್ ಆರ್ಕಾಡಿಯೊ ಎಂದಿರದೆ, ರೋಡ್ರಿಗೊ ಗೋಂಜಾಲೊ ಎಂದಾಗಬೇಕು. ಹಾಗೆಯೇ ಒಬ್ಬಳು ಹೆಣ್ಣುಮಗಳಿದ್ದು, ಅವಳ ಹೆಸರು ರೆಮೆಡಿಯೋಸ್ ಎಂದಾಗದೆ ವರ್ಜೀನಿಯಾ ಎಂದಿರಬೇಕು. ಎಂದೆಲ್ಲಾ ಹೇಳುತ್ತಿದ್ದಳು. ಮಕೊಂಡೊ ಬಗ್ಗೆ ಒಂದು ಉದಾತ್ತ ಚಿತ್ರವನ್ನು ಊಹಿಸಿಕೊಂಡಿದ್ದಳು. ಹೀಗಿರುವ ಇವಳನ್ನು ಮಕೊಂಡೊದಲ್ಲಿ ಬದುಕುವಂತೆ ಮಾಡದಿದ್ದರೆ ಅವಳು ಮದುವೆಯಾಗುವುದು ಸಾಧ್ಯವಿಲ್ಲ ಎಂದು ಅರ್ಥಮಾಡಿಕೊಂಡ ಗ್ಯಾಸ್ಟನ್. ಕುತ್ತಿಗೆ ಪಟ್ಟಿ ಸ್ವೀಕರಿಸಿದಂತೆ ಮಕೊಂಡೊದಲ್ಲಿ ನೆಲಸಲೂ ಒಪ್ಪಿಕೊಂಡ. ಅವನಿಗೆ ಇದೆಲ್ಲ ಆ ಕ್ಷಣದ ಕಲ್ಪನೆಗಳು ಸಮಯದೊಂದಿಗೆ ಎಲ್ಲ ಸರಿಹೋಗುತ್ತೆ ಎಂದು ಭಾವಿಸಿದ. ಆದರೆ ಒಂದು ಎರಡು ವರ್ಷಗಳಾದರೂ, ಬಂದ ದಿನ ಇದ್ದ ಸಂತೋಷವೇ ಈಗಲೂ ಇರುವುದನ್ನು ನೋಡಿದಾಗ ಅವನಿಗೆ ಸ್ವಲ್ಪ ಗಾಭರಿಯಾಗತೊಡಗಿತು. ಅಷ್ಟು ಹೊತ್ತಿಗೆ ಆ ಪ್ರದೇಶದಲ್ಲಿನ ಎಷ್ಟು ಕೀಟಗಳು ಸಾಧ್ಯವೊ ಅಷ್ಟನ್ನೂ ಡಿಸ್ಟೆಕ್ಟ್ ಮಾಡಿ ನೋಡಿದ್ದ. ಸ್ಥಳೀಯನಂತೆಯೇ ಸ್ಪ್ಯಾನಿಷ್ ಮಾತಾಡುತ್ತಿದ್ದ. ಅಂಚೆಯ ಮೂಲಕ ಬರುತ್ತಿದ್ದ ಮ್ಯಾಗಝೀನ್‌ಗಳಲ್ಲಿನ ಒಗಟುಗಳನ್ನು (ಕ್ರಾಸ್‌ವರ್ಡ್ ಪಝಲ್) ಬಿಡಿಸುತ್ತಿದ್ದ. ಹವಾಗುಣದ ನೆಪವೊಡ್ಡಿ ಹಿಂತಿರುಗುವ ಪ್ರಯತ್ನ ಸಾಧ್ಯವಾಗಲಿಲ್ಲ. ಕಾರಣ ಅವನಿಗೆ ಪ್ರಕೃತಿದತ್ತವಾದ ಎಂಥ ಪರಿಸರಕ್ಕೇ ಹೊಂದಿಕೊಳ್ಳುವ ಗುಣವಿತ್ತು. ಮಧ್ಯಾಹ್ನದ ನಿದ್ದೆಯನ್ನೂ ತಾಳಿಕೊಂಡ. ಜಲಜಂತುಗಳಿದ್ದ ನೀರಿಗೂ ಹೊಂದಿಕೊಂಡ. ಅವನಿಗೆ ಅಲ್ಲಿನ ಊಟವೂ ತುಂಬ ಹಿಡಿಸಿತು. ಒಮ್ಮೆಯಂತೂ ಒಂದೇ ಸಲಕ್ಕೆ ಎಂಬತ್ತೆರಡು ಇಗ್ವಾನಾ(ಉಡ) ಮೊಟ್ಟೆಗಳನ್ನು

ತಿಂದು ಮುಗಿಸಿದ. ಅಮರಾಂತಾ ಉರ್ಸುಲಾ ಬೇರೆ ಟ್ರೈನ್‌ನಲ್ಲಿ ಬರುವಾಗ ಮೀನು, ಚಿಪ್ಪುಮೀನುಗಳನ್ನು, ಐಸ್‌ಬಾಕ್ಸ್‌ಗಳಲ್ಲಿರಿಸಿ ತಂದಿದ್ದಳು. ಹಾಗೆಯೆ ಮಾಂಸದ ಡಬ್ಬಗಳು, ಹಣ್ಣುಗಳು ಇತ್ಯಾದಿಗಳನ್ನು ತನಗಾಗಿ ತಿನ್ನಲು ತಂದಿದ್ದಳು. ಆ ಊರಿನಲ್ಲಿ ಎಲ್ಲಿಗಾದರೂ ಹೋಗಿ ಬರಲು ಅವಕಾಶವಿಲ್ಲದಿದ್ದರೂ, ಬರುವ ಸ್ನೇಹಿತರು ಅತಿಥಿಗಳು ಇಲ್ಲದಿದ್ದರೂ, ಈಗ ತನ್ನ ಗಂಡ ಅಷ್ಟಾಗಿ ಅವಳ ಶಾರ್ಟ್ ಸ್ಕರ್ಟ, ಏಳು ಎಳೆಗಳ ನೆಕ್‌ಲೇಸ್‌ಗಳನ್ನು ಮೊದಲಿನ ಹಾಗೆ ಮೆಚ್ಚುತ್ತಿರಲಿಲ್ಲವಾದರೂ, ಅವಳು ಯೂರೋಪಿಯನ್ ಶೈಲಿಯ ಬಟ್ಟೆಗಳನ್ನು ತೊಡುತ್ತಿದ್ದಳು. ಹೊಸ ಹೊಸ ಡಿಸೈನ್‌ಗಳನ್ನು ತರಿಸಿಕೊಳ್ಳುತ್ತಿದ್ದಳು. ಯಾವಾಗಲೂ ತನ್ನನ್ನು ಯಾವುದಾದರೂ ಕೆಲಸದಲ್ಲಿ, ಅಗತ್ಯವಿರಲಿ ಇಲ್ಲದಿರಲಿ ತೊಡಗಿಸಿಕೊಳ್ಳುತ್ತಿದ್ದಳು. ತಾನೇ ಸೃಷ್ಟಿಸಿದ ಮನೆಯ ಸಮಸ್ಯೆಗಳಿಗೆ ತಾನೇ ಸಮಾಧಾನ ಹುಡುಕುವುದರಲ್ಲಿ ಮಗ್ನಳಾಗುತ್ತಿದ್ದಳು. ಒಂದನ್ನು ಮಾಡಲು ಹೋಗಿ ಮತ್ತೊಂದನ್ನು ಮರುದಿನಕ್ಕೆ ಸರಿಪಡಿಸಲೆಂದುಕೊಂಡು ಇನ್ನಷ್ಟು ಹದಗೆಡಿಸುತ್ತಿದ್ದಳು. ಆ ಗುಣ ಫರ್ನಾಂಡಾಳಿಂದ ವಂಶಪಾರಂಪರ್ಯವಾಗಿ ಬಂದಿರಬೇಕೆನಿಸುತ್ತಿತ್ತು. ಅವಳಲ್ಲಿ ಸಂಭ್ರಮಾಚರಣೆಯ ಪ್ರವೃತ್ತಿ ಇನ್ನೂ ಎಷ್ಟು ಜೀವಂತವಾಗಿತ್ತೆಂದರೆ, ಹೊಸ ರೆಕಾರ್ಡ್‌ಗಳು ಬಂದಾಗ, ಗ್ಯಾಸ್ಟನ್‌ನನ್ನು ಕರೆದು ನೃತ್ಯವನ್ನು ಅಭ್ಯಸಿಸಲು ತಡರಾತ್ರಿಯವರೆಗೆ ಜೊತೆಗಿರುವಂತೆ ಆಹ್ವಾನಿಸುತ್ತಿದ್ದಳು. ಅವಳ ಸ್ಕೂಲಿನ ಗೆಳತಿಯರು ಸ್ಕೆಚ್‌ಗಳ ಮೂಲಕ ನರ್ತನ ಭಂಗಿಗಳನ್ನು ವಿವರಿಸಿದ್ದನ್ನು ಅಭ್ಯಾಸ ಮಾಡುತ್ತಾ ಕಡೆಗೆ ಅವರಿಬ್ಬರೂ ವಿಯೆನ್ನಾದ ರಾಕಿಂಗ್ ಚೇರ್‌ನಲ್ಲಿ ಕುಳಿತು ಪ್ರೇಮಿಸುವುದರೊಂದಿಗೆ ಮುಕ್ತಾಯ ಮಾಡುತ್ತಿದ್ದರು. ಅವಳಿಗೆ ಪೂರ್ಣ ಸಂತೋಷ ಸಿಗಬೇಕಾಗಿದ್ದರೆ ಮಕ್ಕಳನ್ನು ಹೆರಬೇಕಾಗಿತ್ತು. ಆದರೆ ಅವರಿಬ್ಬರೂ ಮದುವೆಯಾಗಿ ಐದು ವರ್ಷಗಳ ನಂತರವೇ ಮಕ್ಕಳನ್ನು ಪಡೆಯಬೇಕೆಂದು ಮಾಡಿಕೊಂಡಿದ್ದ ಒಪ್ಪಂದವನ್ನು ಗೌರವಿಸಿದ್ದಳು.

ವ್ಯರ್ಥವಾಗುತ್ತಿದ್ದ ಸಮಯವನ್ನು ಯಾವುದಾದರೂ ಕೆಲಸದಲ್ಲಿ ತೊಡಗಿಸಬೇಕೆನಿಸಿ ಗ್ಯಾಸ್ಟನ್ ಸಂಕೋಚ ಸ್ವಭಾವದ ಅರೆಲಿಯಾನೊ ಜೊತೆ ಮೆಲ್‌ಕಿಯಾಡ್ಸ್‌ನ ರೂಮಿನಲ್ಲಿ ಸಮಯ ಕಳೆಯುತ್ತಿದ್ದ. ಅವನ ಜೊತೆ ತನ್ನ ದೇಶದ ಮೂಲೆಮೂಲೆಗಳ ಬಗ್ಗೆ ನೆನಪಿಸಿಕೊಳ್ಳುವುದರಲ್ಲಿ ಖುಷಿ ಪಡುತ್ತಿದ್ದ. ಅರೆಲಿಯಾನೊ ಅಂತೂ ಅಲ್ಲೆಲ್ಲ ಬಹಳ ಸಮಯ ಇದ್ದು ಬಂದವನಂತೆ ಮಾತಾಡುತ್ತಿದ್ದ. ಆಶ್ಚರ್ಯ ಚಕಿತನಾದ ಗ್ಯಾಸ್ಟನ್ ವಿಶ್ವಕೋಶದಲ್ಲಿಯೂ ಇಲ್ಲದಿದ್ದ ಜ್ಞಾನ ನಿನಗೆ ಹೇಗೆ ಬಂತು ಎಂದು ಕೇಳಿದಾಗ, ಜೋಸ್ ಆರ್ಕಾಡಿಯೊಗೆ ಕೊಟ್ಟ "ಎಲ್ಲಾ ಗೊತ್ತಿದೆ" ಎನ್ನುವ ಉತ್ತರವನ್ನೇ ಕೊಟ್ಟ. ಸಂಸ್ಕೃತದ ಜೊತೆಗೆ, ಇಂಗ್ಲಿಷ್, ಫ್ರೆಂಚ್ ಮತ್ತು ಅಲ್ಪಸ್ವಲ್ಪ ಲ್ಯಾಟಿನ್, ಗ್ರೀಕ್ ಭಾಷೆಗಳನ್ನೂ ಕಲಿತ. ಅವನು ಹೊರಗೆ ಹೋಗುತ್ತಿದ್ದ. ಆ ಸಮಯದಲ್ಲಿ ಅಮರಾಂತಾ ಉರ್ಸುಲಾ ಅವನ ಖರ್ಚಿಗಾಗಿ ಒಂದಷ್ಟು ಮೊತ್ತವನ್ನು ಪ್ರತ್ಯೇಕವಾಗಿ ತೆಗೆದಿರಿಸಿಕೊಡುತ್ತಿದ್ದಳು. ಅವನ ರೂಮಂತೂ ಕ್ಯಾಟಲೋನಿಯಾ ಪುಸ್ತಕದಂಗಡಿಯ ಒಂದು ಶಾಖೆ ಎಂಬಂತೆ ಕಾಣುತ್ತಿತ್ತು. ತಡರಾತ್ರಿಯವರೆಗೂ ಪುಸ್ತಕದ ಹುಳುವಾಗಿ ಓದುತ್ತಲೇ ಇರುತ್ತಿದ್ದ. ಅವನು ಓದುತ್ತಿದ್ದ ರೀತಿಯಿಂದಲೇ, ಅವನು ಕಲಿಯುವುದಕ್ಕಾಗಿ ಪುಸ್ತಕ ಕೊಳ್ಳುತ್ತಿರಲಿಲ್ಲವೆಂದೂ ತನಗಿದ್ದ ಜ್ಞಾನದ ಸತ್ಯಾಸತ್ಯತೆ ಪರೀಕ್ಷಿಸುವುದಕ್ಕಾಗಿ ಪುಸ್ತಕಗಳಿದ್ದುವೆಂದೂ ಗ್ಯಾಸ್ಟನ್

ಅರ್ಥಮಾಡಿಕೊಂಡ. ಅವನಿಗೆ ಚರ್ಮಕಾಗದಗಳನ್ನು ಬಿಟ್ಟರೆ ಬೇರೆ ಯಾವ ಪುಸ್ತಕದಲ್ಲಿಯೂ ಆಸಕ್ತಿ ಇರಲಿಲ್ಲ. ಅದಕ್ಕಾಗಿಯೇ ಬೆಳಗಿನ ಹೊತ್ತು ಹೆಚ್ಚು ಸಮಯವನ್ನು ಮೀಸಲಿಡುತ್ತಿದ್ದ. ಗ್ಯಾಸ್ಟನ್ ಮತ್ತು ಅಮರಾಂತಾ ಉರ್ಸುಲಾ ಅವನನ್ನು ಮನೆಯ ಸದಸ್ಯನಾಗಿ ಸ್ವೀಕರಿಸಲು ಸಿದ್ಧರಿದ್ದರೂ ಅವನು ಮಾತ್ರ ರಸತಂತ್ರ ಕಲೆಗಾರನಾಗಿದ್ದು, ಅವನ ಸುತ್ತಲೂ ಕಾಲಕಳೆಯುತ್ತಿದ್ದಂತೆ ನಿಗೂಢತೆಯ ಮೋಡ ದಟ್ಟವಾಗುತ್ತಿತ್ತು. ಗ್ಯಾಸ್ಟನ್ ಅವನಿಗೆ ಹತ್ತಿರ ಬರಲು ಎಷ್ಟೇ ಪ್ರಯತ್ನಿಸಿದರೂ ಸಾದ್ಯವಾಗದ್ದರಿಂದ ಸಮಯ ಕಳೆಯಲು ಬೇರೆ ಯಾವ ರೀತಿಯಲ್ಲಿಯಾದರೂ ತೊಡಗಿಸಿಕೊಳ್ಳಬೇಕಿತ್ತು. ಅದೇ ಸಮಯದಲ್ಲಿ ಅವನಿಗೆ ಏರ್‌ಮೈಲ್ ಸೇವೆಯ ಬಗ್ಗೆ ಆಲೋಚಿಸುವಂತಾಯಿತು.

ಅದೇನೂ ಹೊಸ ಯೋಜನೆ ಆಗಿರಲಿಲ್ಲ. ವಾಸ್ತವಾಗಿ ಅಮರಾಂತಾ ಉರ್ಸುಲಾ ಜೊತೆ ಪರಿಚಯವಾಗುವಷ್ಟು ಹೊತ್ತಿಗೆ ಈ ಕೆಲಸದಲ್ಲಿ ಸಾಕಷ್ಟು ಅನುಭವವನ್ನು ಹೊಂದಿದ್ದ. ಆದರೆ ವ್ಯತ್ಯಾಸವೆಂದರೆ, ಅವನ ಕುಟುಂಬ ತಾಳೆ ಎಣ್ಣೆ ವ್ಯಾಪಾರದಲ್ಲಿ ಸಾಕಷ್ಟು ಬಂಡವಾಳ ಹಾಕಿದ್ದ. ಬೆಲ್ಜಿಯನ್ ಕಾಂಗೊ ಜೊತೆ ಮೈಲ್ ಸರ್ವಿಸ್ ಇತ್ತೇ ಹೊರತು ಮಕೊಂಡೊದಲ್ಲಿ ಇದ್ದಿರಲಿಲ್ಲ. ಮದುವೆ ಮತ್ತು ಮಕೊಂಡೊದಲ್ಲಿ ಸ್ವಲ್ಪ ಸಮಯ ಕಳೆಯಬೇಕೆಂಬ ನಿರ್ಧಾರದಿಂದ ಮದುವೆಯನ್ನು ಮುಂದೂಡಬೇಕಾಗಿ ಬಂದಿತ್ತು. ಆದರೆ ಅಮರಾಂತಾ ಉರ್ಸುಲಾ ಸಾರ್ವಜನಿಕ ಅಭಿವೃದ್ಧಿಗಾಗಿ ಒಂದು ಆಯೋಗವನ್ನು ವ್ಯವಸ್ಥೆ ಮಾಡುವ ಪ್ರಯತ್ನದಲ್ಲಿ ಇರುವುದನ್ನು ಗಮನಿಸಿದ್ದೇ ಅಲ್ಲದೆ ಹಿಂತಿರುಗಿ ಹೋಗುವುದರ ಸೂಚನೆ ಕೊಟ್ಟಾಗ ನಕ್ಕುಬಿಟ್ಟದ್ದನ್ನು ನೋಡಿದಾಗ ಬಹುಶಃ ಅವಳಿಗೆ ಬೇಗನೆ ಅಲ್ಲಿಗೆ ಹೋಗಬೇಕೆಂಬ ಉದ್ದೇಶವಿಲ್ಲದ್ದು ಮನಸ್ಸಿಗೆ ಬಂದಾಗ, ಬ್ರಸ್ಸೆಲ್‌ನಲ್ಲಿದ್ದ ತನ್ನ ಹಳೆಯ ಪಾರ್ಟ್‌ನರ್‌ಗಳ ಜೊತೆ ಮತ್ತು ವ್ಯವಹಾರ ಸಂಬಂಧವನ್ನು ಆರಂಭಿಸಿದ. ಆಫ್ರಿಕಾದಲ್ಲಿ ಪಯೊನಿಯರ್ ಆಗಿದ್ದಂತೆಯೇ ಕ್ಯರಿಬಿಯನ್‌ನಲ್ಲಿಯೂ ಇದ್ದರಾಯಿತೆಂದುಕೊಂಡ. ಅವನ ಪ್ರಯತ್ನಗಳು ಮುಂದುವರಿಯುತ್ತಿದ್ದಂತೆ, ಒಂದು ಕಾಲಕ್ಕೆ ಮನಸೆಳೆಯುವ ಪ್ರದೇಶವಾಗಿದ್ದು, ಈಗ ಹುಡಿಯಾದ ಚಕಮಕಿ ಕಲ್ಲುಗಳಿಂದ ಕೂಡಿದ ವಿಸ್ತಾರವಾದ ಪ್ರದೇಶವನ್ನು ವಿಮಾನಗಳು ಬಂದು ಇಳಿಯುವುದಕ್ಕೆ ಅನುಕೂಲವಾಗುವಂತೆ ರೂಪಿಸಿದ. ಗಾಳಿಯ ದಿಕ್ಕನ್ನೂ ಅಧ್ಯಯನಮಾಡಿದ. ತೀರಪ್ರದೇಶದ ಭೌಗೋಳಿಕ ಪರಿಸರ, ವಿಮಾನ ಹಾರಾಟಕ್ಕೆ ಸರಿಯಾದ ಮಾರ್ಗಗಳು ಇವೆಲ್ಲವೂ ಅವನ ವಿವೇಕದ ಪರಿಣಾಮವಾಗಿದ್ದು ಹರ್ಬರ್ಟ್ ಬುದ್ಧಿಶಕ್ತಿಯನ್ನು ಹೋಲುತ್ತಿದ್ದರೂ ಜನ ಅದನ್ನು ನಂಬದೆ, ಅವನು ವಾಯುಮಾರ್ಗಗಳಿಗಾಗಿ ಹುಡುಕುತ್ತಿಲ್ಲ ಬದಲಾಗಿ ಅಪಾಯಕಾರಿಯಾದ ಬನಾನಾ ಕೃಷಿಗೆ ಹುಡುಕುತ್ತಿದ್ದಾನೆ ಎಂದು ಗುಮಾನಿಯಿಂದ ನೋಡತೊಡಗಿದರು.

ಮಕೊಂಡೊದಲ್ಲಿಯೇ ಸ್ಥಿರವಾಗಿ ನೆಲಸುವುದಕ್ಕೆ ಒಂದು ದಾರಿ ಸಿಕ್ಕಿತೆಂಬ ಸಂತೋಷದೊಂದಿಗೆ ಅವನು ಹಲವುಬಾರಿ ಆ ಪ್ರದೇಶದ ರಾಜಧಾನಿಗೆ ಭೇಟಿಕೊಟ್ಟು ಅಧಿಕಾರಿಗಳನ್ನು ಕಂಡು ಪರವಾನಗಿಯನ್ನೂ ಪಡೆದ. ವಿಶೇಷ ಮತ್ತು ಪ್ರತ್ಯೇಕ ಹಕ್ಕುಗಳಿಗಾಗಿ ಗುತ್ತಿಗೆ ಪತ್ರಗಳನ್ನು ಸಿದ್ಧಪಡಿಸಿದ. ಈ ಮಧ್ಯೆ ಬ್ರಸ್ಸೆಲ್‌ನಲ್ಲಿದ್ದ ತನ್ನ ಪಾಲುದಾರರ ಜೊತೆ ಫರ್ನಾಂಡಾ ಅದೃಶ್ಯ ವೈದ್ಯರ ಜೊತೆ ನಡೆಸಿದಂತೆ ಪತ್ರವ್ಯವಹಾರ

ನಡೆಸಿದ. ಅಂತಿಮವಾಗಿ ಒಬ್ಬ ಸಮರ್ಥ ಮೆಕ್ಯಾನಿಕ್‌ನ ಪರಿವೀಕ್ಷಣೆಯಲ್ಲಿ ವಿಮಾನವನ್ನು ಹಡಗಿನಲ್ಲಿ ಕಳಿಸಬೇಕೆಂದೂ ಮತ್ತು ಅವನು ಮಕೊಂಡೊದ ಹತ್ತಿರವಿರುವ ಪೋರ್ಟ್‌ನಲ್ಲಿ, ವಿಮಾನದ ಭಾಗಗಳನ್ನು ಜೋಡಿಸಲೆಂದೂ ವಿವರಿಸಿ ತಿಳಿಸಿದ್ದ. ಒಂದು ವರ್ಷದ ಅವನ ಆಲೋಚನೆಗಳು, ಹವಾಗುಣ ಸಂಬಂಧವಾದ ಲೆಕ್ಕಾಚಾರಗಳು, ಪತ್ರವ್ಯವಹಾರದಲ್ಲಿ ಕಾಣಿಸಿಕೊಳ್ಳುವ ಭರವಸೆಯ ಪುನರಾವೃತ್ತಿಗಳು – ಇವೆಲ್ಲವನ್ನೂ ನಂಬಿ ರಸ್ತೆಗಳಲ್ಲಿ ಅಡ್ಡಾಡುತ್ತ, ಆಕಾಶದ ಕಡೆಗೆ ನೋಡುತ್ತಾ ಗಾಳಿ ಬೀಸುವ ಸದ್ದಿಗೆ ವಿಮಾನಗಳು ಕಾಣಿಸಿಕೊಳ್ಳುವುದಕ್ಕಾಗಿ ಎದುರುನೋಡುತ್ತಾ ಇರುವುದನ್ನು ಅಭ್ಯಾಸ ಮಾಡಿಕೊಂಡ.

ಅವಳು ಇದನ್ನು ಗಮನಿಸಿರಲಿಲ್ಲವಾದರೂ, ಅಮರಾಂತಾ ಉರ್ಸುಲಾ ಹಿಂತಿರುಗಿದ್ದು ಅರೆಲಿಯಾನೊ ಬದುಕಿನಲ್ಲಿ ಮಹತ್ತರವಾದ ಬದಲಾವಣೆಗಳನ್ನು ತಂದವು. ಜೋಸ್ ಆರ್ಕಾಡಿಯೊ ಸಾವಿನ ಬಳಿಕ, ಕ್ಯಾಟಲೋನಿಯ ಪುಸ್ತಕದ ಅಂಗಡಿಗೆ ತಪ್ಪದೆ ಭೇಟಿಕೊಡುತ್ತಿದ್ದ. ಜೊತೆಗೆ ಅವನಿಗೆ ದೊರೆತ ಸ್ವಾತಂತ್ರ್ಯ, ಅವನಿಗೆ ದೊರೆತಿದ್ದ ಕಾಲಾವಕಾಶ ಅವನಲ್ಲಿ ಊರಿನ ಬಗ್ಗೆ ಒಂದಿಷ್ಟು ಕುತೂಹಲವನ್ನು ಮೂಡಿಸಿತ್ತು. ಯಾವುದೇ ಅಚ್ಚರಿಯಿಲ್ಲದ ರೀತಿಯಲ್ಲಿ ಅದರ ತಿಳಿದುಕೊಳ್ಳುತ್ತಾ ಬಂದ. ಧೂಳಿಡಿದ, ನಿರ್ಜನ ರಸ್ತೆಗಳಲ್ಲಿ ಓಡಾಡಿದ. ಭಗ್ನಾವಶೇಷ, ಸ್ಥಿತಿಯಲ್ಲಿದ್ದ ಮನೆಗಳ ಒಳಗನ್ನು ವೈಜ್ಞಾನಿಕ ಜಿಜ್ಞಾಸೆಯಿಂದ ನೋಡುತ್ತಿದ್ದ. ಕಿಟಕಿಗಳಿಗಿದ್ದ ಲೋಹದ ಪರದೆಗಳು ತುಕ್ಕು ಹಿಡಿದಿರುವುದನ್ನು, ಸತ್ತು ಬಿದ್ದಿದ್ದ ಹಕ್ಕಿಗಳನ್ನು, ನೆನಪುಗಳ ಭಾರದಿಂದ ಕುಗ್ಗಿ ಹೋಗಿದ್ದ ಸ್ಥಳೀಯರನ್ನು ಪರೀಕ್ಷಕ ದೃಷ್ಟಿಯಿಂದ ಗಮನಿಸಿದ. ಸಂಪೂರ್ಣವಾಗಿ ವಿನಾಶವಾಗಿದ್ದ ಬನಾನಾ ಕಂಪನಿಯ ವೈಭವದ ದಿನಗಳನ್ನು ತನ್ನ ಕಲ್ಪನೆಯಲ್ಲಿ ಕಟ್ಟಿಕೊಂಡ. ಅವನ ಮುಂದೆ ಈಗ ಕಾಣುತ್ತಿದ್ದುದು, ಪೂರ್ತಿಯಾಗಿ ಬತ್ತಿಹೋಗಿದ್ದ ಈಜುಕೊಳದಲ್ಲಿ ಪೂರ್ತಿಯಾಗಿ ಹೆಂಗಸರ ಗಂಡಸರ ಶೂಗಳಿಂದ ತುಂಬಿ ಕೊಳೆತು ನಾರುತ್ತಿದ್ದುದನ್ನು, ಮನೆಗಳು ಪಾಳುಬಿದ್ದು ಹುಲ್ಲು ಬೆಳೆದಿದ್ದನ್ನು, ಉಕ್ಕಿನ ಸರಪಳಿಯಿಂದ ಕಟ್ಟಿದ್ದ ನಾಯಿಯ ಶವವನ್ನೂ, ಇನ್ನೂ ಸದ್ದು ಮಾಡುತ್ತಿದ್ದ ದೂರವಾಣಿಯನ್ನು ನೋಡಿದ. ಸದ್ದು ನಿಲ್ಲದಿದ್ದಾಗ, ರಿಸೀವರನ್ನು ತೆಗೆದು ಕಿವಿಗಿಟ್ಟುಕೊಂಡಾಗ ಆಚೆ ಕಡೆಯಿಂದ, ಕಾತರ ತುಂಬಿದ ಇಂಗ್ಲಿಷಿನಲ್ಲಿ ಮಾತಾಡುತ್ತಿದ್ದ ಹೆಂಗಸಿನ ಧ್ವನಿಯನ್ನು ಕೇಳಿಸಿಕೊಂಡ. ಸ್ಟ್ರೈಕ್ ಮುಕ್ತಾಯಗೊಂಡದ್ದನ್ನು, ಮೂರುಸಾವಿರ ಸತ್ತವರ ಹೆಣಗಳನ್ನು ಸಮುದ್ರಕ್ಕೆ ಎಸೆದದ್ದನ್ನೂ ಬನಾನಾ ಕಂಪನಿ ಈಗ ಅಲ್ಲಿಂದ ಹೊರಟು ಹೋಗಿ ಮಕೊಂಡೊ ಎಷ್ಟೋ ವರ್ಷಗಳ ನಂತರ ಪ್ರಶಾಂತವಾಗಿ ಸುಖವಾಗಿ ಇರುವುದನ್ನು ತಿಳಿಸಿದ. ಈ ಬಗೆಯ ಅಲೆದಾಟ ಕಡೆಗೆ ಅವನನ್ನು ಕೆಂಪುದೀಪದ ಪ್ರದೇಶಕ್ಕೆ ಕರೆತಂದಿತು. ಹಿಂದಿನ ದಿನಗಳಲ್ಲಿ ಅಲ್ಲಿ ಖುಷಿಗಾಗಿ ಬ್ಯಾಂಕ್ ನೋಟುಗಳನ್ನು ಸುಡುತ್ತಿದ್ದರು. ಅಲ್ಲಿ ಸದಾ ಗದ್ದಲ, ಸಂಭ್ರಮಗಳು ಕಾಣಿಸುತ್ತಿದ್ದವು. ಅದು ಈಗ ಬೇರೆಲ್ಲ ಕಡೆಗಳಿಗಿಂತ ಅತ್ಯಂತ ದುರವಸ್ಥೆಯ ಸ್ಥಿತಿಯಲ್ಲಿದೆ. ಕೆಲವು ಕಡೆ ಕೆಂಪು ದೀಪಗಳು ಇನ್ನೂ ಉರಿಯುತ್ತಿದೆ. ಪಾಳುಬಿದ್ದ ಡಾನ್ಸ್ ಹಾಲುಗಳು ಮತ್ತು ಅಲ್ಲಿ ಹೂಗುಚ್ಛಗಳು ಒಣಗಿ ಬಿದ್ದಿವೆ. ಜೊತೆಗೆ ಯಾರ ಸಂಬಂಧವೂ ಇಲ್ಲದೆ ಸ್ಥೂಲಗಾತ್ರದ

ವಿಧವೆಯರೇ ತುಂಬಿದ್ದಾರೆ. ಅವರಲ್ಲಿ ಎಷ್ಟೋ ಜನ ಫ್ರೆಂಚ್ ಅಜ್ಜಿಯರು, ಮುತ್ತಜ್ಜಿಯರು, ಬ್ಯಾಬಿಲೋನಿಯಾದ ತಾಯಂದಿರು – ಆಗಿದ್ದಾರೆ. ಇವರೆಲ್ಲರೂ ಇನ್ನೂ ಫೋನೋಗ್ರಾಫ್‌ಗಳನ್ನು ಪಕ್ಕದಲ್ಲಿಟ್ಟುಕೊಂಡು ಕಾಯುತ್ತಿದ್ದಾರೆ. ತನ್ನ ಕುಟುಂಬದ ನೆನಪು ಇರಿಸಿಕೊಂಡಿರುವ ಯಾರೊಬ್ಬರೂ ಅರೆಲಿಯಾನೊಗೆ ಕಾಣಿಸಲಿಲ್ಲ. ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಕೂಡ ನೆನಪಿರಲಿಲ್ಲ. ನೆನಪಿದ್ದ ಒಬ್ಬನೇ ಒಬ್ಬ ವ್ಯಕ್ತಿಯೆಂದರೆ, ಬಹಳ ವಯಸ್ಸಾಗಿದ್ದ ಹತ್ತಿಯಂತ ಕೂದಲಿದ್ದ ಫೋಟೋ ನೆಗೆಟೀವ್ ನಂತಿದ್ದ ವೆಸ್ಟ್ ಇಂಡಿಯಾದ ನೀಗ್ರೊ ಮಾತ್ರ. ಅವನು ಈಗಲೂ ಮನೆಯ ಮುಂದೆ ಕುಳಿತು ಸೂರ್ಯಾಸ್ತದ ಶೋಕಗೀತೆಗಳನ್ನು ಹಾಡುತ್ತಿದ್ದ. ಅರೆಲಿಯಾನೊ ಅವನ ಜೊತೆ ಹರಕು ಮುರುಕ ಪಾಪಿಯಾಮೆಂತೊದಲ್ಲಿ ಮಾತನಾಡುತ್ತಿದ್ದ. ಈ ಭಾಷೆಯನ್ನು ಕೆಲವು ವಾರಗಳಲ್ಲಿಯೇ ಕಲಿತಿದ್ದ. ಒಮ್ಮೊಮ್ಮೆ ಮರಿಮಗಳು ಮಾಡುತ್ತಿದ್ದ ಚಿಕನ್ ಸೂಪಿನ ಬಗ್ಗೆ ಮಾತಾಡುತ್ತಾ ಅವನೊಂದಿಗೆ ಹಂಚಿಕೊಳ್ಳುತ್ತಿದ್ದ. ಆ ಮರಿಮಗಳು ಗಟ್ಟಿಮೂಳೆಯ ದಪ್ಪನೆಯ ಕರಿ ಹೆಣ್ಣಾಗಿದ್ದಳು. ಕಟಿಭಾಗ ಹೆಣ್ಣುಕುದರೆಯದಂತಿದ್ದರೆ, ಮೊಲೆಗಳು ಕಲ್ಲಂಗಡಿ ಗಾತ್ರದಂತಿದ್ದವು. ತಂತಿಯ ಹಾಗೆ ಸುತ್ತಿಕೊಂಡಿರುವ ಕೂದಲು ಮಧ್ಯಯುಗದ ಯೋಧನ ಶಿರಸ್ತ್ರಾಣದಂತಿತ್ತು. ಅವಳ ಹೆಸರು ನಿಗ್ರೊಮಂತಾ. ಆಗ ಅರೆಲಿಯಾನೊ ಮನೆಯಲ್ಲಿನ ಬೆಳ್ಳಿ ಪಾತ್ರೆ, ದೀಪಸ್ತಂಭಗಳನ್ನು ಮತ್ತು ಇತರೆ ವಸ್ತುಗಳನ್ನು ಮಾರಿ ಜೀವಿಸುತ್ತಿದ್ದ. ಅವನ ಹತ್ತಿರ ಒಂದು ಬಿಡಿಗಾಸೂ ಇಲ್ಲದಿದ್ದಾಗ, ಮಾರ್ಕೆಟ್ ಸ್ಥಳದಲ್ಲಿ ಉಪಯೋಗಕ್ಕೆ ಬಾರದೆ ಬಿಸಾಡುತ್ತಿದ್ದ ಕೋಳಿ ತಲೆಗಳನ್ನು ತೆಗೆದುಕೊಂಡು ಹೋಗಿ ಸೂಪು ಮಾಡುವುದಕ್ಕಾಗಿ ನಿಗ್ರೊಮಾಂತಾಳಿಗೆ ಕೊಡುತ್ತಿದ್ದ. ಅದಕ್ಕೆ ಮಸಾಲೆ ಗಿಸಾಲೆ ಹಾಕಿ ರುಚಿಕಟ್ಟಾಗಿ ಮಾಡುತ್ತಿದ್ದಳು. ಮುತ್ತಜ್ಜ ತೀರಿಕೊಂಡ ಮೇಲೆ ಅರೆಲಿಯಾನೊ ಮನೆಕಡೆ ಹೋಗುವುದನ್ನು ನಿಲ್ಲಿಸಿದ. ಆದರೆ ಚೌಕದಲ್ಲಿದ್ದ ಬಾದಾಮಿ ಮರಗಳ ಬಳಿ ಅವಳಿಗೆ ತಿಳಿದಿದ್ದ ಕಾಡುಪ್ರಾಣಿಗಳ ರೀತಿಯ ಸಿಳ್ಳು ಬಳಸಿಕೊಂಡು ಗೂಟೆಗಳನ್ನು ಕರೆಯುತ್ತಿದ್ದ. ಎಷ್ಟೋ ಸಲ ಪಾಪಿಯಾಮೆಂತೆಯಾ ಭಾಷೆಯಲ್ಲಿ ಚಿಕನ್ ಸೂಪ್ ಮತ್ತು ಮನೆಯ ತೊಂದರೆಗಳ ಬಗ್ಗೆ ಅವಳ ಜೊತೆ ಮಾತನಾಡುತ್ತ ಕುಳಿತಿರುತ್ತಿದ್ದ. ಆದರೆ ಅವನು ಅಲ್ಲಿರುವುದರಿಂದ ಗಿರಾಕಿಗಳು ಹೆದರುತ್ತಾರೆಂದು ತಿಳಿಸುವವರೆಗೆ ಅವನು ಅಲ್ಲಿರುತ್ತಿದ್ದ. ಅವನಿಗೆ ಅವಳಲ್ಲಿ ಆಗಾಗ ಆಕರ್ಷಣೆ ಉಂಟಾಗುತ್ತಿದ್ದರೂ ನಿಗ್ರೊಮಾಂತಾ ಅವಳ ಕಷ್ಟಸುಖ ನೆನಪುಗಳನ್ನು ಹಂಚಿಕೊಳ್ಳಲು ಸರಿ ಜೊತೆ ಅನಿಸಿತಾದರೂ ಎಂದೂ ಅವಳನ್ನು ಹಾಸಿಗೆಗೆ ಕರೆಯಲಿಲ್ಲ. ಅಮರಾಂತಾ ಉರ್ಸುಲಾ ಮಕೊಂಡೊಗೆ ಹಿಂದಿರುಗಿದಾಗಲೂ ಅವನಿಗೆ ಹೆಣ್ಣಿನ ಸ್ಪರ್ಶದ ಅನುಭವ ಇರಲಿಲ್ಲ. ಆದ್ದರಿಂದ ಅವಳು ಅವನನ್ನು ಬಿಗಿಯಾಗಿ ಆಲಂಗಿಸಿಕೊಂಡಾಗ ಅವನಿಗೆ ಉಸಿರುಕಟ್ಟಿದಂತಾಗಿತ್ತು. ಅವಳನ್ನು ನೋಡಿದ ಪ್ರತಿಸಲವೂ ಅದರಲ್ಲಿಯೂ ನೃತ್ಯದ ಹೊಸ ಹೊಸ ಹೆಜ್ಜೆಗಳನ್ನು ತೋರಿಸಿದಾಗ ಅವನಿಗೆ ಮುತ್ತಜ್ಜನ ಅಪ್ಪನಿಗೆ ಪಿಲಾರ್ ತರ್ನಿರಾ ಉಗ್ರಾಣದಲ್ಲಿ ಕಾರ್ಡುಗಳನ್ನು ತೋರಿಸುವ ನೆಪದಲ್ಲಿ ಹತ್ತಿರಕ್ಕೆ ಬಂದಾಗ ಉಂಟಾಗುತ್ತಿದ್ದ ಒಂದು ಬಗೆಯ ರೋಮಾಂಚನ ಮತ್ತು ಕಚಗುಳಿ ಇಟ್ಟಂತೆನಿಸುತ್ತಿತ್ತು. ಅವನಿಗಾಗುತ್ತಿದ್ದ ಹಿಂಸೆಯನ್ನು ಮರೆಯಲು ಚರ್ಮಕಾಗದಗಳಲ್ಲಿ ಮತ್ತಷ್ಟು ಮುಳುಗಿದ. ಅವಳ ಆ ನಡವಳಿಕೆಯಿಂದ ಉಂಟಾಗುತ್ತಿದ್ದ, ಮುಗ್ಧ

ಹೊಗಳಿಕೆಯಿಂದ, ಅವನ ರಾತ್ರಿಗಳೆಲ್ಲ ವಿಷಪೂರಿತವೆನಿಸುತ್ತಿದ್ದುದರಿಂದ ಆದಷ್ಟೂ ಅವಳಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತಿದ್ದ. ಆದರೆ ಅವಳನ್ನು ದೂರ ಮಾಡಲು ಯೋಚಿಸಿದಷ್ಟೂ ಅವಳ ನಗುವಿಗಾಗಿ, ಸಂತೋಷಗೊಂಡ ಬೆಕ್ಕಿನ ಕೂಗಿಗಾಗಿ, ಕೃತಜ್ಞತೆಯನ್ನು ಅಭಿವ್ಯಕ್ತಿಸುವ ಹಾಡುಗಳಿಗಾಗಿ, ವೇದನಾಪೂರಿತ ಪ್ರೀತಿಯ ಅಭಿವ್ಯಕ್ತಿಗಾಗಿ ಮನೆಯಲ್ಲಿನ ಊಹಿಸದ ಮೂಲೆಗಳಲ್ಲಿ ಕಾಯುತ್ತಿದ್ದ. ಒಂದು ದಿನ ರಾತ್ರಿ ತನ್ನ ಬೆಳ್ಳಿ ಕೆಲಸದ ಮೇಜಿನ ಮೇಲೆ ಹಾಸಿಗೆಯಿಂದ ಮೂವತ್ತು ಅಡಿ ದೂರದಲ್ಲಿ, ಬಾಟಲಿಗಳನ್ನು ಒಡೆದು, ಚೆಲ್ಲಿ ಹರಡಿದ ಹೈಡ್ರೋಕ್ಲೋರಿಕ್ ಆ್ಯಸಿಡ್‌ನ ಮಡುವಿನಲ್ಲಿ ಪ್ರಣಯಕ್ರೀಡೆಗಳಲ್ಲಿ ತೊಡಗಿರುವುದನ್ನು ನೋಡಿದ. ಇದಾದ ಮೇಲೆ ಒಂದು ಕ್ಷಣವೂ ಅವನಿಗೆ ನಿದ್ದೆ ಹತ್ತಲಿಲ್ಲ. ಮಾರನೆಯ ದಿನ ಜ್ವರವಿದ್ದು, ಅವನು ಜೋರಾಗಿ ಸಿಟ್ಟಿನಿಂದ ಅಳುತ್ತಿದ್ದ. ಅವಳಿಗಾಗಿ ಬಾದಾಮಿ ಮರಗಳ ನೆರಳಿನಲ್ಲಿ ಕಾಯುತ್ತಾ ನಿಂತದ್ದು, ಕೊನೆಯಿಲ್ಲದಂತಹ ಪ್ರಯತ್ನವೆನಿಸಿತು. ಸೂಜಿ ಮೊನೆಗಳ ಇರಿತಕ್ಕೆ ಒಳಗಾದಂತೆ ಅನುಭವಿಸಿದ. ಅಮರಾಂತಾಳನ್ನು ಕೇಳಿ ಪಡೆದಿದ್ದ ಒಂದು ಪೆಸೊ ಮತ್ತು ಐವತ್ತು ಸೆಂಟುಗಳನ್ನು ಮುಷ್ಠಿಯಲ್ಲಿರಿಸಿಕೊಂಡದ್ದು, ಅವಳನ್ನು ತನ್ನ ಕಾರ್ಯದಲ್ಲಿ ಸಹಭಾಗಿಯಾಗುವುದಕ್ಕಾಗಲಿ, ಅವಳನ್ನು ಕೆಡಿಸುವುದಕ್ಕಾಗಲಿ ಅಲ್ಲ, ನಿಗ್ರೊಮಾಂತಾ ಅವನನ್ನು ಅವಳ ರೂಮಿಗೆ ಕರೆದುಕೊಂಡು ಹೋದಳು. ಅಲ್ಲಿ ಕೃತಕ ದೀಪಸ್ತಂಭಗಳು ಇದ್ದವು. ಅವಳ ಹಾಸಿಗೆ ಕೆಟ್ಟ ಪ್ರೇಮಿಗಳ ಕಲೆಗಳಿಂದ ಕೂಡಿದ್ದವು. ಅವಳು ಆತ್ಮವಿಲ್ಲದವಳಂತೆ, ಕಾಡುನಾಯಿಯ ಹಾಗೆ ಕಂಡಳು. ಆ ದೇಹಕ್ಕೆ ಇವನು ಹೆದರಿದ ಮಗುವಿನಂತೆ ಕಾಣುತ್ತಿದ್ದುದರಿಂದ ನಿರಾಕರಿಸಬೇಕೆಂದುಕೊಳ್ಳುತ್ತಿದ್ದ ಹಾಗೆ ಥಟ್ಟನೆ ಅವನಲ್ಲಿ ಪ್ರಚಂಡ ಪುರುಷತ್ವವಿರುವುದು ಅನುಭವಕ್ಕೆ ಬರುತ್ತಿದ್ದಹಾಗೆ, ತನ್ನ ಮನಸ್ಸನ್ನು ಮರುಹೊಂದಾಣಿಕೆಗಾಗಿ ಪ್ರಚೋದಿಸಿತು.

ಅವರು ಅಂದಿನಿಂದ ಪ್ರೇಮಿಗಳಾದರು. ಬೆಳಗಿನ ಹೊತ್ತು ಚರ್ಮಕಾಗದಗಳಲ್ಲಿ ಮುಳುಗಿದ್ದು ಮಧ್ಯಾಹ್ನದ ವಿಶ್ರಾಂತಿ ಸಮಯದಲ್ಲಿ ನಿಗ್ರೊಮಾಂತಾಳ ಬೆಡ್‌ರೂಮಿಗೆ ಹೋಗುತ್ತಿದ್ದ. ಮೊದಲು ಅವಳು ಅವನಿಗೆ ಬಸವನಹುಳು, ಎರೆಹುಳು, ಏಡಿ ಮುಂತಾದವುಗಳು ಪ್ರೇಮಿಸುವ ಪಟ್ಟುಗಳನ್ನು ಕಲಿಸಿ ಅವನು ಹಾಸಿಗೆಗೆ ಬರಲು ಕಾಯುತ್ತಿದ್ದು ಬಂದನಂತರ, ತೊಂಡುಬಿದ್ದ ಪ್ರೇಮಿಗಳಿಗಾಗಿ ಕಾಯುತ್ತಿದ್ದಳು. ನಿಗ್ರೊಮಾಂತಾ ತನ್ನ ಸೊಂಟದ ಸುತ್ತ ಏನೊ ಗಟ್ಟಿಯಾದ ಸ್ಟೀಲ್‌ನಂತಿರುವ ಒಂದು ಸಣ್ಣಬೆಲ್ಟ್‌ನ್ನು ಧರಿಸಿದ್ದುದನ್ನು ಒಂದು ವಾರದ ನಂತರ ಗಮನಿಸಿದ. ಅದು ಅವಳ ಜೊತೆ ಹೇಗೆ ಅಂಟಿಕೊಂಡಿರುತ್ತಿತ್ತೆಂದರೆ, ಅವಳ ಹುಟ್ಟಿನ ಜೊತೆಗೆ ಅದು ಬಂದಿರಬೇಕೆಂದೆನಿಸುತ್ತಿತ್ತು. ಹೆಚ್ಚು ಕಡಿಮೆ ಎಲ್ಲಾ ದಿನಗಳಲ್ಲೂ ಹಾಸಿಗೆಯಲ್ಲಿ ಬೆತ್ತಲೆಯಾಗಿ ಬಿದ್ದುಕೊಂಡೊ, ತುಕ್ಕುಹಿಡಿದ ಛಾವಣಿ ಕೆಳಗೆ, ವಿಪರೀತ ಸೆಕೆಯಲ್ಲಿ, ಊಟ ಮಾಡುತ್ತಿದ್ದರು. ನಿಗ್ರೊಮಾಂತಾಳಿಗೆ ಕಡೆಗೊಬ್ಬ ನಿಜವಾದ ಗಂಡಸು, ಮೂಳೆಗಳನ್ನೆಲ್ಲ ಪುಡಿಮಾಡಬಲ್ಲವನು ಸಿಕ್ಕಿದನೆಂದುಕೊಂಡದ್ದನ್ನು ನಗುತ್ತ ಅವನಿಗೆ ಹೇಳಿದಳು. ಅರೆಲಿಯಾನೊ ಕೂಡಾ ಅಮರಾಂತಾ ಉರ್ಸುಲಾ ಬಗ್ಗೆ ಹತ್ತಿಕ್ಕಿಕೊಂಡಿದ್ದ ಪ್ರೀತಿಯ ಬಗ್ಗೆ ಹೇಳಿದ. ಆದರೆ ಅದನ್ನು ಬೇರೆಯವರಿಂದ ತೀರಿಸಿಕೊಳ್ಳುವುದು ಸಾಧ್ಯವಿರಲಿಲ್ಲವೆಂದೂ, ಆ ಪ್ರೀತಿಯ ಅವಧಿಯಲ್ಲಿ ಅಮರಾಂತಾ ಉರ್ಸುಲಾಳ ನೆನಪು ಮತ್ತಷ್ಟು ಕಾಡುವುದೆಂದೂ

ಅವಳ ಬಗೆಗಿನ ಪ್ರೀತಿಯ ಎಲ್ಲೆಗಳನ್ನು ಮತ್ತಷ್ಟು ವಿಸ್ತರಿಸುವುದೆಂದೂ ಹೇಳಿದ. ನಿಗ್ರೊಮಾಂತಾ ಎಂದಿನ ಪ್ರೀತಿಯೊಂದಿಗೇ ಅವನನ್ನು ಬರಮಾಡಿಕೊಳ್ಳುತ್ತಿದ್ದಳಾದರೂ, ತನ್ನ ಸೇವೆಗೆ ಹಣವನ್ನು ಪಡೆಯುತ್ತಿದ್ದಳು. ಅರೆಲಿಯಾನೊ ಬಳಿ ಹಣ ಇಲ್ಲದಿದ್ದಾಗ, ಸಂಖ್ಯೆಯಿಂದಲ್ಲದೆ ಬಾಗಿಲ ಹಿಂದೆ ತನ್ನ ಹೆಬ್ಬೆರಳಿನ ಗುರುತುಗಳನ್ನು ಅವನ ಲೆಕ್ಕವಾಗಿ ಇಡುತ್ತಿದ್ದಳು. ಸಂಜೆಯಾಗುತ್ತಿದ್ದಂತೆ ಅವಳು ಮೆಲ್ಲನೆ ಚೌಕದಿಂದ ಸರಿಯುತ್ತಿದ್ದರೆ, ಅರೆಲಿಯಾನೊ ಅಪರಿಚಿತನಂತೆ ಮುಖ್ಯದ್ವಾರದ ಮೂಲಕ ಹೆಜ್ಜೆ ಹಾಕುತ್ತ ಅಮರಾಂತಾ ಉರ್ಸುಲಾಳನ್ನು, ಗ್ಯಾಸ್ಟನ್ನನ್ನು ಭೇಟಿಯಾಗದೆ ಮೆಲ್ಲಗೆ ನುಸುಳಿ ತನ್ನ ಕೋಣೆ ಸೇರುತ್ತಿದ್ದ. ಆ ಸಮಯದಲ್ಲಿ ಸಾಮಾನ್ಯವಾಗಿ ಅವರಿಬ್ಬರೂ ಊಟ ಮಾಡುತ್ತಿದ್ದರು. ಒಳಗೆ ರೂಮಿಗೆ ಹೋದರೂ ಅವನ ಮನಸ್ಸು ಸ್ತಿಮಿತದಲ್ಲಿ ಇರುತ್ತಿರಲಿಲ್ಲ. ಓದುವುದೂ ಸಾಧ್ಯವಿರಲಿಲ್ಲ. ಅವಳ ನಗು, ಪಿಸುಮಾತುಗಳು, ಅವಳ ಪ್ರಣಯ ಪಟ್ಟುಗಳು ಒಂದು ಬಗೆಯ ಆತಂಕ ಹುಟ್ಟಿಸುತ್ತಿತ್ತು. ಗ್ಯಾಸ್ಟನ್ ವಿಮಾನಕ್ಕಾಗಿ ಎದುರುನೋಡುತ್ತಿದ್ದ, ಎರಡು ವರ್ಷಗಳ ಮೊದಲು ಇವನ ಬದುಕಿನ ರೀತಿ ಇದಾಗಿತ್ತು. ಇದು ಹಾಗೆಯೇ ಮುಂದುವರೆದು ಒಂದು ದಿನ ಮಧ್ಯಾಹ್ನ ಜಾಣ ಕ್ಯಾಟಲೋನಿಯನ್ನನ ಪುಸ್ತಕದ ಅಂಗಡಿಗೆ ಹೋದ. ಅಲ್ಲಿ ಒಂದು ನಾಲ್ಕು ಹುಡುಗರು ಮಧ್ಯಯುಗದಲ್ಲಿ ಜಿರಲೆಗಳನ್ನು ಕೊಲ್ಲುವುದಕ್ಕಾಗಿ ಯಾವ ವಿಧಾನಗಳನ್ನು ಅನುಸರಿಸುತ್ತಿದ್ದರು ಎಂಬುದರ ಬಗ್ಗೆ ಬಿಸಿಬಿಸಿ ಚರ್ಚೆ ನಡೆಸಿದ್ದರು. ಈ ಹಳೆಯ ಪುಸ್ತಕದಂಗಡಿ ಮಾಲಿಕ ಅರೆಲಿಯಾನೊ ಪುಸ್ತಕ ಪ್ರೀತಿಯನ್ನು ಬಲ್ಲವನು, ಮತ್ತು ಗೌರವನೀಯವಾದ 'ಬೆಡೆ' ಓದಿದ ಪುಸ್ತಕಗಳನ್ನು ಓದುತ್ತಿದ್ದವನು ಇವನೊಬ್ಬನೇ ಆಗಿದ್ದ. ಆದ್ದರಿಂದ ಅವನೇ ಅರೆಲಿಯೊನನ್ನು ಈ ಚರ್ಚೆಯಲ್ಲಿ ಸೇರಿಕೊಳ್ಳಲು ಹೇಳಿದ. ಅರೆಲಿಯಾನೊ ಒಂದೇ ಉಸಿರಿನಲ್ಲಿ ವಿವರಿಸಿದ. ಜಿರಳೆ ಭೂಮಿಯ ಮೇಲೆ ರೆಕ್ಕೆ ಇರುವ ಕೀಟಗಳಲ್ಲೇ ಮೊದಲನೆಯದು. ಹಳೆಯ ಒಡಂಬಡಿಕೆಯಲ್ಲಿ ಇದು ಚಪ್ಪಲಿ ಕೆಳಗೆ ಸಿಕ್ಕು ಸತ್ತುದರ ಪ್ರಸ್ತಾಪವಿದೆ. ಆದರೆ ಈ ಜಾತಿಯ ಕೀಟ ಎಲ್ಲ ಬಗೆಯ ವಿನಾಶಕಾರಿ ವಿಧಾನಗಳಿಂದಲೂ ತಪ್ಪಿಸಿಕೊಂಡಿದೆ. ಸಕ್ಕರೆ, ಬೊರಾಕ್ಸ್ ಪುಡಿ ಹಾಕಿದ ಟೊಮೇಟೊ ತುಂಡುಗಳು ಅಲ್ಲದೆ ಅತ್ಯಂತ ಕ್ರೂರವೂ ನಿರ್ದಯವೂ ಆದ, ಮನುಷ್ಯ ಪ್ರಯತ್ನಗಳನ್ನೂ ಕೂಡಾ ತಡೆದುಕೊಂಡು ತನ್ನ ಸಂತಾನಾಭಿವೃದ್ಧಿಯನ್ನು ಮಾಡಿಕೊಳ್ಳುತ್ತಲೇ ಇದೆ. ಸುಮಾರು ಒಂದು ಸಾವಿರ ಆರುನೂರ ಜಿರಲೆ ಜಾತಿಗಳು, ಅತ್ಯಂತ ಪ್ರಾಚೀನ ವಿಧಾನಗಳನ್ನು ಮೆಟ್ಟಿ ಬದುಕಿವೆ. ಮನುಷ್ಯನಲ್ಲಿರುವಂತಹ ಸಂತಾನೋತ್ಪತ್ತಿ ಪ್ರವೃತ್ತಿಯೇ ಇವುಗಳಲ್ಲೂ ಇದೆ. ಅಂತೆಯೇ ಮನುಷ್ಯನಿಗೂ ಅವುಗಳನ್ನು ಕೊಲ್ಲುವ ಪ್ರವೃತ್ತಿಯೂ ಸಹಜವಾಗಿಯೇ ಬಂದಿದೆ. ಮನುಷ್ಯನ ಕ್ರೌರ್ಯದಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗಿರುವುದು ಅವು ನೆರಳಿನಲ್ಲಿ ಬದುಕುವುದನ್ನು ರೂಢಿಸಿಕೊಂಡಿರುವುದರಿಂದ, ಮನುಷ್ಯನಿಗೆ ಕತ್ತಲ ಹೆದರಿಕೆ ಇರುವುದರಿಂದ ಕತ್ತಲ ಮೂಲೆಗಳಂಥ ಸ್ಥಳಗಳು ಅವುಗಳಿಗೆ ಸುರಕ್ಷಿತವೆನಿಸಿತು. ಆದರೆ ದುರದೃಷ್ಟವೆಂದರೆ, ಮಧ್ಯಾಹ್ನದ ಬೆಳಕು, ಬಿಸಿಲು ಅವುಗಳಿಗೆ ಮಾರಕವಾಗಿ ಪರಿಣಮಿಸಿತು. ಆದ್ದರಿಂದ ಮಧ್ಯಯುಗದಲ್ಲಿ ಮತ್ತು ವರ್ತಮಾನದಲ್ಲಿ ಅವುಗಳನ್ನು ಕೊಲ್ಲಲು ಅತ್ಯಂತ ಪರಿಣಾಮಕಾರಿಯಾದ ವಿಧಾನ ಸೂರ್ಯನ ಬೆಳಕೊಂದೇ ಎಂಬುದು ನಿಶ್ಚಿತವಾಯಿತು.

ಇವನ ವಿವರಣೆ ವಿಶ್ವಕೋಶ ಜ್ಞಾನಕ್ಕೆ ಸಮಾನವಾದ್ದರಿಂದ, ಇದು ಅವರ ಸ್ನೇಹಕ್ಕೆ ದಾರಿಯಾಯಿತು. ಅಂದಿನಿಂದ ಮಧ್ಯಾಹ್ನಗಳಲ್ಲಿ ಈ ಗೆಳೆಯರು ಸೇರುತ್ತಿದ್ದರು. ಅಲ್ವಾರೊ, ಜರ್ಮನ್, ಆಲ್‌ಫಾನ್ಸೊ, ಗೇಬ್ರಿಯಲ್ ಹೆಸರಿನ ಈ ನಾಲ್ಕು ಜನ ಗೆಳೆಯರು ಮಾತ್ರವೇ, ಮೊದಲ ಮತ್ತು ಕಡೆಯತನಕದ ಗೆಳೆಯರಾಗಿದ್ದರು. ಯಾವಾಗಲೂ ಪುಸ್ತಕಗಳ ಜಗತ್ತಿನಲ್ಲಿ ಸೇರಿಕೊಂಡು ಬದುಕುತ್ತಿದ್ದ ಇಂಥ ಮನುಷ್ಯನಿಗೆ ಪುಸ್ತಕದಂಗಡಿಯಲ್ಲಿ ಪ್ರಾರಂಭವಾದ ರಭಸದ ಚರ್ಚೆಗಳು, ಬೆಳಿಗ್ಗೆ ಸೂಳೆಯರ ಮನೆಯಲ್ಲಿ ಮುಗಿಯುತ್ತಿದ್ದುದು ಒಂದು ರೀತಿಯಲ್ಲಿ ಹೊಸ ಅನುಭವ ಅರಿವನ್ನು ತಂದುಕೊಟ್ಟಿತು. ಒಂದು ದಿನ ಆಬೋದದ ಗುಂಗಿನಲ್ಲಿರುವಾಗ, ಜನರನ್ನು ತಮಾಶೆ ಮಾಡಲು ಪುಸ್ತಕಗಳೇ ಸರಿಯಾದ ಮಾಧ್ಯಮ ಎಂಬ ಸತ್ಯದ ಅರಿವಾದದ್ದು. ಅವನ ಗೆಳೆಯ ಅಲ್ವಾರೊ ಪ್ರತ್ಯಕ್ಷ ಅನುಭವಕ್ಕೆ ಬರುವಂತೆ ತೋರಿಸಿಕೊಟ್ಟಾಗಲೇ ಇಂಥ ಎಲ್ಲ ಆಲೋಚನೆಗಳಿಗೆ ಕ್ಯಾಟಲೋನಿಯನ್ನನ ಪುಸ್ತಕಗಳೇ ಮೂಲ. ಅವನಿಗೆ ಇವುಗಳ ಮೂಲಕ ಪಡೆದ ಬುದ್ಧಿವಂತಿಕೆ, ಜ್ಞಾನಗಳು ಹೊಸವಿಧಾನ, ಆಲೋಚನೆಗಳಿಗೆ ಸಹಕಾರಿಯಾಗದಿದ್ದರೆ ಅದೆಲ್ಲವೂ ವ್ಯರ್ಥ ಎಂಬುದು ಅವನ ಅಭಿಪ್ರಾಯವಾಗಿತ್ತು.

ಜಿರಳೆಗಳ ಮೇಲೆ ಭಾಷಣಮಾಡಿದ ಮಧ್ಯಾಹ್ನದ ಚರ್ಚೆ, ಮಕೊಂಡೊದ ಹೊರವಲಯದಲ್ಲಿ ಹಸಿವಿಗಾಗಿ ಸೂಳೆಗಾರಿಕೆ ಮಾಡುತ್ತಿದ್ದವಳ ಒಂದು ಮನೆಯಲ್ಲಿ ಕೊನೆಗೊಂಡಿತು. ಅದರ ಯಜಮಾನಿ ಬಾಗಿಲನ್ನು ಹಾಕುವ ತೆಗೆಯುವ ಕೆಟ್ಟ ಚಟಕ್ಕೆ ಒಳಗಾಗಿದ್ದಳು. ಯಾವಾಗಲೂ ನಗೆ ಮೊಗದವಳು. ಅವಳ ನಗೆಮೊಗಕ್ಕೆ ಕಾರಣ, ಅವಳಲ್ಲಿಗೆ ಬರುತ್ತಿದ್ದ ಗಿರಾಕಿಗಳು, ವಾಸ್ತವದಲ್ಲಿ ಯಾವ ಸೌಕರ್ಯಗಳು ಇಲ್ಲದೆ, ಕೇವಲ ಊಹೆಯಿಂದ ಮಾತ್ರವೇ ಸುಖಿಸುತ್ತ ಅವಳನ್ನು ಒಪ್ಪಿಕೊಂಡು ಬರುತ್ತಿದ್ದುದೇ ಆಗಿತ್ತು. ಉದಾಹರಣೆಗೆ ಮಂಚವಿದೆಯೆಂದು ಕುಳಿತುಕೊಂಡರೆ ಮಂಚವೇ ಮುರಿದು ಹೋಗುತ್ತಿತ್ತು. ಫೋನೋಗ್ರಾಫಿನಲ್ಲಿ ಕೋಳಿಯ ಗೂಡು ಇರುತ್ತಿತ್ತು. ಕೃತಕವಾದ ಹೂವುಗಳಿದ್ದವು. ಬನಾನಾ ಕಂಪನಿ ಬಂದಾಗಿನ ವರ್ಷಾನುಗಟ್ಟಲೆಯ ಹಿಂದಿನ ಕ್ಯಾಲೆಂಡರುಗಳು ನೇತಾಡುತ್ತಿದ್ದವು. ಪ್ರಕಟವೇ ಆಗಿರದಿದ್ದ ಮ್ಯಾಗಜೀನ್‌ಗಳಿಂದ ಕತ್ತರಿಸಿದ ಚಿತ್ರಗಳಿದ್ದ ಫ್ರೇಮುಗಳಿದ್ದವು. ಗಿರಾಕಿಗಳಿಗಾಗಿ ಅಕ್ಕಪಕ್ಕದೂರುಗಳಿಂದ ಹೆದರುಪುಕ್ಕಲು ಮತ್ತು ಚಿಕ್ಕವಯಸ್ಸಿನವರು ಆದ ಸೂಳೆಯರನ್ನು ಪತ್ತೆ ಹಚ್ಚಿ ತಂದದ್ದು ಅವಳೇ ಆಗಿದ್ದಳು. ಅವರಲ್ಲಿ ಯಾವುದೇ ರೀತಿಯ ಸಂತಸದ ಛಾಯೆ ಕಾಣಿಸದೆ ಕೇವಲ ಮುಗ್ಧತೆಯೊಂದೇ ಇದ್ದು, ಐದು ವರ್ಷ ವಯಸ್ಸಿನ ಹುಡುಗಿಯರಾಗಿದ್ದಾಗ ಧರಿಸುತ್ತಿದ್ದ ಸ್ಕರ್ಟುಗಳಲ್ಲಿಯೇ ಬಂದು ಅದೇ ಮುಗ್ಧತೆಯೊಂದಿಗೆ ಅವರ ಮುಂದೆ ಕಳಚುತ್ತಿದ್ದರು. ಪ್ರಣಯದಾವೇಶದಲ್ಲಿ 'ಓಹೋ ಹೊ ನೋಡಿ ಛಾವಣಿ ಹೇಗೆ ಬೀಳುತ್ತಿದೆ' ಎಂದು ಉದ್ಗರಿಸುತ್ತಿದ್ದರು. ಎಲ್ಲಾ ಆದ ಮೇಲೆ ಒಂದು ಪೆಸೊ ಐವತ್ತು ಸೆಂಟು ಕೈಗೆ ಬೀಳುತ್ತಿದ್ದಂತೆ ಯಜಮಾನಿಯೇ ಮಾರುತ್ತಿದ್ದ ಚೀಸ್‌ರೋಲ್ಸ್‌ಗಳನ್ನು ಕೊಳ್ಳುತ್ತಿದ್ದರು. ಆ ಯಜಮಾನಿ ಎಂದಿಗಿಂತ ಹೆಚ್ಚಾಗಿ ನಗುತ್ತಿದ್ದದ್ದು ಯಾಕೆಂದರೆ ಅವಳು ಕೊಟ್ಟ ಊಟ ನಿಜವಾದ ಊಟವಲ್ಲವೆಂಬುದು ಅವಳಿಗೆ ಮಾತ್ರವೇ ತಿಳಿದಿತ್ತು. ಆ ದಿನಗಳಲ್ಲಿ ಅರೆಲಿಯಾನೊ ಪ್ರಪಂಚ ಚರ್ಮಕಾಗದಗಳು ಮಾತ್ರವೇ ಆಗಿದ್ದದ್ದು, ನಿಗ್ರೊಮಾಂತಾಳ ಹಾಸಿಗೆಗೆ ಹೊರಳಿತು. ನಂತರ ಒಂದು ಮುಟ್ಟ ಸೂಳೆ

ಮನೆಯೇ ಹೆದರಿಕೆಯ ಕಾಯಿಲೆಗೆ ಸರಿಯಾದ ಪರಿಹಾರ ಎಂಬುದನ್ನು ಕಂಡುಕೊಂಡ. ಮೊದಲು ಅವನಿಗೆ ಏನು ಮಾಡಬೇಕೆಂದು ತೋಚುತ್ತಿರಲಿಲ್ಲ. ಒಳ್ಳೆಯ ರಸಗಳಿಗೆ ಕ್ಷಣಗಳಲ್ಲಿ ಮಾಲಿಕಳು ಇದ್ದಕ್ಕಿದ್ದಂತೆ ಒಳನುಗ್ಗಿ ಅತ್ಯಂತ ಸಾಮೀಪ್ಯದ ಸ್ವಾರಸ್ಯದ ಬಗ್ಗೆ ಏನೇನೊ ಹೇಳುತ್ತಿದ್ದಳು. ಆದರೆ ಅದು ಯಾವುದೂ ಅವನ ತಲೆಗೆ ಹೋಗುತ್ತಿರಲಿಲ್ಲ. ಆದರೆ ಸಮಯ ಕಳೆದಂತೆ ಅವನಿಗೆ ಪ್ರಪಂಚದ ದೌರ್ಭಾಗ್ಯದೊಂದಿಗೆ ಎಷ್ಟು ಪರಿಚಿತನಾದನೆಂದರೆ, ಒಂದು ರಾತ್ರಿ, ಒಂದು ಚಿಕ್ಕ ರಿಸೆಪ್ಷನ್ ರೂಮಿನಲ್ಲಿ ಅಸಮತೋಲಿಕ ಸ್ಥಿತಿಯಲ್ಲಿ, ಬಟ್ಟೆಗಳನ್ನೆಲ್ಲ ಕಳಚಿ ಮನೆತುಂಬಾ ಓಡಾಡಿ, ತನ್ನ ಪುರುಷಾಂಗದ ಮೇಲೆ ಬೀರನ್ನು ಸುರಿದುಕೊಂಡ. ಯಾವ ವಿರೋಧವೂ ಇಲ್ಲದೆ, ನಂಬಿಕೆಯೂ ಇರದೆ, ಒಡತಿಯ ಮುಖದ ಮೇಲಿನ ನಿರಂತರ ಜೀವಂತವಾಗಿರುವ ನಗುವನ್ನು, ಜರ್ಮನ್ ಮನೆಯ ಅಸ್ತಿತ್ವವೇ ಇಲ್ಲದೆ ಸುಟ್ಟು ಹಾಕಿದಂತೆ, ಅಲ್‌ಫಾನ್ಸೋ ಕುದಿಯುತ್ತಿದ್ದ ಕೋಳಿ ಸಾರಿನಲ್ಲಿ ಕತ್ತು ಹಿಸುಕಿ ಗಿಣಿಯನ್ನು ಹಾಕಿದಂತೆ, ಇವನೂ ತನ್ನ ರೀತಿಯಲ್ಲಿ ಸಂಭ್ರಮಿಸಿದ.

ಅರೆಲಿಯಾನೊ ಸ್ನೇಹ ನಾಲ್ಕೂ ಜನರ ಜೊತೆಗೆ ಒಂದೇ ಸೂತ್ರದಿಂದ ಬಂಧಿಸಿದೆ ಎಂಬಂತೆ ಇದ್ದರೂ, ಗೇಬ್ರಿಯಲ್ ಎಂಬ ಗೆಳೆಯನನ್ನು ಬೇರೆಯವರಿಗಿಂತ ಸ್ವಲ್ಪ ಹತ್ತಿರವಾಗಿಸಿಕೊಂಡಿದ್ದ. ಒಮ್ಮೆ ಅವನು ಒಂದು ರಾತ್ರಿ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಬಗ್ಗೆ ಲೋಕಾಭಿರಾಮವಾಗಿ ಮಾತಾಡುವಾಗ, ಗೇಬ್ರಿಯಲ್ ಒಬ್ಬ ಮಾತ್ರವೇ ಯಾರನ್ನೂ ತಮಾಶೆ ಮಾಡುತ್ತಿಲ್ಲ ಎಂದುಕೊಂಡವನಾಗಿದ್ದ ಕಾರಣ ಅವನ ಬಗ್ಗೆ ಹೆಚ್ಚು ಆಕರ್ಷಿತನಾದ. ಸಾಮಾನ್ಯವಾಗಿ ತಮ್ಮ ಚರ್ಚೆಗಳಲ್ಲಿ ಸಂಭಾಷಣೆಗಳಲ್ಲಿ ಭಾಗವಹಿಸದೆ ಇದ್ದ ಒಡತಿ ಕೂಡಾ, ಅಂದು ಆವೇಶದಿಂದ, ಕರ್ನಲ್ ಅರೆಲಿಯಾನೊ ಬ್ಯುಂಡಿಯಾ, ಲಿಬರಲ್‌ಗಳ ಕೊಲೆ ಮಾಡಲು ಸರಕಾರ ನೆಪವಾಗಿ ಸೃಷ್ಟಿಸಿಕೊಂಡಿದ್ದ ವ್ಯಕ್ತಿ ಮಾತ್ರವಾಗಿದ್ದನೇ ಹೊರತು, ನಿಜವಾಗಿದ್ದವನಲ್ಲ ಎಂದು ವಾದಿಸಿದಳು. ಆದರೆ ಗೇಬ್ರಿಯಲ್‌ಗೆ ಅರೆಲಿಯಾನೊ ಹೇಳಿದ್ದು ಸತ್ಯವಾದದ್ದೆಂದೆನಿಸಿತು. ಯಾಕೆಂದರೆ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ತನ್ನ ಮುತ್ತಜ್ಜನ ತಂದೆಯಾಗಿದ್ದ ಕರ್ನಲ್, ಜೆರಿನೆಲ್ಡೊ ಮಾರ್ಕ್ವೆಜ್‌ನ ಬಹಳ ಆತ್ಮೀಯ ಗೆಳೆಯನಾಗಿದ್ದ. ನೆನಪಿನ ಅಸ್ಪಷ್ಟ ಕಲ್ಪನೆಗಳು, ಕಾರ್ಮಿಕರ ಕೊಲೆಗೆ ಸಂಬಂಧಿಸಿದ್ದಾರೆ ಮತ್ತಷ್ಟು ಟೀಕೆಗೆ ಒಳಗಾಗುತ್ತದೆ. ಅರೆಲಿಯಾನೊ ಈ ಮಾತನ್ನು ಪ್ರಸ್ತಾಪಿಸಿದಾಗ ಪ್ರತಿಸಲವೂ, ಒಡತಿಗಿಂತ ಹಿರಿಯ ವಯಸ್ಸಿನವರೂ ಕೂಡಾ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಕಾರ್ಮಿಕರ ಕೊಲೆ, ಅಲ್ಲದೆ ಟ್ರೈನ್‌ನ ಬೋಗಿಗಳಲ್ಲಿ ತುಂಬಿ ಸಾವಿರಾರು ಮಂದಿಯ ಶವಗಳನ್ನು ಸಮುದ್ರಕ್ಕೆ ಎಸೆದದ್ದು ಎಲ್ಲವೂ ಕಟ್ಟುಕತೆಯೆಂದೇ ಹೇಳಿದ್ದಲ್ಲದೆ, ಬನಾನಾ ಕಂಪನಿ ಇದ್ದದ್ದನ್ನೇ ನಿರಾಕರಿಸಿದರು. ಇದರಿಂದಾಗಿ ಇವರಿಬ್ಬರೂ ವಾಸ್ತವ ಸತ್ಯಗಳನ್ನು ನಂಬಿ ಬದುಕಿದ್ದಲ್ಲದೆ, ಇವರ ಬದುಕಿನಲ್ಲಿ ಎಷ್ಟು ಪ್ರಭಾವವಾಯಿತೆಂದರೆ, ಪ್ರಪಂಚದ ಸಾಮಾನ್ಯ ರೀತಿಗಳಿಗಿಂತ ಭಿನ್ನವಾಗಿ, ದೂರವಾಗಿ, ಕೇವಲ ನೆನಪುಗಳಷ್ಟನೆ ಉಳಿಸಿಕೊಂಡರು. ಗೇಬ್ರಿಯಲ್ ಅವಕಾಶವಾದಾಗ ಎಲ್ಲಂದರಲ್ಲಿ ಮಲಗುತ್ತಿದ್ದ. ಅರೆಲಿಯಾನೊ ಒಮ್ಮೊಮ್ಮೆ ಸಿಲ್ವರ್ ವರ್ಕ್‌ಷಾಪಿನಲ್ಲಿ ಮಲಗಲು ಅವಕಾಶ ಕೊಡುತ್ತಿದ್ದ. ಆದರೆ ತಾನು ಮಾತ್ರ ಬೆಡ್‌ರೂಮುಗಳಲ್ಲಿ ಓಡಾಡುತ್ತಿದ್ದ. ಪ್ರೇತಾತ್ಮಗಳ ಸದ್ದಿನಿಂದ ಬೆಳಗಿನವರೆಗೆ ಎಚ್ಚೆತ್ತಿರುತ್ತಿದ್ದ. ನಂತರ ಅವನನ್ನು ನಿಗ್ರೊಮಾಂತಾ ಬಳಿಗೆ

ಕಳಿಸಿದ. ಅವಳು ಅವನನ್ನು ತನ್ನ ರೂಮಿಗೆ ಸೇರಿಸಿಕೊಂಡಳು. ಅರೆಲಿಯಾನೊನ ಸಾಲದ ಲೆಕ್ಕಗಳನ್ನು ಗುರುತುಮಾಡುತ್ತಿದ್ದ ಬಾಗಿಲಿನ ಹಿಂದೆ ಇದ್ದ ಲೆಕ್ಕದ ನಡುವೆ ಖಾಲಿಯಿದ್ದ ಜಾಗಗಳಲ್ಲಿ ಉದ್ದೆಗೆರೆ ಎಳೆದು ಇವನ ಸಾಲದ ಲೆಕ್ಕವನ್ನು ಶುರುಮಾಡಿದಳು.

ಅವರ ಅಸ್ತವ್ಯಸ್ತ ಬದುಕಿನ ನಡುವೆಯೇ, ಬುದ್ಧಿವಂತ ಕ್ಯಾಟಲೋನಿಯನ್ನನ ಸಲಹೆಯಂತೆ ಏನಾದರೂ ಶಾಶ್ವತವಾದ ಕೆಲಸವನ್ನು ಮಾಡಲು ಪ್ರಯತ್ನಿಸುತ್ತಿದ್ದರು. ಹಿಂದೆ ಕ್ಲಾಸಿಕಲ್ ಲಿಟರೇಚರ್ ಪ್ರೊಫೆಸರ್ ಆಗಿದ್ದು ಗಳಿಸಿದ ಅನುಭವವಿದ್ದು, ಅಪರೂಪದ ಅಮೂಲ್ಯ ಪುಸ್ತಕಗಳ ಸಂಗ್ರಹ ಹೊಂದಿದ್ದ ಈತ ಅವರಿಗೆ ಪ್ರೈಮರಿ ವಿದ್ಯಾಭ್ಯಾಸದ ಹೊರತು ಬೇರೇನೂ ಓದದ್ದೆ ಇದ್ದ ಒಂದು ಊರಿನಲ್ಲಿನ ಮೂವತ್ತೇಳನೆ ನಾಟಕೀಯ ಸನ್ನಿವೇಶವನ್ನು ಶೋಧಿಸುವಂತೆ ಹೇಳಿದ. ಸ್ನೇಹದ ಸೆಳೆತ, ಫರ್ನಾಂಡಾಳಿಂದಾಗಿ, ಪ್ರಪಂಚದ ಅದ್ಭುತ ಮೋಹಕ ಶಕ್ತಿಯ ಬೆರಗಿನಿಂದಾಗಿ ಚರ್ಮಕಾಗದಗಳ ಅನುಸಂಧಾನವನ್ನು ಬದಿಗಿರಿಸಿ, ಕಾವ್ಯದಲ್ಲಿನ ಸಾಂಕೇತಿಕ ಸಾಲುಗಳು ಭವಿಷ್ಯವನ್ನು ಹೊರಗೆಡಹುವಂತೆ ತಮ್ಮನ್ನೂ ತೆರೆದಿಡುವುದಕ್ಕೆ ಪ್ರಯತ್ನಿಸಿದರು. ಸೂಳೆ ಮನೆಗೆ ಹೋಗುವುದನ್ನು ಬಿಡದೆಯೇ ಎಲ್ಲ ಕೆಲಸಗಳಿಗೂ ಸಮಯವಿದೆ ಎಂದು ಕಂಡುಕೊಂಡಿದ್ದ ಮೆಲ್‌ಕಿಯಾಡ್ಸ್‌ನ ಕೋಣೆಗೆ ಹೋಗಬೇಕೆನಿಸಿತು. ಏನಾದರಾಗಲಿ, ಕಡೆಯ ಸೂತ್ರಗಳು ದಕ್ಕುವವರೆಗೆ ಪ್ರಯತ್ನವನ್ನು ನಿಲ್ಲಿಸಬಾರದೆಂದುಕೊಂಡ. ಅದೇ ಹೊತ್ತಿನಲ್ಲಿ ಗ್ಯಾಸ್ಟನ್ ವಿಮಾನಕ್ಕಾಗಿ ಎದುರು ನೋಡುತ್ತಿದ್ದ. ಅಮರಾಂತಾ ಉರ್ಸುಲಾ ಒಂಟಿತನದಿಂದ ಬೇಸತ್ತು, ಒಂದು ದಿನ ಬೆಳಿಗ್ಗೆ ಮೆಲ್‌ಕಿಯಾಡ್ಸ್ ರೂಮಿನಲ್ಲಿ ಕಾಣಿಸಿಕೊಂಡಳು.

"ಹಲೊ ಕ್ಯಾನಿಬಾಲ್, ಮತ್ತೆ ಗುಹೆಗೆ ಬಂದು ಬಿಟ್ಟೆಯೇನು" – ಎಂದು ಅವನನ್ನು ಕೇಳಿದಳು.

ಅವಳೆ ಡಿಸೈನ್ ಮಾಡಿದ ಡ್ರಸ್ಸ್, ಉದ್ದನೆಯ ನೆಕ್‌ಲೇಸು, ಅವಳಿಗೆ ತುಂಬಾ ಚೆನ್ನಾಗಿ ಒಪ್ಪುತ್ತಿತ್ತು. ಗಂಡನ ಪ್ರಾಮಾಣಿಕತೆ ನಂಬಿಕೆ ಹುಟ್ಟಿಸಿದ್ದರಿಂದ ಅವನನ್ನು ಕೊರಳ ಪಟ್ಟಿಯಿಂದ ಮುಕ್ತಗೊಳಿಸಿದ್ದಳು. ಅವಳು ಹಿಂತಿರುಗಿ ಬಂದಾಗಿನಿಂದ ಈಗಷ್ಟೇ ಸ್ವಲ್ಪ ಬಿಡುವು ಸಿಕ್ಕಂತಾಗಿತ್ತು. ಮೇಜಿನ ಮೇಲೆ ಮೊಣಕೈಗಳನ್ನಿರಿಸಿ ಅವನಿಗೆ ತೀರಾ ತೀರಾ ಹತ್ತಿರವಿದ್ದು, ಅರೆಲಿಯಾನೊಗೆ ಅವಳ ಮೂಳೆಗಳ ಸದ್ದೂ ಕೇಳಿಸುವಂತಿತ್ತು. ಅವಳಿಗೂ ಚರ್ಮಕಾಗದಗಳಲ್ಲಿ ಆಸಕ್ತಿ ಮೂಡಿತು. ಅವನಿಗೆ ಉಂಟಾದ ಅಡಚಣೆಯನ್ನು ಮರೆಯಲು, ಉಡುಗಿಹೋಗಿದ್ದ ಧ್ವನಿಯನ್ನು ಎಬ್ಬಿಸಲು ಆರಂಭಿಸಿದ. ಹಾಗೆಯೇ ಹವಳದ ಹುಳುವಾಗಿ ತೆವಳುತ್ತಿದ್ದ ನೆನಪನ್ನು ಬಿಗಿಹಿಡಿದು, ಅವಳೊಂದಿಗೆ ಮಾತು ಆರಂಭಿಸಿದ. ಸಂಸ್ಕೃತದ ಔನ್ನತ್ಯದ ಬಗ್ಗೆ, ಕಾಗದದಲ್ಲಿ ಬರೆದದ್ದನ್ನು ನಿಚ್ಚ ಬೆಳಕಿನಲ್ಲಿ ಏನೆಂದು ನೋಡಬಹುದಾದಂತೆ, ಕಾಲದ ಚಲನೆಯಲ್ಲಿಯೂ ವೈಜ್ಞಾನಿಕವಾದ ರೀತಿಯಲ್ಲಿ ಭವಿಷ್ಯವನ್ನು ಕಾಣುವ ಸಾಧ್ಯತೆ ಇದೆಯೆಂಬುದನ್ನು, ಭವಿಷ್ಯ ಸೂಚಕಗಳನ್ನು, ವಿಶ್ಲೇಷಿಸುವುದರ ಬಗ್ಗೆ ನಾಸ್ಟ್ರಡಾಮಸ್ ಶತಮಾನಗಳ ಬಗ್ಗೆ ಸಂತ ಮಿಲಾನಸ್ ನುಡಿದ ಭವಿಷ್ಯದಂತೆ ಕಾಂಟಾಬ್ರಿಯ ವಿನಾಶದ ಬಗ್ಗೆ – ಎಲ್ಲವನ್ನೂ ತಿಳಿಸಿದ. ಹೀಗೆಲ್ಲ ತಿಳಿಸುತ್ತ, ಮಾತನಾಡುತ್ತ ಮಧ್ಯೆ ಯಾವುದೇ ಅಡಚನೆ ಇಲ್ಲದೆ ಮುಂದುವರೆದ. ಮಾತಿನ ಮಧ್ಯೆ

ಅರೆಲಿಯಾನೊ ತನ್ನ ಅನುಮಾನಗಳನ್ನು ಮುಗಿಸುವ ಕಡೆಯ ನಿರ್ಧಾರವನ್ನು ತೆಗೆದುಕೊಳ್ಳುವ ಸಾಧ್ಯತೆಯನ್ನು ಯೋಚಿಸಿ, ಅವನಿಗರಿವಿಲ್ಲದಂತೆಯೇ ಯಾವುದೋ ಅಂತಃ ಪ್ರೇರಣೆಯಿಂದ ಅವನು ತನ್ನ ಕೈಯನ್ನು ಅವಳ ಕೈಮೇಲಿರಿಸಿದ. ಕೂಡಲೆ ಪ್ರೀತಿಯಿಂದ ಮತ್ತು ಬಾಲ್ಯದಲ್ಲಿನ ಮುಗ್ಧತೆಯಿಂದ ಅವನ ತೋರು ಬೆರಳನ್ನು, ಅವನು ಪ್ರಶ್ನೆಗಳಿಗೆ ಉತ್ತರ ಹೇಳುತ್ತಿದ್ದಾಗ ಹಿಡಿದುಕೊಂಡೇ ಇದ್ದಳು. ಹಾಗೆ ಹಿಡಿದುಕೊಂಡೇ ಯಾವುದೋ ಸಂವೇದನೆ, ಸ್ಪಂದನೆಗಳಿಲ್ಲದೆ ಎಷ್ಟೊ ಹೊತ್ತು ಕಳೆದರು. ಥಟ್ಟನೆ ಕನಸಿನಿಂದ ಎಚ್ಚೆತ್ತವಳಂತೆ ಅಮರಾಂತಾ ಹಣೆ ಚಚ್ಚಿಕೊಳ್ಳುತ್ತಾ 'ಅಯ್ಯೋ ಇರುವೆಗಳು!" ಎಂದು ಉದ್ಗರಿಸಿದಳು. ಮತ್ತೆ ಚರ್ಮಕಾಗದಗಳ ಬಗ್ಗೆ ಮರೆತು, ನೃತ್ಯದ ಹೆಜ್ಜೆಯೊಂದಿಗೆ ಅಲ್ಲಿಂದ ಎದ್ದು ಹೋದಳು. ಅಲ್ಲಿಂದಲೇ ಅರೆಲಿಯಾನೊನತ್ತ, ತನ್ನ ಬೆರಳ ತುದಿಯಿಂದ ಮುತ್ತುಗಳನ್ನು ಅವನತ್ತ ಎಸೆದಳು. ಬ್ರಸೆಲ್‌ಗೆ ಹೋಗುವ ಮುನ್ನ ತಂದೆಗೆ ಗುಡ್ ಬೈ ಹೇಳುವಾಗಿನ ರೀತಿಯಲ್ಲಿಯೇ ಅರೆಲಿಯಾನೊಗೆ ಮುತ್ತನ್ನು ತಲುಪಿಸಿದ್ದಳು.

"ನೀನು ಆಮೇಲೆ ಹೇಳು, ಇವತ್ತು ನನಗೆ, ಇರುವೆಗಳ ಗೂಡಿನ ಮೇಲೆ ಸುಣ್ಣ ಸಿಂಪಡಿಸಬೇಕಾಗಿದ್ದುದನ್ನು ಮರೆತಿದ್ದೆ" ಎಂದಳು.

ಅವಳು ಆಗಾಗ ಅವನ ರೂಮಿಗೆ ಹೋಗುವುದನ್ನು ಮುಂದುವರೆಸಿದಳು. ಆ ಕಡೆ ಏನಾದರೂ ಕೆಲಸ ಇದ್ದಾಗಲೆಲ್ಲ ಹೋಗುತ್ತಿದ್ದಳು. ಗ್ಯಾಸ್ಟನ್ ಆಕಾಶ ನೋಡುವುದದರಲ್ಲೇ ಮಗ್ನನಾಗಿರುತ್ತಿದ್ದ. ಅಮರಾಂತಾ ಉರ್ಸುಲಾ ಹಿಂತಿರುಗಿ ಬಂದಾಗಿನಿಂದ ಕುಟುಂಬದ ಜೊತೆ ಕುಳಿತು ಊಟ ಮಾಡದಿದ್ದ ಅರೆಲಿಯಾನೊ ಈಗ ಜೊತೆಯಲ್ಲಿಯೇ ಊಟ ಮಾಡುತ್ತಿದ್ದ. ಗ್ಯಾಸ್ಟನ್‌ಗೆ ಇದರಿಂದ ಸಂತೋಷವಾಯಿತು. ಊಟ ಆದ ಮೇಲೆ ಸುಮಾರು ಒಂದು ಗಂಟೆ ಹೊತ್ತು ಕುಳಿತು ಮಾತಾಡುತ್ತಿದ್ದಾಗ, ಗ್ಯಾಸ್ಟನ್ ತನ್ನ ಪಾಲುದಾರರು ತನಗೆ ಮೋಸ ಮಾಡುತ್ತಿದ್ದಾರೆ ಎಂದು ತಿಳಿಸಿದ. ಅವರೇನೊ ವಿಮಾನವನ್ನು ಹಡಗಿನಲ್ಲಿ ಕಳಿಸಿದ್ದೇವೆ ಎಂದು ಹೇಳಿದರಾದರೂ ಅದು ಬರಲಿಲ್ಲ. ಅದರ ಷಿಪ್ಪಿಂಗ್ ಏಜಂಟರು ಕ್ಯಾರಿಬಿಯನ್ ಹಡಗುಗಳ ಪಟ್ಟಿಯಲ್ಲಿ ಅದು ಇಲ್ಲವೆಂದು ಹೇಳಿದರು. ಆದರೆ ಪಾಲುದಾರರು ತಾವು ಕಳಿಸಿರುವುದು ನಿಜವೆಂದೇ ವಾದಿಸುತ್ತಿದ್ದರು. ಅಲ್ಲದೆ ಗ್ಯಾಸ್ಟನ್ ಸುಳ್ಳು ಹೇಳುತ್ತಿದ್ದಾರೆಂದು ಪ್ರತಿಆರೋಪ ಮಾಡಿದರು. ಪತ್ರವ್ಯವಹಾರ ಪರಸ್ಪರ ಸಂಶಯದ ಯಾವ ಮಟ್ಟ ತಲುಪಿತೆಂದರೆ, ಗ್ಯಾಸ್ಟನ್ ಪತ್ರ ಬರೆಯುವುದನ್ನು ನಿಲ್ಲಿಸಿ, ಖುದ್ದಾಗಿ ಬ್ರಸ್ಸೆಲ್‌ಗೆ ಹೋಗಿ ವಿಷಯ ಏನೆಂದು ತಿಳಿದುಕೊಂಡು ಏರ್‌ಪ್ಲೇನನ್ನು ತಾನೇ ತೆಗೆದುಕೊಂಡು ಬರುವುದಾಗಿ ತೀರ್ಮಾನಿಸಿದ. ಆದರೆ ಆ ಯೋಚನೆಯನ್ನು ಅಮರಾಂತಾ ಉರ್ಸುಲಾ ಗಂಡನನ್ನು ಬಿಟ್ಟು ಬೇಕಾದರೆ ಇರಬಲ್ಲೆ, ಮಕೊಂಡೊ ಬಿಡುವುದಿಲ್ಲವೆಂದು ಹಟಮಾಡಿದ್ದರಿಂದ, ಅಲ್ಲಿಗೇ ನಿಂತು ಹೋಯಿತು, ಮೊದಲ ದಿನಗಳಲ್ಲಿ ಅರೆಲಿಯಾನೊ ಎಲ್ಲರೂ ಭಾವಿಸಿದ್ದ ಹಾಗೆಯೇ ಗ್ಯಾಸ್ಟನ್‌ನನ್ನು ಮುರಿದ ಮೋಟರು ವಾಹನದ ಮೂರ್ಖನೆಂದೇ ನಂಬಿದ್ದ. ಜೊತೆಗೆ ಇದರಿಂದಾಗಿ ಅವನ ಬಗ್ಗೆ ಅಯ್ಯೊ ಎಂದು ಮರುಕಪಟ್ಟ. ನಂತರ ಸೂಳೆಯರ ಮನೆಗಳಲ್ಲಿ ಗಂಡಸರ ಸ್ವಭಾವದ ಬಗ್ಗೆ ಸಾಕಷ್ಟು ಮಾಹಿತಿಯನ್ನು ಪಡೆದ. ಆಗ ಅವನಿಗೆ ಗ್ಯಾಸ್ಟನ್‌ನ್ನನ ಸಾಧು ಸ್ವಭಾವಕ್ಕೆ ಕಾರಣ

ಅನಿಯಂತ್ರಿತವಾದ ವ್ಯಾಮೋಹವೆಂದು ಅರಿತ. ಅವನನ್ನು ಹತ್ತಿರದಿಂದ ಗಮನಿಸಿದ ಮೇಲೆ ಅರೆಲಿಯಾನೊಗೆ ಅನುಮಾನ ಬಂತು. ಅವನು ಹೊರಗಿಂದ ಎಷ್ಟು ವಿನಮ್ರನಾಗಿ ಕಾಣಿಸುತ್ತಾನೊ ನಿಜಕ್ಕೂ ಅವನು ಅದಕ್ಕೆ ತದ್ವಿರುದ್ಧವಿದ್ದ. ಇದರಿಂದಾಗಿ ಏರ್‌ಪ್ಲೇನ್ ವಿಚಾರವೂ ಸುಳ್ಳಿನ ಕಂತೆ ಇರಬಹುದೆಂದು ಅನುಮಾನಿಸಿದ. ನಂತರ ಅವನು ಮೂರ್ಖನಂತಲ್ಲ. ಅಪಾರವಾದ ದೃಢತೆಯುಳ್ಳವನು, ಸಾಮರ್ಥ್ಯ, ಸಹನೆಗಳನ್ನು ಹೊಂದಿದವನು, ಅವನ ಮತ್ತು ಅಮರಾಂತಾ ಉರ್ಸುಲಾಳ ನಡುವಿನ ಒಪ್ಪಂದದಂತೆ, ಅವಳಿಗಾಗಿ ಜೀವನಪರ್ಯಂತ ಕಾಯುವುದಕ್ಕೂ ಸಿದ್ಧವಾಗಿದ್ದವನು, ಅವಳನ್ನು ಅವಳ ಪಾಡಿಗೆ ಇರಲು ಬಿಟ್ಟು, ಒಂದಲ್ಲ ಒಂದು ದಿನ ಇಲ್ಲಿನ ಬದುಕಿಗೆ ಬೇಸತ್ತು ತಾನಾಗಿ ಗಂಟುಮೂಟೆ ಕಟ್ಟಿಕೊಂಡು ಯುರೋಪಿಗೆ ಹೊರಡು ಸಿದ್ಧವಾಗುತ್ತಾಳೆ ಎಂದು ನಂಬಿಕುಳಿತಿರುತ್ತಾನೆ, ಎಂದು ಅರ್ಥಮಾಡಿಕೊಂಡ. ಗ್ಯಾಸ್ಟನ್ನನ ಮೇಲೆ ಅರೆಲಿಯಾನೊ ಮೊದಲು ತೋರಿದ್ದ ಮರುಕ ಈಗ ಅವನನ್ನು ಇಷ್ಟಪಡದಂತೆ ಮಾಡಿತು. ಗ್ಯಾಸ್ಟನ್ನನ ರೀತಿ ವ್ಯತಿರಿಕ್ತದ್ದಾಗಿತ್ತು. ಮತ್ತು ಅದು ಹೆಚ್ಚು ಪರಿಣಾಮಕಾರಿಯಾಗಿ ಆಗಿತ್ತು. ಅವನು ಅಮರಾಂತಾ ಉರ್ಸುಲಾಗೆ ಎಚ್ಚರಿಕೆ ನೀಡಿದ. ಅವಳು ಅವನ ಅನುಮಾನವನ್ನು, ಅವನ ಒಳಗಿನ ಪ್ರೀತಿ, ಈರ್ಷೆಗಳನ್ನು ಅರಿಯದೆ, ವಿನಾಕಾರಣವೆಂದು ನಿರ್ಲಕ್ಷಿಸಿಬಿಟ್ಟಳು. ಸೋದರ ಪ್ರೀತಿಗಿಂತ ಬೇರೆಯಾದ ರೀತಿಯ ಪ್ರೀತಿ ಇದ್ದುದು ಅವಳ ಗಮನಕ್ಕೆ ಬಂದುದು, ಒಮ್ಮೆ ಅವಳು ಪೀಚ್‌ಗಳು ಇದ್ದ ಡಬ್ಬದ ಮುಚ್ಚಳವನ್ನು ತೆಗೆಯುವಾಗ ಕೈಗೆ ಚುಚ್ಚಿಕೊಂಡು ರಕ್ತ ಬರುತ್ತಿದ್ದಂತೆ ಅರೆಲಿಯಾನೊ ಓಡಿಬಂದು ಬಾಯಲ್ಲಿ ಅದನ್ನು ಹೀರಿಕೊಂಡಾಗಷ್ಟೆ ತಿಳಿಯಿತು. ಆ ಕ್ಷಣದಲ್ಲಿ ಅವಳ ಬೆನ್ನುಹುರಿಯಲ್ಲಿಯೂ ಸಣ್ಣ ನಡುಕ ಸೃಷ್ಟಿಯಾಯಿತು.

"ಅರೆಲಿಯಾನೊ, ನೀನೊಬ್ಬ ಸಂಶಯ ಪಿಶಾಚಿ!" ಎಂದು ನಗುತ್ತ ಹೇಳಿದಳು.

ನಂತರ, ಅರೆಲಿಯಾನೊ ಅಮರಾಂತಾ ಉರ್ಸುಲಾಳ ಕೈಯಲ್ಲಿ ಗಾಯವಾಗಿದ್ದ ಜಾಗದಲ್ಲಿ ಸಣ್ಣದಾಗಿ ಮುತ್ತಿಟ್ಟ. ತನ್ನ ಹೃದಯದಲ್ಲಿ ಅಡಗಿದ್ದ ಮಾರ್ಗಗಳನ್ನು ತೆರೆದಿರಿಸಿದ. ಅದುಮಿಟ್ಟುಕೊಂಡಿದ್ದ ನೋವನ್ನು ಹೊರಚೆಲ್ಲಿದ. ಹುತಾತ್ಮತೆಯಲ್ಲಿ ಕಾವು ಪಡೆದ ಪರಾವಲಂಬಿ ಪ್ರಾಣಿಯನ್ನು ಹೊರಗೆ ಬಿಟ್ಟ. ಮಧ್ಯರಾತ್ರಿಯಲ್ಲಿ ಎದ್ದು ತಾನೆಷ್ಟು ಅತ್ತಿದ್ದೇನೆ, ಬಚ್ಚಲು ಮನೆಯಲ್ಲಿ ಒಣಗಲು ಹಾಕಿದ ಒಳ ಉಡುಪನ್ನು ನೋಡಿ ಎಷ್ಟು ಸಿಟ್ಟುಗೊಂಡಿದ್ದೇನೆ, ಎಂದೆಲ್ಲ ಅವಳಿಗೆ ಹೇಳಿದ. ಎಷ್ಟೊಂದು ಆವೇಶದಿಂದ ನಿಗ್ರೊಮಾಂತಾಳನ್ನು ಬೆಕ್ಕಿನ ಹಾಗೆ ಕೂಗಲು ತನ್ನ ಕಿವಿಯಲ್ಲಿ ಗ್ಯಾಸ್ಟನ್, ಗ್ಯಾಸ್ಟನ್ ಎಂದು ಬಿಕ್ಕುವಂತೆ ಹೇಳಿದ್ದನ್ನೂ ಅವಳಿಗೆ ತಿಳಿಸಿದ. ಅದೇ ರೋಷದಿಂದ ಅವಳ ಗಂಧದ ಬಾಟಲುಗಳನ್ನು ಒಡೆದುಹಾಕಿ ಪುಟ್ಟ ಸೂಳೆಯರ ಕತ್ತಿನ ಮೇಲೆ ಹಾಕಿ ಸುಗಂಧವನ್ನು ಆಘ್ರಾದಿಸಿದ್ದನ್ನೂ ಹೇಳಿದ. ಅವನ ಭಾವೋದ್ರೇಕಕ್ಕೆ ಬೆದರಿದ ಅಮರಾಂತಾ ಉರ್ಸುಲಾ ತನ್ನ ಬೆರಳುಗಳನ್ನು ಚಿಪ್ಪು ಮೀನಿನಂತೆ ಮಡಚಿ, ನೋವು ಮರುಕಗಳು ಕರಗುವವರೆಗೆ ಇದ್ದು ಮತ್ತೆ ಅದೇ ಭಾವನೆಗಳು ಮರುಕಳಿಸಿ ಪಚ್ಚೆ ಗೋಮೇದಕದಿಂದ ಕೂಡಿದ ಸೆಟೆದ ಕೈಯಾಯಿತು.

"ಮೂರ್ಖ! ನಾನು ಬೆಲ್ಜಿಯಂಗೆ ಹೋಗುವ ಮೊದಲ ಹಡಗಿನಲ್ಲಿ ಹೋಗುತ್ತೇನೆ" ಎಂದು ಥೂಕರಿಸಿ ಬೈದು ಹೇಳಿದಳು.

ಒಂದು ದಿನ ಮಧ್ಯಾಹ್ನ ಆಲ್ವಾರೊ ಕ್ಯಾಟಲೋನಿಯನ್ನನ ಪುಸ್ತಕದ ಅಂಗಡಿಗೆ, "ಪ್ರಾಣಿಗಳ ವೇಶ್ಯಾಗೃಹ" ಎಂದು ತಾನು ಹೊಸದಾಗಿ ಕಂಡುಹಿಡಿದದ್ದನ್ನು ಘೋಷಿಸುತ್ತಾ ಬಂದ. ಅದನ್ನು ಬಂಗಾರದ ಮಗು ಎಂದು ಕರೆಯಲಾಗಿತ್ತು. ಅದೊಂದು ದೊಡ್ಡದಾದ ಬಯಲು ಪ್ರದೇಶವಾಗಿತ್ತು. ಅದನ್ನು ಇನ್ನೂರಕ್ಕೂ ಕಡಿಮೆಯಿಲ್ಲದ ಸಂಖ್ಯೆಯಲ್ಲಿ ಜೌಗುಪ್ರದೇಶದ ಪಕ್ಷಿಗಳು ಕಲರವದೊಂದಿಗೆ ಸಮಯವನ್ನು ಸೂಚಿಸುತ್ತ ಹಾಡುಹೋಗುತ್ತಿದ್ದವು. ಡಾನ್ಸ್‌ಹಾಲನ್ನು ಸುತ್ತುವರೆದಿದ್ದ ತಂತಿಯ ಬೇಲಿಯೊಳಗೆ ಅಮೆಜಾನಿನ ಉಷ್ಣಪಕ್ಷಿಗಳು, ಅನೇಕ ಬಣ್ಣ ಬಣ್ಣದ ಕ್ರೌಂಚ ಪಕ್ಷಿಗಳು, ಹಂದಿಗಾತ್ರದ ಮೊಸಳೆಗಳು, ಕಟಕಟಿಸುತ್ತಿದ್ದ ಹಾವುಗಳು, ವಿಚಿತ್ರವಾದ ಚಿಪ್ಪನ್ನುಳ್ಳ ಆಮೆಗಳು ಕೃತಕವಾಗಿ ನಿರ್ಮಿಸಲಾಗಿದ್ದ ಸಮುದ್ರದಲ್ಲಿ ಹಾರಿಬೀಳುತ್ತಿದ್ದವು. ದೊಡ್ಡದಾದ ಬಿಳಿನಾಯಿಯೊಂದಿದ್ದು ಅದು ಸೌಮ್ಯವಾಗಿದ್ದು, ತಳಿ ಹೆಚ್ಚಿಸುವ ಕೆಲಸದಲ್ಲಿ ನಿರತವಾಗಿತ್ತು. ಅಲ್ಲಿಯ ವಾತಾವರಣ ಆಗತಾನೆ ಸೃಷ್ಟಿಯಾದಂತಿತ್ತು. ಮುಲಾಟೊ(ಮಿಶ್ರ ಸಂತಾನದ) ಹುಡುಗಿಯರು ರಕ್ತ ಕೆಂಪಿನ ಪಕಳೆಗಳ ಮಧ್ಯೆ ಕಾಯುತ್ತ ಇದ್ದರು. ಹಳೆಕಾಲದ ಫೋನೊಗ್ರಾಫ್ ರೆಕಾರ್ಡುಗಳಿಗೆ ಮರೆತುಹೋಗಿದ್ದ ಭೂಸ್ವರ್ಗದ ಪ್ರೀತಿಯ ಪಟ್ಟುಗಳೆಲ್ಲವೂ ತಿಳಿದಿತ್ತು. ಗ್ರೀನ್‌ಹೌಸ್‌ನ ಪ್ರವೇಶದ್ವಾರವನ್ನು ರಕ್ಷಿಸುತ್ತಿದ್ದ ಮುದುಕಿಯೊಬ್ಬಳು, ಐದು ಜನವಿದ್ದ ಗುಂಪು ಆ ರಾತ್ರಿ ಅಲ್ಲಿಗೆ ಬಂದಾಗ, ಅವರಲ್ಲಿ ಒಬ್ಬಳು ಬಹಳ ಬಡಕಲಾಗಿ ಮೂಳೆ ಬಿಟ್ಟುಕೊಂಡು ಕೆನ್ನೆಯ ಮೂಳೆ ಉಬ್ಬಿಕೊಂಡಿದ್ದು, ಪ್ರಪಂಚ ಮೊದಲಾದಾಗಿನಿಂದ ಸಿಡುಬಿನ ಕಲೆಯಂತೆ ಅಚ್ಚೊತ್ತಿದ್ದ ಏಕಾಂತದ ಲಕ್ಷಣವನ್ನು ಹೊಂದಿದ್ದವನನ್ನು ನೋಡಿದ್ದೇ.

"ಓ ದೇವರೇ! ಅರೆಲಿಯಾನೊ!" ಎಂದು ಕೂಗಿ ದೀರ್ಘವಾಗಿ ಉಸಿರೆಳೆದಳು. ಯುದ್ಧಕ್ಕೆ ಮೊದಲು, ವೈಭವದ ದಿನಗಳು ಮುಗಿಯುವುದಕ್ಕೆ ಮೊದಲು, ಭ್ರಮನಿರಸನದಿಂದ ದೇಶಬಿಟ್ಟು ಹೋಗುವ ಮೊದಲು, ಹಿಂದೊಮ್ಮೆ ಒಂದು ಬೆಳಿಗ್ಗೆ ತನ್ನ ಬದುಕಿನಲ್ಲಿ ಮೊದಲ ಆಜ್ಞೆ ನೀಡಲೆಂದು ಅವಳ ಕೋಣೆಯನ್ನು ಪ್ರವೇಶಿಸಿ, ತನ್ನನ್ನು ಪ್ರೀತಿಸಬೇಕೆಂದು ಆಜ್ಞಾಪಿಸಿದಾಗ ದೀಪದ ಬೆಳಕಿನಲ್ಲಿ ನೋಡಿದ ಅರೆಲಿಯಾನೊನನ್ನು ಮತ್ತೊಮ್ಮೆ ನೋಡಿದಂತಾಯಿತು. ಅವಳು ಪಿಲಾರ್ ತರ್ನೆರಾ ಆಗಿದ್ದಳು. ವರ್ಷಗಳ ಹಿಂದೆ, ಅವಳಿಗೆ ನೂರ ನಲವತ್ತೈದು ವರ್ಷ ವಯಸ್ಸು ಆಗಿದ್ದಾಗ ವಯಸ್ಸನ್ನು ನೆನಪಿನಲ್ಲಿಟ್ಟುಕೊಳ್ಳುವುದನ್ನೇ ಬಿಟ್ಟಿದ್ದಳು ಅವಳು ಗತಿಶೀಲವಲ್ಲದ ನೆನಪುಗಳ ಕಾಲದಲ್ಲಿ ಜೀವಿಸುತ್ತಿದ್ದಳು. ಕಾರ್ಡುಗಳಿಂದ ತಿಳಿದುಕೊಳ್ಳಬಹುದಾಗಿದ್ದ ಭವಿಷ್ಯದ ಚಿಂತೆ, ಭಯಗಳಿಂದ ದೂರವಾಗಿದ್ದಳು.

ಆ ರಾತ್ರಿಯಿಂದ ಅರೆಲಿಯಾನೊ ತನಗೆ ಪರಿಚಯ ಇಲ್ಲದಿದ್ದ ಮುತ್ತಜ್ಜಿಯ ಅಮ್ಮನ ಪ್ರೀತಿ, ವಾತ್ಸಲ್ಯಗಳ ಮಡಿಲಲ್ಲಿ ಆಶ್ರಯ ಪಡೆದ. ತೊನೆದಾಡುವ ಕುರ್ಚಿಯಲ್ಲಿ ಕುಳಿತು ಈಕೆ ಗತಕಾಲದ ನೆನಪುಗಳನ್ನು ಮಾಡಿಕೊಳ್ಳುತ್ತಿದ್ದಳು. ಮಕೊಂಡೊದ ವೈಭವವನ್ನು, ಪುನಃ ನೆನಪಿಸಿಕೊಂಡು ಹಿಗ್ಗುತ್ತಿದ್ದಳು. ಅದೇ ಸಮಯದಲ್ಲಿ ಆಲ್ವಾರೊ ತನ್ನ ಅಬ್ಬರದ ನಗೆಯಿಂದ ಮೊಸಳೆಗಳು ಹೆದರುವಂತೆ ಮಾಡುತ್ತಿದ್ದ; ಅಲ್ಫನ್ಸೊ ಒಂದು ವಾರದ ಹಿಂದೆ ನಾಲ್ಕುಮಂದಿ ಗಿರಾಕಿಗಳು ಕೆಟ್ಟದಾಗಿ ನಡೆದುಕೊಂಡ ಕಾರಣಕ್ಕಾಗಿ ಜೌಗುಪ್ರದೇಶದ ಪಕ್ಷಿಗಳು ಅವರ ಕಣ್ಣುಗಳನ್ನು ಕುಕ್ಕಿದ್ದನ್ನು ಕಾಲ್ಪನಿಕ ಕಥೆಯಾಗಿ ವಿವರಿಸುತ್ತಿದ್ದ; ಗೇಬ್ರಿಯಲ್ ದುಡ್ಡು

ವಸೂಲು ಮಾಡದ ಮುಲಾಟ್ಟೊ ಹುಡುಗಿಯ ಕೋಣೆಯಲ್ಲಿದ್ದ. ಗಡಿರಕ್ಷಣಾ ಪಡೆಯವ ಅವನನ್ನು ಹಿಡಿದು ಒರಿನೊಕೊದ ಆಚೆ ಇರುವ ಸೆರೆಮನೆಯಲ್ಲಿದ್ದ ತನ್ನ ಕಳ್ಳಸಾಗಣೆ ಮಾಡುವ ಗೆಳೆಯನಿಗೆ ಪತ್ರಗಳನ್ನು ತಲುಪಿಸುವಂತೆ ಗೇಬ್ರಿಯಲ್‌ಗೆ ಒಪ್ಪಿಸಿದ್ದಳು. ಸೆರೆಯಾಗಿದ್ದ ಗೆಳೆಯನನ್ನು ಪಾಯಿಖಾನೆ ಮತ್ತು ವಜ್ರಗಳಿದ್ದ ಮೂತ್ರ ಪಾತ್ರೆಯ ಮೇಲೆ ಕುಳಿತುಕೊಳ್ಳುವಂತೆ ಮಾಡಿದ್ದರು. ಸುದೀರ್ಘವಾಗಿದ್ದ ಒಂಟಿತನದ ಬದುಕಿನಲ್ಲಿ ಸೆರೆಯಾಗಿದ್ದ ಅರೆಲಿಯಾನೊ, ಮಾತೃ ವಾತ್ಸಲ್ಯದೊಂದಿಗೆ ನೋಡಿಕೊಳ್ಳುವ ಯಜಮಾನಿಯಿದ್ದ ಇಂಥ ವೇಶ್ಯಾಗೃಹಕ್ಕಾಗಿಯೇ ಹಂಬಲಿಸುತ್ತಿದ್ದ. ಅವನಿಗೆ ಈ ಸ್ನೇಹ ಪ್ರೀತಿಗಳು ಬಹಳವಾಗಿ ಹಿಡಿಸಿದವು. ಅಮರಾಂತಾ ಉರ್ಸುಲಾಳಿಂದ ತನ್ನ ಭ್ರಮಾಲೋಕ ಛಿದ್ರಗೊಂಡ ಆ ಮಧ್ಯಾಹ್ನ ಇಂಥದ್ದೊಂದು ಆಶ್ರಯವನ್ನಲ್ಲದೆ ಬೇರೇನನ್ನೂ ಬಯಸಿರಲಿಲ್ಲ. ಯಾರೊಂದಿಗಾದರೂ ತನ್ನೆದೆಯಲ್ಲಿ ಹೆಪ್ಪುಗಟ್ಟಿದ್ದ ನೋವನ್ನು ಹೇಳಿಕೊಂಡು ನಿರಾಳವಾಗಲು ಬಯಸುತ್ತಿದ್ದ. ಪಿಲಾರ್ ತರ್ನಿರಾಳ ಮಡಿಲಲ್ಲಿ ಮುಖವಿರಿಸಿ ಬೆಚ್ಚನೆಯ ಕಂಬನಿಯನ್ನು ಮಾತ್ರವೇ ಹರಿಸಲು ಸಾಧ್ಯವಾಯಿತು. ಅವಳು ಅವನ ತಲೆಯಲ್ಲಿನ ಕೂದಲಿನ ನಡುವೆ ಬೆರಳಾಡಿಸುತ್ತಿದ್ದುದರ ಹಿತ ಅನುಭವಿಸಿದ. ತಾನು ಅಳುತ್ತಿರುವುದು ಪ್ರೀತಿಯಿಂದ ಎಂದು ಹೇಳದಿದ್ದರೂ ಅವಳಿಗೆ ತಕ್ಷಣವೇ ಮನುಷ್ಯನ ಇತಿಹಾಸದಲ್ಲಿನ ಅತ್ಯಂತ ಪುರಾತನವಾದ ಬಿಕ್ಕುಗಳೆಂಬುದನ್ನು ಅರಿತಳು.

"ಅದಿರಲಿ ಮಗು, ಹೇಳು ನಿನ್ನ ಈ ಸ್ಥಿತಿಗೆ ಕಾರಣ ಯಾರು?" ಎಂದು ಸಮಾಧಾನ ಪಡಿಸುತ್ತಾ ಕೇಳಿದಳು.

ಅರೆಲಿಯಾನೊ ಯಾರೆಂದು ತಿಳಿಸಿದಾಗ ಪಿಲಾರ್ ತರ್ನಿರಾ ಹೊಟ್ಟೆಯೊಳಗಿಂದ ನಕ್ಕಳು. ಅದು ಪಾರಿವಾಳಗಳ ಪ್ರಣಯ ಸಲ್ಲಾಪದ ರೀತಿಯಲ್ಲಿ ಕೊನೆಯಾಯಿತು. ಅವಳಿಗೆ ತಿಳಿಯದ ಯಾವ ಗುಟ್ಟುಗಳೂ ಬ್ಯುಂಡಿಯಾರ ಎದೆಯಲ್ಲಿ ಇರಲಿಲ್ಲ. ಕಾರ್ಡುಗಳ ಮೂಲಕ ಒಂದು ಶತಮಾನದ ಇತಿಹಾಸವನ್ನು ಮತ್ತು ಅನುಭವದ ಮೂಲಕವಾಗಿ ಬಲ್ಲವಳಾಗಿದ್ದಳು. ಬ್ಯುಂಡಿಯಾ ಕುಟುಂಬ ಒಂದು ಯಂತ್ರದಂತೆ! ಮತ್ತೆ ಮತ್ತೆ ಅದೇ ಅದೇ ಪುನರಾವರ್ತನೆಯಾಗುತ್ತಿರುತ್ತದೆ. ಅದೊಂದು ಚಕ್ರದಂತೆ ತಿರುಗುತ್ತಲೇ ಇರುತ್ತದೆ. ಚಕ್ರದ ಅಚ್ಚು ಮುರಿಯುವುದೊ ಸವೆಯುವುದೊ ಆಗದಿದ್ದರೆ ಅದು ತಿರುಗುತ್ತಲೇ ಇರುತ್ತದೆ.

"ನೀನೇನು ಯೋಚನೆ ಮಾಡಬೇಡ. ಅವಳು ಎಲ್ಲೇ ಇದ್ದರೂ ನಿನಗಾಗಿ ಎದುರು ಕಾಯುತ್ತಿರುತ್ತಾಳೆ" ಎಂದು ನಗುತ್ತಾ ಹೇಳಿದಳು.

ಅಮರಾಂತಾ ಉರ್ಸುಲಾ ಬಚ್ಚಲು ಮನೆಯಿಂದ ಹೊರಬಂದಾಗ ನಾಲ್ಕೂವರೆ ಆಗಿತ್ತು. ಮೃದುನೆರಿಗೆಗಳಿದ್ದ ಪೋಷಾಕನ್ನುಟ್ಟು ತಲೆಗೆ ಪೇಟದಂತೆ ಟವೆಲ್ ಸುತ್ತಿಕೊಂಡು ಅವನ ರೂಮಿನ ಕಡೆಯಿಂದ ಹಾದುಹೋದಳು. ಕಳ್ಳ ಹೆಜ್ಜೆಗಳನ್ನಿಡುತ್ತ ಅಮಲಿನಲ್ಲಿ ತೂರಾಡುತ್ತಾ ಅವಳನ್ನು ಹಿಂಬಾಲಿಸಿದ. ಅವಳು ಬಟ್ಟೆ ಕಳಚುತ್ತಿದ್ದಂತೆ ಅವನು ಕೋಣೆಯೊಳಗೆ ಹೋದ. ಭಯದಿಂದ ಅವಳು ಬಿಚ್ಚಿದ ಬಟ್ಟೆಯಿಂದ ಮುಚ್ಚಿಕೊಂಡಳು. ಅವನು ಪಕ್ಕದ ರೂಮಿನ ಕಡೆ ಸನ್ನೆ ಮಾಡಿದ. ಆ ರೂಮಿನ ಅರ್ಧಬಾಗಿಲು ತೆರೆದಿತ್ತು. ಗ್ಯಾಸ್ಟನ್ ಅಲ್ಲಿ ಕುಳಿತು ಪತ್ರಬರೆಯುತ್ತಿದ್ದುದನ್ನು ಅರೆಲಿಯಾನೊ ನೋಡಿದ.

"ಹೊರಟು ಹೋಗು" ಮೆಲ್ಲನೆ ಕೇಳಿಸದಂತೆ ಹೇಳಿದಳೂ. ಅರೆಲಿಯಾನೊ ಸುಮ್ಮನೆ ನಕ್ಕ. ಅವಳನ್ನು ತನ್ನೆರಡೂ ಕೈಗಳಿಂದ ಬೆಗೋನಿಯಾ ಕುಂಡಗಳನ್ನು ಹಿಡಿದುಕೊಳ್ಳುವಂತೆ ಸೊಂಟವನ್ನು ಬಳಸಿ ಹಿಡಿದುಕೊಂಡ. ಹಾಸಿಗೆ ಮೇಲೆ ಬೆನ್ನು ಕೆಳಗಾಗುವಂತೆ ಬೀಳಿಸಿದ. ಕ್ರೂರವಾದ ರೀತಿಯಲ್ಲಿ ಅವಳ ಮೇಲೆ ಬಿದ್ದು ಸ್ನಾನದ ಉಡುಪನ್ನು, ಅವಳು ತಡೆಯುವ ಪ್ರಯತ್ನಕ್ಕೆ ಮುಂದಾಗುವ ಮೊದಲೇ ಕಿತ್ತು ಎಸೆದ. ಸ್ನಾನ ಮಾಡಿ ತಾಜಾ ಆಗಿದ್ದ ದೇಹದ ಮೇಲೆ ಬಿದ್ದ. ಬೇರೆ ರೂಮುಗಳ ನೆರಳಿನಲ್ಲಿ ಅವಳ ದೇಹದ ರೇಖೆಗಳನ್ನು ಚರ್ಮದ ಬಣ್ಣವನ್ನು, ಅಲ್ಲಲ್ಲಿದ್ದ ಮಚ್ಚೆಗಳನ್ನೂ ಊಹಿಸಿಕೊಂಡ. ಬುದ್ಧಿವಂತ ಹೆಣ್ಣಿನ ಹಾಗೆ ಅವಳು ತನ್ನನ್ನು ಅವನ ಆಕ್ರಮಣದಿಂದ ರಕ್ಷಿಸಿಕೊಳ್ಳಲು ಪ್ರಯತ್ನಿಸಿದಳು. ತನ್ನ ಉಗುರುಗಳಿಂದ ಮುಖ ಪರಚಲು, ಮೊಣಕಾಲಿನಿಂದ ಕಿಡ್ನಿಗಳ ಮೇಲೆ ಒತ್ತಡ ಹೇರಲು ಪ್ರಯತ್ನಿಸಿದಳು. ಅವರಿಬ್ಬರಲ್ಲಿ ಯಾರೊಬ್ಬರೂ ಸೋಲದೆ ನಡೆಸಿದ ಉಸಿರಾಟ ಮಾತ್ರ ಏಪ್ರಿಲ್ ತಿಂಗಳಿನಲ್ಲಿ ಕಿಟಕಿಯ ಮೂಲಕ ಸೂರ್ಯಾಸ್ತವನ್ನು ನೋಡುತ್ತಿದ್ದವರ ಉಸಿರಾಟದಂತೆ ಇರಲಿಲ್ಲ. ಇಬ್ಬರ ನಡುವೆ ಗಂಭೀರವಾದ ಘರ್ಷಣೆ ನಡೆದಿತ್ತು. ಇದು ಸಾಯುವವರೆಗಿನ ಹೋರಾಟದಂತೆ ಇತ್ತು. ಆದರೆ ಅದು ಹಿಂಸೆಯ ಮಾದರಿಯದಾಗಿರಲಿಲ್ಲ. ಏಕೆಂದರೆ ಆ ಹೋರಾಟದಲ್ಲಿ ಆಕ್ರಮಣಗಳೂ ಇದ್ದವು ಮತ್ತು ಅದರಿಂದ ತಪ್ಪಿಸಿಕೊಳ್ಳುವ ಪ್ರಯತ್ನಗಳೂ ಇದ್ದವು. ನಿಧಾನ, ಜಾಗರೂಕತೆಗಳೂ ಇದ್ದವು. ಇಂತಹ ಪರಿಸ್ಥಿತಿಯ ನಡುವಿನಿಂದ ಹೂ ಬಿಡುವ ಅವಕಾಶವೂ ಇತ್ತು. ಪಕ್ಕದ ರೂಮಿನಲ್ಲಿ ಇಬ್ಬರು ಪ್ರೇಮಿಗಳು ಶತ್ರುಗಳಾಗಿದ್ದೂ ಆಕ್ವೇರಿಯಂನ ತಳದಲ್ಲಿ ಪರಸ್ಪರ ಒಪ್ಪಂದ ಮಾಡಿಕೊಳ್ಳುವಂತಿದ್ದರೆ, ಗ್ಯಾಸ್ಟನ್‌ಗೆ ವಿಮಾನ ಚಾಲನೆಯ ಕನಸನ್ನು ಮರೆಯುವಂತಾಗಿತ್ತು. ಹೋರಾಟದ ಕಾವಿನಲ್ಲಿ, ತನ್ನ ಮೌನ ಎಷ್ಟು ಅಸಂಬದ್ಧವಾಗಿತ್ತೆಂದರೆ, ತನ್ನ ಗಂಡ ತನ್ನ ಮೇಲೆ ಅನುಮಾನ ಪಡುವಂತಾಗುತ್ತದೆ ಎಂದು ಅಮರಾಂತಾ ಉರ್ಸುಲಾ ಭಾವಿಸಿದಳು. ನಂತರ ಸೆಣಸಾಡುವುದನ್ನು ಹಲ್ಲುಕಚ್ಚಿಕೊಂಡು ಸಹಿಸಿಕೊಳ್ಳುತ್ತಲೇ ಜೋರಾಗಿ ನಗಲು ಆರಂಭಿಸಿದಳು. ಆದರೆ ಹುಸಿ ಏಟುಗಳಿಂದ ರಕ್ಷಿಸಿಕೊಳ್ಳುತ್ತಾ ಕ್ರಮೇಣ ತಾವಿಬ್ಬರೂ ಹಿತಶತ್ರುಗಳೆಂಬ ಅರಿವಿಗೆ ಒಳಗಾಗುತ್ತಾ ಹೋದಂತೆ, ಆಕ್ರಮಣಗಳು ಸರಸ ಸಲ್ಲಾಪವಾಯಿತು. ತಕ್ಷಣವೆ, ಹುಡುಗಾಟಿಕೆಯಂತೆ ಅಮರಾಂತಾ ಉರ್ಸುಲಾ ತನ್ನನ್ನು ರಕ್ಷಿಸಿಕೊಳ್ಳುವುದನ್ನು ಬಿಟ್ಟು, ತಾನೇ ಮುಂದಾಗಿ ಮಾಡಹೊರಟದ್ದಕ್ಕೆ ತಾನೇ ಹೆದರಿಕೊಳ್ಳುವಷ್ಟು ಹೊತ್ತಿಗೆ ಸಮಯ ಮೀರಿಹೋಗಿತ್ತು. ಏನೋ ಒಂದು ಬಗೆಯ ಗೊಂದಲ ಅವಳನ್ನು ನಿಷ್ಕ್ರಿಯವಾಗಿಸಿತ್ತು. ಅವಳ ರಕ್ಷಿಸಿಕೊಳ್ಳುವ ಇಚ್ಛಾಶಕ್ತಿ, ಸಾವಿನಾಚೆಗೆ ಕಾಣದಿರುವ ಅಮೂರ್ತ ಸ್ಥಿತಿಯನ್ನು ಅರಿಯಬೇಕೆನ್ನುವ ಆತಂಕದಲ್ಲಿ ಕೊಚ್ಚಿಹೋಯಿತು. ತಕ್ಷಣವೇ ತನ್ನ ಬಾಯಿಂದ ಸದ್ದು ಹೊರಡದಿರಲೆಂದು ಟವೆಲನ್ನು ಎಳೆದುಕೊಂಡು ಹಲ್ಲುಗಳ ನಡುವೆ ಇರಿಸಿಕೊಂಡು, ಒಳಗಿದ್ದುದು ಹೊರಬಾರದಂತೆ ನೋಡಿಕೊಂಡಳು.

○

20

ಪಿಲಾರ್ ತರ್ನಿರಾ ಸ್ವರ್ಗ ಪ್ರವೇಶದ್ವಾರದಲ್ಲಿ ಹಬ್ಬದಾಚರಣೆಯನ್ನು ನೋಡುತ್ತಾ ತನ್ನ ಹಗ್ಗದ ತೂಗಾಡುವ ಕುರ್ಚಿಯಲ್ಲಿ ಕುಳಿತು ಪ್ರಾಣಬಿಟ್ಟಳು. ಅವಳ ಆಸೆಯಂತೆ ಆಕೆಯನ್ನು ಶವದ ಪೆಟ್ಟಿಗೆಯಲ್ಲಿ ಇರಿಸದೆ, ಕುರ್ಚಿಯ ಸಮೇತ ಎಂಟು ಜನ ಡಾನ್ಸ್‌ಹಾಲ್ ಮಧ್ಯದಲ್ಲಿ ದೊಡ್ಡದೊಂದು ಗುಂಡಿ ತೋಡಿ ಅದರಲ್ಲಿ ಇಳಿಸಿದರು. ಮುಲಾಟೊ ಹುಡುಗಿಯರು ಕಪ್ಪು ಬಟ್ಟೆ ಧರಿಸಿ, ಅತ್ತು ಅತ್ತು ಸಪ್ಪಗಾಗಿ, ಗುಂಡಿಯನ್ನು ಮುಚ್ಚುವ ಮುನ್ನ ಕಿವಿ ವಾಲೆ, ಬ್ರೋಚುಗಳು, ಉಂಗುರಗಳು ಎಲ್ಲವನ್ನೂ ಬಿಚ್ಚಿ ಗುಂಡಿಯೊಳಗೆ ಹಾಕಿದರು. ನಂತರ ಚಪ್ಪಡಿಯನ್ನು ಮುಚ್ಚಿದರು. ಚಪ್ಪಡಿ ಮೇಲೆ ಅವಳ ಹೆಸರಾಗಲಿ, ದಿನಾಂಕವಾಗಲಿ ಇರಲಿಲ್ಲ. ಆ ಚಪ್ಪಡಿಗಳ ಮೇಲೆ ಅಮೆಝಾನಿನ ಕೆಮೆಲ್ಲಿಯಾಸ್ ವಸ್ತುಗಳನ್ನು ಪೇರಿಸಿ, ಹಾಗೂ ಹೀಗೂ ಅಂತಿಮ ಕ್ರಿಯೆಯನ್ನು ವಿಧ್ಯುಕ್ತವಾಗಿ ಪೂರೈಸಲಾಯಿತು. ಪ್ರಾಣಿಗಳಿಗೆಲ್ಲ ವಿಷಹಾಕಿದ ನಂತರ ಬಾಗಿಲು ಕಿಟಕಿಗಳನ್ನೆಲ್ಲ ಮುಚ್ಚಿ ಇಟ್ಟಿಗೆ ಗಾರೆಗಳಿಂದ ಭದ್ರಗೊಳಿಸಿ, ಸಂತರ ಚಿತ್ರಗಳಿಂದ, ಮ್ಯಾಗ್‌ಝೆನ್‌ಗಳಲ್ಲಿನ ಚಿತ್ರಗಳಿಂದ ತಮ್ಮ ಪ್ರಿಯರ ಫೋಟೋಗಳಿಂದ, ನರಮಾಂಸಭಕ್ಷಕರ, ಸಮುದ್ರದುಬ್ಬರದಲ್ಲಿ ಇಸ್ಪೀಟು ರಾಜರೆಂದು ಕಿರೀಟಧಾರಣೆ ಮಾಡಿಕೊಂಡವರ

ಚಿತ್ರಗಳಿಂದ ತುಂಬಿದ ತಮ್ಮ ತಮ್ಮ ಮರದ ಟ್ರಂಕುಗಳನ್ನು ತೆಗೆದುಕೊಂಡು ಹೊರ ಪ್ರಪಂಚವನ್ನು ಪ್ರವೇಶಿಸಿದರು.

ಅದೇ ಕೊನೆ. ಪಿಲಾರ್ ತರ್ನೆರಾಳ ಸಮಾಧಿ ಪವಿತ್ರಗೀತೆಗಳ ಪುಸ್ತಕಗಳಿಂದ, ಸೂಳೆಯರ ಆಭರಣಗಳಿಂದ, ಭೂತಕಾಲದ ಅವಶೇಷಗಳಿಂದ ಕೊಳೆಯುತ್ತಿತ್ತು. ಕ್ಯಾಟಲೋನಿ ತನ್ನ ಪುಸ್ತಕದ ಅಂಗಡಿಯನ್ನು ಹರಾಜು ಹಾಕಿದ. ತಾನು ಹುಟ್ಟಿದ ಮೆಡಿಟರೇನಿಯನ್ ಊರಿಗೆ ಹಿಂತಿರುಗಿದ. ಅಲ್ಲಿಗೆ ಹೋಗಲು ಚೈತ್ರದ ಸೆಳೆತವೇ ಪ್ರಬಲವಾಗಿತ್ತು. ನಂತರ ಅಲ್ಲಿ ಉಳಿದದ್ದು ಏನೇನೂ ಆಗಿರಲಿಲ್ಲ. ಅವನ ನಿರ್ಧಾರವನ್ನು ಯಾರೂ ಊಹಿಸಿರಲಿಲ್ಲ. ಬನಾನಾ ಕಂಪನಿಯ ವೈಭವದ ದಿನಗಳಲ್ಲಿ ಅವನು ಮಕೊಂಡೊಗೆ ಓಡಿಬಂದಿದ್ದ. ಬಂದಾಗ ಅವನಿಗೆ ಪುಸ್ತಕದಂಗಡಿ ತೆಗೆಯುವ ಆಲೋಚನೆ ಹೊರತಾಗಿ ಬೇರೇನೂ ಹೊಳೆದಿರಲಿಲ್ಲ. ಆ ಅಂಗಡಿಯಲ್ಲಿ ಎಲ್ಲ ಭಾಷೆಗಳಲ್ಲಿನ ಪುಸ್ತಕಗಳ ಮೊದಲ ಮುದ್ರಣಗಳ ಪ್ರತಿಗಳನ್ನು ಇರಿಸಿದ್ದ. ಅಲ್ಲಿಗೆ ಮಾಮೂಲಿಯಾಗಿ ಬರುತ್ತಿದ್ದ ಗಿರಾಕಿಗಳು ಬಹಳ ಎಚ್ಚರಿಕೆಯಿಂದ ಯಾವುದೊ ಬೇಡದ ವಸ್ತುಗಳನ್ನು ಮುಟ್ಟುವಂತೆ, ಪುಸ್ತಕಗಳ ಮೇಲೆ ಬೆರಳಾಡಿಸುತ್ತಿದ್ದರು. ಅಲ್ಲದೆ ದಾರಿಯಲ್ಲಿನ ತಮ್ಮ ಮನೆಯಲ್ಲಿನ ಕನಸುಗಳಿಗೆ ವ್ಯಾಖ್ಯಾನವನ್ನು ತಿಳಿದುಕೊಳ್ಳಲು ತಮ್ಮ ಸರದಿಗಾಗಿ ಕಾಯುತ್ತಿದ್ದರು. ಅವನು ಹೆಚ್ಚಿನ ಸಮಯವನ್ನು ಅಂಗಡಿಯ ಹಿಂಭಾಗದಲ್ಲಿ ಶಾಲೆಯ ನೋಟ್ ಬುಕ್ಕುಗಳಿಂದ ಹರಿದ ಪುಟಗಳಲ್ಲಿ ಕೆಂಪುಶಾಯಿಯಲ್ಲಿ ಏನೇನೋ ಬರೆಯುತ್ತಿದ್ದನಾದರೂ, ಅದೇನೆಂಬುದನ್ನು ಯಾರೂ ತಿಳಿದಿರಲಿಲ್ಲ. ಅರೆಲಿಯಾನೊ ಮೊದಲ ಬಾರಿ ಅವನನ್ನು ಭೇಟಿಯಾದಾಗ, ಆ ಥರದ ಬರವಣಿಗೆ ತುಂಬಿದ ಎರಡು ಪೆಟ್ಟಿಗೆಗಳು ಇದ್ದವು. ಅದನ್ನು ನೋಡಿದಾಗ ಹೆಚ್ಚುಕಡಿಮೆ ಅವು ಮೆಲ್‌ಕಿಯಾಡ್ಸ್‌ನ ಚರ್ಮಕಾಗದಗಳನ್ನು ನೆನಪಿಗೆ ತರುತ್ತಿದ್ದವು. ಅಂದಿನಿಂದ ಅವನು ಆ ಜಾಗ ಬಿಡುವಷ್ಟು ಹೊತ್ತಿಗೆ ಮೂರನೆಯ ಪೆಟ್ಟಿಗೆಯನ್ನೂ ತುಂಬಿಸಿದ್ದನ್ನು ನೋಡಿದಾಗ, ಮಕೊಂಡೊದಲ್ಲಿ ಅವನು ಮಾಡಿದ್ದು, ಅದು ಬಿಟ್ಟರೆ ಬೇರೇನೂ ಅಲ್ಲವೆಂದುಕೊಳ್ಳಬಹುದಾಗಿತ್ತು. ಅವನು ಅಲ್ಲಿಂದ ಹೋದ ನಂತರವೂ ಸಂಬಂಧ ಉಳಿಸಿಕೊಂಡಿದ್ದೆಂದರೆ, ಬುಗುರಿ ಮತ್ತು ಗಾಳಿಪಟಗಳಿಗೆ ಬದಲಾಗಿ ಪುಸ್ತಕಗಳನ್ನು ತನ್ನಿಂದ ಪಡೆಯುತ್ತಿದ್ದ ನಾಲ್ಕು ಜನ ಸ್ನೇಹಿತರು ಅವರಿನ್ನೂ ಗ್ರಾಮರ್ ಸ್ಕೂಲಿನಲ್ಲಿ ಇರುವಾಗಲೇ, ಅವರನ್ನು ಸೆನೆಕಾ ಮತ್ತು ಓವಿಡ್‌ರ ಕೃತಿಗಳನ್ನು ಓದಲು ಹಚ್ಚಿದ್ದ.

ಕ್ಲಾಸಿಕಲ್ ಬರಹಗಾರರನ್ನು ತನ್ನ ಮನೆಯವರಂತೆ ತೀರಾ ಸಲುಗೆಯಿಂದ ಕಾಣುತ್ತಿದ್ದ. ಒಂದು ಕಾಲದಲ್ಲಿ ಅವರೆಲ್ಲ ಇವನ ರೂಮ್‌ಮೇಟ್ಸ್ ಆಗಿದ್ದರೆಂಬಂತೆ ನಡೆದುಕೊಳ್ಳುತ್ತಿದ್ದ. ಅವನು ಯಾರೂ ತಿಳಿಯಬಾರದಾಗಿದ್ದಂತಹ ಅವರ ರಹಸ್ಯಗಳನ್ನೆಲ್ಲ ತಿಳಿದಿದ್ದ. ಉದಾಹರಣೆಗೆ ಸಂತ ಆಗಸ್ಟೀನ್, ಅಭ್ಯಾಸದಂತೆ ಉಣ್ಣೆ ಜಾಕೆಟ್ಟನ್ನು ಸತತವಾಗಿ ಹದಿನಾಲ್ಕು ವರ್ಷಗಳು, ತೆಗೆಯದೆ ಹಾಗೇ ಹಾಕಿಕೊಂಡಿದ್ದನಂತೆ, ಮತ್ತು ವಿಲ್ಲ್‌ನೋವಾ, ಚೇಳಿನ ಕಡಿತದಿಂದಾಗಿ ಬಾಲ್ಯದಿಂದಲೇ ನಪುಂಸಕನಾಗಿದ್ದನಂತೆ – ಇಂಥವನ್ನೆಲ್ಲ ಅವನು ಬಲ್ಲವನಾಗಿದ್ದ. ಲಿಖಿತ ಶಬ್ದಗಳ ಬಗ್ಗೆ ಅವನಿಗಿದ್ದ ಆಸಕ್ತಿಯಲ್ಲಿ ಗೌರವ ಮತ್ತು

ಅಗೌರವಗಳೆರಡೂ ಸಂಮಿಶ್ರವಾಗಿತ್ತು. ಅವನೇ ಬರೆದ ತನ್ನ ಹಸ್ತಪ್ರತಿಗಳ ಬಗ್ಗೆಯೂ ಇದೇ ರೀತಿಯ ಭಾವನೆ ಇರಿಸಿಕೊಂಡಿದ್ದ. ಅನುವಾದ ಮಾಡಬೇಕೆಂದು ಕ್ಯಾಟಲೋನಿಯ ಭಾಷೆಯನ್ನು ಕಲಿತಿದ್ದ ಅಲ್ಫೋನ್ಸೊ ವೃತ್ತಪತ್ರಿಕೆ ಕತ್ತರಿಸಿದ ತುಂಡುಗಳನ್ನು, ಕೈಪಿಡಿಗಳನ್ನು ತುಂಬಿಸಿಕೊಂಡು ಜೇಬಿನಲ್ಲಿ ಇರಿಸಿಕೊಂಡಿದ್ದ ಒಂದು ಸಲ, ಊಟಕ್ಕಾಗಿ ಮೈಕೊಟ್ಟ ಪುಟ್ಟ ಹುಡುಗಿಯರೊಂದಿಗೆ ಇದ್ದಾಗ, ಅವು ಅವರ ಮನೆಗಳಲ್ಲಿ ಕಳೆದುಹೋದವು. ಬುದ್ಧಿವಂತ ಆ ಮುದುಕ ವಿಷಯ ತಿಳಿದಾಗ, ರೇಗಾಡಿ ಕೂಗಾಡಿ ರಾದ್ಧಾಂತ ಮಾಡುವುದಕ್ಕೆ ಬದಲಾಗಿ ಜೋರಾಗಿ ನಕ್ಕು ಸಾಹಿತ್ಯದ ಹಣೆಬರಹವೇ ಇಷ್ಟೆಂದು ಹೇಳಿದ. ಅಲ್ಲದೆ ಅವನ ಆ ಮೂರೂ ಪೆಟ್ಟಿಗೆಗಳನ್ನು ತನ್ನ ಸ್ವಂತ ಊರಿಗೆ ತೆಗೆದುಕೊಂಡು ಹೋಗುವುದನ್ನು ತಪ್ಪಿಸಲು ಯಾರಿಂದಲೂ ಸಾಧ್ಯವಿರಲಿಲ್ಲ. ಅವುಗಳನ್ನು ಕೋಚಿನಲ್ಲಿ ಇರಿಸಲು ಒಪ್ಪದೆ, ಹಡಗಿನಲ್ಲಿ ಕಳಿಸಬೇಕೆಂದು ಒತ್ತಾಯ ಮಾಡಿದವರನ್ನು ಬೈದು ಹಿಡಿಶಾಪ ಹಾಕಿ, ಹಟಮಾಡಿ ಕಡೆಗೆ ತನ್ನ ಜೊತೆಗೇ ಇರಿಸಿಕೊಂಡ. 'ದರಿದ್ರ ಪ್ರಪಂಚ! ಪ್ರಯಾಣಿಕ ಫಸ್ಟ್ ಕ್ಲಾಸಿನಲ್ಲಿದ್ದರೆ, ಸಾಹಿತ್ಯ ಸರಕಿನೊಂದಿಗೆ ಹೋಗಬೇಕಂತೆ! ಇದೆಂಥ ವಿಚಿತ್ರ!' ಎಂದ. ಪ್ರಯಾಣಕ್ಕೆ ಕಡೆಯ ಸಿದ್ಧತೆ ಮಾಡಿಕೊಳ್ಳುತ್ತಿದ್ದ ಸಮಯದಲ್ಲಿ ಅವನಿಗೆ ಫರ್ನಾಂಡಾಳಿಗೆ ಆವರಿಸಿದ್ದಂತೆ ಮರೆವಿನ ಭೂತ ಆವರಿಸಿತು. ಅವನ ವಿನೋದ ಪ್ರವೃತ್ತಿ ಕುಸಿಯುತ್ತಿತ್ತು. ವಸ್ತುಗಳನ್ನು ಎಲ್ಲೋ ಇಟ್ಟು ಎಲ್ಲೋ ಹುಡುಕುತ್ತಿದ್ದ.

ಜರ್ಮನ್ ಮತ್ತು ಅರೆಲಿಯಾನೊ ಅವನನ್ನು ನೋಡಿಕೊಂಡರು. ಮಗುವಿಗೆ ಸಹಾಯ ಮಾಡುವಂತೆ ಮಾಡಿದರು. ಅವನ ಟಿಕೇಟುಗಳನ್ನು, ವಲಸೆ ದಾಖಲೆಗಳನ್ನು ಅವನ ಜೇಬಿನಲ್ಲಿರಿಸಿ ಸೇಫ್ಟಿಪಿನ್ ಹಾಕಿದರು. ಮಕೊಂಡೊದಿಂದ ಹೊರಟು ಬಾರ್ಸೆಲೋನ ಸೇರುವವರೆಗೆ ಏನೇನು ಮಾಡಬೇಕೆಂಬುದನ್ನು ವಿವರವಾಗಿ ಪಟ್ಟಿಯೊಂದರಲ್ಲಿ ಬರೆದುಕೊಟ್ಟರು. ಆದರೂ ಸಹ ಅವನು ತನ್ನ ಬಳಿ ಇದ್ದ ಹಣದಲ್ಲಿ ಅರ್ಧ ಹಣ ಇರಿಸಿಕೊಂಡಿದ್ದ ಪ್ಯಾಂಟನ್ನು ಗೊತ್ತಾಗದಂತೆ ಎಸೆದುಬಿಟ್ಟ. ಪ್ರಯಾಣ ಹೊರಡುವ ಹಿಂದಿನ ರಾತ್ರಿ, ಪೆಟ್ಟಿಗೆಗಳನ್ನು ಮೊಳೆ ಹೊಡೆದು ಭದ್ರಪಡಿಸಿ, ತಾನಲ್ಲಿಗೆ ದೇಶಬಿಟ್ಟು ಬರುವ ಜೊತೆಗೆ ತಂದಿದ್ದ ಪೆಟ್ಟಿಗೆಯಲ್ಲಿಯೇ ಬಟ್ಟೆಬರೆ ಇರಿಸಿದ ಮೇಲೆ ಒಮ್ಮೆ ಕಣ್ಣನ್ನು ಮೊಗ್ಗಾಗಿಸಿ, ತಾನು ದೇಶ ಬಿಟ್ಟು ಬಂದಾಗಿನಿಂದ ತನ್ನ ಜೊತೆ ಇದ್ದ ಪುಸ್ತಕಗಳತ್ತ, ಒಮ್ಮೆ ಕಣ್ಣು ಕಿರಿದಾಗಿಸಿ ಒಂದು ವಿಚಿತ್ರ ಉದ್ಧಟ ನೋಟವನ್ನು ಬೀರಿದ. ನಂತರ ಸ್ನೇಹಿತರೊಂದಿಗೆ ಹೇಳಿದ.

"ಕೆಲಸಕ್ಕೆ ಬಾರದ ಇವುಗಳನ್ನೆಲ್ಲ ಇಲ್ಲಿಯೇ ನಿಮಗಾಗಿ ಬಿಟ್ಟು ಹೋಗುತ್ತೇನೆ" ಎಂದು ಹೇಳಿದ.

ಮೂರು ತಿಂಗಳ ನಂತರ ಅವರಿಗೆ ಅವನಿಂದ ಒಂದು ದೊಡ್ಡ ಕವರಿನಲ್ಲಿ, ಬಿಡುವಿನ ವೇಳೆಯಲ್ಲಿ ಸಮುದ್ರಯಾನದ ಅವಧಿಯಲ್ಲಿ ಬರೆದ ಇಪ್ಪತ್ತೊಂಭತ್ತು ಪತ್ರಗಳ ಐವತ್ತಕ್ಕೂ ಹೆಚ್ಚಿನ ಚಿತ್ರಗಳು ತಲುಪಿದವು. ದಿನಾಂಕವನ್ನು ನಮೂದಿಸದಿದ್ದರೂ ಬರವಣಿಗೆಯ ಕ್ರಮದಿಂದ ಅದು ತಿಳಿಯುವುದು ಸಾಧ್ಯವಿತ್ತು. ಮೊದಮೊದಲಿನವುಗಳಲ್ಲಿ ಮಾಮೂಲಿಯಾಗಿ ಅವನ ಹಾಸ್ಯದ ಶೈಲಿಯಲ್ಲಿ ಕುಶಲೋಪರಿಯಾದರೆ ನಂತರದಲ್ಲಿ, ಮೂರು ಪೆಟ್ಟಿಗೆಗಳನ್ನು ಸರಕಿನ ಜೊತೆ ಇರಿಸುವಂತೆ ಹೇಳಿದ ಅಧಿಕಾರಿಯನ್ನು ಎತ್ತಿ

ಎಸೆದು, ಅವುಗಳನ್ನು ತನ್ನ ಕ್ಯಾಬಿನ್‌ನಲ್ಲಿಯೇ ಇರಿಸಿಕೊಂಡದ್ದನ್ನು, ಒಬ್ಬ ಹೆಂಗಸಿಗೆ ಹದಿಮೂರರ ಸಂಖ್ಯೆಯ ಬಗ್ಗೆ ಇದ್ದ ಭಯ, ಮೂಢನಂಬಿಕೆಯಿಂದ ಬಂದದ್ದಲ್ಲವಾದರೂ ಅದು ಕೊನೆಯಿರದ ಸಂಖ್ಯೆ ಎಂದು ಭಾವಿಸಿದ್ದರಿಂದ ಬಂದದ್ದನ್ನು, ಊಟ ಮಾಡುವಾಗ ನೀರಿನಲ್ಲಿ ರಾತ್ರಿ ಗೆಡ್ಡೆಗಳ ವಾಸನೆಯಿದ್ದದ್ದನ್ನು ಗುರುತಿಸಿ ಪಂದ್ಯ ಗೆದ್ದದ್ದನ್ನು ಬರೆದಿದ್ದ. ದಿನ ಕಳೆದಂತೆ, ಸಮುದ್ರ ಪ್ರಯಾಣದ ವಿಷಯದ ಬಗ್ಗೆ ನೀರಸ ಭಾವನೆಯುಂಟಾಯಿತು. ತೀರಾ ಇತ್ತೀಚಿನ ಮತ್ತು ಸಣ್ಣ ಸಣ್ಣ ಸಂಗತಿಗಳೂ ಕೂಡಾ ಅವನ ಮನೋವ್ಯಥೆಗೆ ಕಾರಣವಾದವು. ಹಡಗು ದೂರ ದೂರ ಸಾಗಿದಂತೆ ಅವನ ವ್ಯಥೆ ಹೆಚ್ಚಾಗುತ್ತಿತ್ತು. ಅದು ಅವನು ಕಳಿಸಿದ ಚಿತ್ರಗಳಿಂದ ಸ್ಪಷ್ಟವಾಗಿತ್ತು. ಮೊದಲ ಚಿತ್ರಗಳಲ್ಲಿ ಗೆಲುವಾಗಿದ್ದ. ಆಸ್ಪತ್ರೆ ಜಾಕೆಟ್‌ನಂತಿದ್ದ ಸ್ಪೋರ್ಟ್ಸ್ ಷರ್ಟ್ ಹಾಕಿದ್ದ. ಮಂಜು ಬಿಳುಪಿನ ಉದ್ದನೆಯ ಕೂದಲು ಹಿಂದಕ್ಕೆ ಚಾಚಿತ್ತು. ಕಡೆಯಲ್ಲಿ ಕಳಿಸಿದ ಚಿತ್ರಗಳಲ್ಲಿ ಕಪ್ಪು ಉಡುಪನ್ನು ಮತ್ತು ಸ್ಕಾರ್ಫ್‌ನ್ನು ತೊಟ್ಟಿದ್ದ, ಮುಖ ಬಾಡಿತ್ತು. ಶರದದ ಸಮುದ್ರದಲ್ಲಿ ನಿದ್ದೆಯಲ್ಲಿ ನಡೆಯುವವರ ಹಾಗೆ ಸಾಗುತ್ತಿದ್ದ. ಅಳುಮೋರೆಯ ಹಡಗಿನ ಡೆಕ್ ಮೇಲಿಂದ ಮಿತಭಾಷಿಯಂತೆ ಕಾಣುತ್ತಿದ್ದ. ಜರ್ಮನ್ ಮತ್ತು ಅರೆಲಿಯಾನೊ ಇಬ್ಬರೂ ಅವನ ಪತ್ರಗಳಿಗೆ ಉತ್ತರಿಸಿದರು.

ಅವನು ಮೊದಲ ತಿಂಗಳುಗಳಲ್ಲಿ ಎಷ್ಟೊಂದು ಪತ್ರಗಳನ್ನು ಬರೆದನೆಂದರೆ, ಮಕೊಂಡೊದಲ್ಲಿ ಇದ್ದಾಗಿಗಿಂತ ಹೆಚ್ಚು ಆತ್ಮೀಯರೆಂಬಂತೆ ಅವರಿಗೆ ಕಾಣಿಸುತ್ತಿತ್ತು. ಅಲ್ಲಿಂದ ಹೊರಡುವಾಗ ಅವರಲ್ಲಿ ಉಂಟುಮಾಡಿದ್ದ ದ್ವೇಷದಿಂದ ಅವರು ಬಿಡುಗಡೆಯಾದರು. ಮೊದಲು ಅವನು, ಎಲ್ಲವೂ ಹಿಂದೆ ಇದ್ದಂತೆ ಇದೆ ಎಂಬುದನ್ನು ಬರೆದ. ತಾನು ಹುಟ್ಟಿದ ಮನೆಯಲ್ಲಿದ್ದ ಬಸವನ ಹುಳುಗಳು ಇನ್ನೂ ಹಾಗೇ ಇವೆ; ಊರಿನಲ್ಲಿನ ಜಲಪಾತಗಳಿಗೆ ಅದೇ ಸಂಜೆಗಳ ಸುಗಂಧವಿದೆ; – ಎಂದೆಲ್ಲ ಬರೆದಿದ್ದ. ನೋಟ್‌ಬುಕ್ಕಿನ ಅದೇ ಹಾಳೆಗಳಲ್ಲಿ ನೇರಳೆ ಬಣ್ಣದ ಶಾಯಿಯಲ್ಲಿ ಬರೆದಿದ್ದು, ಒಂದೊಂದು ಪ್ಯಾರಾವನ್ನು ಒಬ್ಬೊಬ್ಬರಿಗೆ ಮೀಸಲಿರಿಸಿದ್ದ. ಆದರೂ ಅವನ ಗಮನಕ್ಕೆ ಬಾರದಿದ್ದರೂ ಆ ಪತ್ರಗಳಲ್ಲಿ ಮೊದಲಿಗೆ ಕಾಣುತ್ತಿದ್ದ ಉತ್ಸಾಹ ಲವಲವಿಕೆಗಳು ಕ್ರಮೇಣ ಭ್ರಮನಿರಸನಗೊಂಡ ಮಾತುಗಳಾಗಿ ಬದಲಾದವು. ಒಂದು ಚಳಿಗಾಲದಲ್ಲಿ ಮಕೊಂಡೊದಲ್ಲಿ ಬಿಸಿ ಸೂಪನ್ನು, ಕಾಫಿ ಮಾರುವವನ ಕೂಗನ್ನು, ವಸಂತಮಾಸದಲ್ಲಿ ಲಾರ್ಕ್‌ಪಕ್ಷಿಯ ಕೂಗನ್ನು ಗಮನಿಸದೆ ಕಳೆದುಕೊಂಡಂತೆ, ಸೂಪ್ ಕುಡಿಯುವಾಗ ಈಗಲೂ ಪುಸ್ತಕದಂಗಡಿಯ ಹಿಂದುಗಡೆಯ ಶಾಖವನ್ನು, ಧೂಳು ತುಂಬಿಕೊಂಡಿದ್ದ ಬಾದಾಮಿ ಮರದ ಮೇಲಿನ ಸೂರ್ಯನ ಸ್ಪರ್ಶವನ್ನೂ ಮಧ್ಯಾಹ್ನದ ವಿರಾಮದ ವೇಳೆಯಲ್ಲಿ ಕೇಳಿಸುತ್ತಿದ್ದ ರೈಲಿನ ಸೀಟಿಯ ಸದ್ದನ್ನು ಗಮನಿಸದೆ ಹೋದ. ಒಂದರ ಎದುರು ಮತ್ತೊಂದು ಕನ್ನಡಿ ಇರುವ ಹಾಗೆ ಈ ಎರಡೂ ಅನುಭವಗಳು ಮುಖಾಮುಖಿಯಾದಾಗ, ಉದ್ವಿಗ್ನಗೊಂಡ ಮನಸು ಅದ್ಭುತವಾದ ಅವಾಸ್ತವ ಪ್ರಜ್ಞೆಯನ್ನು ಕಳೆದುಕೊಂಡಿತು. ಅವರೆಲ್ಲರನ್ನೂ ಮಕೊಂಡೊ ಬಿಟ್ಟು ಬರುವಂತೆ ಶಿಫಾರಸು ಮಾಡಿದ. ಅಷ್ಟೇ ಅಲ್ಲದೆ ಪ್ರಪಂಚದ ಬಗ್ಗೆ ಮಾನವ ಹೃದಯದ ಬಗ್ಗೆ ತಾನು ತಿಳಿಸಿ ಹೇಳಿದ ಎಲ್ಲವನ್ನೂ ಮರೆತುಹೋಗುವಂತೆ ಹೇಳಿದ. ಅವರು ಎಲ್ಲೇ ಇರಲಿ ಭೂತವೆನ್ನುವುದು ಸುಳ್ಳು. ಅದು ಮತ್ತೆ ನೆನಪುಗಳನ್ನು ಹಿಂತಿರುಗಿಸಲಾರದು.

ಸರಿದುಹೋಗುವ ಒಂದೊಂದು ವಸಂತವನ್ನೂ ಮರಳಿ ಪಡೆಯಲಾಗದು. ಅಂತಿಮವಾಗಿ ಉತ್ಕಟವಾದ, ಶಾಶ್ವತವಾದ ಪ್ರೀತಿಯೊಂದೇ ಸತ್ಯ ಎಂದು ತಿಳಿಸಿದ.

ಅವನ ಸಲಹೆಯನ್ನು ಪಾಲಿಸಿದವರಲ್ಲಿ ಆಲ್ವಾರೊ ಮೊದಲಿಗನಾದ. ಎಲ್ಲವನ್ನೂ, ಬಂದು ಹೋಗುವವರನ್ನು ಕೀಟಲೆ ಮಾಡುತ್ತಿದ್ದ. ಚಿರತೆಯನ್ನೂ ಸೇರಿದಂತೆ ಮಾರಿಬಿಟ್ಟು, ನಿರಂತರ ಪಯಣದ ಟಿಕೆಟ್ಟನ್ನು ಕೊಂಡ. ಪೋಸ್ಟ್ ಕಾರ್ಡುಗಳಲ್ಲಿ, ಕೋಚಿನ ಕಿಟಕಿಯಿಂದ ಕ್ಷಣ ಕ್ಷಣವೂ ಕಾಣುತ್ತಿದ್ದ ದೃಶ್ಯಗಳನ್ನು ವಿವರಿಸಿ ಬರೆದ. ಅದು ಹೇಗಿತ್ತೆಂದರೆ, ಉದ್ದನೆಯ ಕವಿತೆಯೊಂದನ್ನು ಓದಿ ಹರಿದು ನೆನಪಿನಿಂದ ಅಳಿಸಿಹಾಕುವಂತಿತ್ತು. ಲೂಸಿಯಾನಾ ಹತ್ತಿಬೆಳೆಯ ಹೊಲಗಳಲ್ಲಿನ ನೀಗ್ರೋಗಳು, ಕೆಂಟುಕಿಯಲ್ಲಿನ ರೆಕ್ಕೆ ಕುದುರೆಗಳು, ಅರಿಜೋನಾದ ಕೆಂಬಣ್ಣದ ಸೂರ್ಯಾಸ್ತಗಳಲ್ಲಿನ ಗ್ರೀಕ್ ಪ್ರೇಮಿಗಳು ಮಿಚಿಗನ್ ಸರೋವರದ ಬದಿಯಲ್ಲಿ ಕುಳಿತು ಜಲವರ್ಣಗಳಿಂದ ಚಿತ್ರಗಳನ್ನು ಬಿಡಿಸುತ್ತಿದ್ದ ಹುಡುಗಿ, ತಾನು ಮರಳಿ ಬರುವುದಿಲ್ಲವೆಂಬುದನ್ನು ತಿಳಿಯದಿದ್ದಕಾರಣ ಬ್ರಶ್‌ಗಳನ್ನು ಹಿಡಿದುಕೊಂಡೇ ಹೋಗಿ ಬಾ ಎಂದು ಹೇಳುತ್ತಿದ್ದುದನ್ನೆಲ್ಲ ಬರೆದ. ನಂತರ ಆಲ್ಫೋನ್ಸೊ ಮತ್ತು ಜರ್ಮನ್ ಸೋಮವಾರ ಹಿಂತಿರುಗಿ ಬರುವ ಆಲೋಚನೆಯೊಂದಿಗೆ ಒಂದು ಶನಿವಾರ ಹೊರಟರು. ಆದರೆ ಅವರ ಬಗ್ಗೆ ಏನೂ ಕೇಳಿ ಬರಲಿಲ್ಲ. ಬುದ್ಧಿವಂತನಾದ ಕ್ಯಾಟಲೋನಿ ಅಲ್ಲಿಂದ ಹೊರಟ ಒಂದು ವರ್ಷದ ನಂತರ ಮಕೊಂಡೊದಲ್ಲಿ ಉಳಿದವನೆಂದರೆ ಗೇಬ್ರಿಯಲ್, ನೀಗ್ರೊಮಾಂತಾಲ ದಯೆಯಿಂದ, ಹೇಗೋ ಅಲ್ಲಿ ಉಳಿದುಕೊಂಡು, ಅಲೆಯುತ್ತಾ, ಫ್ರೆಂಚ್ ಮ್ಯಾಗ್‌ಜಿನ್‌ನಲ್ಲಿನ ಪ್ರಶ್ನೆಗಳಿಗೆ ಉತ್ತರಗಳನ್ನು ಹುಡುಕುತ್ತಾ, ಗೆದ್ದವರಿಗೆ ಪ್ಯಾರಿಸ್ ಟ್ರಿಪ್ ಎಂದು ಇದ್ದುದನ್ನು ನೋಡಿ ಸ್ಪರ್ಧೆಯಲ್ಲಿ ಭಾಗವಹಿಸುತ್ತಿದ್ದ. ಆ ಮ್ಯಾಗ್‌ಜಿನ್‌ನ ಚಂದಾದಾರ ಅರೆಲಿಯಾನೊ ಆಗಿದ್ದು, ಅವನಿಗೆ ಪ್ರಶ್ನೆಗಳಿಗೆ ಉತ್ತರವನ್ನು ಕಂಡುಕೊಳ್ಳಲು ಸಹಾಯ ಮಾಡುತ್ತಿದ್ದ. ಕೆಲವೊಮ್ಮೆ ತನ್ನ ಮನೆಯಲ್ಲಿ ಸಮಯ ಕಳೆಯುತ್ತಿದ್ದರೆ, ಮತ್ತೊಮ್ಮೆ ಅಥವಾ ಹೆಚ್ಚು ಸಮಯವನ್ನು, ಗೇಬ್ರಿಯಲ್‌ನ ರಹಸ್ಯ ಗೆಳತಿ ಮರ್ಸಿಡಿಸ್ ಕೆಲಸ ಮಾಡುತ್ತಿದ್ದ ಮತ್ತು ಮಕೊಂಡೊದಲ್ಲಿದ್ದ ಒಂದೇ ಒಂದು ಔಷಧಿಯಂಗಡಿಯಲ್ಲಿನ ಕಟುವಾಸನೆ ಹೊಮ್ಮಿಸುತ್ತಿದ್ದ ಪಿಂಗಾಣಿ ಬಾಟಲುಗಳ ನಡುವೆ ಕಳೆಯುತ್ತಿದ್ದ. ಇನ್ನೂ ನಾಶವಾಗದೆ, ನಾಶವಾಗುವ ಹಂತದಲ್ಲಿರುತ್ತ, ಒಳಗಿಂದೊಳಗೇ ನಾಶವಾಗುತ್ತಿದ್ದರೂ ನಾಶವಾಗದೆ ಉಳಿದಿದ್ದ ಭೂತಕಾಲದ ಕುರುಹಾಗಿ ಇದ್ದುದೆಂದರೆ ಅದೊಂದೇ. ಕ್ಷಣಕ್ಷಣಕ್ಕೂ ಕುಸಿಯುತ್ತಿದ್ದರೂ ಪೂರ್ತಿಯಾಗಿ ಅದು ಕುಸಿದಿರಲಿಲ್ಲ. ಕುಸಿಯಲು ಕೊನೆಯೇ ಇರಲಿಲ್ಲವೆಂಬಂತೆ ಇತ್ತು. ಮಕೊಂಡೊ ಎಷ್ಟು ನಿಷ್ಕ್ರಿಯವಾಗಿತ್ತೆಂದರೆ, ಗೇಬ್ರಿಯಲ್ ಸ್ಪರ್ಧೆಯಲ್ಲಿ ಗೆದ್ದು ಪ್ಯಾರಿಸ್ಸಿಗೆ ಹೊರಟು ನಿಂತಾಗ, ಜನಸಂದಣಿ ಇಲ್ಲದಿದ್ದ ಕಾರಣ ಟ್ರೈನನ್ನು ಸಂಕೇತಮಾಡಿ ಸ್ಟೇಷನ್‌ನಲ್ಲಿ ನಿಲ್ಲುವಂತೆ ಸೂಚಿಸಬೇಕಾಯಿತು. ಆ ಸಮಯದಲ್ಲಿ ಹಳೆಯ ಟರ್ಕ್ ಸ್ಟ್ರೀಟ್ ಖಾಲಿ ಖಾಲಿಯಾಗಿದ್ದು, ವಯಸ್ಸಾದ ಮುದುಕರು ತಮ್ಮ ಪದ್ಧತಿಯಂತೆ ಮನೆಬಾಗಿಲುಗಳಲ್ಲಿ ಸಾವಿಗಾಗಿ ಎದುರುನೋಡುತ್ತಾ ಕುಳಿತಿದ್ದರು. ಬಹಳ ವರ್ಷಗಳ ಹಿಂದೆಯೇ ಒಂದಿಷ್ಟೂ ಬಟ್ಟೆಯನ್ನು ಉಳಿಸದೆ ಮಾರಿಕೊಂಡಿದ್ದರೂ, ಮುರಿದು ಬಿದ್ದಿದ್ದ ಷೋಕೇಸುಗಳು ಮಾತ್ರ ಉಳಿದಿದ್ದವು.

ಮಿಸ್ಟರ್ ಬ್ರೌನ್ ಬನಾನಾ ಸಿಟಿಯಲ್ಲಿ ತನ್ನ ಮುಂದಿನ ಪೀಳಿಗೆಯವರಿಗಾಗಿ ಅಶಾಂತಿಯ ದಿನಗಳಲ್ಲಿ, ಅಲ್ಬಾಮದ ಪಾತರವಿಲ್ಲಾದಲ್ಲಿ ಉಪ್ಪಿನಕಾಯಿ ಮಾಡಬೇಕೆಂದುಕೊಂಡಿದ್ದ ಜಾಗದಲ್ಲಿ ಕಾಡು ಹುಲ್ಲು ಬೆಳೆದು ನಿಂತಿತ್ತು. ಫಾದರ್ ಏಂಜಲ್ ಜಾಗದಲ್ಲಿ ಬಂದಿದ್ದ ಪಾದ್ರಿಯ ಬಗ್ಗೆ ಯಾರೂ ಯೋಚಿಸುತ್ತಿರಲಿಲ್ಲ. ಅವನಾದರೊ ಎಲ್ಲರಿಂದ ಅಲಕ್ಷಿತನಾಗಿ ಮೈತುಂಬಾ ಖಾಯಿಲೆಗಳನ್ನು ಇರಿಸಿಕೊಂಡು, ದೇವರಲ್ಲಿ ಸಾವಿಗಾಗಿ ಯಾಚಿಸುತ್ತಾ ಹಾಸಿಗೆಯಲ್ಲಿ ಬಿದ್ದುಕೊಂಡಿದ್ದರೆ ಹಲ್ಲಿಗಳು, ಇಲಿಗಳು ಹತ್ತಿರದಲ್ಲಿನ ಚರ್ಚಿನ ಮೇಲೆ ಅಧಿಕಾರ ಪಡೆಯಲು ಕಿತ್ತಾಡುತ್ತಿದ್ದವು. ಆ ಮಕೊಂಡೊದಲ್ಲಿ ಪಕ್ಷಿಗಳೂ ಮರೆತಿದ್ದ, ಉಸಿರಾಡಲೂ ಕಷ್ಟವಾಗುವಂತೆ ಧೂಳು ಬಿಸಿಲು ಝಳದಿಂದ ಕೂಡಿದ್ದ, ಏಕಾಂತತೆ ಮತ್ತು ಪ್ರೀತಿಯಿಂದ ಪ್ರತ್ಯೇಕತೆಯನ್ನು ಪ್ರೀತಿಯ ಏಕಾಂತತೆಯನ್ನೂ ತೋರುತ್ತಿದ್ದ ಆ ಮನೆಯಲ್ಲಿ ಕೆಂಜಿರುವೆಗಳ ಸದ್ದಿನಿಂದ ನಿದ್ದೆಮಾಡುವುದೂ ಅಸಾಧ್ಯವಾಗಿದ್ದರೂ, ಸಂತೋಷವಾಗಿದ್ದವರೆಂದರೆ ಅರೆಲಿಯಾನೊ ಮತ್ತು ಅಮರಾಂತಾ ಉರ್ಸುಲಾ ಮಾತ್ರವೇ! ಅವರಿಬ್ಬರೂ ಪ್ರಪಂಚದಲ್ಲಿಯೇ ಅತ್ಯಂತ ಸಂತೋಷದಿಂದಿದ್ದವರಾಗಿದ್ದರು.

ಗ್ಯಾಸ್ಟನ್ ಬ್ರಸೆಲ್‌ಗೆ ಹಿಂತಿರುಗಿ ಹೋಗಿದ್ದ. ವಿಮಾನದ ನಿರೀಕ್ಷೆಯಲ್ಲಿ ಕಾದು ಕಾದು ಬೇಸತ್ತು, ಒಂದು ದಿನ ತನ್ನೆಲ್ಲ ವಸ್ತುಗಳನ್ನು ಸೂಟ್‌ಕೇಸಿನಲ್ಲಿ ತುಂಬಿಕೊಂಡು, ಪತ್ರವ್ಯವಹಾರದ ಎಲ್ಲ ದಾಖಲೆಗಳನ್ನೂ ತೆಗೆದುಕೊಂಡು, ವಿಮಾನದಲ್ಲಿಯೇ ಹಿಂತಿರುಗುವ ಆಸೆಯಿಂದ ಮತ್ತು ತನಗೆ ಕೊಟ್ಟಿದ್ದ ರಿಯಾಯಿತಿಗಳನ್ನು ತನಗಿಂತ ಹೆಚ್ಚಿನ ಮಹತ್ವದ ಯೋಜನೆಗಳನ್ನು ಮುಂದಿಟ್ಟ ಪೈಲಟ್‌ಗಳಿಗೆ ಕೊಡುವುದಕ್ಕೆ ಮೊದಲೇ, ಹೋಗಿ ಹೇಗಾದರು ವಿಮಾನದಲ್ಲಿ ವಾಪಸುಬರಬೇಕೆಂದು ಹೊರಟುನಿಂತ. ತಮ್ಮ ಮೊದಲ ಪ್ರಣಯದ ಮಧ್ಯಾಹ್ನದಿಂದ ಅಮರಾಂತಾ ಉರ್ಸುಲಾ ಮತ್ತು ಅರೆಲಿಯಾನೊ ಗಂಡನ ನಿಗಾ ಇಲ್ಲದ ಅವಕಾಶಗಳನ್ನು ಉಪಯೋಗಿಸಿಕೊಂಡು ಆಗಾಗ ದೊರೆಯುತ್ತಿದ್ದ ಆಕಸ್ಮಿಕ ಭೇಟಿಗಳಲ್ಲಿ, ಉತ್ಕಟ ಪ್ರಣಯಲೀಲೆಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದಾಗ, ಕೆಲವೊಮ್ಮೆ ಅಡೆತಡೆಗಳು ಉಂಟಾಗುತ್ತಿದ್ದವು. ಆದರೆ ಮನೆಯಲ್ಲಿ ತಾವಿಬ್ಬರೇ ಇದ್ದ ಕ್ಷಣಗಳಲ್ಲಿ, ಕಳೆದು ಹೋಗಿದ್ದುದನ್ನು ಮತ್ತೆ ಪಡೆಯುವಂತೆ ಪ್ರಣಯಾತಿರೇಕದ ಸ್ಥಿತಿಗೆ ಇಳಿಯುತ್ತಿದ್ದರು. ಅವರ ಪ್ರಣಯದಾವೇಶದ ತೀವ್ರತೆ ಎಷ್ಟಿರುತ್ತಿತ್ತೆಂದರೆ ಗೋರಿಯಲ್ಲಿ ಮಲಗಿರುವ ಫರ್ನಾಂಡಾಳಿಗೂ ನಡುಕ ಹುಟ್ಟಿಸುತ್ತಿತ್ತು. ಅಡೆತಡೆಯಿಲ್ಲದ ಪ್ರೇಮದ ಹುಚ್ಚು ಅವರನ್ನು ನಿರಂತರ ಭಾವೋದ್ವೇಗದಲ್ಲಿ ಇರಿಸುತ್ತಿತ್ತು. ಅಮರಾಂತಾ ಉರ್ಸುಲಾಳ ಕಿರುಚಾಟ, ಶೋಕದ ಹಾಡುಗಳು, ಮಧ್ಯಾಹ್ನ ಎರಡು ಗಂಟೆ ಊಟದ ಮೇಜಿನ ಮುಂದೆ, ಮತ್ತು ಬೆಳಿಗ್ಗೆ ಅಡಿಗೆಮನೆಯಲ್ಲಿ ಹೊರಹೊಮ್ಮುತ್ತಿದ್ದವು. "ನನಗೆ ನೋವಾಗುವುದು ಯಾವಾಗ ಗೊತ್ತಾ, ನಾವು ಹಾಳು ಮಾಡಿದ ಸಮಯ ನೆನೆಸಿಕೊಂಡಾಗ" ಎಂದು ಹೇಳುತ್ತಿದ್ದಳು. ಕಾಮೋದ್ರೇಕದ ಪರಾಕಾಷ್ಠೆಯಲ್ಲಿದ್ದಾಗ, ಕೆಂಜಿರುವೆಗಳು ಗಾರ್ಡನ್ನನ್ನು ಹಾಳು ಮಾಡುತ್ತಿದ್ದುದನ್ನು ತೀರದ ಹಸಿವನ್ನು ತೊಲೆಗಳಿಂದ ತೀರಿಸಿಕೊಳ್ಳುತ್ತಿದ್ದುದನ್ನು ಗಮನಿಸಿದಳು. ಅವುಗಳ ನಿಲ್ಲದ ಪ್ರವಾಹ ಅಂಗಳವನ್ನು ತುಂಬುತ್ತಿದ್ದುದನ್ನು ನೋಡಿಯೂ ಸುಮ್ಮನಿದ್ದ ಅವಳು ತನ್ನ ಮಲಗುವ ಕೋಣೆ ಪ್ರವೇಶಿಸಿದಾಗ ಮಾತ್ರವೇ ಅವುಗಳನ್ನು

ನಾಶಮಾಡಲು ಪ್ರಯತ್ನಿಸಿದಳು. ಅರೆಲಿಯಾನೊ ಚರ್ಮಕಾಗದಗಳ ಸಹವಾಸವನ್ನೇ ತೊರೆದ. ಮನೆಬಿಟ್ಟು ಹೊರಗೆ ಹೋಗುತ್ತಲೇ ಇರಲಿಲ್ಲ. ಬುದ್ಧಿವಂತ ಕ್ಯಾಟಲೋನಿಯನಿಗೆ ಕಾಗದಗಳನ್ನು ನಿರ್ಲಕ್ಷ್ಯದಿಂದ ಬೇಕೋಬಿಟ್ಟಿ ಬರೆಯುತ್ತಿದ್ದ. ಅವರಲ್ಲಿ ವಾಸ್ತವ ಪ್ರಜ್ಞೆಯಾಗಲೀ, ಸಮಯದ ಅರಿವಾಗಲಿ, ದಿನನಿತ್ಯದ ಕೆಲಸಗಳ ಬಗ್ಗೆ ಎಚ್ಚರವಾಗಲಿ ಉಳಿದಿರಲಿಲ್ಲ. ಕಿಟಕಿ ಬಾಗಿಲುಗಳನ್ನು ಮುಚ್ಚಿಕೊಂಡು, ಬೆತ್ತಲೆಯಾಗಿ, ರೆಮೆಡಿಯೋಸ್ ದ ಬ್ಯೂಟಿಯಂತೆ, ಮನೆತುಂಬ ಓಡಾಡುತ್ತಿದ್ದರು. ರೆಮೆಡಿಯೋಸ್ ದ ಬ್ಯೂಟಿ ಬಯಸುತ್ತಿದ್ದಂತೆ, ಅಂಗಳದಲ್ಲಿ ಮಣ್ಣಿನ ಮೇಲೆ ಹೊರಳಾಡುತ್ತಿದ್ದರು. ಒಂದು ಮಧ್ಯಾಹ್ನವಂತೂ ನೀರಿನ ತೊಟ್ಟಿಯಲ್ಲಿ ಪ್ರಣಯ ಸಲ್ಲಾಪದಲ್ಲಿದ್ದಾಗ ಮುಳುಗಿಯೇ ಹೋಗುತ್ತಿದ್ದರು. ಅತ್ಯಲ್ಪ ಕಾಲದಲ್ಲಿಯೇ, ಅವರು ಕೆಂಜಿರುವೆಗಳು ಮಾಡುವುದಕ್ಕಿಂತ ಹೆಚ್ಚಾಗಿ ಪೀಠೋಪಕರಣಗಳನ್ನು ಹಾಳುಮಾಡಿದರು. ಅವರು ಪ್ರೇಮದ ಹುಚ್ಚಾಟದಲ್ಲಿ ಹಾಸಿಗೆ ಮೇಲಿನ ಹೊದಿಕೆಗಳನ್ನು ಚಿಂದಿ ಚಿಂದಿ ಮಾಡಿದರು. ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಎಷ್ಟೋ ಕಾಲದಿಂದ ಅದನ್ನು ಕಾಪಾಡಿಕೊಂಡು ಬಂದಿದ್ದ. ನೆಲದ ಮೇಲೆಲ್ಲ ಹಾಸಿಗೆಯೊಳಗಿನ ಹತ್ತಿ ಚೆಲ್ಲಾಡಿ ಉಸಿರುಗಟ್ಟುವಂತಾಗಿತ್ತು. ಅರೆಲಿಯಾನೊ ತನ್ನ ಪ್ರತಿಸ್ಪರ್ಧಿಯಷ್ಟೇ ಪ್ರೀತಿ ಮಾಡುವಲ್ಲಿ ಭಯಂಕರ ಆವೇಶ ತೋರುತ್ತಿದ್ದರೂ ಅಮರಾಂತಾ ಉರ್ಸುಲಾ ತನ್ನ ಪ್ರಚಂಡ ಬುದ್ಧಿಯಿಂದ, ಲಯಬದ್ಧವಾದ ತೀವ್ರತೆಯಿಂದ ವಿನಾಶದ ಸ್ವರ್ಗವನ್ನು ಆಳುತ್ತಿದ್ದಳು. ತನ್ನ ಮುತ್ತಜ್ಜಿಯ ಅಮ್ಮ ಮಾಂಸದ ಕ್ಯಾಂಡಿಗಳನ್ನು ಮಾಡುವಲ್ಲಿ ಉಪಯೋಗಿಸುತ್ತಿದ್ದ ಅಜೇಯ ಶಕ್ತಿ ಸಾಮರ್ಥ್ಯಗಳನ್ನು ಇವಳು ತನ್ನ ಪ್ರೇಮದಲ್ಲಿ ಮಡುಗಟ್ಟಿಸಿದಂತಿತ್ತು. ಅಮರಾಂತಾ ಉರ್ಸುಲಾ ತಾನೇ ಕಂಡುಹಿಡಿದ ಹೊಸಹೊಸ ಪಟ್ಟುಗಳಿಗೆ ಹೀಗೆ ಸಂತೋಷದಿಂದ ಕೂಗುತ್ತಾ ನಗುತ್ತಾ ಇದ್ದರೆ ಅರೆಲಿಯಾನೊ ಹೆಚ್ಚು ಹೆಚ್ಚು ಮೌನಿಯಾಗುತ್ತಿದ್ದ. ಅವನ ಕಾಮೋದ್ರೇಕ ಸ್ವ ಕೇಂದ್ರಿತವಾದುದಾಗಿತ್ತು. ಒಳಗೇ ಉರಿಯುತ್ತಿತ್ತು. ಆದರೂ ಅವರಿಬ್ಬರೂ ಉದ್ರೇಕದ ಪರಾಕಾಷ್ಠೆಯನ್ನು ತಲುಪಿ ದಣಿದು ಸೋತ ನಂತರ ತಮ್ಮ ಆಯಾಸದ ಪ್ರಯೋಜನ ಪಡೆಯುತ್ತಿದ್ದರು. ಪರಸ್ಪರ ದೇಹದ ಆರಾಧನೆಗೆ ಒಳಗಾಗುತ್ತಿದ್ದರು. ಇದರಿಂದ ಅವರಿಗೆ ಬಯಕೆಯ ಕ್ಷಣಗಳಿಗಿಂತ ವಿರಾಮದ ಕ್ಷಣಗಳಲ್ಲಿಯೇ ಹೆಚ್ಚಿನ ಸಾಧ್ಯತೆಗಳನ್ನು ಅಲ್ಲಿಯವರೆಗೆ ಗಮನಕ್ಕೆ ಬಾರದಿದ್ದ ಬಯಕೆಗಳೇನೆಂಬುದನ್ನು ಕಂಡುಕೊಳ್ಳುವಲ್ಲಿ, ಗಮನಿಸಿದರು. ಅಮರಾಂತಾಳಾ ನೆಟ್ಟಗೆ ನಿಂತಿದ್ದ ಸ್ತನಗಳನ್ನು ಮೊಟ್ಟೆಯ ಬಿಳಿಭಾಗದಿಂದ ಉಜ್ಜುತ್ತಾ, ಅವಳ ತೊಡೆಗಳನ್ನು ಸವರುತ್ತಾ, ಅವಳ ಹೊಟ್ಟೆಯನ್ನು ಕೊಕೋದ ಬೆಣ್ಣೆಯಿಂದ ಸವರುತ್ತಿದ್ದರೆ, ಅವಳು ಅವನ ಮರ್ಮಾಂಗದ ಜೊತೆ ಬೊಂಬೆಯಂತೆ ಆಟವಾಡುತ್ತಿದ್ದಳು. ಅದಕ್ಕೆ ಲಿಪ್‌ಸ್ಟಿಕ್‌ನಿಂದ ಕಣ್ಣು ಬರೆದು ಐಬ್ರೋ ಪೆನ್ಸಿಲ್‌ನಿಂದ ಟರ್ಕಿಯವನ ರೀತಿಯ ಮೀಸೆ ಬರೆದು ಬೋ ಟೈ ಮತ್ತು ಟಿನ್‌ಫಾಯಿಲ್‌ನಿಂದ ಹ್ಯಾಟು ಮಾಡಿ ಹಾಕುತ್ತಿದ್ದಳು. ಒಂದು ರಾತ್ರಿ ಅವರಿಬ್ಬರೂ ತಮ್ಮ ಮೇಲೆ ಜ್ಯಾಮ್ ಸುರಿದುಕೊಂಡು ಒಬ್ಬರನ್ನೊಬ್ಬರು ನೆಕ್ಕುತ್ತಾ ಅಂಗಳದ ನೆಲದ ಮೇಲೆ ಬಿದ್ದು ಪ್ರೇಮದಾಟದಲ್ಲಿ ಮುಳುಗಿದ್ದಾಗ, ಮಾನವ ಭಕ್ಷಕ ಇರುವೆಗಳ ಒಂದು ದೊಡ್ಡ ಪ್ರವಾಹ ಅವರನ್ನು ತಿನ್ನಲು ಸಿದ್ಧವಾದಂತೆ ಅವರ ಮೇಲೆ ಏರಿಬಂದಾಗ ಅವರಿಗೆ ಎಚ್ಚರವಾಯಿತು.

ಅವರ ಹುಚ್ಚು ಪ್ರೇಮದಾಟದ ಮಧ್ಯೆ ಬಿಡುವುಸಿಕ್ಕಾಗ ಅಮರಾಂತಾ ಉರ್ಸುಲಾ ಗ್ಯಾಸ್ಟನ್‌ನ ಪತ್ರಗಳಿಗೆ ಉತ್ತರಿಸುತ್ತಿದ್ದಳು. ಅವನು ಬಹಳ ದೂರವಿದ್ದುದೇ ಅಲ್ಲದೆ ಕೆಲಸದಲ್ಲಿ ವ್ಯಸ್ತನಾಗಿದ್ದುದರಿಂದ ಅವಳಿಗೆ ಅವನು ಬರುವ ಸಾಧ್ಯತೆ ಕಾಣಲಿಲ್ಲ. ಅವನು ತನ್ನ ಕಾಗದವೊಂದರಲ್ಲಿ, ತನ್ನ ತಂದೆ ತಾಯಿ ವಿಮಾನವನ್ನು ಹಡಿಗಿನಲ್ಲಿ ಕಳಿಸಿಕೊಟ್ಟಿರುವುದಾಗಿಯೂ ಅದನ್ನು ತಪ್ಪಿನಿಂದಾಗಿ ಬ್ರಸಲ್‌ನಲ್ಲಿನ ಷಿಪ್ಪಿಂಗ್ ಏಜಂಟ್ ಶಾಂಗಾನ್ಯಿಕಾಗೆ ಕಳಿಸಿ, ಚದುರಿಹೋಗಿರುವ ಮಕೊಂಡೊ ಬುಡಕಟ್ಟು ಜನಾಂಗವೊಂದಕ್ಕೆ ತಲುಪಿಸಿರುವುದಾಗಿಯೂ ತಿಳಿಸಿ ಬರೆದಿದ್ದ. ಈ ಗೊಂದಲದಿಂದಾಗಿ ವಿಮಾನವನ್ನು ಹಿಂದಕ್ಕೆ ಪಡೆಯಲು ಕಡೆಯ ಪಕ್ಷ ಎರಡು ವರ್ಷವಾದರೂ ಬೇಕಾಗುತ್ತಿತ್ತು. ಆದ್ದರಿಂದ ಅಮರಾಂತಾ ಉರ್ಸುಲಾ ಅವನು ಬರುವ ಸಾಧ್ಯತೆಯನ್ನೇ ತಳ್ಳಿಹಾಕಿದಳು. ಅರೆಲಿಯಾನೊಗೆ ಹೊರ ಪ್ರಪಂಚದ ಜೊತೆ ಸಂಪರ್ಕವೇ ಅಷ್ಟಾಗಿ ಇರಲಿಲ್ಲ. ಏನಿದ್ದರೂ ಕ್ಯಾಟಲೋನಿಯನ್ನನಿಂದ ಬರುತ್ತಿದ್ದ ಪತ್ರಗಳು, ಮತ್ತು ಔಷಧಿಯಂಗಡಿಯಲ್ಲಿದ್ದ ಹೆಚ್ಚು ಮಾತನಾಡುತ್ತಿರಲಿಲ್ಲವಾದ ಗೇಬ್ರಿಯಲ್‌ನ ಗೆಳತಿಯ ಮೂಲಕ ಗೇಬ್ರಿಯಲ್ ಬಗ್ಗೆ ತಿಳಿಯುತ್ತಿತ್ತು. ಮೊದಲಿನ ಸಂಬಂಧ ವಾಸ್ತವವಾದುದಾಗಿತ್ತು. ಕತ್ತಿನತನಕ ಸ್ವೆಟರ್ ಹಾಕಿಕೊಂಡು ಮಾಂಟ್‌ಪಾರ್‌ನೆಸ್ಸೇ ಕೆಫೆಗಳಲ್ಲಿ ಪ್ರೇಮಿಗಳು ತುಂಬಿಕೊಂಡಿದ್ದಾಗ ಮಾತ್ರ ಅದನ್ನು ತೆಗೆಯುತ್ತಾನೆ. ಹಸಿವನ್ನು ನೀಗಿಕೊಳ್ಳಲು, ದಿನದಲ್ಲಿ ಮಲಗುತ್ತಾ ರಾತ್ರಿಗಳಲ್ಲಿ ಬರೆಯುತ್ತಾ, ರೂಮಿನೊಳಗಿಂದ ಕೊಳೆತ ಹೂಕೋಸಿನ ವಾಸನೆ ಹೀರುತ್ತಾ ಇರುವಂತೆ, ಗೇಬ್ರಿಯಲ್‌ನನ್ನು, ಅರೆಲಿಯಾನೊ ಕಲ್ಪಿಸಿಕೊಂಡ. ಅಲ್ಲದೆ ಅವನಿಂದ ಪತ್ರಗಳು ಬರುವುದೂ ಅನಿಶ್ಚಿತವಾಯಿತು. ಕ್ಯಾಟಲೋನಿಯಿಂದ ಮಾತ್ರ ಬರುತ್ತಿದ್ದ ಪತ್ರಗಳಂತೂ ದುಃಖಿತಪ್ತವಾಗಿದ್ದವು. ಆದ್ದರಿಂದ ಅಮರಾಂತಾ ಉರ್ಸುಲಾಳಿಗೆ ಗಂಡನ ಬಗ್ಗೆ ಹೇಗನಿಸಿತೊ ಇವನಿಗೂ ತನ್ನ ಗೆಳೆಯರ ಬಗ್ಗೆ ಹಾಗೇ ಅನಿಸಿತು. ಈಗ ಅವರಿಬ್ಬರೂ ಶೂನ್ಯ ಪ್ರಪಂಚವೊಂದರಲ್ಲಿ ತೇಲಾಡುತ್ತಿದ್ದರು. ಪ್ರೇಮವೊಂದೇ ನಿತ್ಯದ ಮತ್ತು ಶಾಶ್ವತವಾದ ಸತ್ಯವಾಗಿತ್ತು; ವಾಸ್ತವವಾಗಿತ್ತು.

ಇದ್ದಕ್ಕಿದ್ದಂತೆ, ಅವರು ಮೈಮರೆತಿದ್ದ ಸಂತೋಷದ ಪ್ರಪಂಚದ ಮೇಲೆ ಗ್ಯಾಸ್ಟನ್ ಹಿಂತಿರುಗುವ ಸುದ್ದಿ ಆಘಾತದಂತೆ ಎರಗಿತು. ಅರೆಲಿಯಾನೊ ಮತ್ತು ಅಮರಾಂತಾ ಉರ್ಸುಲಾ ಇಬ್ಬರೂ ಕಣ್ಣು ತೆರೆದರು. ತಮ್ಮ ಆತ್ಮಗಳನ್ನು ತಡಕಾಡಿದರು. ಎದೆ ಮೇಲೆ ಕೈಯಿರಿಸಿಕೊಂಡು ಗ್ಯಾಸ್ಟನ್ನನ ಪತ್ರವನ್ನು ಓದಿದರು. ಅವರಿಗೆ ಒಂದು ವಿಷಯ ಅರ್ಥವಾಯಿತು. ಅವರು ಒಬ್ಬರಿಗೊಬ್ಬರು ಎಷ್ಟು ಹತ್ತಿರವಾಗಿದ್ದರೆಂದರೆ, ಪರಸ್ಪರ ಅಗಲುವುದಕ್ಕಿಂತ ಒಟ್ಟಿಗೆ ಸಾಯುವುದೇ ಮೇಲು ಎಂದುಕೊಂಡರು. ಅವಳು ಗಂಡನಿಗೆ ತಿರುಚಿದ ಸತ್ಯಾಂಶಗಳನ್ನು ತಿಳಿಸಿದಳು. ಅವನ ಬಗ್ಗೆ ತನಗಿದ್ದ ಪ್ರೀತಿಯನ್ನು ತಿಳಿಸುತ್ತಾ, ಅವನ ಬರವಿಗಾಗಿ ತಾನೆಷ್ಟು ಕಾತುರಳಾಗಿದ್ದೇನೆಂದು ಹೇಳುತ್ತಲೇ, ಅರೆಲಿಯಾನೊನನ್ನು ಬಿಟ್ಟು ಬದುಕುವುದು ತನಗೆ ಸಾಧ್ಯವಾಗದಿರುವುದು ವಿಧಿಯಾಟವೆಂದು ಹೇಳಿಕೊಂಡಿದ್ದಳು. ಅವರ ನಿರೀಕ್ಷೆಗೆ ವಿರುದ್ಧವಾಗಿ ಗ್ಯಾಸ್ಟನ್ ಸಮಾಧಾನಕರವಾದ ಮತ್ತು ವಾತ್ಸಲ್ಯ ಪೂರಿತವಾದ ರೀತಿಯಲ್ಲಿ ಪತ್ರ ಬರೆದಿದ್ದ. ಎರಡು ಪುಟಗಳನ್ನು ಪ್ರೇಮಾವೇಶದ ವಿಚಾರದಲ್ಲಿ ಜಾಗರೂಕತೆಯಿಂದ ಇರಬೇಕೆಂದೂ ತಿಳಿಸಿದ್ದ. ಕಡೆಯ ಪ್ಯಾರಾದಲ್ಲಿ ತಮ್ಮಿಬ್ಬರ

ಪ್ರೀತಿಯ ಸಂಬಂಧದಲ್ಲಿ ಎಷ್ಟು ಸಂತೋಷವಾಗಿದ್ದರೊ ಅಂತೆಯೇ ಅವರಿಬ್ಬರಿಗೂ ಸಂತೋಷ ದೊರೆಯಲೆಂದು ಹಾರೈಸಿ ತಿಳಿಸಿದ್ದ. ಅಮರಾಂತಾಳಿಗೆ ಗಂಡನ ಧೋರಣೆ ನಿರೀಕ್ಷಿಸಿದ್ದಾಗಿರಲಿಲ್ಲ. ಗಂಡನಿಗೆ ತನ್ನನ್ನು ವಿಧಿ ಲಿಖಿತಕ್ಕೆ ಬಿಟ್ಟು ಬಿಡೆಂದು ಸೂಚಿಸಿದ್ದು ಒಂದು ರೀತಿಯಲ್ಲಿ ತನ್ನನ್ನು ನಿವಾರಿಸಿಕೊಳ್ಳಲು ತಾನೇ ಪೀಠಿಕೆಯೊಂದನ್ನು ಸಿದ್ಧಮಾಡಿಕೊಟ್ಟಂತಾಯಿತೆಂದು ಭಾವಿಸಿ ಅವಮಾನವನ್ನು ಅನುಭವಿಸಿದಳು. ಅವನ ಮೇಲೆ ಉಂಟಾಗಿದ್ದ ರೋಷ ಆರು ತಿಂಗಳ ನಂತರ ಮತ್ತಷ್ಟು ಹೆಚ್ಚಾಯಿತು. ಗ್ಯಾಸ್ಟನ್ ಲಿಯೊಪೋಲ್‌ವಿಲ್ಲೆಯಿಂದ ಕಾಗದ ಬರೆದ. ಕಡೆಯದಾಗಿ ವಿಮಾನವನ್ನು ಅಲ್ಲಿಂದ ಪಡೆದ. ಪತ್ರದಲ್ಲಿ ಮಕೊಂಡೊದಲ್ಲಿ ತನ್ನದಾಗಿ ಉಳಿದಿರುವ ಆತ್ಮೀಯ ವಸ್ತುವಾದ ಮೋಟರ್ ಬೈಕನ್ನು ಕಳಿಸಿಕೊಡಬೇಕೆಂದು ಬರೆದದ್ದನ್ನು ಓದಿದಾಗ ರೋಷಕ್ಕೆ ಎಣೆಯಿಲ್ಲವಾಯಿತು. ಅರೆಲಿಯಾನೊ ಅಮರಾಂತಾ ಉರ್ಸುಲಾಳ ಸಿಟ್ಟು ಸಂಕಟಗಳನ್ನು ತಾಳ್ಮೆಯಿಂದ ಸಹಿಸಿಕೊಂಡು ಅವಳಿಗೆ ತಾನು ಗಂಡನಂತೆಯೇ ಸುಖದಲ್ಲಿ ಜೊತೆಯಾಗಿರುವಂತೆ ಕಷ್ಟದಲ್ಲಿಯೂ ಜೊತೆಯಾಗಿರಬಲ್ಲೆ ಎಂದು ತೋರಿಸಲು ಪ್ರಯತ್ನಿಸಿದ. ಗ್ಯಾಸ್ಟನ್ ಉಳಿಸಿಹೋಗಿದ್ದ ಹಣದಲ್ಲಿ, ದಿನನಿತ್ಯದ ಅಗತ್ಯಕ್ಕೆ ಉಳಿದದ್ದು ತೀರಾ ಕಡಿಮೆಯಾಗುತ್ತಿದ್ದಂತೆ, ಅವರಿಬ್ಬರ ನಡುವಿನ ಬಾಂಧವ್ಯ ಮತ್ತಷ್ಟು ಗಟ್ಟಿಗೊಂಡಿತು. ಅದು ಪ್ರೀತಿಯ ಉನ್ಮಾದದಷ್ಟು ತೀವ್ರವಾಗಿ ಇಲ್ಲದಿದ್ದರೂ ಎಷ್ಟು ಸಾಧ್ಯವೊ ಅಷ್ಟರಲ್ಲಿ ಪ್ರೀತಿಸುತ್ತಾ, ಹಿಂದಿನ ದಿನಗಳಲ್ಲಿದ್ದಷ್ಟೇ ಸಂತೃಪ್ತಿಯನ್ನು ಪಡೆಯುತ್ತಿದ್ದರು. ಪಿಲಾರ್ ತರ್ನಿರಾ ಸಾಯುವಾಗ ಅವರು ಮಗುವಿನ ಬರವಿನ ನಿರೀಕ್ಷೆಯಲ್ಲಿದ್ದರು.

ಬಸಿರಿನಿಂದಾಗಿ ಆಲಸಿಕೆ ಅನುಭವಿಸುತ್ತಿದ್ದ ಉರ್ಸುಲಾ ಮೀನುಗಳ ಬೆನ್ನು ಮೂಳೆಗಳಿಂದ ತಯಾರಾದ ನೆಕ್‌ಲೇಸುಗಳ ವ್ಯಾಪಾರವನ್ನು ಆರಂಭಿಸಲು ಪ್ರಯತ್ನಿಸಿದಳು. ಆದರೆ ಮರ್ಸಿಡಿಸ್ ಒಂದು ಡಜನ್ ನೆಕ್‌ಲೇಸುಗಳನ್ನು ಕೊಂಡದ್ದುಬಿಟ್ಟರೆ ಬೇರೆ ಯಾವ ಗಿರಾಕಿಯೂ ಸಿಗಲಿಲ್ಲ. ಅರೆಲಿಯಾನೊ ಮೊಟ್ಟ ಮೊದಲಬಾರಿಗೆ, ತನಗೆ ತಿಳಿದಿದ್ದ ಭಾಷೆಗಳು, ತಾನು ಹೋಗದಿದ್ದ ಸ್ಥಳಗಳ ಬಗೆಗಿನ ಅರಿವು ಮತ್ತು ವಿಶ್ವಕೋಶದಲ್ಲಿನ ಅನೇಕ ವಿಷಯಗಳ ಜ್ಞಾನ, ತನ್ನ ಹೆಂಡತಿಯ ಬಳಿ ಇರುವ ಪೆಟ್ಟಿಗೆಯನ್ನು ತುಂಬಿರುವ ಆಭರಣಗಳೆಷ್ಟು ನಿಷ್ಪ್ರಯೋಜಕವೊ ಅಷ್ಟೇ ನಿಷ್ಪ್ರಯೋಜಕವೆಂಬುದನ್ನು ಅರ್ಥಮಾಡಿಕೊಂಡ. ಹೆಂಡತಿಯ ಬಳಿ ಇದ್ದ ಆಭರಣಗಳು ಅತ್ಯಂತ ಬೆಲೆಯುಳ್ಳದ್ದು, ಮಕೊಂಡೊದ ಜನರೆಲ್ಲರಲ್ಲಿರುವ ಹಣವನ್ನೆಲ್ಲ ಒಟ್ಟುಗೂಡಿಸಿದರೆ ಎಷ್ಟಾಗಬಹುದಾಗಿತ್ತೊ ಅದಕ್ಕೆ ಸಮವಾಗಿತ್ತಾದರೂ ಪ್ರಯೋಜನಕ್ಕೆ ಬಾರದಂತಿತ್ತು. ಪವಾಡ ಸದೃಶವಾಗಿ ಅವರು ಬದುಕಿದರು. ಅಮರಾಂತಾ ಇದರಿಂದಾಗಿ ತನ್ನಲ್ಲಿನ ಹಾಸ್ಯ ಪ್ರವೃತ್ತಿಯನ್ನಾಗಲಿ, ಪ್ರಣಯ ಕೀಟಲೆಮಾಡುವ ಪ್ರತಿಭೆಯನ್ನಾಗಲೀ ಕಳೆದುಕೊಂಡಿರಲಿಲ್ಲವಾದರೂ ಮಧ್ಯಾಹ್ನದ ವಿರಾಮದ ವೇಳೆಯಲ್ಲಿ, ಊಟವಾದ ಮೇಲೆ ಬಂದು ಅಂಗಳದಲ್ಲಿ ಕುಳಿತು ಯೋಚಿಸುತ್ತಿರುವ ಪ್ರವೃತ್ತಿಯನ್ನು ರೂಢಿಸಿಕೊಂಡಳು. ಕೆಲವೊಮ್ಮೆ ಅರೆಲಿಯಾನೊ ಜೊತೆಗಿರುತ್ತಿದ್ದ. ಕೆಲವೊಮ್ಮೆ ಅವರಿಬ್ಬರೂ ಎದುರುಬದರಾಗಿ ಒಬ್ಬರ ಕಣ್ಣಲ್ಲಿ ಒಬ್ಬರು ಕಣ್ಣಿಟ್ಟು, ಹಿಂದಿನಂತೆಯೇ ಪ್ರೀತಿಸುತ್ತಾ ರಾತ್ರಿಯಾಗುವವರೆಗೂ

ಕುಳಿತಿರುತ್ತಿದ್ದರು. ಭವಿಷ್ಯದ ಅನಿಶ್ಚಿತತೆ ಭೂತದ ಕಡೆಗೆ ಹೊರಳಿ ನೋಡುವಂತೆ ಮಾಡಿತು. ಅವರು ಸುರಿಮಳೆಯ ಕಾಲದ ಸ್ವರ್ಗದಲ್ಲಿ ಮುಳುಗಿಹೋಗಿದ್ದರು. ಅಂಗಳದಲ್ಲಿನ ನೀರಿನ ಮಡುಗಳಿಂದ ಒಬ್ಬರಿಗೊಬ್ಬರು ನೀರನ್ನು ಎರಚಾಡಿಕೊಳ್ಳುತ್ತಿದ್ದರು. ಉರ್ಸುಲಾಳ ಮೇಲೆ ಹಾಕಲು ಹಲ್ಲಿಗಳನ್ನು ಕೊಲ್ಲುತ್ತಿದ್ದರು. ಅವಳನ್ನು ಜೀವಂತವಾಗಿ ಸಮಾಧಿ ಮಾಡುವಂತೆ ನಟಿಸುತ್ತಿದ್ದರು. ಈ ಎಲ್ಲ ನೆನಪುಗಳೂ ತಾವಿಬ್ಬರೂ ತಮಗೆ ನೆನಪಿದ್ದಷ್ಟೂ ಕಾಲದಿಂದ ಬಹಳ ಸಂತೋಷವಾಗಿಯೇ ಇದ್ದುದರ ಸತ್ಯವನ್ನು ಮನದಟ್ಟುಮಾಡಿತು. ಇನ್ನೂ ಹಿಂದಕ್ಕೆ ಹೋದಾಗ ಅಮರಾಂತಾ ಉರ್ಸುಲಾಗೆ, ಒಂದು ವಿಷಯ ನೆನಪಿಗೆ ಬಂತು. ಒಂದು ಮಧ್ಯಾಹ್ನ ಅವಳು ಬೆಳ್ಳಿ ವರ್ಕ್‌ಷಾಪಿಗೆ ಹೋದಾಗ, ಅಲ್ಲಿದ್ದ ಪುಟ್ಟ ಅರೆಲಿಯಾನೊನನ್ನು ಯಾವುದೊ ಅನಾಥ ಮಗುವೆಂದೂ ಯಾರೊ ಬುಟ್ಟಿಯಲ್ಲಿ ತೇಲಿಬಿಟ್ಟಿದ್ದರೆಂದು ಹೇಳಿದ್ದು ನೆನಪಾಯಿತು. ಯಾರಿಗೂ ಈ ಕತೆಯಲ್ಲಿ ನಂಬಿಕೆಯಿರಲಿಲ್ಲವಾದರೂ ಅದಕ್ಕೆ ಪ್ರತಿಯಾಗಿ ಸತ್ಯವೇನೆಂದು ಊಹಿಸಲು ಸಾಧ್ಯವಾಗಿರಲಿಲ್ಲ. ಎಲ್ಲ ಸಾಧ್ಯತೆಗಳ ಬಗ್ಗೆ ಆಲೋಚನೆ ಮಾಡಿದ ನಂತರ, ಅದು ಫರ್ನಾಂಡಾಳ ಮಗುವಾಗಿರಲಿಲ್ಲವೆಂಬುದಂತೂ ಖಚಿತವಾಗಿತ್ತು. ಅಮರಾಂತಾ ಉರ್ಸುಲಾಳಿಗೆ, ಕುಪ್ರಸಿದ್ಧಳಾಗಿದ್ದ ಪೆಟ್ರಾಕೋಟ್ಸ್ ಮಗುವಿರಬಹುದೆನಿಸಿದರೂ, ಆ ಅನಿಸಿಕೆಯೇ ಅವಳಲ್ಲೊಂದು ಭೀತಿಯನ್ನು ಹುಟ್ಟಿಸಿತ್ತು.

ತಾನು ತನ್ನ ಹೆಂಡತಿಯ ಸೋದರನೆಂಬುದು ಖಚಿತವಾದಾಗ ಅರೆಲಿಯಾನೊ ಮಾನಸಿಕ ಹಿಂಸೆಯನ್ನು ಅನುಭವಿಸಿದ. ತನ್ನ ತಂದೆತಾಯಿಯರು ಯಾರೆಂದು ತಿಳಿಯಲು ಚರ್ಚಿಗೆ ಹೋಗಿ, ಅಲ್ಲಿನ ಜಿರಳೆ ನುಸಿ ತಿಂದಿದ್ದ ಹಳೆ ಕಡತಗಳನ್ನು ಶೋಧಿಸಿದ. ಅತ್ಯಂತ ಪ್ರಾಚೀನವಾದ ಜನ್ಮ ಪ್ರಮಾಣ ಪತ್ರವೊಂದು ದೊರೆಯಿತಾದರೂ ಅದು ಅಮರಾಂತಾ ಬ್ಯುಂಡಿಯಾಳದಾಗಿತ್ತು. ಅದೂ ತಾನು ಹುಡುಗನಾಗಿದ್ದಾಗ. ಫಾದರ್ ನಿಕಾನೋರ್ ಕಿಯಾ ದೇವರ ಅಸ್ತಿತ್ವವನ್ನು ಚಾಕೊಲೇಟ್ ತಂತ್ರಗಳಿಂದ ಸ್ಥಾಪಿಸಲು ಪ್ರಯತ್ನಿಸುತ್ತಿದ್ದ ಕಾಲದ್ದು, ಹದಿನೇಳು ಮಂದಿ ಅರೆಲಿಯಾನೊಗಳಲ್ಲಿ ತಾನೂ ಒಬ್ಬನೆಂಬ ಭಾವನೆಗೆ ಒಳಗಾಗಲು ತೊಡಗಿದ. ನಾಲ್ಕು ಸಂಪುಟಗಳನ್ನು ಹುಡುಕಿ ಅವರ ಜನ್ಮ ಪ್ರಮಾಣ ಪತ್ರಗಳಿಗಾಗಿ ಶೋಧಿಸತೊಡಗಿದ. ಆದರೆ ಆ ಪ್ರಮಾಣ ಪತ್ರಗಳಲ್ಲಿ ನಮೂದಿತ ವಯಸ್ಸು ತನಗಿಂತ ಬಹಳ ಹಿಂದಿನವರದಾಗಿತ್ತು. ಸಂಬಂಧವನ್ನು ರುಜುವಾತುಪಡಿಸುವ ಪ್ರಯತ್ನದಲ್ಲಿ ಸೋತಾಗ ಅನಿಶ್ಚಿತತೆಯಿಂದ ಕಂಪಿಸಿದ. ಮೊಣಕಾಲು ನೋವಿನಿಂದ ಹಾಸಿಗೆ ಹಿಡಿದು ಮಲಗಿದ್ದ ಪಾದ್ರಿ ಇವನ ಚಟುವಟಿಕೆಗಳನ್ನು ಗಮನಿಸುತ್ತಲೇ ಇದ್ದ. ಪ್ರೀತಿಯಿಂದ ಅವನನ್ನು ಮಾತನಾಡಿಸಿ ಹೆಸರೇನೆಂದು ವಿಚಾರಿಸಿದ.

"ಅರೆಲಿಯಾನೊ ಬ್ಯುಂಡಿಯಾ" ಎಂದು ತಿಳಿಸಿದ.

"ಹಾಗಾದರೆ ಹುಡುಕು ಹುಡುಕಿ ತಲೆಕೆಡಿಸಿಕೊಳ್ಳಬೇಡ"

"ಬಹಳ ವರ್ಷಗಳ ಹಿಂದೆ ಈ ಹೆಸರಿನಲ್ಲಿ ಒಂದು ಬೀದಿ ಇತ್ತು. ಆ ದಿನಗಳಲ್ಲಿ, ಜನರಲ್ಲಿ, ಬೀದಿಗಳಿಗೆ ತಮ್ಮ ಮಕ್ಕಳ ಹೆಸರನ್ನು ಇಡುವ ಪದ್ಧತಿ ಇತ್ತು" – ಎಂದು ಖಚಿತವಾಗಿ ಹೇಳಿದ.

ಅರೆಲಿಯಾನೊ ಸಿಟ್ಟಿಗೆದ್ದ

"ಹಾಗಾದರೆ ನಿಮಗೂ ನಂಬಿಕೆಯಿಲ್ಲ" ಎಂದ.

"ನಂಬಿಕೆ? ಇದರ ಅರ್ಥ ಏನು?"

"ಅದೇ ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಮೂವತ್ತೆರಡು ಯುದ್ಧಗಳನ್ನು ಮಾಡಿ, ಸೋತ ಎನ್ನುವುದು. ಸೈನ್ಯ ನುಗ್ಗಿ ಬಂದು ಮೂರು ಸಾವಿರ ಕಾರ್ಮಿಕರನ್ನು ಗುಂಡಿಕ್ಕಿ ಕೊಂದಿತು. ಇನ್ನೂರು ಬೋಗಿಗಳಲ್ಲಿ ಅವರ ಶವಗಳನ್ನು ಹೊತ್ತುಕೊಂಡೊಯ್ದು ಸಮುದ್ರದಲ್ಲಿ ಎಸೆದರು ಎನ್ನುವ ಸತ್ಯವನ್ನು" ಎಂದು ವಿವರಿಸಿದ.

ಪಾದ್ರಿ ದಯಾರ್ದ್ರ ದೃಷ್ಟಿಯಿಂದ ಅವನತ್ತ ನೋಡಿದರು.

"ಮಗು, ಈ ಕ್ಷಣ ನಾನು ನೀನು ಬದುಕಿದ್ದೀವಿ ಎನ್ನುವುದಷ್ಟೇ ಸಾಕು".

ಇದರಿಂದಾಗಿ ಅರೆಲಿಯಾನೊ ಮತ್ತು ಅಮರಾಂತಾ ಉರ್ಸುಲಾ ಬುಟ್ಟಿಯಲ್ಲಿ ಸಿಕ್ಕ ಮಗು ಎನ್ನುವ ಕತೆಯನ್ನು ನಂಬಿಕೆಯಿಂದಲ್ಲದಿದ್ದರೂ ನಂಬಿದರು. ಇದರಿಂದ ಅವರನ್ನು ಕಾಡುತ್ತಿದ್ದ ಭೀತಿಯಿಂದ ಪಾರಾದರು. ಬಸಿರಿನ ದಿನಗಳು ಹೆಚ್ಚುತ್ತಿದ್ದಂತೆ ಅವರಿಬ್ಬರೂ ಒಂದೇ ಎನ್ನುವಷ್ಟು ಹತ್ತಿರವಾದರು. ಇನ್ನೇನು ಬಿದ್ದೇ ಹೋಗುತ್ತದೆಂಬ ಸ್ಥಿತಿಯಲ್ಲಿದ್ದ ಮನೆಯಲ್ಲಿ ಏಕಾಂತದಲ್ಲಿ ಒಬ್ಬರನ್ನೊಬ್ಬರು ಬೆಸೆದುಕೊಂಡಂತಿದ್ದರು. ತೀರಾ ಅಗತ್ಯವಾದ ಜಾಗಗಳಿಗೆ, ಪ್ರೇಮದ ಮೋಹಕ ಚಿತ್ರಗಳು ಗೋಚರಿಸುತ್ತಿದ್ದ ಫರ್ನಾಂಡಾಳ ಮಲಗುವ ಮನೆಗೆ, ಅಮರಾಂತಾ ಉರ್ಸುಲಾ ಹುಟ್ಟುವ ಮಗುವಿಗಾಗಿ ಕಾಲು ಚೀಲ, ಕುಲಾವಿಗಳನ್ನು ಹೆಣೆಯುತ್ತ ಕುಳಿತಿರುತ್ತಿದ್ದ ಅಂಗಳಕ್ಕೆ ಅರೆಲಿಯಾನೊ ಸಾಂದರ್ಭಿಕವಾಗಿ ಕ್ಯಾಟಲೋನಿಯನಿಗೆ ಪತ್ರಗಳನ್ನು ಬರೆಯುತ್ತಿದ್ದ ಜಾಗಕ್ಕೆ ತಮ್ಮ ಓಡಾಟವನ್ನು ಸೀಮಿತಗೊಳಿಸಿಕೊಂಡಿದ್ದರು. ಮನೆಯ ಉಳಿದ ಭಾಗವನ್ನೆಲ್ಲ ಹಾಳಾಗಲು ಬಿಟ್ಟು ಬಿಟ್ಟಿದ್ದರು. ಸಿಲ್ವರ್ ಷಾಪ್, ಮೆಲ್‌ಕಿಯಾಡ್ಸ್ ರೂಮು, ಮನೆ ಕೆಲಸಗಳಿಗೆ ಮೌನವಾಗಿ ಕರಗಿಹೋಗುತ್ತಿದ್ದ ಸಾಂತಾ ಸೋಫಿಯಾ ದ ಲಾ ಪೀದಾದಳ ಪ್ರಪಂಚವೆಲ್ಲ ಎಲ್ಲೋ ಆಳದಲ್ಲಿ ಹುದುಗಿ ಹೋಗಿದ್ದು, ಅದರೊಳಗೆ ಪ್ರವೇಶಿಸಲು ಯಾರಿಗೂ ಧೈರ್ಯವಿರಲಿಲ್ಲ. ಸುತ್ತುವರೆದಿದ್ದ ಪ್ರಕೃತಿ ಪ್ರಕೋಪದ ನಡುವೆಯೂ ಅಮರಾಂತಾ ಉರ್ಸುಲಾ ಮತ್ತು ಅರೆಲಿಯಾನೊ, ಒರೆಗಾನೊ, ಬೆಗೋನಿಯಾ ಗಿಡಗಳನ್ನು ಬೆಳೆಸಿದರು. ತಮಗೆ ಬೇಕಾದ ಜಾಗದ ಸುತ್ತಲೂ ಸುಣ್ಣದ ಕಲ್ಲಿನಿಂದ ಗುರುತುಮಾಡಿಕೊಂಡಿದ್ದರು. ಕಟ್ಟಡದ ಸುತ್ತಲೂ ಮನುಷ್ಯ ಮತ್ತು ಇರುವೆಗಳ ನಡುವೆ ನಡೆಯುತ್ತಿರುವ ಹೋರಾಟದಿಂದಾಗಿ, ಕಂದಕಗಳನ್ನು ತೋಡಿ ರಕ್ಷಿಸಿಕೊಂಡಿದ್ದರು. ಉದ್ದನೆಯ, ನಿರ್ಲಕ್ಷಿಸಲ್ಪಟ್ಟ ಕೂದಲು ಮುಖದಲ್ಲಿ ಮೂಡುತ್ತಿದ್ದ ಕಲೆಗಳು, ಊತದ ಕಾಲುಗಳು, ಪ್ರಣಯ ಕ್ಷಣಗಳಲ್ಲಿ ವಿಕೃತಗೊಳ್ಳುತ್ತಿದ್ದ ದೇಹ, ಪಂಜರದಲ್ಲಿ ಕನೇರಿ ಪಕ್ಷಿಗಳನ್ನು ಸೆರೆಹಿಡಿದು, ಗಂಡನನ್ನೂ ಹದ್ದುಬಸ್ತಿನಲ್ಲಿ ಇರಿಸಿಕೊಂಡು ಬಂದಾಗಿನ ಅವಳ ಪ್ರಾಯದ ಸ್ಥಿತಿಗಿಂತ ಪೂರ್ತಿಯಾಗಿ ಬದಲಾಯಿಸಿಬಿಟ್ಟಿದ್ದವು. ಆದರೂ ಅವಳ ಲವಲವಿಕೆ ಹುರುಪು ಉತ್ಸಾಹಗಳು ಕುಂದಿರಲಿಲ್ಲ.

'ಥುತ್, ಯಾರಿಗೆ ತಾನೇ ಗೊತ್ತಿತ್ತು, ನಾವು ಹೀಗೆ ನರಭಕ್ಷರಾಗಿ ಬದಲಾಯಿಸುತ್ತೇವೆ! ಎಂದು!" ಎಂದು ನಗುನಗುತ್ತಲೇ ಹೇಳುತ್ತಿದ್ದಳು. ಅವಳ ಬಸಿರು ಆರು ತಿಂಗಳದಾಗಿದ್ದಾಗ ಬಂದ ಕಾಗದದಿಂದ ಹೊರ ಪ್ರಪಂಚದೊಂದಿಗಿದ್ದ ಕಡೆಯ ಸಂಬಂಧವೂ ಕಡಿದು ಬಿತ್ತು. ಅದು ಬುದ್ಧಿವಂತ ಕ್ಯಾಟಲೋನಿಯನ್ನನಿಂದ ಬಂದುದಾಗಿರಲಿಲ್ಲ. ಅದು ಬಾರ್ಸೆಲೋನಾದಿಂದ ಬಂದಿತ್ತು. ಕವರಿನ ಮೇಲೆ ನೀಲಿ ಶಾಯಿಯಲ್ಲಿ ಅಧಿಕಾರಿಯೊಬ್ಬ ಬರೆದಿದ್ದ ವಿಳಾಸವಿತ್ತು. ನೋಡಿದರೆ ಅದೊಂದು ಬೆದರಿಕೆಯ ಪತ್ರವಿರಬೇಕೆನಿಸಿತ್ತು. ಅಮರಾಂತಾ ಉರ್ಸುಲಾ ಅದನ್ನು ಓದಬೇಕೆಂದು ಕವರನ್ನು ಒಡೆಯುತ್ತಿದ್ದಾಗ ಅರೆಲಿಯಾನೊ ಥಟ್ಟನೆ ಅದನ್ನು ಅವಳ ಕೈಯಿಂದ ಕಸಿದುಕೊಂಡ.

"ಇದು ಮಾತ್ರ ಬೇಡ, ಅದರಲ್ಲಿ ಏನಿದೆ ಎನ್ನುವುದು ನಿನಗೆ ತಿಳಿಯುವುದು ಬೇಡ" ಎಂದ. ಅವನು ಊಹಿಸಿದಂತೆ ಅದು ಕ್ಯಾಟಲೋನಿಯಾ ಬರೆದ ಕಾಗದವಾಗಿರಲಿಲ್ಲ. ಯಾರೊ ಅಪರಿಚಿತನು ಬರೆದದ್ದನ್ನು ಯಾರೂ ಓದದೆ, ಫರ್ನಾಂಡಾ ಮರೆತು ಉಂಗುರವಿಟ್ಟಿದ್ದ ಮೇಜಿನ ಮೇಲೆ ಗೆದ್ದಲು ಹುಳುಗಳಿಗೆ ಆಹಾರವಾಗಲು ಇರಿಸಿದರು. ಏಕಾಂತ ಪ್ರೇಮಿಗಳು ಕೊನೆಯ ಹಂತದ ಅಲೆಗಳ ವಿರುದ್ಧ ತೇಲುತ್ತಿದ್ದರೆ ಕೆಟ್ಟ ಸುದ್ದಿಯ ಉರಿಯಲ್ಲಿ ತನಗೆ ತಾನೇ ಸುಡುತ್ತಾ ಬಿದ್ದಿತ್ತು. ಪಶ್ಚಾತ್ತಾಪವಿಲ್ಲದ, ದುರದೃಷ್ಟಕರ ಸಮಯವನ್ನು ನಿರ್ಮೋಹ ಮತ್ತು ಮರೆವಿನ ಮರಳುಗಾಡಿನತ್ತ ಸೆಳೆದೊಯ್ಯುವುದರ ನಿಷ್ಫಲ ಪ್ರಯತ್ನದಲ್ಲಿ ಕಳೆದುಬಿಟ್ಟರು. ಏನಾಗಬಹುದೆಂಬುದರ ಅರಿವಿನಿಂದಾಗಿ ಅರೆಲಿಯಾನೊ ಮತ್ತು ಅಮರಾಂತಾ ಉರ್ಸುಲಾರು ಒಬ್ಬರ ಕೈಯನ್ನು ಒಬ್ಬರು ಹಿಡಿದುಕೊಂಡು, ತಮ್ಮಿಬ್ಬರ ವ್ಯಭಿಚಾರದ ಹುಚ್ಚಿನಲ್ಲಿ ಕಣ್ಬಿಡುವ ಮಗುವಿನ ಬಗ್ಗೆ ಪ್ರಾಮಾಣಿಕ ಪ್ರೀತಿಯನ್ನು ತೋರುವ ನಿಷ್ಠೆಯನ್ನು ತಳೆದರು. ರಾತ್ರಿ ಹಾಸಿಗೆಯಲ್ಲಿ ಇದ್ದಾಗ ಅವರು ಒಬ್ಬರನ್ನೊಬ್ಬರು ತಬ್ಬಿಕೊಂಡು ಇರುವೆಗಳ ಕಾಟಕ್ಕಾಗಲೀ ಹೆಗ್ಗಣಗಳ ಸದ್ದಿಗಾಗಲೀ, ಅಕ್ಕಪಕ್ಕದ ರೂಮುಗಳಲ್ಲಿ ಬೆಳೆದಿದ್ದ ಕಳೆಯ ಕಾಡುಗಳಿಗಾಗಲೀ ಹೆದರಲಿಲ್ಲ. ಎಷ್ಟೋ ಸಲ ಸತ್ತವರ ಓಡಾಟದಿಂದ ಎಚ್ಚರಗೊಳ್ಳುತ್ತಿದ್ದರು. ಸಂತತಿಯ ಮುಂದುವರಿಕೆಗಾಗಿ ಸೃಷ್ಟಿಯ ನಿಯಮಗಳ ವಿರುದ್ಧ ಹೋರಾಡುತ್ತಿದ್ದುದು ಕೇಳಿಸುತ್ತಿತ್ತು. ಜೋಸ್ ಆರ್ಕಾಡಿಯೊ ಬ್ಯುಂಡಿಯಾ ಅದ್ಭುತ ಆವಿಷ್ಕಾರಗಳಲ್ಲಿನ ಕಾಲ್ಪನಿಕ ಸತ್ಯವನ್ನು ಹುಡುಕುತ್ತಿದ್ದುದನ್ನು ಫರ್ನಾಂಡಾ ಪ್ರಾರ್ಥಿಸುತ್ತಿದ್ದುದನ್ನು, ಕರ್ನಲ್ ಅರೆಲಿಯಾನೊ ಬ್ಯುಂಡಿಯಾ ಯುದ್ಧಗಳಲ್ಲಿನ ಮೋಸದಿಂದ, ಪುಟ್ಟ ಚಿನ್ನದ ಮೀನುಗಳಿಂದ ಮಂಕುಬಡಿದು ಕುಳಿತದ್ದನ್ನು, ಅರೆಲಿಯಾನೊ ಸೆಗುಂಡೊ ವ್ಯಭಿಚಾರದ ಸಂಕ್ಷೋಭೆಯಲ್ಲಿ ಸಿಲುಕಿ, ಒಂಟಿತನದೊಂದಿಗೆ ಸಾಯುತ್ತಿರುವುದನ್ನು ನಂತರ ಪ್ರಬಲವಾದ ವ್ಯಾಮೋಹಗಳು ಸಾವನ್ನೂ ಮೀರಿ ಉಳಿಯುತ್ತದೆ ಎಂಬುದನ್ನು ಅರಿತರು. ಅವರು ಮತ್ತೆ ಸಂತೋಷದಲ್ಲಿದ್ದರು. ಒಬ್ಬರನ್ನೊಬ್ಬರು ಪ್ರೀತಿಸುತ್ತಲೇ ಇರುವುದಲ್ಲದೆ ಆತ್ಮಗಳಾದಾಗಲೂ ಅದೇ ಪ್ರೀತಿಯನ್ನು ಮುಂದುವರೆಸಿಕೊಂಡು ಹೋಗುತ್ತೇವೆಂದು ಬಲವಾಗಿ ನಂಬಿದ್ದರು. ಯಾತನೆಯ ಸ್ವರ್ಗವನ್ನು ಭವಿಷ್ಯದ ಪ್ರಾಣಿಗಳು ಕೀಟಗಳಿಂದ ಕದಿಯುವವರೆಗೆ, ಕೀಟಗಳು ಮನುಷ್ಯನಿಂದ ಅಂತಿಮವಾಗಿ ಕದಿಯುವವರೆಗೆ, ತಮ್ಮ ಪ್ರೀತಿ ಸಾವಿನ ನಂತರವೂ ಮುಂದುವರೆಯುವುದೆಂಬ ನಂಬಿಕೆಯಲ್ಲಿ ಸಂತೋಷವಾಗಿದ್ದರು.

ಒಂದು ಭಾನುವಾರ, ಮಧ್ಯಾಹ್ನ ಆರು ಗಂಟೆ ಸಮಯಕ್ಕೆ ಅಮರಾಂತಾ ಉರ್ಸುಲಾಗೆ ಹೆರಿಗೆಯ ನೋವು ಕಾಣಿಸಿಕೊಂಡಿತು. ಹಸಿವಿಗಾಗಿ ಹಾಸಿಗೆ ಸೇರುತ್ತಿದ್ದ ಎಳೆಯ ಹುಡುಗಿಯರ ಯಜಮಾನಿ ಅವಳನ್ನು ಊಟದ ಮನೆ ಮೇಜಿನ ಮೇಲೆ ಮಲಗಿಸಿದಳು. ಅಲ್ಲಿ ಹೊಟ್ಟೆಯನ್ನು ಒತ್ತಿ ಒತ್ತಿ ಹಿಂಸಿಸಿದಾಗ ಅವಳು ಕಿರುಚಿಕೊಂಡಳು. ಆದರೆ ಅವಳ ಕಿರುಚಾಟ ಕೂಗಾಟಗಳು ಗಂಡು ಮಗುವಿನ ಅಬ್ಬರದ ಅಳುವಿನಲ್ಲಿ ಮುಳುಗಿಹೋಯಿತು. ಕಂಬನಿದುಂಬಿದ ಕಣ್ಣುಗಳಿಂದ ಮಗುವನ್ನು ನೋಡಿದಳು. ಶ್ರೇಷ್ಠ ಬ್ಯುಂಡಿಯಾಗಳಲ್ಲಿ ಒಬ್ಬನಾಗಿ ಕಾಣಿಸಿದ ಮಗು ಜೋಸ್ ಆರ್ಕಾಡಿಯೊನಂತೆ ಗಟ್ಟಿಮುಟ್ಟಾಗಿದ್ದ. ಅರೆಲಿಯಾನೊನಂತೆ ಅತೀಂದ್ರಿಯ ದೃಷ್ಟಿಯುಳ್ಳ ಕಣ್ಣುಗಳು – ಇವೆಲ್ಲವನ್ನು ನೋಡಿದಾಗ, ಬ್ಯುಂಡಿಯಾ ಜನಾಂಗವನ್ನು ಮತ್ತೊಮ್ಮೆ ಮುಂದುವರೆಸುವಂತೆಯೂ ವಿನಾಶಕಾರಕ ಕೆಡುಕುಗಳಿಂದ ಬಿಡಿಸುವಂತೆಯೂ ಕಾಣಿಸಿದ. ಒಂದು ಶತಮಾನದ ಅವಧಿಯಲ್ಲಿ ಪ್ರೇಮದ ಬಿಸುಪಿನಲ್ಲಿ ಆರೈಕೆ ಪಡೆದು ಹುಟ್ಟಿದವನು ಇವನೊಬ್ಬನೇ ಆಗಿದ್ದ.

"ನಿಜವಾಗಿಯೂ ಅವನೊಬ್ಬ ಭೀಮ ! ಅವನಿಗೆ ರೋಡ್ರಿಗೊ ಅಂತ ಹೆಸರು ಇಡೋಣ" ಅವಳು ಹೇಳಿದಳು.

"ಬೇಡ, ಅವನಿಗೆ ಅರೆಲಿಯಾನೊ ಅಂತ ಹೆಸರಿಡೋಣ. ಮೂವತ್ತೆರಡು ಯುದ್ಧಗಳನ್ನು ಗೆಲ್ಲುತ್ತಾನೆ" ಎಂದು ಅವಳ ಗಂಡ ಪ್ರತಿಯಾಗಿ ಹೇಳಿದ.

ಕರುಳ ಬಳ್ಳಿಯನ್ನು ಕತ್ತರಿಸಿದ ಮೇಲೆ ಸೂಲಗಿತ್ತಿ, ಅರೆಲಿಯಾನೊ ಹಿಡಿದಿದ್ದ ದೀಪದ ಬೆಳಕಿನಲ್ಲಿ ಮಗುವಿನ ಮೈಮೇಲಿನ ನೀಲಿ ಲೋಳೆಯನ್ನು ಬಟ್ಟೆಯಿಂದ ಒರೆಸಿದಳು. ಅವನನ್ನು ಹೊಟ್ಟೆಯ ಕಡೆಗೆ ಹೊರಳಿಸಿದಾಗ, ಬೇರೆ ಗಂಡು ಮಕ್ಕಳಿಗೆ ಇರುವುದಕ್ಕಿಂತ ಏನೋ ಬೇರೆ ಹೆಚ್ಚಿನದು ಇದ್ದುದನ್ನು ಗಮನಿಸಿದರು. ಎಲ್ಲರೂ ಬಗ್ಗಿ ನೋಡಿದರು. ಅದು ಹಂದಿಯ ಬಾಲವಾಗಿತ್ತು.

ಅವರೇನೂ ಗಾಭರಿಯಾಗಲಿಲ್ಲ. ಅರೆಲಿಯಾನೊ ಮತ್ತು ಅಮರಾಂತಾ ಉರ್ಸುಲಾಗೆ ಮನೆತನದ ಹಿನ್ನೆಲೆ ಗೊತ್ತಿರಲಿಲ್ಲ. ಮತ್ತು ಉರ್ಸುಲಾಳ ಎಚ್ಚರಿಕೆಯ ಮಾತುಗಳೂ ನೆನಪಿರಲಿಲ್ಲ. ಸೂಲಗಿತ್ತಿ, ಆ ಮಗುವಿಗೆ ಎರಡನೆ ಹಲ್ಲು ಮೊಳೆತಾಗ ಅದನ್ನು ಕತ್ತರಿಸಿಬಿಡಬಹುದೆಂದು ಸಮಾಧಾನ ಹೇಳಿದಳು. ನಂತರ ಅದರ ವಿಚಾರವಾಗಿ ಯೋಚಿಸುವುದಕ್ಕೆ ಅವರಿಗೆ ಸಮಯವೇ ಇರಲಿಲ್ಲ. ಅಮರಾಂತಾ ಉರ್ಸುಲಾ ನಿಲ್ಲದ ರಕ್ತಸ್ರಾವವನ್ನು ಅನುಭವಿಸುತ್ತಿದ್ದಳು. ಅದನ್ನು ಬೂದಿಯುಂಡೆಗಳಿಂದ ಮತ್ತು ಇತರೆ ವಿಧಾನಗಳಿಂದ ತಡೆಯಲು ಪ್ರಯತ್ನಿಸುತ್ತಿದ್ದರೂ, ಚಿಮ್ಮುವ ಚಿಲುಮೆಯನ್ನು ಕೈಯಿಂದ ತಡೆಯುವುದು ಎಷ್ಟು ಅಸಾಧ್ಯವೋ ಅಷ್ಟೇ ಅದನ್ನು ತಡೆಯುವುದು ಅಸಾಧ್ಯವಾಗಿತ್ತು. ಮೊದಮೊದಲು ತನ್ನ ಹಾಸ್ಯ ಪ್ರವೃತ್ತಿಯಿಂದಲೇ ಇದ್ದಳು. ಅರೆಲಿಯಾನೊನ ಕೈಯನ್ನು ಎಳೆದುಕೊಂಡು ಯೋಚನೆಮಾಡಬೇಡವೆಂದೂ ತನ್ನಂಥವರು ತಮ್ಮ ಇಚ್ಛೆಯಿಲ್ಲದೆ ಸಾಯುವುದಿಲ್ಲವೆಂದೂ ಹೇಳುತ್ತಾ ಜೋರಾಗಿ ಸೂಲಗಿತ್ತಿ ಸೂಚಿಸುತ್ತಿದ್ದ ಪರಿಹಾರಗಳನ್ನು ಕೇಳಿ ನಕ್ಕಳು. ಆದರೆ ಅರೆಲಿಯಾನೊನ ಭರವಸೆ ಕುಸಿಯುತ್ತಿತ್ತು. ಅವಳ ಮೊಗದ ಕಾಂತಿ ಕುಂದುತ್ತಿದ್ದಂತೆ ಕ್ರಮೇಣ ತೂಕಡಿಕೆಗೆ ಜಾರಿದಳು. ಸೋಮವಾರ ಬೆಳಿಗ್ಗೆ ಒಬ್ಬ ಹೆಂಗಸನ್ನು

ಕರೆತಂದರು. ಆಕೆ ಯಾರಿಗೂ ಅಕ್ಕಪಕ್ಕದವರಿಗೂ ಕೇಳಿಸದಂತೆ ಮಂತ್ರವನ್ನು ಮಣಮಣಿಸಿದಳು. ಆದರೆ ಅವಳ ರಕ್ತಸ್ರಾವ ಪ್ರೀತಿಯೊಂದಕ್ಕಲ್ಲದೆ ಯಾವುದಕ್ಕೂ ನಿಲ್ಲುವಂತೆ ಕಾಣಲಿಲ್ಲ. ಮಧ್ಯಾಹ್ನ, ಇಪ್ಪತ್ನಾಲ್ಕು ಗಂಟೆಗಳ ಹತಾಶೆಯ ನಂತರ, ಯಾವುದೇ ಚಿಕಿತ್ಸೆಯಿಲ್ಲದೆಯೇ ರಕ್ತಸ್ರಾವ ನಿಂತುದರಿಂದ ಅವಳು ಸತ್ತಿರುವುದನ್ನು ಅವರು ಗಮನಿಸಿದರು. ಅವಳು ಸೆಟೆದುಕೊಳ್ಳುತ್ತಿದ್ದಂತೆ ಮುಖದ ಮೇಲಿನ ಕಲೆಗಳು ಮರೆಯಾದವು. ಸಣ್ಣದಾದ ಮುಗುಳ್ನಗೆಯೊಂದು ಮತ್ತೊಮ್ಮೆ ಕಾಣಿಸಿಕೊಂಡಿತು.

ಅಲ್ಲಿಯವರೆಗೆ ಅರೆಲಿಯಾನೊ, ತಾನು ಸ್ನೇಹಿತರನ್ನು ಎಷ್ಟೊಂದು ಪ್ರೀತಿಸುತ್ತಿದ್ದೆ, ಅವರಿಂದ ಎಷ್ಟೆಲ್ಲ ಕಳೆದುಕೊಂಡಿದ್ದೇನೆ. ಆ ಕ್ಷಣದಲ್ಲಿ ಅವನ ಜೊತೆಗಿದ್ದಾಗ ಏನೆಲ್ಲ ಕೊಡಲು ಸಿದ್ಧನಿದ್ದೆ ಎನ್ನುವುದನ್ನೆಲ್ಲ ಅರಿವಿಗೆ ತಂದುಕೊಂಡ. ಮಗುವನ್ನು ಅದರ ತಾಯಿ ಸಿದ್ಧಪಡಿಸಿದ್ದ ಬುಟ್ಟಿಯಲ್ಲಿ ಮಲಗಿಸಿ, ಹೆಣದ ಮೇಲೆ ಬಟ್ಟೆ ಮುಚ್ಚಿದ. ಗೊತ್ತು ಗುರಿಯಿಲ್ಲದೆ ಅಲೆದಾಡಿದ. ಹಿಂದಿನವರನ್ನೆಲ್ಲ ಹುಡುಕುತ್ತ ಒಂದು ಕಡೆ ಬಾಗಿಲನ್ನು ತಟ್ಟಿದ. ಅದನ್ನು ಔಷಧಿಯಂಗಡಿ ಎಂದುಕೊಂಡಿದ್ದ. ಆದರೆ ಅದು ಬಡಗಿಯ ಮನೆಯಾಗಿತ್ತು. ಕೈಯಲ್ಲಿ ದೀಪ ಹಿಡಿದು ಬಾಗಿಲು ತೆಗೆದ ಹೆಂಗಸೊಬ್ಬಳು ಅವನ ಸ್ಥಿತಿ ನೋಡಿ ಮರುಕಗೊಂಡು ಅವನಿಗೆ, ಅಲ್ಲಿ ಔಷಧಿಯಂಗಡಿಯಾಗಲೀ, ಅವನು ಕೇಳುವ ಸಪೂರಕತ್ತಿನ, ನಿದ್ದೆಗಣ್ಣಿನ ಮರ್ಸಿಡೆಸ್ ಹೆಸರಿನ ಹುಡುಗಿಯಾಗಲಿ ಇದ್ದುದು ಗೊತ್ತೇ ಇಲ್ಲವೆಂದಳು. ಬುದ್ಧಿವಂತ ಕ್ಯಾಟಲೋನಿಯನ್ನನ ಪುಸ್ತಕದಂಗಡಿಯ ಬಾಗಿಲಿಗೆ ಮುಖವಿಟ್ಟು ಪ್ರೇಮಕ್ಕೆ ಭಂಗಬಾರದ ಹಾಗೆ, ಸಾವಿಗಾಗಿ ಬಿಕ್ಕಿಬಿಕ್ಕಿ ಅಳಬಾರದೆಂದು ಕೊಂಡಿದ್ದುದರ ಅರಿವಿದ್ದೂ ಅಳತೊಡಗಿದ್ದ. 'ಚಿನ್ನದ ಮಗು'ವಿನ ಕಾಂಕ್ರೀಟ್ ಗೋಡೆಗೆ ಮುಷ್ಟಿಯನ್ನು ಜೋರಾಗಿ ಗುದ್ದಿದ, ಬಾಲ್ಯದಲ್ಲಿ ಕಿತ್ತಲೆಬಣ್ಣದ ತಟ್ಟೆಗಳು ಆಕಾಶದಲ್ಲಿ ಹಾದುಹೋಗುತ್ತಿದ್ದುದನ್ನು ನೋಡಿ ಬಾಲ್ಯದ ಕಲ್ಪನೆಯಲ್ಲಿ ಅಂಗಳದಲ್ಲಿ ನಿಂತು ಅವುಗಳನ್ನು ಯಾವುದೋ ಪಕ್ಷಿಗಳೆಂದು ಭಾವಿಸುತ್ತಿದ್ದವನ ಗಮನಕ್ಕೆ ಆ ದಿನದ ಆಕಾಶದಲ್ಲಿ ಕಿತ್ತಲೆ ತಟ್ಟೆಗಳನ್ನು ಗಮನಿಸಲೇ ಇಲ್ಲ. ಅವನು ಪಿಲಾರ್ ತರ್ನಿರಾಳನ್ನು ಕೂಗುತ್ತಿದ್ದ. ಹಾಳುಬಿದ್ದ ಕೆಂಪು ದೀಪದ ಪ್ರದೇಶದಲ್ಲಿ ಹಾಳಾಗಿದ್ದ ದೊಡ್ಡದಾದ ಅಂಗಡಿಯಲ್ಲಿ, ಫ್ರಾನ್ಸಿಸ್ಕೋನ ಉತ್ತರಾಧಿಕಾರಿಯಾದ ಮತ್ತು ಬಿಷಪ್‌ನ ಸಂಬಂಧಿಯಾದವನೊಬ್ಬ ಗುಂಪಿನೊಂದಿಗೆ, ರ್‍ಯಾಫೆಲ್ ಎಸ್ಕಲೋನಾ ಹಾಡುಗಳನ್ನು ಅಕಾರ್ಡಿಯೋನ್ ವಾದ್ಯದಲ್ಲಿ ನುಡಿಸುತ್ತಿದ್ದ. ತನ್ನ ತಾಯಿಯ ಮೇಲೆ ಕೈಮಾಡಿದ್ದರಿಂದ ತಿರುಚಿಹೋಗಿದ್ದ ಕೈಯಿಂದ ಮದ್ಯವನ್ನು ಹಂಚುತ್ತಿದ್ದವನು ಅರೆಲಿಯಾನೊಗೆ ಸನ್ನೆಮಾಡಿ ಮದ್ಯ ಕುಡಿಯಲು ಆಹ್ವಾನಿಸಿದ. ಅರೆಲಿಯಾನೊ ಒಂದು ಬಾಟಲು ಮದ್ಯವನ್ನು ಕೊಂಡುಕೊಂಡ. ಅವನು ತನ್ನ ಕೈ ಹಾಗಾಗಲು ಕಾರಣವನ್ನು ವಿವರಿಸಿದ. ಅರೆಲಿಯಾನೊ ಕೂಡಾ ತನಗೊದಗಿದ ದುಃಸ್ಥಿತಿಯನ್ನು, ತನ್ನೆದೆಯ ನೋವನ್ನು ಹೇಳಿಕೊಂಡ. ತನ್ನ ಸೋದರಿಯ ಜೊತೆಗೆ ವರ್ತಿಸಿದ ರೀತಿಯನ್ನು ವಿವರಿಸಿ ಅತ್ತ. ಕಡೆಗೆ ಇಬ್ಬರೂ ಒಟ್ಟಿಗೆ ಅತ್ತರು. ಅರೆಲಿಯಾನೊಗೆ ಒಂದು ಕ್ಷಣ ತನ್ನ ದುಃಖ ತೀರಿತೇನೋ ಎನಿಸಿತು. ಆದರೆ ಅವನು ಮಕೊಂಡೊದ ಒಂದು ಬೆಳಿಗ್ಗೆ ಚೌಕದ ಮಧ್ಯದಲ್ಲಿ ಒಬ್ಬನೇ ನಿಂತು ತೋಳುಗಳನ್ನು ಮೇಲಕ್ಕೆ ಎತ್ತಿ, ಪ್ರಪಂಚವನ್ನೇ ಎಚ್ಚರಗೊಳಿಸುವವನಂತೆ ತನಗೆ ಸಾಧ್ಯವಾದಷ್ಟು ಎತ್ತರದ ದನಿಯಲ್ಲಿ,

"ಸ್ನೇಹಿತರೆಲ್ಲ ಕಳ್ಳ ಸೂಳೆ ಮಕ್ಕಳು" ಎಂದು ಕಿರುಚಿದ.

ನಿಗ್ರೊಮಾಂತಾ ಅವನನ್ನು ಕಂಬನಿಯಿಂದ, ವಾಂತಿಯಿಂದ ಪಾರು ಮಾಡಿದಳು. ತನ್ನ ಕೋಣೆಗೆ ಕರೆದೊಯ್ದಳು. ಒಂದು ಲೋಟ ಮಾಂಸದ ಸಾರನ್ನು ಕುಡಿಸಿದಳು. ಅವನಿಗೆ ಸಮಾಧಾನವಾಗುವುದೆಂದು ಭಾವಿಸಿ ಅವಳು ಕೊಟ್ಟ ಅಸಂಖ್ಯ ಪ್ರೇಮಿಸುವ ಅವಕಾಶಗಳಿಗಾಗಿ ಅವನಿಂದ ಬಾಕಿಯಿದ್ದ ಲೆಕ್ಕಗಳನ್ನೆಲ್ಲ ಇದ್ದಿಲ ಚೂರಿನಿಂದ ಅಳಿಸಿ ಹಾಕಿದಳು. ಅಳುವುದಕ್ಕೆ ಅವನನ್ನು ಒಂಟಿಯಾಗಿ ಬಿಡಬಾರದೆಂದು ತನ್ನ ಒಂಟಿತನದ ದುಃಖವನ್ನು ಅವನ ಮುಂದೆ ಹೇಳಿಕೊಂಡಳು. ಒಂದಿಷ್ಟು ಹೊತ್ತು ಮಲಗಿ ಎದ್ದಮೇಲೆ ಅರೆಲಿಯಾನೊಗೆ ತನ್ನ ತಲೆನೋವಿನ ಅರಿವಾಯಿತು. ಕಣ್ಣು ತೆರೆದು ಮಗುವಿನ ಜ್ಞಾಪಕ ತಂದುಕೊಂಡ.

ನೋಡಿದರೆ ಬುಟ್ಟಿ ಕಾಣಲಿಲ್ಲ. ಮೊದಲು ಅವನಿಗೆ, ಅಮರಾಂತಾ ಉರ್ಸುಲಾ ಬದುಕಿ ಬಂದು ಮಗುವನ್ನು ನೋಡಿಕೊಳ್ಳುತ್ತಿರಬೇಕೆಂದು ಬಹಳ ಖುಷಿ ಪಟ್ಟ. ಆದರೆ ಹೊದಿಕೆಯೊಳಗೆ ಅವಳ ಹೆಣ ಕಲ್ಲಿನಂತೆ ಬಿದ್ದುಕೊಂಡಿತ್ತು. ತಾನು ಒಳಗೆ ಬಂದಾಗ ಬೆಡ್‌ರೂಮಿನ ಬಾಗಿಲು ತೆರೆದಿದ್ದುದರ ಅರಿವಾಯಿತು. ಒರೆಗಾನೊ ಗಿಡಗಳ ನಿಟ್ಟುಸಿರಿನಿಂದ ತುಂಬಿದ್ದ ಅಂಗಳದ ಕಡೆಯಿಂದ ಊಟದ ಮನೆಯತ್ತ ನೋಡಿದ. ಅಲ್ಲಿ ಮಗುವಿನ ಜನ್ಮದ ನೆನಪುಗಳು ಬಿದ್ದಿದ್ದವು; ದೊಡ್ಡದಾದ ಮಡಿಕೆ, ರಕ್ತಸಿಕ್ತ ಬಟ್ಟೆಗಳು, ಬೂದಿ ತುಂಬಿದ್ದ ಹೂಜಿಗಳು, ಅಲ್ಲಿಯೇ ಬಿದ್ದಿದ್ದ ಡೈಪರ್ ಮೇಲೆ ಮಗುವಿನ ಕತ್ತರಿಸಿದ ಕರುಳ ಬಳ್ಳಿಯ ತುಂಡು, ಎಲ್ಲವೂ ಕಾಣಿಸಿದವು, ಬಹುಶಃ ಸೂಲಗಿತ್ತಿ ರಾತ್ರಿಯಲ್ಲಿ ಬಂದು ಮಗುವನ್ನು ತೆಗೆದುಕೊಂಡು ಹೋಗಿರಬಹುದೆಂಬ ಆಲೋಚನೆ, ಅವನಿಗೆ ಸ್ವಲ್ಪ ಬಿಡುವನ್ನು ನೀಡಿತು. ತೂಗಾಡುವ ಕುರ್ಚಿಯಲ್ಲಿ, ರೆಬೆಕಾ ಕಸೂತಿ ಪಾಠಗಳನ್ನು ಹೇಳಿಕೊಡುವಾಗ, ಅಮರಾಂತಾ ಕರ್ನಲ್ ಜೆರಿನೆಲ್ಡೊ ಜೊತೆ ಚೈನೀಸ್ ಚೆಕರ್ ಆಡುವಾಗ, ಅಮರಾಂತಾ ಉರ್ಸುಲಾ ಮಗುವಿಗೆ ಪುಟ್ಟ ಉಡುಪನ್ನು ಹೊಲಿಯುವಾಗ ಕುಳಿತುಕೊಳ್ಳುತ್ತಿದ್ದ ಭಂಗಿಯಲ್ಲಿಯೇ ಅರೆಲಿಯಾನೊ ಕುಳಿತುಕೊಂಡ. ಆ ಕ್ಷಣದಲ್ಲಿ ಅವನಿಗೆ ಗತಕಾಲದ ನೆನಪುಗಳ ಹೊರೆಯನ್ನು ತನ್ನೆದೆಯಲ್ಲಿ ಇರಿಸಿಕೊಳ್ಳುವುದಕ್ಕೆ ಸಾಧ್ಯವೇ ಇಲ್ಲವೆನಿಸಿತು. ತನ್ನ ನೆನಪುಗಳು ಮತ್ತು ಇತರರ ನೆನಪುಗಳ ಇರಿತದಿಂದ ಮಾರಣಾಂತಿಕ ಹಿಂಸೆಯನ್ನು ಅನುಭವಿಸುತ್ತಿದ್ದರೂ ಗುಲಾಬಿ ಪೊದೆಗಳ ಮೇಲೆ ಜೇಡ ಬಲೆ ಹೆಣೆಯುವುದಕ್ಕಾಗಿ ಮತ್ತೆ ಮತ್ತೆ ಪ್ರಯತ್ನಿಸುತ್ತಿದ್ದುದನ್ನು ನಿರಂತರ ಪ್ರಯತ್ನದಿಂದ ಬೆಳೆದು ಹಬ್ಬುವ ಹುಲ್ಲನ್ನು, ಫೆಬ್ರವರಿಯ ಬೆಳಗಿನಲ್ಲಿ ಬೀಸುವ ಗಾಳಿಯ ತಾಳ್ಮೆಯನ್ನು ಮೆಚ್ಚಿಕೊಂಡ. ನಂತರ ಮಗುವನ್ನು ನೋಡಿದ. ಅದೊಂದು ಉಬ್ಬಿದ ಚರ್ಮದ ಚೀಲದಂತಿದ್ದು, ಪ್ರಪಂಚದಲ್ಲಿನ ಇರುವೆಗಳೆಲ್ಲ ಒಟ್ಟಿಗೆ ಒಂದೆಡೆ ಸೇರಿ ಕೈತೋಟದ ಕಲ್ಲುಹಾಸಿನ ಮೇಲಿಂದ ಒಂದು ರಂಧ್ರದೆಡೆಗೆ ಎಳೆದುಕೊಂಡು ಹೋಗುತ್ತಿದ್ದವು. ಅರೆಲಿಯಾನೊಗೆ ಕದಲಲು ಆಗಲಿಲ್ಲ. ಆದರೆ ಹಾಗಾದದ್ದು ಆ ದೃಶ್ಯದಿಂದ ಉಂಟಾದ ಭಯಾನಕ ಅನುಭವದಿಂದ ಆ ಅದ್ಭುತ ಕ್ಷಣಗಳಲ್ಲಿ ಮೆಲ್‌ಕಿಯಾಡ್ಸ್ ಸೂತ್ರಗಳಿಗೆ ಪರಿಹಾರ ಕಾಣಿಸಿತು. ಚರ್ಮಕಾಗದಗಳಲ್ಲಿನ ಬರಹಗಳನ್ನು ಮನುಷ್ಯನ ಕಾಲ ಮತ್ತು ಅವಕಾಶದ

ಕ್ರಮದಲ್ಲಿ ಇದ್ದುದನ್ನು ನೋಡಿದ. ಮೊದಲ ಸಾಲು ಮರವೊಂದಕ್ಕೆ ಕಟ್ಟಿ ಹಾಕಿದ್ದರೆ ಕಡೆಯದು ಇರುವೆಗಳ ಬಾಯ ತುತ್ತಾಗುತ್ತಿದೆ.

ಅರೆಲಿಯಾನೊಗೆ ಈಗ ಎಲ್ಲವೂ ಮೊದಲಿಗಿಂತ ಸ್ಪಷ್ಟವಾಗತೊಡಗಿತು. ಅವನು ತನ್ನನ್ನು ಮತ್ತು ಸತ್ತವರನ್ನು, ಸತ್ತವರ ನೋವನ್ನು ಮರೆತುಬಿಟ್ಟ. ಫರ್ನಾಂಡಾಳ ಅಡ್ಡಪಟ್ಟಿಗಳಿಂದ ಬಾಗಿಲು ಕಿಟಕಿಗಳನ್ನು ಮುಚ್ಚಿ ಮೊಳೆ ಹೊಡೆದ. ಪ್ರಪಂಚದ ಯಾವ ಆಕರ್ಷಣೆಗಳಿಗೂ ಸಿಗಬಾರದೆನ್ನುವ ಉದ್ದೇಶದ ಜೊತೆಗೆ ತನ್ನ ಹಣೆಬರಹ ಮೆಲ್‌ಕಿಯಾಡ್ಸ್‌ನ ಚರ್ಮದ ಹಾಳೆಗಳಲ್ಲಿದೆ ಎಂದುಕೊಂಡಿದ್ದ. ಆ ಚರ್ಮದ ಹಾಳೆಗಳು ಇತಿಹಾಸಪೂರ್ವದ ಗಿಡಗಳ ನಡುವೆ ಹೊಗೆಯಾಡುತ್ತಿದ್ದ ಕೊಚ್ಚೆ ನೀರಿನ ಗುಂಡಿಗಳ ನಡುವೆ, ಆ ಕೋಣೆಯಿಂದ ಹೊರಟ ಮನುಷ್ಯನ ಹೆಜ್ಜೆ ಗುರುತುಗಳನ್ನೇ ಅಳಿಸಿಬಿಟ್ಟಿದ್ದ. ಮಿನುಗುವ ಹುಳುಗಳ ನಡುವೆ ಒಂದಿಷ್ಟೂ ಹಾಳಾಗದೆ ಉಳಿದಿರುವುದನ್ನು ನೋಡಿದ. ಅವುಗಳನ್ನು ಹೊರಗೆ ಬೆಳಕಿಗೆ ತರಬೇಕೆನಿಸಲಿಲ್ಲ. ನಿರಾಯಾಸವಾಗಿ ಅಲ್ಲಿಯೇ ನಿಂತು, ಸ್ಪ್ಯಾನಿಷ್ ಭಾಷೆಯಲ್ಲಿಯೇ ಬರೆದಿರುವಂತೆ ಸಲೀಸಾಗಿ ಜೋರಾಗಿ ಓದಲು ಮೊದಲು ಮಾಡಿದ. ಅದು ಮೆಲ್‌ಕಿಯಾಡ್ಸ್ ದಾಖಲಿಸಿದ್ದ ಮನೆತನದ ಚರಿತ್ರೆಯಾಗಿತ್ತು. ಒಂದು ಶತಮಾನದ ಮೊದಲೇ ಮುಖ್ಯವಾದ ಅಮುಖ್ಯವಾದ ಎಲ್ಲ ಸಣ್ಣ ಸಣ್ಣ ವಿವರಗಳನ್ನೂ ಬಿಡದೆ ಬರೆದಿದ್ದ. ಅವನ ಮಾತೃಭಾಷೆಯಾಗಿದ್ದ ಸಂಸ್ಕೃತದಲ್ಲಿ ಅದನ್ನು ಬರೆದಿದ್ದ. ಸರಿಸಾಲುಗಳಲ್ಲಿ ಬರೆದಿದ್ದ ಚಕ್ರವರ್ತಿ ಆಗಸ್ಟಸ್‌ನ ಬರಹಗಳನ್ನು, ಬೆಸಸಾಲುಗಳಲ್ಲಿ ಬರೆದಿದ್ದ. ಲೆಸೆಡೆಮೋನಿಯನ್ ಮಿಲಿಟರಿ ಸಂಕೇತಗಳನ್ನೂ ಬಿಡಿಸಿ ವಿವರಿಸಿದ್ದ. ಅಮರಾಂತಾ ಉರ್ಸುಲಾಳ ಪ್ರೇಮವನ್ನು ಕುರಿತ ಭಾಗವನ್ನು ಓದಿ ಗೊಂದಲಗೊಂಡಿದ್ದ. ಅರೆಲಿಯಾನೊಗೆ ಮೆಲ್‌ಕಿಯಾಡ್ಸ್ ಘಟನೆಗಳನ್ನು ಒಂದು ಕ್ರಮದಲ್ಲಿ ಜೋಡಿಸದೆ ಮತ್ತು ಮನುಷ್ಯನ ರೂಢಿಗತ ಕಾಲಾನುಕ್ರಮದಲ್ಲಿ ಇರಿಸದೆ ಎಲ್ಲವನ್ನೂ ಒಂದು ಕಡೆ ವಿವರಿಸಿದ್ದ ಎಂಬುದು ಅರ್ಥವಾಯಿತು. ತನ್ನ ಅನ್ವೇಷಣೆಯಿಂದ ಉತ್ಸಾಹಗೊಂಡು, ಮೆಲ್‌ಕಿಯಾಡ್ಸ್ ಸ್ವತಃ ಆರ್ಕಾಡಿಯೊಗೆ, ಪ್ರಚಾರಕ್ಕಾಗಿ ಕಳಿಸಿದ ಪೋಪ್ ಗುರುವಿನ ನಿರೂಪಗಳನ್ನು ಕೇಳಿಸಿದ್ದ. ಇವುಗಳನ್ನು ಅರೆಲಿಯಾನೊ ಒಂದನ್ನೂ ಬಿಡದೆ ಜೋರಾಗಿ ಪಠಿಸಿದ. ವಾಸ್ತವವಾಗಿ ಅದು ಅವನ ಮರಣದಂಡನೆಯ ಭವಿಷ್ಯವಾಣಿಯಾಗಿತ್ತು. ಒಬ್ಬ ಅತ್ಯಂತ ಸುಂದರಿಯಾದ ಹೆಣ್ಣಿನ ಜನನ. ದೇಹ ಆತ್ಮಗಳೊಂದಿಗೆ ಆಕಾಶಕ್ಕೆ ಹಾರಿಹೋಗುವ ವಿಷಯದ ಘೋಷಣೆಯೂ ಇತ್ತು. ಅಲ್ಲದೆ ಇಬ್ಬರು ಅವಳಿ ಮಕ್ಕಳ ಮೂಲವನ್ನು ಹುಡುಕಿದ. ಇವರು ಚರ್ಮದ ಹಾಳೆಗಳಲ್ಲಿನ ಸಂಕೇತಗಳನ್ನು ಅರ್ಥೈಸುವುದನ್ನು ಮಧ್ಯದಲ್ಲಿಯೇ ಕೈಬಿಟ್ಟರು. ಅವರಿಗೆ ಓದಿ ಅರ್ಥಮಾಡಿಕೊಳ್ಳುವುದಕ್ಕೆ ಆತುರಪಟ್ಟರೇ ಹೊರತು ಉತ್ಸಾಹವಾಗಲೀ ಛಲವಾಗಲಿ ಇರಲಿಲ್ಲವೆಂದಲ್ಲ. ಅಲ್ಲಿಂದ ಮುಂದಕ್ಕೆ ತನ್ನ ಮೂಲವನ್ನು ತಿಳಿಯುವುದಕ್ಕೆ ಅವನಲ್ಲಿ ಸಹನೆ ಇರಲಿಲ್ಲವಾಗಿ ಅದನ್ನು ಬಿಟ್ಟು ಮುಂದಕ್ಕೆ ಹೋದ. ಗಾಳಿಬೀಸಿ ಭೂತಕಾಲದ ಧ್ವನಿಗಳು ಕೇಳಿಬಂತು, ಪುರಾತನವಾದ ಮರಗಳ ಗಿಡಗಳ ಮರ ಮರ ಶಬ್ದಗಳು, ಹಿಂದಿನ ನೋವಿನ ನೆನಪುಗಳಿಂದ ಹುಟ್ಟಿದ ನಿರಾಸಕ್ತಿಯ ನಿಟ್ಟುಸಿರುಗಳು ಕೇಳಿಬಂದವು. ಅವನು ಅದನ್ನೆಲ್ಲ ಗಮನಿಸುವ ಸ್ಥಿತಿಯಲ್ಲಿ ಇರಲಿಲ್ಲ. ಆ

ಕ್ಷಣದಲ್ಲಿ ತನ್ನ ಅಸ್ತಿತ್ವವನ್ನು ಕಂಡುಕೊಳ್ಳುತ್ತಿದ್ದ. ತನ್ನನ್ನು ಸಂತೋಷಪಡಿಸಬಲ್ಲ ಒಂದು ಹೆಣ್ಣಿಗಾಗಿ ಎಲ್ಲಿಗೆಲ್ಲಿಗೊ ಭ್ರಾಮಕ ಪ್ರದೇಶಗಳೆಡೆಗೆಲ್ಲ ತನ್ನನ್ನು ಎಳೆದುಕೊಳ್ಳುತ್ತಾ ಅಡ್ಡಾಡುತ್ತಿದ್ದ ಕಾಮುಕ ಅಜ್ಜನಲ್ಲಿ ತನ್ನ ಮೂಲವನ್ನು ಕಂಡುಕೊಂಡ. ಅವನು ಯಾರೆಂದು ಅರೆಲಿಯಾನೊ ಕಂಡುಕೊಂಡ. ತನ್ನ ಅವತರಣದ ಹಾದಿಯನ್ನು ಹಿಂಬಾಲಿಸಿದ. ಸೂರ್ಯಾಸ್ತದ ಸಮಯದಲ್ಲಿ, ಬಚ್ಚಲು ಮನೆಯಲ್ಲಿ ಹಳದಿ ಚಿಟ್ಟೆಗಳ, ಚೇಳುಗಳ ನಡುವೆ, ಸೇಡಿಗಾಗಿ ಪ್ರಣಯಕ್ಕಿಳಿದಿದ್ದ ಕ್ಷಣದಲ್ಲಿ ತನ್ನನ್ನು ಗರ್ಭಧಾರಣೆ ಮಾಡಿದ್ದನ್ನು ಕಂಡುಕೊಂಡ. ಅದರಲ್ಲಿ ಅವನೆಷ್ಟು ಮಗ್ನನಾಗಿದ್ದನೆಂದರೆ ರಭಸದ ಗಾಳಿ ಮತ್ತೆ ಬೀಸಿದ್ದು, ದೈತ್ಯ ಶಕ್ತಿಯೊಂದಿಗೆ ಕಿಟಕಿ, ಬಾಗಿಲುಗಳನ್ನು ಕೊಂಡಿಗಳಿಂದ ಕಳಚಿ ಬೀಳಿಸಿದ್ದು, ಪೂರ್ವಕ್ಕಿದ್ದ ಛಾವಣಿಯನ್ನು ಹಾರಿಸಿದ್ದು, ಅಡಿಪಾಯವನ್ನೇ ಬುಡಮೇಲು ಮಾಡಿದ್ದು ಯಾವುದೂ ಅವನ ಗಮನಕ್ಕೆ ಬರಲಿಲ್ಲ. ಆಗ ಮಾತ್ರ ಅವನಿಗೆ ಅಮರಾಂತಾ ಉರ್ಸುಲಾ ತನ್ನ ಸೋದರಿಯಲ್ಲ ಚಿಕ್ಕಮ್ಮ ಎಂಬ ವಿಷಯ ತಿಳಿಯಿತು. ಜೊತೆಗೆ ಸರ್ ಫ್ರಾನ್ಸಿಸ್ ಡ್ರೇಕ್ ರಿಯೋಹಚಾ ಮೇಲೆ ಆಕ್ರಮಣ ಮಾಡಿದ್ದು, ಸಂಕೀರ್ಣವಾದ ರಕ್ತಸಂಬಂಧದ ಮೂಲಕ ಒಬ್ಬರನ್ನೊಬ್ಬರು ತಿಳಿದುಕೊಳ್ಳುವುದಕ್ಕಾಗಿ ಮತ್ತು ವಂಶವನ್ನೇ ಕೊನೆಗಾಣಿಸುವ ಒಂದು ಕಾಲ್ಪನಿಕ ಪ್ರಾಣಿಯನ್ನು ಹುಟ್ಟಿಸುವುದಕ್ಕಾಗಿ ಎಂದು ತಿಳಿದುಕೊಂಡ. ಮಕೊಂಡೊ ಈಗಾಗಲೇ ಪ್ರಚಂಡ ಬಿರುಗಾಳಿಗೆ ಸಿಲುಕಿ ಧೂಳಿನ ರಾಶಿಯೊಳಗೆ ಮುಳುಗಿ ಹೋಗಿತ್ತು. ಆಗ ಅರೆಲಿಯಾನೊ ತನಗೆ ಚೆನ್ನಾಗಿ ಗೊತ್ತಿರುವ ವಿಷಯಗಳಿದ್ದ – ಹನ್ನೊಂದು ಪುಟಗಳನ್ನು ಬಿಟ್ಟು ಮುಂದೆ ಹೋದ. ತಾನು ಜೀವಿಸುತ್ತಿದ್ದ ಸಂದರ್ಭವನ್ನು, ತಾನು ಬದುಕಿದ್ದ ರೀತಿಯಿಂದಲೇ ಅರ್ಥೈಸಲು ಪ್ರಯತ್ನಿಸುತ್ತಿದ್ದ ಅಲ್ಲದೆ ಕೊನೆಯ ಚರ್ಮಕಾಗದಗಳಲ್ಲಿ ತನ್ನ ಭವಿಷ್ಯವನ್ನು ಮಾತಾಡುವ ಕನ್ನಡಿಯಲ್ಲಿ ಕಾಣುವ ಹಾಗೆ ಕಾಣುತ್ತಿದ್ದ. ಮತ್ತೆ ಕೆಲಪುಟಗಳನ್ನು ಹಾರಿಸಿ ತನ್ನ ಸಾವಿನ ಮುನ್ಸೂಚನೆ ನೀಡುವ ದಿನ, ದಿನಾಂಕ ಮತ್ತು ಸನ್ನಿವೇಶಗಳನ್ನು ಹೇಗಿರುತ್ತವೆ ಎಂಬುದನ್ನು ಖಚಿತಪಡಿಸಿಕೊಳ್ಳುವ ಪ್ರಯತ್ನದಲ್ಲಿದ್ದ. ಕಡೆಯ ಸಾಲನ್ನು ತಲುಪುವ ಮೊದಲೇ ಅವನಿಗೆ ಕನ್ನಡಿಗಳ ಊರು(ಬಿಸಿಲ್ಗುದುರೆಗಳು) ಭಯಂಕರವಾದ ಗಾಳಿಯಿಂದ ಪೂರ್ತಿಯಾಗಿ ಅಳಿಸಿಹೋಗುತ್ತದೆಂದು, ಅರೆಲಿಯಾನೊ ಬ್ಯಾಬಿಲೋನಿಯಾ ಚರ್ಮಕಾಗದಗಳ ಬರಹವನ್ನು ಅರ್ಥೈಸುವುದನ್ನು ಮುಗಿಸುತ್ತಿದ್ದಂತೆಯೇ ಮನುಷ್ಯರ ನೆನಪಿನಿಂದ ಮರೆಯಾಗುವುದೆಂದೂ ತನಗೆ ತಾನಿರುವ ರೂಮನ್ನು ಬಿಡಲು ಸಾಧ್ಯವೇ ಆಗುವುದಿಲ್ಲವೆಂದು ಅರ್ಥ ಮಾಡಿಕೊಂಡ. ಅವುಗಳ ಮೇಲೆ ಬರೆದಿರುವ ಯಾವುದೂ ಪುನರಾವರ್ತನೆಯಾಗುವುದಿಲ್ಲ. ಅನಾದಿಕಾಲದಿಂದ ಮತ್ತು ಎಂದೆಂದಿಗೂ ಬರೆಯಲಾಗದ್ದಾಗಿತ್ತು. ಕಾರಣ ನೂರು ವರ್ಷಗಳ ಏಕಾಂತದ ಶಿಕ್ಷೆಯನ್ನು ಅನುಭವಿಸಿದ ಜನಾಂಗಕ್ಕೆ ಭೂಮಿಯ ಮೇಲೆ ಮತ್ತೆ ಹುಟ್ಟುವ ಅವಕಾಶವೇ ಇರುವುದಿಲ್ಲ.

○

## ನಮ್ಮ ಪ್ರಕಟಣೆಗಳು

| | | | |
|---|---|---|---|
| 1. | ಕನಸುಗಳಿಗೆ ಕಿನಾರಗಳಿರುವುದಿಲ್ಲ* | ರವಿಕುಮಾರ್ | ರೂ. 70.00 |
| 2. | ಕಿಲಾರಿ * | ಡಾ. ಎಸ್.ಎಮ್. ಮುತ್ತಯ್ಯ | ರೂ. 50.00 |
| 3. | ಸಂವೇದನೆ (ಬರಗೂರು ರಾಮಚಂದ್ರಪ್ಪ ಜೀವನ ಮತ್ತು ಸಾಹಿತ್ಯ)* | ಡಾ. ಎಸ್. ಮಾರುತಿ | ರೂ. 160.00 |
| 4. | ಬೆಳಕಿನ ಪಾದ * | ಬಾಲಕೃಷ್ಣ ನಾಯಕ್ ಡಿ. | ರೂ. 40.00 |
| 5. | ಪಾತ್ರಗಳು ಇರಲಿ ಗೆಳೆಯ * | ಸತ್ಯನಾರಾಯಣರಾವ್ ಅಣತಿ | ರೂ. 50.00 |
| 6. | ದೂಸ್ರಾ * | ರವಿಕುಮಾರ್ | ರೂ. 60.00 |
| 7. | ನೆಲದ ಮರೆಯ ನಿಧಾನ * | ಸಿದ್ದು ಯಾಪಲಾಪರವಿ | ರೂ. 40.00 |
| 8. | ಅಪರೂಪದ ಮನುಷ್ಯ * | ಆತ್ಮಕೂರ ವಾಮನಾಚಾರ್ಯ | ರೂ. 80.00 |
| 9. | ವಸಂತಸ್ಮೃತಿ * | ಡಿ.ಅರ್. ನಾಗರಾಜ್ | ರೂ. 70.00 |
| 10. | ಮಹಿಳೆ ಮತ್ತು ದುಡಿಮೆ | ಡಾ. ಬಿ.ಹಚ್. ಅಂಜನಪ್ಪ | ರೂ. 200.00 |
| 11. | ಸರ್ವಜ್ಞನ ವಚನಗಳು | ಡಾ. ಕೆ.ಅರ್. ಗಣೇಶ್ | ರೂ. 200.00 |
| 12. | ಕೃತಿಪ್ರವೇಶ (ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ಅವರ ಕೃತಿಗಳ ಸಮಗ್ರ ಅವಲೋಕನ) | ಡಾ.ಎಸ್.ಎಸ್.ಅಂಗಡಿ. ಡಾ.ಎಸ್.ಆರ್.ಚನ್ನವೀರಪ್ಪ | ರೂ. 100.00 |
| 13. | ಮಣ್ಣಿನ ಕವಿತೆ * | ಡಾ. ನಿಂಗಪ್ಪ ಮುದೇನೂರು | ರೂ. 60.00 |
| 14. | ಸೊಂಡೂರು ಕುಮಾರಸ್ವಾಮಿ * | ಡಾ. ನಿಂಗಪ್ಪ ಮುದೇನೂರು | ರೂ. 160.00 |
| 15. | ಲಿಖಿತ – ಅಲಿಖಿತ * | ಡಾ. ಎಸ್.ಎಮ್. ಮುತ್ತಯ್ಯ | ರೂ. 160.00 |
| 16. | ವರ್ತಮಾನ * | ಬಿ.ಪಿ. ಶಿವಾನಂದ ರಾವ್ | ರೂ. 85.00 |
| 17. | ಗಾದೇಯ ಮಾತು * | ಪ್ರೊ. ಮಲ್ಲೇಪುರಂ ಜಿ. ವೇಂಕಟೇಶ್ | ರೂ. 25.00 |
| 18. | ಹಡೆ ಏರಿಸಿದ ಸೂರ್ಯನ ಕುದುರೆ * | ಸತ್ಯನಾರಾಯಣ ರಾವ್ ಅಣತಿ | ರೂ. 25.00 |
| 19. | ನಿಜದ ಬೆಳಗು * | ಅಕ್ಕಿ ಬಸವೇಶ್ | ರೂ. 30.00 |

| | | | |
|---|---|---|---|
| 20. | ವಚನ ಬೆಳಗು * | ಡಾ. ನಾಗರಾಜ ಎಂ. | ರೂ. 70.00 |
| 21. | ವರದಿಗಾರರೇ ಈ ಕಡೆ ಸ್ವಲ್ಪ ನೋಡಿ* | ಪಿ. ರಾಜೇಂದ್ರ | ರೂ. 60.00 |
| 22. | ನಮ್ಮ ಕರ್ನಾಟಕ | ಪಿ. ರಾಜೇಂದ್ರ | ರೂ. 70.00 |
| 23. | ವೇದ–ತಂತ್ರ–ಸಂಸ್ಕೃತಿ * | ಡಾ. ಜಿ.ಬಿ. ಹರೀಶ್ | ರೂ. 90.00 |
| 24. | ಸಖ–ಸಖಿ (ಗಜಲ್‌ಗಳು) * | ರವಿ ಹಂಪಿ | ರೂ. 40.00 |
| 25. | ಆಕಾಶದ ಹಾಡು * | ಅನಸೂಯದೇವಿ | ರೂ. 120.00 |
| 26. | ಬಿಂಬದೊಳಗಣ ಪ್ರಾಣ * | ಡಾ. ಹೆಬ್ಬಾಲೆ ನಾಗೇಶ್ | ರೂ. 50.00 |
| 27. | ವಿಜಯನಗರ ಸಾಮ್ರಾಜ್ಯದ ಕನಸುಗಾರ ಕುಮಾರರಾಮ – ಓಂಕಾರಪ್ಪ | | ರೂ. 250.00 |
| 28. | ಮಳೆಗಾಲದ ಕಾಡು * | ಸ್ವಾಮಿನಾಥ | ರೂ. 30.00 |
| 29. | ವಾಲ್ಮೀಕಿ * | ಡಾ. ಸರಜೂ ಕಾಟ್ಕರ್ | ರೂ. 100.00 |
| 30. | ಕರ್ನಾಟಕ ಬುಡಕಟ್ಟು ಭಾಷೆ * | ಡಾ. ಎಸ್.ಎಸ್. ಅಂಗಡಿ | ರೂ. 225.00 |
| 31. | ಕತ್ತಲ ಬೆಳಗು * | ಜ.ನಾ. ತೇಜಶ್ರೀ | ರೂ. 40.00 |
| 32. | ನವವಿಸರ್ಗ * | ಡಾ. ಕವಿತಾ ರೈ | ರೂ. 130.00 |
| 33. | ಕಡಲ ತಡಿಯ ತಲ್ಲಣ | ಉಷಾ ಕಟ್ಟೆಮನೆ<br>ಡಾ. ಪುರುಷೋತ್ತಮ ಬಿಳಿಮಲೆ | ರೂ. 150.00 |
| 34. | ಬಂಟರು ಬದುಕು ಮತ್ತು ಬದಲಾವಣೆ | ಡಾ. ಶೇಖರ | ರೂ. 300.00 |
| 35. | ಸೆಕ್ಸ್ ವರ್ಕರ್ ಒಬ್ಬಳ ಆತ್ಮಕಥನ | ಕೆ. ನಾರಾಯಣಸ್ವಾಮಿ | ರೂ. 150.00 |
| 36. | ಈ ಕ್ಷಣ | ಜ್ಯೋತಿ ಗುರುಪ್ರಸಾದ್ | ರೂ. 65.00 |
| 37. | ಗಣೇಶನ ಬೆಂಗ್ಳೂರು ಯಾತ್ರೆ * | ಪ್ರಕಾಶ್ ಕೆ. ನಾಡಿಗ್ | ರೂ. 65.00 |
| 38. | ಕೃಷ್ಣ ಕಷಾಯ * | ಪಿ.ವಿ. ರಾಮಚಂದ್ರ | ರೂ. 100.00 |
| 39. | ರಾವಣನ ಡೈರಿ | ಹಾ.ಮ್ಯೆ. ಸೂರಿ | ರೂ. 150.00 |
| 40. | ಮೊಪಾಸಾನ ಕಥೆಗಳು * | ಪಿ.ವಿ. ರಾಮಚಂದ್ರ | ರೂ. 350.00 |
| 41. | ತಂತಿ ಪಕ್ಷಿ * | ಜ್ಯೋತಿ ಗುರುಪ್ರಸಾದ್ | ರೂ. 60.00 |
| 42. | ವಕ್ರರೇಖೆ * | ಡಾ. ಜಿ.ಬಿ. ಹರೀಶ್ | ರೂ. 300.00 |
| 43. | ತುಮಕೂರು ಜಿಲ್ಲೆಯಲ್ಲಿ ಸ್ವಾತಂತ್ರ್ಯ ಚಳುವಳಿ * | ಡಾ. ಎಸ್. ನಾಗರತ್ನಮ್ಮ | ರೂ. 125.00 |
| 44. | ಕರ್ನಾಟಕದಲ್ಲಿ ಅಸಹಕಾರ ಮತ್ತು ನಾಗರೀಕ<br>– ಕಾನೂನು ಭಂಗ ಚಳುವಳಿ * | ಡಾ. ಎಸ್. ನಾಗರತ್ನಮ್ಮ | ರೂ. 175.00 |
| 45. | ಪ್ರಾಚೀನ ಕನ್ನಡ ಸಾಹಿತ್ಯ ಸಂಘರ್ಷ | ಡಾ. ರವಿ ಛಲವಾದಿ | ರೂ. 225.00 |
| 46. | ಶಿವರಾಮ ಕಾರಂತರ ಕೃತಿಗಳಲ್ಲಿ ಸ್ತ್ರೀ<br>ಸಂಕಥನದ ಸ್ವರೂಪ | ಡಾ. ರಾಜೇಂದ್ರ ತಗಡ್ಡಿ | ರೂ. 175.00 |
| 47. | ಮಾಧ್ಯಮ ಮಾರ್ಗದರ್ಶಿ | ಪಿ. ರಾಜೇಂದ್ರ | ರೂ. 125.00 |
| 48. | ಊರು ಮನೆ (ಸಣ್ಣ ಕಥೆಗಳ ಸಂಕಲನ) | ಲಕ್ಷ್ಮಣ ಕೊಡಸೆ | ರೂ. 160.00 |
| 49. | ಮುಖಾ – ಮುಖಿ * | ಬಿ.ಪಿ. ಶಿವಾನಂದ ರಾವ್ | ರೂ. 85.00 |
| 50. | ಜೋಲಿ ಲಾಲಿ * | ಜ್ಯೋತಿ ಗುರುಪ್ರಸಾದ್ | ರೂ. 160.00 |
| 51. | ಅನಸೂಯ ಕಥೆಗಳು * | ಡಾ. ಅನಸೂಯಾ ದೇವಿ | ರೂ. 100.00 |

| | | | |
|---|---|---|---|
| 52. | ರಾಜಕೀಯ ಕಥೆಗಳು | ಡಾ. ಜಿ. ವೀರಭದ್ರಗೌಡ | ರೂ. 100.00 |
| 53. | ಜನಪದ ಕತೆಗಳು:ಆಶಯಗಳು | ಡಾ. ವಾಮದೇವ | ರೂ. 160.00 |
| 54. | ಅಮೂರ್ತ ಕನ್ನಡಿ | ಡಾ. ಟಿ.ಡಿ. ರಾಜಣ್ಣ ತಗ್ಗಿ | ರೂ. 100.00 |
| 55. | ವ್ಯಾಸಕೂಟ ಮತ್ತು ದಾಸಕೂಟ * | ಡಾ. ಅನಸೂಯಾ ದೇವಿ | ರೂ. 250.00 |
| 56. | ಹೃದಯವಂತ ವಿಷ್ಣು * | ವಿನೋದ್ ಕುಮಾರ್ ಬಿ. | ರೂ. 95.00 |
| 57. | ಮಿಣ ಮಿಣ ಚೀಣಾ * | ತ್ರಿವೇಣಿ ಶಿವಕುಮಾರ್ | ರೂ. 175.00 |
| 58. | ಸನೂತನ ದಾರ್ಶನಿಕರೂ * | ಸ್ವಾಮಿನಾಥ | ರೂ. 80.00 |
| 59. | ದಿಗ್ದರ್ಶಕರು * | ಅರುಣ್ ಎಲ್. | ರೂ. 80.00 |
| 60. | ವಚನ ವ್ಯಕ್ತಿತ್ವ ವಿಕಾಸ | ಡಾ. ಹಾ.ಮ. ನಾಗಾರ್ಜುನ | ರೂ. 80.00 |
| 61. | ಸರಸ್ವತಿ * | ಡಾ. ಬಿ.ಆರ್. ಸತ್ಯನಾರಾಯಣ | ರೂ. 300.00 |
| 62. | ನಿಡುಗಲ್ಲು ದುರ್ಗದ ಕಥನ * | ಡಾ. ಡಿ.ಕೆ.ಚಿತ್ತಯ್ಯ ಪೂಜಾರ್ | ರೂ. 250.00 |
| 63. | ಸ್ತ್ರೀವಾದಿ ಚಿಂತನೆಗಳು * | ಡಾ. ಹಾ.ಮ. ನಾಗಾರ್ಜುನ | ರೂ. 480.00 |
| 64. | ಕಮಲದೇಸಾಯಿ ಕಥೆಗಳು | ಅನು: ಚಂದ್ರಕಾಂತ ಪೋಕಳೆ | ರೂ. 120.00 |
| 65. | ಪ್ರೀತಿ ಏನೆನ್ನಲ್ಲಿ ನಿನ್ನ | ರೂಪಾ ಎಲ್. ರಾವ್ | ರೂ. 70.00 |
| 66. | ಹೆಜ್ಜೆ ಮೂಡದ ಹಾದಿಯಲಿ | ಸುಧೇಶ್ ಶೆಟ್ಟಿ | ರೂ. 160.00 |
| 67. | ಹಕ್ಕಿ ಹರಿವ ನೀರು | ಡಾ. ಕವಿತಾ ರೈ | ರೂ. 60.00 |
| 68. | ಸಾಹಿತ್ಯ ಸಂಸ್ಕೃತಿ | ಡಾ. ತಳವಾರ ವಾಮದೇವ | ರೂ. 110.00 |
| 69. | ಸಾಧಕರ ಹಾದಿ | ಕೆ.ಎನ್. ಪರಾಂಜಪೆ | ರೂ. 100.00 |
| 70. | ಸಾಧನಶೀಲ (ಡಾ. ಎ.ವಿ. ಪ್ರಸನ್ನ ಅವರ ಅಭಿನಂಧನ ಗ್ರಂಥ) | | ರೂ. 225.00 |
| 71. | ಗಡಿಪಾರು | ಚಂದ್ರಕಾಂತ ಪೋಕಳೆ | ರೂ. 150.00 |
| 72. | ರಾಜ್ಯಾಯಣ | ಪಿ. ರಾಜೇಂದ್ರ | ರೂ. 150.00 |
| 73. | ಇಂಧನ | ಚಂದ್ರಕಾಂತ ಪೋಕಳೆ | ರೂ. 100.00 |
| 74. | Cosmic Joke | Raghav Chinivar | Rs. 250.00 |
| 75. | Urbanization Industrialization In Karnataka | Dr. Chandrappa | Rs. 480.00 |
| 76. | ಅಪ್ಪನ ಪ್ರತಿರೂಪ ಮತ್ತಿತರ ಕತೆಗಳು | ಡಾ. ಟಿ.ಡಿ.ರಾಜಣ್ಣ ತಗ್ಗಿ | ರೂ. 100.00 |
| 77. | ನೀಲಕುರುಂಜಿ (ವಿಮರ್ಶಾ ಲೇಖನಗಳು) | ಎಂ. ಶಿವರಾಮಯ್ಯ | ರೂ. 220.00 |
| 78. | ಬಳ್ಳಾರಿ ತಾಲ್ಲೂಕಿನ ಸ್ಥಳನಾಮಗಳು | ಡಾ. ವೀರೇಶ್ ಬಳ್ಳಾರಿ | ರೂ. 200.00 |
| 79. | ಶಾಸ್ತ್ರೀಯ ಭಾಷೆ ಕನ್ನಡ & ಶಿಕ್ಷಣದ ಹಕ್ಕುಗಳು | ಡಾ. ಹಾ.ಮಾ.ನಾಗಾರ್ಜುನ | ರೂ. 170.00 |
| 80. | ವೀರ ವನ್ತೆ ದುರ್ಗವ್ವ | ಡಾ. ಎಲ್ಲಪ್ಪ ಕೆ.ಕೆ.ಪುರ | ರೂ. 100.00 |
| 81. | ಮಂಡ್ಯ ಜಿಲ್ಲೆಯ ಹೊಯ್ಸಳ ದೇವಾಲಯಗಳು | ಡಾ. ಶೋಭ | ರೂ. 250.00 |
| 82. | ಕಾಗದದ ದೋಣಿ ಯಾನ–1 | ಎಸ್.ಎಂ. ಪೆಜತ್ತಾಯ | ರೂ. 180.00 |
| 83. | ಕಾಗದದ ದೋಣಿ ಯಾನ–2 | ಎಸ್.ಎಂ. ಪೆಜತ್ತಾಯ | ರೂ. 180.00 |
| 84. | ಶರ್ವಾಣಿ | ಸುನಿತಾರಾಜು | ರೂ. 70.00 |

| | | | |
|---|---|---|---|
| 85. | ಕನ್ನಡ ಸಾಹಿತ್ಯದಲ್ಲಿ ಬೆಡಗು | ಡಾ. ರಾಜು ಕೆ.ಎಸ್. | ರೂ. 80.00 |
| 86. | ನಮ್ಮ ರಕ್ಷಕ ರಕ್ಷಾ | ಎಸ್.ಎಂ. ಪೆಜತ್ತಾಯ | ರೂ. 40.00 |
| 87. | ಅಮ್ಮ ಹೇಳಿದ ಕತೆಗಳು | ತ್ರಿವೇಣಿ ಶಿವಕುಮಾರ್ | ರೂ. 60.00 |
| 88. | ನಮ್ಮ ಕರ್ನಾಟಕ-2011 | ಸೃಷ್ಟಿನಾಗೇಶ್ | ರೂ. 130.00 |
| 89. | ಸುದ್ದಿಯ ಹಿಂದೆ | ಡಿ.ವಿ. ರಾಜಶೇಖರ್ | ರೂ. 70.00 |
| 90. | ಮೈಲಾರ ಬಸವಲಿಂಗ ಶರಣರ ತ್ರಿವಿಧಿಕರಣ * | ಡಾ. ಹಾ.ಮಾ. ನಾಗಾರ್ಜುನ | ರೂ. 250.00 |
| 91. | ವೀರವನ್ತೆ ದುರ್ಗವ್ವ (ನಾಟಕ) | ಡಾ. ಯಲ್ಲಪ್ಪ ಕೆ.ಕೆ.ಪುರ | ರೂ. 70.00 |
| 92. | ಹಕ್ಕಿ ಹರಿವ ನೀರು | ಡಾ. ಕವಿತಾ ರೈ | ರೂ. 40.00 |
| 93. | ವೀರವನ್ತೆ ದುರ್ಗವ್ವ (ಕಾದಂಬರಿ) | ಡಾ. ಯಲ್ಲಪ್ಪ ಕೆ.ಕೆ.ಪುರ | ರೂ. 120.00 |
| 94. | ಲೋಕಾಮುದ್ರಾ | ಡಾ. ಕವಿತಾ ರೈ | ರೂ. 50.00 |
| 95. | ಸಾಹಿತ್ಯ ಸಂಸ್ಕೃತಿ | ಡಾ. ತಳವಾರ ವಾಮದೇವ | ರೂ. 110.00 |
| 96. | ಅಲ್ಲುಂಟು ನೆಂಟು | ಬಿ.ಎಸ್. ಲಕ್ಷ್ಮೀನಾರಾಯಣ | ರೂ. 70.00 |
| 97. | ವೇಶ್ಯೆಯರು ಮತ್ತು ಲೈಂಗಿಕ ಅಲ್ಪಸಂಖ್ಯಾತರು | ಪ್ರೊ. ಶಿವರಾಮಯ್ಯ | ರೂ. 100.00 |
| 98. | ಪುಟಾಣಿಗಳಿಗಾಗಿ ಪುಟ್ಟ ಕಥೆಗಳು | ಪ್ರಕಾಶ್ ಕೆ. ನಾಡಿಗ್ | ರೂ. 70.00 |
| 99. | ತುತ್ತಿಗೊಂದು ಕಥೆ (ಮಕ್ಕಳ ಕಥೆಗಳು) | ಸುನೀತಾ ರಾಜು | ರೂ. 80.00 |
| 100. | ಬ್ಲಾಗಿಸು ಕನ್ನಡ ಡಿಂಡಿಮವ | ಚೇತನ ತೀರ್ಥಹಳ್ಳಿ<br>ಸುಶ್ರೂತ ದೊಡ್ಡೇರಿ | ರೂ. 90.00 |
| 101. | ಭಾರತ ಮತ್ತು ಪಾಕಿಸ್ತಾನ ಕಾಶ್ಮೀರ | ಡಾ. ಸಿ.ಚಂದ್ರಪ್ಪ | ರೂ. 225.00 |
| 102. | ತರಂಗಿಣಿ ತೀರದಲ್ಲಿ | ಆತ್ಮಕೂರ ವಾಮನಾಚಾರ್ಯ | ರೂ. 225.00 |
| 103. | ಆಲೋಡನ | ಆನಂದ ಝುಂಜರವಾಡ | ರೂ. 150.00 |
| 104. | ನಾದಲೋಕದ ರಸನಿಮಿಷಗಳು | ಶಿರೀಷ ಜೋಷಿ | ರೂ. 150.00 |
| 105. | ಕುವೆಂಪು ಕಾವ್ಯಯಾನ | ಡಾ. ಬಿ.ಆರ್.ಸತ್ಯನಾರಾಯಣ | ರೂ. 200.00 |
| 106. | ಸಂಘರ್ಷ | ಮಾಲತೇಶ ಸಿದ್ಧಮ್ಮನವರು | ರೂ. 50.00 |
| 107. | ಅಜ್ಜಿ ಹೇಳಿದ ಕಥೆಗಳು | ಡಾ. ಅನಸೂಯದೇವಿ | ರೂ. 100.00 |
| 108. | ಭುವನದ ಬೆರಗು | ತ್ರಿವೇಣಿ ಶಿವಕುಮಾರ್ | ರೂ. 150.00 |
| 109. | ಅಮ್ಮಿ | ರಾಹು | ರೂ. 300.00 |
| 110. | ಪ್ರಕೃತಿ ಮತ್ತು ಪ್ರೀತಿ | ಡಾ. ಅನಸೂಯದೇವಿ | ರೂ. 300.00 |
| 111. | ರಾಣಿ ಕಥೆಗಳು | ಡಾ. ವೀರಭದ್ರಗೌಡ | ರೂ. 150.00 |
| 112. | ಶತಪದಗಳ ಸುಳಿಯಲ್ಲಿ | ಮಹೇಶ ದೇಶಪಾಂಡೆ | ರೂ. 70.00 |
| 113. | ಪ್ರಾಚೀನ ಭಾರತದ ವೈದ್ಯ ವಿಜ್ಞಾನ | ಡಾ. ಕವಿತಾ ಎಸ್.ಎಚ್. | ರೂ. 80.00 |
| 114. | ಜೋಲಿ ಲಾಲಿ (ಭಾಗ-2) | ಜ್ಯೋತಿ ಗುರುಪ್ರಸಾದ್ | ರೂ. 250.00 |
| 115. | ನಮ್ಮ ಆರೋಗ್ಯ ನಮ್ಮ ಕೈಯಲ್ಲಿ | ಡಾ. ಲೀಲಾವತಿ ದೇವದಾಸ್ | ರೂ. 200.00 |
| 116. | ಬೇಂದ್ರೆ-ಶರೀಫರ ಕಾವ್ಯಾಯಾನ | ಸುನಾಥ ದೇಶಪಾಂಡೆ | ರೂ. 350.00 |
| 117. | ಪಡು-ಮೂಡು | ಕೆ. ಕೇಶವಶರ್ಮ | ರೂ. 500.00 |

| | | | |
|---|---|---|---|
| 118. | ಸುಗಂಧ ಪುಷ್ಪ | ಹಾ.ಮ. ನಾಗಾರ್ಜುನ | ರೂ. 175.00 |
| 119. | ಸೆಕ್ಯೂಲರ್‌ವಾದ : ಬುಡ-ಬೇರು | ರಾಹು | ರೂ. 300.00 |
| 120. | ಕವಿತೆಯ ಓದು | ಪ್ರಭಾಕರ ಆಚಾರ್ಯ | ರೂ. 150.00 |
| 121. | ಆರನೆಯ ಹೆಂಡತಿಯ ಆತ್ಮಕಥೆ | ರಾಹು | ರೂ. 400.00 |
| 122. | ಮೈ ಫಾದರ್ ಬಾಲಯ್ಯ | ಡಾ. ರಾಜಣ್ಣ ತಗ್ಗಿ | ರೂ. 180.00 |
| 123. | ಪೀಠಾಧಿಯಪತಿಯ ಪತ್ನಿ | ರಾಹು | ರೂ. 300.00 |
| 124 | ಸ್ತ್ರೀವಾದಿ ಪರಿಕಲ್ಪನೆಗಳು | ಕೆ. ಕೇಶವಶರ್ಮ | ರೂ. 350.00 |
| 125 | ಸಾಂಸ್ಕೃತಿಕ ಪರಿಕಲ್ಪನೆಗಳು | ಕೆ. ಕೇಶವಶರ್ಮ | ರೂ. 350.00 |
| 126 | ವಸಾಹತುಶಾಹಿ ಪರಿಕಲ್ಪನೆಗಳು | ಕೆ. ಕೇಶವಶರ್ಮ | ರೂ. 350.00 |
| 127 | ಮಾರ್ಕ್ಸ್‌ವಾದಿ ಪರಿಕಲ್ಪನೆಗಳು | ಕೆ. ಕೇಶವಶರ್ಮ | ರೂ. 400.00 |
| 128 | ವಿಮರ್ಶೆಯ ಪರಿಕಲ್ಪನೆಗಳು | ಕೆ. ಕೇಶವಶರ್ಮ | ರೂ. 500.00 |
| 129 | ತತ್ವಜ್ಞಾನದ ಪರಿಕಲ್ಪನೆಗಳು | ಕೆ. ಕೇಶವಶರ್ಮ | ರೂ. 500.00 |
| 130 | ದೇವರು ಮತ್ತೆ ಮತ್ತೆ | ನಾ. ಮೊಗಸಾಲೆ | ರೂ. 80.00 |
| 131 | ಸನ್ನಿಧಿಯಲ್ಲಿ ಸೀತಾಪುರ | ನಾ. ಮೊಗಸಾಲೆ | ರೂ. 180.00 |
| 132 | ಹಾಡೊ ಹಕ್ಕಿಯ ಶೋಕಗೀತೆ | ಡಾ. ಅಪ್ಪಗೆರೆ ಸೋಮಶೇಖರ | ರೂ. 130.00 |
| 134 | ಯಾತ್ರಿಕನ ಕನಸು (ಅಲ್ ಕೆಮಿಸ್ಟ್) | ಡಾ. ರಾಜಣ್ಣ ತಗ್ಗಿ | ರೂ. 125.00 |
| 135 | ದಾಂಪತ್ಯ ನಿಷ್ಠೆ | ಸುನಂದಾ ಕಡಮೆ | ರೂ. 160.00 |
| 136 | ಕುಮಾರವ್ಯಾಸ ಭಾರತ | ಡಾ. ಸಿ. ಓಂಕಾರಪ್ಪ | ರೂ. 200.00 |
| 137 | ಬಹೂರೂಪೀ ಭಾರತ | ತ್ರಿವೇಣಿ ಶಿವಕುಮಾರ್ | ರೂ. 250.00 |
| 138 | ಮೂಡಲಮನೆಯ ಮುತ್ತಿನ ಹುಡುಗಿ | ಅತ್ಮಕೂರ ವಾಮನಾಚಾರ್ಯ | ರೂ. 200.00 |
| 139 | ಎದೆಹಾಸಿನ ಬಾವ ಹೂಗಳು | ಡಾ. ಅನಸೂಯದೇವಿ | ರೂ. 150.00 |
| 140 | ನೊಯುವ ಹಲ್ಲಿ ಹೊರಳುವ ನಾಲಿಗೆ | ಡಾ. ಹೆಚ್.ಎಸ್. ಅನುಪಮ | ರೂ. 200.00 |
| 141 | ನನ್ನ ದೃಷ್ಟಿಯಲ್ಲಿ ಉತ್ತಮ ಹಾಸ್ಯ | ಕು.ಗೋ | ರೂ. 80.00 |
| 142 | ತೇಲ್ನೋಟ | ಕು.ಗೋ | ರೂ. 150.00 |
| 143 | ಹೊಸ ಪಕ್ಷಿ ರಾಗ | ಜ್ಯೋತಿಗುರುಪ್ರಸಾದ್ | ರೂ. 150.00 |
| 144 | ಒಂದು ನೂರು ವರ್ಷಗಳ ಏಕಾಂತ<br>ಗೇಬ್ರಿಯಲ್ ಗಾರ್ಸಿಯಾ ಮಾರ್ಕ್ವೆಜ್ | ಡಾ. ವಿಜಯಾ ಸುಬ್ಬರಾಜ್ | ರೂ. 350.00 |

* ಪ್ರತಿಗಳು ಮುಗಿದಿವೆ



ವರ್ತಮಾನವನ್ನು ಕತೆಯನ್ನಾಗಿಸಿದ ಅತ್ಯದ್ಭುತ ಪ್ರತಿಭಾವಂತ ಮಾರ್ಕ್ವೆಜ್. ಅವನ ಒಂದು ಸಣ್ಣ ಕಾದಂಬರಿ 'ಕ್ರಾನಿಕಲ್ ಆಫ್ ಡೆತ್ ಫೋರ್‍ಟೋಲ್ಡ್' ನಲ್ಲೊಂದು ವಿಚಕ್ಷಣ ಸಂದರ್ಭ ಬರುತ್ತೆ. ಅಲ್ಲಿನ ಕಥಾನಾಯಕ ತನಗಾಗದ ಒಬ್ಬನನ್ನು ಕೊಲೆ ಮಾಡವುದಾಗಿ ಬಹಿರಂಗವಾಗಿ ಹೇಳುತ್ತಾನೆ. ಆದರೆ ಕೊಲೆ ಮಾಡಲೆಂದು ಆತನನ್ನು ಹುಡುಕುತ್ತಾ ಬೀದಿಯಲ್ಲಿ ಸುತ್ತುತ್ತಿದ್ದವನ ಮನದಲ್ಲಿ 'ಅವನು ಸಿಗದೆ ಇರಲಿ....' ಎಂಬ ಆಸೆಯೂ ಸುಳಿದಾಡುತ್ತಿರುತ್ತದೆ. ಆ ಪರಸ್ಪರ ತಪ್ಪಿಸಿಕೊಳ್ಳುವ ಆಟದಲ್ಲಿ ಅವನು ಸಿಕ್ಕೇ ಬಿಡುತ್ತಾನೆ. ಇವನು ಕೊಲ್ಲಲೇಬೇಕಾಗಿ ಬರುತ್ತೆ. ಈ ವಿಸ್ಮಯ ನನ್ನ ಮನಸ್ಸಿನಲ್ಲಿ ಸದಾ ಇದೆ. ಹಾಗೇನೆ, ಯಾರೋ ಕೊಲೆಯಾದ ಮಗನ ರಕ್ತ ಹರಿದುಕೊಂಡು ತಾಯಿ ಹತ್ತಿರ ಬರುತ್ತದೆ. ಮಾರ್ಕ್ವೆಜ್‌ನ ಇಂಥವು ನನ್ನೊಳಗೆ ಸದಾ..

ದೇವನೂರು ಮಹದೇವ






₹ 400/- US $ 6.02

